ಶ್ರೀಮದ್ವಿಶಿಷ್ಟಾದ್ವೈತಸಿದ್ಧಾನ್ತರತ್ನಮಾಲಾ

ದ್ವಿತೀಯ ರತ್ನವು—ಹದಿನಾಲ್ಕನೆಯ ಸಂಚಿಕೆಯು

---

ಶ್ರೀಮನ್ನಿಗಮಾನ್ತ ಮಹಾದೇಶಿಕ ಪ್ರಣೀತ

# ಶ್ರೀಮದ್ರಹಸ್ಯತ್ರಯಸಾರೇ

## ಪ್ರಭಾವವ್ಯವಸ್ಥಾಧಿಕಾರಃ ಪಂಚವಿಂಶಃ

## ಪ್ರಭಾವರಕ್ಷಾಧಿಕಾರಃ ಷಡ್ವಿಂಶಃ




ವಿದ್ಯಾಭ್ಯಾಸದ ಇಲಾಖಾ ರಿಟೈರ್ಡ್ ಸರ್ಕಲ್ ಇನ್ಸ್ಪೆಕ್ಟರು

ಸಿ. ಯಂ. ವಿಜಯರಾಘವಾಚಾರ್ಯರಿಂದ

ರಚಿಸಲ್ಪಟ್ಟ

## ಆಚಾರ್ಯಹೃದಯಾನ್ವೇಷಿಣೀ

ಎಂಬ ಕನ್ನಡ ಪ್ರತಿಪದಾರ್ಥ ತಾತ್ಪರ್ಯಗಳೂ

ಶ್ರುತಿ ಸ್ಮೃತೀತಿಹಾಸ ಪುರಾಣ ಪ್ರಮಾಣಗಳೊಂದಿಗೆ

ಉಪಪಾದನೆಯೂ ಸಹ.



೧೯೪೨.

ಕ್ರಯ ೧—೪—೦




ಶ್ರಿಯೈನಮಃ
ಶ್ರೀಮತೇ ರಾಮಾನುಜಾಯನಮಃ
ಶ್ರೀಮತೇ ನಿಗಮಾಂತ ಮಹಾದೇಶಿಕಾಯನಮಃ

    

# ಅಥ ಪ್ರಭಾವವ್ಯವಸ್ಥಾಧಿಕಾರಃ. ೨೫.

**ಸ್ವರೂಪಂ ಯದ್ಯಾದೃಗ್ಗುಣವಿಭವಲೀಲಾದಿಚ ವಿಭೋ |**
**ಸ್ತದಾಜ್ಞಾಸೇತುಶ್ಚ ಶ್ರುತಿಭಿ ರವಸೇಯಂ ತದಖಿಲಂ ||**

---

ಹಿಂದಿನ ಅಧಿಕಾರದ ಶ್ಲೋಕದಮೂಲಕ ಸಿದ್ಧೋಪಾಯ ವಶೀಕರಣಕ್ಕಾಗಿ ಸಾಧ್ಯೋಪಾಯಗಳಾದ ಭಕ್ತಿ ಪ್ರಪತ್ತಿಗಳಲ್ಲಿ ಯಾವುದಾದರೂ ಒಂದನ್ನು ಶಾಸ್ತ್ರಗಳಲ್ಲಿ ಹೇಳಿರುವಹಾಗೆ ಅನುಷ್ಠಿಸಿ ಭಗವಂತನು ಸುಪ್ರೀತನಾಗುವ ಹಾಗೆ ಮಾಡತಕ್ಕದ್ದು ಆವಶ್ಯಕವೆಂದು ಸ್ಥಾಪಿಸಿದರು. ಹಿಂದಿನ ಎರಡು ಅಧಿಕಾರಗಳ ಮೂಲಕ ಈ ಸಿದ್ಧೋಪಾಯ ಸಾಧ್ಯೋಪಾಯಗಳ ವಿಷಯದಲ್ಲಿ ಮಾಡುವ ಪೂರ್ವಪಕ್ಷಗಳಿಗೆಲ್ಲಾ ಸಮಾಧಾನಗಳನ್ನು ಹೇಳಿದರು. ಈಗ ಇನ್ನು ಎರಡು ಅಧಿಕಾರಗಳ ಮೂಲಕ ಸಾಧ್ಯೋಪಾಯವು ಆವಶ್ಯಕವೇನೋ ಹೌದು ಎಂದು ಒಪ್ಪಿಕೊಂಡು, ಭರನ್ಯಾಸವನ್ನು ಗುರುಮುಖೇನ ಯಥಾ ಶಾಸ್ತ್ರವಾಗಿ ಅನುಷ್ಠಿಸುವದನ್ನು ಅಙ್ಗೀಕರಿಸಿ, ಭರನ್ಯಾಸಕ್ಕೆ ಇಲ್ಲದಿರುವ ಮಹಾತ್ಮೆಯನ್ನು ಕೆಲವರು ಹೇಳುವರು ; ಇನ್ನು ಕೆಲವರು ಅದಕ್ಕಿರುವ ಮಾಹಾತ್ಮ್ಯೆಯಲ್ಲಿ ನ್ಯೂನತೆಯನ್ನು ಕಲ್ಪಿಸುವರು ; ಇವೆರಡೂ ಸರಿಯಲ್ಲವೆಂದು ತಿಳಿಸುತ್ತಾರೆ. ಈ ಸಾಧ್ಯೋಪಾಯ ವ್ಯವಸ್ಥಾಧಿಕಾರದಲ್ಲಿ ಪ್ರಪದನಕ್ಕೆ ಇಲ್ಲದಿರುವ ಮಾಹಾತ್ಮ್ಯೆಯನ್ನು ಆರೋಪಿಸಿ ಹೇಳುವದು ಶಾಸ್ತ್ರವಿರುದ್ಧವೆಂದು ಹೇಳುತ್ತಾರೆ. ಮುಂದಿನ ಪ್ರಭಾವ ರಕ್ಷಾಧಿಕಾರದಲ್ಲಿ ಪ್ರಪದನಕ್ಕಿರುವ ಮಾಹಾತ್ಮ್ಯೆಯನ್ನು ಕಮ್ಮಿಮಾಡುವದು ಸರಿ

ಯಲ್ಲವೆಂದು ಸಪ್ರಮಾಣವಾಗಿ ಉಪಪಾದಿಸುತ್ತಾರೆ. ಅಧಿಕಾರದಲ್ಲಿ ಸಾಧ್ಯೋಪಾಯವಾದ ಪ್ರಪತ್ತಿಯ ಪ್ರಭಾವದ ವ್ಯವಸ್ಥೆಯಲ್ಲಿ ಶಾಸ್ತ್ರಮರ್ಯಾದೆಯನ್ನತಿಕ್ರಮಿಸಿ ವರ್ಣಿಸಲ್ಪಟ್ಟ ಈ ಉಪಾಯ ಪ್ರಭಾವವು ಶಾಸ್ತ್ರಮರ್ಯಾದೆಯಿಂದ ವ್ಯವಸ್ಥೆಮಾಡಲ್ಪಡುವದರಿಂದ ಇದಕ್ಕೆ ಪ್ರಭಾವ ವ್ಯವಸ್ಥಾಧಿಕಾರ ವೆಂಬ ಹೆಸರು. ಕೆಲವರು ಈ ಭರನ್ಯಾಸಾನುಷ್ಠಾನ ಸಂಸ್ಕಾರದ ಮಾಹಾತ್ಮ್ಯೆಯಿಂದ ಶೂದ್ರಾದಿ ಹೀನವರ್ಣವೂ ಕಳೆದು ಉತ್ತಮ ವರ್ಣದವನಾಗುವನೆಂದು ಭ್ರಮಿಸುವರು. ಇಂತಹ ಅತಿಶಯೋಕ್ತಿಯು ಸರಿಯಲ್ಲವೆಂದು ಉಪದೇಶಿಸುತ್ತಾರೆ. ಹಿಂದಿನ ಅಧಿಕಾರದ ಸಙ್ಗ್ರಹ ಶ್ಲೋಕದಲ್ಲಿ "ಅಧ್ಯಾತ್ಮ ಶ್ರುತಿ ಸಂಪ್ರದಾಯ ಕೇತಕೈರದ್ಧಾ ವಿಶುದ್ಧಾಶಯಾಃ" ಎಂದು ತಮ್ಮ ಆಚಾರ್ಯರುಗಳ ಸಂಪ್ರದಾಯವನ್ನು ಕೊಂಡಾಡಿರುವದರಿಂದ ಅವರುಗಳು ಶಾಸ್ತ್ರಮರ್ಯಾದೆಯನ್ನತಿಕ್ರಮಿಸಿ ಇಲ್ಲದ ಪ್ರಭಾವವನ್ನು ಆರೋಪಿಸುವದಿಲ್ಲವೆಂದೂ, ಶಾಸ್ತ್ರಮರ್ಯಾದೆಯನ್ನು ತ್ಯಜಿಸಿ ಇರುವ ಪ್ರಭಾವಕ್ಕೆ ನ್ಯೂನತೆಯನ್ನು ಕಲ್ಪಿಸರು ಎಂದೂ ಹೇಳಿದಂತಾಯಿತು ಅವರುಗಳು ಪ್ರಭಾವ ವ್ಯವಸ್ಥೆಯನ್ನೂ ಪ್ರಭಾವರಕ್ಷೆಯನ್ನೂ ಮಾಡತಕ್ಕವರೆಂದು ಸೂಚಿಸಿದಂತಾಯಿತು. ಈ ಅಧಿಕಾರದಲ್ಲಿ ಮುಖ್ಯವಾಗಿ ಈ ಸಾಧ್ಯೋಪಾಯವು ಅತ್ಯಂತ ಪ್ರಭಾವ ಉಳ್ಳದುದೇನೋ ಹೌದು. ಪ್ರಪನ್ನನ ಪ್ರಾರಬ್ಧೇತರ ಸರ್ವಪಾಪಗಳನ್ನೂ ತೊಲಗಿಸುತ್ತದೆ. ಉತ್ತರಾಘವು ಪ್ರಾಪ್ತವಾಗದಹಾಗೆ ಮಾಡುತ್ತದೆ. ಅಬುದ್ಧಿಪೂರ್ವಕ ಪಾಪಗಳೆಲ್ಲಾ ಅಂಟದಹಾಗೆ ಮಾಡುತ್ತದೆ ಬುದ್ಧಿಪೂರ್ವಕವಾಗಿ ಒಂದುವೇಳೆ ಪ್ರಾಪ್ತವಾದರೆ ಪುನಶ್ಶರಣಾಗತಿಯಿಂದ ನಾಶವಾಗುವಹಾಗೆ ಮಾಡುತ್ತದೆ. ಅಥವಾ ಅಲ್ಪಶಿಕ್ಷೆಯಿಂದ ನಷ್ಟವಾಗುವಹಾಗೆ ಮಾಡುತ್ತದೆ. ಅಂತೂ ದೇಹಾವಸಾನದಲ್ಲೇ ಮುಕ್ತಿಯುಂಟಾಗುವಹಾಗೆ ಮಾಡುತ್ತದೆ. ಇಷ್ಟೆಲ್ಲಾ ಪ್ರಭಾವ ಉಳ್ಳದ್ದೇನೋ ಸತ್ಯವು. ಆದರೆ ಶೂದ್ರಚಂಡಾಲಾದಿಗಳನ್ನು ಬ್ರಾಹ್ಮಣನನ್ನಾಗಿ ಈ ಸಂಸ್ಕಾರವು ಮಾಡಲಾರದು. ಅಂತಹ ಪ್ರಭಾವವು ಭರನ್ಯಾಸಕ್ಕಿಲ್ಲವೆಂದೂ, ಶರಣಾಗತಿಯನ್ನನುಷ್ಠಿಸಿದಮಾತ್ರದಿಂದಲೇ ಆತನು ನಮ್ಮ ಗೋಷ್ಠಿಗೆ ಯೋಗ್ಯನೆಂದು ಭಾವಿಸಿ ವರ್ಣಸಾಂಕರ್ಯವನ್ನು ಯತ್ನಿಸುವದು ಶಾಸ್ತ್ರಮರ್ಯಾದೆಗೆ ವಿರುದ್ಧವೆಂದು ಈ ಸಙ್ಗ್ರಹ ಶ್ಲೋಕದ ಮೂಲಕ ತಿಳಿಸುತ್ತಾರೆ.

ವಿಭೋಃ - ಸರ್ವವ್ಯಾಪಿಯಾಗಿ ಸಕಲಕ್ಕೂ ಆತ್ಮಾವಾಗಿರುವ ಸರ್ವೇಶ್ವರನ ಸ್ವರೂಪವು, ಯತ್ - ಯಾವುದೋ, ಮತ್ತು ಯಾದೃಕ್ - ಆ ಸ್ವರೂಪ ನಿರೂಪಕ ಧರ್ಮಗಳು ಎಂತವುಗಳೋ, ಹಾಗೆಯೇ, ಗುಣ ವಿಭವಲೀಲಾದಿಚ, ಈ ಗುಣವು ಯತ್ ಯಾದೃಕ್, ಹೀಗೆ ಎಲ್ಲಕ್ಕೂ ಅನ್ವಯಿಸಬಹುದು, ಗುಣಗಳು

**ತಥಾ ತದ್ಭಕ್ತಾನಾಂ ತದುಪಸದನಾದೇಶ್ಚ ಮಹಿಮಾ ।**
**ಯಥಾಧೀತಂ ಸದ್ಭಿರ್ಯತಿಪತಿಮುಖ್ಯೈ ರಧ್ಯವಸಿತಮ್ ॥**

ಸತ್ಯತ್ವ ಜ್ಞಾನತ್ವಗಳು, ಜ್ಞಾನಬಲೈಶ್ವರ್ಯಾದಿ ಷಾಡ್ಗುಣ್ಯ ರೂಪ ಕಲ್ಯಾಣ ಗುಣಗಳು, ವಿಭವಗಳು - ನಿತ್ಯ ವಿಭೂತಿ ಲೀಲಾ ವಿಭೂತಿಗಳು, ಲೀಲಾದಿ ಚ ಜಗತ್ತಿನ ಸೃಷ್ಟಿಸ್ಥಿತಿ ಲಯಾದಿಗಳು, ಆದಿಶಬ್ದದಿಂದ ಜಗದ್ರಕ್ಷಣಾರ್ಥವಾಗಿ ಎತ್ತಿದ ಅವತಾರರೂಪದಿವ್ಯಮಂಗಳ ವಿಗ್ರಹಗಳನ್ನು ಧರಿಸೋಣವೂ ಸಂಗ್ರಹಿಸಲ್ಪಟ್ಟವು, ಇವುಗಳೆಲ್ಲಾ ಶಾಸ್ತ್ರಗಳಲ್ಲಿ ಎಂತವೆಂದೂ ಯಾವ ಸ್ವಭಾವವುಳ್ಳವೆಂದೂ ಹೇಳಲ್ಪಟ್ಟವೋ, **ತದಾಜ್ಞಾಸೇತುಶ್ಚ** - ಅಂತಹ ಭಗವಂತನ ಆಜ್ಞಾರೂಪವಾದ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವ ಮರ್ಯಾದೆಯೂ ಸಹ, ಇಲ್ಲಿ ಮುಖ್ಯವಾಗಿ ದ್ಯೋತಿತವಾದ ಆ ಆಜ್ಞಾಸೇತು ಯಾವುದೆಂದರೆ, ವರ್ಣಾಶ್ರಮಧರ್ಮಗಳ ಮರ್ಯಾದೆಯೂ ಸಹ ಭಗವಂತನ ವಿಧಿ ನಿಷೇಧರೂಪ ಆಜ್ಞೆಗಳಿಗನುಸಾರವಾಗಿ ವರ್ತಿಸೋಣವು ದುಸ್ತರವಾದ ಪ್ರವಾಹರೂಪ ಸಂಸಾರದ ಆಚೇ ದಡವನ್ನು ಸೇತುವೆಯ ಮೂಲಕ ಸುಲಭವಾಗಿ ದಾಟುವಹಾಗೆ ದಾಟಬಹುದೆಂಬ ಭಾವವು, ಆದುದರಿಂದ **ಸೇತು** ಶಬ್ದಕ್ಕೆ ಪ್ರಾಪಕರೂಪ ಸಾಧನವೆಂಬುದರಲ್ಲಿ ತಾತ್ಪರ್ಯವು. **ಯತ್ ಯಾದೃಕ್** - ಯಾವ ಸ್ವರೂಪ ಸ್ವಭಾವವುಳ್ಳದೋ, ತದಖಿಲಂ - ಅವುಗಳೆಲ್ಲವನ್ನೂ, **ಶ್ರುತಿಭಿಃ** - ಶಾಸ್ತ್ರಗಳಲ್ಲಿ ಮುಖ್ಯವಾದವು ವೇದಗಳಾದುದರಿಂದ ಅವುಗಳಿಂದಲೂ, ಮತ್ತು ಅವುಗಳಲ್ಲೇ ಅಡಗಿರುವ ಅವುಗಳ ಶಾಖೆಗಳ ಉಪರಿತನ ಭಾಗವಾದ ಉಪನಿಷತ್ತುಗಳಿಂದಲೂ, **ಅವಸೇಯಂ** - ತಿಳಿಯತಕ್ಕದ್ದು. ಇವುಗಳೆಲ್ಲಾ ಶಾಸ್ತ್ರಪ್ರಮಾಣಗಳೊಂದಿಗೆ ಆಯಾಸ್ಥಳಗಳಲ್ಲಿ **ಯತ್ ಯಾದೃಕ್** ಎಂಬುದನ್ನು ಉಪದೇಶಿಸಿರುತ್ತೇವೆ ಎಂಬ ಭಾವವು ಇವುಗಳ ಮಹಿಮೆಯುಲ್ಲಾ ಹೇಗೆ ಶಾಸ್ತ್ರ ಮರ್ಯಾದೆಯನ್ನು ಅನುಸರಿಸಿಯೇ ಇವೆಯೋ, **ತಥಾ** - ಹಾಗೆಯೇ, **ತದ್ಭಕ್ತಾನಾಂ** - ಆ ಭಗವಂತನ ಭಕ್ತರುಗಳ, **ಮಹಿಮಾ**- ಮಹಿಮೆಯೂ, **ತದುಪಸದನಾದೇಶ್ಚ** - ಆ ಭಾಗವತರುಗಳ ಸಮಾಶ್ರಯಣವೇ ಮೊದಲಾದವುಗಳ ಅಥವಾ ತದ್ಭಕ್ತಾನಾಂ ಎಂಬಲ್ಲಿ ತತ್ ಎಂಬುದು ಭಗವಂತನನ್ನು ಬೋಧಿಸುವದರಿಂದ, ತದುಪಸದನಾದೇಃ ಎಂಬಲ್ಲಿಯೂ, ತತ್ ಎಂದರೆ ಭಗವಂತನ, **ಉಪಸದನಾದೇಃ** - ಆಶ್ರಯಣರೂಪವಾದ, ಭಕ್ತಿಪ್ರಪತ್ತಿಮಾರ್ಗಗಳೇ ಮೊದಲಾದವುಗಳ, **ಮಹಿಮಾಚ**-ಮಹಿಮೆಯೂ ಸಹ, ಇಲ್ಲಿ ಆದಿಪದದಿಂದ ಭಗವದ್ಭಾಗವತ ಕೈಂಕರ್ಯಗಳ ಮೂಲಕ ಭಗವದ್ಭಾಗವತ ಪ್ರಸನ್ನತೆಯು ಸೂಚಿಸಲ್ಪಟ್ಟಿತು, ಹೀಗೆ ಇವುಗಳ ಮಹಿಮೆಯುಲ್ಲಾ **ಯಥಾಧೀತಂ** ಶಾಸ್ತ್ರಗಳಲ್ಲಿ

ಹೇಗೆ ಅಧೀತವಾಗಿದೆಯೋ ಹಾಗೆಯೇ, ಎಂದರೆ ಶಾಸ್ತ್ರಗಳನ್ನು ಸ್ವಲ್ಪವೂ ಉಲ್ಲಂಘಿಸದೇ ಎಂಬ ಭಾವವು, ಯತಿಪತಿಮುಖ್ಯೈಃ- ಶ್ರೀ ಭಾಷ್ಯಕಾರರೇ ಮೊದಲಾದ, ಸದ್ಭಿಃ-ಮಹಾನುಭಾವರಾದ ಬ್ರಹ್ಮವಿತ್ತುಗಳಿಂದ, ಅಧ್ಯವಸಿತಃ-ನಿಶ್ಚಯಿಸಲ್ಪಟ್ಟಿತು ಎಂದರೆ ವ್ಯವಸ್ಥೆ ಮಾಡಲ್ಪಟ್ಟಿತು. ಇಂತಹ ಪ್ರಪತ್ತ್ಯನುಷ್ಠಾನರೂಪ ಸಂಸ್ಕಾರದ ಮಹಿಮೆಯನ್ನೇನೋ ಅಙ್ಗೀಕರಿಸಿದರು, ಅನಿಷ್ಟನಿವೃತ್ತಿಮೂಲಕ ಇಷ್ಟಪ್ರಾಪ್ತಿಯಾದ ಮೋಕ್ಷವು ಸರ್ವ ವರ್ಣದವರಿಗೂ ಲಭಿಸುತ್ತದೆಂದೇನೋ ಅಙ್ಗೀಕರಿಸಿದರು ; ಆದರೆ ಕೀಳು ವರ್ಣದವರು ಈ ಪ್ರಪತ್ತ್ಯನುಷ್ಠಾನದಿಂದ ಉತ್ತಮ ವರ್ಣನಾದ ಬ್ರಾಹ್ಮಣನಿಗೆ ಸಮಾನನಾಗುವನೆಂದೂ ಆಗ ವರ್ಣಸಾಂಕರ್ಯವು ಸಾಧುವೆಂದೂ,ಎಂದಿಗೂ ಅಙ್ಗೀಕರಿಸಲಿಲ್ಲವೆಂಬ ಭಾವವೂ ದ್ಯೋತಿತವು.

**ತಾತ್ಪರ್ಯವು** :—ಭಗವಂತನ **ಸ್ವರೂಪವು "ಸತ್ಯಂ ಜ್ಞಾನಮನಂತಂ ಬ್ರಹ್ಮ"** ಇತ್ಯಾದಿಗಳಲ್ಲಿ ಉಪಪಾದಿತಗಳಾದ ಸ್ವರೂಪ ನಿರೂಪಕಧರ್ಮಗಳೂ, ಆತನ ಹೇಯ ಪ್ರತ್ಯನೀಕತ್ವ ಕಲ್ಯಾಣಗುಣಾಕರತಾದ್ವಿಗಳೂ (೩೫೦-೩೫೯) ಆತನು ಚಿದಚಿತ್ತುಗಳಿಂದ ಕೂಡಿ ಸವಿಶೇಷಣನಾಗಿರುವದೂ, (೨೫೭-೨೬೯) ಉಭಯ ವಿಭೂತಿನಾಯಕನಾಗಿರುವದೂ (೩೬೭-೩೭೩) ಆತನ ಲೀಲಾವಿಭೂತಿಯ ಸೃಷ್ಟಿಸ್ಥಿತಿಲಯಾದಿ ವ್ಯಾಪಾರಗಳೂ, (೫೪೫-೬೦೫) ಆತನು ಹೇಗೆ ಐದು ವಿಧವಾದ ದಿವ್ಯಮಙ್ಗಳವಿಗ್ರಹಗಳುಳ್ಳವನೆಂಬುದೂ (೫೫೦-೫೪೪) ಆತನು ಈ ಚೇತನರ ಅನುಗ್ರಹಾರ್ಥವಾಗಿ ದಯಪಾಲಿಸಿರುವ ಆಜ್ಞಾರೂಪಶಾಸನಗಳೂ ಎಲ್ಲವೂ ಶ್ರುತಿಮೂಲಕವಾಗಿಯೇ ಹೇಗೆ ವ್ಯಕ್ತವೋ ಹಾಗೆಯೇ, ಭಾಗವತರ ಮಾಹಾತ್ಮ್ಯಯು ಎಷ್ಟರಮಟ್ಟಿಗೆ, ಆ ಭಾಗವತರು ಹೀನವರ್ಣದವರಾದರೆ ಅವರ ಮಾಹಾತ್ಮ್ಯಯು ಎಷ್ಟರಮಟ್ಟಿಗೆ,ಸರ್ವೇಶ್ವರನನ್ನು ವಶಮಾಡಿಕೊಳ್ಳುವ ಉಪಾಯಗಳಾದ ಭಕ್ತಿ ಪ್ರಪತ್ತಿಗಳ ಮಾಹಾತ್ಮ್ಯಯು ಎಷ್ಟರಮಟ್ಟಿಗೆ, ಕೀಳು ವರ್ಣದವರು ಈ ಉಪಾಯಗಳನ್ನನುಷ್ಠಿಸಿದರೆ ಅವರುಗಳ ಮಾಹಾತ್ಮ್ಯಯು ಎಷ್ಟರಮಟ್ಟಿಗೆ, ಎಂಬಿವೇ ಮೊದಲಾದವುಗಳಿಗೂಕೂಡ, ಶ್ರೀ ಯತಿರಾಜರೇ ಮೊದಲಾದ ಮಹಾನುಭಾವರಾದ ಬ್ರಹ್ಮ ವಿತ್ತುಗಳು ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ಗೆರೆಯನ್ನು ಸ್ವಲ್ಪವೂ ಅತಿಕ್ರಮಿಸದೆ ಉಪದೇಶಿಸಿ ಅನುಷ್ಠಿಸಿ ತೋರಿಸಿದರೋ, ಆ ಸಂಪ್ರದಾಯಾನುಗುಣವಾಗಿಯೇ ನಾವು ಅನುವರ್ತಿಸತಕ್ಕದ್ದೆಂದು ಹೇಳುತ್ತಾರೆ.

ಹೀಗೆ ಈ ಶ್ಲೋಕದ ಪೂರ್ವಾರ್ಧದಲ್ಲಿ ಹೇಳಿರುವದೆಲ್ಲಾ ಬಹು ಚನ್ನಾಗಿಯೂ, ಸ್ಫುಟವಾಗಿಯೂ, ಪ್ರಧಾನ ಪ್ರತಿತಂತ್ರ, ಅರ್ಥಪಂಚಕ, ತತ್ವತ್ರಯಾಧಿಕಾರಗಳಲ್ಲಿ ಉಪಪಾದಿತವಾಗಿರುವದರಿಂದ ಅವುಗಳನ್ನು ಪುನಃ ಅನುವಾದ ಮಾಡಿಹೇಳುವದು ಅನಾವಶ್ಯಕವಾದುದರಿಂದ ಅವುಗಳೆಲ್ಲಾ ಎಲ್ಲಿ ಉಪಪಾದಿತ

ಗಳಾಗಿವೆ ಎಂಬುದಕ್ಕೆ ಮೇಲೆ ಕಾಣಿಸಿರುವ ಪುಟಗಳನ್ನು ಪರಾಂಬರಿಸಬಹುದು ಈ ಅಭಿಪ್ರಾಯಗಳಿಗೆಲ್ಲಾ ಶ್ರುತಿಯೇ ಹೇಗೆ ಪ್ರಮಾಣವೋ, ಹಾಗೆಯೇ ಈ ಭಗವದ್ಭಾಗವತರನ್ನು ಆಶ್ರಯಿಸಿರುವವರ ಮಹಿಮೆ ಎಷ್ಟರಮಟ್ಟಿಗೆ ಎಂಬುದಕ್ಕೂ ಶಾಸ್ತ್ರವೇ ಪ್ರಮಾಣವು. ಇಂತಹ ಶಾಸ್ತ್ರಾನುವರ್ತಿಗಳಾದ ಶ್ರೀಯತಿರಾಜರೇ ಮೊದಲಾದ ಆಚಾರ್ಯರುಗಳ ಸಂಪ್ರದಾಯಕ್ರಮವೇ ನಮಗೂ ಅನುಷ್ಠೇಯವೇ ವಿನಾ ಅನ್ಯಥಾ ಅಲ್ಲವು. ಈ ಸಂದರ್ಭದಲ್ಲಿ ಶ್ರುತಿಯು ಏನನ್ನು ವಿಧಿಸಿರುತ್ತದೆ ಎಂದರೆ.—(೧) **ಯಸ್ತ್ವೇವಂ ಬ್ರಾಹ್ಮಣೋ ವಿದ್ಯಾತ್** ಎಂಬ ವಾಕ್ಯದಿಂದ ಬ್ರಾಹ್ಮಣೇತರರಾದ ಶೂದ್ರಾದಿಗಳಿಗೆ ಉಪಾಸನದಲ್ಲಿ ಅಧಿಕಾರವಿಲ್ಲವೆಂದೂ ಪ್ರಪತ್ತಿಯಲ್ಲೇ ಅಧಿಕಾರವುಂಟೆಂದು ತಿಳಿಸುತ್ತದೆ, (೨) **ತಸ್ಯ ದೇವಾ ಅಸನ್ವಶೇ** ಅಂತಹ ಪ್ರಪದನವನ್ನನುಷ್ಠಿಸಿದವನಿಗೆ ದೇವತೆಗಳು ವಶದಲ್ಲಿರುವರು ಎಂದು ಮಾಹಾತ್ಮ್ಯೆಯು ಹೇಳಲ್ಪಟ್ಟಿರುತ್ತದೆ (೩) **"ಸರ್ವೇಸ್ಮೈ ದೇವಾ ಬಲಿಮಾವಹಂತಿ"** - ಇವನಿಗೆ ಸಮಸ್ತ ದೇವತೆಗಳೂ ಪೂಜೆಯನ್ನು ಮಾಡುವರು. (೪) **ಏವಂ ವಿದಿ ಪಾಪಂ ಕರ್ಮ ನಶ್ಲಿಷ್ಯತೇ** - ಇಂತಹ ಉಪಾಸಕನಲ್ಲಿ ಸಂಚಿತ ಮತ್ತು ಆಗಾಮಿ ಪಾಪಗಳು ಯಾವುವೂ ಸಂಬಂಧಿಸುವದಿಲ್ಲವು. (೫) **ಏವಂ ಹಾಸ್ಯಸರ್ವೇ ಪಾಪ್ಮಾನಃ ಪ್ರದೂಯಂತೇ** ಹೀಗೆ ಈ ಪ್ರಪನ್ನನ ಸಮಸ್ತಪಾಪಗಳು ದಹಿಸಿ ಹೋಗುತ್ತವೆ. (೬) **ನಾಸ್ಯಾ ಬ್ರಹ್ಮ ವಿತ್ಕುಲೇ ಭವತಿ**-ಇವೇ ಮೊದಲಾದ ಶೃತಿಗಳು ಇಷ್ಟರಮಟ್ಟಿಗೆ ಮಾತ್ರವೇ ಈ ಪ್ರಪನ್ನನಿಗೆ ಮಾಹಾತ್ಮ್ಯೆಯನ್ನು ಬೋಧಿಸುತ್ತವೇ ವಿನಾ, ಈ ಶರಣಾಗತ್ಯನುಷ್ಠಾನದಿಂದ ಬ್ರಾಹ್ಮಣನೊಂದಿಗೆ ಸವ್ಯವಹಾರಾದಿಗಳಿಗೆ ಯೋಗ್ಯನೆಂದಿಗೂ ಆಗುವದಿಲ್ಲವು. ಇಂತಹ ಸಂಪ್ರದಾಯವೇ ಸರಿ ಎಂಬುದು ಶ್ರೀಯತಿವರ್ಯರೇ ಮೊದಲಾದ ಸತ್ತುಗಳ ಅನುಷ್ಠಾನದಿಂದ ವ್ಯಕ್ತವೆಂದು ಹೇಳಿದರು. ಆದರೆ ಶ್ರೀ ಯತಿವರ್ಯರ ಅನುಷ್ಠಾನವು ಶಾಸ್ತ್ರಮರ್ಯಾದೆಯನ್ನು ಸ್ವಲ್ಪಮಟ್ಟಿಗೆ ಅತಿಕ್ರಮಿಸಿದಹಾಗಾಗುವದಿಲ್ಲವೇ ಎಂದು ಎರಡು ಸಂದರ್ಭಗಳನ್ನು ಕೆಲವರು ಸೂಚಿಸಬಹುದು. ಒಂದನೆಯದು:—ಶ್ರೀ ಭಾಷ್ಯಕಾರರು ಪೂರ್ವಾಶ್ರಮದಲ್ಲಿರುವಾಗ ವೈಶ್ಯರಾದ ತಿರುಕ್ಕಚ್ಚಿನಂಬಿಗೆ ಶ್ರೀ ವರದರಾಜರು ಪ್ರತ್ಯಕ್ಷವೆಂಬುದನ್ನು ತಿಳಿದು, ಅವರನ್ನು ಮನೆಗೆ ಕರೆದುಕೊಂಡು ಹೋಗಿ ಆ ವೈಶ್ಯರಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿದುದೂ, ಮತ್ತು ಅವರು ಕುಳಿತಿದ್ದ ಸ್ಥಳವನ್ನು ಶುದ್ಧಿಮಾಡಿ ತಾನೂ ಸ್ನಾನಮಾಡಿದ ಪತ್ನಿಯ ವಿಷಯದಲ್ಲಿ ಕುಪಿತರಾದುದೂ, ಇವು ವರ್ಣಾಶ್ರಮ ಧರ್ಮಕ್ಕೆ ವಿರೋಧವಾದುದಲ್ಲವೋ ಎಂದರೆ ತಿರುಕ್ಕಚ್ಚಿನಂಬಿಗೇನೇ ಇದು ಇಷ್ಟವಾಗದೇ ಇದ್ದುದರಿಂದ, ಇಂತಹ ವರ್ಣಾಶ್ರಮಧರ್ಮಾತಿಕ್ರಮವು ಸರಿಯಲ್ಲವೆಂದು ಸಿದ್ಧಾಂತಿಸಿದರು.

ಎರಡನೆಯ ಸಂದರ್ಭವು ಯಾವುದೆಂದರೆ ಶ್ರೀ ಯತಿವರ್ಯರು ವೃದ್ಧರಾಗಿ ಶ್ರೀರಂಗದಲ್ಲಿರುವಾಗ ಪ್ರತಿದಿನವೂ ಕಾವೇರಿಯಲ್ಲಿ ಸ್ನಾನಕ್ಕೆ ಹೋಗುವಾಗ ತಮ್ಮ ಶಿಷ್ಯರಾದ ಶ್ರೀ ದಾಶರಥಿಯ ಕೈಯನ್ನು ಹಿಡಿದುಕೊಂಡು ಹೋಗುತ್ತಿದ್ದರೆಂದೂ ಅನುಷ್ಠಾನಗಳನ್ನು ತೀರಿಸಿಕೊಂಡು ಪದ್ಧತಿಪ್ರಕಾರ ಶ್ರೀ ರಙ್ಗನಾಥನ ಸೇವೆಗೆ ಬರುವಾಗ, ಶೂದ್ರಶಿಷ್ಯನಾದ ಪ್ರಿಯದಾಸಿಯ ಕೈಯನ್ನು ಹಿಡಿದುಕೊಂಡು ಬರುತ್ತಿದ್ದರೆಂದೂ, "ನ ಶೂದ್ರಾ ಭಗವದ್ಭಕ್ತಾಃ ವಿಪ್ರಾ ಭಾಗವತಾಸ್ಸ್ಮೃತಾಃ" ಎಂಬ ಹೇಳಿಕೆಗನುಸಾರವಾಗಿ ಹಾಗೆ ಮಾಡಿದರೆಂದೂ ಕೆಲವರು ಹೇಳುತ್ತಾರೆ. ಇದಕ್ಕೆ ಸರಿಯಾದ ಆಧಾರವಿಲ್ಲದುದರಿಂದ ಇದು ಚರ್ಚೆಗೆ ಯೋಗ್ಯವಲ್ಲವು.

ಶ್ರೀ ಯತಿವರ್ಯರೇ ಕೊನೆಯ ಸೂತ್ರದ ಭಾಷ್ಯದಲ್ಲಿ "**ಏವಮಹರಹರನುಷ್ಠೀಯಮಾನ ವರ್ಣಾಶ್ರಮಧರ್ಮಾನುಗೃಹೀತ ತದುಪಾಸನರೂಪತತ್ಸಮಾರಾಧನಪ್ರೀತಃ**" ಎಂದು ವರ್ಣಾಶ್ರಮಧರ್ಮಗಳೇನು ನಿತ್ಯನೈಮಿತ್ತಿಕ ಕರ್ಮಗಳ ಅನುಷ್ಠಾನವೇನು ಇವುಗಳಿಗೆ ತುಂಬಾ ಪ್ರಾಮುಖ್ಯವನ್ನು ಕೊಟ್ಟಿರುವರು ಅವುಗಳನ್ನು ಉಲ್ಲಂಘಿಸಲು ಎಲ್ಲಿಯಾದರೂ ಪ್ರವರ್ತಿಸುವರೇ? ದೇಹಾವಸಾನ ಉಂಟಾಗುವ ದಿನದಲ್ಲಿ ಅತಿ ದುರ್ಬಲವಾಗಿರುವ ದೆಶೆಯಲ್ಲಿ ಸಂಧ್ಯಾವಂದನೆಯ ಅರ್ಘ್ಯಪ್ರದಾನ ಕಾಲದಲ್ಲಿ ಇಬ್ಬರು ಶಿಷ್ಯರು ತಮ್ಮನ್ನು ಎಬ್ಬಿಸಿ ನಿಲ್ಲಿಸುವಹಾಗೆ ಮಾಡಿಕೊಂಡು ಅರ್ಘ್ಯವನ್ನು ಕೊಟ್ಟ ಮಹಾನುಭಾವರು ವರ್ಣಾಶ್ರಮ ಧರ್ಮವನ್ನು ಈಷದಪಿ ಮನಸ್ಸಿನಿಂದಲಾದರೂ ಉಲ್ಲಂಘಿಸುತ್ತಾರೆಯೇ? ಹಾಗೆಯೇ ಮೇಲುಕೋಟೆಯಲ್ಲಿ ರಥೋತ್ಸವಕಾಲದಲ್ಲಿ ಪಂಚಮರು ದೇವಸ್ಥಾನವನ್ನು ಪ್ರವೇಶಮಾಡಿ ಧ್ವಜಸ್ತಂಭದವರೆಗೂ ಬರುವಹಾಗೆ ಮಾಡಿದುದು ವರ್ಣಾಶ್ರಮಧರ್ಮೋಲ್ಲಂಘನವಾಗುವದಿಲ್ಲವು. ದೇವಸ್ಥಾನದ ಏರ್ಪಾಡಿನಲ್ಲಿ ತುಂಬಾ ಸಾಹಸಮಾಡಿ ಸಹಾಯಮಾಡಿದ ಭಕ್ತರಿಗೆ ಸ್ವಲ್ಪ ಮಟ್ಟಿಗೆ ಮರ್ಯಾದೆ ತೋರಿಸುವದು ಯುಕ್ತವಾದುದರಿಂದ ಅವರನ್ನು ಧ್ವಜಸ್ಥಂಭದವರೆಗೂ ಬರುವಹಾಗೆ ಮಾಡಿ, ಅದಕ್ಕಾಗಿ ಅನಂತರ ಸಂಪ್ರೋಕ್ಷಣೆಯನ್ನು ಪ್ರಾಯಶ್ಚಿತ್ತರೂಪದಲ್ಲಿ ವಿಧಿಸಿರುವದು ಯುಕ್ತವಾದ ವಿಷಯವೇ. ಇದರಲ್ಲಿ ಗೀತೆಯಲ್ಲಿ ತುಂಬಾ ವಾದಿಸಿರುವ ವರ್ಣಸಾಂಕರ್ಯದೋಷಕ್ಕೇನೂ ಅವಕಾಶವಿಲ್ಲವು. ಆದುದರಿಂದ ಪ್ರಪತ್ತಿರೂಪ ಸಂಸ್ಕಾರ ಹೊಂದಿದ ಶೂದ್ರಾದಿ ವರ್ಣದ ಪ್ರಪನ್ನನಿಗೆ ಮೇಲೆಹೇಳಿದ ರೀತಿಯಲ್ಲಿ ಪಾಪವಿನಾಶ, ದೇಹಾವಸಾನದಲ್ಲಿ ಮೋಕ್ಷಪ್ರಾಪ್ತಿಯೇ ಮೊದಲಾದ ಶ್ಲಾಘ್ಯತಾರೂಪ ಪ್ರಭಾವಾರ್ಹತೆಯೇ ವಿನಾ, ವರ್ಣಸಾಂಕರ್ಯೋಚಿತ ಮಾಹಾತ್ಮ್ಯವು ಎಂದಿಗೂ ಇಲ್ಲವೆಂಬ ಭಾವವು. ಗೀತೆಯಲ್ಲಿ ವರ್ಣಸಾಂಕರ್ಯವು ನಿಂದಿಸಿರುವ ಪ್ರಕರಣವು ಯಾವುದೆಂದರೆ:—"ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ"

ಅರ್ಜುನನು ತಾನು ಸ್ವಜನವನ್ನು ವಧಿಸುವದು ಅಧರ್ಮವೆಂದೂ, ಆ ಅಧರ್ಮ ದಿಂದ ಪತಿಗಳ ವಧೆಗಳ ಮೂಲಕವಾಗಿ ಸ್ತ್ರೀಯರು ದುಷ್ಟರಾಗುತ್ತಾರೆಂದೂ, ಆ ಕಾರಣದಿಂದ ವರ್ಣಸಾಂಕರ್ಯವುಂಟಾದೀತೆಂದೂ, ಶ್ರೀಕೃಷ್ಣನಿಗೆ ಹೇಳುತ್ತಾನೆ ವರ್ಣಸಾಂಕರ್ಯವು ಶ್ರೀಕೃಷ್ಣನಿಗೆ ಅಭಿಮತವಾದುದಾಗಿದ್ದರೆ, ಅರ್ಜುನನು ವರ್ಣಸಾಂಕರ್ಯಕ್ಕಾಗಿ ಶೋಕಿಸುತ್ತಿರಲಿಲ್ಲವು ಮತ್ತು ಶ್ರೀಕೃಷ್ಣನೇ ವರ್ಣ ಸಾಂಕರ್ಯವನ್ನುಂಟುಮಾಡುವದು ಯುಕ್ತವಲ್ಲವೆಂಬ ಅಭಿಪ್ರಾಯವನ್ನು "**ಉತ್ಸೀದೇಯು ರಿಮೇಲೋಕಾ ನಕುರ್ಯಾಂ ಕರ್ಮಚೇದಹಮ್ । ಸಂಕರಸ್ಯ ಕರ್ತಾಸ್ಯಾಮುಪಹನ್ಯಾ ಮಿಮಾಃಪ್ರಜಾಃ** ॥ (ಗೀ. ೩. ೨೪) ಎಂಬ ವಾಕ್ಯದ ಮೂಲಕ ಸ್ಪಷ್ಟಪಡಿಸುತ್ತಾರೆ. ಅರ್ಜುನನು ಕ್ಷತ್ರಿಯಧರ್ಮವಾದ ಅಧರ್ಮಿಗಳನ್ನು ದಂಡಿಸುವ ಕರ್ಮವನ್ನು ತ್ಯಜಿಸಿದುದು ಸರಿಯಲ್ಲವೆಂದು ಹೇಳುವ ನೆಪದಿಂದ "**ಸ್ವೇಸ್ವೇ ಕರ್ಮಣ್ಯಭಿರತಃ**" (ಗೀ. ೧೮. ೪೫) ಎಂದು ನಿಗಮನ ಪ್ರಕರಣದಲ್ಲಿ ವರ್ಣಾಶ್ರಮ ಧರ್ಮಾನುಷ್ಠಾನವನ್ನು ಗೀತೆಯು ವಿಧಿಸಿದ್ದರೂ ಗೀತೆಯನ್ನೇ ಸದಾ ಪಠಿಸುತ್ತಾ, ಸೋಷಲ್ ರಿಫಾರ್ಮರಲ್ಲಿ ಅಗ್ರೇಸರರು ವರ್ಣಾಶ್ರಮ ಧರ್ಮಗಳನ್ನು ನಿಂದಿಸುತ್ತಿರುವದು ಪರಮಾಶ್ಚರ್ಯ ವಿಷಯವು.

ಆದುದರಿಂದ ಶೂದ್ರಾದಿಗಳು ಪ್ರಪನ್ನರಾದುದರೆಂಬುದರಿಂದ ಸಹ ಪಙ್ಕ್ತಿ ಭೋಜನ, ಕನ್ಯಾದಾನ ಪರಿಗ್ರಹಾದಿಗಳೂ ಉಪಾದೇಯವೆಂದು ಭಾವಿಸುವದು ಶಾಸ್ತ್ರಸಮ್ಮತವಲ್ಲದ ವಿಷಯವು. ಅಂತಹ ಆಚರಣೆಯಿಂದ ಬ್ರಹ್ಮವಿತ್ತೂ ಕೂಡ ಮಂದ ಜ್ಞಾನವುಳ್ಳವನೊಂದಿಗೆ ಸೇರುವದರಿಂದ ಲೋಕಕ್ಕೆ ಮಹತ್ತ್ವವನ್ನುಂಟು ಮಾಡುವ ಬ್ರಹ್ಮಕುಲಕ್ಕೇ ನಾಶವುಂಟಾಗುತ್ತದೆ. ಇದೇ ಸರಿಯಲ್ಲವಾಗಿರುವಾಗ, ಪಂಚಮಾಧಿಕಾರಿಯು ತನ್ನ ಆಚರಣೆಯಿಂದ ಇತರ ಪಂಚಮರಿಗಿಂತ ಮೇಲಾಗಿದ್ದಾನೆ ಎಂಬ ಮಾತ್ರದಿಂದಲೇ ಆತನೊಂದಿಗೆ ಪಙ್ಕ್ತಿಭೋಜನಾದಿಗಳನ್ನೆಸಗುವದು ಉತ್ಕೃಷ್ಟ ಬ್ರಹ್ಮಜ್ಞಾನಾಗ್ರೇಸರರ ಕುಲಕ್ಕೆ ಪರಮ ಕುಂದಕವು ಎಂಬುದು ಕೈಮುತಿಕನ್ಯಾಯಸಿದ್ಧವು. ಬ್ರಹ್ಮ ಕುಲವನ್ನು ಕಾಪಾಡುವದರಿಂದ ದೇಶಕ್ಕೆ ಎಲ್ಲಾ ವಿಧದಲ್ಲೂ ಕ್ಷೇಮ ಉಂಟು. ಆದುದರಿಂದಲೇ ಪುರಾಣೇತಿಹಾಸವೊದಲುಗೊಂಡು ವೇದಾನ್ತವನ್ನು ಬೋಧಿಸುವ ಸರ್ವಶಾಸ್ತ್ರಗಳೂ ವರ್ಣಾಶ್ರಮಧರ್ಮಗಳ ಪಾಲನೆಗೆ ತುಂಬಾ ಪ್ರಾಮುಖ್ಯತೆಯನ್ನು ಕೊಟ್ಟಿರುತ್ತವೆ. ಇದು ಪಾಶ್ಚಾತ್ಯರೇ ಮೊದಲಾದ ಇತರರಲ್ಲಿ ಇಲ್ಲದುದರಿಂದ ಅವರುಗಳಲ್ಲಿ ಕ್ರೌರ್ಯವೂ ದೌಷ್ಟ್ಯವೂ ಹೆಚ್ಚು; ನಮ್ಮಲ್ಲಿಯಾದರೋ ಕಮ್ಮಿಯು. ಇದಕ್ಕೆ ಇಟಲಿ ಜರ್ಮನ್ ದೇಶೀಯರೇ ನಿದರ್ಶನವು.

ಈ ಜೀವಾತ್ಮರು ಅಣುವೆಂದು ಶ್ರುತಿಯು ಹೇಳುತ್ತದೆ ಇವರೆಲ್ಲಾ ಜ್ಞಾನೈಕಾಕಾರತೆಯಿಂದ ಎಲ್ಲರೂ ಸಮರೆಂದು "**ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇಗವಿ**

ಹಸ್ತಿನಿ। ಶುನಿಚೈವ ಶ್ವಪಾಕೇಚ ಪಂಡಿತಾಸ್ಸಮದರ್ಶಿನಃ" (ಗೀ. ೫. ೧೮) ಎಂಬ ಶ್ಲೋಕದಲ್ಲೂ, ಇನ್ನೂ ಅನೇಕ ಪ್ರಮಾಣಗಳಿಂದ ವ್ಯಕ್ತವಾಗಿ ಹೇಳಲ್ಪಟ್ಟಿರುತ್ತದೆ. ಹೀಗಿರುವದರಿಂದ ಸ್ವತಃ ತಾನೇ ಏನು ಕೆಲಸವನ್ನೂ ಮಾಡಲು ಆಸಮರ್ಥನೆಂದು "ನಕರ್ತೃತ್ವಂ ನಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ" ಎಂಬ ಗೀತಾವಾಕ್ಯದಲ್ಲಿ ಹೇಳಲ್ಪಟ್ಟಿರುತ್ತದೆ. ಈತನಿಗೆ ಪೂರ್ವಾರ್ಜಿತ ಸುಕೃತ ದುಷ್ಕೃತ ತಾರತಮ್ಯಾನುಗುಣವಾಗಿ ಪ್ರಕೃತಿಸಂಬಂಧ ವುಂಟಾಗಿ ಕರಣ ಕಳೇಬರ ಯೋಗ ದೊರೆಯುವದರಿಂದ ಜ್ಞಾನ ವಿಕಾಸದಲ್ಲಿ ತಾರತಮ್ಯವೂ, ಮಾಡುವ ಕರ್ಮಗಳಲ್ಲಿ ತಾರತಮ್ಯವೂ ಉಂಟಾಗಬಹುದು. ಇದರಿಂದ ಒಬ್ಬನು ೮,೦೦೦ ಮೈಲಿಯ ದೂರದಲ್ಲಿ ನಡೆಯುವ ಸಂಗೀತವನ್ನು ಇಲ್ಲಿ ಕೇಳಿಸುವಹಾಗೆ ಮಾಡುವ ಜ್ಞಾನದೀಪ್ತಿಯುಳ್ಳವನಾಗುತ್ತಾನೆ. ಆಕಾಶವು ವಿಮಾನದಲ್ಲಿ ನಡೆಯುವಹಾಗೆ ಮಾಡುವನು. ಇನ್ನು ಇತರರು ಅಜ್ಞಾನಾಂಧಕಾರದಲ್ಲಿ ತೊಳಲುವರು. ಇಂತಹ ತಾರತಮ್ಯಕ್ಕೆಲ್ಲಾ ಕಾರಣವು ಈ ಜೀವಾತ್ಮನು ಪ್ರಕೃತಿಯೆಂಬವಿಧವಿಧವಾಗಿ ವಿಚಿತ್ರವಾಗಿರುವ ಅಂಗಿಯನ್ನು ತೊಟ್ಟಿರುವದೇ. ಹೀಗಿರುವಲ್ಲಿ ಎಲ್ಲರೂ ಸಮವೆಂಬ ಭಾವನೆಯು ಶಾಸ್ತ್ರಜ್ಞಾನ ವಿವೇಕಜ್ಞಾನ ಇವುಗಳ ಶೂನ್ಯತೆಯ ವಿಜೃಂಭಣೆಯಲ್ಲವೇ? ಈ ವಿವಿಧ ವೈಚಿತ್ರ್ಯತೆ ಹೇಗೆ ಎಂಬುದನ್ನು ಸುಲಭವಾಗಿ ಊಹಿಸಬಹುದು ಹೇಗೆಂದರೆ, ನಾಯಿ ಎಂಬುದರಿಂದ ಒಂದು ಸಾಮಾನ್ಯವಾದ ತಿರ್ಯಗ್ಜಂತು ಹೇಳಲ್ಪಟ್ಟರೂ, ಅವುಗಳಲ್ಲಿ ಎಷ್ಟುಭೇದಗಳಿವೆ ಎಂಬುದು ಸರ್ವರಿಗೂ ವೇದ್ಯವೇ. ಹಾಗೆಯೇ ಮಾವಿನ ಹಣ್ಣೆಂಬದಾಗಿ ಮಾವಿನಗಿಡದಲ್ಲಿ ಬಿಟ್ಟ ಫಲಕ್ಕೆ ಹೆಸರಾದರೂ ಸಾವಿರಾರುವಿಧ ಮಾವಿನಹಣ್ಣುಗಳಿವೆ ಎಂಬುದೂ, ಅವುಗಳಲ್ಲಿ ರುಚಿ ಭೇದ ಉಂಟೆಂಬುದೂ ವ್ಯಕ್ತವು. ಹಾಗೆಯೇ ಮನುಷ್ಯರಲ್ಲೂ ಎಂದು ತಿಳಿಯತಕ್ಕದ್ದು. ಎಲ್ಲಾ ಮನುಷ್ಯರ ದೇಹರಚನೆಯು, ಕಣ್ಣು, ಕಿವಿ, ಮೂಗು, ಬಾಯಿ, ಕೈ ಕಾಲುಗಳೆಲ್ಲಾ ಒಂದೇ ಸಮನಾಗಿದ್ದರೂ, ಸಾವಿರಾರುಮಂದಿ ನೆರೆದಿರುವವರ ಸಂಘದಲ್ಲಿ ಈತನು ನನ್ನ ಮಗನು, ಈತನು ನನ್ನ ತಮ್ಮನೆಂದು ಭಾವಿಸುವದರಿಂದ ಆ ಸಾವಿರಾರು ಜನರಿಗಿಂತಲೂ ಇವರುಗಳು ಭಿನ್ನರೆಂದು ಹೇಗೆ ತಿಳಿದಿ ಎಂದು ಕೇಳಿದರೆ, ಎಲ್ಲರೂ ಸಮರೆಂಬ ದುರಭಿಪ್ರಾಯವನ್ನು ಹೊಂದಿರುವವನು ಸರಿಯಾದ ಉತ್ತರವನ್ನು ಹೇಳಲಾರನು. ಆದುದರಿಂದ ಲೋಕದಲ್ಲಿರುವದು ವೈವಿಧ್ಯ ಎಂದರೆಭಿನ್ನತೆಯೇ ವಿನಾ ಸಮತ್ವವಿಲ್ಲವು. ಒಂದುವೇಳೆ ಎರಡು ವಸ್ತುಗಳು ಕೆಲವು ಗುಣಗಳಿಂದ ಸಮವೆಂದು ಏರ್ಪಟ್ಟರೂ, ಇನ್ನು ಕೆಲವು ಧರ್ಮಗಳಿಂದ ಸಮವಿಲ್ಲದೆ ಇರಲೇಬೇಕೆಂಬುದೂ ಏರ್ಪಟ್ಟಿತು. ಇದು ಹಿಂದೆಯೇ ೧೮೮೮-೯ ನೆಯ ಪುಟದಲ್ಲಿ ಉಪಪಾದಿಸಲ್ಪಟ್ಟಿರುತ್ತದೆ. ಆದುದರಿಂದ ಸಮತ್ವವೆಂಬ

## ವಕ್ಷ್ಯಮಾಣ ಪ್ರತಿಜ್ಞಾ ವ್ಯಾಜೇನ ಸಙ್ಗತಿಮಾಹ.

**ಇಪ್ಪಡಿ ದ್ವಯತ್ತಿಲ್ ದ್ವಿತೀಯಾಂತ ಪದಙ್ಗಳಾಲೇ ಪ್ರಕಾಶಿತೆ ಮಾನ ಸಿದ್ಧೋಪಾಯ ವಿಷಯ ಮಾಗವುಮ್, ಆಖ್ಯಾತ ಪದತ್ತಾಲೇ**

---

ವಾದವು ಅಜ್ಞಾನವಿಜೃಂಭಣೆಯು. ಆದರೆ ಎಷ್ಟು ಉತ್ಕೃಷ್ಟಾಪಕೃಷ್ಟಭಾವಗಳಿದ್ದರೂ ಯಾರನ್ನೂ ದ್ವೇಷಿಸದೆ ಎಲ್ಲರನ್ನೂ ಸಮಪ್ರೀತಿಯಿಂದ ನೋಡತಕ್ಕದ್ದು ಲೋಕವೇದ ಸಮ್ಮತವು.

ಆದರೆ ಹೀಗೆ ಅಸಮತ್ವದಿಂದ ಉತ್ಕೃಷ್ಟಾಪಕೃಷ್ಟವಿದ್ದರೂ ಮನುಷ್ಯನು ಉತ್ಕೃಷ್ಟನಿಗೆ ಸ್ವಲ್ಪಹೆಚ್ಚು ಮರ್ಯಾದೆಯನ್ನು ತೋರಿಸುವದು ನ್ಯಾಯವು. ಇದನ್ನನುಸರಿಸಿಯೇ ಹೆಚ್ಚು ಉತ್ಕೃಷ್ಟತೆ ಇರುವವರಿಗೆ ರಾಜ ಸನ್ಮಾನಗಳೂ, ಬಿರುದುಗಳೂ ಸಲ್ಲುತ್ತಿರುವದನ್ನು ಕಂಡಿರುವೆವು. ಹಾಗೆಯೇ ಲೋಕದ ಜನರೂ, ಸಂಘಗಳೂ, ಅಂತವರಿಗೆ ಮರ್ಯಾದೆಯನ್ನು ಎಸಗುವರು. ಆದರೆ ನಿಕೃಷ್ಟರಾದವರನ್ನು ಈರ್ಷ್ಯಾಸೂಯೆಗಳಿಂದ ಕಾಣಬಾರದು. ಸ್ವಾಮಿಯಿಂದ ನಮಗೆ ಬಂದ ಪ್ರೀತಿಯನ್ನೂ ಅವರಲ್ಲೂ ತೋರಬೇಕು. ಇದರಿಂದ ತುಂಬಾ ಉತ್ಕೃಷ್ಟನಾದವನು ನಿಕೃಷ್ಟನೊಂದಿಗೆ ಶಾಸ್ತ್ರವಿಹಿತವಲ್ಲದ ಆಚರಣೆಗಳಾದ ಸಹ ಪಙ್ಕ್ತಿ ಭೋಜನ, ಕನ್ಯಾದಾನ ಪರಿಗ್ರಹಾದಿಗಳನ್ನು ಮಾಡಬೇಕೆಂಬ ಅಭಿಪ್ರಾಯವಲ್ಲವೆಂದು ತಿಳಿಯತಕ್ಕದ್ದು.

ಪ್ರಪನ್ನನಾಗಿ ಶೂದ್ರಾದಿ ಪಂಚಮರು ಭರನ್ಯಾಸವನ್ನು ಅನುಷ್ಠಿಸಿದುದರಿಂದ ಮಹತ್ವವನ್ನೇನೋ ಹೊಂದಿದರೆಂದು ಒಪ್ಪತಕ್ಕದ್ದು. ಆದರಿಂದ ಬ್ರಾಹ್ಮಣಾದಿ ತ್ರೈವರ್ಣದವರಿಗೆ ಸವ್ಯವಹಾರಕ್ಕೆ ಯೋಗ್ಯರೆಂದು ಭಾವಿಸುವದು ಶಾಸ್ತ್ರನಿಷಿದ್ಧವಾದ ವಿಷಯವು ಏಕೆಂದರೆ ಸರ್ವಶಾಸ್ತ್ರಗಳೂ ವರ್ಣ ಸಾಂಕರ್ಯವನ್ನು ನಿಷೇಧಿಸುತ್ತವೆಯಾದುದರಿಂದ ಅದು ಗ್ರಾಹ್ಯವಲ್ಲವು.

## ಹಿಂದೆ ಹೇಳಿದುದಕ್ಕೂ ಮುಂದೆ ಹೇಳುವದಕ್ಕೂ ಸಙ್ಗತಿಯು.

**ಇಪ್ಪಡಿ** - ಹಿಂದಿನ ಸಿದ್ಧೋಪಾಯ ಸಾಧ್ಯೋಪಾಯ ಶೋಧನಗಳಾದ ಎರಡು ಅಧಿಕಾರಗಳಲ್ಲೂ ಉಪಪಾದಿಸಿದ ರೀತಿಯಲ್ಲಿ, **ದ್ವಯತ್ತಿಲ್** - ಉಪಾಯಾನುಷ್ಠಾನರೂಪವಾದ ದ್ವಯಮಂತ್ರದ, **ದ್ವಿತೀಯಾಂತ ಪದಙ್ಗಳಾಲೇ** - ಶ್ರೀಮನ್ನಾರಾಯಣಚರಣೌ ಮತ್ತು ಶರಣಂ ಎಂಬ ದ್ವಿತೀಯಾಂತ ಪದಗಳಿಂದ, **ಪ್ರಕಾಶಿತಮಾನ** - ವ್ಯಕ್ತಗೊಳಿಸಲ್ಪಟ್ಟ, **ಸಿದ್ಧೋಪಾಯ ವಿಷಯಮಾಗವುಮ್** - ಸಿದ್ಧೋಪಾಯದ ವಿಷಯವಾಗಿಯೂ, ಮತ್ತು, **ಆಖ್ಯಾತ ಪದ**

**ಶೊಲ್ಲಪ್ಪಟ್ಟ ಸಾಧ್ಯೋಪಾಯ ವಿಷಯ ಮಾಗವುಮ್ ಪಿರಕ್ಕುಮ್ ವ್ಯಾಕುಲಙ್ಗಳ್ ಶಮಿಪ್ಪಿಕ್ಕುಮ್ ವಳಿ ಕಾಟ್ಟಿನೋಮ್. ಇವ್ವುಪಾಯ**

---

**ತ್ತಾಲೇ - ಪ್ರಪದ್ಯೇ** ಎಂಬ ಕ್ರಿಯಾಪದದಿಂದ, **ಶೊಲ್ಲಪ್ಪಟ್ಟ** - ವಿಧಿಸಲ್ಪಟ್ಟ ಸಾಧ್ಯೋಪಾಯವಾದ ಪ್ರಪತ್ತಿಯ ವಿಷಯವಾಗಿಯೂ, **ಪಿರಕ್ಕುಮ್** - ಉಂಟಾಗಬಹುದಾದ, **ವ್ಯಾಕುಲಙ್ಗಳ್** - ಶಂಕಾಗಳನ್ನು, **ಶಮಿಪ್ಪಿಕ್ಕುಮ್** - ಹೋಗಲಾಡಿಸುವ, **ವಳಿ** - ಮಾರ್ಗವನ್ನು, **ಕಾಟ್ಟಿನೋಮ್** - ಪ್ರದರ್ಶಿಸಿದೆವು, ಇಲ್ಲಿ ದ್ವಯಮಂತ್ರವು ಸಾಧ್ಯೋಪಾಯಾನುಷ್ಠಾನ ಮಂತ್ರವಾದುದರಿಂದ ಅದರಲ್ಲಿ ಸಿದ್ಧೋಪಾಯ ಸಾಧ್ಯೋಪಾಯ ವಿವಕ್ಷಿತ ಸ್ಥಲವು ಯಾವುವೆಂದು ಉಪದೇಶಿಸುತ್ತಾರೆ. ಚರಮ ಶ್ಲೋಕವು ಇಂತಹ ಅನುಷ್ಠಾನವನ್ನು ವಿಧಿಸುವದರಿಂದ ಇದು ಅದಕ್ಕೂ ಸಹ ಉಪಲಕ್ಷಣವೆಂದು ಭಾವಿಸತಕ್ಕದ್ದು. ಚರಮ ಶ್ಲೋಕದಲ್ಲೂ ಸಹ ದ್ವಿತೀಯಾಂತ ಪದಗಳಾದ, ಮಾಮೇಕಂ ಶರಣಂ ಎಂಬ ಪದಗಳಿಂದ ಸಿದ್ಧೋಪಾಯವೂ ಸೂಚಿಸಲ್ಪಟ್ಟು, ವ್ರಜ ಎಂಬ ಕ್ರಿಯಾಪದದಿಂದ ಸಾಧ್ಯೋಪಾಯಾನುಷ್ಠಾನವೂ ವಿಧಿಸಲ್ಪಟ್ಟಿತು ; ಅದರಿಂದುಂಟಾಗುವ ಫಲಪ್ರಾಪ್ತಿಯು ಉತ್ತರಾರ್ಧದಿಂದ ಹೇಳಲ್ಪಟ್ಟಿತು. ಈ ಸಿದ್ಧೋಪಾಯ ಸಾಧ್ಯೋಪಾಯಗಳ ವಿಷಯದಲ್ಲಿ ಶಾಸ್ತ್ರಜ್ಞಾನವು ಸಂಪೂರ್ಣವಾಗಿ ಇಲ್ಲದಿರುವವರಿಗೆ ಪ್ರಾಪ್ತವಾಗಬಹುದಾದ ಕೆಲವು ಶಙ್ಕೆಗಳಿಗೆ ಸಮಾಧಾನವನ್ನು ಹೇಳಿದೆವು ಎಂದು ತಿಳಿಸುತ್ತಾರೆ. ವಳಿಕಾಟ್ಟಿನೋಮ್ ಎಂಬುದರಿಂದ ಅಂತವರಿಗೆ ಉತ್ಪನ್ನವಾಗಬಹುದಾದ ಎಲ್ಲಾ ಶಙ್ಕೆಗಳೂ ಆಮೂಲಾಗ್ರವಾಗಿ ಚರ್ಚಿಸಲ್ಪಡಲಿಲ್ಲವೆಂದೂ, ಇನ್ನೂ ಕೆಲವು ಶಙ್ಕೆಗಳು ಚರ್ಚಿಸಲ್ಪಡದೆ ಬಿಟ್ಟುಹೋದವೆಂದೂ ಹೇಳಿದಂತಾಯಿತು ; ಗ್ರಂಥಬಾಹುಳ್ಯ ಭಯದಿಂದಲೂ ಚರ್ಚಿಸಲ್ಪಡಲಿಲ್ಲವೆಂಬ ಭಾವವೂ ದ್ಯೋತಿತವು. ಹಾಗಾದರೆ ಸಂಪೂರ್ಣವಾಗಿ ಮಿಕ್ಕ ಶಙ್ಕೆಗಳಿಗೂ ಸಮಾಧಾನವೆಲ್ಲಿ ದೊರೆಯುತ್ತದೆ ಎಂದರೆ, ಹಿಂದಿನ ಅಧಿಕಾರಾಂತ್ಯದಲ್ಲಿ "ನಿಕ್ಷೇಪ ರಕ್ಷೈಯಿಲೆ ಕಣ್ಡು ಕೊಳ್ವದು" ಎಂದು ಸೂಚಿಸಿರುತ್ತಾರೆ. ಆದರೆ ಮೂಲ ಮಂತ್ರದಲ್ಲಿ ಈ ಸಿದ್ಧೋಪಾಯ ಸಾಧ್ಯೋಪಾಯಗಳ ಬೋಧವಿಲ್ಲವೋ ? ಹಾಗೆ ಇದ್ದುದಾದರೆ ಏಕೆ ಹೇಳಲ್ಪಡಲಿಲ್ಲವು? ಎಂದು ಪ್ರಶ್ನಿಸಿದರೆ, ಅಲ್ಲಿಯೂ ಸಿದ್ಧೋಪಾಯನು ಓಂಕಾರದ ಅಕಾರದಲ್ಲೂ, ನಾರಾಯಣಾಯ ಎಂಬ ಪದದಿಂದಲೂ, ಸಾಧ್ಯೋಪಾಯವು ನಮಃ ಎಂಬ ಪದದಿಂದಲೂ ತೋರಿಬಂದರೂ, ಶ್ರೀ ವಿಶಿಷ್ಟನೇ ಉಪಾಯಭೂತನೆಂಬಂಶವು ಈ ದ್ವಯದಲ್ಲಿ ತೋರಿಬರುವಹಾಗೆ, ಚರಮ ಶ್ಲೋಕದಲ್ಲಾಗಲಿ ಮೂಲಮಂತ್ರದಲ್ಲಾಗಲಿ ವ್ಯಕ್ತವಲ್ಲವಾದುದರಿಂದ ಎರಡನ್ನೂ

(ನಿಷ್ಕರ್ಷ) ಪ್ರಭಾವವಿಷಯಮಾಗ ಪ್ರಮಾಣಙ್ಗಳ್ ಕಾಟ್ಟಿನ ವಳವುಕ್ಕು ಏರ ನಿನೈತ್ತುಮ್, ಕುರೈಯ ನಿನೈತ್ತುಮ್, ವರುಮ್ ಕಲಕ್ಕಙ್ಗಳೈ ಶಮಿಪ್ಪಿ (ಕ್ಕವೇಣುಮಾ.) ಕ್ಕಿರೋಮ್.

---

ಬಿಟ್ಟು ದ್ವಯಮಂತ್ರ ಒಂದನ್ನೇ ಮುಖ್ಯವಾಗಿ ಉದ್ದೇಶಿಸಿ ಹೇಳಿರುತ್ತಾರೆ. ಶ್ರೀ ವೈಶಿಷ್ಟ್ಯವು ಚರಮಶ್ಲೋಕದಲ್ಲಿ ಸನ್ನಿಯೋಗ ಶಿಷ್ಟನ್ಯಾಯದ ಮೂಲಕ ಊಹಿಸಬೇಕಾಗುತ್ತದೆ. ಹಾಗೆಯೇ ಮೂಲಮಂತ್ರದಲ್ಲೂ ಅಕಾರದಿಂದ ಅರ್ಥವಾಗಿ ಊಹಿಸತಕ್ಕದ್ದಾಗಿರುತ್ತದೆ. ದ್ವಯದಲ್ಲಿ ಮಾತ್ರವೇ ವ್ಯಕ್ತವು.

ಮುಂದಿನ ವಾಕ್ಯದಮೂಲಕ ಹಿಂದಿನ ಎರಡು ಅಧಿಕಾರಗಳಿಗೂ ಇವುಗಳಿಗೂ ಸಙ್ಗತಿಯನ್ನು ತೋರಿಸುತ್ತಾರೆ. ಈ ಸಾಧ್ಯೋಪಾಯವು ದೇಹಾವಸಾನದಲ್ಲೇ ಅನಿಷ್ಟ ನಿವೃತ್ತಿ ಪೂರ್ವಕ ಇಷ್ಟಪ್ರಾಪ್ತಿರೂಪ ಮೋಕ್ಷಪ್ರಾಪ್ತಿಯನ್ನುಂಟುಮಾಡುವ ಮಾಹಾತ್ಮ್ಯಯುಳ್ಳದಾದುದರಿಂದ ಅದಕ್ಕಿಲ್ಲದ ಮಾಹಾತ್ಮ್ಯಯನ್ನು ಆರೋಪಿಸಿ ಹೇಳುವರು, ಇನ್ನು ಕೆಲವರು ಅದಕ್ಕಿರುವ ಮಾಹಾತ್ಮ್ಯಯನ್ನು ತಗ್ಗಿಸುವರು. ಇವೆರಡೂ ಸರಿಯಲ್ಲವೆಂದು ತಿಳಿಸಿ ಅದರ ಮಾಹಾತ್ಮ್ಯಯ ಯಥಾರ್ಥವಾದ ಸ್ವರೂಪವನ್ನು ಮುಂದಿನ ಎರಡು ಅಧಿಕಾರಿಗಳಿಂದ ತಿಳಿಸುತ್ತಾರೆ. ಇಲ್ಲದ ಮಾಹಾತ್ಮ್ಯಯನ್ನು ಆರೋಪಿಸಿ ಹೇಳುವ ಶಙ್ಕೆಗಳಿಗೆ ಈ ಅಧಿಕಾರದಲ್ಲಿ ಸಮಾಧಾನವನ್ನು ಹೇಳಿ, ಅದರ ಪ್ರಭಾವವು ಇಷ್ಟರಮಟ್ಟಿಗೇನೇ ಎಂದು ವ್ಯವಸ್ಥೆ ಮಾಡಿ ನಿಲ್ಲಿಸುವದರಿಂದ ಇದಕ್ಕೆ ಪ್ರಭಾವ ವ್ಯವಸ್ಥಾಧಿಕಾರವೆಂದೂ, ಈ ಉಪಾಯದ ಪ್ರಭಾವವನ್ನು ಕಮ್ಮಿಮಾಡಿ ಹೇಳುವವರ ಶಙ್ಕೆಗಳನ್ನು ನಿರಸನಮಾಡಿ ಅದರ ಪ್ರಭಾವವನ್ನು ರಕ್ಷಿಸುವದರಿಂದ ಮುಂದಿನ ಅಧಿಕಾರಕ್ಕೆ ಪ್ರಭಾವರಕ್ಷಾಧಿಕಾರವೆಂದೂ, ಹೆಸರು.

ಇವ್ವುಪಾಯ ಪ್ರಭಾವ ವಿಷಯಮಾಗ - ಈ ಸಾಧ್ಯೋಪಾಯವಾದ ಭರನ್ಯಾಸದ ವಿಷಯವಾಗಿ, ಪ್ರಮಾಣಙ್ಗಳ್ - ಶಾಸ್ತ್ರಪ್ರಮಾಣಗಳು, ಕಾಟ್ಟಿನವಳವುಕ್ಕು - ತೋರಿಸಿದ ರೀತಿಗೆ, ಏರನಿನೈತ್ತುಮ್ - ಹೆಚ್ಚು ಮಾಹಾತ್ಮ್ಯಯನ್ನು ಎಣಿಸಿ, ಕುರೈಯನಿನೈತ್ತುಮ್ - ಕಮ್ಮಿ ಮಾಹಾತ್ಮ್ಯಯನ್ನು ಎಣಿಸಿ, ವರುಮ್ ಕಲಕ್ಕಙ್ಗಳೈ- ಬರುವ ಶಙ್ಕೆಗಳನ್ನು ಶಮಿಪ್ಪಿಕ್ಕಿರೋಮ್- ಹೋಗಲಾಡಿಸುವೆವು; ಎಂಬದಾಗಿ ಪ್ರತಿಜ್ಞಾ ವಾಕ್ಯವು. ಹೀಗೆ ಮುಂದಿನ ಎರಡು ಅಧಿಕಾರಗಳಲ್ಲಿ ಈ ಶಙ್ಕೆಗಳಿಗೆ ಪರಿಹಾರವನ್ನು ಮಾಡುವೆವು ಎಂದು ತಿಳಿಸುತ್ತಾರೆ.

## ಪ್ರಥಮಂ ಜಾತಿ ವಿಷಯ ವ್ಯಾಮೋಹಂ ನಿವರ್ತಯತಿ

(೧) "ಆಸ್ಫೋಟಯಂತಿ ಪಿತರಃ ಪ್ರನೃತ್ಯಂತಿ ಪಿತಾಮಹಾಃ। ವೈಷ್ಣವೋ ನಃ ಕುಲೇ ಜಾತ ಸ್ಸ ನಸ್ಸಂತಾರ ಯಿಷ್ಯತಿ" ಎನ್ರುಮ್, (೨) ಕೇಶವಂ ತಮರ್ ಕೀಳ್‌ಮೇಲೆ ಮರೇಳೇಳು ಪಿರಪ್ಪು। ಮಾಶತಿರುದು

## ಮೊದಲು ಭಾಗವತರೆಲ್ಲಾ ಏಕಜಾತೀಯರೆಂಬ ಶಙ್ಕಾ ನಿರಸನವು

ಪ್ರಥಮತಃ ಈ ಸಾಧ್ಯೋಪಾಯವು ಅತ್ಯಂತ ಪ್ರಭಾವವುಳ್ಳದು ಎಂಬುದನ್ನು ಪ್ರಮಾಣ ಬಲದಿಂದ ತೋರಿಸಿ, ಆಕಾರಣದಿಂದ ಭಾಗವತರೆಲ್ಲಾ ಸಮರು, ಅವರುಗಳಿಗೆ ಜಾತಿ ವ್ಯತ್ಯಾಸಗಳನ್ನು ಹೇಳುವದು ಅನ್ಯಾಯವೆಂಬ ಪೂರ್ವಪಕ್ಷವನ್ನು ಪಪಾದಿಸಿ, ಅದನ್ನು ಖಂಡಿಸುತ್ತಾರೆ. ಪ್ರಭಾವ ಪ್ರದರ್ಶಕ ಪ್ರಮಾಣಗಳಲ್ಲಿ ಕೆಲವನ್ನು ಮೊದಲು ಉದಾಹರಿಸುತ್ತಾರೆ, (೧) ನಃ - ನಮ್ಮ, ಕುಲೇ-ಕುಲದಲ್ಲಿ, ವೈಷ್ಣವಃ - ವಿಷ್ಣು ಸಂಬಂಧೀಯನು ತಾನು ಎಂಬು ಶ್ರೀ ಮಹಾವಿಷ್ಣುವನ್ನಾಶ್ರಯಿಸಿರುವ ಮಹಾ ಭಾಗವತೋತ್ತಮನು, ಜಾತಃ - ಹುಟ್ಟಿದನು ಎಂಬದಾಗಿ, ಪಿತರಃ - ಈ ಪ್ರಪನ್ನನ ತಂದೆತಾಯಿಗಳು, ಆಸ್ಫೋಟಯಂತಿ-ಪರಮ ಸಂತೋಷಸೂಚಕವಾಗಿ ಭುಜಗಳನ್ನು ತಟ್ಟುವರು, ಅತನ ಪಿತಾಮಹಾಃ - ತಂದೆಯ ತಂದೆಗಳು ಎಂದರೆ ತಾತಂದಿರುಸಹ ಪ್ರನೃತ್ಯಂತಿ - ಚನ್ನಾಗಿ ನರ್ತನೆಮಾಡುವರು. ಹಾಗೆ ಭುಜಾಸ್ಫಾಲನ ನರ್ತನೆಗಳಿಗೆ ಕಾರಣವೇನೆಂದರೆ- ತಮ್ಮ ಕುಲದಲ್ಲಿ ಹುಟ್ಟಿದವನೊಬ್ಬನು ಈಗ ವಿಷ್ಣುವಿನಲ್ಲಿ ಶರಣಾಗತಿಯನ್ನನುಷ್ಠಿಸಿ ಪ್ರಪನ್ನನಾದುದರಿಂದ ನಮಗೆ ಇನ್ನುಮುಂದೆ ಏನೂ ಖೇದವಿಲ್ಲವು, ಸಃ - ಅತನು, ನಃ ಸಂತಾರಯಿಷ್ಯತಿ - ನಮ್ಮಗಳನ್ನು ಈ ಸಂಸಾರಬಂಧದಿಂದ ದಾಟಿಸುವನು ಎಂಬ ಪರಮ ಸಂತೋಷದಿಂದ ಹಾಗೆ ಮಾಡುತ್ತಾರೆಂಬ ಭಾವವು. ವಿಶೇಷ ಸಂತೋಷದಿಂದ ವೈಮರೆತು ಮಾಡುವ ವ್ಯಾಪಾರಗಳು ಭುಜಾಸ್ಫಾಲನ ನರ್ತನಗಳೆಂದು ಭಾವಿಸತಕ್ಕದ್ದು." ಎನ್ರುಮ್ - ಎಂದೂ, "ಭಕ್ತನಲ್ಲಿ ಅಭಿಮಾನ ಉಂಟಾದರೆ, ಭಕ್ತನಿಗೆ ಸಂಬಂಧಿಸಿದವರಲ್ಲೂ ಆ ಅಭಿಮಾನವು ಸಿದ್ಧವೆಂದು ಹೇಳುತ್ತಾರೆ; ಭಕ್ತನು ಭಗವತ್ಪ್ರೀತಿಯನ್ನು ಸಂಪಾದಿಸುವದು ಭಕ್ತನ ಅನುಬಂಧಿಗಳಿಗೂ ಉತ್ತಾರಕವೆಂದು ಹೇಳುತ್ತಾರೆ:—ಕೀಳ್ ಮೇಲೆಳೇಳುಪ್ಪಿರಪ್ಪುಮ್—"ಕುಲಂ ತಾರಯತೇ ತಾತ ಸಪ್ತ ಸಪ್ತ ಚ ಸಪ್ತ ಚ" ಎಂಬ ಭಾರತ ಸಂಹಿತಾನುಸಾರವಾಗಿ ದಶಪೂರ್ವಾನ್ದಶಾಪರಾ

(೧) ವರಾಹ ಪುರಾಣ. (೨) ತಿರು. ೨. ೭. ೧.

ಸಾತ್ಮಾನಂಚೈಕವಿಂಶತಿ ಪಙ್ಕ್ತಿಂಚಪುನಾತಿ" ಎಂಬ ಬೋಧಾಯನ ಸೂಕ್ತಿಗನುಸಾರವಾಗಿಯೂ ಕೆಳಗೆ ಏಳು ಸಂತತಿ ತಾನೂ ಸೇರಿ ಮಧ್ಯೆ ಏಳು ಸಂತತಿ, ಮೇಲೆ ಏಳು ಸಂತತಿ ಹೀಗೆ ೨೧ ಸಂತತಿಯು ಜನ್ಮವನ್ನೂ, ಕೇಶವರ್ ತಮರ್ - ಕೇಶವನ ದಾಸರಾದ, (ಸರ್ವೇಶ್ವರನು "ಯಸ್ಮಾತ್ತ್ವಯೈವ ದುಷ್ಟಾತ್ಮಾ ಹತಃಕೇಶೀ ಜನಾರ್ದನ। ತಸ್ಮಾತ್ಕೇಶವ ನಾಮಾತ್ವಂ ಲೋಕೇ ಖ್ಯಾತಿಂ ಗಮಿಷ್ಯಸಿ" (ವಿ. ಪು ೫. ೧೬) ದುಷ್ಟನಾದ ಕೇಶೀ ಎಂಬ ರಾಕ್ಷಸನು ನಿನ್ನಿಂದ ಕೊಲ್ಲಲ್ಪಟ್ಟುದರಿಂದ ಓ ಜನಾರ್ದನನೇ ನೀನು ಲೋಕದಲ್ಲಿ ಕೇಶವನೆಂಬ ಹೆಸರಿನಿಂದ ಖ್ಯಾತಿಯನ್ನು ಹೊಂದುವಿ ಎಂಬ ನಾರದೋಕ್ತಿಯಿಂದ ವಿರೋಧಿ ನಿರಸನ ಶೀಲನೆಂದೂ ಅಥವಾ ಹರಿವಂಶದಲ್ಲಿ "ಕ ಇತಿ ಬ್ರಹ್ಮಣೋನಾಮ ಈಶೋಽಹಂ ಸರ್ವದೇಹಿನಾಂ" (ಇದರರ್ಥಕ್ಕೆ ೬೩ನೆಯ ಪುಟ ನೋಡಿ) ಇತ್ಯಾದಿ ರುದ್ರ ಸ್ತುತಿಯಿಂದ ಸರ್ವನಿರ್ವಾಹಕನೆಂದೂ ಕೇಶವ ಶಬ್ದದಿಂದ ಇಲ್ಲಿ ಹೇಳಲ್ಪಟ್ಟಿರುತ್ತಾನೆ,) ಎಮರ್ - ನನ್ನ ಅನುಬಂಧಿಗಳು, ಇದುಮಾ ಇಂತಹ ಮಹತ್ತ್ವದ ಎಂದರೆ ಜಗವದನುಗ್ರಹವು ದೊರಕುವ ಇಂತಹ ಮಹತ್ತಾದುದನ್ನು, ಪೆತ್ತು - ಹೊಂದಿ, ನಮ್ಮುಡೈ - ಇದರಿಂದ ನಮ್ಮ ವಾಳ್ವು ಶ್ರೀ ವೈಷ್ಣವರೂಪ ಸಂಪತ್ತು, ವಾಯ್ಕಿನ್ರವಾ - ಮೇಲೆ ಮೇಲೆ ಬರುವ ಪ್ರವಾಹದ ಹಾಗೆ ವೃದ್ಧಿಯನ್ನು ಹೊಂದುತ್ತಿದೆಯಲ್ಲವೇ! ಇದರಭಿಪ್ರಾಯವು ಒಬ್ಬ ಮಹಾ ವಿಷ್ಣುಭಕ್ತನ ಅಭಿಮಾನವೇ ನಮಗೆ ಮುಖ್ಯವಾದ ಉತ್ತಾರಕವೆಂದು ಹೇಳದಂತಾಯಿತು. ಈ ಅಭಿಪ್ರಾಯವು ಪುರುಷಾರ್ಥ ಕಾಷ್ಠಾಧಿಕಾರದಲ್ಲಿ ಸುಸ್ಪಷ್ಟವು. ಇದು ಪೂರ್ವಾರ್ಧವು. ಉತ್ತರಾರ್ಧವು—"ಈಶನೆನ್ಕರು ಮಾಣಿಕ್ಕ ಮೇಲ್ ಶೆಙ್ಗೋಲಕ್ಕಣ್ಣ ನ್ನಿಣ್ಣೋರ್ ನಾಯಕರ್ ಎಮ್ಬಿರಾನೆಮಾ ನಾರಾಯಣನಾಲೇ" ಎಂಬುದು. ತನ್ನೊಂದಿಗೆ ಸಂಬಂಧಿಸಿರುವ ಅನುಬಂಧಿಗಳನ್ನು ಕೇಶವನು ವಿಷಯೀಕರಿಸುವದಕ್ಕೆ ಕಾರಣವೇನೆಂಬುದನ್ನು ತಿಳಿಸುತ್ತಾರೆ—ಕಾರಣವೇನೆಂದರೆ ಆತನು ಪರಮ ಕಾರುಣಿಕನು, ಪರಮೋಪಕಾರಕನು, ಪರಮ ವಾತ್ಸಲ್ಯಯುಕ್ತನಾದ ನಾರಾಯಣನಾದುದರಿಂದ ಎಂದು ಹೇಳುತ್ತಾರೆ. ಇಂತಹ ಸಂಪತ್ತಿನ ಪರೀವಾಹ ಏಕೆಂದರೆ ಆತನು ಶ್ರೀಮನ್ನಾರಾಯಣನಾದುದರಿಂದ; ಆತನು ಈಶರ್ - ದಾಸರಾದ ನಮಗೆ ಸಹಜನಾಗಿರುವ ಸ್ವಾಮಿಯು, ಎರ್ ಕರುಮಾಣಿಕ್ಕ ಮೇಲ್ ಶೆಙ್ಗೋಲಕ್ಕಣ್ಣರ್ - ನೀಲ ರತ್ನದಹಾಗೆ ಲಾವಣ್ಯಯುಕ್ತನು, ಇದರಿಂದ ತನ್ನನ್ನು ಅನುಭವಿಸುವಹಾಗೆ ನನ್ನನ್ನು ಆಕರ್ಷಿಸಿದವನೆಂಬ ಭಾವವು. "ಅತೀವ ಪ್ರಿಯದರ್ಶನ"ನೆಂಬ(ರಾಮಾ) ಭಾವವು, ಮತ್ತು ಕೆಂಪಗಿರುವ ಕಣ್ಣಿನ ಸೌಂದರ್ಯವುಳ್ಳವನು, ರಕ್ಷಿಸಿಯೇ ರಕ್ಷಿಸು

**ಪೆತ್ತು ನಮ್ಮುಡೈವಾಳ್ವಾರ್ ಕಿನ್ರವಾ" ಎನ್ರುವರ್, ಶೊಲ್ಲುಗಿರಪಡಿ
ಯೇ, ಅನುಬಂಧಿಗಳುಕ್ಕುಮ್ ಉತ್ತಾರಕಮಾನ ಪ್ರಭಾವತ್ತೈ ಯುಡ
ಯನಾಯಿರೇ ಇವ್ವುಪಾಯ ನಿಷ್ಠ ನಿರುಪ್ಪದು. (೩) "ಯೋಹ್ಯೇನಂ**

---

ವನೆಂಬ ಮನೋದಾರ್ಢ್ಯವನ್ನೀಯುವ ಪುಂಡರೀಕಾಕ್ಷನು "ಕಪ್ಯಾಸಂ ಪುಂಡ
ರೀಕಂ" ಎಂಬ ಶ್ರುತ್ಯಭಿಪ್ರಾಯವು ದ್ಯೋತಿತವು. **ವಿಣ್ಣೋರ್ನಾಯಕರ್**-
ಹೀಗೆ ಅನುಭವಿಸುವಹಾಗೆ ಮಾಡುವವನು; ಆದುದರಿಂದ ಆ ಲಾವಣ್ಯ ಮತ್ತು
ಕಣ್ಣಿನ ಸೌಂದರ್ಯಗಳಿಂದ ನಮಗೆ ಮಹಾ ಭೋಗ್ಯವಸ್ತುವೆಂದು ಹೇಳಿದರು; ಹೇಗೆ
ಭೋಗ್ಯನೆಂಬುದನ್ನು ತಿಳಿಸುತ್ತಾರೆ, **ವಿಣ್ಣೋರ್ ನಾಯಕರ್** - ನಿತ್ಯ ಸೂರಿ
ಗಳಿಗೆ ನಾಯಕನಾಗಿ ದಿವ್ಯ ವೈಕುಂಠದಲ್ಲಿ ಹೇಗೆ ಪರಮ ಭೋಗ್ಯನೋ ಹಾಗೆ
ಇರುವವನು, **ಎನ್ಪಿರಾರ್**-ಹೀಗೆ ಲಾವಣ್ಯ ತೋರಿಸಿ ಆಕರ್ಷಿಸಿ ಕಣ್ಣಿನ ಸೌಂದ
ರ್ಯದಿಂದ ರಕ್ಷಿಸುತ್ತೇನೆಂಬ ಭರವಸೆಯನ್ನಿತ್ತು ಹೀಗೆಲ್ಲಾ ಮಹೋಪಕಾರಕನಾ
ದವನು, ಹೇಗೆಂದರೆ—ಲೋಕಪಿತಾ ಹೇಗೆ ಪುತ್ರನ ವಿಷಯದಲ್ಲಿ ಉಪಕಾರ
ಕನೋ ಹಾಗೆ ಪುತ್ರರಾದ ನಮಗೆ **ಎನ್ಮಾರ್** ಲೋಕಪಿತಾವಾದವನು, ಅಂತಹ
ವಾತ್ಸಲ್ಯವು ಆತನಲ್ಲುಂಟೋ ಎಂದರೆ ತನ್ನಲ್ಲಿ ಅಂತಹ ನಿರ್ಹೇತುಕ ವಾತ್ಸಲ್ಯ
ವುಂಟೆಂದು ತನ್ನ ಹೆಸರಿನಿಂದಲೇ ತೋರಿಸಿಕೊಂಡಿರುತ್ತಾನೆಂದು, **ನಾರಾಯ
ಣನಾಲೇ** ಎಂಬ ಪ್ರಯೋಗವು, ನಮ್ಮಂತಹ ನರರನ್ನೇ ಆಶ್ರಯವಾಗಿವುಳ್ಳ
ವನು ಎಂಬ ಬಹುವ್ರೀಹ್ಯರ್ಥದಿಂದಲೇ ನಮ್ಮಲ್ಲಿ ಪರಮ ವಾತ್ಸಲ್ಯವುಳ್ಳವನೆಂ
ಬುದು ವ್ಯಕ್ತವು. ಇಂತಹ ಕರುಣೆಯೂ ವಾತ್ಸಲ್ಯವೂ ಉಂಟಾಗುವದಕ್ಕೆ ಕಾರಣವು
ಲಕ್ಷ್ಮೀಸಂಬಂಧವು; ಇದೂ ಕೂಡ ನರಶಬ್ದದ ನಾರಾಯಣನಲ್ಲೇ ಅಂತರ್ಗತವಾ
ದುದರಿಂದ ಎಂಬ ಭಾವವು. **ನಾರಾಯಣ** ನೆಂದು ಹೇಳಿದರೆ "ಶ್ರೀಮಾನಾದ ನಾರಾ
ಯಣನೆಂದೇ ಹೇಳಿದಂತಾಯಿತು." **ಎನ್ರುವರ್**-ಎಂದೂ, **ಶೊಲ್ಲುಗಿರಪಡಿಯೇ**-
ಹೇಳಿರುವಹಾಗೆಯೇ, **ಅನುಬಂಧಿಗಳುಕ್ಕುಮ್** - ತನಗೆ ಸೇರಿದವರಿಗೂ ಕೂಡ,
**ಉತ್ತಾರಕಮಾನ** - ಸಂಸಾರವನ್ನು ದಾಟುವ, **ಪ್ರಭಾವತ್ತೈ** - ಪ್ರಭಾವವನ್ನು,
**ಉಡೈಯನಾಯಿರೇ** - ಉಂಟಾದವನಾಗಿಯಲ್ಲವೇ, **ಇವ್ವುಪಾಯನಿಷ್ಠರ್** -
ಈ ಭರನ್ಯಾಸ ನಿಷ್ಠನಾದ ಕೃತಕೃತ್ಯನು, **ಇರುಪ್ಪದು** - ಇರುವಂತಾದ್ದು.
**"ಮಾಂ ಮದೀಯಂಚ ನಿಖಿಲಂ ಚೇತನಾ ಚೇತನಾತ್ಮಕಂ"** ಎಂದು ಈ
ಪ್ರಪನ್ನನು ಶರಣಾಗತಿಯನ್ನನುಷ್ಠಿಸಿರುವದರಿಂದ ಈ ಉಪಾಯನಿಷ್ಠನ ಅನು
ಬಂಧಿಗಳೂ ಸದ್ಗತಿಯನ್ನು ಹೊಂದುವದರಲ್ಲಿ ಸಂಶಯವಿಲ್ಲವು; ಅಂತಹ ಪ್ರಭಾವ

---

(೩) ಭಾ. ಆರ. ೧೬೦.೨೦.

**ಪುರುಷಂ ವೇದ ದೇವಾಅಪಿ ನತಂ ವಿದುಃ" ಎನ್ರು ಭಗವದ್ಜ್ಞಾನಮು ಡೈಯವನುಡೈಯ ಪ್ರಭಾವಮ್ ದೇವರ್‌ಗಳಾಲುಮ್ ಪರಿಚ್ಛೇದಿಕ್ಕೆ ವೊಣ್ಣಾದೆನ್ರಾರ್‌ಗಳಿರೇ. ಆನಾಲುಮ್ ಇದುಕ್ಕು ವಿರುದ್ಧಮಲ್ಲಾದ ಪ್ರಮಾಣ**

ಉಳ್ಳದು ಈ ಭರನ್ಯಾಸವೆಂಬ ಭಾವವು. ಯಾವಾಗ ಒಬ್ಬನು ಉಪಾಯಾನುಷ್ಠಾನವನ್ನು ಮಾಡಿದನೋ, ಆತನ ಸಙ್ಕಲ್ಪದಲ್ಲಿ ಸೇರಿದ ಅನುಬಂಧಿಗಳಿಗೆಲ್ಲಾ ಮೋಕ್ಷವುಂಟೆಂಬ ಭಾವವು; ಇಂತಹ ಮಾಹಾತ್ಮ್ಯೆಯುಳ್ಳದು ಈ ಸ್ವತಂತ್ರ ಪ್ರಪತ್ತಿಯು. ಇದರ ಪ್ರಭಾವವು ಇಷ್ಟೆಂದು ಹೇಳಲು ಸಾಧ್ಯವಿಲ್ಲವು; ಅಂತಹ ಉಪಾಯ ನಿಷ್ಠನ ಮಾಹಾತ್ಮ್ಯೆಯನ್ನು ದೇವತೆಗಳೂ ಕೂಡ ತಿಳಿಯಲಾರರೆಂಬುದಕ್ಕೆ ಶ್ರೀ ವ್ಯಾಸೋಕ್ತಿಯನ್ನು ಉದಾಹರಿಸುತ್ತಾರ:—(೩) **ಏನಂ ಪುರುಷಂ** ಪುರುಷ ಸೂಕ್ತದಲ್ಲಿ ಪ್ರತಿಪಾದಿಸಿರುವಹಾಗೆ ಪುರುಷಶಬ್ದವಾಚ್ಯನಾಗಲು ಅರ್ಹನಾಗಿರುವ ಒಬ್ಬನಾದ ಶ್ರೀಕೃಷ್ಣನನ್ನು, ಮಿಕ್ಕ ಎಲ್ಲರೂ "ಸ್ತ್ರೀಪ್ರಾಯಮಿತರತ್" ಎಂದು ಹೇಳಿರುವ ಹಾಗೆ ಸ್ತ್ರೀ ಸಮಾನರು, **ಯಃ ವೇದ** - ಯಾವ ಮಹಾ ಭಾಗವತೋತ್ತಮನು, ಉಪಾಯಾನುಷ್ಠಾನ ಮೂಲಕ ತಿಳಿದನೋ, ಸಾಕ್ಷಾತ್ಕರಿಸಿದನೋ, ತಂ-ಅಂತಹ ಮಹಾ ಭಾಗವತನನ್ನು ಎಂದರೆ ಆತನ ಮಾಹಾತ್ಮ್ಯೆಯು ಇಷ್ಟೆಂದು, **ದೇವಾ** ಅಪಿ ದೇವತೆಗಳೂ ಕೂಡ, **ನವಿದುಃ** - ತಿಳಿಯಲಾರರು." **ಎನ್ರು** - ಎಂಬದಾಗಿ, **ಭಗವದ್ಜ್ಞಾನಮುಡೈಯ ವನುಡೈಯ** - ಭಗವದ್ಜ್ಞಾನವುಳ್ಳ ಪ್ರಪನ್ನನ, ಪ್ರಭಾವವು, **ದೇವರ್‌ಗಳಾಲುಮ್** - ದೇವತೆಗಳಿಂದಲೂಕೂಡ, **"ದೇವಾ ಅಪಿ"** ಎಂದರೆ ನಿತ್ಯ ಸೂರಿಗಳೆಂದು ಸಾರಾಸ್ವಾದಿನಿಯವರು, ಅರ್ಥಮಾಡಿರುತ್ತಾರೆ, ಇದೇ ಸರಿಯಾದ ಅರ್ಥವಾಗಿ ತೋರುತ್ತದೆ. **ಪರಿಚ್ಛೇದಿಕ್ಕವೊಣ್ಣಾದು** - ಇಷ್ಟೆಂದು ಹೇಳಲಳವಲ್ಲವೆಂದು ಎನ್ರಾರ್‌ಗಳಿರೇ - ಎಂದು ಹೇಳಿದರಲ್ಲವೇ. ಯಾರು ಹೇಳಿದವರು ಎಂದರೆ ಈ ಪ್ರಮಾಣಕರ್ತರು ಎಂಬ ಭಾವವು; ಶ್ರೀ ವ್ಯಾಸಮಹರ್ಷಿ, ನಮ್ಮಾಳ್ವಾರರೇ ಮೊದಲಾದ ಮಹಾ ಪ್ರಾಜ್ಞ ಶಿಖಾಮಣಿಗಳು. ಈ ಪ್ರಮಾಣದಲ್ಲಿ **ಪುರುಷಂ ವೇದ** ಎಂಬ ಪ್ರಯೋಗವಿರುವದರಿಂದ ಈ ವೇದನ ಶಬ್ದವು ಎರಡು ವಿಧ ಉಪಾಯನಿಷ್ಠರನ್ನೂ ಸೂಚಿಸುತ್ತದೆ. ಪುರುಷಸೂಕ್ತದ **ಯ ಏವಂ ವಿದ್ವಾನ್ ಅಮೃತ ಇಹಭವತಿ, ನಾನ್ಯಃ ಪನ್ಥಾ ವಿದ್ಯತೇ ಅಯನಾಯ** ಎಂಬಲ್ಲಿ ಭಕ್ತಿಯೋಗ ಮಾತ್ರವೇ ಉಪಾಯವೆಂದು ಹೇಳಲಿಲ್ಲವು, ಸ್ವತಂತ್ರಪ್ರಪತ್ತಿಯೂ ಕೂಡ ಹೇಳಲ್ಪಟ್ಟಿತೆಂದು ಶ್ರುತಪ್ರಕಾಶಿಕಾಚಾರ್ಯರ ವ್ಯಾಖ್ಯಾನವಿರುತ್ತದೆ. ಹೀಗೆ ಉಪಾಯಾನುಷ್ಠಾನಮಾಡಿದ ಅಧಿಕಾರಿಯ ಪ್ರಭಾವವನ್ನು ಕೊಂಡಾಡುವದರಲ್ಲಿ ಮುಖ್ಯ

ಬಲತ್ತಾಲೆ ಮುರ್ಪಡ ಜಾತಿವ್ಯವಸ್ಥೈ ಶೊಲ್ಲುಗಿರೋಮ್. (೪) "ನಶೂದ್ರಾ ಭಗವದ್ಭಕ್ತಾ ವಿಪ್ರಾ ಭಾಗವತಾಸ್ಮೃತಾಃ ಸರ್ವ ವರ್ಣೇಷು ತೇ ಶೂದ್ರಾ ಯೇಹ್ಯಭಕ್ತಾ ಜನಾರ್ದನೇ" ಎನ್ರು ಭಗವದ್ಭಕ್ತಿಯಾಗಿರ ಗುಣವಿಶೇಷ

---

ತಾತ್ಪರ್ಯವೇನೆಂದರೆ ಅಂತಹ ಮಹಾಭಾಗವತನ ಪ್ರಭಾವದಿಂದ ಆತನ ಅನುಬಂಧಿಗಳೂ ಕೂಡ ಸದ್ಗತಿಯನ್ನು ಹೊಂದುವರು ಎಂಬುದರಲ್ಲಿ ಮಾತ್ರವೇ ವಿನಾ ಜಾತಿ ವ್ಯವಸ್ಥೆಯನ್ನು ಮೀರಿ ಹೇಳಿದ ಮಾಹಾತ್ಮ್ಯೆಯಲ್ಲವೆಂಬು ಮುಂದೆ ಉಪಪಾದಿಸುತ್ತಾರೆ.

ಹೀಗೆ ಪ್ರಭಾವವನ್ನು ಹೇಳಿದುದರಿಂದ ಕೀಳು ಜಾತಿಯವನು ಉತ್ತಮ ಜಾತಿಯವನಿಗೆ ಸಮವೆಂದು ಹೇಳಲ್ಪಡಲಿಲ್ಲವೆಂದೂ ವರ್ಣಸಾಂಕರ್ಯಕೂಡದೆಂದೂ ಜಾತಿ ವ್ಯವಸ್ಥೆಯು ಹೇಗೆಎಂಬುದನ್ನೂ ಉಪದೇಶಿಸುವದಾಗಿ ಮುಂದೆ ಪ್ರತಿಜ್ಞಾ ವಾಕ್ಯವನ್ನು ದಯಪಾಲಿಸುತ್ತಾರೆ. ಮೊದಲು ಪೂರ್ವ ಪಕ್ಷಿಗಳು ಯಾವಪ್ರಮಾಣವನ್ನು ತಂದು ವರ್ಣಭೇದವಿಲ್ಲವೆಂದು ವಾದಮಾಡಬಹುದು ಎಂದು ಊಹಿಸಿ ಆ ಪ್ರಮಾಣವನ್ನು ಮೊದಲು ಉದಾಹರಿಸಿ, ಅದರ ಸರಿಯಾದ ಅರ್ಥವನ್ನು ಹೇಳಿ ಸಮಾಧಾನವನ್ನು ಹೇಳುತ್ತಾರೆ. **ಅನಾಲುಮ್** - ಹೀಗೆ ಇಷ್ಟೆಂದು ಹೇಳಲು ದೇವತೆಗಳಿಗೂ ಅಸಾಧ್ಯವಾಗಿರುವ ಪ್ರಭಾವವುಳ್ಳದು ಈ ಪ್ರಪತ್ತಿಯಾದರೂ, **ಇದುಕ್ಕು** - ಈ ಮೇಲಿನ ಅಭಿಪ್ರಾಯಕ್ಕೆ, **ವಿರುದ್ಧಮಲ್ಲಾದ** - ವಿರುದ್ಧವಲ್ಲದ, **ಪ್ರಮಾಣಬಲತ್ತಾಲೆ** - ಪ್ರಮಾಣದ ಬಲದಿಂದ, **ಮುರ್ಪಡ**-ಮೊದಲು ಜಾತಿವ್ಯವಸ್ಥೆಯನ್ನು, **ಶೊಲ್ಲುಗಿರೋಮ್** - ಹೇಳುವೆವು,ಹಿಂದೆ ಅದರ ಮಾಹಾತ್ಮ್ಯೆಯನ್ನು ತಿಳಿಸುವ ಮೂರು ಪ್ರಮಾಣಗಳಿಗೂ ಈ ಪೂರ್ವಪಕ್ಷಿಗಳು ವರ್ಣ ಸಾಂಕರ್ಯಕ್ಕೆ ಅರ್ಹರೆಂದು ಉದಾಹರಿಸಬಹುದಾದ ಮುಂದಿನ ನಾಲ್ಕನೆಯ ಪ್ರಮಾಣದ ಅಭಿಪ್ರಾಯಕ್ಕೂ ಏನೊಂದೂ ವಿರೋಧವಿಲ್ಲವೆಂದು ಹೇಳುತ್ತಾರೆ. (೪) **ಭಗವದ್ಭಕ್ತಾಃ** ಯಾವಾಗ ಪ್ರಪನ್ನರಾಗಿ ಭರನ್ಯಾಸವನ್ನನುಷ್ಠಿಸಿ ಭಗವಂತನಿಗೆ ಪ್ರಿಯತಮರೆನಿಸಿ ಭಗವದ್ಭಕ್ತರಾದರೋ, ಆಗ ಅವರು **ನಶೂದ್ರಾಃ** – ಶೂದ್ರ ಯೋನಿಯಲ್ಲಿ ಜನಿಸಿದ್ದರೂ ಶೂದ್ರರಲ್ಲವು, ಮತ್ತೇನೆಂದರೆ, **ವಿಪ್ರಾಃ** – ಬ್ರಾಹ್ಮಣಸಮಾನರು, ಮತ್ತು ಭಾಗವತರು **ಎಂದು ಸ್ಮೃತಾಃ** - ಸ್ಮೃತಿಗಳಲ್ಲಿ ಹೇಳಲ್ಪಟ್ಟರುವವರು. **ಸರ್ವವರ್ಣೇಷು** - ಸಮಸ್ತ ವರ್ಣದವರಲ್ಲೂ, **ಯೇ**-ಯಾವ, **ಜನಾರ್ದನೇ** – ಜನಾರ್ದನನಲ್ಲಿ, **ಅಭಕ್ತಾಃ** – ಉಪಾಯಾನುಷ್ಠಾನಮೂಲಕ ಆಶ್ರಯಿಸಿ ಭಕ್ತರಲ್ಲವೋ, **ತೇ** - ಅವರು, **ಶೂದ್ರಾಃ** - ಶೂದ್ರರೇ ಸರಿ. ಇಲ್ಲಿ

---

(೪) ಭಾರತ ಅ. ೧೦೮ ೩೩.

ಸದಸದ್ಭಾವಙ್ಗಳಾಲೇ, ಅಪಕೃಷ್ಟಜಾತೀಯರ್ಕ್ಕೈ ಉತ್ಕೃಷ್ಟಜಾತಿವಾಚಕ ಶಬ್ದತ್ತಾಲೆ ಶೊಲ್ಲಿಯುಮ್, ಉತ್ಕೃಷ್ಟಜಾತೀಯರ್ಕ್ಕೈ ಅಪಕೃಷ್ಟ ಜಾತಿ ವಾಚಕ ಶಬ್ದತ್ತಾಲೆ ಶೊಲ್ಲಿಯುಮ್ ಇರನ್ದದು. ಇದಡಿಯಾಗ ಭಗವದ್ಭಕ್ತರೆಲ್ಲಾರುಮ್ ಏಕ ಜಾತೀಯರನ್ರೋ ವೆನ್ರು ಶಿಲ ವ್ಯದುಪ್ರಜ್ಞರ್ ನಿನೈಪ್ಪರ್‌ಗಳ್. ಇಙ್ಗನೇಯಾಗಿಲ್, ಭಾಗವತ ಬ್ರಾಹ್ಮಣ ನಿನ್ನ

---

"ಭಕ್ತಾಃ" - ಎಂಬ ಪ್ರಯೋಗವಿದ್ದರೂ ಈ ಅಧಿಕಾರಿಗಳು ಭಕ್ತಿಯೋಗ ನಿಷ್ಠರಲ್ಲವು; ಏಕೆಂದರೆ ಶೂದ್ರರಿಗೆ ಉಪಾಸನಾಧಿಕಾರವಿಲ್ಲವು; ಆದ್ದರಿಂದ ಅಥವಾ ಪ್ರಪದನವನ್ನನುಷ್ಠಿಸಿ ಫಲರೂಪ ಭಕ್ತಿಯುಕ್ತರಾಗಿರಬೇಕೆಂದು ತೋರಿಬರುತ್ತದೆ. ಎನ್ರು - ಎಂಬದಾಗಿ, ಭಗವದ್ಭಕ್ತಿಯಾಗಿರ - ಭಗವಂತನಲ್ಲಿ ಭಕ್ತಿಯಾಗಿರುವ, ಗುಣವಿಶೇಷದ, ಸದಸದ್ಭಾವಂಗಳಾಲೆ - ಇರುವಿಕೆ ಮತ್ತು ಇಲ್ಲದಿರುವಿಕೆ, ಇವುಗಳ ಮೂಲಕವಾಗಿ, ಅಪಕೃಷ್ಟಜಾತೀಯರ್ಕ್ಕೈ ಉತ್ಕೃಷ್ಟಜಾತಿ ವಾಚಕಶಬ್ದತ್ತಾಲೆ ಚೊಲ್ಲಿಯುವುಮ್ - ಶೂದ್ರಾದಿ ಕೀಳುಜಾತಿಯವರನ್ನು ಬ್ರಾಹ್ಮಣಾದಿ ಉತ್ಕೃಷ್ಟಜಾತೀಯರಿಗೆ ಸಮಾನವೆಂದು ಹೇಳಿಯೂ, ಉತ್ಕೃಷ್ಟಜಾತೀಯರ್ಕ್ಕೈ - ಉತ್ಕೃಷ್ಟಜಾತಿಯವರನ್ನು, ಅಪಕೃಷ್ಟ ಜಾತಿವಾಚಕ ಶಬ್ದತ್ತಾಲೇಚೊಲ್ಲಿಯುಮ್-ಶೂದ್ರಾದಿ ಕೀಳುಜಾತಿಯವರನ್ನಾಗಿ ಹೇಳಿಯೂ, ಇರುನ್ದದು - ಇರುತ್ತದೆ, ಇದಡಿಯಾಗ - ಈ ಪ್ರಮಾಣವು ಮೇಲೆ ಮೇಲೆ ತೋರುವ ಮೂಲಕವಾಗಿ, ಭಗವದ್ಭಕ್ತರೆಲ್ಲಾರುಮ್ - ಭಗವದ್ಭಕ್ತರೆಲ್ಲರೂ ಯಾವಜಾತೀಯವರೇ ಆಗಲಿ, ಏಕಜಾತೀಯವರನ್ರೋ - ಈ ಭರನ್ಯಾಸ ಸಂಸ್ಕಾರ ಬಲದಿಂದ ಉತ್ತಮ ವರ್ಣದವರಿಗೆ ಸಮಾರಾಗಿ ಒಂದೇ ಜಾತಿಯವರಾಗುವದಿಲ್ಲವೋ? ಎನ್ರು-ಎಂಬದಾಗಿ, ಎನ್ರು ಶಿಲ ವ್ಯದು ಪ್ರಜ್ಞರ್ - ಆಗಮ ವಿವೇಕೋತ್ಥಜ್ಞಾನಗಳು ಸರಿಯಾಗಿ ಇಲ್ಲದ ಕೆಲವು ಮಂದ ಬುದ್ಧಿಯುಳ್ಳವರು, ನಿನೈಪ್ಪರ್‌ಗಳ್ - ಯೋಚಿಸುವರು; "ನ ಶೂದ್ರಾ ಭಗವದ್ಭಕ್ತಾಃ" ಎಂದು ಪ್ರಮಾಣವು ಕಂಠೋಕ್ತವಾಗಿರುವದರಿಂದ, ಅವರು ಶೂದ್ರರಲ್ಲವು, ಅವರು ವಿಪ್ರಾಃ ಬ್ರಾಹ್ಮಣರು ಎಂದು ಹೇಳಿರುವದರಿಂದ ಶೂದ್ರಪ್ರಪನ್ನರೂ ಸಹ ಬ್ರಾಹ್ಮಣರ ವರ್ಣಕ್ಕೆ ಸೇರಿದವರೇ ಎಂಬುದು ಪೂರ್ವಪಕ್ಷವು: ಹಿಂದೆ ಶ್ರೀ ನಿಗಮಾಂತ ದೇಶಿಕರವರ ಕಾಲದಲ್ಲಿ ಬ್ರಾಹ್ಮಣನು ಉತ್ಕೃಷ್ಟಜಾತಿಯವನೆಂದೂ, ಶೂದ್ರನು ಅಪಕೃಷ್ಟಜಾತಿಯವನೆಂಬುದನ್ನೂ ಒಪ್ಪಿಕೊಂಡು ಶೂದ್ರಭಾಗವತನುಮಾತ್ರ ಬ್ರಾಹ್ಮಣ ಭಾಗವತನಿಗೆ ಸಮನೆಂದು ಪೂರ್ವಪಕ್ಷವನ್ನು ಮಾಡಿದರು. ಈಗಿನ ಕಾಲದಲ್ಲಾದರೋ ಉತ್ಕೃಷ್ಟಾಪಕೃಷ್ಟಜಾತಿ

**ಪಡಿಯೇ ವರ್ತಿಪ್ಪಾರ್, ಭಾಗವತ ಶೂದ್ರ ನಿನ್ನ ಪಡಿಯೇ ವರ್ತಿಪ್ಪಾರ್, ಎನ್ರು ಆಚಾರ ನಿಯಮುಙ್ಗಳ್‌ಗೊಲ್ಲುಮ್ ಸರ್ವಶಾಸ್ತ್ರಙ್ಗಳುಮ್ ವಿರೋಧಿಕ್ಕುಮ್.**

---

ಎಂಬ ವ್ಯವಹಾರ ಮಾಡಿದರೇನೇ ಸಹಿಸರು; ಎಲ್ಲರೂ ಒಂದೇ ಜಾತಿಯೆಂದೂ ಪಂಚಮನೂ ಸಹ ಬ್ರಾಹ್ಮಣನಿಗೆ ಸಮವೆಂದೂ ಉದ್ಘೋಷಿಸುವ ಕಾಲವು. ಶಾಸ್ತ್ರಜ್ಞಾನ ಲೋಕ ಮರ್ಯಾದೆಗಳ ಸರಿಯಾದ ಜ್ಞಾನವಿಲ್ಲದೆ ಅಜ್ಞಾನದಲ್ಲಿ ನರಳುತ್ತಿರುವವರ ವಾಗ್ವಿಜೃಂಭಣೆಯು. ಮುಖ್ಯವಾಗಿ ಅವರುಗಳು ತಿಳಿಯತಕ್ಕ ವಿಷಯವೇನೆಂದರೆ, ಈ ಲೋಕಸೃಷ್ಟಿಯಲ್ಲಿ ಪ್ರಾಜ್ಞನಿಗೆ ತೋರುವದು ವೈವಿಧ್ಯವೂ, ವಿಚಿತ್ರ್ಯತೆಯೂ, ಚೇತನರಲ್ಲಿರುವ ಆತ್ಮರುಗಳೆಲ್ಲಾ ಜ್ಞಾನತ್ವ ಆನಂದತ್ವ ಅಮಲತ್ವಾದಿ ಗುಣಗಳಿಂದ ಹೇಯ ಪ್ರತ್ಯನೀಕರಾಗಿ ಕಲ್ಯಾಣಗುಣಾನ್ವಿತರಾಗಿ ಇಂತಹ ಜ್ಞಾನೈಕಾಕಾರತೆಯಿಂದ ಸಮರಾಗಿದ್ದರೂ, ಯಾವಾಗ ತನ್ನ ತನ್ನ ಕರ್ಮಾನುಗುಣವಾಗಿ ಪ್ರಕೃತಿಯೆಂಬ ಹೊದಿಕೆಯನ್ನು ಹೊದ್ದು ವೇಷಧಾರಿಯಾದರೋ, ಆಗ ಎಲ್ಲರೂ ಗುಣಕರ್ಮ ಭೇದಗಳಿಂದ ಬೇರೆ ಬೇರೆಯೇ. ಉತ್ಕೃಷ್ಟತೆ ಅಪಕೃಷ್ಟತೆ ತಪ್ಪಿದ್ದಲ್ಲವು. ರಾಜನ ಗುಣಗಳು ಉತ್ಕೃಷ್ಟವು, ಆಳಿನಗುಣಗಳು ನಿಕೃಷ್ಟವಾದವು. ಆಚಾರ್ಯನು ಉತ್ಕೃಷ್ಟನು, ಶಿಷ್ಯನು ಅಷ್ಟಲ್ಲವು, ಇತರರು ಇನ್ನೂ ಕಮ್ಮಿಯು ಹೀಗೆ ಸಮತ್ವವು ದುರ್ಲಭವು, ಭೇದವೇ ನೈಜವಾದುದೆಂಬುದಕ್ಕೆ ನಿದರ್ಶನವನ್ನು ಹಿಂದೆ ಹೇಳಿದುವನ್ನೇ ಜ್ಞಾಪಿಸುವೆನು. ನಾಲ್ಕುಸಾವಿರ ಮಂದಿಯ ಗುಂಪಿನಲ್ಲಿರುವ ಸ್ನೇಹಿತನನ್ನು ಈತನು ನನ್ನ ಸ್ನೇಹಿತನೆಂದು ಗುರ್ತಿಸಲು ಕಾರಣವೇನು? ಎಲ್ಲರಿಗೂ ಕರಣ ಕಳೇಬರವು ಒಂದೇ ಸಮನಾಗಿರುವಾಗ, ಭೇದದಿಂದ ಗುರ್ತಿಸುವದಕ್ಕೆ ಕಾರಣವೇನೆಂದು ಕೇಳದರೆ, ಈ ಪೂರ್ವಪಕ್ಷಿಗಳು ಸಮಾಧಾನವನ್ನು ಹೇಳಲಾರರು. ಇದಕ್ಕೆ ಕಾರಣವು ವೈವಿಧ್ಯ ವೈಚಿತ್ರ್ಯಗಳೇ. ಲೋಕದಲ್ಲಿ ಎಲ್ಲಿಯೂ ಭೇದವೇ ವಿನಾ ಸಮತ್ವವಿಲ್ಲವು. ಹಾಗಾದರೆ ಪಂಡಿತರು ಸಮವೆಂದು ನೋಡುವದು ಯಾವುದನ್ನು ಎಂದರೆ ದೇಹದಲ್ಲಿರುವ ಆತ್ಮಾವನ್ನು. ಯಾವಾಗ ದೇಹವನ್ನು ಸ್ವೀಕರಿಸಿದನೋ ಆಗ ಎಲ್ಲರೂ ಭಿನ್ನರೇ. ಇದು ಗೀತೆಯಲ್ಲಿ ಅನೇಕ ಕಡೆಗಳಲ್ಲಿ ವ್ಯಕ್ತವು. "ವಿದ್ಯಾವಿನಯಸಂಪನ್ನೇ" ಎಂಬ ಶ್ಲೋಕದಲ್ಲೂ "ನತ್ವೇವಾಹಂ ಜಾತು ನಾಸಂ" ಎಂಬ "ಚಾತುರ್ವರ್ಣ್ಯಂ ಮಯಾಸೃಷ್ಟಂ" ಎಂಬಲ್ಲೂ, ಸ್ಪಷ್ಟವು; "ಭೂತಾನಾಂ ಪ್ರಾಣಿನಃ ಶ್ರೇಷ್ಠಾಃ ಪ್ರಾಣಿನಾಂ ಬುದ್ಧಿಜೀವನಃ । ಬುದ್ಧಿಮತ್ಸು ನರಾಃ ಶ್ರೇಷ್ಠಾ ನರೇಷು ಬ್ರಾಹ್ಮಣಾಃ ಸ್ಮೃತಾಃ । ಬ್ರಾಹ್ಮಣೇಷು ಚ ವಿದ್ವಾಂಸೋ ವಿದ್ವತ್ಸು ಕೃತ ಬುದ್ಧಯಃ । ಕೃತಬುದ್ಧಿಷು ಕರ್ತಾರಃ ಕರ್ತೃಷು ಬ್ರಹ್ಮ

ವೇದಿನಃ । ಬ್ರಹ್ಮವಿದ್ಭ್ಯಃ ಪರಂನಾಸ್ತಿ ನಭೂತಂ ನಭವಿಷ್ಯತಿ"ಎಂಬಲ್ಲಿ ಈ ತಾರತಮ್ಯವು ಉಪಪಾದಿತವು. ಭಾಗವತರೆಲ್ಲಾ ಏಕಜಾತೀಯರೆಂಬುದನ್ನು ಮುಂದಿನವಾಕ್ಯದಿಂದ ಖಂಡಿಸುತ್ತಾರೆ. ಹಾಗೆ ಎಲ್ಲರೂ ಒಂದೇಜಾತೀಯರಾದರೆ ಪ್ರಾಪ್ತವಾಗುವ ವಿರೋಧವನ್ನು ತಿಳಿಸುತ್ತಾರೆ:—ಇಜ್ಜನೇ ಯಾಗಿಲ್ - ಹೀಗೆ ಎಲ್ಲಾ ಒಂದೇವರ್ಣದವರ ಹಾಗೆ ಭಾವನೆಮಾಡ ಪಕ್ಷದಲ್ಲಿ, ಭಾಗವತ ಬ್ರಾಹ್ಮಣ ನಿನ್ನ ಪಡಿಯೇ ಪರ್ತಿಪ್ಪಾರ್ - ಭಾಗವತ ಬ್ರಾಹ್ಮಣನು ಈರೀತಿಯಲ್ಲಿ ವರ್ತಿಸುವನು, ಭಾಗವತ ಶೂದ್ರ ನಿನ್ನಪಡಿಯೇ ವರ್ತಿಪ್ಪರ್ - ಭಾಗವತ ಶೂದ್ರನು ಹೀಗೆ ವರ್ತಿಸುವನು ಎಂದರೆ ಭಾಗವತ ಬ್ರಾಹ್ಮಣನು ಅನುಷ್ಠಿಸತಕ್ಕ ಕ್ರಮವು ಹೀಗೆ, ಶೂದ್ರಭಾಗವತನನುಷ್ಠಿಸತಕ್ಕ ಕ್ರಮ ಹೀಗೆ, ಎಂದು, ಆಚಾರ ನಿಯಮಙ್ಗಳ್ - ಅನುಷ್ಠಿಸತಕ್ಕ ಕ್ರಮಗಳನ್ನು, ಶೊಲ್ಲುಮ್ - ಉಪದೇಶಿಸಿರುವ, ಸಮಸ್ತ ಶಾಸ್ತ್ರಗಳೂ ವಿರೋಧಿಕ್ಕುಮ್ - ವಿರುದ್ಧವಾದವುಗಳಾಗುವುವು. ಏಕಜಾತೀಯರೆಂಬ ಭಾವನೆ ಇದ್ದುದಾದರೆ, ಅವರಿಬ್ಬರಿಗೂ ಒಂದೇ ವಿಧವಾದ ಅನುಷ್ಠಾನ ಕ್ರಮವಿರಬೇಕು, ಹಾಗಿಲ್ಲದೆ ಅನುಷ್ಠಾನ ಕ್ರಮದಲ್ಲಿ ವ್ಯತ್ಯಾಸವನ್ನು ಶಾಸ್ತ್ರಗಳು ಹೇಳಿದರೆ ಆಗ ಏಕಜಾತೀಯರೆಂದು ಹೇಳಲುಸಾಧ್ಯವಿಲ್ಲವೆಂಬ ಭಾವವು ಹಾಗೆ ಅನುಷ್ಠಾನ ಕ್ರಮದಲ್ಲಿ ವ್ಯತ್ಯಾಸವು ಎಲ್ಲಿ ಹೇಳಿರುತ್ತದೆ ಎಂದರೆ—ಶೇಷಸಂಹಿತೆಯಲ್ಲಿ ಹೇಳಿರುವದೇನೆಂದರೆ:—

ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಭಗವನ್ನಾಮಕೀರ್ತನಮ್।
ಆಚಾರ್ಯಕೀರ್ತನಂ ಕುರ್ಯಾದ್ಗಚ್ಛೇಚ್ಚಾಥ ನದೀಂ ಪ್ರತಿ (ದ್ವಿಜಃ)।
ಸ್ನಾತ್ವಾ ವಿಧಿವದಾಚಮ್ಯ ಶೌಚಾಚಮನ ಪೂರ್ವಕಮ್।
ಕೌಪೀನಂ ಕಟಿ ಸೂತ್ರಂಚ ವಸ್ತ್ರಯುಗ್ಮಂಚ ಧಾರಯೇತ್।
ಸಚ್ಛಿದ್ರಾಣ್ಯೂರ್ಧ್ವಪುಂಡ್ರಾಣಿ ಪವಿತ್ರಂಚದ್ವಿಜೋತ್ತಮಃ"ಎಂದಾರಂಭಿಸಿ
ಪ್ರಾಙ್ಮುಖೋ ದಙ್ಮುಖೋವಾಪಿ ಗಾಯತ್ರೀಂ ಮೂಲವಿದ್ಯಯಾ।
ಅಷ್ಟೋತ್ತರ ಸಹಸ್ರಂವಾ ಶತಮಷ್ಟೋತ್ತರಂತುವಾ।
ಅಷ್ಟಾವಿಂಶತಿ ಮೇವಾಥ ಜಪೇನ್ನ್ಯಾಸಾದಿಕಂ ದ್ವಿಜಃ।
ಮಂತ್ರರತ್ನಂ ಜಪೇದ್ಭಕ್ತ್ಯಾ ಯಾವಜ್ಜೀವಂ ದ್ವಿಜೋತ್ತಮಃ।
ಸರ್ವಥಾ ಸರ್ವಕಾಲೇಷು ಮೋಕ್ಷಾರ್ಥೀ ಸ್ವಾಶ್ರಮೋಚಿತೈಃ।
ಜಪೋಪಸ್ಥಾನಕಂ ಕೃತ್ವಾ ಬ್ರಹ್ಮಯಜ್ಞಮನಂತರಂ।
ಉಪಾದಾನಂ ತತಸ್ [illegible] ನಂ ಕುರ್ಯಾನ್ [illegible]।
ಹೋಮಪ [illegible] ಸಾಚ, ಪೆ [illegible] ನೇ [illegible]
[illegible]।

ಸ್ವಾಧ್ಯಾಯಂಚ ಪುರಾಣಂವಾ ಹರಿಸಂಕೀರ್ತನಾದಿಕಂವಾ।
ಮುಮುಕ್ಷುರ್ನಿತ್ಯಯುಕ್ತಶ್ಚ ಮಂತ್ರರತ್ನಂ ಸದಾಜಪೇತ್ ॥

ಹೀಗೆ ಬ್ರಾಹ್ಮಣ ಪ್ರಪನ್ನನ ಅನುಷ್ಠಾನಕ್ರಮವು ಹೇಳಲ್ಪಟ್ಟಿತು ಅನಂತರ ಸ್ತ್ರೀ ಶೂದ್ರರಿಗೆ ವಿಧಿಯನ್ನು ಹೇಳುತ್ತೇನೆಂದು ಪ್ರಾರಂಭಿಸಿ ಹೇಳಿರುವದೇನೆಂದರೆ "ಸ್ತ್ರೀಶೂದ್ರಾಣಾಂ ವಿಧಿಂ ವಕ್ಷ್ಯೇ ಸಮ್ಯಕ್ಪ್ರಣವ ವರ್ಜಿತಮ್ ॥ ಬ್ರಾಹ್ಮೇ ಮುಹೂರ್ತೇ" ಎಂದು ಆರಂಭಿಸಿ, ಅವರ ವಿಷಯದಲ್ಲೂ "ಗಚ್ಛೇ ಚ್ಛಾಥ ನದೀಂ ತಥಾ" ಹಾಗೆಯೇ ಇವರೂ ನದಿಗೆ ಸ್ನಾನಕ್ಕಾಗಿ ಹೋಗುವರಾಗಿ ಅನಂತರ,

ಬ್ರಾಹ್ಮಣಸ್ಯ ವಿಧಾನೇನ ಭಕ್ತಾನಾಂ ಹಿ ವಿಧಿರ್ಭವೇತ್ ।
ಪ್ರಣವಂ ವರ್ಜಯೇತ್ಸಮ್ಯಗ್ವಿಧಿಸ್ಸ್ಯಾತ್ಸರ್ವ ಕರ್ಮಸು ।
ತದ್ಬ್ರಾಹ್ಮಣ ವಿಧಾನೇನ ಕೃತ್ವಾ ಶೌಚಾದಿಕಂ ತತಃ ।
ಕೇಶವಾಯೇತಿ ಮಂತ್ರಾದ್ಯೈರ್ಜಲಂ ಪೀತ್ವಾ ತ್ರಯಸ್ತ್ರಯಃ ॥

ಎಂದು ಹೇಳಿ, ಅನಂತರ,

ಮೂಲಮಂತ್ರೇಣ ವಿರಜಾಂ ಸ್ಮೃತ್ವಾ ಸ್ನಾನಂ ವಿಧೀಯತೇ ।
ಗುರು ತದ್ಭಕ್ತ ಶುಶ್ರೂಷಾಂ ಮಚ್ಛುಶ್ರೂಷಾಂ ಚ ಕಾರಯೇತ್
ಏವಂ ನಿಯಮ ಯುಕ್ತಾನಾಂ ಸ್ತ್ರೀಶೂದ್ರಾಣಾಂ ತಥೈವ ಚ ।
ತೇಭ್ಯೋ ಮುಕ್ತಿಂ ಪ್ರದಾಸ್ಯಾಮಿ ಕಿಂಪುನರ್ಭೋಗ ಸಂಪದಃ ।
ಏವಮೇವ ವಿಧಿಸ್ತೇಷಾಂ ಮುಕ್ತಿರನ್ಯತ್ರ ನಾನ್ಯಥಾ ।
ಭಗವದ್ಭಕ್ತಿಯುಕ್ತಾನಾಂ ಸ್ತ್ರೀ ಶೂದ್ರಾಣಾಂ ಚತುರ್ಮುಖ ।

ಹೀಗೆ ಭಾಗವತ ಬ್ರಾಹ್ಮಣನಿಗೂ ಭಾಗವತ ಶೂದ್ರನಿಗೂ ಆಚಾರದ ಅನುಷ್ಠಾನ ಕ್ರಮದಲ್ಲಿ ತುಂಬಾ ವ್ಯತ್ಯಾಸವಿರುವದರಿಂದ ಈ ಭಾಗವತ ಶೂದ್ರನೂ ಬ್ರಾಹ್ಮಣನಿಗೆ ಸಮವೆಂದು ಹೇಳಿದ್ದರೂ ಪ್ರಶಂಸೆಗಾಗಿ ಹೇಳಲ್ಪಟ್ಟ ವಾಕ್ಯವೇ ವಿನಾ ಆತನು ಸವ್ಯವಹಾರಾದಿಗಳಿಗೆ ಯೋಗ್ಯನಾಗಿ ಸಮನಲ್ಲವೆಂಬ ಭಾವವು. ಹಾಗಾದರೆ

"ಯೇ ಯಜಂತಿ ಹರಿಂ ಸರ್ವೇ ಬ್ರಾಹ್ಮಣಾ ಏವ ತೇ ಸ್ಮೃತಾಃ ।
ನ ಶೂದ್ರಾ ಭಗವದ್ಭಕ್ತಾ ವಿಪ್ರಾ ಭಾಗವತಾಸ್ಸ್ಮೃತಾಃ ।
ಯೇಷಾಂ ಚಕ್ರಾಂಕಿತಂ ಗಾತ್ರಂ ಶೂದ್ರೇಷ್ವಪಿಚ ದೃಶ್ಯತೇ ।
ತೇವೈಸ್ವರ್ಗಸ್ಯ ನೇತಾರೋ ಬ್ರಾಹ್ಮಣಾ ಭುವಿ ದೇವತಾಃ ।
ನ ಶೂದ್ರಾ ಭಗವದ್ಭಕ್ತಾ ಸ್ತೇಹಿ ವಿಪ್ರಾ ಇತಿಸ್ಮೃತಾಃ ।
ಶುಚಿಸದ್ಭಕ್ತಿ ದೀಪಾಗ್ನಿ ಧಗ್ಧ ದುರ್ಜಾತಿ ಕಿಲ್ಬಿಷಃ ।
ಶ್ವಪಚೋಽಪಿ ಬುಧೈ [illegible] ನ ವೇದಜ್ಞೋಽಪಿ ನಾಸ್ತಿಕಃ ।

ಹೀಗೆ ಬ್ರಾಹ್ಮಣನಿಗೆ ಸಮವೆಂದು ಕಂಠೋಕ್ತವಾಗಿರುವದರಭಿಪ್ರಾಯವೇನೆಂದರೆ-
ವಿ. ಪು. ದಲ್ಲಿ "ವರ್ಣಾಶ್ರಮಾಚಾರವತಾ ಪುರುಷೇಣ ಪರಃ ಪುಮಾನ್ ।
ವಿಷ್ಣುರಾರಾಧ್ಯತೇ ಪನ್ಥಾ ನಾನ್ಯಸ್ತತ್ತೋಷಕಾರಕಃ" (೩ ಅ. ೯.)
ವರ್ಣಾಶ್ರಮಾಚಾರಗಳಿಗನುಗುಣವಾಗಿ ಅನುಷ್ಠಾನವುಳ್ಳ ಪುರುಷನಿಂದ ವಿಷ್ಣುವು ಆರಾಧಿಸಲ್ಪಡುವನೇ ವಿನಾ ವರ್ಣಾಶ್ರಮಾಚಾರಗಳನ್ನುಲ್ಲಂಘಿಸಿ ನಡೆಯುವ ಬೇರೇ ಮಾರ್ಗದಿಂದ ಅವನಿಗೆ ಪ್ರೀತಿಯುಂಟಾಗುವದಿಲ್ಲವೆಂದು ಹೇಳಿರುತ್ತದೆ. ಇದಕ್ಕೆ ವಿರೋಧವಾಗಿ ನಡೆಯುವದರಿಂದ ಭಗವತ್ಪ್ರೀತಿಯನ್ನು ಹೊಂದುವದಕ್ಕೆ ಬದಲಾಗಿ ಶಾಸ್ತ್ರಮರ್ಯಾದೆಯನ್ನುಲ್ಲಂಘಿಸಿ ನಡೆದುದರಿಂದ ಆಜ್ಞಾತಿಕ್ರಮ ಮಾಡಿದನೆಂದು ಭಗವನ್ನಿಗ್ರಹಕ್ಕೇ ಪಾತ್ರನಾಗುವನು. ಆದುದರಿಂದ ಆತನು ಉತ್ತಮನು, ಬ್ರಾಹ್ಮಣನಿಗೆ ಗುಣಗಳಿಂದ ಸಮಾನನು ಇಷ್ಟುಮಾತ್ರವೇ ಹೇಳಲ್ಪಟ್ಟಿತೆಂಬ ಭಾವವು. ಈ ಪ್ರಮಾಣವನ್ನೇ ಶ್ರೀ ದೇಶಿಕರವರೂ ಮುಂದೆ ಉದಾಹರಿಸುತ್ತಾರೆ. ಇನ್ನೂ ಗೀತೆಯಲ್ಲಿ ನಿಗಮನ ಪ್ರಕರಣದಲ್ಲಿ ಹೇಳಿರುವದೇನೆಂದರೆ.

"ಯತಃ ಪ್ರವೃತ್ತಿರ್ಭೂತಾನಾಂ ಯೇನಸರ್ವಮಿದಂ ತತಂ ।
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ।
ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।
ಸಹಜಂ ಕರ್ಮಕೌಂತೇಯ ಸದೋಷಮಪಿ ನ ತ್ಯಜೇತ್" ॥ (ಗೀ. ೧೮. ೪೬. ೮)
"ತಸ್ಮಾತ್ಸ ಪ್ರಣವಂ ಶೂದ್ರೋ ಮನ್ತ್ರಾಮಾನಿ ನಕೀರ್ತಯೇತ್" ॥ (ಭಾ).

ಪ್ರಾಣಿಗಳಿಗೆ ಉತ್ಪತ್ತಿಯೇ ಮೊದಲಾದ ಪ್ರವೃತ್ತಿಗಳೆಲ್ಲವೂ ಯಾವ ಸರ್ವೇಶ್ವರನ ಮೂಲಕವೋ, ಈ ಸಮಸ್ತ ಚಿದಚಿದಾತ್ಮಕ ಜಗತ್ತೆಲ್ಲಾ ಯಾವನಿಂದವ್ಯಾಪಿಸಲ್ಪಟ್ಟಿರುತ್ತದೋ, ಅಂತಹ ಇಂದ್ರಾದಿ ದೇವತೆಗಳಿಗೆಲ್ಲಾ ಅಂತರಾತ್ಮಾವಾಗಿರುವ ಭಗವಂತನನ್ನು ತನ್ನ ವರ್ಣಾಶ್ರಮಾನುಗುಣವಾಗಿ ವಿಧಿಸಲ್ಪಟ್ಟ ಕರ್ಮಗಳಿಂದ ಆರಾಧಿಸಿದರೆ ಮನುಷ್ಯನು ಸಿದ್ಧಿಯನ್ನು ಹೊಂದುವನು. ಆದುದರಿಂದ ಹೀಗೆ ತನ್ನಲ್ಲಿ ಕರ್ತೃತ್ವ ಬುದ್ಧಿಯನ್ನು ತ್ಯಾಗಮಾಡಿ, ಕರ್ಮಯೋಗಾನುಸಾರವಾಗಿ ತನಗೆ ಸಹಜವಾಗಿ ವಿಧಿಸಿರುವ ಕರ್ಮವು ವಿಶೇಷಗುಣವುಳ್ಳದಾದುದರಿಂದ ಇಂದ್ರಿಯವ್ಯಾಪಾರಗಳ ನಿಗ್ರಹಗಳ ಮೊದಲಾದವುಗಳಿಂದ ಸಪ್ರಮಾದವಾಗಿ ದುಷ್ಕರವಾದ ಜ್ಞಾನಯೋಗಾನುಷ್ಠಾನಕ್ಕಿಂತಲೂ ಶ್ರೇಷ್ಠವಾದುದು. ಆದುದರಿಂದ ಸ್ವಧರ್ಮವಾದ ಕರ್ಮಯೋಗವನ್ನು ಬಿಡತಕ್ಕದ್ದಲ್ಲವು" "ಆಕಾರಣದಿಂದ ಶೂದ್ರನು ಅಷ್ಟೋತ್ತರ ಸಹಸ್ರನಾಮಾದಿ ಪಠನಗಳಲ್ಲಿ, ಪ್ರಣವಸಹಿತವಾಗಿ "ಹರಿಃ ಓಂ ಶ್ರೀಕೃಷ್ಣಾಯ ನಮಃ ಎಂದು ಹೇಳತಕ್ಕದ್ದಲ್ಲವು, ಪ್ರಣವವನ್ನು ಬಿಟ್ಟು ಶ್ರೀಕೃಷ್ಣಾಯನಮಃ ಎಂದು ವಿಷ್ಣುಪರಾಗಿಯೇ ಉಚ್ಚರಿಸತಕ್ಕದ್ದೆಂಬ ಭಾವವು." ಇವೆಲ್ಲಾ ಪ್ರಮಾಣ

ಗಳು ಭಾಗವತ ಬ್ರಾಹ್ಮಣನಿಗೂ ಭಾಗವತ ಶೂದ್ರನಿಗೂ ಆಚಾರಗಳಲ್ಲಿ ವ್ಯತ್ಯಾಸಗಳನ್ನು ಸ್ಫುಟವಾಗಿ ಹೇಳಿರುವದರಿಂದ, ಭಾಗವತ ಶೂದ್ರನು ಎಂದಿಗೂ ಸಹಪಙ್ಕ್ತಿ ಭೋಜನಾದಿ ಸವ್ಯವಹಾರಗಳಿಗೆ ಯೋಗ್ಯನಾಗುವದಿಲ್ಲವೆಂಬುದು ಸಿದ್ಧಾನ್ತವು. ಆ ಶೂದ್ರಭಾಗವತನು ಸತ್ತ್ವೋದ್ರೇಕಾದಿ ಮಹಿಮೆಯನ್ನು ಹೊಂದಿದವನಾದರೂ ಬ್ರಾಹ್ಮಣ್ಯ ಸಿದ್ಧಿಯಿಲ್ಲವಾದುದರಿಂದ ಸಂಧ್ಯಾವಂದನ, ವೇದಾಧ್ಯಯನ ನಿಮಂತ್ರಣಾದಿ ಬ್ರಾಹ್ಮಣಗೋಷ್ಠ್ಯನುಪ್ರವೇಶಗಳಿಗೆ ಅರ್ಹನಲ್ಲವು ಹೀಗಾದನಂತರ ಕನ್ಯಾದಾನ ಪರಿಗ್ರಹಾದಿಗಳಿಲ್ಲವೆಂಬುದು ಕೈಮುತಿಕ ನ್ಯಾಯಸಿದ್ಧವು, ಹೀಗೆ ಸ್ವೇ ಸ್ವೇ ಕರ್ಮಗಳಲ್ಲಿ ಅಭಿರತರಾಗಿದ್ದು ಕರ್ಮಯೋಗಾದ ನಿರತರಾದರೇನೇ ಸಂಸಿದ್ಧಿಯುಂಟು. ಇಲ್ಲದಿದ್ದರೆ ಇಲ್ಲವೆಂದು ಗೀತೆಯು ಪುನಃಪುನಃ ಉದ್ಘೋಷಿಸಿ ಹೇಳಿದ್ದರೂ, ಹಾಗೆಯೇ ಶ್ರೀ ಪರಾಶರ, ಶುಕ, ಶೌನಕ, ವಾಲ್ಮೀಕಾದಿ ಮಹರ್ಷಿಗಳೂ ಉಪದೇಶಿಸಿದ್ದರೂ, ಮಹಾ ಮುಖಂಡರಾದ ಭಾರತೀಯರೆಂಬ ಹೆಸರನ್ನು ಧರಿಸಿ, ಗೀತೆಯನ್ನು ಮಾತ್ರ ಶಿರಸಾ ಧರಿಸಿ, ಅದನ್ನೇ ನಿರಂತರ ಪಠಿಸುತ್ತಾ, ಶೂದ್ರರೂ, ಪಂಚಮರೂ, ಬ್ರಾಹ್ಮಣರೂ ಎಲ್ಲರೂ ಒಂದೇ ಎಂದು ಭಾರತೀಯ ಸನಾತನ ಧರ್ಮಗಳನ್ನು ನಿಂದಿಸುತ್ತಿರೋಣವೂ ಹೀಗೆ ಪರಸ್ಪರ ವಿರುದ್ಧವಾದ ಪ್ರವೃತ್ತಿಗಳೂ ಎರಡೂ ಹೇಗೆ ಸಾಧುವೋ ಪ್ರಾಜ್ಞರೇ ಊಹಿಸಬಹುದು. ವಿಶ್ವಾಮಿತ್ರರೂ "ಧಿಗ್ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋ ಬಲಂ ಬಲಂ" ಎಂದು ಬ್ರಾಹ್ಮಣ ಕ್ಷತ್ರಿಯ ತೇಜಸ್ಸುಗಳಿಗೇನೇ ಇರುವ ವ್ಯತ್ಯಾಸವನ್ನು ಹೇಳಿರುತ್ತಾರೆ. (ರಾ. ಬಾ. ೫೬-೨೩)

ಹಾಗೆಯೇ ಆಶೌಚಪ್ರಕರಣದಲ್ಲೂ ಬ್ರಾಹ್ಮಣ ಶೂದ್ರ ಭಾಗವತರಿಗೆ ತಾರತಮ್ಯವು ವಿಧಿಸಲ್ಪಟ್ಟಿರುತ್ತದೆ. ಹೇಗೆಂದರೆ "ಬ್ರಾಹ್ಮಣಾನಾಂ ದಶರಾತ್ರಂ ಆಶೌಚಂ ಶೂದ್ರಾಣಾಂ ತ್ರಿಂಶದ್ರಾತ್ರಂ" ಎಂದು ಸಾಮಾನ್ಯ ಶೂದ್ರನಿಗೆ ೩೦ ರಾತ್ರಿ ಆಶೌಚವೆಂದು ಹೇಳಿ, ಅತನೇ ವಿಷ್ಣುಭಕ್ತನಾಗಿದ್ದರೆ "ಮಾಸಾರ್ಧಂ ವೈಷ್ಣವೇ ಶೂದ್ರೇ ದಾಸ ದಾಸ್ಯೋಽಥ ಶಾಙ್ಗಿಣಃ" ಎಂಬ ಪ್ರಮಾಣಾನುಸಾರ ೧೫ ದಿನಗಳ ಆಶೌಚವೆಂದು ಹೇಳಿರುವದರಿಂದ ದಶರಾತ್ರಿಯ ಆಶೌಚವಿರುವ ಬ್ರಾಹ್ಮಣನಿಗೆ ಎಂದಿಗೂ ಸಮನಲ್ಲವೆಂಬುದು ಸುಸ್ಪಷ್ಟವು.

ಆದುದರಿಂದ "ಯೋ ಯಜಂತಿ ಹರಿಂ ಸರ್ವೇ ಬ್ರಾಹ್ಮಣಾ ಏವ ತೇ ಸ್ಮೃತಾಃ । ನ ಶೂದ್ರಾ ಭಗವದ್ಭಕ್ತಾಃ" ಎಂದು ಮೇಲೆ ಉದಾಹರಿಸಿರುವ ಸಾಮ್ಯವನ್ನು ಪ್ರತಿಪಾದಿಸುವ ಪ್ರಮಾಣ [illegible]
[illegible] ರಗಳ [illegible]
[illegible]

ಅಸ್ಮಿನ್ ಪ್ರಕರಣೇ ವಾದಿಹಂಸಾಂಬು ಾಹೈರುಪದಿಷ್ಟವರ್ಥಃ.

ಕೇವಲ ಬ್ರಾಹ್ಮಣನುಕ್ಕುಮ್ ಕೇವಲ ಶೂದ್ರನುಕ್ಕುಮ್ ಉಳ್ಳ ವೆಲ್ಲೈ, ಭಾಗವತಬ್ರಾಹ್ಮಣನುಕ್ಕುಮ್ ಭಾಗವತಶೂದ್ರನುಕ್ಕುಮ್ ಕೊಳ್ಳ ವೇಣುಮೆನ್ರುಮ್, ಇವರ್‌ಗಳೈ ಸಮರೆನ್ಗಿರ ಶಾಸ್ತ್ರಙ್ಗಳುಮ್ ಪರಮ ಪುರುಷಾರ್ಥಸಾಮ್ಯಾದಿಗಳಾಲೇ ಎನ್ರುಮ್, ಕಿಡಾಂಬಿ ಅಪ್ಪುಳ್ಳಾರ್ ಅರುಳಿಚ್ಚೆಯ್‌ದಾರ್.

ಯೂ ಎಂಬುದರಲ್ಲಿ ಅಭಿಪ್ರಾಯವು. ಇದೇ ಪೂರ್ವಚಾರ್ಯರುಗಳ ಮತ್ತು ತಮ್ಮ ಆಚಾರ್ಯರಾದ ಕಿಡಾಂಬಿ ಅಪ್ಪುಳ್ಳಾರ್ರವರುಗಳ ಅಭಿಪ್ರಾಯವೆಂದು ಹೇಳುತ್ತಾರೆ.

ಆಚಾರ್ಯರಾದ ವಾದಿಹಂಸಾಂಬುವಾಹರವರ ಅಭಿಪ್ರಾಯವು.

**ಕೇವಲ ಬ್ರಾಹ್ಮಣನುಕ್ಕುಮ್** - ಸರಿಯಾದ ಬ್ರಾಹ್ಮಣನೆನಿಸಿಕೊಳ್ಳ ಬೇಕಾದ ಧರ್ಮಗಳೊಂದೂ ಇಲ್ಲದೆ ಕೇವಲ ಬ್ರಾಹ್ಮಣಯೋನಿಯಲ್ಲಿ ಜನಿಸಿ ಬ್ರಾಹ್ಮಣನೆಂದು ಹೇಳಿಸಿಕೊಳ್ಳುವನಿಗೂ, **ಕೇವಲ ಶೂದ್ರನುಕ್ಕುಮ್**-ಶೂದ್ರನಿಗೆ ವಿಹಿತವಾದ ಭಾಗವತ ಶುಶ್ರೂಷಾದಿ ಧರ್ಮಗಳೊಂದೂ ಇಲ್ಲದೆ ಬರೀ ಶೂದ್ರ ಯೋನಿಯಲ್ಲಿ ಜನಿಸಿದುದರಿಂದ ಶೂದ್ರನೆಂದು ಹೇಳಿಸಿಕೊಳ್ಳುವವನಿಗೂ, **ಉಳ್ಳ ವೆಲ್ಲೈ** - ಎಷ್ಟು ಅಂತರಾಳವೋ, ಎಷ್ಟು ವ್ಯತ್ಯಾಸವಿದೆಯೋ, ಅಷ್ಟು ವ್ಯತ್ಯಾಸ ವನ್ನೇ ಭಾಗವತಬ್ರಾಹ್ಮಣನಿಗೂ ಭಾಗವತ ಶೂದ್ರನಿಗೂ, **ಕೊಳ್ಳವೇಣುಮೆ ನ್ರುಮ್** - ಅಙ್ಗೀಕರಿಸತಕ್ಕದ್ದೆಂದು, **ಇವರ್ಗೈ ಸಮರೆಙ್ಗಿರ ಶಾಸ್ತ್ರಙ್ಗಳುಮ್**- ಈ ಭಾಗವತ ಬ್ರಾಹ್ಮಣನೂ ಈ ಭಾಗವತ ಶೂದ್ರನೂ ಸಮರೆಂದು ಹೇಳುವ ಶಾಸ್ತ್ರಗಳೂ **ಪರಮ ಪುರುಷಾರ್ಥಸಾಮ್ಯಾದಿಗಳಾಲೆ** - ಪರಮಪುರುಷಾರ್ಥ ವಾದ ಪರಬ್ರಹ್ಮಪ್ರಾಪ್ತಿ, ತತ್ಸಮಾನ ಭೋಗಪ್ರಾಪ್ತಿ, ತತ್ಕೈಙ್ಕರ್ಯಪ್ರಾಪ್ತಿ ಮೊದಲಾದವುಗಳು ಇಬ್ಬರಿಗೂ ಸಮವಾಗಿ ಉಂಟಾಗುವದರಿಂದ, **ಎನ್ರುಮ್**- ಎಂದು, **ಕಿಡಾಂಬಿ ಅಪ್ಪುಳ್ಳಾರ್** - ತಮ್ಮ ಗುರುಗಳಾದ ಶ್ರೀ ವಾದಿಹಂಸಾಂಬು ವಾಹರವರು, **ಅರುಳಿಚ್ಚೆಯ್‌ದಾರ್** - ಕೃಪಯಾ ತಮಗೆ ಉಪದೇಶಿಸಿದರೆಂಬ ಭಾವವು. ಸಾಧಾರಣ ಬ್ರಾಹ್ಮಣ ಶೂದ್ರರಿಗೆ ಎಷ್ಟು ವ್ಯತ್ಯಾಸವೋ ಅಷ್ಟು ವ್ಯತ್ಯಾಸವು ಭಾಗವತ ಬ್ರಾಹ್ಮಣ ಭಾಗವತಶೂದ್ರರಿಗೆ ಇದ್ದೇ ಇರುತ್ತದೆಂಬ ಭಾವವು. ಕೇವಲ ಬ್ರಾಹ್ಮಣನಿಗಿಂತ ಭಾಗವತ ಬ್ರಾಹ್ಮಣನು ಹೇಗೆ ಉತ್ಕೃಷ್ಟನೋ, ಹಾಗೆಯೇ ಕೇವಲ ಶೂದ್ರನಿಗಿಂತ ಭಾಗವತ ಶೂದ್ರನು ಶ್ರೇಷ್ಠನೆಂಬ ಭಾವವು. ಕೇವಲ ಶೂದ್ರನನ್ನೂ ಈ ಭಾಗವತ ಶೂದ್ರನನ್ನೂ ಹೋಲಿಸಿದರೆ

(೧) "ಕುಲಂತರುಮ್" ಎನ್ಗಿರಪಾಟ್ಟುಕ್ಕು ವ್ಯಾಖ್ಯಾನಮ್ ಪಣ್ಣಿನ ವಭಿಯುಕ್ತರುಮ್ ಜನ್ಮತ್ತಾಲ್ ವೃತ್ತತ್ತಾಲ್ ಕುರೈನ್ದಾನೊರುತ್ತನುಕ್ಕು

ಈತನು ಬ್ರಾಹ್ಮಣನ ಹಾಗೆ ಎಂಬ ಭಾವವು. ಹಾಗೆಯೇ ಕೇವಲ ಬ್ರಾಹ್ಮಣನನ್ನೂ ಈ ಭಾಗವತ ಶೂದ್ರನನ್ನೂ ಹೋಲಿಸಿದರೆ ಕೇವಲ ಬ್ರಾಹ್ಮಣನು ಶೂದ್ರಸಮಾನನು ಎಂಬ ಭಾವವು. ಇದನ್ನೇ ಇನ್ನೊಂದು ಪ್ರಮಾಣವು ಬೋಧಿಸುತ್ತದೆ:—"ಸರ್ವವರ್ಣೇಷು ತೇ ಶೂದ್ರಾ ಯೇಹ್ಯಭಕ್ತಾ ಜನಾರ್ದನೇ" "ಸಮಸ್ತ ವರ್ಣಗಳಲ್ಲೂ ಯಾರು ಜನಾರ್ದನನಲ್ಲಿ ಭಕ್ತರಲ್ಲವೋ ಅವರೆಲ್ಲಾ ಶೂದ್ರರೇ ಸರಿ" ಎಂದು ಹೇಳಲ್ಪಟ್ಟಿರುತ್ತದೆ. "ನಶೂದ್ರಾ ಭಗವದ್ಭಕ್ತಾ ವಿಪ್ರಾಃ" ಎಂಬ ಪ್ರಮಾಣದಲ್ಲಿ ಭಗವದ್ಭಕ್ತನಾದ ಶೂದ್ರನು ಬ್ರಾಹ್ಮಣ್ಯವನ್ನೇ ಹೊಂದುವನು ಎಂದು ಅರ್ಥವನ್ನು ಮಾಡಿದರೆ, ಸರ್ವವರ್ಣೇಷು ತೇ ಶೂದ್ರಾಃ ಎಂಬಲ್ಲಿ ಭಗವದ್ಭಕ್ತನಲ್ಲದ ಶೂದ್ರನು ಅದಕ್ಕಿಂತ ಕೀಳಾದ ಶೂದ್ರಜಾತಿಯನ್ನು ಹೊಂದುತ್ತಾನೆ ಎಂದು ಅರ್ಥಮಾಡಿ ಪಂಚಮನಾಗುತ್ತಾನೆಂದು ಅರ್ಥಹೇಳಲು ಸಾಧ್ಯವಾಗುತ್ತದೋ? ಅದರಹಾಗೆಯೇ ಇಲ್ಲಿಯೂ ಬ್ರಾಹ್ಮಣಜಾತಿಯನ್ನು ಹೊಂದುತ್ತಾನೆಂಬ ಅರ್ಥಮಾಡಲು ಸಾಧ್ಯವಲ್ಲವು. ಬ್ರಾಹ್ಮಣನು ಹೇಗೆ ಮಾನ್ಯನೋ ಹಾಗೆಯೇ ಭಾಗವತ ಶೂದ್ರನೂ ಮಾನ್ಯನು, ಸಾಮಾನ್ಯನನ್ನಾಗಿ ಭಾವಿಸುವದು ಯುಕ್ತವಲ್ಲವೆಂಬ ಭಾವವು. ಇಷ್ಟುಮಾತ್ರವೇ ಆ ವಾಕ್ಯದ ತಾತ್ಪರ್ಯವು.

ಆದರೆ ತಿರುಮಙ್ಗೈಯಾಳ್ವಾರ್ ಅನುಗ್ರಹಿಸಿದ ಪೆರಿಯತಿರುಮೊಳಿಯಲ್ಲಿ ಕುಲಂತರುಮ್ ಎಂಬ ಪಾಶುರದಿಂದ ಅಂತಹ ಭಗವತ್ಸಂಬಂಧ ದೊರೆತ ಕೀಳುಜಾತಿಯವನಿಗೆ ಉತ್ಕೃಷ್ಟವಾದ ಬ್ರಾಹ್ಮಣಕುಲ ಪ್ರಾಪ್ತಿಯು ಹೇಳಲ್ಪಟ್ಟಿರುತ್ತವೆಯಾಗಿ, ಇದು ಆಳ್ವಾರಾದಿಗಳಿಗೆ ಅಭಿಮತವೆಂದು ತೋರುತ್ತದೆಯಲ್ಲಾ ಎಂದರೆ ಆ ಶ್ಲೋಕವ್ಯಾಖ್ಯಾತೃವಾದ ಭಗವತ್ಸಂಪ್ರದಾಯ ಪ್ರವರ್ತಕರಾಗಿ ಪೂಜ್ಯರಾದ ಶ್ರೀ ಪೆರಿಯವಾಚ್ಚಾನ್ ಪಿಳ್ಳೈಯುಮ್ ಹಾಗೆ ಅಭಿಪ್ರಾಯಪಡಲಿಲ್ಲವೆಂದೂ ಜನ್ಮವೃತ್ತಗಳಲ್ಲಿ ಕಮ್ಮಿಯಾದವನಿಗೂ ಕೂಡ ಭಗವತ್ಸಂಬಂಧವುಂಟಾದರೆ ಅಂತವನನ್ನು ನಿಕೃಷ್ಟವಾಗಿ ಭಾವಿಸಕೂಡದೆಂಬುದು ಆ ಪಾಶುರಾಭಿಪ್ರಾಯವು ಎಂದು ತಿಳಿಸುತ್ತಾರೆ "ಕುಲಂತರುಮ್" ಎನ್ಗಿರಪಾಟ್ಟುಕ್ಕು ವ್ಯಾಖ್ಯಾನಮ್ ಪಣ್ಣಿನ-"ಕುಲಂತರುಂ" ಎಂಬುವ ಪಾಶುರಕ್ಕೆ ವ್ಯಾಖ್ಯಾನವನ್ನು ಮಾಡಿದ, ಅಭಿಯುಕ್ತರುಮ್-ಪೂಜ್ಯರಾದ ಶ್ರೀ ಪೆರಿಯವಾಚ್ಚಾನ್‌ಪಿಳ್ಳೈಯವರೂ, ಜನ್ಮತ್ತಾಲೆ ವೃತ್ತತ್ತಾಲ್ - ಜನ್ಮದಿಂದಲೂ ಅನುಷ್ಠಾನದಿಂದಲೂ, ಕುರೈನ್ದಾನೊರುತ್ತನುಕ್ಕು-

(೧) ಪೆರಿಯ ಮೊಳಿ. ೧. ೧ ೯

**ಭಗವತ್ಸಂಬಂಧಮುಣ್ಡಾನಾಲ್ ಅವನ್ನೈಯಿವ್ವೈಯುಡೈಯಾನೊರುತ್ತನ್ ತಾಳನಿನೈಕ್ಕಕ್ಕೂಶವೇಣ್ಡುಮ್ಪಡಿಯಾಯಿತ್ತು ಭಗವತ್ಪ್ರಭಾವ ಮಿರುಕ್ಕುಮ್ಪಡಿ;**

ಕನಿಷ್ಠರಾಗಿ ಇರುವ ಒಬ್ಬನಿಗೆ ಎಂದರೆ ಶೂದ್ರಾದಿ ಕೀಳ **ಜಾತಿ**ಯಲ್ಲಿ ಹುಟ್ಟಿದವನೊಬ್ಬನಿಗೆ, ಭಗವತ್ಸಂಬಂಧವು, **ಉಂಡಾನಾಲ್**-ಉಂಟಾದರೆ, **ಅವನ್ನೈ**-ಅಂತವನನ್ನು, **ಯಿವ್ವೈಯುಡೈಯನೊರುತ್ತನ್**-ಈ ಜನ್ಮವೃತ್ತಿಗಳೆರಡನ್ನೂ ಹೊಂದಿದ ಒಬ್ಬನು, ಎಂದರೆ ಉತ್ಕೃಷ್ಟ ಜನ್ಮದಲ್ಲಿ ಹುಟ್ಟಿ ಅನುಷ್ಠಾನಪರನಾದ ಒಬ್ಬನು, **ತಾಳನಿನೈಕ್ಕ**-ನಿಕೃಷ್ಟಭಾವದಿಂದ ಕಾಣಲು, **ಕೂಶವೇಣ್ಡುಮ್ಪಡಿಯಾಯ್‌ತ್ತು**-ಸಂಕೋಚಹೊಂದಿದವನಹಾಗೆ ಮಾಡುತ್ತದೆ, ಯಾವುದೆಂದರೆ, **ಭಗವತ್ಪ್ರಭಾವ ಮಿರುಕ್ಕುಂಪಡಿ**-ಭಗವದ್ಭಕ್ತನಾಗಿ ಭಾಗವತನೆಂದು ಹೇಳಿಸಿಕೊಳ್ಳುವದರ ಮಾಹಾತ್ಮ್ಯೆಯ ಸ್ಥಿತಿಯು. ಕೀಳುಜಾತಿಯಲ್ಲಿ ಹುಟ್ಟಿ ಆ ಕಾರಣದಿಂದ ಅನುಷ್ಠಾನಾದಿಗಳು ತುಂಬಾ ಇಲ್ಲದಿದ್ದರೂ, ಯಾವಾಗ ಭಗವದ್ಭಕ್ತನಾಗಿ ತೋರ್ಪಡಿಸಿಕೊಂಡನೋ, ಆಗ ಉತ್ತಮಜಾತಿಯಲ್ಲಿ ಹುಟ್ಟಿದ ಭಾಗವತರು ಅಂತವನನ್ನು ನಿಕೃಷ್ಟಭಾವದಿಂದ ನೋಡಲು ಹಿಂತೆಗಿಯುತ್ತಾರೆ, ಏತಕ್ಕೆಂದರೆ ಭಗವತ್ಸಂಬಂಧವುಳ್ಳವನೆಂಬು ತೋರಿಸಿಕೊಂಡಿರುವದರ ಪ್ರಭಾವವಂತಾದ್ದೆಂಬ ಭಾವವು. ಇದರಿಂದ ಜನ್ಮದಿಂದ ಬಂದ ನಿಕೃಷ್ಟಜಾತಿಯು ಹೋಗಿ ಉತ್ಕೃಷ್ಟಜಾತಿಯು ಬರುತ್ತದೆಂದು ಹೇಳಲ್ಪಡಲಿಲ್ಲವೆಂದೂ, ಹಾಗೆ ಬರುತ್ತದೆಂದು ಅಭಿಪ್ರಾಯಪಟ್ಟರೆ, **“ಸರ್ವವರ್ಣೇಷು ತೇಶೂದ್ರಾ ಯೇಹ್ಯಭಕ್ತಾ ಜನಾರ್ದನೇ”** ಸಮಸ್ತ ವರ್ಣಗಳಲ್ಲೂ ಜನಾರ್ದನನಲ್ಲಿ ಭಕ್ತಿ ಯಿಲ್ಲದವರು ಶೂದ್ರರು, ಎಂದು ಹೇಳಿರುವದರಿಂದ ದೇವಭಕ್ತರಲ್ಲದ ಬ್ರಾಹ್ಮಣಾದಿಗಳಿಗೂ ಶೂದ್ರಜಾತಿಯುಂಟಾಗುತ್ತದೆಂದು ಭಾವಿಸಬೇಕಾಗುತ್ತದೆ. ಇದು ಸರಿಯಲ್ಲವು. ಅಂತವರು ಶೂದ್ರರಿಗೆ ಸಮಾನರು ಎಂದು ಅಭಿಪ್ರಾಯವಾದರೆ, ಭಗವದ್ಭಕ್ತರಾದ ಶೂದ್ರರೂ ಬ್ರಾಹ್ಮಣರಾಗುವದಿಲ್ಲವು, ಬ್ರಾಹ್ಮಣನಿಗೆ ಸಮಾನರಾಗುವರು ಎಂಬುದು ಅಭಿಪ್ರಾಯವು. “ಕುಲಂ ತರುಂ” ಎಂಬ ಪಾಶುರವು ಯಾವುದೆಂದರೆ.—**“ಕುಲಂ ತರುಂ ಶೆಲ್ವಂ ತನ್ದಿಡುಂ ಅಡಿಯಾರ್ ಪಡುತುಯರಾಯಿನ ವೆಲ್ಲಾಮ್। ನಿಲಂ ತರುಂ ಶೆಯ್ಯುಮ್ ನೀಳ್ ವಿಶಂಬು ಅರಳುಮ್, ಅರುಳೊಡು ಪೆರುನಿಲ ಮಳಿಕ್ಕುಮ್ । ಕುಲಂ ತರುಂನು**ಗ್ರಂ**ತನ್ದಿಡುಮ್ ಪೆ**ಗ್ರ**ತಾಯಿನುಮಾಯಿನಶೆಯ್ಯುಮ್ । ನಲಂತರುಂ ಶೊಲ್ಲೈನಾನ್ ಕಣ್ಡುಕೊಣ್ಡೇನ್ ನಾರಾಯಣವೆನ್ನುಂ ನಾಮಂ ॥೯॥**

**ಇ**ದರರ್ಥವೇನೆಂದರೆ ಶ್ರೀಮನ್ನಾರಾಯಣನ ನಾಮ ಸಙ್ಕೀರ್ತನೆಯು

ಯಾವುದನ್ನು ತಾನೆ ಕೊಡಲಾರದು? ಸರ್ವವನ್ನೂ "**ತಸ್ಮಿನ್ ಪ್ರಸನ್ನೇ ಕಿಮಿಹಾಸ್ತ್ಯಲಭ್ಯಂ**" ಎಂಬ ಮಹರ್ಷಿಯ ವಾಕ್ಯಿನಹಾಗೆ, ಸಾಧಿಸಿಕೊಡಬಲ್ಲದು ಎಂದು ಹೇಳುತ್ತಾರೆ. **ಕುಲಂ ತರುಂ** - ನಿಹೀನ ಕುಲದವರಿಗೂ ಉತ್ಕೃಷ್ಟ ಕುಲವನ್ನುಂಟುಮಾಡುತ್ತದೆ, ಎಂದರೆ ಶೂದ್ರಾದಿ ಹೀನವೃತ್ತಿಯುಳ್ಳಂಥವರನ್ನೂ ಉತ್ಕೃಷ್ಟಭಾಗವತ ಗೋಷ್ಠಿಗೆ ಅರ್ಹರನ್ನಾಗಿ ಮಾಡುತ್ತದೆ, ಯಾವುದು ಎಂದರೆ **ನಾರಾಯಣಾ ಎನ್ನುಂ ನಾಮಂ** ಎಂದು ಪಾಶುರಾಂತ್ಯದಲ್ಲಿದೆ; ಶ್ರೀಮನ್ನಾರಾಯಣ ಎಂದು ನಿನ್ನ ನಾಮವನ್ನು ಸ್ತುತಿಸಿ ಆಶ್ರಯಿಸೋಣವು, ಉತ್ಕೃಷ್ಟಕುಲವನ್ನುಂಟುಮಾಡುವ ಮಾಹಾತ್ಮ್ಯವುಳ್ಳದ್ದು; ಹಾಗೆಯೇ ಪೆರಿಯಾಳ್ವಾರ್ರವರೂ "**ತೊಣ್ಣಕುಲತ್ತಿಲುಳ್ಳೀರ್ । ವನ್ದಡಿತೊಳುದು ಆಯಿರ ನಾಮಂ ಶೊಲ್ಲಿ, ಪಣ್ಡೈ ಕುಲತ್ತೈತವಿರ್ನ್ದು ಪಲ್ಲಾಣ್ಡು ಪಲ್ಲಾಯಿರತ್ತಾಣ್ಡೆನ್ಬಿನೇ**" ಎಂದರೆ ಸೇವಾವೃತ್ತಿಯನ್ನು ಮಾಡುವ ನಿಹೀನಕುಲದಲ್ಲಿ ಹುಟ್ಟಿರುವರೇ, ನೀವೂ ಕೂಡ ಆ ಭಗವಂತನ ಪಾದಕಮಲವನ್ನು ಆಶ್ರಯಿಸಿ ಪೂಜಿಸಿ ಸಹಸ್ರನಾಮೋಚ್ಚಾರಣವನ್ನು ಮಾಡಿದುದಾದರೆ, ನಿಮ್ಮ ನಿಹೀನ ಕುಲವನ್ನು ತ್ಯಜಿಸಿ ಸ್ವಾಮಿಗೆ ಮಙ್ಗಳಾಶಾಸನವನ್ನು ಮಾಡುವ ಗೋಷ್ಠಿಗೆ ಸೇರಿ ಪಲ್ಲಾಂಡು ಕೈಙ್ಕರ್ಯವನ್ನು ಮಾಡಬಹುದು ಎಂಬ ತಾತ್ಪರ್ಯವು. ಇಲ್ಲಿ ಉತ್ಕೃಷ್ಟ ಕುಲ ಎಂದರೆ ಉತ್ಕೃಷ್ಟಜಾತಿ, ಬ್ರಾಹ್ಮಣಜಾತಿಯು ಪ್ರಾಪ್ತವಾಗುತ್ತದೆಂಬ ಅರ್ಥವಲ್ಲವು; ಶೂದ್ರನು ಭಗವದ್ಭಕ್ತನಾದಮಾತ್ರದಿಂದಲೇ ಉತ್ತಮ ವರ್ಣನಾಗುವದಿಲ್ಲವು. ಹುಟ್ಟುವಾಗ ಬಂದಜಾತಿಯು ಆ ಶರೀರವಿರುವತನಕ ತಪ್ಪದು. ಅಂತವನು ಬ್ರಾಹ್ಮಣನಾದರೆ ವರ್ಣಸಾಂಕರ್ಯವು ಸರ್ವಾತ್ಮನಾ ಕೂಡದೆಂದು ಶ್ರೀಕೃಷ್ಣ ಭಗವಾನವರೇ ಉಪದೇಶಿಸಿರುತ್ತಾರೆ. "**ಉತ್ಸೀದೇಯುರಿಮೇ ಲೋಕಾಃ ನ ಕುರ್ಯಾಂ ಕರ್ಮ ಚೇದಹಂ । ಸಙ್ಕರಸ್ಯ ಚ ಕರ್ತಾಸ್ಯಾಂ ಉಪಹನ್ಯಾಮಿಮಾಃ ಪ್ರಜಾಃ**" (ಗೀ. ೩. ೨೪). ಕುಲಂತರುಂ ಎಂಬುದರಿಂದ ಶೂದ್ರನಿಗೂ ಉತ್ತಮಜಾತಿಯೇ ಪ್ರಾಪ್ತವಾಗುತ್ತದೆ ಎಂದು ಹೇಳಿಬಿಟ್ಟರೆ, ಎಲ್ಲಾ ಬ್ರಾಹ್ಮಣರೂ ಸ್ನಾನಸಂಧ್ಯಾವಂದನಾದಿ ನಿತ್ಯ ಕರ್ಮಗಳನ್ನೆಲ್ಲಾ ಬಿಡಬಹುದು ಎಂದಾಗುತ್ತದೆ; ಹೇಗೆಂದರೆ ಕರ್ಮಭ್ರಷ್ಟನಾಗಿ ಮೊದಲು ಶೂದ್ರನಾಗುವದು; ಅನಂತರ ಆಯಿರನಾಮಾದಿಗಳನ್ನು ಹೇಳಿ ಬ್ರಾಹ್ಮಣನಾಗಿ ಬಿಡುವದು; ಹೀಗೆ ಮಾಡಿಬಿಟ್ಟರೆ ನಿತ್ಯನೈಮಿತ್ತಿಕಗಳನ್ನೆಲ್ಲಾ ಮಾಡಬೇಕಾದ ಕ್ಲೇಶ ತಪ್ಪುತ್ತದೆಯಾದುದರಿಂದ ಎಲ್ಲರೂ ಮೊದಲು ಶೂದ್ರರಾಗುವದೇ ಉತ್ತಮನೆಂದಾಗುತ್ತದೆ. ಆದುದರಿಂದ ಜಾತಿಭೇದ ಉಂಟಾಗುವದಿಲ್ಲವು; **ಕುಲಂ ತರುಂ** ಉತ್ತಮಕುಲವನ್ನುಂಟುಮಾಡುತ್ತದೆ ಎಂದರೆ, ಉತ್ತಮರಾದ ಭಾಗವತರೊಂದಿಗೆ ಸಲ್ಲಾಪಾದಿ

ಗಳಿಗೆ ಅರ್ಹನಾಗಿ ಅವರ ಗೋಷ್ಠಿಯಲ್ಲಿರಬಹುದೆಂಬ ಅನುಮತಿ ಉಂಟಾಗುತ್ತ ದೆಂಬ ಭಾವವು.

ಇವಕ್ಕೆ ಮಹಾನುಭಾವರಾದ ಪೆರಿಯ ವಾಚ್ಚಾನ್ ಪಿಳ್ಳೈಯವರ ವ್ಯಾಖ್ಯಾನವು ಹೇಗೆಂದರೆ:—"ಕುಲಂ ತರುಮ್—ಜನ್ಮವೃತ್ತಙ್ಗಳಾಲ್ ಕುರೈಯುನಿನ್ರಾನೊರುತ್ತನುಕ್ಕು ಭಗ್ವತ್ಸಂಬಂಧಮುಣ್ಡಾನಾಲ್ ಇವತ್ರಾಲ್ ಉಯರ್ನ್ದಾನೊರುತ್ತನ್, ಇವ್ವಿರಣ್ಡುಮುಡೈಯನುಕ್ಕು ತಾಳ್ ಉಣ್ಡಾಗುವುಮ್, ತಾನ್ ಉಯರ್ನ್ದಾನಾಗುವುಮ್ ನಿನ್ರಿತ್ತಿರುಕ್ಕ ವುಜ್ಞಾಡ ಕ್ಕಾಕವೇಣ್ಣುಮ್ ಪಡಿಯಾಯ್ತ್ತು ಭಗವತ್ಪ್ರಭಾವ ಮಿರುಪ್ಪದು. ಆಗಿಲುಮ್ ಪೇಣ್ಕಿಡತ್ತಾಲ್ ಕೊಳ್ಳಾದಲ್ ಶೆಯ್‌ಗಿರಾರಿಲ್ಲೈ; ಅದಕ್ಕಡಿ ಜಾತಿನಿಬಂಧನಮಾಗ್ಗೈ; ಶ್ಲಾಘ್ಯೈಗುಣ ನಿಬಂಧನಮ್. "ಸಶ್ಲಾಘ್ಯಸ್ಸಗುಣೀ ಧನ್ಯಸ್ಸ ಕುಲೀನ ಸ್ಸಬುದ್ಧಿಮಾನ್" ಎನ್ನಕ್ಕಡವದಿರೇ" ಎಂಬ ವ್ಯಾಖ್ಯಾನವಿರುತ್ತದೆ. ಇವಕ್ಕೆ ಕೆಲವು ದೃಷ್ಟಾಂತಗಳನ್ನು ಕೊಡುತ್ತಾರೆ. ವಿಭೀಷಣನಿಗೆ ಕ್ರೂರಕರ್ಮಿಯಾಗಿ ಪರಮಾರಾಪಹಾರವನ್ನು ಮಾಡಿದ ರಾವಣನ ಗೋಷ್ಠಿಯು ಪರಮ ಹಿತವನ್ನು ಬೋಧಿಸಿದರೂ "ತ್ವಾಂತುಧಿಕ್ಕುಲ ಪಾಂಸನಮ್" ಎಂದು ಸಭೆಯಲ್ಲಿ ನಿಂದಿಸಿದ ಗೋಷ್ಠಿಯು ತುಂಬಾ ನಿಹೀನವಾದುದರಿಂದ ಆತನನ್ನು, ಭ್ರಾತಾವೆಂದು ಸಂಬೋಧಿಸದೆ, ನಿಶಾಚರ ಎಂದು ಸಂಬೋಧಿಸಿದುದರಿಂದ ತಾನು ಉತ್ತಮ ಕುಲವೇನಾಯಿತು. ಇದನ್ನೇ ಶ್ರೀರಾಮಚಂದ್ರ ಪ್ರಭುವು ಅನುಮೋದಿಸಿ ವಿಭೀಷಣನನ್ನು ತಮ್ಮಗೋಷ್ಠಿಗೆ ಸೇರಿಸಿ, ಹೀಗೆ ಉತ್ತಮಕುಲವನ್ನು ಹೊಂದಿಸಿ ಆತನನ್ನು ಕೇಳುವ ಸಂದರ್ಭದಲ್ಲಿ ನಿಮ್ಮಗಳ ಬಲಾಬಲಗಳು ಹೇಗೆ ಎಂದು ಕೇಳದೆ ವಿಭೀಷಣನನ್ನು ಉತ್ತಮ ಕುಲದವನೆಂದು ಭಾವಿಸಿ "ರಾಕ್ಷಸಾನಾಂ ಬಲಾಬಲಂ" ರಾಕ್ಷಸರ ಬಲಾಬಲಗಳನ್ನು ತಿಳಿಸು ಎಂದು ಪ್ರಶ್ನಿಸಿರುತ್ತಾರೆ. ಮತ್ತು ಶ್ರೀ ವಿದುರರು ದೇಹತ್ಯಾಗಮಾಡಿದ ಸಂದರ್ಭದಲ್ಲಿ, ಭಗವತ್ಸಂಬಂಧವನ್ನು ಹೊಂದಿ ಮಹಾ ಭಾಗವತರಾಗಿದ್ದುದರಿಂದಲೂ, ಅಶರೀರವಾಕ್ಕಿನಿಂದಲೂ, ಅವರಿಗೆ ಧರ್ಮಪುತ್ರರು ಬ್ರಹ್ಮಮೇಧ ಸಂಸ್ಕಾರವನ್ನು, ಶ್ರೀರಾಮಚಂದ್ರ ಪ್ರಭುವು ಜಟಾಯುವಿಗೆ ನಡೆಸಿದ ತೆರದಿ, ನಡೆಸಿದರು ಎಂಬಿವೇ ಮೊದಲಾದ ನಿದರ್ಶನಗಳನ್ನು ಕೊಟ್ಟಿರುತ್ತಾರೆ. "ಕುಲಂ ತರುಮ್" ಎಂಬ ಶ್ರೀ ಆಳ್ವಾರ್ ಸೂಕ್ತಿಯು ಪ್ರಸ್ತುತವಾದುದರಿಂದ ವಿಸ್ತರಿಸಿ ವ್ಯಾಖ್ಯಾನವು ಮಾಡಲ್ಪಟ್ಟಿತು; ಮಿಕ್ಕ ಭಾಗದ ಅರ್ಥವೇನೆಂದರೆ ಇನ್ನೂ ಯಾವುಯಾವುದನ್ನು ಆ ನಾರಾಯಣವೆಂಬ ನಾಮ ಸಂಕೀರ್ತನವು ಉಂಟುಮಾಡುತ್ತದೆ ಎಂದರೆ,ಶೆಲ್ವಂತನ್ದಿಡುಮ್ ಐಶ್ವರ್ಯವನ್ನು ಹೊಂದಿಸುತ್ತದೆ; ಐಶ್ವರ್ಯವು ಯಾವುದು ಎಂದರೆ "ಪರಿತ್ಯಕ್ತಾ

ಮಯರಾಲಂಕಾ" ಎಂದು ಎಲ್ಲವನ್ನೂ ಪರಿತ್ಯಾಗಮಾಡಿ ಬಂದ ವಿಭೀಷಣಾ ಳ್ವಾನನ್ನು "ಅಂತರಿಕ್ಷಗತಶ್ರೀಮಾನ್" ಎಂದು ಹೇಳಲ್ಪಟ್ಟ ಐಶ್ವರ್ಯವು, ಮತ್ತು ರಾಜಭೋಗಗಳನ್ನೆಲ್ಲಾ ತ್ಯಜಿಸಿ ಅಣ್ಣನಿಗೆ ಕೈಂಕರ್ಯಮಾಡಬೇಕೆಂದು ಹೊರಟ ಲಕ್ಷ್ಮಣನನ್ನು "ಲಕ್ಷ್ಮಣೋ ಲಕ್ಷ್ಮಿಸಂಪನ್ನಃ" ಎಂದು ಹೇಳಿದಹಾಗೆ ಆತನಿಗೆ ಆಗ ಇದ್ದ ಐಶ್ವರ್ಯವು, ಮತ್ತು ಮೊಸಳೆಯಿಂದ ಪೀಡಿತನಾಗಿದ್ದ ಗಜೇಂದ್ರನಿಗೆ, "ಸ ತು ನಾಗವರಶ್ರೀಮಾನ್" ಎಂದು, ಆಗ ಇದ್ದ ಐಶ್ವರ್ಯವು ಯಾವುದೋ ಅದು; ವಿಷ್ಣುಸಂಬಂಧಿಯಾಗಿ ಶ್ರೀವೈಷ್ಣವನಾಗಿರುವ ಸಂಪತ್ತು. ಇಂತಹ ಸಂಪತ್ತನ್ನು ಹೊಂದಿಸುತ್ತದೆಂಬ ಭಾವವು. **ಅಡಿಯಾರ್ ಪಡುತು ಯರ್ ಆಯಿನ ಎಲ್ಲಾಮ್** - ತನ್ನ ಭಕ್ತರು ಅನುಭವಿಸುವ ದುಃಖಗಳೆಲ್ಲ ವನ್ನು, **ನಿಲಂ ತರಂ ಶೆಯ್ಯುಮ್** - ನಿರ್ಮೂಲಮಾಡಿ ಬಿಡುತ್ತದೆ, ಅಷ್ಟು ಮಾತ್ರವೇ ಅಲ್ಲದೆ, **ನೀಳ್ ವಿಶುಂಬು ಅರುಳುಮ್** - ಪರಮ ಪದವನ್ನೂ ಕೃಪೆಯಾ ಹೊಂದಿಸುತ್ತದೆ, **ಅರುಳೊಡು** - ಆ ಕೃಪೆಯೊಂದಿಗೆ, **ಪೆರುನಿಲಮ್ ಅಳಿಕ್ಕುಮ್** - "ಕಿಂಕರತ್ವಾಧಿ ರಾಜ್ಯಂ" ಎಂದು ಹೇಳಿರುವ ಹಾಗೆ ಆತನಿಗೆ ದಿವ್ಯ ವೈಕುಂಠದಲ್ಲಿ ಕೈಂಕರ್ಯವನ್ನು ಮಾಡುವ ಯೌವರಾಜ್ಯ ಮಹಾಪದವಿಯ ನ್ನುಂಟುಮಾಡುತ್ತದೆ. **ವಲಂತರುಮ್**-ಪರಿಪೂರ್ಣ ಬ್ರಹ್ಮಾನುಭವಕ್ಕೆ ಬೇಕಾದ ಸತ್ತೆಯನ್ನೂ ಕೊಡುತ್ತದೆ, **ಮಟ್ರುಮ್ ತನ್ದಿಡುಮ್** - "ಜಕ್ಷತ್ ಕ್ರೀಡನ್ ರಮಮಾಣಃ" "ಕಾಮಚಾರೋಭವತಿ" ಇತ್ಯಾದಿಗಳಲ್ಲಿ ಹೇಳಿರುವ ಇತರ ಕೋರಿಕೆಗಳನ್ನೂ ಉಂಟುಮಾಡುತ್ತದೆ. **ಪೆಟ್ರತಾಯಿನುಮ್ ಆಯಿನಶೆ ಯ್ಯುಮ್** - ಸ್ತನ್ಯವನ್ನು ಕೊಟ್ಟು ಸಾಕಿ ಸಲಹಿದ ತಾಯಿಗಿಂತಲೂ ಹೆಚ್ಚಾಗಿ ಹಿತಗಳನ್ನುಂಟುಮಾಡುತ್ತದೆ; ಈ ಲೋಕದಲ್ಲಿರುವ ಕಾಲದಲ್ಲೇ ಕುಚೇಲ ರಿಗೆ ಅಪ್ರಾರ್ಥಿತವಾಗಿ ಒದಗಿದಹಾಗೆ ಸಮಸ್ತಾಭೀಷ್ಟಗಳನ್ನು ಒದಗಿಸು ತ್ತದೆ. ಹೀಗೆ ನಾರಾಯಣಾವೆನ್ನುಂ ನಾಮಂ ಇವೆಲ್ಲವನ್ನೂ ಉಂಟುಮಾಡು ತ್ತದೆ ಎಂಬ ಭಾವವು. **ಕುಲಂ ತರುಮ್** ಎಂಬ ಪಾಶುರದಲ್ಲೂ, ಮತ್ತು ತಿರುಪ್ಪಲ್ಲಾಂಡಿನಲ್ಲಿ "**ಪಣ್ಡೈ ಕುಲತ್ತೈ ತವಿರ್‌ನ್ದು**" ಎಂಬಲ್ಲೂ, ಕುಲಶಬ್ದವು ಉತ್ಕೃಷ್ಟ ವೈಷ್ಣವಗೋಷ್ಠಿಯನ್ನು ಬೋಧಿಸುತ್ತದೆಯೇ ವಿನಾ, ಉತ್ಕೃಷ್ಟ ಜಾತಿಯನ್ನು ಬೋಧಿಸುವದಿಲ್ಲವು. ಜಾತಿಯು ಜನ್ಮತಃ ಬಂದುದು, ಅದನ್ನು ಬದಲಾಯಿಸಲು ಸಾಧ್ಯವಲ್ಲವು. ಕುಲ ವನ್ನು ಗುಣಗಳಿಂದ, ವೃತ್ತಿಯಿಂದ, ಉತ್ಕೃಷ್ಟವಾಗಿ ಮಾಡಿಕೊಳ್ಳಬಹುದು. ಆದುದರಿಂದ "**ಕುಲಂ ತರುಮ್**" ಇತ್ಯಾದಿಗಳ ಅಭಿಪ್ರಾಯವೇನೆಂಬುದನ್ನು ಸ್ಪಷ್ಟಪಡಿಸುತ್ತಾರೆ. ತಾವು ಹೇಳುವದೂ ಅಭಿಯುಕ್ತರಾದ ಪೆರಿಯವಾಚ್ಚಾನ್

**ಆನಾಲ್ ಅವರ್‌ಗಳೋಡು ಪೆಣ್ ಕೊಡುತ್ತು ಕೊಳ್ಳುಗಿರದಿಲ್ಲೈಯೇ ಎನ್ನಿಲ್? ಅದು ಜಾತಿ ನಿಬಂಧನಮ್. ಶ್ಲಾಘ್ಯೈ, ಗುಣನಿಬಂಧನ ಯೆನ್ರು ನಿಷ್ಕರ್ಷಿತ್ತಾರ್ ಗಳ್. (೧) "ಕುಲಂತರುಮ್" ಎನ್ರದುವುಮ್, (೨) "ಪಣ್ಡೈಕ್ಕುಲತ್ತೈತ್ತವಿರ್ನ್ದು" ಎನ್ರದುವುಮ್, ತೊಣ್ಡಕ್ಕುಲತ್ತಿಲ್ ಉತ್ಕರ್ಷಮ್ ಶೊನ್ನಪಡಿ.**

ಪಿಳ್ಳೈಯವರ ಅಭಿಪ್ರಾಯವೇ ಎಂದು ತಿಳಿಸುತ್ತಾರೆ. **ಆನಾಲ್** - ಶೂದ್ರನು ಭಗವದ್ಭಕ್ತನಾಗಿ ಪ್ರಪನ್ನನಾದರೆ, ಇದರಿಂದ ಆತನು ಶೂದ್ರನಲ್ಲವು ವಿಪ್ರನೇ ಎಂದು ಭಾವಿಸತಕ್ಕದ್ದು ಎಂದರೆ,ವಿಪ್ರಜಾತಿಯೇ ಪ್ರಾಪ್ತವಾಗುತ್ತದೆ ಎಂದು ಭಾವಿಸಿದರೆ, **ಅವರ್‌ಗಳೋಡು** - ಅಂತವರೊಂದಿಗೆ, **ಪೆಣ್ ಕೊಡುತ್ತು ಕೊಳ್ಳುಗಿರದುಇಲ್ಲೈಯೇ ಎನ್ನಿಲ್** - ಕನ್ಯಾದಾನ ಪರಿಗ್ರಹಗಳು ಎಂದರೆ **ಹೆಣ್ಣು** ಕೊಟ್ಟು ಹೆಣ್ಣು ತರುವದು ಇಲ್ಲವಲ್ಲಾ ಎಂದರೆ, **ಅದು ಜಾತಿನಿಬಂಧನಮ್**- ಹಾಗೆ ಕನ್ಯಾದಾನ ಪರಿಗ್ರಹಾದಿಗಳು ಜನ್ಮತಃ ಬಂದ ಜಾತಿಗೆ ಅನುಸಾರವಾಗಿ ನಡೆಯತಕ್ಕವು **ಶ್ಲಾಘ್ಯೈ** - ಶೂದ್ರನು ಶೂದ್ರನಲ್ಲವು ವಿಪ್ರನಿಗೆ ಸಮಾನನೆಂದು, **"ಕುಲಂ ತರುಮ್"** ಎಂದು ಶ್ಲಾಘಿಸಿಸೋಣವಾದರೋ, **ಗುಣನಿಬಂಧನಯೆನ್ರು** - ಆತನ ಉತ್ಕೃಷ್ಟವೃತ್ತಿಯನ್ನು ಸೂಚಿಸುವ ಗುಣ ಮೂಲಕವಾಗಿ ಎಂದು, **ನಿಷ್ಕರ್ಷಿತ್ತಾರ್‌ಗಳ್** - ಎಂದು ಅಭಿಯುಕ್ತರಾದ ಪೆರಿಯವಾಚ್ಚಾನ್ ಪಿಳ್ಳೈಯವರೇ ವ್ಯವಸ್ಥೆ ಮಾಡಿರುತ್ತಾರೆ. ಹಾಗಾದರೆ **ಕುಲಂತರುಮ್** ಎಂದೂ **"ಪಣ್ಡೈ ಕುಲತ್ತೈತವಿರ್ನ್ದು"** ಎಂದು ಮೊದಲಿದ್ದ ಕುಲವು ತೊಲಗಿ ಉತ್ಕೃಷ್ಟ ಕುಲವು ಪ್ರಾಪ್ತವಾಗುತ್ತದೆಂದು ಹೇಳಿದ ಈ ಪಾಶುರಗಳ ಅಭಿಪ್ರಾಯವೇನು? ಎಂದರೆ, ಉತ್ತರವನ್ನು ದಯಪಾಲಿಸುತ್ತಾರೆ:—**ಕುಲಂತರುಮ್- ಎನ್ರದುವುಮ್** ಎಂದು ಹೇಳುವುದೂ, **"ಪಣ್ಡೈಕುಲತ್ತೈತವಿರ್ನ್ದು"** ಎಂದು ಹೇಳುವದೂ ಸಹ, **"ತೊಂಡಕ್ಕುಲತ್ತಿಲ್"** - ಭಗವದ್ದಾಸರಾದ ವೈಷ್ಣವ ಗೋಷ್ಠಿಯಲ್ಲಿರುವದಕ್ಕೆ, **ಉತ್ಕರ್ಷಮ್ ಶೊನ್ನಪಡಿ** - ಯೋಗ್ಯತೆಯುಂಟೆಂಬ ಮಾಹಾತ್ಮ್ಯೆಯನ್ನು ಹೇಳಿದಹಾಗೆ ಎಂದು **ಭಾವಿಸತಕ್ಕದ್ದು**; **ಇವನು** ಸಾಮಾನ್ಯ ಶೂದ್ರನ ಹಾಗೆ **ಅಲ್ಲದೆ** ಭಾಗವತನಾಗಿ ಸ್ವಲ್ಪ ಉತ್ಕರ್ಷವನ್ನು ಸಂಪಾದಿಸಿಕೊಂಡುದದರಿಂದ, ಸಾಮಾನ್ಯ ಶೂದ್ರನಹಾಗೆ ಭಾವಿಸತಕ್ಕದ್ದು ಯುಕ್ತವಲ್ಲವು. ಆತನು ವೈಷ್ಣವ ಗೋಷ್ಠಿಗೂ **ಅರ್ಹ**ನು ಎಂದು ಹೇಳಿದಂತಾಯಿತು ಇಷ್ಟೇವಿನಾ ಇನ್ನು ಮಿಕ್ಕ ಸಹಪಙ್ಕ್ತಿಭೋಜನ, ನಿಮಂತ್ರಣ ನಿತ್ಯ ನೈಮಿತ್ತಿಕಾನುಷ್ಠಾನಗಳು, ಕನ್ಯಾದಾನ ಪರಿಗ್ರಹ ಮೊದಲಾದ **ಸವ್ಯವಹಾರ**ಗಳಿಗೆ ಯೋಗ್ಯನಾಗುವದಿಲ್ಲವು; ಏತ

(೧) ಪೆರಿ. ತಿರು. ೧. ೧. ೬. (೨) ಪಲ್ಲಾಂಡು. ೫.

ದೇವತಾಂತರ ಸಂಕೀರ್ಣಕುಲಮನ್ನೇ ಇವನದು. (೧) ಮಾಜನಿಷ್ಟಸ ನೋ ವಂಶೇ ಜಾತೋವಾ ದ್ರಾಗ್ನಿಪದ್ಯತಾಂ। ಆಜನ್ಮ ಮರಣಂ ಯಸ್ಯ ವಾಸುದೇ

---

ಕ್ಕೆಂದರೆ ಜನ್ಮತಃ ಬಂದ ಜಾತಿಯು ವ್ಯತ್ಯಾಸವಾಗುವದಿಲ್ಲವಾದುದರಿಂದ ಎಂದು ಗ್ರಹಿಸತಕ್ಕದ್ದು. ಹಾಗಾದರೆ ಉತ್ಕರ್ಷ ಹೇಗೆ ಎಂದರೆ ದೇವತಾಂತರ ಸಂಕೀರ್ಣಕುಲಮನ್ನೇ ಇವನದು-ಈತನ ಎಂದರೆ ಈಗ ಈ ಶೂದ್ರಪ್ರಪನ್ನನ ಕುಲವು ವಿಷ್ಣುವಲ್ಲದೆ ಇತರ ದೇವತೆಯ ಸಂಬಂಧವಿರುವ ನಿಕೃಷ್ಟಕುಲವಲ್ಲವಷ್ಟೇ; ಏಕೆಂದರೆ ಆತನು ಈಗ ವೈಷ್ಣವ ಸಂಬಂಧವನ್ನು ಹೊಂದಿ ಶರಣಾಗತಿಯನ್ನು ಮಾಡಿ ವಿಷ್ಣು ಭಕ್ತನಾಗಿರುತ್ತಾನೆಯಾದುದರಿಂದ ಎಂಬ ಭಾವವು. "ಅಂಡಕ್ಕುಲತ್ತುಕ್ಕಧಿಪತಿಯಾಗಿ" ಎಂಬುದು ಪಲ್ಲಾಂಡು ಪಾಶುರವು. "ತೊಣ್ಡಕ್ಕುಲತ್ತಿಲುಳ್ಳೀರ್ ವನ್ದಡಿ ತೊಳುದಾಯಿರನಾಮಂ ಶೊಲ್ಲಿಪಣ್ಡೈ ಕ್ಕುಲತ್ತೈತ್ತವಿರ್ನ್ದು ಪಲ್ಲಾಂಡುಪಲ್ಲಾಯಿರತ್ತಾಂಡೆನ್ಮಿನೇ" ಇದು ಉತ್ತರಾರ್ಧವು. ದಾಸವೃತ್ತಿಯೇ ಉಚಿತವಾದುವೆಂದು ಸರ್ವೇಶ್ವರನಿಗೆ ಕೈಙ್ಕರ್ಯವೃತ್ತಿಯನ್ನು ಮಾಡುವ ಕುಲದಲ್ಲಿಗುವ ನೀವು ಬಂದು ಸ್ವಾಮಿಯ ದಿವ್ಯಪಾದಂಗಳಿಗೆರಗಿ, ಸಹಸ್ರನಾಮವನ್ನು ಹೇಳಿ, ನೀವು ಹಿಂದಿನ ಕಾಲದಲ್ಲಿ ಭಗವದ್ವಿಮುಖರಾಗಿರುವ ದೆಶೆಯನ್ನು ತ್ಯಜಿಸಿ. ಸ್ವಾಮಿಗೆ ಮಂಗಳಾಶಾಸನವನ್ನು ಮಾಡಿರಿ, ಎಂಬುದು ಈ ವಾಕ್ಯ ತಾತ್ಪರ್ಯವು ಕುಲಂ ತರುಂ ಎಂದರೆ ಹೊಸಕುಲವು ಉಂಟಾಗುತ್ತದೆ ಎಂದು ಕುಲಂ ತರುಂ ಎಂಬುದರಿಂದ ತೋರಿ ಬರುತ್ತದೆ; ಪಂಡೈಕುಲತ್ತೈತವಿರನ್ದು ಎಂಬಲ್ಲಿ ಪೂರ್ವ ಕುಲವನ್ನು ಬಿಟ್ಟು ಎಂದರ್ಥವಾಗುತ್ತದೆ; ಹೀಗಿರುವಾಗ ಸರಿಯಾದ ಅರ್ಥವು ಯಾವುದು ಎಂದು ಹೇಳಲು ಹೊರಟು ಕುಲಂತರುಂ ಎಂದರೆ ಭಾಗವತ ಸಮೂಹಕ್ಕೆ ಸೇರುವ ಯೋಗ್ಯತೆಯನ್ನು ಸಂಪಾದಿಸಿಕೊಡುತ್ತದೆ ಎಂಬರ್ಥವೇ ವಿನಾ, ಬ್ರಾಹ್ಮಣ್ಯಾದಿ ಉತ್ಕೃಷ್ಟಜಾತಿಯನ್ನು ಕೊಡುತ್ತದೆ ಎಂಬರ್ಥವಲ್ಲವು ಎಂದು ಉಪದೇಶಿಸಲ್ಪಟ್ಟಿತು ಹಾಗೆಯೇ ಪಣ್ಡೈಕುಲತ್ತೈತ್ತವಿರ್ನ್ದು ಎಂದರೆ ಪ್ರಾಚೀನವಾದ ದೇವತಾಂತರ ಸಂಬಂಧವುಳ್ಳವರ ಸಮೂಹವನ್ನು ತ್ಯಜಿಸಿ ಎಂಬರ್ಥವು, ಪ್ರಪನ್ನನಿಗೆ ಅಂತಹ ದೇವತಾಂತರ ಸಂಬಂಧವೆಂದಿಗೂ ಇರುವದಿಲ್ಲವೆಂಬ ಪೂರ್ಣನಂಬಿಕೆಯಿಂದ, ಸಂಕೀರ್ಣ ಕುಲಮನ್ನೇ ಇವನದು ಎಂದು ಹೇಳಿದರು. ಈ ಅಭಿಪ್ರಾಯವನ್ನು ಸಮರ್ಥಿಸುವದಕ್ಕಾಗಿ ವರಾಹ ಪುರಾಣವಾಕ್ಯವನ್ನು ಉದಾಹರಿಸುತ್ತಾರೆ.— (೧) "ಯಸ್ಯ-ಯಾವನಿಗೆ, ಆಜನ್ಮಮರಣಂ - ಹುಟ್ಟಿದ್ದು ಮೊದಲು ಸಾಯುವತನಕ, ವಾಸು

---

(೧) ವರಾಹ ಪುರಾಣ.

ವೋ ನದೈವತಂ" ಎನ್ರಿರೇ ಏಕಾಂತಿ ಕುಲತ್ತಿರ್ಪ್ಪಾಶುರವ್. ಇಪ್ಪಡಿ ವೇರೋರು ಕುಲಮಾನಾಲುಮ್, ಜಾತಿಶಬ್ದಮುಮ್, ಕುಲಶಬ್ದಮುಮ್ ಭಿನ್ನಾರ್ಥಮಾಗಮುಮ್ ಪ್ರಯುಕ್ತಮಾಗೈಯಾಲೇ ಜಾತಿಭೇದಿಯಾದು, ಕುಲಂ ಭೇದಿಕ್ಕುಮ್. ತಿರು (ಚ್ಚುರಪಿ) ಸುರಭಿಯಾನಾಲುಮ್ ಗೋತ್ವಂ ಕಳಿಯಾದಿರೇ.

---

ದೇವನು, ನ ದೈವತಂ - ಆರಾಧ್ಯ ದೇವತೆಯಾಗಲಿಲ್ಲವೋ, ಸಃ - ಅಂತಹ ವಿಷ್ಣುವಿಮುಖನು, ನಃ - ಭಗವತ್ಪ್ರಿಯರಾದ ನಮ್ಮ, ವಂಶೇ - ವಂಶದಲ್ಲೇ, ಮಾಜನಿಷ್ಟ - ಎಂದಿಗೂ ಹುಟ್ಟದೇ ಇರಲಿ; ಜಾತೋವಾ-ಒಂದು ವೇಳೆ ನಮ್ಮಗಳ ದುರದೃಷ್ಟದಿಂದ ಹುಟ್ಟಿದರೂ, ದ್ರಾಕ್ - ಕ್ಷಿಪ್ರದಲ್ಲೇ, ವಿಪದ್ಯತಾಂ - ನಾಶ ಹೊಂದಲಿ," ಎನ್ರಿರೇ - ಎಂದಲ್ಲವೇ, ಏಕಾಂತಿ ಕುಲತ್ತಿರ್ಪ್ಪಾಶುರಂ-ಭಗವತ್ಪ್ರಪನ್ನರಾಗಿ ಏಕಾಂತಿಗಳೆನಿಸುವವರ ಹೇಳಿಕೆಯು ಎಂದರೆ ಪ್ರಾರ್ಥನೆಯು. ಹೀಗೆ ಹೊಸದಾಗಿ ಕುಲವು ಏರ್ಪಡುತ್ತದೆ ಎಂದರೆ ಜಾತಿಯು ಏರ್ಪಡುತ್ತದೆ ಎಂಬರ್ಥವಲ್ಲವು, ಜಾತಿ ಕುಲ ಶಬ್ದಗಳು ಭಿನ್ನಾರ್ಥಗಳುಳ್ಳವೆಂದು ಹೇಳುತ್ತಾರೆ. ಕುಲವು ಸಮೂಹವಾಚಿಯಾದುದರಿಂದ ಉತ್ಕೃಷ್ಟ ಸಂಘಕ್ಕೆ ಸೇರಿದವನೆಂಬರ್ಥವು ಏರ್ಪಡುತ್ತದೆ. ಹೊಸ ಜಾತಿಯೇ ಉಂಟಾಗುತ್ತದೆಂಬರ್ಥವಲ್ಲವೆಂದು ತಿಳಿಸುತ್ತಾರೆ, ಏತಕ್ಕೆಂದರೆ ಜಾತಿಯು ಜನ್ಮತಃ ಉಂಟಾಗುವದರಿಂದ ಹುಟ್ಟಿನಿಂದ ಬಂದ ಜಾತಿಯು ಸಾಯುವವರೆಗೂ ಅನುವರ್ತಿಸುತ್ತದೇ ವಿನಾ ಬದಲಾಯಿಸುವದಿಲ್ಲವು ಎಂದು ಮುಂದೆ ಹೇಳುತ್ತಾರೆ.—ಇಪ್ಪಡಿ - ಹೀಗೆ, ವೇರೋರು ಕುಲಮಾನಾಲುಮ್ - ವಿಷ್ಣು ಪ್ರಸನ್ನತೆಯಿಂದ ಒಂದು ಹೊಸ ಕುಲವು ಈತನಿಗೆ ಉಂಟಾದರೂ, ಜಾತಿಶಬ್ದವೂ ಕುಲಶಬ್ದವೂ, ಭಿನ್ನಾರ್ಥಮಾಗವುಮ್ ಪ್ರಯುಕ್ತ ಮಾಗೈಯಾಲೇ - ಎರಡು ಬೇರೆ ಬೇರೆ ಅರ್ಥವುಳ್ಳವುಗಳಾಗಿ ಪ್ರಯೋಗವಿರುವದರಿಂದ, ಜಾತಿ ಭೇದಿಯಾದು - ಜನ್ಮತಃ ಬಂದಜಾತಿಯು ಒಂದು ಜನ್ಮದಲ್ಲೇ ವ್ಯತ್ಯಾಸವನ್ನು ಹೊಂದುವದಿಲ್ಲವು, ಕುಲಂ ಭೇದಿಕ್ಕುಮ್-ತಾನು ಸೇರುವ ಸಂಘಾನುಸಾರವಾಗಿ ವ್ಯತ್ಯಾಸವನ್ನು ಹೊಂದಬಲ್ಲದು. ಇದನ್ನು ಒಂದು ದೃಷ್ಟಾಂತಮೂಲಕ ವ್ಯಕ್ತಪಡಿಸುತ್ತಾರೆ. ತಿರುಸುರಭಿ ಯಾನಾಲುಮ್-ಮೊದಲು ಸಾಧಾರಣ ಗೋವು ಆಗಿದ್ದು ಈಗ ಅದು ಚಕ್ರಾಂಕನ ಸಂಸ್ಕಾರವನ್ನು ಹೊಂದುವದರಮೂಲಕ ಉತ್ಕೃಷ್ಟತೆಯನ್ನು ಹೊಂದಿ, ದೇವ ಗೋವು ಎಂದೆನಿಸಿದರೂ, ಗೋತ್ವಂ ಕಳಿಯಾದಿರೇ-ಗೋತ್ವವು ಹೋಗಲಿಲ್ಲವಷ್ಟೇ, ಈಗಲೂ ಜನ್ಮತಃ ಅದು ಗೋವೇಯಲ್ಲವೇ? ಎಂಬ ಭಾವವು. ಜಾತಿ ಕುಲಶಬ್ದಗಳು ಭಿನ್ನಾರ್ಥಗಳುಳ್ಳವೆಂಬುದಕ್ಕೆ ಉತ್ಪನ್ನದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ

**ಶಾಶ್ವತಾಃ**" (ಗೀ. ೧-೪೩) ಎಂದು ಗೀತೆಯಲ್ಲಿ ಎರಡುವಿಧ ಧರ್ಮಗಳೂ ಸಹಪಠಿತವಾಗಿರುವದರಿಂದ ಭಿನ್ನಾರ್ಥಗಳುಳ್ಳವೆಂಬುದು ಸಿದ್ಧವು. ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರಿಗೆ ಪೃಥಕ್ಪೃಥಕ್ಕಾಗಿ ವಿಧಿಸಲ್ಪಟ್ಟ ಧರ್ಮಗಳು ಜಾತಿ ಧರ್ಮಗಳು. ಬ್ರಾಹ್ಮಣರೇ ಮೊದಲು ಬ್ರಹ್ಮಚಾರಿಗಳಾಗಿ, ಅನಂತರ ಗೃಹಸ್ಥ ರಾಗಿ, ಅನಂತರ ಸನ್ಯಾಸಿಗಳಾಗಿ ಹೀಗೆ ಬೇರೆ ಬೇರೆ ಸಂಘಗಳಿಗೆ ಸೇರಬಹುದು. ಇವುಗಳೂ ಪ್ರತ್ಯೇಕ ಪ್ರತ್ಯೇಕವಾಗಿರುವ ಕುಲಧರ್ಮಗಳು. ಇನ್ನೂ ಬೇರೆ ಕಾರಣ ಗಳಿಂದ ಕುಲಧರ್ಮಗಳು ವ್ಯತ್ಯಸ್ತವಾಗಬಹುದು. ಹಾಗೆಯೇ "**ದೇಶಜಾತಿ ಕುಲಧರ್ಮಾಃ ಆಮ್ನಾಯೈ ರವಿರುದ್ಧಾಃ ಪ್ರಮಾಣಂ**" ಎಂಬಲ್ಲಿಯೂ **ಜಾತಿ ಕುಲಧರ್ಮಾಃ** ಎಂದು ಸಹಪಠಿತವಾಗಿರುವದರಿಂದ ಜಾತಿ ಕುಲಶಬ್ದಗಳು ಭಿನ್ನಾ ರ್ಥಗಳನ್ನುಳ್ಳವು.

ಪೂರ್ವಪಕ್ಷಿಗಳು ಹೇಳುತ್ತಾರೇನಂದರೆ:- ಈ ನಿಮ್ಮ ಸುರಭಿ ದೃಷ್ಟಾಂತದಹಾಗ ಲ್ಲವು. ಗೋತ್ರವೇನೋ ಕಳೆಯಲಿಲ್ಲವೆಂಬುದು ಸತ್ಯವು;ಅದು ಆಮರಣಾಂತವಾಗಿ ಅನುವರ್ತಿಸುವದು ಯುಕ್ತವು; ಬ್ರಾಹ್ಮಣನಿಗೂ ಶೂದ್ರನಿಗೂ ಅವಯವ ಸಂಸ್ಥಾನಮೂಲಕವಾದ ಯಾವ ವ್ಯತ್ಯಾಸವೂ ಇಲ್ಲವು. ಆದುದರಿಂದ ಪ್ರಪತ್ತಿ ಸಂಸ್ಕಾರಬಲದಿಂದ **ನಶೂದ್ರಾ ಭಗವದ್ಭಕ್ತಾಃ** ಎಂದು ಹೇಳಿ ಅವರು ವಿಪ್ರಾಃ-ಬ್ರಾಹ್ಮಣರೇ ಎಂದು ಹೇಳಲ್ಪಟ್ಟಿತು. ಭಗವಂತನಿಗೇನೇ ಒಬ್ಬನ ವಿಷಯದಲ್ಲಿ ದೇಶಕಾಲ ಪ್ರವೃತ್ತಿ ಭೇದದಿಂದ ನಿಗ್ರಹಾನುಗ್ರಹಗಳು ಉಂಟಾ ಗುತ್ತವೆ; ನಿಗ್ರಹರೂಪದಲ್ಲಿ ಇದುವರೆಗೂ ಶೂದ್ರನಾಗಿರತಕ್ಕದ್ದೆಂದು ವಿಧಿಸಿ, ಈಗ ತನ್ನ ಭಕ್ತನಾದುದರಿಂದ ಅನುಗ್ರಹರೂಪದಲ್ಲಿ ಬ್ರಾಹ್ಮಣನಾಗು ಎಂದುಅನು ಗ್ರಹಿಸಕೂಡದೇ ? ಇದೂ ಅಲ್ಲದೆ ವಿಶ್ವಾಮಿತ್ರ ವೀತಹವ್ಯರೇ ಮೊದಲಾದ ವರಿಗೆ ಬ್ರಾಹ್ಮಣಜಾತಿ ಪ್ರಾಪ್ತಿಯನ್ನು ಶಾಸ್ತ್ರಗಳು ಬೋಧಿಸುತ್ತವೆಯಲ್ಲಾ ? **ಗೋತ್ರಂ ಕಳೆಯೂದಿರೇ** ಎಂದು ಜಾತಿಬೇದವು ಆಗುವದೇ ಇಲ್ಲವೆಂದು ಹೇಳಿಬಿಟ್ಟಿರಿ. ಭ್ರಮರಕೀಟನ್ಯಾಯವು ಜಾತಿಪ್ರಾಪ್ತಿಯನ್ನೂ ಅನುಮೋದಿಸು ತ್ತದೆಯಲ್ಲಾ ? ಎಂದು ಹೀಗೆಲ್ಲಾ ಪೂರ್ವಪಕ್ಷ ತಂದರೆ ಅದಕ್ಕೆ ಸಮಾಧಾನವು ಹೇಗೆಂದರೆ:—"**ವರ್ಣಾಶ್ರಮಾಚಾರವತಾ ಪುರುಷೇಣ ಪರಃ ಪುಮಾನ್ । ವಿಷ್ಣುರಾರಾಧ್ಯತೇ ಪಂಥಾ ನಾನ್ಯ ಸ್ತತ್ತೋಷಕಾರಕಃ ॥** (ವಿ. ಪು. ೩ ೮೯) **ಯತಃಪ್ರವೃತ್ತಿರ್ಭೂತಾನಾಂ ಯೇನಸರ್ವಮಿದಂತತಂ । ಸ್ವಕರ್ಮಣಾತ ಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ । ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ । ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್**" (ಗೀ. ೧೮. ೪೬-೮) "**ತಸ್ಮಾತ್ಸಪ್ರಣಂ ಶೂದ್ರೋ ಮನ್ತ್ರಾಮಾನಿ**

ನಕೀರ್ತಯೇತ್"(ಭಾ.ಅ. ೧೨೮.೧೪) ಶ್ರುತಿಸ್ಮೃತಿ ಮರ್ಮೈವಾಜ್ಞಾ ಯಸ್ತಾ ಮುಲ್ಲಂಘ್ಯ ವರ್ತತೇ। ಆಜ್ಞಾಚ್ಛೇದೀ ಮಮ ದ್ರೋಹೀ ಮದ್ಭಕ್ತೋಽಪಿ ನ ವೈಷ್ಣವಃ"(ವಿ.ಧ.೬.೪೧) ಇತ್ಯಾದಿ ಅನೇಕ ಪ್ರಮಾಣಗಳಿಂದ ವರ್ಣಾಶ್ರಮಧರ್ಮಗಳು ಮುಖ್ಯವಾಗಿ ಪಾಲಿಸೀಯಗಳೆಂದೂ, ಅವುಗಳಿಂದಲೇ ವಿಷ್ಣುವು ಆರಾಧಿಸಲ್ಪಡುವನೇ ವಿನಾ ಬೇರೆ ಇನ್ನು ಯಾವುದರಿಂದಲೂ ಆತನು ಅಷ್ಟು ಸಂತುಷ್ಟನಾಗುವದಿಲ್ಲವೆಂದೂ, ಮನುಷ್ಯನು ತನ್ನ ವರ್ಣಕ್ಕೆ ಅನುಗುಣವಾದ ಧರ್ಮಗಳಿಂದಲೇ ಸಿದ್ಧಿಯನ್ನು ಹೊಂದುವನೆಂದೂ, ಮತ್ತು ತನಗೆ ವಿಹಿತವಾದ ಕರ್ಮಯೋಗನಿಷ್ಠೆಯೇ ಕಷ್ಟವಾದರೂ ಬಿಡತಕ್ಕದ್ದಲ್ಲವೆಂದೂ, ಶೂದ್ರನಾದವನು ತನ್ನ ಧರ್ಮವನ್ನು ಬಿಟ್ಟು ಪ್ರಣವ ಸಹಿತವಾಗಿ ನನ್ನ ನಾಮ ಸಂಕೀರ್ತನೆ ಮಾಡಕೂಡದೆಂದೂ, ಶ್ರುತಿ ಸ್ಮೃತಿಗಳು ಸರ್ವೇಶ್ವರನ ಆಜ್ಞೆಗಳೆಂದೂ ಅದನ್ನುಲ್ಲಂಘಿಸಿ ನಡೆಯುವವನು ಆತನಿಗೆ ದ್ರೋಹಿ ಎಂದೂ, ಹೀಗೆಲ್ಲಾ ಹೇಳಿರುವದರಿಂದ ವರ್ಣಾಶ್ರಮ ಧರ್ಮಗಳು ಸರ್ವಥಾ ಉಲ್ಲಂಘಿಸತಕ್ಕವಲ್ಲವೆಂದೂ, ಉಲ್ಲಂಘಿಸಿದರೆ ಅನೇಕ ಪ್ರತ್ಯವಾಯಗಳುಂಟೆಂದೂ, ಶಾಸ್ತ್ರಗಳು ಉದ್ಘೋಷಿಸುತ್ತವೆ ಎಂಬುದು ತಾತ್ಪರ್ಯವು. ಗೀತಾಶಾಸ್ತ್ರವು ಇದಕ್ಕಾಗಿಯೇ ಮುಖ್ಯವಾಗಿ ಏರ್ಪಟ್ಟಿದೆ. ಆದುದರಿಂದ "ನ ಶೂದ್ರಾ ಭಗವದ್ಭಕ್ತಾಃ" ಎಂಬಲ್ಲಿ ಜಾತಿ ಬೋಧಕವಾದ ಶೂದ್ರ ವಿಪ್ರ ಶಬ್ದಗಳೇ ಇರುವದರಿಂದ, ಸಾವಿರಾರು ಪ್ರಮಾಣಗಳಿಗೆ ವಿರೋಧವಾಗುವ ಅರ್ಥವನ್ನು ಹೇಳುವದು ಉಚಿತವಲ್ಲವೆಂದೂ, ಹೊಸಜಾತಿಯು ಅವರಿಗೆ ಉಂಟಾಗುತ್ತದೆಂಬರ್ಥವಲ್ಲವೆಂದೂ, ತಿಳಿಸುವದಕ್ಕಾಗಿ ತಾವು ಹೇಳಿದ ದೇವಸ್ಥಾನದ ಗೋವಿನ ದೃಷ್ಟಾಂತವು ಸಾಧುವಾದುದೇ ಎಂಬ ಭಾವವು. ಆದರೆ ವಿಶ್ವಾಮಿತ್ರಾದಿಗಳಿಗೆ ಬ್ರಾಹ್ಮಣ್ಯ ಪ್ರಾಪ್ತಿಯು ಶ್ರುತಿ ಸ್ಮೃತ್ಯುಪದೇಶಕ್ಕೆ ವಿರುದ್ಧವಾದುದು ಹೇಗೆ ಪ್ರಾಪ್ತಿಯಾಯಿತು ಎಂದು ಆಕ್ಷೇಪಿಸಿದರೆ, ಶ್ರೀ ವಿಶ್ವಾಮಿತ್ರರ ಪ್ರಯತ್ನವು ಅನಿರ್ವಚನೀಯವು, ಅಂತಹ ಪ್ರಯತ್ನವು ಪರಮ ದುಸ್ತರವು ಕಾರಣಾಂತರವೂ ಉಂಟೆಂದು ಮುಂದೆ ಹೇಳಲ್ಪಡುತ್ತದೆ. ಆದುದರಿಂದ ಆ ಇತಿಹಾಸವು ಮುಖ್ಯವಾಗಿ ಜನ್ಮತಃ ಬರತಕ್ಕ ಜಾತಿಯನ್ನು ಬದಲಾಯಿಸುವದು, ಪರಮ ದುಸ್ತರವು, ಸುತರಾಂ ಕೂಡದೆಂಬುದನ್ನೇ ಬೋಧಿಸುತ್ತದೆಂದು ತಿಳಿಯತಕ್ಕದ್ದು. ಆದರೇ ಒಂದೇ ಜನ್ಮದಲ್ಲೇ ಜಾತಿಭೇದ ಉಂಟೆಂದು ಭ್ರಮರಕೀಟ ದೃಷ್ಟಾಂತವನ್ನು ಹೇಳಿದೆವಲ್ಲಾ ಅದು ಹೇಗೆ ಎಂದರೆ ಶ್ರುತಿಯಲ್ಲಿ "ಜಾಯಸ್ವ ಮ್ರಿಯಸ್ವ" ಎಂಬುವಹಾಗೆ ಕೆಲವು ಪ್ರಾಣಿಗಳು ಹುಟ್ಟೋದು ಸಾಯುವದು ಹೀಗೆ ಬೇರೇ ಜನ್ಮ ಭೇದವೆಂದು ಗ್ರಹಿಸತಕ್ಕದ್ದು. ಆಗಲಿ ನ ಶೂದ್ರಾಭಗವದ್ಭಕ್ತಾಃ ಎಂಬಲ್ಲಿ ಶೂದ್ರತ್ವವನ್ನು ನಿಷೇಧಿಸಿ ವಿಪ್ರತ್ವವನ್ನು ಆರೋಪಿಸಿ ಹೇಳಿರುತ್ತದೆ

ಮಹರ್ಷಿಗಳುಮ್ (೧) "ಸ ಶೂದ್ರ ಇತಿ ಮಂತವ್ಯಃ" ಇತ್ಯಾದಿಗಳಿಲ್ಪಡಿಯೇ ಪ್ರತಿಪತ್ತಿ ವಿಶೇಷಙ್ಗಳೈಪ್ಪತ್ತಿ ಉತ್ಕೃಷ್ಟರ್ ಪಕ್ಕಲ್ ಅಪಕೃಷ್ಟ ಶಬ್ದಮುಮ್, ಅಪಕೃಷ್ಟರ್ ಪಕ್ಕಲ್ ಉತ್ಕೃಷ್ಟ ಶಬ್ದಮುಮ್, ಪ್ರಯೋಗಿತ್ತಾರ್‌ಗಳತ್ತನೈ.

---

ಯಲ್ಲಾ, ಹಾಗಾದರೆ ಆ ಪ್ರಮಾಣದ ಅಭಿಪ್ರಾಯವೇನು? ಮಹರ್ಷಿ ವಾಕ್ಯಕ್ಕೆ ಸಾರ್ಥಕ್ಯವನ್ನು ಕಲ್ಪಿಸಬೇಡವೇ? ಎಂದರೆ ಅದರ ನಿಷ್ಕರ್ಷಾರ್ಥವನ್ನು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. ಮಹರ್ಷಿಯು ಸಾಮಾನ್ಯರಲ್ಲವು. ಶ್ರೀವ್ಯಾಸ ಮಹರ್ಷಿಯೇ ಆದುದರಿಂದ ಅದಕ್ಕೆ ಗತಿಯನ್ನು ಕಲ್ಪಿಸದೇ ಇರಲು ಸಾಧ್ಯವೂ ಅಲ್ಲವು. ಮಹರ್ಷಿಗಳುಮ್-ಶ್ರೀ ವ್ಯಾಸಮಹರ್ಷಿಯೂ, ಗೌರವಾರ್ಥವಾಗಿ ಬಹುವಚನವು, ಸಶೂದ್ರ ಇತಿ ಮಂತವ್ಯಃ ಆತನು ಜನ್ಮತಃ ಶೂದ್ರನಲ್ಲದಿದ್ದರೂ ಶೂದ್ರನನ್ನಾಗಿ ತಿಳಿಯತಕ್ಕದ್ದು" ಇತ್ಯಾದಿಗಳಿಲ್‌ಪಡಿಯೇ ಇವೇ ಮೊದಲಾದವುಗಳಲ್ಲಿ ಹೇಳಿರುವಹಾಗೆಯೇ, ಎಂದರೆ ಉತ್ಕೃಷ್ಟಜಾತಿಯವನನ್ನು ನಿಕೃಷ್ಟ ಜಾತಿಯವನನ್ನಾಗಿ ಭಾವಿಸತಕ್ಕದ್ದು ಎಂದು ಹೇಳಿದಹಾಗೆ, ಪ್ರತಿಪತ್ತಿ ವಿಶೇಷಙ್ಗಳೈಪ್ಪತ್ತಿ - ಅನುಸಂಧಾನಮಾಡುವ ವಿಶೇಷಗಳನ್ನು ಕುರಿತು, ಉತ್ಕೃಷ್ಟರ್ ಪಕ್ಕಲ್ ಅಪಕೃಷ್ಟ ಶಬ್ದಮುಮ್ - ಜನ್ಮತಃ ಉತ್ಕೃಷ್ಟರಾಗಿದ್ದರೂ ಭಗವದ್ಭಾಗವತತ್ವವಿಲ್ಲದುದರಿಂದ ಸರ್ವವರ್ಣೇಷು ತೇ ಶೂದ್ರಾ ಯೇಹ್ಯಭಕ್ತಾ ಜನಾರ್ದನೇ ಎಂದು ನಿಕೃಷ್ಟರೆಂದು ಶೂದ್ರಶಬ್ದ ಪ್ರಯೋಗವೂ, ಅಪಕೃಷ್ಟರ್ ಪಕ್ಕಲ್ ಉತ್ಕೃಷ್ಟಶಬ್ದಮುಮ್ - ಜನ್ಮತಃ ಅಪಕೃಷ್ಟರಾಗಿ ಶೂದ್ರರಾಗಿದ್ದರೂ ಅವರನ್ನು ವಿಪ್ರಾಭಾಗವತಾಸ್ಮೃತಾಃ ಎಂದು ಉತ್ಕೃಷ್ಟ ಶಬ್ದವನ್ನು, ಪ್ರಯೋಗಿತ್ತಾರ್‌ಗಳತ್ತನೈ - ಪ್ರಯೋಗಿಸಿರುತ್ತಾರೆ, ಇಷ್ಟೇ ವಿನಾ ಇನ್ನೂ ಹೆಚ್ಚು ಮಾಹಾತ್ಮ್ಯೆಯನ್ನೇನೂ ಹೇಳಲಿಲ್ಲವು. ಅವರು ವಿಪ್ರರೇ ಆಗಿಬಿಟ್ಟರು, ಅವರು ಸಂಧ್ಯಾವಂದನೆ ಜಪಾದಿಗಳನ್ನೂ ವೇದಾಧ್ಯಯನವನ್ನೂ ಮಾಡಬಹುದು, ಸಹಪಙ್ಕ್ತಿ ಭೋಜನಕ್ಕೆ ಅರ್ಹರು, ಅವರಿಗೆ ಹೆಣ್ಣು ಕೊಟ್ಟು ತರಬಹುದು, ಇತ್ಯಾದಿ ಹೆಚ್ಚು ಮಾಹಾತ್ಮ್ಯೆಗಳೇನೂ ಇಲ್ಲವೆಂದು ಅತ್ತನೈ ಎಂಬ ಶಬ್ದದಿಂದ ಉತ್ಕೃಷ್ಟ ನಿಕೃಷ್ಟ ಜನ್ಮವೇನೂ ಉಂಟಾಗಲಿಲ್ಲವೆಂದು ಹೇಳಿದಂತಾಯಿತು. "ಉತ್ಕೃಷ್ಟರ್ ಪಕ್ಕಲ್ ಅಪಕೃಷ್ಟಶಬ್ದಮುಮ್, ಅಪಕೃಷ್ಟರ್ ಪಕ್ಕಲ್ ಉತ್ಕೃಷ್ಟ ಶಬ್ದಮುಮ್ ಪ್ರಯೋಗಿತ್ತಾರ್‌ಗಳತ್ತನೈ" ಎಂದು ಸಙ್ಗ್ರಹವಾಗಿ ಹೇಳಿದುದನ್ನು ಮುಂದಿನ ವಾಕ್ಯ

---

(೧) ಪಾರಮೇಷ್ಟಿ ಸಂಹಿತಾ.

**ಆಗ್ನೆಯೊಾಲ್ ಭಗವದ್ಭಕ್ತರಲ್ಲಾದ ಬ್ರಾಹ್ಮಣರ್ ಶೂದ್ರರ್ಗಳ್ಪೋಲೆ ಅನಾದರಣೀಯರೆನ್ರುವ್, ಭಗವದ್ಭಕ್ತರಾನ ಶೂದ್ರರ್ಗಳ್ ಬ್ರಾಹ್ಮಣರ್ಪೋಲೆ ಶ್ಲಾಘನೀಯರೆನ್ರುವ್ ಶಾಸ್ತ್ರತಾತ್ಪರ್ಯಮ್.**

---

ದಿಂದ ಉಪಪಾದಿಸಿ ಆ ಪ್ರಮಾಣ ತಾತ್ಪರ್ಯವನ್ನು ವಿಶದೀಕರಿಸುತ್ತಾರೆ. **ಆಗ್ನೆಯೊಾಲ್** - ಆ ಕಾರಣದಿಂದ ಎಂದರೆ ಪ್ರತಿಪತ್ತಿ ವಿಶೇಷಮೂಲಕ ಹೇಳಿದವಾಕ್ಯವಾದುದರಿಂದ ಭಗವದ್ಭಕ್ತರಲ್ಲದ ಬ್ರಾಹ್ಮಣರು ಶೂದ್ರರುಗಳ ಹಾಗೆ ಅನಾದರಣೀಯರೆಂದೂ, ಭಗವದ್ಭಕ್ತರಾದ ಶೂದ್ರರು ಬ್ರಾಹ್ಮಣರಹಾಗೆ ಶ್ಲಾಘನೀಯರೆಂದೂ **ಶಾಸ್ತ್ರ ತಾತ್ಪರ್ಯಮ್**-ಅನ್ಯಾಪದೇಶೋಕ್ತಿಯ ತಾತ್ಪರ್ಯವು. **ಸಿಂಹೋ ಮಾಣವಕಃ** - ಆ ಬಾಲಕನು ಸಿಂಹವು ಎಂದರೆ ನಿಜವಾಗಿ ಸಿಂಹವಲ್ಲದೆ ಸಿಂಹದ ಹಾಗೆ ಪರಾಕ್ರಮಿ ಎಂಬುದು ಹೇಗೆ ಅರ್ಥವೋ,ಹೇಗೆ ಸಿಂಹಶಬ್ದಕ್ಕೆ ಮುಖ್ಯಾರ್ಥವು ಕೂಡದೆ ಗೌಣಾರ್ಥವನ್ನು ಹೇಳಬೇಕೋ, ಹಾಗೆಯೇ ಭಗವದ್ಭಕ್ತರಲ್ಲದ ಬ್ರಾಹ್ಮಣರು ಶೂದ್ರರು ಎಂದರೆ ನಿಜವಾಗಿಯೂ ಶೂದ್ರರಲ್ಲದುದರಿಂದ ಶೂದ್ರರು ಹಾಗೆ ಅನಾದರಣೀಯರು ಎಂದು ಅರ್ಥವನ್ನು ಹೇಳತಕ್ಕದ್ದು. ಹಾಗೆಯೇ ಭಗವದ್ಭಕ್ತರಾದ ಶೂದ್ರರು ಬ್ರಾಹ್ಮಣರು ಎಂದರೆ ನಿಜವಾಗಿಯೂ ಬ್ರಾಹ್ಮಣರಲ್ಲವಾದುದರಿಂದ ಬ್ರಾಹ್ಮಣರಹಾಗೆ ಮಾನನೀಯರು ಎಂದೇ ಅರ್ಥಮಾಡತಕ್ಕದ್ದೆಂಬ ಭಾವವು. ಔಪಚಾರಿಕವಾಗಿ ಹೇಳಿದುದನ್ನು ಸತ್ಯವಾಗಿಯೇ ಹೇಳಲ್ಪಟ್ಟಿತೆಂದು ಭಾವಿಸಕೂಡದೆಂಬುದು ತಾತ್ಪರ್ಯವು. ಶ್ರೀ ವೇದವ್ಯಾಸರು ಸರ್ವಶಾಸ್ತ್ರಾರ್ಥಗಳನ್ನೂ ಚನ್ನಾಗಿ ವಿಮರ್ಶಿಸಿ ತಿಳಿದ ಮಹಾನುಭಾವರು ಎಂದಿಗಾದರೂ ಶಾಸ್ತ್ರವಿರುದ್ಧವಾಗಿರುವದನ್ನು ಹೇಳುತ್ತಾರೆಯೇ? ಹಾಗಲ್ಲದೆ. ಶಾಸ್ತ್ರಸಮ್ಮತವಾದುದನ್ನೇ ಹೇಳುತ್ತಾರೆಂಬ ಭಾವದಿಂದ **ಶಾಸ್ತ್ರತಾತ್ಪರ್ಯಮ್** ಎಂಬ ಪ್ರಯೋಗವು. ಎಲ್ಲಿ ಮುಖ್ಯಾರ್ಥವನ್ನು ಹೇಳಲು ಬಾಧಕ ಉಂಟೋ, ಅಲ್ಲಿ ಗೌಣಾರ್ಥವನ್ನು ಹೇಳತಕ್ಕದ್ದೆಂಬ ನ್ಯಾಯವಿರುವದರಿಂದ, "ಭಗವದ್ಭಕ್ತ ಶೂದ್ರನು ಬ್ರಾಹ್ಮಣನು, ಎಂಬಲ್ಲಿ ಬ್ರಾಹ್ಮಣ ಶಬ್ದಕ್ಕೆ ಮುಖ್ಯಾರ್ಥಕ್ಕೆ ಬಾಧಕವಿರುವದರಿಂದ ಗೌಣಾರ್ಥವನ್ನೇ ಹೇಳಿ, ಬ್ರಾಹ್ಮಣನು ಹೇಗೆ ಶ್ಲಾಘನೀಯನೋ ಹಾಗೆ ಭಗವದ್ಭಕ್ತಶೂದ್ರನೂ ಶ್ಲಾಘನೀಯನೆಂಬ ತಾತ್ಪರ್ಯವು. ಹಾಗೆಯೇ ಭಗವದ್ಭಕ್ತನಲ್ಲದ ಬ್ರಾಹ್ಮಣನು ಶೂದ್ರನು ಎಂಬಲ್ಲಿಯೂ, ಶೂದ್ರ ಶಬ್ದಕ್ಕೆ ಮುಖ್ಯಾರ್ಥ ಹೇಳಲು ಬಾಧಕವಿರುವದರಿಂದ ಶೂದ್ರನು ಹೇಗೆ ನಿಕೃಷ್ಟನೋ, ಹಾಗೆ ಭಗವದ್ಭಕ್ತನಲ್ಲದ ಬ್ರಾಹ್ಮಣನು ನಿಕೃಷ್ಟನೆಂಬ ಭಾವವು. ಮುಖ್ಯಾರ್ಥ

## ಪೂರ್ವೋಕ್ತಪ್ರಮಾಣೇ ಗೌಣಾರ್ಥಾನಙ್ಗೀಕಾರೇ ಬಾಧಕಮಾಹ

ಇಙ್ಗನಲ್ಲಾದಪ್ಪೋದು (೧) "ಚಣ್ಡಾಲಮಪಿ ವೃತ್ತಸ್ಥಂ ತಂ ದೇವಾ ಬ್ರಾಹ್ಮಣಂ ವಿದುಃ" (೨) "ಚಣ್ಡಾಳಾಃ ಪ್ರತ್ಯವಸಿತಾಃ ಪರಿವ್ರಾಜಕ ತಾಪಸಾಃ." (೩)"ನ ತೇನ ಸ್ಥವಿರೋ ಭಾತಿ ಯೇನಾಸ್ಯ ಪಲಿತಂ ಶಿರಃ । ಬಾಲೋಽಪಿ ಯಃ ಪ್ರಜಾನಾತಿ ತಂ ದೇವಾ ಸ್ಥವಿರಂ ವಿದುಃ" ಎನ್ರಿಪ್ಪುದೈಗಳಿಲೇ ನಿಂದಾ ಪ್ರಶಂಸೈ ಪಣ್ಣುಗಿರ ವಾಕ್ಯಙ್ಗಳೈಕ್ಕೊಂಡು ಸರ್ವಮರ್ಯಾದೈಗಳುಙ್ಕಲಙ್ಗುಮ್ಪಡಿಯಾಮ್. ಆನಪಿನ್ಪು,

---

ವನ್ನೇ ಹೇಳಿದರೆ ಉಂಟಾಗತಕ್ಕ ಬಾಧಕಗಳು ಯಾವುವು ಎಂದು ಕೇಳಿದರೆ, ಉತ್ತರವನ್ನು ದಯಪಾಲಿಸುತ್ತಾರೆ—

### ಆ ಭಾರತ ವಾಕ್ಯಕ್ಕೆ ಗೌಣಾರ್ಥವನ್ನು ಅಙ್ಗೀಕರಿಸದಿದ್ದರೆ ಉಂಟಾಗುವ ಬಾಧಕಗಳು.

**ಇಙ್ಗನಲ್ಲಾದಪ್ಪೋದು** - ಹೀಗೆ ನಿಂದಾಶ್ಲಾಘನೆಗಾಗಿ ಹೇಳಲ್ಪಟ್ಟಿತೆಂದು ಭಾವಿಸದೆ **ಜಾತಿಯೇ** ಬದಲಾಯಿಸಿತು ಎಂದು ಹೇಳಿದರೆ, (೧) "**ವೃತ್ತಸ್ಥಂ** - ತನ್ನ **ಜಾತ್ಯನುಗುಣವಾದ** ಆಚಾರವುಳ್ಳ, **ತಂ** - ಅಂತಹ, **ಚಂಡಾಲಮಪಿ** - ಚಂಡಾಲನನ್ನೂ ಕೂಡ, **ದೇವಾಃ** - ದೇವತೆಗಳು, **ಬ್ರಾಹ್ಮಣಂ**-ಬ್ರಾಹ್ಮಣನಂತೆ ಶ್ಲಾಘನೀಯನನ್ನಾಗಿ, **ವಿದುಃ**-ತಿಳಿಯುತ್ತಾರೆ" (೨) **ಪರಿವ್ರಾಜಕ ತಾಪಸಾಃ**- ಸಂನ್ಯಾಸಿಗಳೂ ವಾನಪ್ರಸ್ಥರೂ ಸಹ, **ಪ್ರತ್ಯವಸಿತಾಃ** - ತಮ್ಮ ತಮ್ಮ ಆಶ್ರಮ ಧರ್ಮಗಳನ್ನು ಪರಿತ್ಯಾಗಮಾಡಿದವರು ಎಂದರೆ ಅವರಿಂದ ಜಾರಿದವರು, ಗೃಹಸ್ಥ ಧರ್ಮಾದಿಗಳನ್ನವಲಂಬಿಸಿದವರು ಆದುದರಿಂದ ಪತಿತರು ಎಂಬ ಭಾವವು, ಅಂತವರು **ಚಂಡಾಳಾಃ** - ಚಂಡಾಲರಿಗೆ ಸಮಾನರು; (೩) **ಯೇನ** - ಯಾವಕಾರಣದಿಂದ, **ಅಸ್ಯ** - ಈತನ, **ಶಿರಃ ಪಲಿತಂ** - ತಲೆಯು ಕೂದಲು ನರೆಯುಳ್ಳದ್ದೋ **ತೇನ** - ಆ ಕಾರಣದಿಂದ, **ನ ಸ್ಥವಿರೋಭಾತಿ** - ವೃದ್ಧನು ಪ್ರಕಾಶಿಸುವದಿಲ್ಲವು. **ಯಃ** - ಯಾವನು, **ಬಾಲೋಽಪಿ** - ಬಾಲನಾದರೂ, **ಪ್ರಜಾನಾತಿ** - ಪ್ರಕೃಷ್ಟ ಜ್ಞಾನವುಳ್ಳವನಾಗುತ್ತಾನೋ, **ತಂ** - ಅಂತವನನ್ನು, **ಸ್ಥವಿರಂ ದೇವಾಃ ವಿದುಃ** - ವೃದ್ಧನನ್ನಾಗಿ ದೇವತೆಗಳು ತಿಳಿಯುತ್ತಾರೆ ಎಂದರೆ ಜ್ಞಾನದಿಂದ ವೃದ್ಧನನ್ನಾಗಿ ಭಾವಿಸುತ್ತಾರೆ ಎಂದರೆ ವೃದ್ಧನಿಗೆ ಎಷ್ಟು ಮರ್ಯಾದೆಯನ್ನು

---

(೧) ಭಾ. ಆಶಂ ೧೦೬ ಅ. (೨) (೩) ಮನುಸ್ಮೃತಿ. ೨. ೧೫೬

ಪ್ರತಿಪತ್ತಿ ವಿಶೇಷಾರ್ಥಮನ್ಯತ್ರಾನ್ಯತ್ವಕೀರ್ತನಮ್ ।
ವಿಶೇಷವಿಧಿಸಾಕಾಂಕ್ಷಾ ಸ್ತತ್ರ ತತ್ರ ತ್ರಿವೃತ್ತಯಃ ।೪೫॥
ಎನ್ನು ಇಬ್ಬಗ್ಗೆ ತ್ರಿಕ್ಕನ್ ಸವಿಧಾನವ್.

ಮಾಡಬೇಕೋ, ಅಷ್ಟು ಮರ್ಯಾದೆಯನ್ನು ಈ ಪ್ರಜ್ಞಾಶಾಲಿಯಾದ ಬಾಲನಿಗೆ ಮಾಡುತ್ತಾರೆಂಬ ಭಾವವು; ಧ್ರುವ, ಪ್ರಹ್ಲಾದರಹಾಗೆ ಮಾನ್ಯರೆಂಬ ಭಾವವು" ಎನ್ನಿಪ್ಪುಡಿಗಳಿಲೇ-ಎಂಬ ಇಂತಹ ಸ್ಥಳಗಳಲ್ಲಿ, ಸಂದರ್ಭಗಳಲ್ಲಿ, ನಿಂದೆಯನ್ನೂ. **ಪ್ರಶಂಸೆ** - ಶ್ಲಾಘನೆಯನ್ನೂ. **ಪಣ್ಣುಗಿರ**-ಮಾಡುವ, **ವಾಕ್ಯಜ್ಞೈಕ್ಯೊಂಡು**- ಇಂತಹ ವಾಕ್ಯಗಳ ಮೂಲಕ, **ಸರ್ವಮರ್ಯಾದೆಗಳುಜ್ಜಲಜ್ಜ ಪಡಿಯಾವ್** - ಯಥಾ ಶ್ರುತಾರ್ಥವನ್ನೇ ಗ್ರಹಿಸಿದ.ದಾದರೆ ಸರ್ವಶಾಸ್ತ್ರಮರ್ಯಾದೆಗಳೂ ಅಲ್ಲೋಲಕಲ್ಲೋಲವಾಗುವುವು. ಹೇಗೆಂದರೆ, ಸ್ವಧರ್ಮಾನುಷ್ಠಾನಮಾಡಿದ ಚಂಡಾಲನು ಬ್ರಾಹ್ಮಣನೇ ಆದರೆ ಆತನಿಗೆ ಗಾಯತ್ರೀ ಜಪಕ್ಕೂ ವೇದಾಧ್ಯಯನಕ್ಕೂ, ಪಿತೃ ಶ್ರಾದ್ಧದ ದಿನ ನಿಮಂತ್ರಣ ಹೇಳುವದಕ್ಕೂ, ಹೆಣ್ಣು ಕೊಟ್ಟು ತರುವದಕ್ಕೂ ಅರ್ಹನೆಂದು ಭಾವಿಸಬೇಕಾಗುತ್ತದೆ. ವರ್ಣಾಶ್ರಮಧರ್ಮ ಮೊದಲಾದವುಗಳೆಲ್ಲಾ ತಲೆಕೆಳಗಾಗುತ್ತದೆಂಬ ಭಾವವು. ವರ್ಣಸಾಂಕರ್ಯಕ್ಕೆ ಕಾರಣವಾಗುತ್ತದೆಂಬ ಭಾವವು. ಇದು ಮುಖ್ಯವಾದ ಸಿದ್ಧಾಂತಾರ್ಥವಾದುದರಿಂದ ಉಪದೇಶವನ್ನು ಒಂದು ಕಾರಿಕೆಯ ಮೂಲಕ ದೃಢಪಡಿಸುತ್ತಾರೆ. **ಅನ್ಯತ್ರಾನ್ಯತ್ವಕೀರ್ತನಂ**-ಭಾಗವತ ಶೂದ್ರನನ್ನು ಬ್ರಾಹ್ಮಣನೆಂದು ಕೀರ್ತನವೂ ಮತ್ತು ಭಾಗವತನಲ್ಲದ ಬ್ರಾಹ್ಮಣನನ್ನು ಶೂದ್ರನೆಂದು ಹೇಳೋಣವೂ ಸಹ, **ಪ್ರತಿಪತ್ತಿ ವಿಶೇಷಾರ್ಥಂ** - ಬ್ರಾಹ್ಮಣನ ಹಾಗೂ ಶೂದ್ರನಹಾಗೂ **ಪೂಜ್ಯ**ಭಾವವೂ ಅಪೂಜ್ಯಭಾವವೂ ಉಂಟಾಗುವದಕ್ಕಾಗಿ ಎಂದು ಭಾವಿಸತಕ್ಕದ್ದು. ವರ್ಣಸಾಂಕರ್ಯವು ಗೀತೆಯಲ್ಲಿ ಹೀನವಾಗಿ ನಿಂದಿಸಲ್ಪಟ್ಟಿರುತ್ತದೆ.—ಶ್ರೀಕೃಷ್ಣನು ಹೇಳುತ್ತಾನೆ.—"ಉತ್ಸೀದೇಯು ರಿಮೇಲೋಕಾಃನಕುರ್ಯಾಂ ಕರ್ಮಚೇದಹಂ। ಸಂಕರಸ್ಯಚ ಕರ್ತಾಸ್ಯಾಂ ಉಪಹನ್ಯಾ ಮಿಮಾಃಪ್ರಜಾಃ"(ಗೀ. ೩. ೨೪) ವಿಹಿತ ಕರ್ಮಾನುಷ್ಠಾನವಿಲ್ಲದ್ದರೆ ನಾನೂ ಕೂಡ ವರ್ಣಸಂಕರವನ್ನುಂಟುಮಾಡಿದನೆಂಬ ಅಪಕೀರ್ತಿಗೆ ಒಳಗಾಗುವೆನಲ್ಲದೆ ಈ ಪ್ರಜೆಗಳ ನಾಶಕ್ಕೂ ಕಾರಣನಾದವನಾಗುವನೆಂದು ಹೇಳಿಕೊಂಡಿರುತ್ತಾರೆ. ಅದೂ ಅಲ್ಲದೆ ಬಾಲಂಸ್ಥವಿರೋಧಿದುಃ ಎಂಬಲ್ಲಿ ಮುಖ್ಯಾರ್ಥವನ್ನು ಹೇಳಲು ಸಾಧ್ಯವೇ ಇಲ್ಲವು; ಏಕೆಂದರೆ ಪ್ರತ್ಯಕ್ಷಕ್ಕೇ ವಿರೋಧವು. ಆದುದರಿಂದ ಮುಖ್ಯಾರ್ಥವನ್ನು ತ್ಯಜಿಸಿ ಲಾಕ್ಷಣಿಕಾ

ರ್ಥವನ್ನು ಹೇಳುವದು ಹೇಗೆ ಅಲ್ಲಿ ಆವಶ್ಯಕವೋ ಹಾಗೆಯೇ, **ನ ಶೂದ್ರಾ ಭಗವದ್ಭಕ್ತಾಃ** ಎಂಬಲ್ಲೂ ಲಾಕ್ಷಣಿಕಾರ್ಥವನ್ನೇ ಹೇಳಬೇಕೇ ವಿನಾ ಮುಖ್ಯಾರ್ಥವಲ್ಲವೆಂಬುದು ತಾತ್ಪರ್ಯವು **ತತ್ರ**-ಆ ಸಂದರ್ಭದಲ್ಲಿ **ತತ್ತತ್ಪ್ರವೃತ್ತಯಃ** ಆವರವರುಗಳ ಪ್ರವೃತ್ತಿಗಳು, **ವಿಶೇಷವಿಧಿ ಸಾಕಾಂಕ್ಷಾಃ**-ವಿಶೇಷವಿಧಿಗಳನ್ನು ಅಪೇಕ್ಷಿಸುವುಗಳಾಗಿವೆ ಹೇಗೆಂದರೆ ಬ್ರಾಹ್ಮಣ ಯೋನಿಯಲ್ಲಿ ಜನಿಸಿ ಸಂಸ್ಕಾರಾದಿಗಳನ್ನು ಹೊಂದಿದ್ದರೆ ಬ್ರಾಹ್ಮಣ ಕರ್ಮಗಳು; ಹಾಗಲ್ಲದೆ ಶೂದ್ರಯೋನಿಯಲ್ಲಿ ಜನಿಸಿದ್ದರೆ ಶೂದ್ರನಿಗೆ ವಿಹಿತ ಕರ್ಮಗಳು; ಹೀಗಲ್ಲದೆ ಶೂದ್ರನು ತಾನು ಭಗವದ್ಭಕ್ತನು ಪ್ರಪನ್ನನು ಎಂದು ಬ್ರಾಹ್ಮಣನಿಗೆ ಸಮವೆಂದು ಭಾವಿಸಿ, ಬ್ರಾಹ್ಮಣನ ನಿತ್ಯನೈಮಿತ್ತಿಕಾನುಷ್ಠಾನಗಳನ್ನು ಅವಲಂಬಿಸಕೂಡದು ; ಹಾಗೆಯೇ ಸಂಸ್ಕಾರಹೊಂದಿದ ಬ್ರಾಹ್ಮಣನು ಏನೋ ಕಾರಣಾಂತರದಿಂದ ಶೂದ್ರತ್ವವು ತನಗೆ ಪ್ರಾಪ್ತವಾಯಿತೆಂದು ಭ್ರಮಿಸಿ, ಸ್ನಾನ ಸಂಧ್ಯಾವಂದನಾದಿಗಳನ್ನು ಬಿಡತಕ್ಕದ್ದಲ್ಲವು. ವರ್ಣಸಾಂಕರ್ಯ ಆಶ್ರಮಸಾಂಕರ್ಯಾದಿಗಳು ತುಂಬಾ ನಿಂದಿತಗಳಾಗಿ ಭಗವನ್ನಿಗ್ರಹಕ್ಕೆ ಗುರಿಮಾಡುವುವು ಎನ್ನು - ಎಂದರೆ ಈ ಕಾರಿಕೆಯಲ್ಲಿ ಹೇಳಿರುವದು **ಇಚ್ಛುತ್ತ್ರೈಕ್ಯಮ್**-ಇಂತಹ ಎಲ್ಲಾ ಪ್ರಮಾಣಗಳಿಗೂ ಸಮಾಧಾನವು; ಎಂದರೆ ಶ್ಲಾಘನೆಯಿಂದ ಉತ್ಕೃಷ್ಟಜಾತಿಯನ್ನು ಹೇಳುವ "**ನ ಶೂದ್ರಾಃ**" "**ಚಂಡಾಲಮಪಿ**" ಇತ್ಯಾದಿ ಸಮಸ್ತ ಪ್ರಮಾಣಗಳಿಗೂ ಸಮಾಧಾನವೆಂಬ ಭಾವವು ಆದುದರಿಂದಶಾಸ್ತ್ರ ಮರ್ಯಾದೆಯನ್ನು ಸರ್ವಥಾ ಅತಿಕ್ರಮಿಸಬಾರದು ಶೇಷಸಂಹಿತೆಯಲ್ಲಿ ಬ್ರಾಹ್ಮಣಾದಿಗಳಿಗೂ ಸ್ತ್ರೀ ಶೂದ್ರಾದಿಗಳಿಗೂ ಅನುಷ್ಠಾನಕ್ರಮವು ಹೇಳಿರುತ್ತದೆ. ಹಿಂದೆ ೨೫೦೭-ಲನೆಯ ಪುಟಗಳನ್ನು ನೋಡಿ. ಆದುದರಿಂದ ಇಂತಹ ವಿಶೇಷ ವಿಧಿಗಳಿಗನುಸಾರವಾಗಿ ಪ್ರವೃತ್ತಿಗಳಿರಬೇಕೇ ವಿನಾ,ಅನ್ಯಥಾ ಕೂಡದು. ಹಾಗೆ ಅನ್ಯಥಾ ಅನುಷ್ಠಿಸಿದರೆ **ಆಜ್ಞಾಚ್ಛೇದಿಯಾಗಿ** ಭಗವನ್ನಿಗ್ರಹಕ್ಕೆ ಪಾತ್ರನಾಗುವನೆಂಬ ಭಾವವು. ಭಾಗವತ ಶೂದ್ರನು ವಿಪ್ರನಾದನೆಂದು ಆತನಿಗೆ ನಮಸ್ಕಾರವೂ, ಆತನ ಕಾಲನ್ನು ಒತ್ತುವದು, ಆತನುಕೊಟ್ಟ ದಾನವನ್ನು ಪ್ರತಿಗ್ರಹಿಸುವದೂ, ಇವೆಲ್ಲವೂ ಅನೇಕ ಅನರ್ಥಗಳಿಗೆ ಕಾರಣವಾಗುತ್ತದೆಂಬ ತಾತ್ಪರ್ಯವು. ಅಂತಹ ಭಗವದ್ಭಕ್ತನಾದ ಶೂದ್ರನು ಮರ್ಯಾದೆಗೆ ಮಾತ್ರ ಅರ್ಹನು; ಆತನೊಂದಿಗೆ ಕುಶಲ ಪ್ರಶ್ನೆಯನ್ನು ಮಾಡಬಹುದು, ಜೊತೆಯಲ್ಲಿ ಕರೆದುಕೊಂಡು ಹೋಗಿ ದೇವಾಲಯದಲ್ಲಿ ತೀರ್ಥಪ್ರಸಾದ ಹೂವಿನಮಾಲೆ ಮೊದಲಾದವನ್ನು ಕೊಡಿಸಿ ಆದರಿಸಬಹುದು ಆದರೆ "**ವೈಷ್ಣವೋವೈಷ್ಣವಂ ದೃಷ್ಟ್ವಾ ದಂಡವತ್ಪ್ರಣಮೇದ್ಭುವಿ**" ಎಂದಿದೆಯಲ್ಲಾ,ಶೂದ್ರನು ಯಾವಾಗ ವಿಷ್ಣುಭಕ್ತನಾದನೋ ಆಗ ಆತನಿಗೆ ನಮಸ್ಕಾರವನ್ನು ಬ್ರಾಹ್ಮಣನು ಏಕೆ ಮಾಡಕೂಡದು ಎಂದರೆ ಈ

ಪ್ರಮಾಣವು ದಂಡವತ್ಪ್ರಣಾಮಕ್ಕೆ ಅರ್ಹರಾಗಿರುವವರನ್ನು ಕುರಿತೇ ವಿನಾ, ಅನರ್ಹರಾದ ಶೂದ್ರಾದಿಗಳನ್ನು ಕುರಿತು ಹೇಳಿದುದಲ್ಲವು. ಭಾರತದಲ್ಲಿ ಮಹಾ ಜ್ಞಾನಿಗಳಾದ ವಿದುರ ಭೀಷ್ಮಾದಿಗಳು ಇಂತಹ ವಿಶೇಷವಿಧಿಗಳಿಗೆ ವಿರೋಧವಾಗಿ ಪರಸ್ಪರ ಪ್ರಣಾಮಾದಿಗಳನ್ನೇಯಾಗಲಿ ಅಥವಾ ಇತರ ಶಾಸ್ತ್ರವಿರುದ್ಧ ಪ್ರವೃತ್ತಿಗಳನ್ನೇಯಾಗಲಿ ಅನುಷ್ಠಿಸಲಿಲ್ಲವು. ಧೃತರಾಷ್ಟ್ರನು ಶ್ರೀ ವಿದುರರಿಂದ ಧರ್ಮಬೋಧೆಯನ್ನೆಲ್ಲಾ ಕೇಳಿ ಪರಮ ಸಂತುಷ್ಟನಾಗಿ, ಬ್ರಹ್ಮವಿದ್ಯೆಯನ್ನೂ ಅನುಗ್ರಹಿಸಬೇಕೆಂದ ಪೇಕ್ಷಿಸಲು, ಅದಕ್ಕೆ ಶ್ರೀ ವಿದುರರು **"ಶೂದ್ರಯೋನಾವಹಂ ಜಾತೋ ನಾತೋನ್ಯದ್ವಕ್ತು ಮುತ್ಸಹೇ"** ತಾವು ಶೂದ್ರಯೋನಿಯಲ್ಲಿ ಜನಿಸಿರುವದರಿಂದ ಅರ್ಹರಲ್ಲನೆಂದು ತತ್ತ್ವೋಪದೇಶವನ್ನು ಉಪದೇಶಿಸಲಿಲ್ಲವು. ಹೀಗೆ ಮಹಾ ಭಾಗವತೋತ್ತಮರಾದ ಶ್ರೀ ವಿದುರರೇ ವಿಶೇಷ ವಿಧಿಗಳನ್ನತಿಲಂಘಿಸಿ ನಡೆಯಲಿಲ್ಲವೆಂದು ಮುಂದೆ ತಿಳಿಸುತ್ತಾರೆ. ಶಬರಿಯೂ ಕೂಡ ತನ್ನ ನಿಕೃಷ್ಟಜಾತಿಗೆ ಅನುಗುಣವಾದ ಬ್ರಾಹ್ಮಣಗುರುವಾದ ಮತಂಗಋಷಿಯ ಶುಶ್ರೂಷೆಯಲ್ಲೇ ಇದ್ದಳೆಂದು ತೋರಿಬರುತ್ತದೆ. ಆಕೆಯು ತನ್ನ ವರ್ಣಕ್ಕನುಗುಣವಾಗಿ ಸ್ವಾದುವಾಗಿರುವ ಫಲಗಳೆಂದು ತಿಳಿದು ಅವುಗಳನ್ನು ಶ್ರೀರಾಮನಿಗೆ ಸಮರ್ಪಿಸಿರುತ್ತಾಳೆ. ಆಕೆಯು ಮೊದಲು ರುಚಿನೋಡಿ ಸಮರ್ಪಿಸಿದಳೆಂದೂ, ಅದನ್ನು ಶ್ರೀರಾಮಚಂದ್ರನು ಸ್ವೀಕರಿಸಿದನೆಂದೂ ಹೇಳುವದು ಶಾಸ್ತ್ರಜ್ಞಾನವಿಲ್ಲದೇ ಹೇಳುವ ಮಾತಾಗಿರುತ್ತದೆ. ಶ್ರೀವಾಲ್ಮೀಕಿ ರಾಮಾಯಣದಲ್ಲಿ ಅಂತಹ ಉಕ್ತಿಗೆ ಏನೊಂದೂ ಸಾಧನವಿಲ್ಲವು ಇದು ಹಿಂದೆಯೇ ಉಪಪಾದಿತವು, ಆದರೆ ಈ ಸಂದರ್ಭದಲ್ಲಿ ಕೆಲವು ಸಂಶಯಗಳು ತಲೆದೋರಬಹುದು :—ಅವುಗಳು ಯಾವುವೆಂದರೆ :—

೧. ಶ್ರೀ ಭಾಷ್ಯಕಾರರು ಶ್ರೀರಂಗದಲ್ಲಿದ್ದಾಗ ಪಿಳ್ಳೆವರಜ್ಞದಾಸರೆಂಬ ಒಬ್ಬ ಶೂದ್ರ ಶಿಷ್ಯರಿದ್ದರೆಂದೂ, ಸ್ನಾನಾನಂತರ ಕಾವೇರಿಯಿಂದ ಶ್ರೀರಂಗನಾಥನ ಸನ್ನಿಧಿಗೆ ಬರುವಾಗ ಆ ಶೂದ್ರಶಿಷ್ಯರ ಕೈಯನ್ನು ಹಿಡಿದುಕೊಂಡು ಬರುತ್ತಿದ್ದರಲ್ಲಾ ಇದು ಹೇಗೆ ಸಮ್ಮತವಾದುದು ಎಂದು ಕೇಳಬಹುದು. ಇದು ವಾಸ್ತವವೆಂಬುದಕ್ಕೆ ಗುರುಪರಂಪರೆಯಲ್ಲಿ ಆಧಾರವಿಲ್ಲದುದರಿಂದ, ನಿರಸ್ತವು. ೨ ಶ್ರೀ ಭಾಷ್ಯಕಾರರು ವೈಶ್ಯರಾದ ಕಾಂಚೀ ಪೂರ್ಣರನ್ನು ಗುರುಭಾವದಿಂದ ನೋಡುತ್ತಿದ್ದರೆಂದು **"ದೇವರಾಜ ದಯಾಪಾತ್ರಂ ಶ್ರೀ ಕಾಂಚೀ ಪೂರ್ಣಮುತ್ತಮಮ್। ರಾಮಾನುಜಮುನೇರ್ಮಾನ್ಯಂ ವಂದೇಹಂ ಸಜ್ಜನಾಶ್ರಯಮ್"** ಎಂಬ ಶ್ಲೋಕದಿಂದ ತೋರಿಬರುತ್ತದೆಯಲ್ಲಾ ಎಂದರೆ ಶ್ರೀ ಭಾಷ್ಯಕಾರರಿಂದ ಮಾನ್ಯತ್ವ ಮಾತ್ರ ಹೇಳಲ್ಪಟ್ಟಿರುವದರಿಂದ ಏನೊಂದೂ ವಿರೋಧವಿಲ್ಲವು. ಪ್ರಣಾಮಾದಿಗಳನ್ನು ನಡೆಸಿದರೆಂಬುದಕ್ಕೆ ಪ್ರಮಾಣವಿಲ್ಲವು. ಅವರಲ್ಲಿನ ಮಾಹಾತ್ಮ್ಯೆಯ

ದೆಶೆಯಿಂದ ಸ್ವಲ್ಪವಾಗಿ ತಪ್ಪಾದ ಸಂಭವ ಉಂಟಾಗುವದನ್ನು ಕಂಡು ಶ್ರೀ ವಿದುರರು ಧೃತರಾಷ್ಟ್ರನನ್ನು ತಿದ್ದಿದ ಹಾಗೆ ಭಾಷ್ಯಕಾರರಿಗೆ ಅಂತಹ ಪ್ರವೃತ್ತಿಯನ್ನು ನಿಷೇಧಿಸಿರುತ್ತಾರೆಂದು ಹಿಂದೆಯೇ ಹೇಳಲ್ಪಟ್ಟಿರುತ್ತದೆಯಷ್ಟೇ, ಆದರೆ ವಂದೇ ಎಂಬ ಪ್ರಯೋಗವು ಹೇಗೆ? ಎಂದರೆ ಶರೀರ ನಿವೃತ್ತ್ಯಂತರ ಶೂದ್ರತ್ವವಿಲ್ಲದುದರಿಂದ ಅನಂತರೋಕ್ತಿಯಾದುದರಿಂದ ಬಾಧಕವಿಲ್ಲವೆಂದು ಸಾರ ವಿವರಣೆಯವರು ಉಪಪಾದಿಸಿರುತ್ತಾರೆ. ೩ ಶ್ರೀ ಮಧುರಕವಿ ಮೊದಲಾದವರು ನಮ್ಮಾಳ್ವಾರಿಗೆ ಪ್ರಣಾಮಾದಿಗಳನ್ನು ಮಾಡಿದುದೂ, ಬ್ರಹ್ಮವಿದ್ಯಾಗ್ರಹಣವೂ ಸಹ ಹೇಗೆ ಸಮಂಜಸವೆಂದರೆ "ಪ್ರತ್ಯಕ್ಷಿತಾತ್ಮ ನಾಥಾನಾಂ ನೈಷಾಂ ಚಿಂತ್ಯಂ ಕುಲಾದಿಕಂ" ಎಂಬ ಪ್ರಮಾಣರೀತ್ಯಾ, ಆತ್ಮ ಯಾಥಾತ್ಮ್ಯದೊಂದಿಗೆ ಭಗವಂತನ ಸಾಕ್ಷಾತ್ಕಾರ ಉಂಟಾದ ತುಂಬಾ ಮಾಹಾತ್ಮ್ಯವುಳ್ಳವರಾಗಿ, ನಿತ್ಯ ಸೂರಿಗಳೇ ಮನುಷ್ಯಾವತಾರಿಗಳಾಗಿ ಬಂದವರ ವಿಷಯದಲ್ಲಿ ವಿರೋಧವೇನೂ ಇರುವದಿಲ್ಲವೆಂಬ ಭಾವವು ೪. ಹರಿಪಾದರೆಂಬ ವಿಪ್ರರ ಯಾಗದಲ್ಲಿ ಭಕ್ತಿಸಾರ ಮುನಿಗಳಿಗೆ ಅಗ್ರಪೂಜೆಯನ್ನು ಮಾಡಬಹುದೋ ಎಂದರೆ ಅಲ್ಲಿಯೂ ಮೇಲೆ ಹೇಳಿದ ಸಮಾಧಾನವೇ; ಅವನ್ನು ನಿರೋಧಿಸಿದುದರಿಂದ ಸ್ವಾಮಿಯೇ ವ್ಯಾಘ್ರರೂಪದಲ್ಲಿ ಬಂದು ಆಗಬಹುದೆಂದು ಆಜ್ಞಾಪಿಸಿದರೆಂಬ ಇತಿಹಾಸದಿಂದಲೂ ಸಂಗತವು. ೫ ಶ್ರೀ ಪಾಣಾಳ್ವಾರರನ್ನು ಲೋಕಸಾರಂಗಮುನಿಗಳು ಸ್ಕಂಧಾರೋಹಣಮೂಲಕ ಶ್ರೀರಂಗನಾಥನ ಸನ್ನಿಧಿಗೆ ಕರೆದುಕೊಂಡು ಹೋದುದೂ, ಶ್ರೀರಙ್ಗನಾಥನ ಆಜ್ಞೆಯಾದುದರಿಂದ, ವಿರೋಧವಲ್ಲವು. ಸರ್ವ ವರ್ಣದವರು ಅವರವರ ಮನೆಯಲ್ಲಿ ಅರ್ಪಿಸಿದುದನ್ನು ಭಗವಂತನು ಪರಿಗ್ರಹಿಸುವನು. ಅದರಲ್ಲಿ ವಿರೋಧವಾದುದ್ದು ಯಾವುದೂ ಹೇಗೆ ಇಲ್ಲವೋ, ಹಾಗೆಯೇ ಎಂದು ಈ ಸಂದರ್ಭದಲ್ಲೂ ಭಾವಿಸತಕ್ಕದ್ದು; ಹೀಗೆಯೇ ಇಂತಹ ಇತರರ ಸಂದರ್ಭದಲ್ಲೂ ಸಮಾಧಾನಗಳು ದೊರೆಯಬಹುದು. ೬. ಶ್ರೀ ವಿದುರರು ಹಿಂದಿನ ಜನ್ಮದ ಸಂಸ್ಕಾರ ಬಲದಿಂದ ಶೂದ್ರರಾಗಿದ್ದರೂ ಉಪಾಸನವನ್ನು ಮಾಡಿದರೆಂದು ಕೆಲವರು ಹೇಳುವರು. ಇದೂ ಶಾಸ್ತ್ರವಿರುದ್ಧ ವಿಷಯವು. ಹಿಂದಿನ ಉಪಾಸನೆಯ ಬಲದಿಂದಲೇಯಾಗಲಿ, ಅಥವಾ ಈ ಜನ್ಮಕ್ಕೆ ವಿಹಿತವಾದ ಭಾಗವತ ಸಂಶ್ರಯಣದಿಂದಾಗಲಿ ಮೋಕ್ಷವು ಎಂದು ಭಾವಿಸಬಹುದು. ೧೬೭೪ನೆಯ ಪುಟದಲ್ಲಿ ಶ್ರೀ ವಿದುರರೂ ಮತ್ತು ಶಬರಿಯೂ ಸಹ ಉಪಾಸಕರೆಂದು ಒಬ್ಬ ಭಾಗವತರ ಉಪದೇಶಾನುಗುಣವಾಗಿ ಬರೆದೆನು. ಅದು ಶಾಸ್ತ್ರವಿರುದ್ಧವೆಂದು ಈಗ ತೋರಿಬರುವದರಿಂದ ಅದನ್ನು ತಿದ್ದಿಕೊಳ್ಳತಕ್ಕದ್ದು.

## ಶ್ರೀಕೃಷ್ಣೇನ ಭಗವತಾಕಥಂ ಶೂದ್ರಾನ್ನಂ ಭುಕ್ತಮಿತಿಶಂಕಾಂಪರಿಹರತಿ

### ಶ್ರೀ ವಿದುರರುಮ್ ಸ್ವಜಾತ್ಯಾನುರೂಪಮಾಗ ವಿವಾಹಾದಿಗಳ್ ಪಣ್ಣಿ

## ಭಗವಂತನಾದ ಶ್ರೀ ಕೃಷ್ಣನಿಂದ ಶೂದ್ರಾನ್ನವು ಹೇಗೆ ಪರಿಗ್ರಹಿಸಲ್ಪಟ್ಟಿತೆಂಬ ಶಙ್ಕಾ ಪರಿಹಾರವು.

ಮೊದಲು ಶ್ರೀವಿದುರರ ಪ್ರವೃತ್ತಿಯನ್ನು ಕೊಂಡಾಡಿ ಧರ್ಮಸಂಸ್ಥಾಪನೆಗಾಗಿಯೇ ಅವತರಿಸಿದ ಶ್ರೀಕೃಷ್ಣನು ಧರ್ಮಾತಿಕ್ರಮವನ್ನು ಮಾಡುವನೇ? ಎಂದಿಗೂ ಇಲ್ಲವೆಂದು ಸಮಾಧಾನವನ್ನು ಹೇಳುತ್ತಾರೆ. ಶ್ರೀ ವಿದುರರುಮ್-ಶ್ರೀ ವಿದುರರೂ, ಮಹಾಭಾಗವತೋತ್ತಮರಾದುದರಿಂದ ಗೌರವಾರ್ಥಕವಾಗಿ ಬಹುವಚನವು, ತಮ್ಮ ಜಾತಿಗೆ ಅನುರೂಪವಾಗಿ ವಿವಾಹಾದಿಗಳನ್ನು, ಪಣ್ಣಿನಾರ್ಗಳ್ - ಮಾಡಿದರು. ಬ್ರಾಹ್ಮಣಾದಿಗಳ ಹೆಣ್ಣನ್ನು ಅಪೇಕ್ಷಿಸಲಿಲ್ಲವೆಂಬ ಭಾವವು; ಧೃತರಾಷ್ಟ್ರನಿಗೆ ತತ್ತ್ವೋಪದೇಶಕ್ಕೂ ಕೂಡ ಒಡಂಬಡಲಿಲ್ಲವೆಂದು ಹಿಂದೆಯೇ ಹೇಳಲ್ಪಟ್ಟಿರುತ್ತದೆಯಷ್ಟೇ. ಇಂತಹ ಧರ್ಮದಲ್ಲೇ ದೃಷ್ಟಿಯುಳ್ಳ ಮಹಾತ್ಮರು ಶ್ರೀ ಕೃಷ್ಣನನ್ನು ಊಟಕ್ಕೆ ಕರೆದು ಶೂದ್ರಪಕ್ವಾನ್ನವನ್ನು ಸ್ವೀಕರಿಸುವಹಾಗೆ ಮಾಡಿಯಾರೆ? ಎಂಬುದೂ ಸೂಚಿತವು. ಅಂತಹ ಶೂದ್ರ ಸ್ಪರ್ಶದಿಂದ ದುಷ್ಟವಾದ ಅನ್ನವನ್ನು ಧರ್ಮಸಂಸ್ಥಾಪನಕ್ಕಾಗಿ ಅವತರಿಸಿರುವವನು ಸ್ವೀಕರಿಸುವನೇ? ಕ್ಷತ್ರಿಯನಾಗಿ ಯಾದವಕುಲಮಣಿಯಾಗಿರುವ ಶ್ರೀಕೃಷ್ಣನೇ ಪರತತ್ವವೆಂದು ಚನ್ನಾಗಿ ತಿಳಿದು ಮನೆಗೆ ಕರೆದು ಆತಿಥ್ಯವನ್ನು ಮಾಡುವ ಸಂದರ್ಭದಲ್ಲಿ ಸರಿಯಾದ ಏರ್ಪಾಡನ್ನು ಮಾಡದೇ ಶೂದ್ರಾನ್ನವನ್ನೂ ಹಾಗೆಯೇ ಭಗವನ್ನಿವೇದನವಿಲ್ಲದನ್ನವನ್ನೂ ಶ್ರೀ ವಿದುರರು ಸಮರ್ಪಿಸುವರೇ? ಶ್ರೀಕೃಷ್ಣಭಗವಾನವರು ಅಂಥಾದ್ದನ್ನು ಪರಿಗ್ರಹಿಸುವರೇ? ತೇತ್ವಘಂ ಭುಂಜತೇ ಪಾಪಾಯೇ ಪಚನ್ತ್ಯಾತ್ಮಕಾರಣಾತ್ (ಗೀ.೩.೧೩) ಎಂದುಪದೇಶಿಸಿದ ಪರತತ್ವವಲ್ಲವೇ? ಭಗವನ್ನಿವೇದನವಿಲ್ಲದೆ ಶೂದ್ರಸ್ಪರ್ಶವಾದ ಅನ್ನವನ್ನುಪರಿಗ್ರಹಿಸುವರೇ? ವರ್ಣಾಶ್ರಮಧರ್ಮ ಪರಿಪಾಲನಕ್ಕಾಗಿಯಲ್ಲವೇ ಶ್ರೀ ಭಗವದ್ಗೀತೋಪದೇಶವು? ಹಾಗೆ ಉಪದೇಶಿಸುವಾಗ ಲೋಕಸಂಗ್ರಹಾರ್ಥವಾಗಿ ತಾನೂ ಧರ್ಮಾನುಗುಣನಾಗಿ ವರ್ತಿಸುವೆನು ಎಂದು ಹೇಳಲಿಲ್ಲವೇ? ಹಾಗೆ ತಾನೂ ಅನುಸರಿಸಿ ನಡೆಯುವೇ ಹೋದರೆ, "ಸಂಕರಸ್ಯ ಚ ಕರ್ತಾಸ್ಯಾಮುಪಹನ್ಯಾಮಿಮಾಃಪ್ರಜಾಃ" (ಗೀ. ೩. ೨೪) ಎಂದೂ ಹೇಳಲಿಲ್ಲವೇ? ಹೀಗೆಲ್ಲಾ ಧರ್ಮೋಪದೇಶವನ್ನು ಮುಂದೆ ಮಾಡಬೇಕೆಂದು ಸಙ್ಕಲ್ಪಿಸಿರುವವರು ಮೊದಲೇ ತಾವೇ ಅವುಗಳನ್ನು ಅತಿಕ್ರಮಿಸುವರೇ? ಇವುಗಳನ್ನೆಲ್ಲಾ

ನಾರ್(ಗಳ್). (೧) "ಭುಕ್ತವತ್ಸುದ್ವಿಜಾಗ್ರ್ಯೇಷು ನಿಷಣ್ಣಃ ಪರಮಾಸನೇ ವಿದುರಾನ್ನಾನಿ ಬುಭುಜೇ ಶುಚೀನಿ ಗುಣವಂತಿಚ ಎನ್ರಿದೈಕ್ಕೇಟ್ಟು

ತಿಳಿದ ಅರ್ಜುನನು ಆತನನ್ನು ಉಪದೇಶಕಾಲದಲ್ಲಿ ಮೂದಲಿಸಿ ಬಿಟ್ಟರೆ ಗೌರವವೇನು ಉಳಿಯಿತು? ಆದುದರಿಂದ ಶ್ರೀಕೃಷ್ಣಭಗವಾನರವರು ಯಾವ ವಿಧವಾದ ಧರ್ಮಾತಿಕ್ರಮವನ್ನೂ ಮಾಡಲಿಲ್ಲವೆಂದು ತೋರಿಸುವದಕ್ಕಾಗಿ "ಭುಕ್ತವತ್ಸುದ್ವಿಜಾಗ್ರ್ಯೇಷು" ಎಂದಾರಂಭಿಸಿ ಹೇಳುತ್ತಾರೆ.—ದ್ವಿಜಾಗ್ರ್ಯೇಷು - ಬ್ರಾಹ್ಮಣಶ್ರೇಷ್ಠರು, ಭುಕ್ತವತ್ಸು - ಭೋಜನ ಪೂರೈಸಿದವರಾಗಿ, ಪರಮಾಸನೇ - ಶ್ರೇಷ್ಠವಾದ ಭೋಜ್ಯಾಸನದಲ್ಲಿ, ನಿಷಣ್ಣಃ - ಕೂತವನಾಗಿ, ಶ್ರೀಕೃಷ್ಣಭಗವಾನನವರು, ಶುಚೀನಿ - ಅಧರ್ಮದಿಂದ ಗಳಿಸದೆ ಧರ್ಮಾರ್ಜಿತವಾದುದರಿಂದ ಮಹಾ ಪರಿಶುದ್ಧವಾದ, ಗುಣವಂತಿ ಚ - ರಾಜಸ ತಾಮಸ ಪದಾರ್ಥಗಳಿಲ್ಲದೆ ಸಾತ್ವಿಕಪದಾರ್ಥಗಳಿಂದ ಕೂಡಿದ ಭಗವನ್ನಿವೇದಿತವಾದ ಭಗವದ್ಭಾಗವತ ಶೇಷವಾದ, ವಿದುರಾನ್ನಾನಿ - ಮಹಾಭಾಗವತರಾದ ವಿದುರರಿಂದ ಆರ್ಜಿಸಲ್ಪಟ್ಟು ಮಹಾ ಭಕ್ತಿ ವಿಶ್ವಾಸಗಳಿಂದ ಸಮರ್ಪಿಸಲ್ಪಟ್ಟ ಅನ್ನವನ್ನು, ಬುಭುಜೇ - ಭೋಜನಮಾಡಿದರು ಪರಿಗ್ರಹಿಸಿದರು" ಇಲ್ಲಿ ದ್ವಿಜಶ್ರೇಷ್ಠರು ಎಂಬುದರಿಂದ ಬ್ರಾಹ್ಮಣಶ್ರೇಷ್ಠರು ಹೇಳಲ್ಪಟ್ಟರು, ಬ್ರಾಹ್ಮಣ ಮುಖದಿಂದ ಯಾವುದನ್ನು ಸಮರ್ಪಿಸಿದರೂ ಭಗವತ್ಪ್ರೀತಿಯು ಅದಕ್ಕೆ ಉಂಟಾಗುತ್ತದೆಂಬ ಶಾಸ್ತ್ರಮರ್ಯಾದೆಯನ್ನನುಸರಿಸಿ ನಡೆದಿರುತ್ತಾರೆ. ಶ್ರೀಮದ್ಭಾಗವತಾರ್ಚನೆಯು ಅಷ್ಟು ಮಹಿಮೆಯುಳ್ಳದ್ದೆಂದು ತಿಳಿಸುವದಕ್ಕಾಗಿ ಮೊದಲು ಬ್ರಾಹ್ಮಣಾದಿ ಮಹಾಭಾಗವತ ಭೋಜನೋತ್ತರ ಕ್ಷತ್ರಿಯರಾದ ತಾವು ಊಟಕ್ಕೆ ಕೂತಿರುತ್ತಾರೆ. ಅಂತಹ ಬ್ರಾಹ್ಮಣಶ್ರೇಷ್ಠರೆಲ್ಲಾ ಊಟಕ್ಕೆ ನಿಮಂತ್ರಿತರಾಗಿದ್ದರೆ, ಅವರೆಲ್ಲಾ ಪರಿಗ್ರಹಿಸುವಹಾಗೆಯೇ ಬ್ರಾಹ್ಮಣ ಕೈಂಕರ್ಯಪರರಿಂದಲೇ ಪಾಕಕ್ಕೆ ಏರ್ಪಾಡಾಗಿ, ಅಂತಹ ಬ್ರಾಹ್ಮಣರಿಂದಲೇ ಭಗವನ್ನಿವೇದಿತವಾಗಿರಬೇಕೆಂದು ನಂಬಬಹುದು. ಅದೂ ಅಲ್ಲದೆ ವಿದುರನು ಮಹಾಜ್ಞಾನಿಯು. ಪ್ರತಿದಿನವೂ ಬ್ರಾಹ್ಮಣಭೋಜನವಾಗಿ ತಚ್ಛೇಷದ ಮಾಹಾತ್ಮ್ಯೆಯನ್ನರಿತವನಾಗಿ ಅತಂಹ ಭಗವದ್ಭಾಗವತಶೇಷವಾದ ಅನ್ನವನ್ನು ಪರಿಗ್ರಹಿಸುವ ಪದ್ಧತಿಯನ್ನೇ ಇಟ್ಟಿದ್ದರೂ ಇಟ್ಟಿರಬಹುದು. ಇಂತಹ ಕಲಿಪ್ರಾಬಲ್ಯವಿರುವ ಕಾಲದಲ್ಲೂ ಕೆಲವು ಬ್ರಾಹ್ಮಣ ಗೌರವವನ್ನಿಟ್ಟಿರುವ ನಾಯುಡು ಮೊದಲಾದವರೂ ಕೂಡ ಬ್ರಾಹ್ಮಣರನ್ನೇ ಅಡಿಗೆಯವರನ್ನಾಗಿಟ್ಟು ಅವರು ಮೊದಲು ಊಟಮಾಡಿದನಂತರ ತಾವು

(೧) ಭಾರ. ೯೧. ೪೨-೪೫

ಊಟಮಾಡಿರುವದನ್ನು ಕಂಡಿರುವೆನು. ಬ್ರಾಹ್ಮಣೇತರರು ಅನಾಥಾಲಯ ವಿದ್ಯಾರ್ಥಿನಿಲಯಗಳನ್ನು ಕಟ್ಟಿ ಬ್ರಾಹ್ಮಣರಿಂದ ಅಡಿಗೆಯವರನ್ನು ಏರ್ಪಾಡು ಮಾಡಿ ಬ್ರಾಹ್ಮಣ ಬ್ರಾಹ್ಮಣೇತರ ವಿದ್ಯಾರ್ಥಿಗಳಿಗೆ ಧರ್ಮಾರ್ಥವಾಗಿ ಅನ್ನವನ್ನು ಹಾಕುತ್ತಿರುವ ಒಂದೆರಡು ನಿದರ್ಶನಗಳು ಈಗಲೂ ಉಂಟು. ಭುಕ್ತವತ್ಸು ದ್ವಿಜಾಗ್ರ್ಯೇಷು ಎಂದು ಹೇಳಿರುವದರಿಂದ ಭಗವದ್ಭಾಗವತ ಭಕ್ತರಾದ ವಿದುರರು ಪ್ರತಿನಿತ್ಯವೂ ಭಗವದ್ಭಾಗವತ ಶೇಷವಾದ ಅನ್ನವನ್ನು ಸ್ವೀಕರಿಸುವದಕ್ಕಾಗಿ ಬ್ರಾಹ್ಮಣ ಅಡಿಗೆಯುವರನ್ನೇ ಏರ್ಪಾಡುಮಾಡಿದ್ದರೆಂದೂ ನಂಬಬಹುದು. ಹಾಗಿಲ್ಲದಿದ್ದರೂ ಶ್ರೀಕೃಷ್ಣರು ಬಿಜಮಾಡಿಸುವದಿನದಲ್ಲಾದರೂ ಬ್ರಾಹ್ಮಣರನ್ನೇ ಏರ್ಪಾಡುಮಾಡಿರಬಹುದೆಂದಾಗಲಿ ನಂಬಬಹುದು. ಏಕೆಂದರೆ ಹಿಂದೆ "ತೈಸ್ತರ್ಪಯಿತ್ವಾ ಪ್ರಥಮಂ ಬ್ರಾಹ್ಮಣಾನ್ ಮಧುಸೂದನಃ । ವೇದವಿದ್ಭ್ಯೋ ದದೌ ಕೃಷ್ಣಃ ಪರಮದ್ರವಿಣಾನ್ಯಪಿ" ಎಂದು ಇರುವದರಿಂದ ಬ್ರಾಹ್ಮಣ ಸಂತರ್ಪಣಾನಂತರ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟು, ಅವರು ಸುಪ್ರೀತರಾಗುವದರಮೂಲಕ ಪಾವನತ್ವವನ್ನು ಹೊಂದಿದ ಅನ್ನವನ್ನೇ ಶ್ರೀಕೃಷ್ಣಭಗವಾನರವರೂ ಪರಿಗ್ರಹಿಸಿದರೆಂಬುದೂ ತೋರಿಬರುತ್ತದೆ. ಈ ಮೇಲುಪಜ್ಞಿಯನ್ನೂ ಶ್ರೀವಿದುರರೂ ಅವಲಂಬಿಸುತ್ತಿದ್ದರೆಂಬುದೂ ವ್ಯಕ್ತವಾಗುತ್ತದೆ. ಹೀಗೆ ವೇದವಿತ್ತುಗಳೂ ಬ್ರಹ್ಮವಿತ್ತುಗಳೂ ಆದ ಬ್ರಾಹ್ಮಣರಿಗೆ ಪರಿಗ್ರಾಹ್ಯವಾಗಿರಬೇಕಾದರೆ ಬ್ರಾಹ್ಮಣ ಪಕ್ವಾನ್ನವೇ ಆಗಿರಬೇಕೆಂದು ಊಹಿಸಬಹುದು. ಒಂದು ವೇಳೆ ಶ್ರೀಕೃಷ್ಣರಾದರೂ ಸರ್ವಜ್ಞರಾದುದರಿಂದ ವಿದುರಾನ್ನವು ಶೂದ್ರಪಕ್ವವಾದರೂ ಬಹುಶುಚಿಯಾದುವೂ ಗುಣವುಳ್ಳದೂ ಎಂದು ಪರಿಗ್ರಹಿಸಿದರು ಎಂದು ಒಪ್ಪಿದರೂ, ದ್ವಿಜಾಗ್ರೇಸರರು ಶೂದ್ರಪಕ್ವವಾಗಿದ್ದ ಪಕ್ಷದಲ್ಲಿ ಎಂದಿಗೂ ಮುಟ್ಟರು. ಇದರಮೇಲೆ ಇನ್ನೊಂದು ಪೂರ್ವಪಕ್ಷವನ್ನೂ ತರಬಹುದು, ಹೇಗೆಂದರೆ ನಿರ್ಣಯಸಾಗರ ಪ್ರೆಸ್ಸಿನಲ್ಲಿ ಮುದ್ರಿತವಾದ ಗ್ರಂಥದಲ್ಲಿ, "ಭುಕ್ತವತ್ಸು ದ್ವಿಜಾಗ್ರ್ಯೇಷು ನಿಷಣ್ಣೇಷು ವರಾಸನೇ । ಶುಚಿಸ್ಸುಪ್ರಯತೋ ಭೂತ್ವಾ ವಿದುರೋನ್ನಮುಪಾಹರತ್" ಎಂಬ ಪಾಠಾಂತರವಿದೆ; ಇದು ಶ್ರೀ ದೇಶಿಕರವರು ಉದಾಹರಿಸಿರುವದಕ್ಕೆ ವ್ಯತ್ಯಾಸವಾಗಿದೆ. ಇದರರ್ಥವೇನೆಂದರೆ ಬ್ರಾಹ್ಮಣ ಶ್ರೇಷ್ಠರೇ ಮೊದಲಾದವರೆಲ್ಲಾ ಭೋಜನಮಾಡಿ ಶ್ರೇಷ್ಠಗಳಾದ ಆಸನದಲ್ಲಿ ಕುಳಿತನಂತರ, ಶುಚಿಃ - ಬಾಹ್ಯಾಂತರ ಪಾಪಶುದ್ಧ್ಯತೆಯನ್ನು ಹೊಂದಿದವರಾಗಿ, ಸುಪ್ರಯತೋ - ತನಗೆ ಅರ್ಹವಾದ ಅನುಷ್ಠಾನಗಳನ್ನು ನಿಯಮದಿಂದ ನಡೆಸಿದ ಭಾಗವತೋತ್ತಮರಾದ ವಿದುರರು, ಅನ್ನವನ್ನು, ಉಪಾಹರತ್ - ಸಮರ್ಪಿಸಿದರು, ಎಂದು ಇರುವದರಿಂದ ಶೂದ್ರರಾದ ಅವರೇ ಬಡಿಸಿದರೆಂದು

**ದುರ್ಯೋಧನರ್, (೨)"ಭೀಷ್ಮದ್ರೋಣಾವತಿಕ್ರಮ್ಯ ಮಾಂಚೈವ ಮಧುಸೂಧನ। ಕಿಮರ್ಥಂ ಪುಂಡರೀಕಾಕ್ಷ ಭುಕ್ತಂ ವೃಷಲಭೋಜನಮ್" ಎನ್ರು**

ಹೇಳಿದೆಯಲ್ಲಾ, ಆದುದರಿಂದ ಬ್ರಾಹ್ಮಣ್ಯಪ್ರಾಪ್ತಿಯು ಅವರಿಗೆ ಉಂಟೆಂದು ಒಪ್ಪಿದರಲ್ಲವೇ ಅವರೇ ಬಡಿಸಲು ಅರ್ಹರಾಗುವರು ಎಂದಾಕ್ಷೇಪವನ್ನು 'ತರಬಹುದು. **ಉಪಾಹರತ್** ಎಂದು ಹೇಳಿದುದರಿಂದ ತಾವೇ ಬಡಿಸುವ ಕೆಲಸವನ್ನು ಮಾಡಿದರೆಂಬುದು ಅಲೌಕಿಕವು. ತಂದು ಬಡಿಸುವವರು ಬಡಿಸಿದುದನ್ನು ಯಜಮಾನನು ಸಮರ್ಪಿಸಿದನೆಂದು ಹೇಳುವ ವಾಡಿಕೆಯುಂಟು, ಹಾಗೆಯೇ ಮುಂದೆ ಪ್ರಾರ್ಥಿಸಿರುತ್ತಾರೆ, **"ತುಷ್ಯಗೋವಿಂದ ವಿತನ್ನಃ ಪರಮಂ ಧನಂ"** ಎಂಬದಾಗಿ. ಈ ಸಮಾಧಾನಗಳನ್ನು ಒಪ್ಪದ ಪಕ್ಷದಲ್ಲಿ ಇನ್ನೊಂದು ವಿಧವಾಗಿ ಸಮಾಧಾನವನ್ನೂ ಶ್ರೀ ದೇಶಿಕರವರು ಮುಂದೆ ಹೇಳುತ್ತಾರೆ. ಹೀಗೆ **ವಿದುರಾನ್ನಾನಿ ಬುಭುಜೇ ಶುಚೀನಿ ಗುಣವಂತಿ ಚ,** ಎನ್ರಿತ್ತೈಕೇಟ್ಟು **ದುರ್ಯೋಧನರ್** ಎಂಬೀಮಾತನ್ನು ಕೇಳಿ ದುರ್ಯೋಧನನು ಶ್ರೀಕೃಷ್ಣರನ್ನು ಕುರಿತು ಆಕ್ಷೇಪಿಸುತ್ತಾನೆ. ಹೇಗೆಂದರೆ—(೧) **"ಭೀಷ್ಮದ್ರೋಣಾವತಿಕ್ರಮ್ಯ ಮಾಂಚೈವ ಮಧುಸೂದನ। ಕಿಮರ್ಥಂ ಪುಂಡರೀಕಾಕ್ಷ ಭುಕ್ತಂ ವೃಷಲ ಭೋಜನಮ್"** ಭೀಷ್ಮದ್ರೋಣರನ್ನೂ **ಅತಿಕ್ರಮ್ಯ** - ತಿರಸ್ಕರಿಸಿ, **ಮಾಂಚೈವ ಮಧುಸೂಧನ** - ಹೇ ಮಧುಸೂದನನೇ ನನ್ನನ್ನೂ ಕೂಡ ತಿರಸ್ಕರಿಸಿ, ಹೇ ಪುಂಡರೀಕಾಕ್ಷನೇ, **ಕಿಮರ್ಥಂ** - ಏತಕ್ಕೆ, **ವೃಷಲ ಭೋಜನಮ್** - ಶೂದ್ರನಾದ ವಿದುರನ ಮನೆಯ ಭೋಜನವು? ಎಂದರೆ ಅಂತಹ ನಿಕೃಷ್ಟವಾದ ಅನ್ನವನ್ನು ಪರಿಗ್ರಹಿಸಿದೆ, ಎನ್ರು **ಕೇಳ್ಕ** - ಎಂದು ಆಕ್ಷೇಪಿಸಿ ಕೇಳಲಾಗಿ, ಅನ್ನವು ಕೀಳು ವರ್ಣದವರ ಮನೆಯದಾಗಿದ್ದರೂ, ಅಥವಾ ಅಧರ್ಮದಿಂದಾರ್ಜಿತದ್ರವ್ಯದಿಂದ ಸಂಪಾದಿಸಲ್ಪಟ್ಟಿದ್ದರೂ ದೋಷ ದುಷ್ಟವು; ಶೂದ್ರನ ಮೂಲಕವಾಗಿ ಅನ್ನವು ಆರು ವಿಧವಾಗಿ ದೂಷಿತವಾಗಬಹುದೆಂದು ಪ್ರಮಾಣವಿರುತ್ತದೆ. **"ಶೂದ್ರಸ್ಪೃಷ್ಟಂ ಚ ದೃಷ್ಟಂ ಚ ತದ್ದತ್ತಂ ತನ್ನಿಮಂತ್ರಿತಂ। ತತ್ಪ್ರೇರಿತಂ ಚ ಪಕ್ವಾನ್ನಂ ಶೂದ್ರಾನ್ನಂ ಷಡ್ವಿಧಂಸ್ಮೃತಮ್"** ಈ ಆರು ವಿದಗಳಲ್ಲಿ ಶೂದ್ರನಿಂದ ಸ್ಪೃಷ್ಟವಾದುದು ಪಕ್ವವಾದುದು ಎಂದು ಹೇಳಲು ಪ್ರಮಾಣವಿಲ್ಲವಾಗಿ, ಶೂದ್ರನಿಂದ ನಿಮಂತ್ರಿತವಾಗಿ ದತ್ತವಾಗಿರಬಹುದು. ಇದರಿಂದಲೇ ದುರ್ಯೋಧನನು ಪ್ರಶ್ನಿಸಿರಬಹುದು. ಹಾಗಿಲ್ಲದೆ ಶೂದ್ರಸ್ಪೃಷ್ಟವಾಗಿ ಪಕ್ವವಾಗಿದ್ದರೆ. ಸ್ವಾಮಿಯ **"ದ್ವಿಷದನ್ನಂ ನ ಭೋಕ್ತವ್ಯಂ"** ಎಂಬ ಉತ್ತರವು ದುರ್ಯೋಧನನಿಗೆ ಹೇಗೆ ಸಮಾ

(೨) ಭಾರತ ಸಾವಿತ್ರೀ.

ಧಾನವಾದೀತು ? ಅಂತಹ ಅನ್ನವು ಎಂದಿಗೂ ಪರಿಗ್ರಾಹ್ಯವಲ್ಲವು. ಭೀಷ್ಮದ್ರೋಣರು ಬ್ರಾಹ್ಮಣ ವರ್ಣದವರಾಗಿ ಮಹಾಪ್ರಾಜ್ಞರಾಗಿ ಬ್ರಹ್ಮವಿತ್ತುಗಳೇನೋ ಹೌದು. ಆದರೂ ಭೀಷ್ಮದ್ರೋಣರು ಶ್ರೀಕೃಷ್ಣರನ್ನು ತಮ್ಮ ಮನೆಗಳಿಗೆ ಊಟಕ್ಕೆ ಕರೆದರೂ ಸ್ವಾಮಿಯು ಸಮ್ಮತಿಸಲಿಲ್ಲವು, ಏಕೆಂದರೆ ಮಹಾ ದುಷ್ಟನಾಗಿ ಮಹಾ ಪಾತಕಿಯಾದ ದುರ್ಯೋಧನನಿಂದ ಪಡೆದ ಧನದಿಂದುಂಟಾದ ಅನ್ನವು; ಅಂತಹ ಅನ್ನವನ್ನು ಸ್ವೀಕರಿಸಬಾರದೆಂದು ಸರ್ವೇಶ್ವರನು ತನ್ನ ಅನುಷ್ಠಾನದಿಂದ ತೋರಿಸಿರುತ್ತಾನೆ. ಹಾಗೆಯೇ **ಮಾಂಚೈವ ಅತಿಕ್ರಮ್ಯ** - ನಿನ್ನ ಹಾಗೆ ಕ್ಷತ್ರಿಯ ರಾಜನಾಗಿರುವ ನನ್ನ ಅನ್ನವನ್ನೂ ತಿರಸ್ಕರಿಸುತ್ತೀಯೇ ಎಂದಾಕ್ಷೇಪವು; ಮಹಾ ಪಾಪಿಯಾದುದರಿಂದ ಆತನು ವಿಶೇಷ ರಾಜಭೋಗಗಳಿಗನುಗುಣವಾದ ಭಕ್ಷ್ಯಭೋಜ್ಯಾದಿ ಸಮೃದ್ಧಿ ಇರುವ ಅನ್ನವೂ ಸ್ವಾಮಿಗೆ ಇಷ್ಟವಾಗಲಿಲ್ಲವು. **ಮಾಂಚೈವ** ಎಂಬಲ್ಲೇ ಚಕಾರ ಏವಕಾರಗಳಿಂದಲೇ ತಾನು ಸರ್ವೋತ್ತಮನೆಂಬ ದುರಹಂಕಾರವು ವ್ಯಕ್ತವು. ಇಂತಹ ಮಮಕಾರದಿಂದ ಸಮರ್ಪಿಸಿದುದು ಸ್ವಾಮಿಗೆ ಗ್ರಾಹ್ಯವಲ್ಲವೆಂದು ತಿಳಿಸಲು ಇನ್ನೊಂದು ಇತಿಹಾಸವನ್ನು ಕೆಲವರು ಹೇಳುತ್ತಾರೆ. ದುರ್ಯೋಧನನ ಆತಿಥ್ಯವು ಸರ್ವಥಾ ಗ್ರಾಹ್ಯವಲ್ಲವೆಂದು ನಿರಾಕರಿಸಿ, ಸ್ವಾಮಿಯು ಭೀಷ್ಮದ್ರೋಣವಿದುರರೊಂದಿಗೆ ಮಾತಾಡುತ್ತಾ ಬರುತ್ತಿರುವಾಗ ಭೀಷ್ಮದ್ರೋಣರ ಮನೆ ಮುಂದೆ ನಿಂತು ಇದು ಯಾರ ಮನೆಗಳು ಎಂದು ಕೇಳಿದಾಗ, ಇಬ್ಬರೂ ನಮ್ಮ ಮನೆ ಎಂದು ಮಮಕಾರವನ್ನು ತ್ಯಜಿಸಲಿಲ್ಲವಾದುದರಿಂದ, ಅವರುಗಳು ಒಳಗೆ ಬರಬೇಕೆಂದು ಪ್ರಾರ್ಥಿಸಿದರೂ, ಮುಂದಕ್ಕೆ ಹೊರಟು, ಶ್ರೀ ವಿದುರರ ಮನೆಯ ಮುಂದೆ ಬಂದಾಗ ಇದು ಯಾರ ಮನೆ ಎಂದು ಕೇಳಿದ ಒಡನೆಯೇ ಶ್ರೀ ವಿದುರರು ಸ್ವಾಮಿಯವರ ಮನೆಯು, ಒಳಗೆ ದಯಮಾಡಬೇಕೆಂದು ತುಂಬಾ ದೈನ್ಯದಿಂದ ಪ್ರಾರ್ಥಿಸಲು; ಅದಕ್ಕೆ ಸರ್ವೇಶ್ವರನು ನಕ್ಕು ನನ್ನ ಮನೆಯೇ ಇದು, ಎಂದು ಮಮತಾ ತ್ಯಾಗಕ್ಕೆ ಸಂತೋಷಪಟ್ಟು ಒಳಕ್ಕೆ ಪ್ರವೇಶಿಸಿದರೆಂಬ ಕಥೆಯೂ ಉಂಟು. ಆದರೆ ಈ ಕಥೆಯು ಮಹಾ ಭಾರತದಲ್ಲಿ ಇಲ್ಲವು. ಅಲ್ಲಿ ಭೀಷ್ಮ ದ್ರೋಣಾದಿಗಳು ಶ್ರೀಕೃಷ್ಣನನ್ನೇನೋ ಕುರಿತು ಪ್ರಾರ್ಥಿಸುತ್ತಾರೆ, ಅದಕ್ಕೆ **"ಸರ್ವೇ ಭವನ್ತೋ ಗಚ್ಛನ್ತು ಸರ್ವಾ ಮೇಽಪಚಿತಿಃ ಕೃತಾ"** ತಾವುಗಳೆಲ್ಲಾ ದಯಮಾಡಿಸಬಹುದು, ತಮ್ಮಗಳೆಲ್ಲರಿಂದಲೂ ಉಪಚರಿಸಲ್ಪಟ್ಟೆನೆಂದು ಭಾವಿಸುವೆನೆಂದು ಇಷ್ಟುಮಾತ್ರ ಉತ್ತರಕೊಟ್ಟ ಹಾಗೆ ತೋರಿಬರುತ್ತದೆ; ಹೀಗೆ ಸರ್ವೇಶ್ವರನು ವಿದುರಾನ್ನವನ್ನು ಭೋಜನ ಮಾಡಿದುದನ್ನು ಕೇಳಿ ಆಕ್ಷೇಪಿಸಿದನೆಂದು ಪ್ರಮಾಣಾಂತರದಿಂದ ತೋರಿಬರುತ್ತದೆ; ಮಹಾಭಾರತದ ಉದ್ಯೋಗ ಪರ್ವದ ೯೧ನೆಯ ಅಧ್ಯಾಯದಲ್ಲಿ ಶ್ರೀ ವಿದುರರ ಮನೆಗೆ ಹೋಗುವದಕ್ಕೆ ಮುಂಚೆ

ತವಾಗಿಯೇ ಉಕ್ತಿ ಪ್ರತ್ಯುಕ್ತಿಗಳು ನಡೆಯಿತೆಂದು ಉದ್ಯೋಗಪರ್ವದ ೯೧ನೆಯ ಅಧ್ಯಾಯದಲ್ಲಿ ತೋರಿಬರುತ್ತದೆ. ತುಂಬಾ ಅಟ್ಟಹಾಸದಿಂದ ಶ್ರೀಕೃಷ್ಣನಿಗೆ ಔತನ ಮಾಡಿಸಬೇಕೆಂದು ಏರ್ಪಾಡುಮಾಡಿ ಅವರನ್ನು ದುರ್ಯೋಧನನು ಊಟಕ್ಕೆ ಕರೆಯುತ್ತಾನೆ. ದೂತರಾಗಿ ಬಂದವರು ಕೃತಾರ್ಥರಾದರಲ್ಲವೇ ಭೋಜನಮಾಡುವರು, ಹಾಗೆ ನಾನೂ ಕೃತಾರ್ಥನಾಗಿದ್ದರೆ ಊಟಮಾಡುತ್ತಿದ್ದೆನು ಎಂದು ಸ್ವಾಮಿಯು ಹೇಳಲು; ಅದಕ್ಕೆ ದುರ್ಯೋಧನನು ಓ ಗೋವಿಂದನೇ, ನಿನಗೆ ಪಾಂಡವರೂ ನಾವೂ ಇಬ್ಬರೂ ಸಮವು. ಆದುದರಿಂದ ತಿರಸ್ಕರಿಸಕೂಡದು ಎಂದು ಹೇಳಲು. ಅದಕ್ಕೆ ಸರ್ವೇಶ್ವರನು ದುರ್ಮಾರ್ಗಿಗಳೂ ಸನ್ಮಾರ್ಗಿಗಳೂ ಇಬ್ಬರೂ ಸಮ ಹೇಗಾದೀತೆಂದು ಭಾವಿಸಿ, **“ದ್ವಿಷದನ್ನಂ ನಭೋಕ್ತವ್ಯಂ”** ಎಂದು ಮುಂದೆ ಉದಾಹರಿಸುವ ವಾಕ್ಯಗಳನ್ನು ಹೇಳಿ **“ಗುಣವಂತಂಚ ಯೋದ್ವೇಷ್ಟಿ ತಮಾಹುಃ ಪುರುಷಾಧಮಂ”** ಗುಣವಂತನನ್ನು ದ್ವೇಷಿಸುವವನು ಪುರುಷಾಧಮನೆಂದು ದುರ್ಯೋಧನನನ್ನು ನಿಂದಿಸಿ, ಆದುದರಿಂದ **“ಸರ್ವಮೇತನ್ನಭೋಕ್ತವ್ಯ ಮನ್ನಂದುಷ್ಟಾಭಿ ಸಂಹಿತಂ”** ಇಷ್ಟೆಲ್ಲಾ ನೀನು ಮಾಡಿಸಿರುವ ಮೃಷ್ಟಾನ್ನವೂ ತುಂಬಾ ದುಷ್ಟವಾದುದೆಂದು ನಿರಾಕರಿಸಿ, ಈ ಸಮೂಹದಲ್ಲೆಲ್ಲಾ ಒಬ್ಬನ ಮನೆಯ ಊಟವೇ ತಮಗೆ ಪರಮಗ್ರಾಹ್ಯವಾದುದೆಂದು, **“ಕ್ಷತ್ತುರೇಕಸ್ಯ ಭೋಕ್ತವ್ಯಮಿತಿ ಮೇಧೀಯತೇಮತಿಃ”** ಎಂದು ಶ್ರೀ ವಿದುರರ ಮನೆಯ ಅನ್ನಮಾತ್ರವೇ ಯೋಗ್ಯವಾದುದೆಂದು ಮೊದಲೇ ತಿಳಿಸಿ, ಅಲ್ಲಿಂದ ಶ್ರೀ ವಿದುರರ ಮನೆಗೆ ಹೋಗಲು ಹೊರಟು ಬರುತ್ತಾರೆಂದು ಇರುತ್ತದೆ; ಶ್ರೀ ವಿದುರರ ಮನೆಯಲ್ಲಿ ಊಟವಾದನಂತರ ಮಾಡಿದ ಆಕ್ಷೇಪವಾಗಿ ಬೇರೆ ಪ್ರಮಾಣದಿಂದ ಪ್ರದರ್ಶಿಸಲ್ಪಟ್ಟಿರುತ್ತದೆ ಆದರೆ ಶ್ರೀ ಕೃಷ್ಣಭಗವಾನರವರ ಅಭಿಪ್ರಾಯವು ಅಲ್ಲಿರುವ ಭೀಷ್ಮದ್ರೋಣಾದಿ ಮಹನೀಯರ ಮನೆಯ ಅನ್ನವೂ ಕೂಡ ದುಷ್ಟನಾದ ದುರ್ಯೋಧನನ ಧನಮೂಲಕವಾದುದರಿಂದ ಪರಮತ್ಯಾಜ್ಯವೆಂದೂ, ಶ್ರೀ ವಿದುರರ ಅನ್ನವು ಮಾತ್ರ ಹಾಗೆಯೇ ತ್ಯಾಜ್ಯವಾದರೂ, ಸದಾ ಶ್ರೀಕೃಷ್ಣನಲ್ಲೇ ಸಕ್ತವಾದ ಮನಸ್ಸುಳ್ಳ ಪರಮ ಭಾಗವತೋತ್ತಮರಾದ ಪ್ರಯುಕ್ತ **“ಯಾಃ ಕ್ರಿಯಾ ಸ್ಸಂಪ್ರಯುಕ್ತಾ ಸ್ಸ್ಯುರೇ ಕಾಂತಗತಬುದ್ಧಿಭಿಃ। ತಾಸ್ಸರ್ವಾಶ್ಶಿರಸಾದೇವೋ ಪರಿಗೃಹ್ಣಾತಿ ವೈಸ್ವಯಂ”** ಎಂದು ಹೇಳಿರುವಹಾಗೆ ಪರಿಗ್ರಾಹ್ಯವೆಂದು ಸ್ವಾಮಿಯು ಮೊದಲೇ ಸಙ್ಕಲ್ಪಿಸಿಬಿಟ್ಟರೆಂದು ಹೇಳಲ್ಪಟ್ಟಿರುತ್ತದೆ. ಆ ಸಂದರ್ಭದಲ್ಲಿ ಶ್ರೀಕೃಷ್ಣನು **“ನಾಹಂ ಕಾಮಾನ್ನ ಸಂರಂಭಾನ್ನದ್ವೇಷಾನ್ನಾರ್ಥಕಾರಣಾತ್ । ನಹೇತುವಾದಾಲ್ಲೋಭಾದ್ವಾ ಧರ್ಮಂ ಜಹ್ಯಾಂ ಕಥಂಚನ”** ಈ ಎಲ್ಲಾ ಕಾರಣಗಳಿಂದಲೂ ನಾನು ಧರ್ಮವನ್ನು ಎಂದಿಗೂ ತ್ಯಜಿಸಲಾರೆ ಎಂದು ದುರ್ಯೋಧನನ ಮುಂದೆ ಪ್ರತಿಜ್ಞೆಮಾಡಿ ಅನಂತರ

ಕೇಳ್ಕ (೩)"ದ್ವಿಷದನ್ನಂ ನ ಭೋಕ್ತವ್ಯಂ ದ್ವಿಷಂತಂ ನೈವ ಭೋಜಯೇತ್।
ಪಾಂಡವಾನ್ ದ್ವಿಷಸೇ ರಾಜನ್ ಮಮಪ್ರಾಣಾಹಿ ಪಾಂಡವಾಃ" ಎನ್ಸು

ಉತ್ತರಕ್ಷಣದಲ್ಲೇ "ಕ್ಷತ್ತುರೇಕಸ್ಯ ಭೋಕ್ತವ್ಯಂ" ಎಂದು ಶ್ರೀಕೃಷ್ಣರೇ ಹೇಳಿದರೆ ಧರ್ಮವನ್ನತಿಕ್ರಮಿಸಿದರೆಂಬ ಅಪಲಾಪವು ಎಂದಿಗಾದರೂ ಕೂಡೀತೇ? ಶ್ರೀವಿದುರರು ತಾವೇ ಅಡಿಗೆಮಾಡಿ ಬಡಿಸಿದ ಅನ್ನವೇ? ಶೂದ್ರನ ಮನೆಯ ಭೋಜನವನ್ನು ಹೇಗೆ ಮಾಡಿದಿ ಎಂದು ದುರ್ಯೋಧನನು ಆಕ್ಷೇಪಿಸಿದುದಕ್ಕೆ ಸ್ವಾಮಿಯು ಉತ್ತರವನ್ನು ದಯಪಾಲಿಸುತ್ತಾರೆ. ದ್ವಿಷದನ್ನಂ ನಭೋಕ್ತವ್ಯಂ- ದ್ವೇಷಿಯ ಮನೆಯ ಅನ್ನವನ್ನು ಊಟಮಾಡಬಾರದು; ಹಿತೈಷಿಗಳ ಮನೆಯ ಅನ್ನವು ಭಗವದ್ಭಾಗವತ ನಿವೇದನಮೂಲಕ ಪೂತವಾಗಿ ಸಂಸ್ಕಾರವನ್ನು ಹೊಂದಿದ್ದರೆ, ಅದು ಜ್ಞಾನಾಯುರಾರೋಗ್ಯದಾಯಕವಾಗುತ್ತದೆ, ಹಾಗಿಲ್ಲದಿದ್ದರೆ ದುಷ್ಟವಾಗಿ ಇವುಗಳ ನಾಶಕ್ಕೆ ಕಾರಣಭೂತವಾಗುತ್ತದೆ, ಇದೂ ಅಲ್ಲದೆ ದ್ವೇಷಿಯಾದುದರಿಂದ ಆರೋಗ್ಯಕೆಡಲಿ ಅಥವಾ ನಾಶವಾಗಲಿ ಎಂದು ವಿಷಮಿಶ್ರವನ್ನೂ ಮಾಡಬಹುದು, ಆದುದರಿಂದ, ದ್ವಿಷದನ್ನಂ ನ ಭೋಕ್ತವ್ಯಂ, ಎಂದು ಹೇಳಲ್ಪಟ್ಟಿತು. ಹಾಗೆಯೇ ದ್ವಿಷಂತಂ ನೈವಭೋಜಯೇತ್ - ದ್ವೇಷಿಯನ್ನು ಭೋಜನಕ್ಕೂ ಕರೆಯಕೂಡದು; ನೀನು ಪರಮಪಾಪಿಯಾದುದರಿಂದ ನಾನು ದ್ವೇಷಿಯಾದೆನು, ಅಂತವನಿಗೆ ನೀನು ಅನ್ನವನ್ನು ಹಾಕಕೂಡದೆಂಬ ಭಾವವೂ ತೋರಿಬರುತ್ತದೆ. ಅಥವಾ ನೈವಭೋಜಯೇತ್ ಎಂಬುದು ಲೌಕಿಕವಾಗಿಯೂ ಸುಸಂಗತವು. ಹಾಗೆ ದ್ವೇಷಿಗೆ ಅನ್ನಹಾಕಿದ ಒಡನೆಯೇ ಆ ದ್ವೇಷಿಯು ಇನ್ನಾವಕಾರಣದಿಂದಲಾದರೂ ಮೃತನಾದರೆ ಅಥವಾ ಅರೋಗ್ಯ ಕೆಟ್ಟರೆ, ಆಹಾರದಲ್ಲಿ ವಿಷಮಿಶ್ರಮಾಡಿದುದರಿಂದ ಹಾಗಾಯಿತೆಂದು ಅಪವಾದವು ತಟ್ಟೀತು, ಆದುದರಿಂದಲೂ ಕೂಡದೆಂಬ ಭಾವವು. ಹೀಗೆ ಅಪವಾದಗಳು ಪ್ರಾಪ್ತವಾಗಿರುವ ನಿದರ್ಶನಗಳು ಎಷ್ಟೋ ಉಂಟು. ಆದರೆ ಹೀಗೆ ಸಾಕ್ಷಾತ್ತಾಗಿ ತಿಳಿಸಲು ಇಷ್ಟವಿಲ್ಲದೆ, ದ್ವಿಷದನ್ನಂ ನ ಭೋಕ್ತವ್ಯಂ ಎಂದು ಹೇಳಲ್ಪಟ್ಟಿತಲ್ಲಾ ನಾನು ಹೇಗೆ ದ್ವೇಷಿ ಎಂದು ದುರ್ಯೋಧನನು ಪುನಃ ಪ್ರಶ್ನಿಸಬಹುದೆಂದು ಯೋಚಿಸಿ ಹೇಳುತ್ತಾರೆ. ಪಾಂಡವಾನ್ ದ್ವಿಷಸೇ ರಾಜನ್ - ಓ ರಾಜನೇ, ರಾಜನಾಗಿ ಎಲ್ಲರನ್ನೂ ಹಿತದಿಂದ ನೋಡುವದನ್ನು ಬಿಟ್ಟು, ಪಾಂಡವಾನ್ ದ್ವಿಷಸೇ - ಗುಣಾಢ್ಯರಾದ ಪಾಂಡವರನ್ನು ದ್ವೇಷಿಸುತ್ತೀಯೆ; ಆಗಲಿ ಪಾಂಡವರನ್ನೇನೋ ನಾನು ದ್ವೇಷಿಸುವದು ಸತ್ಯವು, ನಿನಗೆ ಹೇಗೆ ನಾನು ದ್ವೇಷಿಯಾ

(೩) ಭಾರ. ಉದ್ಯೋ- ೯೧. ೨೭.

**ಉತ್ತರ ಮರುಳಿಚ್ಚೆಯ್‌ಗೈಯಾಲೇ ಶ್ರೀ ವಿದುರರುಕ್ಕು ದುರ್ಯೋಧನನ್ ಶೊನ್ನ ಜಾತಿ ವಿಶೇಷತ್ತೈ ಭಗವಾನಿಶೈನ್ದಾನಾಯಿತ್ತು.**

---

ದೆನು ಎಂದು ಕೇಳುತ್ತೀಯೋ? **ಮಮಪ್ರಾಣಾಹಿ ಪಾಂಡವಾಃ - ಜ್ಞಾನೀತ್ವಾತ್ಮೈವಮೇಮತಂ** ಎಂದೇ ನನ್ನಭಿಪ್ರಾಯವಾದುದರಿಂದ ಪಾಂಡವರು ನನಗೆ ಪ್ರಾಣವು; ಯಾವಾಗ ನನ್ನ ಭಕ್ತರಾದ ಪಾಂಡವರಿಗೆ ದ್ವೇಷಿಯೋ, ಆಗ ನನಗೂ ದ್ವೇಷಿಯಾಯಿತ; ಆದುದರಿಂದ ನಿನ್ನ ಅನ್ನವನ್ನು ಸ್ವೀಕರಿಸಲಾರೆನು, ಎನ್ರು **ಉತ್ತರಮರುಳಿಚ್ಚೆಯ್‌ಗೈಯಾಲೇ** - ಎಂದು ಉತ್ತರವನ್ನು ದಯಪಾಲಿಸಿದುದರಿಂದ, ಶ್ರೀ ವಿದುರರಿಗೆ ದುರ್ಯೋಧನನು, **ಶೊನ್ನಜಾತಿವಿಶೇಷತ್ತೈ** - ಹೇಳಿದ ಜಾತಿವಿಶೇಷವನ್ನು, **ಭಗವಾನಿಶೈನ್ದಾನಾಯಿತ್ತು**-ಸರ್ವೇಶ್ವರನು ಒಪ್ಪಿಕೊಂಡಹಾಗಾಯಿತು. ಮಹಾ ಭಾರತವಲ್ಲಿ ಶ್ರೀ ವಿದುರರು ಸಮರ್ಪಿಸಿದಅನ್ನವು ಶೂದ್ರ ಸ್ಪರ್ಶ ಶೂದ್ರ ಪಕ್ವಾದಿ ದೋಷಯುಕ್ತಗಳೆಂದು ಎಲ್ಲಿಯೂ ಹೇಳಿಲ್ಲವು. ದುರ್ಯೋಧನನು ವೃಷಲಾನ್ನವೆಂದು ಭಾರತದಲ್ಲಿ ನಿಂದಿಸಿದಹಾಗಿಲ್ಲವು. ತನ್ನ ಓತನವನ್ನು ಪರಿಗ್ರಹಿಸು ಎಂದಿಷ್ಟ ಮಾತ್ರವೇ ಪ್ರಾರ್ಥನೆಯು. ಮೊದಲು ದೂತನಿಗೆ ಅರ್ಹವಾದ ಮರ್ಯಾದೆ ಮಾಡಲಿಲ್ಲವಾದುದರಿಂದ ಒಲ್ಲೆನೆಂದೂ ಅನಂತರ ನಿನಗೆ ಪಾಂಡವರೂ ಸಮ, ಕೌರವರಾದ ನಾವೂ ಸಮ, ಆದುದರಿಂದ ನೀನು ಸಮಭಾವದಿಂದಿರತಕ್ಕದ್ದೆಂದು ದುರ್ಯೋಧನನು ಹೇಳಲು, ಅದಕ್ಕೆ ಉತ್ತರವಾಗಿ ಭಗವಂತನು ಇಬ್ಬರೂ ಸಮ ಹೇಗಾದೀತೆಂದು ಹೇಳಿ, ನೀನು ದ್ವೇಷಿಯು ಅದರಿಂದ ನಿನ್ನಮನೆಯ ಊಟವು ಗ್ರಾಹ್ಯವಲ್ಲವೆಂದು ಹೇಳಿ ವಿದುರನ ಮನೆಗೆ ಹೋದರೆಂದೂ ಹೇಳಿರುತ್ತದೆ. ಬ್ರಾಹ್ಮಣರಾದ ತಾವೆಲ್ಲಾ ಇದ್ದರೂ, ವಿದುರರಾದ ಶೂದ್ರರ ಮನೆಗೆ ಶ್ರೀ ಕೃಷ್ಣನು ಹೋಗುವದು ತಮಗೆಲ್ಲಾ ಅವಮರ್ಯಾದೆಯೆಂದು ಭಾವಿಸಿ, ಅಲ್ಲಿಗೆ ಭೀಷ್ಮದ್ರೋಣಾದಿಗಳು ಬಂದು ತಮ್ಮ ಮನೆಗಳಿಗೆ ಬರಬೇಕೆಂದು ಪ್ರಾರ್ಥಿಸುತ್ತಾರೆ ಅದಕ್ಕೆ ಶ್ರೀ ಕೃಷ್ಣಭಗವಾನ್‌ರವರು "**ಸರ್ವೇಭವನ್ತೋ ಗಚ್ಛನ್ತು ಸರ್ವಾ ಮೇಽಪಚಿತಿಃಕೃತಾ**" ತಾವುಗಳೆಲ್ಲಾ ದಯಮಾಡಿಸಬಹುದು; ತಮ್ಮಗಳಿಂದ ವಿಶೇಷವಾಗಿ ಉಪಚರಿಸಲ್ಪಟ್ಟನೆಂದು ಹೇಳಿ ಕಳುಹಿಸಿಕೊಡುತ್ತಾರೆ. ಆದುದರಿಂದ ಅನ್ನವನ್ನು ಯಾರು ಪಕ್ವಮಾಡಿದರೆಂಬುದು ಹೇಳಿಲ್ಲವಾದುದರಿಂದ ಧರ್ಮದಲ್ಲೇ ದೃಷ್ಟಿ ಇರುವ ಶ್ರೀ ವಿದುರರು ಬ್ರಾಹ್ಮಣಪಾಕಕ್ಕೇ ಏರ್ಪಾಡು ಮಾಡಿರಬಹುದೆಂದೂ, ಆದುದರಿಂದ ಲೋಕಸಙ್ಗ್ರಹಾರ್ಥವಾಗಿ ಧರ್ಮದಲ್ಲೇ ದೃಷ್ಟಿ ಇರುವ ಶ್ರೀ ಕೃಷ್ಣ ಭಗವಾನ್‌ರವರು ಆ ಕಾರಣದಿಂದಲೇ ಪರಿಗ್ರಹಿಸಿರಬಹುದೆಂದೂ ತೋರಿಬರುತ್ತದೆ.

## ಯುಗಾನ್ತರೇ ಬ್ರಾಹ್ಮಣೈರಪಿ ಭಾಗವತಶೂದ್ರಪಕ್ವಾನ್ನ ಸ್ವೀಕಾರೋ ನ ನಿಷಿದ್ಧಃ

ಆನಾಲ್ ಬ್ರಾಹ್ಮಣರ್ಕ್ಕುಮ್ ಕ್ಷತ್ರಿಯರ್ಕ್ಕುಮ್ ಶೂದ್ರನುಡೈಯ ಪಕ್ವಾನ್ನತ್ತೈ ಭುಜಿಕ್ಕೈ ನಿಷಿದ್ಧಮನ್ಱೋ ವೆನ್ನಿಲ್? (೧)"ಆರ್ಯಾಧಿಷ್ಠಿತಾ ವಾ ಶೂದ್ರಾ (ಅನ್ನ) ಸಂಸ್ಕರ್ತಾರಸ್ಸ್ಯುಃ" ಎನ್ಱು ಆಪಸ್ತಂಬಾದಿಗಳ್ ಶೊಲ್ಲುಗಿರಪಡಿಯೇ ಯುಗಾಂತರಙ್ಗಳಿಲ್ ಆರ್ಯಪರತಂತ್ರರಾನ ಗುಣವ

---

ಆದರೆ ಕೆಲವರು ಶೂದ್ರನ ಮನೆಯಲ್ಲಿ ಬ್ರಾಹ್ಮಣನಿಗೆ ಏನಾಗಬೇಕು ಎಲ್ಲಿಯಾದು ಎಂದು ಸಂದೇಹಪಡಬಹುದೆಂದು ಯೋಚಿಸಿ, ಈಗಲೂ ಕೂಡ ದೇಶಕಾಲಾನುರೀತ್ಯಾ, ಅದು ಯುಗಧರ್ಮವನ್ನನುಸರಿಸಿದುದು, ಆದುದರಿಂದ ಧರ್ಮಕ್ಕೆ ಹಾನಿಯಿಲ್ಲವೆಂದೂ, ಆ ಯುಗದ ಸಂಪ್ರದಾಯವು ಈ ಕಲಿಯುಗಕ್ಕೆ ಅನ್ವಯಿಸುವುದಿಲ್ಲವೆಂದೂ, ಮುಂದಿನ ವಾಕ್ಯದಿಂದ ಹೇಳುತ್ತಾರೆ:— ಆದರೆ **ಬ್ರಾಹ್ಮಣರಿಗೂ ಕ್ಷತ್ರಿಯರಿಗೂ, ಶೂದ್ರನುಡೈಯ ಪಕ್ವಾನ್ನತ್ತೈ ಭುಜಿಕ್ಕೈ** - ಶೂದ್ರನಿಂದ ಪಕ್ವವಾದ ಅನ್ನವನ್ನು ಭುಜಿಸೋಣವು, **ನಿಷಿದ್ಧಮನ್ಱೋ ವೆನ್ನಿಲ್** - **"ಮೃತ ಸೂತಕ ಪುಷ್ಟಾಙ್ಗಃ ದ್ವಿಜಶ್ಶೂದ್ರಾನ್ನ ಭೋಜನಃ । ಅಹಂ ತು ನೈವ ಜಾನಾಮಿ ಕಾಂಕಾಂ ಯೋನಿಂ ಗಮಿಷ್ಯತಿ"** ಎಂಬ ಶ್ರೀಪರಾಶರೋಕ್ತಿ ಮೊದಲಾದ ಶಾಸ್ತ್ರಪ್ರಮಾಣರೀತ್ಯಾ ನಿಷಿದ್ಧವಲ್ಲವೇ ಎಂಬ ಆಕ್ಷೇಪ ತಂದರೆ ಆಪಸ್ತಂಬರವಚನರೀತ್ಯಾ ಸಮಾಧಾನ ಉಂಟೆಂದು ಹೇಳುತ್ತಾರೆ.

**ಯುಗಾನ್ತರದಲ್ಲಿ ಬ್ರಾಹ್ಮಣರಿಂದಲೂ ಕೂಡ ಭಾಗವತ ಶೂದ್ರನಿಂದ ಪಕ್ವವಾದ ಅನ್ನದ ಸ್ವೀಕಾರವು ನಿಷಿದ್ಧವಲ್ಲವು.**

**ಆನಾಲ್** - ಹಾಗೆ ಆದಿನ ವೇದವಿತ್ತುಗಳೂ ಶ್ರೀಕೃಷ್ಣನೂ ಸಹ ಶ್ರೀ ವಿದುರರ ಮನೆಯಲ್ಲಿ ಭೋಜನವನ್ನು ಸ್ವೀಕರಿಸಿದ್ದಾದರೆ **ಬ್ರಾಹ್ಮಣರಿಗೂ ಕ್ಷತ್ರಿಯರಿಗೂ** ಸಹ ಶೂದ್ರನ **ಪಕ್ವಾನ್ನವನ್ನು ಭುಜಿಸಿದುದು, ನಿಷಿದ್ಧಮನ್ಱೋ ವೆನ್ನಿಲ್** - ನಿಷಿದ್ಧವಾದುದಲ್ಲವೋ ಎಂದರೆ ಶಾಸ್ತ್ರವಿರುದ್ಧವಾದುದಲ್ಲವೋ ಎಂದರೆ, **"ಆರ್ಯಾಧಿಷ್ಠಿತಾಃ** - ಪೂಜ್ಯರಾದ ಬ್ರಾಹ್ಮಣಾದಿಗಳಿಗೆ ಪರತಂತ್ರರಾದ ಎಂದರೆ ಭಗವದ್ಭಾಗವತಭಕ್ತರಾದ, **ಶೂದ್ರಾ ವಾ** - ಶೂದ್ರರೂ ಕೂಡ, **ಅನ್ನಸಂಸ್ಕರ್ತಾರಃ** - ಅನ್ನವನ್ನು ಪಕ್ವಮಾಡುವವರು, **ಸ್ಯುಃ** - ಆಗಬಹುದು" **ಎನ್ಱು** - ಎಂಬದಾಗಿ, ಆಪಸ್ತಂಬರೇ ಮೊದಲಾದವರುಗಳು, **ಶೊಲ್ಲುಗಿರಪಡಿಯೇ** - ಹೇಳಿರುವಹಾಗೆಯೇ, **ಯುಗಾಂತರಙ್ಗಳಿಲುಮ್** - ಕಲಿಯುಗವಲ್ಲದೆ

---

(೧) ಆಪ. ೨-೨.೪.

**ಚ್ಛೂದ್ರರ್‌ಗಳ್ ಅಕ್ಕೈಕ್ಕು ಅನ್ನಸಂಸ್ಕಾರಮ್ ಪಣ್ಣ ವನುಜ್ಞಾತರಾಗೈಯಾಲೇ ಅವ್ವಿಡತ್ತಿಲ್ ನಿಷಿದ್ಧಮಿಲ್ಲೈ. ಇದು (೨) "ಶುಚಿಸ್ತು ಪ್ರಯತೋಭೂತ್ವಾ ವಿದುರೋನ್ನ ಮುಪಾಹರತ್" ಎನ್ರು ಶ್ರೀ ವಿದುರರುಡೈಯ ಗುಣವಿಶೇಷಙ್ಗಳ್ ಶೊಲ್ಲುಗೈಯಾಲೇ ಸೂಚಿತಮ್. ಬ್ರಹ್ಮವಿತ್ತುಗಳಾನ ಇವರ್**

---

ದ್ವಾಪರಾದಿಗಳಾದ, ಬೇರೆ ಯುಗದಲ್ಲಿ, ಆರ್ಯರಾದ ಬ್ರಾಹ್ಮಣಾದಿಗಳಿಗೆ, **ಪರತಂತ್ರರಾನ** - ಶಿಷ್ಯರಾದ, **ಗುಣವಚ್ಛೂದ್ರರ್ ಗಳ್** - ಇಂದ್ರಿಯನಿಗ್ರಹಮಾಡಿ ಅಹಂಕಾರಮಮಕಾರಗಳನ್ನು ತ್ಯಜಿಸಿದ ಗುಣವಂತರಾದ, ಇಂತಹ ಗುಣಗಳುಳ್ಳವರಾದುದರಿಂದಲೇ ಮಹಾಬ್ರಹ್ಮವಿತ್ತುಗಳಾದ ಬ್ರಾಹ್ಮಣರನ್ನು ಆಶ್ರಯಿಸಿ ಪಂಚಸಂಸ್ಕಾರಾದಿಗಳನ್ನು ಹೊಂದಿರುವದರಿಂದ ಗುಣವಂತರಾದ ಶೂದ್ರರುಗಳು, **ಅನ್ನಸಂಸ್ಕಾರಮ್ ಪಣ್ಣ** - ಅಡಿಗೆಯನ್ನು ಮಾಡಲು, **ಅನುಜ್ಞಾತರಾಗೈಯಾಲೇ** - ಶಾಸ್ತ್ರಮೂಲಕ ಅನುಜ್ಞೆಯನ್ನು ಹೊಂದಿದವರಾದುದರಿಂದ **ಅವ್ವಿಡತ್ತಿಲ್** - ಆ ಸಂದರ್ಭದಲ್ಲಿ, **ನಿಷಿದ್ಧಮಿಲ್ಲೈ** - ನಿಷೇಧವಾದುದಲ್ಲವು. ಹೀಗೆ ಶಾಸ್ತ್ರಸಮ್ಮತಿಯುಂಟೆಂದು ಹೇಳಲು ಕಾರಣ ಉಂಟೆಂದು ಮುಂದೆ ತಿಳಿಸುತ್ತಾರೆ. **ಇದು** - ಹೀಗೆ, ಇದು ಶಾಸ್ತ್ರಸಮ್ಮತವು ನಿಷಿದ್ಧವಲ್ಲವೆಂಬುದು (೧) **ಶುಚಿಸ್ತು ಪ್ರಯತೋಭೂತ್ವಾ** - ಸ್ನಾನ ನಿಯಮಾದಿಗಳಿಂದ ಪರಿಶುದ್ಧನಾಗಿ, **ವಿದುರಃ** - ಶ್ರೀ ವಿದುರರು, **ಅನ್ನ ಮುಪಾಹರತ್** - ಅನ್ನವನ್ನು ಸಮರ್ಪಿಸಿದರು" **ಎನ್ರು** - ಎಂಬದಾಗಿ ಶ್ರೀ ವಿದುರರ, **ಗುಣವಿಶೇಷಙ್ಗಳ್ ಶೊಲ್ಲುಗೈಯಾಲೇ ಸೂಚಿತಮ್** - ಶುಚಿಯೆಂದೂ ಪ್ರಯತನಾಗಿ ಎಂದೂ ಹೇಳಿರುವದರಿಂದ, ಹೇಗೆ ಶುಚಿ ಎಂದರೆ ಬ್ರಹ್ಮವಿತ್ತಾಗಿ, ಅಹಂಕಾರ ಮಮಕಾರ ತ್ಯಾಗಮಾಡಿ, ಇಂದ್ರಿಯ ನಿಗ್ರಹಮಾಡಿ, ಸದಾ ಪರಮಾತ್ಮನನ್ನ ಧ್ಯಾನಿಸುವವನಾಗಿ ಇರುವದರಿಂದ ಬಾಹ್ಯಾಂತರಶುಚಿಯು, ಮತ್ತು ನಿಯತ ಧರ್ಮವಿಂದಿರುವವರು, ಹೀಗೆ ಅವರ ಗುಣಗಳನ್ನು ಪ್ರಶಂಶಿಸಿ ಹೇಳಿರುವದರಿಂದ ಸೂಚಿತವು. ಶೂದ್ರಸಂಪಾದಿತಾನ್ನವೇ ದೋಷಾವಹವಲ್ಲವೇ ಅದು ಬ್ರಹ್ಮವಿತ್ತುಗಳಿಂದಲೂ ಧರ್ಮಸಂಸ್ಥಾಪನಕ್ಕಾಗಿಯೇ ಅವತರಿಸಿರುವ ಭಗವಂತನಿಂದಲೂ ಪರಿಗ್ರಹವೆಂದರೆ ಅದಕ್ಕೆ ಹಿಂದೆಯೇ ಸಮಾಧಾನವಾಗಿ ಭಗವದ್ಭಾಗವತ ಪರತಂತ್ರನಾಗಿ ತನಗೆ ಧರ್ಮಾರ್ಜಿತನಾದ ದ್ರವ್ಯವನ್ನು ಭಗವಂತನಲ್ಲರ್ಪಿಸಿ, ನಿರಂತರ ಭಗವಧ್ಯಾನಪರನಾಗಿ, ಈಷನಸಿ ಅಹಂಕಾರ ಮಮಕಾರ ಇಲ್ಲದವನಾಗಿರುವದರಿಂದ ಅಂತವನು ಸಮರ್ಪಿಸಿದುದನ್ನು ಭಗವಂತನು ಶಿರಸಾ ಪರಿಗ್ರಹಿಸುವನಾದುದರಿಂದ, ಭಗವದ್ಭಾಗವತರಿಂದ ಸ್ವೀಕರಿಸಲು ಅರ್ಹವೆಂದು ವ್ಯಕ್ತಿ ವಿಶೇಷಾನುಗುಣವಾಗಿ ಪರಿ

**ಯೋಗಪ್ರಭಾವತ್ತಾಲೇ ದೇಹನ್ಯಾಸಮ್ ಪಣ್ಣಿನ ಪಿನ್ಪು, ಪ್ರಾಪ್ತನಾನ ಧರ್ಮಪುತ್ರರ್ ಶೆಯ್‌ದ ಸಂಸ್ಕಾರವಿಶೇಷಮ್ ತೂಷ್ಣೀಮನುಷ್ಠಿತ**

ಗ್ರಾಹ್ಯವೆಂದು ಹೇಳಲ್ಪಟ್ಟಿತು. ಹೀಗೆ ಪರಿಗ್ರಾಹ್ಯವಾದರೂ ಶೂದ್ರನಮನೆಯಲ್ಲೇ ಪಕ್ವವಾದುದು ಹೇಗೆ ಉಪಾದೇಯವು ಎಂಬುದಕ್ಕೆ ಎರಡು ವಿಧವಾಗಿ ಉಪಪತ್ತಿಯು ತೋರಿಸಲ್ಪಟ್ಟಿತು.

೧. ಬ್ರಾಹ್ಮಣಶ್ರೇಷ್ಠರಿಂದಲೇ ಪಕ್ವವಾಗಿ ಭಗವನ್ನಿವೇದಿತವಾಗಿರಬಹುದು. ಭಗವನ್ನಿವೇದನವಿಲ್ಲದುದಾದರೆ ಶ್ರೀಕೃಷ್ಣಭಗವಾನರೆವರು ಮುಟ್ಟರು. ವೇದವಿತ್ತುಗಳೂ ಪರಿಗ್ರಹಿಸಿರುವದರಿಂದ ಇದನ್ನು ಯಾವ ಸಂದೇಹವಿಲ್ಲದೆಯೂ ಒಪ್ಪಬಹುದು. ಇದು ಒಪ್ಪದಿದ್ದ ಪಕ್ಷದಲ್ಲಿ, ೨. ದ್ವಾಪರಯುಗದಲ್ಲಿ, ಶಿಷ್ಯನಾದ ಬ್ರಾಹ್ಮಣನಿಂದ ಸಂಸ್ಕಾರಾದಿಗಳನ್ನು ಹೊಂದಿದ ಸದ್ಗುಣಶೀಲನಾದ ಶೂದ್ರನೂ ಸಹ ಬ್ರಾಹ್ಮಣ ಕ್ಷತ್ರಿಯರುಗಳಿಗೆ ಅಡಿಗೆಯನ್ನು ಮಾಡಬಹುದು ಎಂಬ ಆಪಸ್ತಂಬರ ವಾಕ್ಯದಿಂದಲಾದರೂ ಸಮಾಧಾನವನ್ನು ಹೇಳಬಹುದು. ಅಂತೂ ಭಗವದ್ಭಾಗವತ ಭಕ್ತನಾದುದರಿಂದ ಶೂದ್ರಜಾತಿಯು ಹೋಗಿ ಬ್ರಾಹ್ಮಣ ಜಾತಿಯು ಪ್ರಾಪ್ತವಾಯಿತು ಎಂದು ಹೇಳಲು ಎಂದಿಗೂ ಸಾಧ್ಯವಿಲ್ಲವೆಂದು ಸ್ಥಾಪಿಸಿದರು. ಹಾಗೆ ಬ್ರಾಹ್ಮಣಜಾತಿಯು ಪ್ರಾಪ್ತವಾಗದಿದ್ದರೆ ಶ್ರೀವಿದುರರಿಗೆ ದೇಹವಿಯೋಗ ಉಂಟಾದಾಗ ಶ್ರೀ ವಿದುರರಿಗೆ ಶ್ರೀ ಯುಧಿಷ್ಠಿರರಿಂದ ಬ್ರಾಹ್ಮಣಾದಿಗಳಿಗೆ ಮಾತ್ರವೇ ವಿಧಿಸಿರುವ ಬ್ರಹ್ಮಮೇಧ ಸಂಸ್ಕಾರವು ಮಾಡಲ್ಪಟ್ಟಿತಲ್ಲಾ ಅದು ಹೇಗೆ? ಎಂಬ ಆಕ್ಷೇಪಕ್ಕೆ ಮುಂದೆ ಎರಡು ವಿಧವಾಗಿ ಸಮಾಧಾನವನ್ನು ಹೇಳಬಹುದೆಂದು ಅಪ್ಪಣೆ ಕೊಡಿಸುತ್ತಾರೆ.—ಬ್ರಹ್ಮವಿತ್ತಾನ - ಪೂರ್ವಜನ್ಮದಲ್ಲಿ ಅನುಷ್ಠಿಸಿದ ಯೋಗಪ್ರಭಾವದಿಂದ ಈ ನಿಕೃಷ್ಟ ಜನ್ಮದಲ್ಲೂ ಬ್ರಹ್ಮವಿತ್ತಾನ, ಹೀಗೆ ಎಲ್ಲಾ ಪರಿಗೂ ಉಂಟೋ ಎಂದರೆ ಹಾಗೆ ಉಂಟೆಂಬುದಕ್ಕೆ ಶಬರಿ, ಗಜೇಂದ್ರ, ಆದಿ ಭರತರು ಮೊದಲಾದವರ ಅನೇಕ ನಿದರ್ಶನಗಳುಂಟು, ಹಾಗೆ ಬ್ರಹ್ಮವಿತ್ತಾಪ, ಇವರ್- ಈ ವಿದುರರು, ಯೋಗಪ್ರಭಾವತ್ತಾಲೇ-ಹಿಂದೆ ಭಕ್ತಿಯೋಗವನ್ನವಲಂಬಿಸಿ ಮಾಡಿದ ಉಪಾಸನೆಯ ಮಾಹಾತ್ಮ್ಯದಿಂದ, ದೇಹನ್ಯಾಸಮ್ ಪಣ್ಣಿನ ಪಿನ್ಪು - ದೇಹತ್ಯಾಗವನ್ನು ಮಾಡಿದನಂತರ, ಯೋಗನಿಷ್ಠರು ಯೋಗಬಲದಿಂದ ತಮ್ಮ ಇಷ್ಟಾನುಸಾರ ದೇಹತ್ಯಾಗಮಾಡಬಹುದೆಂಬುದು ದೇಹನ್ಯಾಸಂ ಪಣ್ಣಿನ ಎಂಬ ಪ್ರಯೋಗದಿಂದ ಸೂಚಿತವು, ಇದಕ್ಕೆ ಶ್ರೀ ಭೀಷ್ಮರೂ ಸಹ ನಿದರ್ಶನವು, ಉತ್ತರಾಯಣ ಕಾಲವನ್ನು ನಿರೀಕ್ಷಿಸಿ ಇವರು ದೇಹತ್ಯಾಗಮಾಡಿದರೆಂಬ ವೃತ್ತಾಂತ ಉಂಟು, ಪ್ರಾಪ್ತನಾನ ಯುಧಿಷ್ಠಿರನ್-

ಮಾದಲ್, ವ್ಯಕ್ತಿವಿಶೇಷನಿಯತಮಾದಲಾಮ್ ಇತ್ತನೈ. ಇದುಕೊಂಡು ವ್ಯಕ್ತ್ಯನ್ತರಙ್ಗಳಿಲ್ ನ್ಯಾಯಸಂಚಾರಮ್ ಪಣ್ಣವೊಣ್ಣಾದು. ಇಙ್ಗನ

---

ಅಲ್ಲಿಗೆ ಬಂದು ಸೇರಿದ ಧರ್ಮರಾಜನು. ಶೆಯ್ದ ಸಂಸ್ಕಾರ ವಿಶೇಷಮ್-ಮಾಡಿದ ಬ್ರಹ್ಮಮೇಧರೂಪ ಉತ್ತರ ಕೃತ್ಯರೂಪ ಸಂಸ್ಕಾರವು, (೧) ತೂಷ್ಣೀಮನುಷ್ಠಿತಮಾತಲ್ - ಮಂತ್ರಗಳನ್ನೇನೂ ಉಚ್ಚರಿಸದೆ ಬರೀ ತಂತ್ರರೂಪದಲ್ಲಾಗಲಿ, (೨) ಅಥವಾ ವ್ಯಕ್ತಿವಿಶೇಷ ನಿಯತಮಾದಲ್ - ಮಹಾ ಬ್ರಹ್ಮವಿತ್ತಾಗಿ ಭಾಗವತಾಗ್ರೇಸರರಾಗಿರುವ ವ್ಯಕ್ತಿ ವಿಶೇಷವನ್ನು ಅನುಸರಿಸಿದುದಾಗಿಯಾಗಲಿ ಆಮತ್ತನೇ - ಆಗುತ್ತದೆಯಷ್ಟೇ; ಎಂದರೆ ಎರಡುವಿಧ ಸಮಾಧಾನವನ್ನು ಹೇಳಬಹುದು. ಕ್ಷತ್ರಿಯರಾಜನು ಶೂದ್ರನಿಗೆ ದೇಹತ್ಯಾಗಾನಂತರ ಸಂಸ್ಕಾರಾದಿಗಳನ್ನು ನಡಿಸುವದೇ ಶಾಸ್ತ್ರವಿರುದ್ಧವು; ಅದೂ ಅಲ್ಲದೆ ಬ್ರಾಹ್ಮಣಾದಿ ಭಾಗವತರುಗಳಿಗೆ ನಡೆಯುವ ಬ್ರಹ್ಮಮೇಧ ಸಂಸ್ಕಾರವನ್ನು ನಡೆಸುವದು ಇನ್ನೂ ವಿರುದ್ಧವು. ಇದಕ್ಕೆ ಸಮಾಧಾನವನ್ನು ಎರಡು ವಿಧವಾಗಿ ಹೇಳಬಹುದೆಂದು ತಿಳಿಸುತ್ತಾರೆ. (೧) ಮಂತ್ರಗಳಿಲ್ಲದೆ ತಾಂತ್ರಿಕವಾಗಿ ನಡೆಸಲ್ಪಟ್ಟಿತೆಂದು ಭಾವಿಸಬಹುದು. ಹಾಗಾದರೆ ಎಲ್ಲಾ ಶೂದ್ರರಿಗೂ ತಾಂತ್ರಿಕವಾಗಿ ಅದನ್ನು ನಡೆಸಬಹುದೆಂದು ವಿಧಿ ಎಲ್ಲಿ ಇದೆ ಎಂದಾಗಲಿ ಅಥವಾ ಶ್ರೀ ವಿದುರರಿಗೆ ಮಂತ್ರಪೂರ್ವಕವಾಗಿಯೇ ಬ್ರಹ್ಮಮೇಧ ಸಂಸ್ಕಾರ ನಡೆಯಿತೆಂದಾಗಲಿ ಆಕ್ಷೇಪಿಸಿದರೆ, (೨) ವಿದುರರು ಅಸದೃಶವಾದ ಬ್ರಹ್ಮಜ್ಞಾನವುಳ್ಳವರಾದುದರಿಂದ, ಅಂತಹ ವ್ಯಕ್ತಿವಿಶೇಷಕ್ಕೆ ಮಾತ್ರ ಸಲ್ಲುತ್ತದೇ ವಿನಾ ಅದನ್ನು ಎಲ್ಲರಿಗೂ ಅನ್ವಯಿಸುವದು ಯುಕ್ತವಲ್ಲವೆಂಬ ಭಾವವು. ಅದು ವ್ಯಕ್ತಿವಿಶೇಷನಿಯತಂ ಎಂದು ಹೇಳಿದರಲ್ಲಾ ಅದಕ್ಕೇನಾದರೂ ಸಾಧಕ ಉಂಟೋ ಎಂದರೆ ಆಗ ಅವರಿಗೆ ಔರ್ಧ್ವ ದೇಹಿಕ ಕರ್ಮಗಳನ್ನು ಮಾಡು ಎಂದು ಯುಧಿಷ್ಠಿರರಿಗೆ ಉಂಟಾದ ಅಶರೀರ ವಾಕ್ಯದಿಂದಲೇ ಊಹಿಸಬಹುದು. ಎಲ್ಲಾ ವಿಷಯದಲ್ಲೂ ಅಂತಹ ಅಶರೀರವಾಕ್ಯ ಉಂಟಾಗಲಾರದಷ್ಟೆ? ಆದುದರಿಂದಲೇ ವ್ಯಕ್ತಿ ವಿಶೇಷ ನಿಯತವು. ಇದುಕೊಂಡು - ಈ ವ್ಯಕ್ತಿವಿಶೇಷ ನಿಯತವಾದುದನ್ನು ನಿದರ್ಶನವಾಗಿಟ್ಟುಕೊಂಡು, ವ್ಯಕ್ತ್ಯನ್ತರಙ್ಗಳಿಲ್ - ಬೇರೆ ವ್ಯಕ್ತಿಗಳಲ್ಲಿ, ನ್ಯಾಯಸಂಚಾರಂ - ಆದೇ ನ್ಯಾಯದ ಹೊರಡಿಸೋಣವನ್ನು, ಪಣ್ಣವೊಣ್ಣಾದು - ಮಾಡುವದು ಸರಿಯಲ್ಲವು. ವ್ಯಕ್ತಿ ವಿಶೇಷಗಳ ಪ್ರವೃತ್ತಿನ್ಯಾಯವನ್ನೇ ತಂದು ಸಾಧಾರಣರಿಗೂ ಅನ್ವಯಿಸುವದು ಉಚಿತವಲ್ಲವು. ಎಂಬ ಭಾವವು. ಹಾಗೆ ವ್ಯಕ್ತಿ ವಿಶೇಷಾನುಗುಣವಾಗಿ ವಿಧಿವ್ಯತ್ಯಸ್ತ ಪ್ರವೃತ್ತಿಗ

**ಲ್ಲಾದಪ್ಪೋದು, ಧರ್ಮೋತ್ತರರಾನ ಪಾಣ್ಡವರ್ಗಳುಕ್ಕೊರು ನಿಯತಿ ವಿಶೇಷತ್ತಾಲೆ ವನ್ದ ದಾರ ಸಾಧಾರಣ್ಯತ್ತೈಕ್ಕೊಣ್ಡು ಸರ್ವಲೋಕಮುಮ್ ವ್ಯಾಕುಲಮಾಮ್ಪಡಿಯಾಮ್.**

---

ಉಂಟೋ ಎಂದರೆ ಉಂಟೆಂದು ನಿದರ್ಶನವನ್ನು ತೋರಿಸುತ್ತಾರೆ. ಇಜ್ಜನ **ಲ್ಲಾದಪ್ಪೋದು** - ಹೀಗೆ ಶ್ರೀ ವಿದುರರ ವಿಷಯದಲ್ಲಿ ವ್ಯಕ್ತಿವಿಶೇಷದ ಮಹಿಮೆಯಿಂದ ಅಂತಹ ಸಂಸ್ಕಾರವು ಸಲ್ಲುತ್ತದೆಂದು ಒಪ್ಪಿಕೊಳ್ಳದೇ ಹೋದರೆ, **ಧರ್ಮೋತ್ತರರಾನ** - ಧರ್ಮ ಪ್ರಾಚುರ್ಯವುಳ್ಳ ಧರ್ಮದೇವತೆಗಳೇ ಎಂದು ಹೇಳಿಸಿಕೊಳ್ಳುವಂತಹ ಪಾಂಡವರಿಗೆ, **ಒರು ನಿಯತಿ ವಿಶೇಷತ್ತಾಲೇ** - ಒಂದು ವ್ಯಕ್ತಿ ವಿಶೇಷ ನಿಯತಿಯಿಂದ, **ವನ್ದ** - ಬಂದ, **ದಾರ ಸಾಧಾರಣ್ಯತ್ತೈಕ್ಕೊಂಡು** - ಒಬ್ಬ ಯುವತಿಯಾದ ದ್ರೌಪದಿಯು ಐದು ಜನ ಅಣ್ಣತಮ್ಮಂದಿರುಗಳಿಗೆ ಸಾಧಾರಣವಾಗಿ ಪತ್ನಿಯಾಗಿರುವದನ್ನನುಸರಿಸಿ, **ಸರ್ವಲೋಕಮುಮ್** - ಸಮಸ್ತಲೋಕದ ಜನರೂ ಸಹ, **ವ್ಯಾಕುಲಮಾಂ ಪಡಿಯಾಮ್** - ಬುದ್ಧಿಭ್ರಂಶ ಉಂಟಾಗುವಹಾಗೆ ಆಗುತ್ತದೆ. ಐದು ಜನ ಭ್ರಾತೃಗಳು ಒಬ್ಬಳನ್ನೇ ಪತ್ನಿಯಾಗಿ ವರಿಸಿರುತ್ತಾರೆ. ಬಹು ಧರ್ಮಿಷ್ಟರಾದವರ ಪ್ರವೃತ್ತಿಯೇ ಹೀಗಾಗಿರುವಾಗ, ಮತ್ತು ಅಂತಹವರು ಸರ್ವೇಶ್ವರನಾದ ಶ್ರೀಕೃಷ್ಣನಿಗೆ ಬಹುಮಾನ್ಯರಾಗಿ **ಮಮಪ್ರಾಣಾಹಿ ಪಾಂಡವಾಃ** ಎಂದು ಹೇಳುವಹಾಗೆ ಆದ ನಂತರ, ನಾವುಗಳೂ ಧರ್ಮದಿಂದಲೇ ಹಾಗೆಯೇ ನಡೆಯೋಣ, ಹಾಗೆಯೇ ನಾವು ಭ್ರಾತೃಗಳೆಲ್ಲಾ ಒಬ್ಬಳನ್ನೇ ಪತ್ನಿಯಾಗಿ ಏಕೆ ವರಿಸಕೂಡದೆಂಬ ಭ್ರಮೆಯು ಉಂಟಾಗಬಹುದು ಆದುದರಿಂದ ಪಾಂಡವ ದ್ರೌಪದಿಗಳಿಗೆ ಮಾತ್ರವೇ, ವಿಧಿ ವಿಹಿತವಲ್ಲದಿದ್ದರೂ ನಿಯುತವಾದುದು ಎಂದು ಇಟ್ಟುಕೊಳ್ಳಬೇಕು. ಶ್ರೀಕೃಷ್ಣನೂ ಹಾಗೆಯೇ ಅಷ್ಟಮಹಿಷಿಗಳನ್ನೂ ಮದುವೆ ಮಾಡಿಕೊಂಡು ಇನ್ನೂ ಅನೇಕ ಗೋಪಿಯರನ್ನೂ ಪತ್ನಿಯರಾಗಿ ಹೊಂದಿದ್ದನೆಂದು ಎಲ್ಲರೂ ಹಾಗೆಯೇ ಪ್ರವರ್ತಿಸಬಹುದೋ? ಇಂತಹವುಗಳೆಲ್ಲಾ ವ್ಯಕ್ತಿ ವಿಶೇಷ ನಿಯತವೆಂಬ ಭಾವವು. ಹೀಗೆ ಐದು ಜನರಿಗೆ ಪತ್ನಿಯಾಗಿದ್ದರೂ, ದ್ರೌಪದಿಯು ಮಹಾಪತಿವ್ರತಾಶಿರೋಮಣಿ ಎಂದೂ ಶ್ರೀಕೃಷ್ಣನಿಂದ ಬಹುವಾಗಿ ಸನ್ಮಾನಿಸಲ್ಪಟ್ಟಳೆಂದೂ, ಅಂತಹ ಪತಿವ್ರತೆಗೆ ಮಾಡಿದ ಅವಮರ್ಯಾದೆಗಾಗಿ ಸರ್ವ ಕೌರವ ಕುಲವೂ ನಾಶವನ್ನು ಹೊಂದಿತೆಂಬುದೂ ಸರ್ವರಿಗೂ ವಿದಿತವಾದ ವಿಷಯವೇ. ದ್ರೌಪದಿಯು ಒಬ್ಬಳೇ ಹೇಗೆ ಐದು ಮಂದಿ ಪಾಂಡವರಿಗೆ ಪತ್ನಿಯಾದಳೆಂಬುದು ಧರ್ಮವೇ ಅಧರ್ಮವೇ ಎಂಬ ಚರ್ಚೆಯೂ ಸಹ ಭಾರತ ಆದಿಪರ್ವ ೨೧೧ - ೨೧೫ನೇ ಅಧ್ಯಾಯಗಳಲ್ಲಿ

ಉಪಪಾದಿತವು. ಅರ್ಜುನನು ಲಕ್ಷ್ಯವನ್ನು ಭೇದಿಸಿದನಂತರ ದ್ರೌಪದಿಯನ್ನು ಕರೆತಂದು ಭೀಮಾರ್ಜುನರಿಬ್ಬರೂ ತಮ್ಮ ಜನನಿಯನ್ನು ಕುರಿತು ಈವತ್ತು ಮಹತ್ತಾದ ಭಿಕ್ಷವನ್ನು ತಂದಿರುವೆವು ಎಂದು ಹೇಳಲು, ಕುಂತಿಯು ಅದು ಯಾವುದೆಂದು ವಿಚಾರಮಾಡಿ ತಿಳಿಯುವದಕ್ಕೆ ಮುಂಚೆಯೇ ಐದು ಜನರು ಭೋಜನ ಮಾಡಿರಿ ಎಂದು ಹೇಳಿಬಿಟ್ಟಳು. ಕುಂತಿಯ ಮಾತನ್ನು ವ್ಯರ್ಥ ಮಾಡಲು ಇಷ್ಟವಿಲ್ಲದೆ ಯುಧಿಷ್ಠಿರನು ದ್ರುಪದನನ್ನು ಕುರಿತು ಐದು ಜನರಿಗೂ ದ್ರೌಪದಿಯನ್ನು ವಿವಾಹಮಾಡಿಕೊಡು ಎಂದು ಪ್ರಾರ್ಥಿಸಲು; "ಬಹೂನಾಂ ಏಕ ಪತ್ನಿತಾ"ಎಂಬುದು ಲೋಕವೇದ ವಿರುದ್ಧವಾದುದು, ಆಗುವದಿಲ್ಲವೆನ್ನಲು; ಅದಕ್ಕೆ ಯುಧಿಷ್ಠಿರನು ಜಟಿಲಾ ಎಂಬ ಗೌತಮಿಯು ಏಳು ಋಷಿಗಳನ್ನೂ, ಹಾಗೆಯೇ ವಾರ್ಕ್ಷೀ ಎಂಬ ಯುವತಿಯು ಹತ್ತುಮಂದಿ ಭ್ರಾತೃಗಳಿಗೆ ಪತ್ನಿಯಾಗಿದ್ದಳೆಂದೂ ಪುರಾಣಗಳಲ್ಲಿ ಹೇಳಿರುವದರಿಂದ ಧರ್ಮವಿರುದ್ಧವಲ್ಲವೆಂದು ನುಡಿಯಲು; ಅದಕ್ಕೂ ರಾಜನು ಒಪ್ಪದಿರಲು ; ಆಗ ಶ್ರೀ ವ್ಯಾಸರು ಯಾದೃಚ್ಛಿಕವಾಗಿ ಬಂದು, ಕುಂತೀ ಯುಧಿಷ್ಠಿರರ ಇಷ್ಟದಂತೆ ನಡೆಸುವದು ಅಧರ್ಮವಾಗುವದಿಲ್ಲವು; ಭಗವತ್ಸಂಕಲ್ಪಾನುಸಾರ ವ್ಯಕ್ತಿವಿಶೇಷ ನಿಯತವಾದುದು, ದ್ರೌಪದಿಗೆ ಇದು ಯುಕ್ತವು, ಈಗ ಆಕೆಯ ಪೂರ್ವ ವೃತ್ತಾಂತವನ್ನು ತಿಳಿಸುವೆನು ಕೇಳಿರಿ ಎಂದು ಹೇಳಿ ಒಡಂಬಡಿಸುತ್ತಾರೆ. ಈಕೆಯು ಹಿಂದಿನ ಜನ್ಮದಲ್ಲಿ ಇಂದ್ರಸೇನಾ ಅಥವಾ ನಾಲಾಯನೀ ಎಂಬ ಹೆಸರಿನಿಂದ ವೃದ್ಧನಾಗಿಯೂ ಕುಷ್ಟರೋಗಿಯಾಗಿಯೂ ಇರುವ ಮೌದ್ಗಲ್ಯರೆಂಬ ಮಹಾಮುನಿಯನ್ನು ಪತಿಯಾಗಿ ವರಿಸಿ ತುಂಬಾ ಶುಶ್ರೂಷೆಮಾಡುತ್ತಾ, ಕುಷ್ಠರೋಗಿಯೆಂದು ತಿರಸ್ಕರಿಸದೆ ಪತಿವ್ರತೆಯಾದುದರಿಂದ ಪತಿಯ ಎಲೆಯಲ್ಲೇ ಉಚ್ಛಿಷ್ಟವನ್ನು ಭುಜಿಸುತ್ತಾ, ಆಗ ಪತಿಯು ಅವಳ ಪತಿವ್ರತಾಧರ್ಮದಿಂದ ಪ್ರೀತನಾಗಿ ಕಾಮರೂಪವನ್ನು ಧರಿಸುವ ಶಕ್ತಿಯಿದ್ದುದರಿಂದ, ದಿವ್ಯಾಂಗ ಸುಂದರನಾಗಿ ಕಾಣಿಸಿಕೊಂಡು ನೀನು ವರವನ್ನು ಬೇಡು ಕೊಡುವೆನು ಎಂದು ಹೇಳಲು, ಅದಕ್ಕೆ ಆಕೆಯು ನೀನು ಕಾಮರೂಪವನ್ನು ಹೊಂದುವ ಶಕ್ತಿಯಿರುವದರಿಂದ ನೀನು ಐದು ಲಾವಣ್ಯವುಳ್ಳ ಶರೀರಗಳನ್ನುಗ್ರಹಿಸಿ ನನ್ನೊಂದಿಗೆ ಕ್ರಮೇಣ ರಮಿಸತಕ್ಕದ್ದೆಂದು ಬೇಡಲು, ಅದಕ್ಕೆ ಒಪ್ಪಿ ಆಕೆಯೊಂದಿಗೆ ಇಂದ್ರಾದಿ ಲೋಕಗಳಲ್ಲೆಲ್ಲಾ ರಮಿಸಿದನು, ಎಂದು ಶ್ರೀವ್ಯಾಸರು ಹೇಳಲು, ಅದಕ್ಕೆ ದ್ರುಪದನು ನನ್ನ ಅಧ್ವರದಲ್ಲಿ ನನ್ನ ಮಗಳಾಗಿ ಹುಟ್ಟಲು ಕಾರಣವೇನೆಂದು ಬೆಸಗೊಳ್ಳಲು; ಶ್ರೀ ವ್ಯಾಸರು ದ್ರುಪದನನ್ನು ಕುರಿತು ಹೇಳುತ್ತಾರೆ.—ಎಲೈ ದ್ರುಪದರಾಜನೇ ಕೇಳು, ಮೌದ್ಗಲ್ಯರಿಗೆ ವೈರಾಗ್ಯವುಂಟಾಗಿ, ಈ ನಾಲಾಯನೀಯನ್ನು ತ್ಯಜಿಸಿ, ಪರಬ್ರಹ್ಮೋಪಾಸನೆಯನ್ನು ಕೈಕೊಂಡರು. ಅನಂತರ ನಾಲಾಯಿನಿಯು ಇನು

ಕಾಮತೃಪ್ತಿಯಿಲ್ಲದವಳಾಗಿ ರುದ್ರನನ್ನು ಕುರಿತು ತಪಸ್ಸನ್ನಾಡಿ, ಸರ್ವ ವಿಧ ಭೋಗಗಳನ್ನೂ ಹೊಂದಲು ಯೋಗ್ಯನಾದ ಪತಿಯನ್ನು ಕೊಡು, "ಪತಿಂ ದೇಹಿ ಪತಿಂದೇಹಿ" ಎಂದು ಐದು ಸಲ ಪ್ರಾರ್ಥಿಸಲು, ಆಗ ರುದ್ರನು ಪ್ರತ್ಯಕ್ಷನಾಗಿ ನೀನು ದ್ರುಪದರಾಜನ ಮಗಳಾಗಿ ಒಬ್ಬೇ ವರಾ ಶೂರರಾದ ಐದು ಜನ ಪತಿಗಳನ್ನು ಹೊಂದುವಿ ಎಂದು ವರವನ್ನೀಯಲು; ಅದಕ್ಕೆ ನಾಳಾಯಿನಿಯು ಒಬ್ಬ ಸ್ತ್ರೀಗೆ ಐದು ಗಂಡಂದಿರೆಂಬುದು ಅಧರ್ಮವಲ್ಲವೇ; ಗಂಡಸಿಗೇನೋ ಹೆಚ್ಚು ಜನ ಭಾರ್ಯರುಗಳಿರಬಹುದು. "ಏಕೋಹಿಭರ್ತಾ ನಾರೀಣಾಂ" ಎಂಬುದು ಪ್ರಮಾಣಸಿದ್ಧವು; ಹೀಗಿರುವಾಗ ನಿಮ್ಮ ವರವು ಸರಿಯಿಲ್ಲವೇ ಎಂದು ಹೇಳಿಕೊಳ್ಳಲು; ಅದಕ್ಕೆ ರುದ್ರನು ನೀನು ಯೋಚಿಸುವ ಕೆಲಸವಿಲ್ಲವು. ನಿನ್ನ ಪೂರ್ವಪತಿಯಾದ ಮೌದ್ಗಲ್ಯರ ಶಾಪದಿಂದ ನೀನು ಐದು ಪತಿಗಳನ್ನು ಮದುವೆಯಾಗುವದು ತಪ್ಪದು. ಆದರೆ ನಿನಗೆ ಸರ್ವ ಸಿದ್ಧಿಯೂ ಉಂಟಾಗುತ್ತದೆ, ಐದು ಪತಿಗಳು ಳ್ಳೋಣವು ನಿನಗೆ ಮಾತ್ರ ಅನರ್ಥರೂಪವಾಗುವದಿಲ್ಲವೆಂದು ಸಮಾಧಾನಮಾಡಿ, ಗಂಗಾ ನದಿಯನ್ನು ಕುರಿತು ತೆರಳು ಎಂದು ಹೇಳಿ ಕಳುಹಿಸಿದುದರಿಂದ, ದ್ರೌಪದಿಯ ವಿಷಯದಲ್ಲಿ ಐದು ಮಂದಿಗೆ ಪತ್ನಿಯಾಗಿರುವದು ಅಧರ್ಮವಾಗುವದಿಲ್ಲವು ಇದೂ ಅಲ್ಲದೆ ಅಶರೀರವಾಣಿಯ ಮೂಲಕವಾಗಿಯೂ ಸಮ್ಮತಿಯು ದೈವಾನುಗ್ರಹದಿಂದಲೂ ದೊರೆಯಿತು. ಅಶರೀರವಾಕ್ಯ ಉಂಟಾಗಬೇಕಾದರೆ, ಹಾಗೆ ಐದು ಮಂದಿಯರಿಗೆ ಒಬ್ಬಳೇ ಪತ್ನಿಯಾಗಿರುವದು ಶಾಸ್ತ್ರವಿರುದ್ಧವೆಂಬುದು ವ್ಯಕ್ತವು. ಆದರೂ ಸರ್ವೇಶ್ವರ ಸಮ್ಮತವೆಂದು ಸೂಚಿಸುವದಕ್ಕಾಗಿಯೇ ಆಕಾಶವಾಣಿಯು. ಆದುದರಿಂದ ಅಧರ್ಮವಾಗುವದಿಲ್ಲವು ಇದನ್ನು ನೋಡಿ ಇತರ ಸ್ತ್ರೀಯರು ಅವಲಂಬಿಸಿದುದಾದರೆ, ಸರ್ವಾನರ್ಥವೂ ನರಕಪ್ರಾಪ್ತಿಯೂ ಸಹ ಉಂಟಾಗುತ್ತವೆ ಎಂಬ ಭಾವವು ಹಾಗೆಯೇ ಅನೇಕರು ಒಬ್ಬ ಹೆಂಗಸನ್ನು ಮದುವೆಮಾಡಿಕೊಂಡರೆ ಅನರ್ಥಗಳೂ ನರಕಪ್ರಾಪ್ತಿಯೂ ತಪ್ಪದು ಎಂಬುದು ಸೂಚಿತವು. ಶ್ರೀ ವ್ಯಾಸಮಹರ್ಷಿಯೇ ಪಾಂಡವರ ಮತ್ತು ದ್ರೌಪದಿಯ ವಿಷಯದಲ್ಲಿ ವಿಹಿತವೆಂದೂ ಇತರರ ವಿಷಯದಲ್ಲಿ ಅಧರ್ಮವೆಂದೂ ದ್ರುಪದರಾಜನನ್ನು ಕುರಿತು ಹೇಳಿರುತ್ತಾರೆ. "ತೇಷಾಮೇವ ವಾಯಂ ವಿಹಿತಃಸ್ಯಾದ್ವಿವಾಹೋ ಯಥಾಹ್ಯೇಷ ದ್ರೌಪದೀ ಪಾಂಡವಾನಾಂ। ಅನ್ಯೇಷಾಂ ನೃಣಾಂ ಯೋಷಿತಾಂ ಚ ನ ಧರ್ಮಃ ಸ್ಯಾನ್ಮಾನವೋಕ್ತೋನರೇಂದ್ರ॥(ಆದಿ. ೨೧೫-೬). ಆದುದರಿಂದ ಹೊಸ ಜಾತಿಯುಂಟಾಗುವದಿಲ್ಲವಾದುದರಿಂದ ಅವರವರ ಉಚಿತ ಕರ್ಮದಲ್ಲಿದ್ದು ಭಗವತ್ಕೈಂಕರ್ಯವನ್ನು ಮಾಡತಕ್ಕದ್ದು.

---

ಆಗ್ನೈಯೂಲ್ - ಸತ್ತರ್ಕದಿಂದ ಕೂಡಿ ಶೂದ್ರಾದಿಗಳಿಗೆ ಉತ್ಕೃಷ್ಟಜಾತಿ

ತಸ್ಮಾತ್ ಸ್ವೇಸ್ವೇ ಕರ್ಮಣ್ಯಭಿರತಸ್ಸನ್, ಭಗವತ್ಕೈಙ್ಕರ್ಯ ನಿರತೋಭವ.

ಆಗೈಯಾಲ್ ತಸ್ಸಾತ್ತಮ್ ಜಾತಿಗಳೈ ವಿಡಾದೇ ನಿನ್ರವ್ವೋ ಜಾತಿಗಳುಕ್ಕುಚಿತಪ್ರಕ್ರಿಯೈಯಾಲೇ ಯಥಾಧಿಕಾರಂ ಭಗವತ್ಕೈಙ್ಕರ್ಯಮ್ ಪಣ್ಣಪ್ರಾಪ್ತಮ್. ಮೋಹನ ಶಾಸ್ತ್ರಙ್ಗಳಿಲ್ ಚೊನ್ನ ಜಾತ್ಯುದ್ಧಾರಾದಿಗಳೈ ಪ್ರಾಮಾಣಿಕರ್ ನಿನೈಕ್ಕಲಾಗಾದು.

ಯುಂಟಾಗುವದಿಲ್ಲವೆಂಬುದು ಶಾಸ್ತ್ರಸಿದ್ಧವಾದುದರಿಂದ, **ತಸ್ಸಾತ್ತಮ್‌ಜಾತಿಗಳೈ ವಿಡಾದೇ** - ತಮ್ಮತಮ್ಮ ಜಾತಿಗಳನ್ನು ಬಿಡದೇ, **ನಿನ್ರು** - ಇದ್ದುಕೊಂಡು, **ಅವ್ವೋಜಾತಿಗಳುಕ್ಕುಚಿತ ಪ್ರಕ್ರಿಯೈಯಾಲೇ** - ಆಯಾಜಾತಿಗಳಿಗೆ ಯೋಗ್ಯವಾದ ಎಂದರೆ ಶಾಸ್ತ್ರವಿಹಿತವಾದ ರೀತಿಯಲ್ಲಿ, **ಯಥಾಧಿಕಾರಂ** - ತನ್ನ ಅಧಿಕಾರಕ್ಕನುಗುಣವಾಗಿ, **ಭಗವತ್ಕೈಙ್ಕರ್ಯಂ ಪಣ್ಣ ಪ್ರಾಪ್ತಂ** - ಭಗವತ್ಕೈಂಕರ್ಯವನ್ನು ಮಾಡತಕ್ಕದ್ದು. ಯಾವ ಜಾತಿಯಲ್ಲಿ ಜನಿಸಿದನೋ, ಆಜಾತಿಗಿಂತ ಉತ್ಕೃಷ್ಟಜಾತಿಯು ಎಂದಿಗೂ ಉಂಟಾಗುವದಿಲ್ಲವಾದುದರಿಂದ ತನ್ನ ಜಾತ್ಯನುಗುಣವಾಗಿ ಪ್ರವರ್ತಿಸಿ ಶಾಸ್ತ್ರ ವಿಧ್ಯನುಗುಣವಾಗಿ ಭಗವತ್ಕೈಙ್ಕರ್ಯವನ್ನು ಮಾಡುವದು ಯೋಗ್ಯವೆಂದು ಸ್ಥಾಪಿಸಲ್ಪಟ್ಟಿತು. ಆದರೆ ಶೈವಾದಿ ಶಾಸ್ತ್ರಗಳಲ್ಲಿ ಉತ್ಕೃಷ್ಟಜಾತಿಯುಂಟಾಗುತ್ತದೆಂದೇ ಹೇಳಲ್ಪಟ್ಟಿದೆಯಲ್ಲಾ? ಹೇಗೆಂದರೆ "**ದೀಕ್ಷಾಪ್ರವೇಶ ಮಾತ್ರೇಣ ಬ್ರಾಹ್ಮಣೋಭವತಿ ಧ್ರುವಂ। ಕಾಪಾಲಂ ವ್ರತಮಾಸ್ಥಾಯ ಯತಿರ್ಭವತಿ ಮಾನವಃ**" ದೀಕ್ಷೆಯನ್ನು ವಹಿಸುವದರಿಂದ ಬ್ರಾಹ್ಮಣನೇ ಆಗುತ್ತಾನೆಂದು ದ್ವಿಜರಿಗೆಲ್ಲಾ ಬ್ರಾಹ್ಮಣತ್ವ ಉಂಟಾಗುತ್ತದೆಂದೂ ಕಾಪಾಲವ್ರತವನ್ನು ಸ್ವೀಕರಿಸಿದವನು ಯತಿಯೇ ಆಗುತ್ತಾನೆಂದು ಹೇಳಿದೆಯಲ್ಲಾ? ಎಂದರೆ ಅದಕ್ಕೆ ಸರಿಯಾದ ಉತ್ತರವನ್ನು ಹೇಳುತ್ತಾರೆ. **ಮೋಹನಶಾಸ್ತ್ರಙ್ಗಳಿಲ್** - ತಾಮಸ ಶಾಸ್ತ್ರವಾಗಿ ಬುದ್ಧಿಯನ್ನು ಮೋಹಗೊಳಿಸುವ ಎಂದರೆ ಶೈವಾಗಮ ಅಥವಾ ಪಾಶುಪತಾಗಮ ಮೊದಲಾದವುಗಳಲ್ಲಿ, **ಚೊನ್ನ** - ಹೇಳಲ್ಪಟ್ಟ, **ಜಾತ್ಯುದ್ಧಾರಾದಿಗಳೈ** - ಇದ್ದ ಕೀಳುಜಾತಿಯು ಹೋಗಿ ಉತ್ಕೃಷ್ಟಜಾತಿಯುಂಟಾಗುತ್ತದೆ ಎಂಬಿವೇ ಮೊದಲಾದ ಅಪಸಿದ್ಧಾಂತಗಳನ್ನು, **ನಿನೈಕ್ಕಲಾಗಾದು** - ಸ್ಮರಿಸುವದೂ ಕೂಡ ಅನುಚಿತವು. ಆದುದರಿಂದ ಒಂದು ಜಾತಿಯು ಹೋಗಿ ಬೇರೆಜಾತಿಯು ಬರುತ್ತದೆಂಬ ಹೇಳಿಕೆಯು ಅಪ್ರಾಮಾಣ್ಯವಾದುದು. ಆಗಲಿ ವಿಶ್ವಾಮಿತ್ರರಿಗೆ ಅವರ ಕ್ಷತ್ರಿಯ ಜಾತಿಯು ಹೋಗಿ ಉತ್ಕೃಷ್ಟ ಬ್ರಾಹ್ಮಣ ಜಾತಿಯ ಪ್ರಾಪ್ತಿಯು ಎಂಬುದು, ಪುರಾಣೇತಿಹಾಸಗಳಲ್ಲಿ ಪ್ರಸಿದ್ಧಿಯು. ಹಾಗೆಯೇ ವೀತಿಹವ್ಯರಿಗೂ

ವಿಶ್ವಾಮಿತ್ರಾದೀನಾಂ ಜಾತ್ಯಂತರ ಪ್ರಾಪ್ತಿಸ್ತು ಚರುವ್ಯತ್ಯಾಸಹೇತುನಾ.

ಚರುವ್ಯತ್ಯಾಸಾದಿಗಳಾನ ಶಿಲವಿಶೇಷನಿದಾನಙ್ಗಳಾಲೇ ವರುಗಿರ ವಿಶ್ವಾಮಿತ್ರಾದಿಗಳುಡೈಯನಿಲೈ ವೇರುಶಿಲರ್ಕ್ಕು ಕೂಡುಮೆನ್ಗೈ ವಚನ

ಬ್ರಾಹ್ಮಣತ್ವಪ್ರಾಪ್ತಿ ಎಂಬುದು ಶ್ರುತಿ ಪ್ರಸಿದ್ಧವು. ಹೀಗಿರುವಾಗ ಕೀಳು ಜಾತಿಯವನಿಗೆ ಭಗವದ್ಭಕ್ತಿಯಿಂದ ಉತ್ತಮಜಾತಿ ಪ್ರಾಪ್ತಿಯು ಏಕೆ ಕೂಡದು ಎಂದರೆ ಉತ್ತರವನ್ನು ಹೇಳುತ್ತಾರೆ.

ವಿಶ್ವಾಮಿತ್ರರೇ ಮೊದಲಾದವರಿಗೆ ಉತ್ಕೃಷ್ಟಜಾತಿಯ
ಪ್ರಾಪ್ತಿಯು ಚರುವಿನ ವ್ಯತ್ಯಾಸ ಮೂಲಕವಾದುದು.

**ಚರುವ್ಯತ್ಯಾಸಾದಿಗಳಾನ** - ಋಚೀಕರಿಂದ ತಮ್ಮ ಪತ್ನಿಗೂ ಅತ್ತೆಗೂ ಕೊಡಲ್ಪಟ್ಟ ಚರುಗಳು ವ್ಯತ್ಯಸ್ತವಾಗಿ ಅವರು ಭುಂಜಿಸಿದ, **ಶಿಲವಿಶೇಷ ನಿದಾನಙ್ಗಳಾಲೇ** - ಹೀಗೆ ಕೆಲವು ವಿಶೇಷಗಳಾದ ಕಾರಣಗಳ ಮೂಲಕ, **ವರುಗಿರ**-ಪ್ರಾಪ್ತವಾಗುವ, **ವಿಶ್ವಾಮಿತ್ರಾದಿಗಳುಡೈಯನಿಲೈ** - ವಿಶ್ವಾಮಿತ್ರರೇ ಮೊದಲಾದವರುಗಳ ಸ್ಥಿತಿಯು, **ವೇರು ಶಿಲರ್ಕ್ಕು** - ಬೇರೆ ಕೆಲವರಿಗೂ **ಕೂಡುಮೆನ್ಗೈ** - ಅನ್ವಯಿಸುತ್ತದೆ ಎಂದು ಹೇಳುವದು, **ವಚನ ವಿರುದ್ಧಮ್** - ಶಾಸ್ತ್ರ ಪ್ರಮಾಣ ವಿರುದ್ಧವು ಎಂದರೆ ಭಾಗವತ ಬ್ರಾಹ್ಮಣ ಭಾಗವತ ಶೂದ್ರರುಗಳಿಗೆ ನಿಯತವಾದ ಆಚಾರವಿಶೇಷ ವಿಧಾಯಕ ವಚನ ವಿರುದ್ಧವೆಂಬ ಭಾವವು. ವಿಶ್ವಾಮಿತ್ರರವರ ದೃಷ್ಟಾಂತದಿಂದ ಉತ್ಕೃಷ್ಟಜಾತಿಯು ಪ್ರಾಪ್ತಿಯುಂಟಾಗುತ್ತದೆಂದು ಒಪ್ಪಲು ಅಭ್ಯಂತರವೇನು ಎಂದರೆ ಇದೂ ಕೂಡ ವ್ಯಕ್ತಿ ವಿಶೇಷ ನಿಯತವಾದುದು ಎಂದು ಹೇಳಲು ಹೊರಟು ಸಮಾಧಾನವನ್ನು ಹೇಳುತ್ತಾರೆ. ವಿಶ್ವಾಮಿತ್ರರಿಗೆ ಕ್ಷತ್ರಿಯತ್ವವು ಉತ್ಪತ್ತಿಯಿಂದುಂಟಾದುದಲ್ಲವು, ಬ್ರಾಹ್ಮಣ್ಯವೇ ಉತ್ಪತ್ತಿಯಿಂದುಂಟಾದುದು. ವಿಶ್ವಾಮಿತ್ರ ವೃತ್ತಾಂತವೇನೆಂದರೆ, ಕುಶಾಂಬ ಪುತ್ರನಾದ ಗಾಧಿ ಎಂಬ ಕ್ಷತ್ರಿಯರಾಜನಲ್ಲಿಗೆ ಭಾರ್ಗವವಂಶಜರಾದ ಋಚೀಕರೆಂಬ ಮುನಿಯು ಬಂದು ನಿನ್ನ ಮಗಳಾದ ಸತ್ಯವತಿಯನ್ನು ತನಗೆ ಮದುವೆಯನ್ನು ಮಾಡಿಕೊಡು ಎಂದು ಪ್ರಾರ್ಥಿಸಿದನು. ಮುನಿಗೆ ತನ್ನ ಮಗಳನ್ನು ಕೊಡಲು ಇಷ್ಟವಿಲ್ಲದೆ, ಒಂದು ಕಿವಿ ಕಪ್ಪಗೂ ಇನ್ನೊಂದು ಕಿವಿ ಬೆಳ್ಳಗೂ ಇರುವ ಸಹಸ್ರ ಕುದುರೆಗಳನ್ನು ತಂದು ಕೊಟ್ಟವರಿಗೆ ವಿವಾಹಮಾಡಿಕೊಡುತ್ತೇನೆಂದು ಪ್ರತಿಜ್ಞೆಯಂ ಮಾಡಿರುವೆನೆಂದು ಹೇಳಲು; ಆಗ ವರುಣನನ್ನು ಪ್ರಾರ್ಥಿಸಿ ಸಹಸ್ರ ಕುದುರೆಗಳನ್ನು ತಂದುಕೊಟ್ಟು, ಮದುವೆ ಮಾಡಿಕೊಂಡನು. ಸತ್ಯವತಿಗೂ

ಆಕೆಯ ತಾಯಿಗೂ ಸಹ ಪುತ್ರರಿಲ್ಲದಿರಲು, ಸತ್ಯವತಿಯು ತನ್ನ ಪತಿಯನ್ನು ಪ್ರಾರ್ಥಿಸಿ, ಇಬ್ಬರಿಗೂ ಪುತ್ರರಾಗ ತಕ್ಕ ವರವನ್ನು ದಯಪಾಲಿಸಬೇಕೆಂದು ಕೇಳಿಕೊಂಡಳು. ಆಗ ಋಚೀಕರು ಎರಡು ಬೇರೆಬೇರೆ ಚರುಗಳನ್ನು ಅಭಿಮಂತ್ರಿಸಿ, ಇದನ್ನು ನೀನು ಭುಜಿಸು, ಮಹಾ ದೀಕ್ಷಾಪರ ಆಗ ತಪೋಧನನಾದ ಪುತ್ರನು ಜನಿಸುವನು, ಈ ಇನ್ನೊಂದನ್ನು ನಿನ್ನ ತಾಯಿಗೆ ಕೊಡು, ಆಕೆಗೆ ಮಹಾ ವೀರನಾದ ಕ್ಷತ್ರಿಯನು ಜನಿಸುವನೆಂದು ಹೇಳಿದನು. ಇವೆರಡು ಚರುವನ್ನೂ ತೆಗೆದುಕೊಂಡು ಹೋಗಿ, ತಾಯಿಗೆ ತೋರಿಸಲಾಗಿ, ತನ್ನ ಪತ್ನಿಗೆ ಶ್ರೇಷ್ಠವಾದ ಚರುವನ್ನೂ, ತನಗೆ ಸಾಮಾನ್ಯವಾದುದನ್ನೂ ಕೊಟ್ಟಿರಬಹುದೆಂದು ತನ್ನ ಮಗಳಿಗೆ ಕೊಟ್ಟಿದ್ದುದನ್ನೇ ತಾನು ತೆಗೆದುಕೊಂಡು, ತನ್ನದನ್ನು ಮಗಳಾದ ಸತ್ಯವತಿಗೆ ಕೊಟ್ಟಳು. ಆ ಕಾರಣದಿಂದ ಕ್ಷತ್ರಿಯನಾದ ಗಾಧಿರಾಜನಿಗೆ ವಿಶ್ವಾಮಿತ್ರರು ಬ್ರಾಹ್ಮಣಾಂಶರಾಗಿ ಹುಟ್ಟಿದರು. ಋಚೀಕರು ಬ್ರಾಹ್ಮಣರು. ಅವರ ಹೆಂಡತಿ ಸತ್ಯವತಿಯಲ್ಲಿ ಕ್ಷತ್ರಿಯರಾದ ಜಮದಗ್ನಿಯು ಹುಟ್ಟಿದರು. ಇವರು ರೇಣುಕೆಯನ್ನು ಮದುವೆ ಮಾಡಿಕೊಂಡರು. ಅವರುಗಳಿಗೆ ಪುತ್ರನಾಗಿ ಮಹಾಪರಾಕ್ರಮಿಯಾಗಿ ಕ್ಷತ್ರಿಯ ಕುಲವನ್ನು ಬಹು ಕ್ರೌರ್ಯದಿಂದ ೨೧ ಸಲ ನಾಶಮಾಡಿದ ಶ್ರೀ ಪರಶುರಾಮರು ಅವತರಿಸಿದರು. ಹೀಗೆ ಚರುವ ತ್ಯಾಗದಿಂದ ವಿಶ್ವಾಮಿತ್ರರು ಕ್ಷತ್ರಿಯನಿಗೆ ಹುಟ್ಟಿದರೂ, ಅಭಿಮಂತ್ರಿಸಲ್ಪಟ್ಟ ಚರುವು ಬ್ರಾಹ್ಮಣನ ಜನ್ಮಕ್ಕೆ ಹೇತುವಾದುದರಿಂದ, ವಿಶ್ವಾಮಿತ್ರರು ಜನ್ಮತಃ ಬ್ರಾಹ್ಮಣರೇ. ಅವರ ಕ್ಷತ್ರಿಯನ ಮನೆಯಲ್ಲಿ ಬೆಳೆದುದ ನಂತರ ಬ್ರಾಹ್ಮಣ್ಯವು ಮರೆಯಾಗಿ ಹೋಗಿತ್ತು. ಅನಂತರ ವಸಿಷ್ಠರಿಂದ ಪ್ರಾದುರ್ಭಾವವನ್ನು ಹೊಂದಿತೆಂಬ ಭಾವವು. ವಸಿಷ್ಠರ ಮಾಹಾತ್ಮ್ಯವನ್ನು ಕಂಡು ಕ್ಷತ್ರಿಯ ಬಲವನ್ನು ನಿಂದಿಸಿ, ಬ್ರಹ್ಮತೇಜೋಬಲಂ ಬಲಂ ಎಂದು ಕಂಡುಕೊಂಡವರಾಗಿ ಬ್ರಾಹ್ಮಣ್ಯವನ್ನು ಅನಂತರ ಇವರು ಅಂಗೀಕರಿಸಿದರು. ಇವರು ಜನ್ಮತಃ ಬ್ರಾಹ್ಮಣರಾದುದರಿಂದ ಹೊಸ ಬ್ರಾಹ್ಮಣ್ಯವೇನೂ ಬರಲಿಲ್ಲವು. ಇದ್ದುದೇ ಅನಂತರ ಪ್ರಕಾಶಿಸಿತು ಎಂಬ ಭಾವವು. ಸತ್ಯವತಿಯು ಕೊನೆಗೆ ಕೌಶಿಕೀ ಎಂಬ ಹೆಸರಿನಿಂದ ಲೋಕಪಾವನಿಯಾದ ನದಿಯಾದಳು. ಆದುದರಿಂದ ವಿಶ್ವಾಮಿತ್ರರಿಗೆ ಕ್ಷತ್ರಿಯಜಾತಿಯು ಹೋಗಿ ಬ್ರಾಹ್ಮಣಜಾತಿ ಬಂತೆಂದು ಹೇಳುವವರು ಶಾಸ್ತ್ರಜ್ಞಾನ ಇತಿಹಾಸ ಜ್ಞಾನಗಳಿಲ್ಲದವರೆಂಬ ಭಾವದಿಂದ ವಚನವಿರುದ್ಧಮ್ ಎಂದು ಹೇಳಿರುತ್ತಾರೆ.

ಆಗಲಿ ನಮ್ಮಾಳ್ವಾರವರೂ, ತಿರುಪ್ಪಾಣಿ ಆಳ್ವಾರವರೂ, ತಿರುಮಳಿಶಿ ಆಳ್ವಾರ್ರವರೆಲ್ಲ ನಿಕೃಷ್ಟಜಾತಿಯವರಾದರೂ, ನಾವುಗಳೆಲ್ಲ ಅವರುಗಳನ್ನು ಮಹಾ ಭಗವದ್ಭಕ್ತರೆಂದು ಭಾವಿಸಿ ಅವರುಗಳನ್ನು ಆರಾಧಿಸುವದಿಲ್ಲವೇ? ಅವರ

### [illegible]. ವಿದುರಾದಿಗಳಿಲುಮ್ ಉತ್ಕೃಷ್ಟ ಪ್ರಭಾವರಾನ ಆಳ್ವಾ

ದಿವ್ಯಸೂಕ್ತಿಗಳನ್ನು ತುಂಬಾ ಆದರ ವಿಶ್ವಾಸದಿಂದ, ದೇವಾಲಯ ಗೃಹಾರಾಧನೆಗಳ ಕಾಲಗಳಲ್ಲಿ ಪಠಿಸುವದಿಲ್ಲವೇ ? ಅಂತಹ ನಮ್ಮಾಳ್ವಾರ್ರವರನ್ನು ಬ್ರಾಹ್ಮಣೋತ್ತಮರಾದ ಮಧುರಕವಿಯಾಳ್ವಾರ್ರವರು ಆಶ್ರಯಿಸಲಿಲ್ಲವೇ ? ತಿರುಪ್ಪಾಣಾಳ್ವಾರ್ರವರನ್ನು ಲೋಕಸಾರಂಗ ಮಹಾಮುನಿಗಳು ಆಶ್ರಯಿಸಿ, ಭಜಿಸಿ ಅಂತ್ಯಜ ಜಾತಿಯವರ ಮಧ್ಯದಲ್ಲಿ ಜನಿಸಿದ್ದರೂ ಅದನ್ನು ಗಮನಿಸದೆ ತಮ್ಮ ಬೆನ್ನಿನಮೇಲೆ ಕೂರಿಸಿಕೊಂಡು, ಶ್ರೀರಂಗನಾಥನ ಆಜ್ಞಾಪ್ರಕಾರ ಹೊತ್ತುಕೊಂಡು ಹೋಗಲಿಲ್ಲವೇ? ಎಂಬ ಪೂರ್ವ ಪಕ್ಷಗಳನ್ನು ತಾವೇ ಊಹಿಸಿ ಭಾವಿಸಿ ಅವುಗಳಿಗೆ ಸಮಾಧಾನವನ್ನು ಹೇಳುತ್ತಾರೆ. ಶ್ರೀ ವಿದುರರೇ ಮಹಾಭಾಗವತೋತ್ತಮರಾಗಿ ಪೂರ್ವಜನ್ಮದಲ್ಲಿ ಪರಮಾತ್ಮೋಪಾಸನೆಮಾಡಿದ್ದುದರಿಂದ, ಆ ಉಪಾಸನ ಬಲದಿಂದ ಮಹಾ ಬ್ರಹ್ಮವಿತ್ತಾಗಿದ್ದರು ಕಾರಣಾಂತರದಿಂದ ಶೂದ್ರಯೋನಿಯಲ್ಲಿ ಜನಿಸಿದರು. ಆದುದರಿಂದ ಅವರಲ್ಲಿ ಮಾಹಾತ್ಮ್ಯ ಎಂಬುದು ವ್ಯಕ್ತಿವಿಶೇಷನಿಯತವು. ಆಳ್ವಾರಾಚಾರ್ಯರುಗಳಾದರೋ ಶ್ರೀ ವಿದುರರಿಗಿಂತ **ಮಾಹಾತ್ಮ್ಯೆಯಲ್ಲಿ** ಉತ್ಕೃಷ್ಟರು. ಇವರುಗಳೆಲ್ಲಾ ಸ್ವಾಮಿಯ ಆಜ್ಞೆಯನ್ನು ಧರಿಸಿ ಅವತರಿಸಿದ ನಿತ್ಯಸೂರಿಗಳು. (೬೨ ನೆಯ ಪುಟ ನೋಡಿ) ಇಲ್ಲಿ "**ಪರಾಂಕುಶ ಪರಕಾಲಾದಿ ರೂಪತ್ತಾಲೇ ಅಭಿನವಮಾಗ ಒರು ದಶಾವತಾರಂ ಪಣ್ಣಿ**" ಎಂದು ಹೇಳಿರುವದರಿಂದ ಈ ಆಳ್ವಾರರ ಅನುಷ್ಠಾನಗಳೂ, ವೃತ್ತಾಂತಗಳೂ ಎಲ್ಲವೂ ವ್ಯಕ್ತಿವಿಶೇಷ ನಿಯತಗಳೆಂಬ ಭಾವವು. ಆದುದರಿಂದ ಸ್ವಾಮಿಯ ಆಜ್ಞಾನುಸಾರ ವರ್ತಿಸಿದ ನಿತ್ಯಸೂರಿಗಳ ಅನುಷ್ಠಾನಗಳು ನಮಗೆ ಅನುಸರಣೆಯ ವಿಷಯದಲ್ಲಿ ಯೋಗ್ಯವಾದೀತೆ? ಅವರುಗಳ ಆಚರಣೆಗಳಲ್ಲಿ ದೋಷಾದಿಗಳನ್ನು ಆರೋಪಿಸಬಹುದೇ? ಆದುದರಿಂದ ನಮ್ಮ ಅನುಷ್ಠಾನಕ್ಕೆ ಅವು ದೃಷ್ಟಾಂತವಾಗಲಾರವು ಎಂದು ಹೇಳುತ್ತಾರೆ. ಇದೂ ಅಲ್ಲದೆ ಅವರುಗಳ ವೃತ್ತಾಂತಗಳು ನಮಗೆ ಸಂಪೂರ್ಣವಾಗಿ ತಿಳಿಯದು. ಕೆಲವು ತಿಳಿದ ಅವರುಗಳ ಪ್ರವೃತ್ತಿಗಳನ್ನು ಪರಿಶೀಲಿಸಿದರೆ ಅವರುಗಳೂ ತಮ್ಮ ಸ್ವಜಾತಿ ನಿಯಮವನ್ನು ಅತಿಲಂಘಿಸಿ ನಡೆದವರಲ್ಲವೆಂಬುದು ತೋರಿಬರುತ್ತದೆಂದು ಹೇಳುತ್ತಾರೆ—ವಿದುರಾದಿಗಳಿಲುಮ್ - ಮಹಾಭಾಗವತೋತ್ತಮರಾದ ಶ್ರೀ ವಿದುರರು, ಆದಿ ಪದದಿಂದ ಗುಹ, ಶಬರಿ ಮೊದಲಾದವರುಗಳಿಗಿಂತಲೂ, ಉತ್ಕೃಷ್ಟಪ್ರಭಾವರಾನ - ಇವರುಗಳೆಲ್ಲಾ ನಿತ್ಯಸೂರಿಗಳ ಅವತಾರಗಳಾದುದರಿಂದ ಶ್ರೇಷ್ಠ ಪ್ರಭಾವವುಳ್ಳವರು, ಇವರುಗಳಲ್ಲಿ ಕೆಲವರು ಕ್ಷತ್ರಿಯಾದಿಗಳಲ್ಲಿಯೂ ಅನ್ನಪಾನಾದಿಗಳನ್ನು ಸ್ವೀಕರಿ

**ರುಗಳುಡೈಯ ವೃತ್ತಾಂತವಿಶೇಷಙ್ಗಳ್ಕೈ ನಮ್ಮನುಷ್ಠಾನತ್ತುಕ್ಕುದೃಷ್ಟಾಂತ ಮಾಕ್ಕಲಾಗದು.**

---

ಸದೇ ಇದ್ದರೆಂದು ಇತಿಹಾಸ ಉಂಟು. ಇದೆಲ್ಲಾ ಅತಿಮಾನುಷ ವಿಚಾರವಾದುದ ರಿಂದ, ಉತ್ಕೃಷ್ಟಪ್ರಭಾವಗಳುಳ್ಳ, **ಆಳ್ವಾರ್ಗಳವೃತ್ತಾಂತ ವಿಶೇಷಙ್ಗಳ್**- ಆಳ್ವಾರುಗಳ ಅನುಷ್ಠಾನಗಳ ವೃತ್ತಾಂತವಿಶೇಷಗಳನ್ನು, **ನಮ್ಮ ಅನುಷ್ಠಾನಕ್ಕೆ ದೃಷ್ಟಾಂತ ಮಾಕ್ಕಲಾಗಾದು** - ದೃಷ್ಟಾಂತ ಮಾಡಲು ಆಗವದಿಲ್ಲವು. ಶ್ರೀ ವಿದುರಾದಿಗಳು ಹೇಗೆ ಶ್ರೇಷ್ಠರೆಂದರೆ:— **ಶ್ವಪಚೋಽಪಿ ಮಹೀಪಾಲ ವಿಷ್ಣುಭಕ್ತೋ ದ್ವಿಜಾಧಿಕಃ । ವಿಷ್ಣುಭಕ್ತಿ ವಿಹೀನಸ್ತು ಯತಿಶ್ಚ ಶ್ವಪಚಾಧಮಃ॥ ಯದಪ್ಯತ್ರಾಪಿ ಜಾಯಂತೇ ಯೋಗಿನಸ್ಸರ್ವ ಯೋನಿಷು । ಪ್ರತ್ಯಕ್ಷಿತಾತ್ಮನಾಥಾನಾಂ ನೈಷಾಂ ಚಿಂತ್ಯಂ ಕುಲಾದಿಕಂ**" ವಿಷ್ಣುಭಕ್ತಿಯನ್ನು ಹೊಂದಿರುವದೇ ಒಂದು ಮಾಹಾತ್ಮ್ಯೆಯು ; ಹಿಂದಿನ ಜನ್ಮದಲ್ಲಿ ಯೋಗಿಗಳಾಗಿರುವವರು ಪ್ರಾರಬ್ಧಕರ್ಮಶೇಷದಿಂದ ಯಾವ ಯೋನಿಯಲ್ಲಿಯಾಗಲಿ ಜನಿಸಬಹುದು; ಸ್ವಾತ್ಮಪರಮಾತ್ಮಯಥಾರ್ಥಜ್ಞಾನವು ಉಂಟಾಗಿರುವವರ ವಿಷಯದಲ್ಲಿ ಯಾವ ಕುಲದವರೆಂದು ಯೋಚಿಸುವ ಆವಶ್ಯಕವಿರುವದಿಲ್ಲವು ; ಹೀಗೆ ಯೋಗಸಿದ್ಧಿಯಿಂದ ಮಾಹಾತ್ಮ್ಯೆಯು ಇರಬಹುದು. ಮಹಾನುಭಾವರಾದ ಆಳ್ವಾರುಗಳಾದರೋ ನಿತ್ಯಸೂರಿಗಳವತಾರಗಳಾಗಿ ಭಗವದನುಭವದಲ್ಲೇ ಮಗ್ನರಾಗಿ ಅನ್ನಪಾನಾದಿಗಳನ್ನೂ ಕೂಡ ತ್ಯಜಿಸಿ ಜೀವಿಸುವ ಶಕ್ತಿ ಇದ್ದವರು, ಆದುದರಿಂದ ವಿದುರಾದಿಗಳಿಗಿಂತ ಹೆಚ್ಚು ಪ್ರಭಾವವುಳ್ಳವರೆಂದು ಹೇಳಲ್ಪಟ್ಟಿತು. ಮಧುರ ಕವಿಯಾಳ್ವಾರು ನಮ್ಮಾಳ್ವಾರನ್ನು ಆಶ್ರಯಿಸಿದರು, ಹಾಗೆಯೇ ಈ ಶೂದ್ರ ಭಾಗವತರನ್ನು ನಾನೂ ಆಶ್ರಯಿಸಿ ಉಪದೇಶ ಹೊಂದುತ್ತೇನೆಂದು ಹೇಳುವದು ಅನುಚಿತವೆಂಬ ಭಾವವು. ಲೋಕಸಾರಙ್ಗಮುನಿಗಳು ಪಂಚಮಕುಲದಲ್ಲಿ ಜನಿಸಿದ ತಿರುಪ್ಪಾಣಾಳ್ವಾರನ್ನು ಆಶ್ರಯಿಸಿದರು, ಅವರ ಹಾಗೆ ನಾನೂ ಈ ಪಂಚಮ ಭಾಗವತನನ್ನು ಆಶ್ರಯಿಸುವನೆಂದು ಆಶ್ರಯಿಸಕೂಡದು. ಚಿಂಡಾಲ ಕುಲದಲ್ಲಿ ಜನಿಸಿದ ತಿರುಮಳಿಶೆಯಾಳ್ವಾರನ್ನು ಯಾಗಸಭೆಗೆ ಕರೆದುಕೊಂಡು ಹೋಗಿ ಮರ್ಯಾದೆಮಾಡಿದರು. ಹಾಗೆಯೇ ನಾನೂ ಈ ಶೂದ್ರ ಭಾಗವತನನ್ನು ಭಾಗವತಗೋಷ್ಠಿಯಲ್ಲಿ ಸೇರಿಸಿ ಮರ್ಯಾದೆಯನ್ನು ಮಾಡುತ್ತೇನೆ ಎಂದು ತೊರಡುವದು ಅನುಚಿತವು. ಅವರುಗಳ ಪ್ರವೃತ್ತಿ ಮತ್ತು ಅನುಷ್ಠಾನ ಮೊದಲಾದವುಗಳು ಆಯಾಯಾ ವ್ಯಕ್ತಿವಿಶೇಷಗಳಿಗೆ ಮಾತ್ರವೇ ನಿಯತವಾದುದೇವಿನಾ ಅವನ್ನು ಎಲ್ಲರೂ ಉಪಾದೇಯವೆಂದು ಅಙ್ಗೀಕರಿಸುವದು ಯುಕ್ತವಲ್ಲವೆಂಬ ಭಾವವು.

ಅವರ್ಗಳ್ ವೃತ್ತಾಂತಜ್ಞಕ್ಕೈಯುಮ್ ಆರಾಯುಮ್ಬೋಲ್ ಸ್ವಜಾತಿ ನಿಯಮತ್ತೈಕ್ಕಡನ್ದವೈಯಿಲ್ಲೈ.

ಚೆನ್ನಾಗಿ ವಿಮರ್ಶಿಸಿ ನೋಡಿದರೆ ಅವರುಗಳೂ ಕೂಡ ತಮ್ಮ ತಮ್ಮ ಜಾತಿ ನಿಬಂಧನೆಗಳನ್ನು ಶ್ರೀ ವಿದುರನು ಹೇಗೆ ಅತಿಕ್ರಮಿಸಲು ಸಮ್ಮತಿಸಲಿಲ್ಲವೋ! ಹಾಗೆಯೇ ಅವರುಗಳು ಸಮ್ಮತಿಸಲಿಲ್ಲವೆಂಬುದು ತೋರಬರುತ್ತದೆಂದು ಅಪ್ಪಣೆ ಕೊಡಿಸುತ್ತಾರೆ.—ಅವರ್ಗಳ್ ವೃತ್ತಾಂತಜ್ಞಕ್ಕೈಯುಮ್ - ಆ ಆಳ್ವಾರ್ಗಳ ವೃತ್ತಾಂತಗಳನ್ನು ಸಹ. ಆರಾಯುಮ್ಬೋಲ್ - ವಿಮರ್ಶಿಸಿ ನೋಡಿದರೆ, ಸ್ವಜಾತಿ ನಿಯಮತ್ತೈ - ತಮ್ಮ ಜಾತಿ ನಿಬಂಧನೆಯನ್ನು, ಕಡನ್ದವೈಯಿಲ್ಲೈ - ತ್ಯಾಗಮಾಡಿದುದು ಇಲ್ಲವು. ಇವರುಗಳ ದಿವ್ಯಸೂಕ್ತಿಯಲ್ಲಿ ವೇದವಾಕ್ಯಗಳ ಗ್ರಹಣವೂ ಎಲ್ಲಿಯೂ ಕಾಣಬರುವದಿಲ್ಲವು, ಪ್ರಣವೋಚ್ಚಾರಣವೂ ಇಲ್ಲವು. ಹೀಗೆ ತಮ್ಮ ಜಾತಿಯ ನಿಯಮವನ್ನು ಎಂದಿಗೂ ಅತಿಕ್ರಮಿಸಿಲ್ಲವು. ವ್ಯಾಘ್ರಪುರಿಯಲ್ಲಿ ಶೂದ್ರವೇಷದಿಂದಿದ್ದ ಭಕ್ತಿಸಾರಮುನಿಯನ್ನು ಕಂಡು ವೇದಾಧ್ಯಯನವನ್ನು ಮಾಡುತ್ತಿದ್ದ ವಿಪ್ರರು ವೇದ ಪಠನವನ್ನು ನಿಲ್ಲಿಸಿದುದರಿಂದ ಎಲ್ಲಿ ನಿಲ್ಲಿಸಿದಿದು ಎಂಬುದು ಅವರಿಗೆಲ್ಲಾ ಮರೆತುಹೋಗಲು, ಆಗ ಭಕ್ತಿಸಾರರು ಕೃಷ್ಣವ್ರೀಹಿಯನ್ನು ಮುಂದಿಟ್ಟು ನಖದಿಂದ ಸುಲಿದು ತೋರಿಸಿದುದರಿಂದ, ನಿಲ್ಲಿಸಿದ ವಾಕ್ಯದ "ಕೃಷ್ಣಾನಾಂ ವ್ರೀಹೀಣಾಂ ನಖ ನಿರ್ಭಿನ್ನಂ" ಎಂಬುದು ಅವರಿಗೆ ಸ್ಮರಣೆಗೆ ಬಂತು. ವೇದವಾಕ್ಯಗಳು ತಿಳಿದಿದ್ದರೂ ಶೂದ್ರಜನ್ಮವಾದುದರಿಂದ ಅದನ್ನು ಪಠಿಸಬಾರದೆಂಬ ನಿಯಮವನ್ನು ಹೀಗೆ ಕಾಪಾಡಿರುತ್ತಾರೆ. (೩೭ ನೆಯ ಪುಟವನ್ನು ನೋಡಿ)

ಮಹಾನುಭಾವರುಗಳು ತಮ್ಮ ತಮ್ಮ ಜಾತಿಯ ನಿಯಮವನ್ನು ಅತಿಕ್ರಮಿಸಿ ನಡೆಯಲಿಲ್ಲವೆಂದು ಹೇಳಿದರು. ಶೂದ್ರಭಾಗವತರುಗಳನ್ನು ಬ್ರಾಹ್ಮಣಶಿಷ್ಯಂದಿರು ಆಶ್ರಯಿಸಿರುವುದು ಧರ್ಮವಿರುದ್ಧವಲ್ಲವೇ ಎಂದರೆ ಆಳ್ವಾರುಗಳ ವಿಷಯದಲ್ಲೇನೋ ಸಮಾಧಾನವು ಹೇಳಲ್ಪಟ್ಟಿತು. ಕಣಿಕೃಷ್ಣನೆಂಬ ಬ್ರಾಹ್ಮಣನಿಗೆ ಭಕ್ತಿಸಾರರು ಹೇಗೆ ಆಚಾರ್ಯರಾದರು ಎಂದು ಪ್ರಶ್ನಿಸಿದರೆ, ಭಕ್ತಿಸಾರರು ಬೇಡರ ಸಮೂಹದಲ್ಲಿ ಬೆಳೆದರೂ ಭೃಗುಮಹರ್ಷಿಯಿಂದ ಅಪ್ಸರಸ್ತ್ರೀಯಲ್ಲಿ ಹುಟ್ಟಿದವರಾದುದರಿಂದ (೨೨ನೆಯ ಪುಟ ನೋಡಿ) ಹಾಗೆ ಉಪದೇಶಿಸಲು ಅರ್ಹತೆಯುಂಟೆಂದೇನೋ ಒಪ್ಪಬಹುದು. ಆದರೆ ಇನ್ನೂ ಇತರ ಸಂದರ್ಭಗಳುಂಟಲ್ಲಾ ಅಲ್ಲೆಲ್ಲಾ ಹೇಗೆ ಸಮಾಧಾನವೆಂಬ ಪ್ರಶ್ನೆ ಬಂದೀತಾಗಿ, ಆ ಸಂದರ್ಭಗಳನ್ನು ಉದಾಹರಿಸಿ ಹಾಗೆ ಮಾಡಬಹುದೆಂದು ಭಾರತವೇ ಮೊದಲಾದ ಪ್ರಮಾಣ

"(೧) ವಿಷ್ಣುರ್ನಿತ್ಯಂ ವಿದ್ಯಯಾ ತಾತ ಈಡ್ಯಸ್ತಸ್ಮಾದ್ಜ್ಞಾನಂ ನಿತ್ಯರೂಪಂ ವರೇಣ್ಯಮ್" (೨) "ಪ್ರಾಪ್ಯಂ ಜ್ಞಾನಂ ಬ್ರಾಹ್ಮಣಾತ್ ಕ್ಷತ್ರಿಯಾ

ಗಳೇ ಇರುವಾಗ ಆಕ್ಷೇಪಣೆ ಹೇಗೆ ಎಂದು ಸಮಾಧಾನವನ್ನು ಹೇಳುತ್ತಾರೆ. ವಿದುರರು ಕ್ಷತ್ರಿಯನಾದ ಧೃತರಾಷ್ಟ್ರನಿಗೆ ಜ್ಞಾನೋಪದೇಶವನ್ನು ಮಾಡಲಿಲ್ಲವೇ? ತುಲಾಧಾರರಿಂದ ಜಾಜಲಿ ಎಂಬ ಬ್ರಾಹ್ಮಣನು ಉಪದೇಶವನ್ನು ಹೊಂದಲಿಲ್ಲವೇ? ಎಂದರೆ ಸಮಾಧಾನವನ್ನು ಹೇಳುತ್ತಾರೆ. ಅಂತಹವರುಗಳಿಂದ ಜ್ಞಾನವನ್ನೂ ಧರ್ಮೋಪದೇಶವನ್ನೂ ಹೊಂದಬಹುದು. ಬ್ರಹ್ಮವಿದ್ಯೆಯನ್ನೂ ಬ್ರಹ್ಮಜ್ಞಾನವನ್ನೂ ಮಂತ್ರೋಪದೇಶವನ್ನೂ ಮತ್ತು ಇತರ ಸಂಸ್ಕಾರಾದಿಗಳನ್ನೂ ಹೊಂದಕೂಡದೆಂದು ಉಪದೇಶಿಸುತ್ತಾರೆ. ಅವರುಗಳು ಎಷ್ಟು ಮಹಿಮೆಯುಳ್ಳವರಾಗಿದ್ದರೂ, ಇಂತಹ ಉಪದೇಶಗಳಿಗೂ, ಆಚಾರ್ಯಸ್ಥಾನದಲ್ಲಿರುವುದಕ್ಕೂ, ಅನರ್ಹರೆಂದು ತಿಳಿಸುತ್ತಾರೆ

(೧) ಹೇ ತಾತ - ಓ ಅಪ್ಪನೇ, ವಿಷ್ಣುವು, ನಿತ್ಯಂ - ಯಾವಾಗಲೂ, **ವಿದ್ಯಯಾ** - ಜ್ಞಾನದಿಂದ ಬ್ರಹ್ಮವಿಷಯವಾದ ಜ್ಞಾನದಿಂದ, **ಈಡ್ಯಃ** - ಪೂಜಿಸಲು ಯೋಗ್ಯನು, **ತಸ್ಮಾತ್** - ಆ ಕಾರಣದಿಂದ, **ಜ್ಞಾನಂ** - ಬ್ರಹ್ಮ ವಿಷಯವಾದ ಜ್ಞಾನವು, **ನಿತ್ಯ ರೂಪಂ** - ಶಾಶ್ವತವಾದುದಾಗಿ, **ವರೇಣ್ಯಮ್** - ಸರ್ವಶ್ರೇಷ್ಠವಾದುದು. ಹೀಗೆ ಬ್ರಹ್ಮವಿಷಯವಾದ ಜ್ಞಾನವು ಬಹು ಶ್ರೇಷ್ಠವಾದುದಾಗಿ ಆ ಜ್ಞಾನದಿಂದಲೇ ಭಗವಂತನು ಅರ್ಚಿಸಲ್ಪಟ್ಟು ನಿರಯ ಮೋಕ್ಷವನ್ನೀಯುವನೆಂಬ ಭಾವವು. ಹಾಗೆಯೇ ಶ್ರೀ ವಿಶ್ವಾವಸುರು ಹೇಳಿದರೆಂದು ಭಾರತ ಶಾಂತಿಪರ್ವ ೩೨೩-೮೭ನೇ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆ ಹೇಗೆಂದರೆ;— "ಜ್ಞಾನಾನ್ಮೋಕ್ಷೋ ಜಾಯತೇ ರಾಜಸಿಂಹ ನಾಸ್ತ್ಯಜ್ಞಾನಾದೇವಮಾಹುರ್ನರೇಂದ್ರ। ತಸ್ಮಾದ್ಜ್ಞಾನಂ ತತ್ತ್ವತೋಽನ್ವೇಷಿತವ್ಯಂ ಯೇನಾತ್ಮಾನಂ ಮೋಕ್ಷಯೇಜ್ಜನ್ಮಮೃತ್ಯೋಃ॥" ಜ್ಞಾನದಿಂದಲೇ ಓ ರಾಜಶ್ರೇಷ್ಠನೇ ಮೋಕ್ಷವು ಲಭಿಸುತ್ತದೆ; ಅಜ್ಞಾನದಿಂದ ಎಂದಿಗೂ ದೊರೆಯದು, ಆದುದರಿಂದ ಈ ಆತ್ಮನನ್ನು ಯಾವ ಜ್ಞಾನದಿಂದ ಜನ್ಮಮರಣಗಳಿಂದ ತಪ್ಪಿಸಬಹುದೋ, ಅಂತಹ ಜ್ಞಾನವನ್ನು ಯಥಾರ್ಥವಾಗಿ ಹುಡುಕಿ ತಿಳಿಯತಕ್ಕದ್ದೆಂದು ಹೇಳಿರುತ್ತದೆ. ಈ ಶ್ಲೋಕದ ಮುಂದಿನ ಶ್ಲೋಕದ ಪ್ರಾಪ್ಯಂ ಜ್ಞಾನಂ ಎಂಬುದು ಇದರ ಅರ್ಥವೇನೆಂದರೆ.—ತತ್ವಜ್ಞಾನವು ಅಷ್ಟು ಮುಖ್ಯವಾದುದರಿಂದ, ಅದಕ್ಕೆ ಸಹಾಯಕವಾದ ಜ್ಞಾನವನ್ನು, ಬ್ರಾಹ್ಮಣಾತ್ - ಜ್ಞಾನಿಯಾದ

(೨) ಭಾರ. ಶಾಂತಿ. ೩೨೩-೮೮

**ದ್ರಾ ವೈಶ್ಯಶೂದ್ರಾದ್ರಾಪಿ ನೀಚಾದಭೀಷ್ಟಂ" ಎನ್ಗಿರ ಶ್ಲೋಕತ್ತಿಲ್ ಭಗವದ್ಜ್ಞಾನ ಮವಶ್ಯಂ ಸಂಪಾದನೀಯ ಮಾಗೈಯಾಲೇ ಪೂರ್ವಪೂರ್ವಾಲಾಭತ್ತಿಲ್ ಪಿನ್ನುಳ್ಳಾರ್ ಪಕ್ಕಲಿಲುಮ್ ಜ್ಞಾನಮಾತ್ರಂ ವಿಶದಮಾಗ ಸಂಪಾದನೀಯ ಮೆನ್ರಿವ್ವಳವು ಶೊಲ್ಲಿತ್ತು.**

---

ಬ್ರಾಹ್ಮಣನಿಂದಾಗಲಿ, ಆತನು ದೊರೆಯದ ಪಕ್ಷದಲ್ಲಿ, ಕ್ಷತ್ರಿಯನಿಂದಾಗಲಿ, ಆತನು ಸಿಕ್ಕದ ಪಕ್ಷದಲ್ಲಿ ವೈಶ್ಯನಿಂದಾಗಲಿ, ಆತನು ಸಿಕ್ಕದಿದ್ದರೆ ಶೂದ್ರನಿಂದಾಗಲಿ ಅಥವಾ **ನೀಚಾದಪಿ** - ಆತನಿಗಿಂತಲೂ ನೀಚ ಜಾತಿಯವನಿಂದಲಾಗಲಿ, **ಅಭೀಷ್ಟಂ** - ಜ್ಞಾನವನ್ನೂ, **ಶ್ರದ್ಧಧಾನೇನ** - ಜ್ಞಾನ ಸಂಪಾದಿಸಬೇಕೆಂಬ ಶ್ರದ್ಧೆ ಇರುವವನಿಂದ, **ಪ್ರಾಪ್ತವ್ಯಂ** - ಶ್ರದ್ಧೆಯಿಂದ ಸಂಪಾದಿಸತಕ್ಕದ್ದು; ಉತ್ತರಾರ್ಧವು **"ಪ್ರಾಪ್ತವ್ಯಂ ಶ್ರದ್ಧಧಾನೇನ ನಿತ್ಯಂನಶ್ರದ್ಧಿನಂ ಜನ್ಮಮೃತ್ಯೂವಿಶೇತಾಮ್"** ಎಂದಿರುತ್ತದೆ; ಅಂತಹ ಶ್ರದ್ಧೆಯುಳ್ಳವನನ್ನು ಜನ್ಮ ಮರಣಗಳು ಪ್ರವೇಶಿಸುವದಿಲ್ಲವು; ಎಂದರೆ ಕ್ರಮೇಣ ಮುಕ್ತಿಯನ್ನು ಹೊಂದುವನೆಂಬ ಭಾವವು." **ಎನ್ಗಿರಶ್ಲೋಕತ್ತಿಲ್** - ಎಂಬ ಶ್ಲೋಕದಲ್ಲಿ, ಭಗವದ್ಜ್ಞಾನವು ಅವಶ್ಯಕವಾಗಿ ಸಂಪಾದಿಸತಕ್ಕದ್ದಾದುದರಿಂದ, **ಪೂರ್ವಪೂರ್ವಾಲಾಭತ್ತಿಲ್** - ಈ ಬ್ರಾಹ್ಮಣ ಕ್ಷತ್ರಿಯ ವೈಶ್ಯಾದಿಗಳಲ್ಲಿ ಮೊದಲ ಮೊದಲು ಹೇಳಲ್ಪಟ್ಟವರು ಸಿಕ್ಕದಿರುವ ಸಂದರ್ಭದಲ್ಲಿ, **ಪಿನ್ನುಳ್ಳಾರ್ ಪಕ್ಕಲಿಲುಮ್** - ಅನಂತರ ಹೇಳಿರುವವರ ಮೂಲಕವಾಗಿಯೂ, **ಜ್ಞಾನಮಾತ್ರಂ** - ಭಗವಂತನ ವಿಷಯವಾದ ಜ್ಞಾನಮಾತ್ರವಿಶದವಾಗಿ, ಇದರಿಂದ ಬ್ರಹ್ಮವಿದ್ಯೆ, ಮಂತ್ರೋಪದೇಶ, ರಹಸ್ಯಾರ್ಥಗ್ರಹಣ ಮೊದಲಾದವು ವ್ಯಾವರ್ತಿಸಲ್ಪಟ್ಟವು. **ಸಂಪಾದನೀಯಮೆನ್ರು** - ಸಂಪಾದಿಸತಕ್ಕದ್ದೆಂದು, **ಇವ್ವಳವು ಶೊಲ್ಲಿತ್ತು** - ಇಷ್ಟುಮಾತ್ರವೇ ಹೇಳಲ್ಪಟ್ಟಿತು; ಇಂತಹ ಸಾಮಾನ್ಯ ಜ್ಞಾನಕ್ಕೂ ಕೂಡ ಬ್ರಾಹ್ಮಣನಾದ ಬ್ರಹ್ಮಜ್ಞಾನಿಯೇ ಸರ್ವಶ್ರೇಷ್ಠನೆಂಬ ಭಾವದಿಂದ ಮೊದಲು ಹೇಳಿ ಅಂತವರು ದೊರೆಯದೆ ಹೋದರೆ ಜ್ಞಾನವೇ ಕ್ರಮೇಣ ಉಪಾಯಾನುಷ್ಠಾನ ಮೊದಲಾದವುಗಳಿಗೆ ಹೇತುವಾಗಿ ಅವಶ್ಯಕವಾದುದರಿಂದ, ಅಂತಹ ಸಾಮಾನ್ಯ ಬ್ರಹ್ಮಜ್ಞಾನವನ್ನು ಮಾತ್ರ ಕ್ಷತ್ರಿಯ ವೈಶ್ಯ ಶೂದ್ರಾದಿಗಳಿಂದಲೂ ಹೊಂದಬಹುದೆಂದು ಶಾಸ್ತ್ರವು ಸಮ್ಮತಿಯನ್ನಿತ್ತಿತು. ಇದರಿಂದ ಮಂತ್ರೋಪದೇಶ ರಹಸ್ಯಾರ್ಥಗಳ ಗ್ರಹಣ, ಉಪಾಸನಾಕ್ರಮ, ಬ್ರಹ್ಮವಿದ್ಯೆ ಮೊದಲಾದವುಗಳನ್ನೂ ಇತರ ಸಂಸ್ಕಾರಗಳನ್ನೂ ಸಹ ಅಂತಹ ಬ್ರಾಹ್ಮಣೇತರ ಜಾತಿಯವರುಗಳಿಂದ ಹೊಂದಬಹುದೆಂದು ಸಮ್ಮತಿಯನ್ನೇನೂ ಕೊಡಲಿಲ್ಲವೆಂಬತಾತ್ಪರ್ಯವು. ಇದು ಸ[illegible]ತ್ರವಾ ಕೂಡದೆಂಬ ಭಾವದಿಂದ ಮುಂದಿನ ವಾಕ್ಯದಮೂಲಕ ವಿಶದವಾಗಿ ತಿಳಿಸುತ್ತಾರೆ.

ಮನ್ತ್ರೋಪದೇಶ ಬ್ರಹ್ಮವಿದ್ಯಾದಯಃ ಬ್ರಹ್ಮವಿದ್ಬ್ರಾಹ್ಮಣೇಭ್ಯ ಏವ ಸಙ್ಗ್ರಾಹ್ಯಾಃ.

ಇಪ್ಪಡಿಯಾನಾಲುಮ್, ವಿದ್ಯಾಮನ್ತ್ರಾದಿಗಳುಡೈಯ ಗ್ರಹಣಮ್ ಬ್ರಾಹ್ಮಣಾದಿ ವಿಷಯತ್ತಿಲೇ ಆಗವೇಣುಮೆನ್ನುಮಿಡಮ್ (೧) "ಶೂದ್ರಯೋನಾವಹಂಜಾತೋ ನಾತೋಽನ್ಯದ್ವಕ್ತುಮುತ್ಸಹೇ" ಎನ್ರು ಶ್ರೀ ವಿದುರ ವಾಕ್ಯತ್ತಾಲೆ ಸಿದ್ಧಮ್.

ಬ್ರಹ್ಮವಿದ್ಯೆ ಮಂತ್ರೋಪದೇಶ ಮೊದಲಾದ ಸಂಸ್ಕಾರಗಳನ್ನು ಬ್ರಹ್ಮವಿತ್ತುಗಳಾದ ಬ್ರಾಹ್ಮಣರಿಂದಲೇ ಸಙ್ಗ್ರಹಿಸತಕ್ಕದ್ದು.

**ಇಪ್ಪಡಿ ಯಾನಾಲುಮ್** - ಈಶ್ವರ ವಿಷಯವಾದ ಜ್ಞಾನವು ಒಂದುವೇಳೆ ನಿರ್ವಾಹವಿಲ್ಲದ ಸಂದರ್ಭದಲ್ಲಿ ಬ್ರಾಹ್ಮಣೇತರರಿಂದಲೂ ಸಂಪಾದನೀಯವೆಂದು ಒಪ್ಪಿಕೊಂಡರೂ, **ವಿದ್ಯಾಮನ್ತ್ರಾದಿಗಳುಡೈಯಗ್ರಹಣಮ್** - ಬ್ರಹ್ಮವಿದ್ಯೆಯು ಮತ್ತು ಮೂಲಮನ್ತ್ರದ್ವಯ ಚರಮ ಶ್ಲೋಕಾದಿಗಳೇ ಮೊದಲಾದವುಗಳ ಉಪದೇಶವನ್ನು ಹೊಂದೋಣವು. ಇಲ್ಲಿ ಆದಿಶಬ್ದದಿಂದ ಛಂದಸ್ಸು ಋಷಿ ಮೊದಲಾದವು ಹೇಳಲ್ಪಟ್ಟವೆಂದು ಸಾರಪ್ರಕಾಶಿಕೆಯವರ ಅಭಿಪ್ರಾಯವು, ಆಚಾರ್ಯರಿಂದ ಹೊಂದುವ ಸರ್ವವಿಧ ಸಂಸ್ಕಾರಗಳು ಆದಿ ಶಬ್ದಾರ್ಥವೆಂದು ಇಟ್ಟುಕೊಳ್ಳಬಹುದು; ರಹಸ್ಯಾರ್ಥಗಳ **ಉಪದೇಶವೂ** ಕೂಡ ಆಚಾರ್ಯಕೃತ್ಯವಾದುದರಿಂದ ಬ್ರಾಹ್ಮಣೇತರರಿಂದ ಅದನ್ನು ಹೊಂದುವದು ಅನುಚಿತವಾದುದರಿಂದ ಅದೂ ಕೂಡ ಈ ಆದಿ ಪದದಿಂದ ಸಙ್ಗ್ರಹೀತವು, ಇವುಗಳ ಉಪದೇಶವು, **ಬ್ರಾಹ್ಮಣಾದಿ ವಿಷಯತ್ತಿಲೇ ಆಗವೇಣು ಮೆನ್ರು ಮಿಡಂ** - ಬ್ರಾಹ್ಮಣರೇ ಮೊದಲಾದ ಉತ್ಕೃಷ್ಟರ ವಿಷಯದಲ್ಲೇ ಆಗತಕ್ಕದ್ದೆಂಬ ಸಂದರ್ಭವಲ್ಲಿ, ಇಲ್ಲಿ ಆದಿ ಶಬ್ದದಿಂದ ಉತ್ಕೃಷ್ಟರಾದ ಋಷಿಗಳೂ, ಮುನಿಗಳೂ, ಸನ್ಯಾಸಿಗಳೂ ಮೊದಲಾದವರು ಹೇಳಲ್ಪಟ್ಟರು; (೧) **ಶೂದ್ರಯೋನೌ** - ಶೂದ್ರಯೋನಿಯಲ್ಲಿ, **ಅಹಂ ಜಾತಃ** - ನಾನು ಹುಟ್ಟಿರುತ್ತೇನೆ, ಜನ್ಮತಃ ತಾವು ಶೂದ್ರರೆಂದು ಶ್ರೀವಿದುರರು ಹೇಳಿಕೊಂಡಿರುತ್ತಾರೆ, **ಅತಃ**-ಆ ಕಾರಣದಿಂದ, **ಅನ್ಯತ್** - ಬ್ರಹ್ಮವಿದ್ಯಾರೂಪೋಪದೇಶವನ್ನು, **ವಕ್ತುಂ** - ಉಪದೇಶಿಸಲು, **ನೋತ್ಸಹೇ** - ಉದ್ಯುಕ್ತನಾಗಲಾರೆನು," ಎನ್ರು - ಎಂಬುವ ಮಹಾಭಾಗವತರಾದ ಶ್ರೀ ವಿದುರರ ವಾಕ್ಯದಿಂದಲೇ ಸಿದ್ಧವು. ಶ್ರೀ ವಿದುರರಿಗೆ ಶೂದ್ರಜನ್ಮಪ್ರಾಪ್ತಿ ಹೇಗೆ ಎಂದರೆ

(೧) ಭಾರ. ಉದ್ಯೋಗ. ೪೧. ೫.

ಅಣಿಮಾಂಡವ್ಯರೆಂಬ ಋಷಿಯು ತಪಸ್ಸನ್ನು ಮಾಡುತ್ತಿರುವಾಗ, ಆ ದೇಶದ ರಾಜನ ರಾಜ್ಯದಲ್ಲಿ ಅಪಹಾರಮಾಡಿದ ಕಳ್ಳರನ್ನು ಅಟ್ಟಿಕೊಂಡು ರಾಜಭಟರು ಬರಲು ಭೀತರಾಗಿ, ಆ ಕಳ್ಳರು ಆ ಋಷ್ಯಾಶ್ರಮದ ಮಾರ್ಗವಾಗಿ ಬಂದು ಆ ಕದ್ದ ಪದಾರ್ಥಗಳನ್ನೆಲ್ಲಾ ಋಷಿಯ ಮುಂದೆ ಇಟ್ಟುಬಿಟ್ಟು ಓಡಿಹೋದರು. ಈ ರಾಜಭಟರು ಇವನೇ ಕಳ್ಳನೆಂದು ನಿಶ್ಚಯಮಾಡಿಬಿಟ್ಟು, ತಿಳಿಯದಿರುವದಕ್ಕಾಗಿ ಋಷಿಯೆಂದು ಅಭಿನಯಿಸುತ್ತಿರುವನೆಂದು ರಾಜಸನ್ನಿಧಿಗೆ ಕರೆದುಕೊಂಡು ಹೋಗಿ ಶೂಲಕ್ಕೆ ಹಾಕಿಬಿಡಬೇಕೆಂಬ ರಾಜಾಜ್ಞೆಯಂ ಪಡೆದು ಶೂಲಾರೋಪಣವನ್ನು ಮಾಡಿಸಿದರು. ಯೋಗಮಾಹಾತ್ಮ್ಯದಿಂದ ಮರಣವನ್ನು ಹೊಂದದಿರಲು, ರಾಜನು ಕಡೆಗೆ ಈತನು ಋಷಿ ಎಂದು ತಿಳಿದು ಶೂಲದಿಂದ ಇಳಿಸಿ, ಪ್ರಣಾಮಾದಿಗಳ ಮೂಲಕ ತಾನು ಮೋಹದಿಂದಲೂ ಅಜ್ಞಾನದಿಂದಲೂ ಮಾಡಿದ ಮಹಾಪರಾಧವನ್ನು ಮನ್ನಿಸಬೇಕೆಂದು ಪ್ರಾರ್ಥಿಸಲು, "ಪ್ರಸಾದ ಮಕರೋನ್ಮುನಿಃ" ಮುನಿಯು ಮನ್ನಿಸಿಬಿಟ್ಟರು. ಬಳಿಕ ಮಾಂಡವ್ಯರಿಗೆ ಈ ದುರ್ದಶೆ ಪ್ರಾಪ್ತವಾಗಲು ಕಾರಣವೇನೆಂಬುದು ತಿಳಿಯದೆ, ಯಮನಲ್ಲಿಗೆ ಹೋಗಿ, ನನಗೇಕೆ ಈ ದುರ್ದಶೆಯು ಪ್ರಾಪ್ತವಾಯಿತು, "ಶೀಘ್ರಮಾಚಕ್ಷ್ವ ನೋ ತತ್ವಂ ಪಶ್ಯ ಮೇ ತಪಸೋ ಬಲಂ," ಬೇಗ ಹೇಳು, ಇಲ್ಲವಿದ್ದರೆ ನನ್ನ ತಪಸ್ಸಿನ ಬಲವನ್ನು ನೋಡುತ್ತೀಯೋ ಎಂದು ಬೆದರಿಸಲು; ಅದಕ್ಕೆ ಯಮನು ನೀನು ಬಾಲ್ಯಾವಸ್ಥೆಯಲ್ಲಿ ಪತಂಗಗಳನ್ನು ಹಿಡಿದು ಅವುಗಳ ಬಾಲಕ್ಕೆ ಕಡ್ಡಿಯನ್ನು ಚುಚ್ಚಿಕೊಂಡುದರಿಂದ ನಿನಗೆ ಇಂತಹ ದುರವಸ್ಥೆಯು ಪ್ರಾಪ್ತವಾಯಿತೆಂದು ಉತ್ತರವನ್ನೀಯಲು, ಅದಕ್ಕೆ ಋಷಿಯು "ಆಚತುರ್ದಶಕಾದ್ವರ್ಷಾನ್ನ ಭವಿಷ್ಯತಿ ಪಾತಕಮ್। ಪರತಃ ಕುರ್ವತಾಮೇವ ದೋಷ ಏವ ಭವಿಷ್ಯತಿ", ಹದಿನಾಲ್ಕು ವರ್ಷಗಳು ಕಳೆದನಂತರ ಮಾಡಿದಪರಾಧವು ದೋಷವಾಗಿ ದಂಡನೀಯವೇ ವಿನಾ ಬಾಲ್ಯದಲ್ಲಿ ಜ್ಞಾನವಿಲ್ಲದೆ ಮಾಡಿದ ಈ ಅಲ್ಪಾಪರಾಧಕ್ಕೆ ಈ ಮಹತ್ತಾದ ಬ್ರಾಹ್ಮಣ ವಧಾರ್ಹ ಶಿಕ್ಷೆಯನ್ನು ವಿಧಿಸುವದು ಧರ್ಮವೇ, ಆದುದರಿಂದ ನೀನು "ಶೂದ್ರಯೋನಾವತೋ ಧರ್ಮ ಮಾನುಷಃ ಸಂಭವಿಷ್ಯಸಿ" (ಭಾರ. ಆದಿ. ೧೦೮ನೆಯ ಅಧ್ಯಾಯ) ಎಂದು ಶಾಪವನ್ನಿತ್ತರು. ಆಗ ಯಮನೇ ಶೂದ್ರಯೋನಿಯಲ್ಲಿ ವಿದುರರಾಗಿ ಹುಟ್ಟಿದರು. ಶ್ರೀ ವಿದುರರು ವ್ಯಾಸರಿಂದ ಅಂಬಿಕಾದಾಸಿಯಲ್ಲಿ ಹುಟ್ಟಿದರು; ಹಾಗೆಯೇ ಶ್ರೀ ವ್ಯಾಸರಿಂದ ಅಂಬಿಕೆಯಲ್ಲಿ ಅಂಧನಾದ ಧೃತರಾಷ್ಟ್ರನೂ, ಅಂಬಾಲಿಕೆಯಲ್ಲಿ ಪಾಂಡುವೂ ಹುಟ್ಟಿದರಾದುದರಿಂದ ಧೃತರಾಷ್ಟ್ರ, ಪಾಂಡು, ವಿದುರರು ಮೂವರೂ ಭ್ರಾತೃಗಳೆಂದಿನಿಸಿದರು. ಶ್ರೀ ವಿದುರರು ತಮ್ಮ ಅಣ್ಣಂದಿರಾದ ಧೃತರಾಷ್ಟ್ರರಿಗೆ ಧರ್ಮೋಪದೇಶವನ್ನೆಲ್ಲಾ ಮಾಡಿದರು,

ಇದು ವಿದುರನೀತಿ ಎಂಬ ಹೆಸರಿನಿಂದ ಬಹು ಅಮೋಘವಾದ ಧರ್ಮೋಪದೇಶವಾಗಿರುತ್ತದೆ. ಈ ಉಪದೇಶವನ್ನು ಹೊಂದಿದ ಕೂಡಲೇ ಧೃತರಾಷ್ಟ್ರನು ಬ್ರಹ್ಮಪ್ರಾಪ್ತಿಗೆ ಸಾಧನವಾದ ವಿದ್ಯೆಯನ್ನು ಕೇಳಿ ತಿಳಿಯಬೇಕೆಂದು ಪ್ರಾರ್ಥಿಸಲು, ಆಗ ಹೇಳಿದ ಉತ್ತರವು, "ಶೂದ್ರಯೋನಾವಹಂ ಜಾತಃ" ಎಂದು. ಅಂತಹ ತತ್ತ್ವೋಪದೇಶಕ್ಕೆ ಶೂದ್ರಯೋನಿಯಲ್ಲಿ ತಾನು ಜನಿಸಿದುದರಿಂದ ಅರ್ಹನಲ್ಲವೆಂದು ಹೇಳಿ, ಧೃತರಾಷ್ಟ್ರನನ್ನು ಕುರಿತು, ಸನತ್ಸುಜಾತರು ಮಹಾಪ್ರಾಜ್ಞರು, ಪುನಃಸಂಸಾರವಿಲ್ಲದಹಾಗೆ ಬ್ರಹ್ಮವಿದ್ಯೆ ಉಪದೇಶಿಸುವ ಸಾಮರ್ಥ್ಯವನ್ನುಳ್ಳವರಾದುದರಿಂದ ಅವರಲ್ಲಿಗೆ ಹೋಗೋಣ ಬಾ ಎಂದು ಕರೆದು ಕೊಂಡು ಹೋಗಿ, ತತ್ತ್ವೋಪದೇಶವನ್ನು ಹೊಂದಬೇಕೆಂಬ ಆಸೆಯು ತನ್ನ ಭ್ರಾತೃವಿಗೆ ಇರುವದರಿಂದ ತಾನು ಉಪದೇಶಿಸಲು ಅಯೋಗ್ಯನಾದುದರಿಂದ ತಾವು ಉಪದೇಶಿಸಬೇಕೆಂದು ಧೃತರಾಷ್ಟ್ರನಿಗಾಗಿ ಅವನು ಪ್ರಾರ್ಥಿಸಿದರು; ಆಗ ಸನತ್ಸುಜಾತರು ತತ್ತ್ವೋಪದೇಶವನ್ನು ಐದು ಅಧ್ಯಾಯಗಳ ಮೂಲಕ (ಉದ್ಯೋಗ. ೪೨-೪೬) ಉಪದೇಶಿಸಿದರೆಂಬ ಇತಿಹಾಸ ಉಂಟು. ಇವರ ಮಾರ್ಗೋಪದೇಶವು, ಯೋಗಿಯಾಗಿ ಪರಬ್ರಹ್ಮೋಪಾಸನೆಯನ್ನು ಮಾಡಿದರೆ, ಮೃತ್ಯುವನ್ನು ದಾಟಿ ಆತನನ್ನು ಹೊಂದಬಹುದು ಎಂಬುದು. ಅಪ್ರಸ್ತುತವಾದರೂ ಈ "ಶೂದ್ರಯೋನಾವಹಂ ಜಾತಃ" ಎಂಬ ಪ್ರಮಾಣದಿಂದ ಗ್ರಹಿಸತಕ್ಕ ಇನ್ನೊಂದು ವಿಷಯವುಂಟು. ಶ್ರೀ ವಿದುರರು ಹಿಂದಿನ ಜನ್ಮದ ಉಪಾಸನೆಯ ಬಲದಿಂದಲೇ ಮುಕ್ತಿಯನ್ನು ಹೊಂದಿದರೆಂಬ ಪ್ರಮಾಣಬಲವಿರುವಾಗ, ಶೂದ್ರರಾದರೂ ಈ ಜನ್ಮದಲ್ಲೂ ಉಪಾಸನೆಯನ್ನು ಕೈಕೊಂಡು ಮುಕ್ತಿಯನ್ನು ಹೊಂದಿದರೆಂದು ಕೆಲವರು ಹೇಳುವರು. ಈ ಹೇಳಿಕೆಯು ಶಾಸ್ತ್ರವಿರುದ್ಧವಾದುದು. ಶೂದ್ರಯೋನಾವಹಂಜಾತಃ ಎಂದು ಬ್ರಹ್ಮವಿದ್ಯೆಯನ್ನು ಉಪದೇಶಿಸುವದಕ್ಕೂ ಕೂಡ ಇಷ್ಟವಿಲ್ಲದವನಾಗಿ ಬ್ರಹ್ಮವಿದ್ಯೆ ಎಂದು ಕೂಡ ಹೇಳಲು ಇಷ್ಟವಿಲ್ಲದೆ "ಅನ್ಯದ್ವಕ್ತುಂ" ಎಂಬ ಪ್ರಯೋಗವಿರುತ್ತದೆ. ಬ್ರಹ್ಮವಿದ್ಯೆ ಎಂದು ಕೂಡ ಹೇಳಲು ಅರ್ಹತೆಯಿಲ್ಲವೆಂದು ತಿಳಿದ ಮಹಾನುಭಾವರು ತಾವೇ ಬ್ರಹ್ಮವಿದ್ಯೆಯನ್ನು ಅನುಷ್ಠಿಸುವರೇ? ಹಿಂದೆ ೨೨೧ನೆಯ ಪುಟದಲ್ಲಿ ಇತರರ ತಪ್ಪು ಅಭಿಪ್ರಾಯವನ್ನು ಅನುಸರಿಸಿ ವಿದುರರು ಶೂದ್ರರಾಗಿದ್ದರೂ ಅಧಿಕಾರಿ ವಿಶೇಷರಾದುದರಿಂದ ಉಪಾಸನವನ್ನು ಮಾಡಿ ಮೋಕ್ಷವನ್ನು ಹೊಂದಿದರೆಂದು ಬರೆದಿರುವದನ್ನು ದಯವಿಟ್ಟು ತಿದ್ದಿಕೊಳ್ಳತಕ್ಕದ್ದು. ಅವರು ಉಪಾಸನೆಯನ್ನು ಮಾಡಿದರೆಂಬುದು ಅಪಶೂದ್ರಾಧಿಕರಣಕ್ಕೆ ವಿರುದ್ಧವು ಶ್ರೀ ದೇಶಿಕಾಚಾರ್ಯರು ನ್ಯಾಯ ಸಿದ್ಧಾಂಜನದಲ್ಲಿ ಹೀಗೆಯೇ ಹೇಳಿರುತ್ತಾರೆ. ತುಲಾಧಾರರನ್ನು ಜಾಜಲಿ ಎಂಬ ಬ್ರಾಹ್ಮಣರೂ, ಧರ್ಮವ್ಯಾಧನನ್ನು ಕೌಶಿಕರೆಂಬ

**ತುಲಾಧಾರ ಧರ್ಮವ್ಯಾಧವೃತ್ತಾಂತಯೋರಪಿ ಬ್ರಾಹ್ಮಣಾಭ್ಯಾಂ ಧರ್ಮೋಪದೇಶ ಗ್ರಹಣಂ, ನ ತು ತತ್ತ್ವೋಪದೇಶ ಪ್ರಾಪ್ತಿಃ.**

**ತುಲಾಧಾರ ಧರ್ಮವ್ಯಾಧಾದಿಗಳುಮ್ ಸಂದೇಹಮ್ ಕೇಳ್ಕವನ್ದ ಬ್ರಾಹ್ಮಣರ್ಕ್ಕಳ್ ಸಂಭಾವಿತ್ತು ತೀರ್ಥಯಾತ್ರೈಯಿಲೇ ವಳಿತಿಗೈತ್ತಾರ್ಕ್ಕೈ ವಳಿಯಿಲೇ ಶೇರ್ತ್ತ ಮಾತ್ರಂ ಅವರ್ಗಳೈ ತೆಳಿವಿತ್ತು ವಿಟ್ಟಾರಗಳಿತ್ತನೈ; ಅಲ್ಲದ ಮುಖ್ಯಮಾನ ಆಚಾರ್ಯಕಮ್ ಪಣ್ಣಿನಾರ್ಗಳನ್ರು. ಇಪ್ಪ್ರಕಾರಙ್ಗಳ್ ಅಪ್ಪೋ ಇತಿಹಾಸಙ್ಗಳಿಲೇ ಕಣ್ಡುಕೊಳ್ವದು.**

---

ಬ್ರಾಹ್ಮಣರೂ ಆಶ್ರಯಿಸಿ ಉಪದೇಶವನ್ನು ಹೊಂದಲಿಲ್ಲವೇ ಎಂಬಾಕ್ಷೇಪಗಳಿಗೆ ಮುಂದಿನ ವಾಕ್ಯದಿಂದ ಸಮಾಧಾನವನ್ನು ಹೇಳುತ್ತಾರೆ.

**ತುಲಾಧಾರ ಧರ್ಮವ್ಯಾಧ ವೃತ್ತಾಂತಗಳಲ್ಲೂ ಆಯಾ ಬ್ರಾಹ್ಮಣರಿಂದ ಧರ್ಮೋಪದೇಶವನ್ನು ಹೊಂದಿದುದೇ ವಿನಾ ತತ್ತ್ವೋಪದೇಶವನ್ನು ಹೊಂದಲಿಲ್ಲವು.**

ವೈಶ್ಯನಾದ ತುಲಾಧಾರರೂ, ಧರ್ಮವ್ಯಾಧರೇ ಮೊದಲಾದವರೂ **ಸಹ,** ಇಲ್ಲಿ ಹೇಳಿದ್ದರಿಂದ ಪೂರ್ವಕ್ಕೆ ವೃತ್ತಾಂತವು ಬೋಧಿಸಲ್ಪಟ್ಟಿತು, **ಸಂದೇಹಮ್ ಕೇಳ್ಕ ವಂದ ಬ್ರಾಹ್ಮಣರ್ಕ್ಕೈ,** ತಮ್ಮ ಮನಸ್ಸಿನಲ್ಲಿದ್ದ ಸಂದೇಹವನ್ನು ಕೇಳಲು ಬಂದ ಬ್ರಾಹ್ಮಣರನ್ನು, ಆ ಬ್ರಾಹ್ಮಣರು ಯಾರೆಂದರೆ, ಜಾಜಲಿ ಮತ್ತು ಕೌಶಿಕನೆಂಬ ಹೆಸರುಳ್ಳವರು, ತಾಙ್ಗಳ್ - ತಾವು ಎಂದರೆ, ತುಲಾಧಾರ ಧರ್ಮವ್ಯಾಧರು ಸಂಭಾವಿತ್ತು - ಬ್ರಾಹ್ಮಣರು ತಮ್ಮಲ್ಲಿಗೆ ಬಂದರೇ ಎಂಬ ಗೌರವದಿಂದ ಅವರನ್ನು ಪೂಜಿಸಿ, ತೀರ್ಥಯಾತ್ರೈಯಿಲೇ ವಳಿತಿಗೈತ್ತಾರೇ - ತೀರ್ಥಯಾತ್ರೆಯಿಂದ ಹೊರಟು ಅನ್ಯವಲ್ಲಿ ಮಾರ್ಗತಪ್ಪಿ ಬಂದವರನ್ನು ತೆಳಿವಿತ್ತು ವಿಟ್ಟಾರ್ಗಳತ್ತನೈ - ಅವರ ಸಂದೇಹವು ಹೋಗುವಹಾಗೆ ಮಾಡಿದರು - ಇಷ್ಟುಮಾತ್ರವೇ ವಿನಾ ಹೆಚ್ಚು ಬ್ರಹ್ಮವಿದ್ಯೆಯ ಉಪದೇಶವು ಮಾಡಿದರು ಇಲ್ಲವೆಂಬ ಭಾವವು. ಕಾಣಲಿದನು ತುಲಾಧಾರರನ್ನೂ, ಕಾಶ್ಯಪರು ಧರ್ಮವ್ಯಾಧರನ್ನೂ, ಆಚಾರ್ಯಭಾವದಿಂದ ಆಶ್ರಯಿಸಿ ಅವರಿಂದೇನೂ ಉಪದೇಶವನ್ನು ಹೊಂದಲಿಲ್ಲವೆಂಬ ಭಾವವು. ಬ್ರಾಹ್ಮಣರು ತಮ್ಮಲ್ಲಿಗೆ ಬಂದರೇ ಎಂಬ ಸಂತೋಷದಿಂದ ಅವರನ್ನು ತುಂಬಾ ಗೌರವದಿಂದ ಪೂಜಿಸಿರುವದರಿಂದ, ಅವರುಗಳು ಶಿಷ್ಯರೆಂದು ಹೇಳಲು ಸಾಧ್ಯವಿಲ್ಲವೆಂದು ತೋರಿಸುವದಕ್ಕಾಗಿಯೇ ಸಂಭಾವಿತ್ತು ಎಂಬ ಪ್ರಯೋಗವು. ಅವರುಗಳು ತಮ್ಮ ಸ್ಥಳಗ

ಳನ್ನು ಇವರುಗಳಿಂದ ಉಪದೆ ಶವನ್ನು ಹೊಂದಬೇಕೆಂಬ ಸಙ್ಕಲ್ಪದಿಂದ ಬಿಟ್ಟವರಲ್ಲವು. ತೀರ್ಥಯಾತ್ರೆಗಳಿಗಾಗಿ ಹೊರಟುಬಂದವರಿಗೆ ಯಾದೃಚ್ಛಿಕವಾಗಿ ಈ ತುಲಾಧಾರ ಧರ್ಮವ್ಯಾಧರುಗಳ ಸಮಾಗಮವು ದೊರೆತಿರುತ್ತದೆ, ಎಂಬ ಭಾವವು, ಅಲ್ಲದು - ಹೀಗಲ್ಲದೆ, ಮುಖ್ಯವಾದ ಆಚಾರ್ಯಕೃತ್ಯಗಳನ್ನು - ಆಚಾರ್ಯರ ಮುಖ್ಯವಾದ ಕರ್ತವ್ಯವು ತಮ್ಮ ಶಿಷ್ಯನಿಗೆ ಯಾವುದೆಂದರೆ, ಮಂತ್ರೋಪದೇಶವೂ, ಮಂತ್ರಗಳ ರಹಸ್ಯಾರ್ಥಗಳ ಉಪದೇಶವೂ, ಬ್ರಹ್ಮವಿದ್ಯಾ ರೂಪವಾದ ಸಾಧ್ಯೋಪಾಯಾನುಷ್ಠಾನದ ಉಪದೇಶವೂ. ಅದನ್ನು ಅನುಷ್ಠಿಸುವ ಹಾಗೆ ಮಾಡೋಣವೂ; ಇಂತಹ ಮುಖ್ಯವಾದ ಆಚಾರ್ಯಕೃತ್ಯಗಳನ್ನು ಮಾಡಿದವರಲ್ಲವು; ಹಾಗೆ ಮಾಡಲಿಲ್ಲವೆಂದು ಕಂಠೋಕ್ತವಾಗಿ ಹೇಳುತ್ತಿಲ್ಲ, ಅದಕ್ಕೆ ಸಾಧನವೇನು? ಎಂದರೆ, ಅವರುಗಳ ಇತಿಹಾಸಗಳನ್ನೇ ಚನ್ನಾಗಿ ಅವಲೋಕಿಸಿ ವಿಮರ್ಶಿಸಿದರೆ, ನಿಮಗೇನೆ ವೇದ್ಯವಾಗುತ್ತದೆಂದು ಹೇಳುತ್ತಾರೆ, ಇಪ್ರಕಾರಙ್ಗಳ್ - ಈ ಮೇಲೆ ಹೇಳಿದ ವಿಶೇಷಗಳೆಲ್ಲಾ, ಅವು ಯಾವುವೆಂದರೆ, ಆ ಬ್ರಾಹ್ಮಣರು ಶಿಷ್ಯರಾಗಿ ಬ್ರಹ್ಮವಿದ್ಯಾ ಕಾಂಕ್ಷಿಗಳಾಗಿ ಬಂದು ಇವರುಗಳನ್ನು ಆಶ್ರಯಿಸಿ, ಬ್ರಹ್ಮವಿದ್ಯೋಪದೇಶವನ್ನು ಹೊಂದಲು ಬಂದವರಲ್ಲವೆಂಬುದನ್ನು ತಿಳಿಸುವದಕ್ಕಾಗಿ, ಯಾದೃಚ್ಛಿಕವಾಗಿ ಅವರಲ್ಲಿಗೆ ಬಂದರೆಂಬ, ಅವರಿಗೆ ಇದ್ದ ಸಂದೇಹ ವಿಷಯವನ್ನು ಮಾತ್ರ ಕೇಳಿ, ಅದನ್ನು ನಿವೃತ್ತಿಮಾಡಿಕೊಂಡರೆಂಬ ಇಂತಹ ಪ್ರಕಾರಗಳನ್ನು, ಅವ್ವೋ ಇತಿಹಾಸಙ್ಗಳಿಲೇ-ಆಯಾ ಇತಿಹಾಸಗಳಲ್ಲಿ, ಕಣ್ಡುಕೊಳ್ಳದು-ತಿಳಿದುಕೊಳ್ಳುವುದು. ತುಲಾಧಾರರ ಇತಿಹಾಸವು. ಏನೆಂದರೆ— ಜಾಜಲಿ ಎಂಬ ಬ್ರಾಹ್ಮಣನು ತಾನು ಅಧಿಕರಿಸಿದ ಧರ್ಮಶಾಸ್ತ್ರಜ್ಞಾನದಿಂದ ಹೃಷ್ಟನಾಗಿ, ತನಗೆ ಧರ್ಮವು ಚನ್ನಾಗಿ ತಿಳಿಯುವದೆಂದು ಘಟ್ಟಿಯಾಗಿ ಆಕಾಶದಲ್ಲಿ ಪ್ರತಿಧ್ವನಿಯಾಗುವಹಾಗೆ ಕೂಗಿಹೇಳಿದನು.. ಇದಕ್ಕೆ "ಧರ್ಮೇಣ ನ ಸಮಸ್ತ್ವಂ ನೈ ತುಲಾಧಾರಸ್ಯ ಜಾಜಲೇ" ನೀನು ತುಲಾಧಾರರಿಗೆ ಧರ್ಮದಲ್ಲಿ ಸಮನಾಗಲಾರೆ ಎಂದು ಆಕಾಶವಾಣಿಯು ಉಂಟಾಯಿತು. ಆ ತುಲಾಧಾರರು ಯಾರು? ಅವರಿಗೆ ತಿಳಿದಿರುವ ಧರ್ಮವೆಷ್ಟು ಎಂದು ಅಗ ತಿಳಿಯುವದಕ್ಕಾಗಿ ವಾರಾಣಸೀಪುರವನ್ನು ಸೇರುತ್ತಾರೆ. ಅಲ್ಲಿ ವೈಶ್ಯರಾಗಿ ವರ್ತಕರಾಗಿ ಸಾಮಾನುಗಳನ್ನು ವಿಕ್ರಯಿಸುತ್ತಿರುವ ಈ ತುಲಾಧಾರರನ್ನು ಕಂಡರು. ಹೀಗೆ ಭಾಂಡಜೀವನನಾದ ತನ್ನ ಮನೆಗೆ ಈ ವಿಪ್ರರು ಬಂದರೆ ಎಂದು. "ಸೋಽಪಿ ದೃಷ್ಟ್ವೈವ ತಂ ವಿಪ್ರಮಾಯಾಂತಂ ಭಾಂಡಜೀವನಃ। ಸಮುತ್ಥಾಯ ಸು ಸಂಹೃಷ್ಟ ಸ್ಸ್ವಾಗತೇನಾ ಭ್ಯಪೂಜಯತ್" ಪದಾರ್ಥವಿಕ್ರಯದಿಂದ ಜೀವಿಸುವ ಈ ತುಲಾಧಾರರು ಆ ವಿಪ್ರರನ್ನು ಕಂಡಒಡನೆಯೇ ಎದರುಗೊಂಡು ಸ್ವಾಗತ

ವನ್ನು ಹೇಳಿ, ಬರಮಾಡಿಕೊಂಡು ಅವರನ್ನು ಹೆಚ್ಚಾಗಿ ಪೂಜಿಸಿದನು. ಆಗ ಜಾಜಲಿಯು "ಓ ತುಲಾಧಾರರೇ ನಿಮ್ಮ ವೃತ್ತಿಯು ಪದಾರ್ಥಗಳನ್ನು ವಿಕ್ರಯಿಸೋಣವು; ಹೀಗಿದ್ದರೂ ನಿಮಗೆ ನೈಷ್ಠಿಕೀ ಬುದ್ಧಿಯುಂಟು, ಇದು ಹೇಗೆ ನಿಮಗುಂಟಾಯಿತು? ಅದನ್ನು ತಿಳಿಸಬೇಕೆಂದು ಪ್ರಾರ್ಥಿಸಲು; ಆಗ್ಗೆ ತುಲಾಧಾರರು ತಾನು ಈ ವೃತ್ತಿಯಲ್ಲಿದ್ದರೂ ಸರ್ವಭೂತಗಳಲ್ಲೂ ದ್ರೋಹವಿಲ್ಲದಬುದ್ಧಿಯನ್ನು, ಹೊಂದಿರುವೆನು. ವ್ಯಾಪಾರದಲ್ಲಿ ನನಗೆ ವಂಚನೆ ಬುದ್ಧಿಯಿಲ್ಲವು. ಸ್ಪರ್ಧೆಯು ಎಂದರೆ, ಎಲ್ಲರಿಗೂ ಮೇಲಾಗಿರಬೇಕೆಂಬ ಅಸೂಯಾಬುದ್ಧಿಯು ನನಗೆ ಕದಾಪಿ ಇಲ್ಲವು. ಹೀಗೆಯೇ ತಾವೂನೂ ವರ್ತಿಸತಕ್ಕದ್ದೆಂದು ತುಲಾಧಾರರು ಹಿತವನ್ನು ಬೋಧಿಸಿದರು.

ಧರ್ಮವ್ಯಾಧ ವೃತ್ತಾಂತದಲ್ಲಿ, ವೃದ್ಧಮಾತಾಪಿತೃಗಳನ್ನು ಹೊಂದಿದ್ದ ಕೌಶಿಕನೆಂಬ ಬ್ರಾಹ್ಮಣನು ಇಂತಹ ವೃದ್ಧಮಾತಾಪಿತೃ ಶುಶ್ರೂಷೆಯನ್ನು ತ್ಯಜಿಸಿ, ತೀರ್ಥಯಾತ್ರೆಗಾಗಿ ಹೊರಟು, ಮಾರ್ಗದಲ್ಲಿ ಒಂದು ವೃಕ್ಷದ ನೆರಳಿನಲ್ಲಿ ಮಲಗಿರುವಾಗ ಒಂದು ಪಕ್ಷಿಯು ಈತನಮೇಲೆ ಮಲೋತ್ಸರ್ಜನವನ್ನುಮಾಡಲು; ಅದಕ್ಕೆ ಈ ತಪಸ್ವಿ ಬ್ರಾಹ್ಮಣನು ಕೋಪಗೊಂಡು ಕ್ರೂರದೃಷ್ಟಿಯಿಂದ ಆ ಪಕ್ಷಿಯನ್ನು ನೋಡಲು; ಆ ಪಕ್ಷಿಯು ದಗ್ಧವಾಗಿ ಕೆಳಗೆಬಿತ್ತು. ಅಲ್ಲಿಂದ ಮುಂದೆ ಒಬ್ಬ ಸಾಧ್ವಿಯ ಮನೆಗೆ ಹೋಗಿ ಭಿಕ್ಷವನ್ನು ಬೇಡಲು; ಆಗ ಆ ಪತಿವ್ರತಾ ಶಿರೋಮಣಿಯು ಪತಿಶುಶ್ರೂಷೆಯಲ್ಲಿ ನಿರತಳಾಗಿದ್ದುದರಿಂದ, ಸಾವಕಾಶಮಾಡಿದಳೆಂಬ ಕೋಪದಿಂದ ಆಕೆಯನ್ನೂ ಈ ವಿಪ್ರನು ಕ್ರೂರದೃಷ್ಟಿಯಿಂದ ನೋಡಲು; ತಾನು ಪಕ್ಷಿಯಲ್ಲವು ಪತಿಯೇ ಪರದೈವವೆಂದು ತಿಳಿದವಳು. ನೀನು ಇನ್ನೂ ಧರ್ಮವಿಷಯದಲ್ಲಿ ತಿಳಿಯತಕ್ಕದ್ದುಂಟು; ಮಿಥಿಲಾಪಟ್ಟಣದಲ್ಲಿರುವ ಧರ್ಮವ್ಯಾಧರಲ್ಲಿಗೆ ಹೋಗು, ನಿನಗೆ ಧರ್ಮವನ್ನು ಬೋಧಿಸುವರೆಂದು ಸಮಾಧಾನಮಾಡಿ ಕಳುಹಿಸಿದಳು. ತಾನು ನನ್ನ ದೃಷ್ಟಿಯಿಂದ ಪಕ್ಷಿಯನ್ನು ಭಸ್ಮಮಾಡಿದುದನ್ನು ಈಕೆಯು ಹೇಗೆ ಅರಿತಳು, ಇದು ತುಂಬಾ ಆಶ್ಚರ್ಯವೆಂದೆಣಿಸಿ, ಮಿಥಿಲಾನಗರಕ್ಕೆ ಹೋಗಿ ಮಾಂಸವನ್ನು ವಿಕ್ರಯಿಸುವ ವ್ಯಾಪಾರವುಳ್ಳ ವ್ಯಾಧನಂ ಕಂಡರು. ಆಗ ಧರ್ಮವ್ಯಾಧರು, "ಅಭಿವಾದಯೇ ತ್ವಾಂ ಭಗವನ್ ಸ್ವಾಗತಂತೇ ದ್ವಿಜೋತ್ತಮ" ಓ ದ್ವಿಜೋತ್ತಮರಾದ ಕೌಶಿಕರೇ ತಮಗೆ ಸ್ವಾಗತವು. ತಮಗೆ ಪ್ರಣಾಮವನ್ನು ಮಾಡುತ್ತೇನೆ ಎಂದು ಆ ಬ್ರಾಹ್ಮಣನನ್ನು, ಸಂಭಾವಿತ್ತು - ಚನ್ನಾಗಿ ಪೂಜಿಸಿ, ನನ್ನಿಂದಾಗತಕ್ಕದ್ದೇನ? ಎಂದು, ಬೇಡಲು, ತನ್ನನ್ನು ಒಬ್ಬ ಮಹಾ ಪತಿವ್ರತೆಯು ಇಲ್ಲಿಗೆ ಕಳುಹಿಸಿರುತ್ತಾಳೆಂಬುದು ನನಗೆ ಜ್ಞಾನದೃಷ್ಟಿಯಿಂದ ತಿಳಿಯುವದೆಂದೂ ಹೇಳಲು; ಆಗ ಈ ಬ್ರಾಹ್ಮಣೋತ್ತಮರು, ಈತನು ಈ ವೃತ್ತಾಂತವನ್ನು ತಿಳಿ

" ಪೂಜ್ಯಃ" ಎನ್ಗಿರ ಶಬ್ದಮುಮ್ ಸಾಧಾರಣಮಾಗೈಯಾಲೇ ಭಾಗವತ್ತ್ವಮುಂಡಾನಾಲ್, ಸರ್ವರುಮ್ ಶಾಸ್ತ್ರಮ್ ಶೊನ್ನ ಮಟ್ಟ್ರಿಲ್

---

ತೊಳುಮಿನೀರ್ ಕೊಡುಮಿನ್ ಕೊಣ್ಮಿನೆನ್ರು ನಿನ್ನೋಡುಮೊಕ್ಕ
ವಳಿಪಡ ವರುಳಿ ನಾಯ್‌ಪೋಲ್ ಮದಿಳ್ ತಿರುವರಂಗತ್ತಾನೇ ||

**ತಿರುಮದಿಳಾಲೇ** - ಶ್ರೇಷ್ಠಗಳಾದ ಸಪ್ತಪ್ರಾಕಾರಗಳಿಂದ ಸುತ್ತಲ್ಪಟ್ಟ, **ತಿರುವರಂಗತ್ತಾನೇ** - ಶ್ರೀರಂಗ ವಿಮಾನದಲ್ಲಿ ಬಿಜಮಾಡಿಸಿರುವ ಶ್ರೀರಂಗ ನಾಥನೇ, **ಒಳುಗಲ್ ಆರು** - ಚತುರ್ಮುಖ ಬ್ರಹ್ಮ ಮೊದಲುಗೊಂಡು ತಮ್ಮ ವರೆಗೂ ಪರಂಪರೆಯಾಗಿ ಬರುವ ವಂಶ ಪ್ರವಾಹದಲ್ಲಿ, **ಪಳದು ಇಲಾ**-ಯಾವ ದೊಂದು ದೋಷವೂ ಇಲ್ಲದಿರುವ, **ಪಲಶತು ಪ್ಪೇದಿಮಾರ್‌ಗಳ್** - ಅನಂತಾ ವೈವೇದಾಃ ಎಂದು ಹೇಳಿರುವಹಾಗೆ ಬಹುವಾದನಾಲ್ಕು ವೇದಗಳನ್ನು ಚತುರ್ ಅಧ್ಯಯನ ಮಾಡುವವರೇ, **ಇಳಿ ಕುಲತ್ತವರ್‌ಗಳೇಲುಮ್** - ಹೀನಜಾತಿ ಯಲ್ಲಿ ಹುಟ್ಟಿದವರುಗಳಾದರೂ, **ಎನ್ನುಡಿಯಾರ್‌ಗಳಾಗಿಲ್** - ಒಂದುವೇಳೆ ನಮ್ಮಹಾಗೆ ವಿಷ್ಣುಭಕ್ತರುಗಳಾದರೆ, **ನೀರ್** - ನೀವುಗಳು, **ತೊಳುಮಿನ್** - ಅವರುಗಳನ್ನು ಪೂಜಿಸಿರಿ, **ಕೊಡಮಿನ್** - ನಿಮಗೆ ತಿಳಿದ ವಿಶೇಷಾರ್ಥಗಳನ್ನು ಅವರುಗಳಿಗೆ ಉಪದೇಶಿಸಿರಿ, **ಕೊಳ್‌ಮಿನ್** - ಅವರುಗಳಿಗೆ ತಿಳಿದ ವಿಶೇಷಾರ್ಥ ಗಳನ್ನು ನೀವು ಪರಿಗ್ರಹಿಸಿರಿ, **ಎನ್ರು** - ಎಂಬದಾಗಿ, **ನಿನ್ನೋಡುಮ್ ಒಕ್ಕ** - ನಿಮ್ಮೊಂದಿಗೆ ಸಮಾನವಾಗಿ, **ವಳಿಪಡ** - ಅವರನ್ನು ಆರಾಧಿಸಿ ಒಳ್ಳೇ ದಾರಿಯಲ್ಲಿ ಹೋಗುವಹಾಗೆ, **ಅರುಳಿ ನಾಯ್ ಪೋಲ್** - ನಮ್ಮನ್ನು ನೀನು ಅನುಗ್ರಹಿಸಿದಹಾಗೆ ತೋರುತ್ತದೆ; ಹೇಗೆ ಎಂದರೆ, ತಿರುಪ್ಪಾಣಾಳ್ವಾರ್ ಮೊದಲಾದವರುಗಳನ್ನು ಶ್ರೀ ಲೋಕಸಾರಂಗಮುನಿಗಳ ಮೂಲಕ ಅನುಗ್ರಹಿ ಸಿದ ತೆರದಿ ಮುಂದೆ ಆ ಅಪಕೃಷ್ಟಜಾತಿಯಭಾಗವತನು ಪೂಜ್ಯನೆಂದು "ಸ ಚ ಪೂಜ್ಯೋಯಥಾಹ್ಯಹಮ್" ಎಂದು ಹೇಳಿರುವದಕ್ಕೆ ಎಷ್ಟರಮಟ್ಟಿಗೆ ಪೂಜ್ಯ ನೆಂಬುದನ್ನು ತಿಳಿಸುತ್ತಾರೆ, ಬ್ರಾಹ್ಮಣಾದಿಗಳಿಗೆ ಸಮಾನನಾಗಿ ಪೂಜ್ಯನೇ? ಅಥವಾ ಅವರ ಜಾತಿಯವರಲ್ಲೇ ಶ್ರೇಷ್ಠನಾಗಿ ಸಾಧಾರಣ ಶೂದ್ರಾದಿಗಳ ಹಾಗೆ ಭಾವಿಸದೆ ಅವರಲ್ಲಿ ಉತ್ತಮನೆಂದು ಮಾತ್ರ ಮಾನಾರ್ಹನೇ? ಅವನಿಗೆ ಪರ ಬ್ರಹ್ಮ ವಿಷಯಕ ಯಥಾರ್ಥ ಜ್ಞಾನವನ್ನು ಉಪದೇಶಿಸಬಹುದೇ? ಅವನಿಂದ ತಿಳಿಯದವನು ಜ್ಞಾನವನ್ನು ಸಂಪಾದಿಸಬಹುದೆ? ಹೀಗೆಲ್ಲಾ ಅವನು ಪೂಜ್ಯನೆಂ ಎಂಬ ವ್ಯವಸ್ಥೆಯಲ್ಲಿ ಅತನು ಉತ್ತಮ ಶೂದ್ರಾದಿಗಳ ಹಾಗೆ ಆದರಣೀಯನೇ ವಿನಾ, ಬ್ರಾಹ್ಮಣಾದಿ ಸಂಪ್ರದಾಯಗಳಿಗೆ ಯೋಗ್ಯನಲ್ಲವು. ಸಹಪಙ್ಕ್ತಿಭೋಜನ

**ಳಿಲೇ ಆದರಣೀಯರ್. ಇವರ್‌ಗಳೈ ಸಜಾತಿಯರೋಡೊಕ್ಕ ನಿನೈತ್ತು ಅವಜ್ಞೈ ಪಣ್ಣಿನಪೋದು ನರಕನಾ ಮೆನ್ರಿವ್ವಳವಿಲೇ ತಾತ್ಪರ್ಯಮ್**

---

ಕನ್ಯಾದಾನ, ನಿತ್ಯನೈಮಿತ್ತಿಕಾದಿಗಳ ಅನುಷ್ಠಾನ ಮೊದಲಾದ ಬ್ರಾಹ್ಮಣಾದಿಗಳಿಗೆ ಮಾತ್ರವೇ ಸಲ್ಲುವ ಆಚಾರಗಳಿಗೆ ಅವನು ಯೋಗ್ಯನಲ್ಲವು. ಆದರೆ ಅವಜ್ಞೆಯಿಂದ ಆತನನ್ನು ಸನ್ಮಾನಿಸದೆ ಶೂದ್ರಾದಿ ಸಾಮಾನ್ಯನೆಂದು ಭಾವಿಸಿದರೆ ನರಕವು ತಪ್ಪದು ಎಂದು ಹೇಳುತ್ತಾರೆ. "**ಪೂಜ್ಯಃ**" ಎಙ್ಗಿರ ಶಬ್ದ**ಮುಮ್** - ಆ ಪ್ರಮಾಣದಲ್ಲಿರುವ "**ಸ ಚ ಪೂಜ್ಯಃ**" ಎಂದು ಹೇಳಿರುವುದು, **ಸಾಧಾರಣಮಾಗೈಯಾಲೇ** - ವಿಶೇಷತಾತ್ಪರ್ಯವೇನೂ ಇಲ್ಲದೆ, ಸಾಮಾನ್ಯವಾಗಿ ಹೇಳಿರುವುದರಿಂದ, **ಭಾಗವತತ್ವಮುಂಡಾನಾಲ್** - ಶೂದ್ರಾದಿ ಹೀನಜಾತಿಯವರಿಗೆ ಭಾಗವತತ್ವವು ಉಂಟಾದರೆ, **ಶಾಸ್ತ್ರಮ್ ಶೊನ್ನಮಟ್ಟುಕ್ಕಳಿಲೇ** - ಶಾಸ್ತ್ರವು ಎಷ್ಟರಮಟ್ಟಿಗೆ ಮಾನ್ಯರೆಂದು ಹೇಳಿರುತ್ತದೋ ಅಷ್ಟುಮಾತ್ರ, **ಆದರಣೀಯರ್** - ಆದರಿಸಲು ಯೋಗ್ಯರು, ಸನ್ಮಾನಿಸಲು ಯೋಗ್ಯರು, ಶಾಸ್ತ್ರವು ಎಷ್ಟರಮಟ್ಟಿಗೆ ಅಂತವರು ಮಾನ್ಯರೆಂದು ಅನುಜ್ಞೆಯನ್ನು ಕೊಟ್ಟಿರುತ್ತದೋ ಅಷ್ಟರಮಟ್ಟಿಗೆ ಅವರು ಆದರಣೀಯರು; ಹಾಗಾದರೆ ಶಾಸ್ತ್ರವು ಎಷ್ಟರಮಟ್ಟಿಗೆ ಅವರನ್ನು ಸನ್ಮಾನಿಸಬಹುದು ಎಂದು ಹೇಳುತ್ತದೆ? ಎಂದರೆ, "**ನ ಪರೀಕ್ಷ್ಯ ವಯೋ ವಂದ್ಯಾಃ ನಾರಾಯಣಪರಾಯಣಾಃ । ಅಪಿಸ್ವೋತ್ಕರ್ಷಹೀನೇನ ಜನ್ಮನೋ ಮಾನ್ಯಾ ನಿನ್ಯೇನ ಚೇತಸಾ**" ಎಂದಾಗ ನಾರಾಯಣನಲ್ಲಿ ಭಕ್ತಿಯುಳ್ಳವರಾದರೋ, ಆಗ ಅವರನ್ನು ಪರೀಕ್ಷಿಸದೇನೆ ಸಜಾತೀಯರು ಅವರನ್ನು ವಂದಿಸತಕ್ಕದ್ದು, ಅವರು ಒಂದುವೇಳೆ ಕೀಳು ಜಾತೀಯರಾದರೆ, ಉತ್ತಮ ಜಾತೀಯರು ಸ್ವಜಾತ್ಯುತ್ಕರ್ಷಪ್ರಯುಕ್ತವಾದ ಅಹಂಕಾರವಿಲ್ಲದ, ಆದರದಿಂದ ಕೂಡಿದ, ಮನಸ್ಸಿನಿಂದ ಸನ್ಮಾನಿಸಲು ಯೋಗ್ಯರು" ಎಂದು ಇಷ್ಟುಮಾತ್ರ ಪೂಜ್ಯರೆಂದು ಹೇಳಲ್ಪಟ್ಟಿರುತ್ತದೆ. ಕೀಳು ಜಾತಿಯವನೆಂದು ಆತನನ್ನು ಸಾಮಾನ್ಯಭಾವದಿಂದ ನೋಡಕೂಡದು ಎಂಬ ಮುಖ್ಯಭಾವವನ್ನಿಟ್ಟು ಸ ಚ ಪೂಜ್ಯಃ ಎಂದು ಹೇಳಲ್ಪಟ್ಟಿತು ಎಂಬ ಅಭಿಪ್ರಾಯವು ಹಾಗೆ ಸಾಮಾನ್ಯಭಾವದಿಂದ ನೋಡಿದುದಾದರೆ ಆತನು ನರಕಭಾಗಿಯಾಗುವನು ಎಂದು ಹೇಳುತ್ತಾರೆ. '**ಇವರ್‌ಗಳೈ** - ಈ ಶೂದ್ರಾದಿ ಜಾತಿಯ ಭಾಗವತರುಗಳನ್ನು, **ಸಜಾತೀಯರೋಡೊಕ್ಕ ನಿನೈತ್ತು** - ಇತರ ಸಜಾತೀಯರಾದ ಶೂದ್ರಾದಿಗಳೊಂದಿಗೆ ಸಮಾನರೆಂದು ಭಾವಿಸಿ, **ಅವಜ್ಞೈ ಪಣ್ಣಿನ ಪೋದು** - ತಿರಸ್ಕಾರವನ್ನು ತೋರಿಸಿದ ಸಂದರ್ಭದಲ್ಲಿ. **ನರಕನಾಂ** - ನರಕವು ಪ್ರಾಪ್ತವಾಗುತ್ತದೆ, ಎನ್ರಿವ್ವಳವಿಲೇ ತಾತ್ಪ

**ಇವ್ವರ್ಥತ್ತೈ (೧) "ಯಶ್ಶೂದ್ರಂ ಭಗವದ್ಭಕ್ತಂ" ಎನ್ರು ತುಡಙ್ಗಿ ಮಹರ್ಷಿ ಸಙ್ಗ್ರಹಿತ್ತಾರ್. ಆಹೈಯಾಲ್ ಜಾತಿವ್ಯವಸ್ಥೈ ಕುಲಿಯಾದೇ ನಿರ್ಕ ಭಾಗವತಪ್ರಭಾವಂ ಕಣ್ಡುಕೊಳ್ವದು.**

---

ರೈವರ್ - ಎಂದು ಇಷ್ಟುಮಾತ್ರದಲ್ಲೇ ಅಭಿಪ್ರಾಯವು; ಎಂದರೆ ಅಂತಹ ಶೂದ್ರ ಭಾಗವತರನ್ನು ಇತರ ಶೂದ್ರರಹಾಗೆ ಕಾಣಕೂಡದ. ಎಂಬುದರಲ್ಲಿ ತಾತ್ಪರ್ಯವು. ಈ ಅಭಿಪ್ರಾಯವನ್ನೇ ಮಹರ್ಷಿಗಳು ಬೋಧಿಸಿರುತ್ತಾರೆಂದು ಮುಂದಿನವಾಕ್ಯ ದಿಂದ ತಿಳಿಸುತ್ತಾರೆ, **ಇವ್ವರ್ಥತ್ತೈ** - ಈ ಅಭಿಪ್ರಾಯವನ್ನೇ **"ಯಶ್ಶೂದ್ರಂ ಭಗವದ್ಭಕ್ತಂ"** ಎಂದು **ತುಡಙ್ಗಿ** - ಆರಂಭಿಸಿ, **ಮಹರ್ಷಿಸಙ್ಗ್ರಹಿತ್ತಾರ್** - ಮಹರ್ಷಿಯು ಸಙ್ಗ್ರಹಿಸಿ ಹೇಳಿರುತ್ತಾರೆ. ಇದರ ಅರ್ಥಕ್ಕೆ ಅಪರಾಧ ಪರಿಹಾರಾ ಧಿಕಾರದ ೧೫೭೭-೮ ನೆಯ ಪುಟಗಳನ್ನು ಪರಾಂಬರಿಸಿ. ಇಲ್ಲಿ ತಾತ್ಪರ್ಯವೇ ನೆಂದರೆ ಶೂದ್ರನೇ ಆಗಲಿ, ನಿಷಾದನೆಂದರೆ ಬೇಡರವನೇ ಆಗಲಿ, ಅಥವಾ ಚಂಡಾಲನೇ ಆಗಲಿ, ಯಾವಾಗ ವಿಷ್ಣುಭಕ್ತನಾದನೋ ಆಗ ಆತನನ್ನು ಶೂದ್ರ, ಬೇಡ, ಚಂಡಾಲನೆಂಬ ಆತನ ಜಾತಿ ಸಾಮಾನ್ಯದಿಂದ ನೋಡಕೂಡದು, ಆತನು ಮಾನ್ಯನು, ಹಾಗೆ ಜಾತಿ ಸಾಮಾನ್ಯದಿಂದ ನಿಕೃಷ್ಟನನ್ನಾಗಿ ಭಾವಿಸಿದರೆ ನರಕಪ್ರಾಪ್ತಿಯುಂಟಾಗುತ್ತದೆಂದು ಅಲ್ಲಿ ಹೇಳಲ್ಪಟ್ಟಿರುತ್ತಿದೆ. ಹೇಳಿದವರು ಇತಿ ಹಾಸ ಸಮುಚ್ಚಯದ ಗ್ರಂಥಕರ್ತರು. ಈ ಅಭಿಪ್ರಾಯವನ್ನೇ ವ್ಯಾಸ ಮಹ ರ್ಷಿಯೂ **"ನಶೂದ್ರಾ ಭಗವದ್ಭಕ್ತಾ ವಿಪ್ರಾ ಭಾಗವತಾಸ್ಸ್ಮೃತಾಃ"** ಎಂದು ಹೇಳಿರುವದರಿಂದ ಇಲ್ಲಿ ಮಹರ್ಷಿಯು ಎಂದರೆ ವ್ಯಾಸಮಹರ್ಷಿಯೂ ಎಂದೂ, ಇಟ್ಟುಕೊಳ್ಳಬಹುದು.

ಹೀಗೆ ಪೂರ್ವಪಕ್ಷಗಳನ್ನೆಲ್ಲಾ ಸತ್ತರ್ಕಪ್ರಮಾಣಾದಿಗಳಿಂದ ಖಂಡಿಸಿ, ಸ್ಥಾಪಿಸಿದರ್ಥವನ್ನು ನಿಗಮನ ಮಾಡಿ ಹೇಳುತ್ತಾರೆ. **ಆಹೈಯಾಲ್**-ಜಾತಿಯು ಶರೀರಕ್ಕೆ ಜನ್ಮತಃ ಅಂಟಿದುದಾದುದರಿಂದ, ದೇಹಾವಸಾನದವರೆಗೂ ತಪ್ಪುವ ದಿಲ್ಲವಾದುದರಿಂದ, **ಜಾತಿವ್ಯವಸ್ಥೈ ಕುಲೈಯಾದೇನಿರ್ಕ** - ಜಾತಿ ಮರ್ಯಾ ದೆಯು ನಷ್ಟವಾಗದೆ ಇರುವ, ಭಾಗವತ ಪ್ರಭಾವವನ್ನು, **ಕಂಡು ಕೊಳ್ವದು**- ತಿಳಿದು ಕೊಳ್ಳುವದು. ಬ್ರಾಹ್ಮಣನೇ ಆತನು ಎಂದು ಭ್ರಮಿಸಿ, ಶಾಸ್ತ್ರಮರ್ಯಾದೆ ಗಳನ್ನುಲ್ಲಂಘಿಸುವದು ಅನುಚಿತವೆಂಬ ಭಾವವು.

ಮುಂದೆ ಜಾತಿ ವ್ಯವಸ್ಥೆಯು ಹೇಗೆ ಎಂಬುದನ್ನು ಚನ್ನಾಗಿ ಪ್ರತಿಪಾದಿಸುವ ದಕ್ಕೆ ಪೂರ್ವಭಾವಿಯಾಗಿ ತಾವು ಈಗ ಪೂರ್ವಪಕ್ಷವನ್ನು ಖಂಡಿಸಿ ಸ್ಥಾಪಿಸಿದ

---

(೧) ಇತಿ. ಸಮು. ೨೭. ೨೬.

## ಪರಪಕ್ಷಮನೂದ್ಯ ಜಾತಿವ್ಯವಸ್ಥಾಂ ಸ್ಥಾಪಯತಿ ದ್ವಾಭ್ಯಾಂ ಶ್ಲೋಕಾಭ್ಯಾಂ.

**ಅತೋ ಜಾತೇ ರ್ನಿಕೃಷ್ಟಾಯಾ ಸ್ಸರ್ವಸ್ಯಾವಾ ವಿನಾಶತಃ ।**
**ಸಾಜಾತ್ಯಂ ವಿಷ್ಣುಭಕ್ತಾನಾ ಮಿತಿ ಮಂದ ಮಿದಂ ವಚಃ ॥೪೬॥**
**ವೈಷ್ಣವತ್ವೇನ ಸಾಮಾನ್ಯತ್ವಂ ಸಮಾನಂ ಮುನಿಸಮ್ಮತಮ್ ।**
**ಜಾತ್ಯಾದಿ ಧ್ವಂಸತ ಸ್ಸಾಮ್ಯಂ ಮುಕ್ತಿಕಾಲೇ ಭವಿಷ್ಯತಿ ॥೪೭॥**

---

ಅರ್ಥವನ್ನು ಜ್ಞಾಪಕದಲ್ಲಿಡಲು ಸುಲಭವಾಗಿರುವಹಾಗೂ, ಸಿದ್ಧಾಂತಾರ್ಥವು ಹೀಗೆಯೇ ಎಂದು ತಿಳಿಯಲು ಸಹಕಾರಿಯಾಗುವಹಾಗೂ, ಎರಡುಕಾರಿಕೆಗಳನ್ನು ಅನುಗ್ರಹಿಸುತ್ತಾರೆ.

### ಪರಪಕ್ಷಾನುವಾದವನ್ನು ಮಾಡಿ ಎರಡು ಕಾರಿಕೆಗಳಿಂದ ಜಾತಿ ವ್ಯವಸ್ಥೆಯ ಸ್ಥಾಪನೆಯು.

**ಅತಃ** - ಹಿಂದೆ ಉಪಪಾದಿಸಿದ ಹೇತುಗಳ ದಶೆಯಿಂದ, **ನಿಕೃಷ್ಟಾಯಾಃ ಜಾತೇಃ** - ಶೂದ್ರನೇ ಮೊದಲಾದವರ ಜಾತಿಯು, ಅಥವಾ **ಸರ್ವಸ್ಯಾವಾ** - ಬ್ರಾಹ್ಮಣರೇ ಮೊದಲಾದ ಸಮಸ್ತ ಜಾತಿಯು, **ವಿನಾಶಾತ್** - ನಾಶದಿಂದ, **ವಿಷ್ಣುಭಕ್ತಾನಾಂ** - ಹೀಗೆ ವಿಷ್ಣು ಭಕ್ತರಾಗಿ ಭಾಗವತರಾಗಿರುವರಿಗೆಲ್ಲಾ, **ಸಾಜಾತ್ಯಂ** - ಸಮಾನವಾದ ಒಂದು ಹೊಸಜಾತಿಯುಂಟಾಗುತ್ತದೆಂಬ ಹೇಳಿಕೆಯು, **ಮಂದಂ** - ಅಜ್ಞಾನಮೂಲಕವಾದುದು, ಶಾಸ್ತ್ರಜ್ಞಾನದ ಪರಿಶೀಲನವಿಲ್ಲದ ಮಾತು ಎಂಬ ಭಾವವು; ಏಕೆಂದರೆ, ಹಾಗೆ ವಿಕಲ್ಪಗಳು ಕೂಡುವದೇ ಇಲ್ಲವಾದುದರಿಂದ. ಬ್ರಾಹ್ಮಣ ಭಾಗವತರಿಗೂ ಶೂದ್ರಾದಿ ಭಾಗವತರಿಗೂ ಜಾತಿಯು ಕಳೆಯುದೇನೇ ಇದ್ದುಕೊಂಡೇ, ಸಾಮ್ಯವು ಹೇಳಲ್ಪಟ್ಟಿತು ಎಂಬ ತಾತ್ಪರ್ಯವು ವಿಕಲ್ಪ ಹೇಗೆ ಎಂದರೆ ಉತ್ಕೃಷ್ಟನಿಕೃಷ್ಟರಾದ ಇಬ್ಬರ ಜಾತಿಗಳೂ ಕಳೆದು ಹೊಸ ವೈಷ್ಣವ ಜಾತಿಯು ಪ್ರಾಪ್ತವಾಗುತ್ತದೆಯೇ? ಅಥವಾ ಈ ವಿಷ್ಣುಭಕ್ತಿಯುಂಟಾಗಿ ವೈಷ್ಣವಭಾಗವತರಾದಾಗ, ನಿಕೃಷ್ಟಜಾತಿಯರಾದ ಶೂದ್ರಾದಿಗಳಿಗೆ ಮಾತ್ರವೇ ಪೂರ್ವಜಾತಿಯು ಕಳೆದು ಹೊಸ ವೈಷ್ಣವ ಜಾತಿಯು ಪ್ರಾಪ್ತವಾಗುತ್ತದೆಯೇ? ಎಂಬದಾಗಿ. ಕೆಲವು ಪೂರ್ವಪಕ್ಷಿಗಳಿಗೆ ಮೊದಲನೆಯ ವಿಕಲ್ಪದಹಾಗೂ, ಇನ್ನು ಕೆಲವರಿಗೆ ಎರಡನೆಯ ವಿಕಲ್ಪದ ಹಾಗೂ ಅಭಿಪ್ರಾಯಗಳು. ಈ ಎರಡು ವಿಕಲ್ಪಗಳನ್ನೂ ಮುಂದಿನ ಶ್ಲೋಕದಿಂದ ಖಂಡಿಸಿ ಸಿದ್ಧಾಂತಾರ್ಥಗಳನ್ನು ದಯಪಾಲಿಸುತ್ತಾರೆ. ಬ್ರಾಹ್ಮಣ ಭಾಗವತರೂ ಶೂದ್ರಭಾಗವತರೂ ಇಬ್ಬರಿಗೂ

ಜಾತಿಯು ಕಳೆದು ಹೋಗುವದಿಲ್ಲವು ; ವೈಷ್ಣವತ್ವರೂಪದಿಂದ ಸಮಾನ ಭಾವದಿಂದ ಮಾನನೀಯರೆಂಬುದು ಮುನಿಸಮ್ಮತವಾದುದು ಎಂದು ಪೂರ್ವಾರ್ಧದಿಂದ ತಿಳಿಸುತ್ತಾರೆ. ಮೊದಲನೆಯ ವಿಕಲ್ಪವು ಸರಿಯಲ್ಲವು, ಏಕೆಂದರೆ ಅದರಭಿಪ್ರಾಯವು **ವೈಷ್ಣವತ್ವೇನ** - ಇಬ್ಬರು ವೈಷ್ಣವ ಭಾಗವತರಾಗಿರುವದರಿಂದ, **ಮಾನ್ಯತ್ವಂ** - ಆಯಾ ಜಾತೀಯರೆಲ್ಲಾ ಉತ್ಕೃಷ್ಟರಾಗಿ ಪೂಜ್ಯರು ಎಂಬ ಭಾವವೀಗ, **ಸಮಾನಂ** - ಉತ್ಕೃಷ್ಟಾಪಕೃಷ್ಟ ಜಾತೀಯರಿಗೂ ಸಮಾನವಾದುದೆಂಬುದು, **ಮುನಿಸಮ್ಮತಂ** - "ಶೂದ್ರಸ್ಸಾಧುಃ" ಇತ್ಯಾದಿ ಪ್ರಯೋಗಗಳನ್ನು ಮಾಡಿದ ಶ್ರೀ ಪರಾಶರ ವ್ಯಾಸಾದಿ ಮುನಿಗಳಿಗೆ ಸಮ್ಮತವಾದುದು. ಆಯಾ ಜಾತಿಗಳಿಗನುರೂಪವಾದ ಆಚಾರಗಳನ್ನೇ ಅಂತಹ ಭಾಗವತರುಗಳು ಅನುಷ್ಠಿಸತಕ್ಕದ್ದೆಂಬುದರಲ್ಲೇ ಶ್ರೀ ಪರಾಶರಾದಿಗಳಿಗೆ ತಾತ್ಪರ್ಯವೆಂಬ ಭಾವವು. **"ಸ ವಿಪ್ರೇಂದ್ರೋಮುನಿ ಶ್ರೀಮಾನ್" "ನ ಶೂದ್ರಾ ಭಗವದ್ಭಕ್ತಾಃ"** ಇತ್ಯಾದಿ ಪ್ರಮಾಣಗಳಿಗೆ ಗತಿ ಏನು? ಅವುಗಳಿಗೆ ಈ "ವೈಷ್ಣವತ್ವೇನ" ಎಂಬಾರಂಭಿಸಿ ಹೇಳಿದ ಮಾನ್ಯತ್ವದಲ್ಲೇ ಅದಕ್ಕೂ ಅಭಿಪ್ರಾಯವೆಂಬ ಭಾವವು. ಇಬ್ಬರೂ ವೈಷ್ಣವ ಭಾಗವತರಾಗುವದರಿಂದ, ಇಬ್ಬರೂ ಬಹುಮಾನಿಸಲು ಅರ್ಹರೆಂಬುದರ ಮಾತ್ರದಲ್ಲಿ ಸಮವೆಂಬ ಭಾವವು. ಶ್ರೀ ವ್ಯಾಸವಾಕ್ಯವಾದ ಶೂದ್ರಸ್ಸಾಧುಃ ಇತ್ಯಾದಿ ವಾಕ್ಯಗಳಿಗನುಗುಣವಾದ, ಶ್ರೀ ನಮ್ಮಾಳ್ವಾರ್ ಶ್ರೀ ಪರಾಶರರೇ ಮೊದಲಾದವರೂ ಹೇಳಿರುವದರಿಂದ, ಇಲ್ಲಿರುವ ಮುನಿ ಶಬ್ದವು ಇವರನ್ನು ಬೋಧಿಸುತ್ತದೆ. ಆದುದರಿಂದ ಈ ವಿಕಲ್ಪವು ಶಾಸ್ತ್ರವಿರುದ್ಧವಾದುದು. ಉತ್ತರಾರ್ಧದಿಂದ ದ್ವಿತೀಯ ವಿಕಲ್ಪವೂ ದೋಷಾವಹವಾದುದೆನ್ನುತ್ತಾರೆ. ಇಲ್ಲಿ ಸಾಮ್ಯವು. **ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ** ಎಂಬ ಶ್ರುತಿಯಲ್ಲಿ ಹೇಳಿರುವಹಾಗೆ, ಮುಕ್ತಿಕಾಲದಲ್ಲಿ ಮಾತ್ರವೇ ವಿನಾ, ತತ್ಪೂರ್ವದಲ್ಲಿ ಜನ್ಮತಃ ಜಾತಿಭೇದವಿರುವಾಗ ಸಾಧ್ಯವಿಲ್ಲವೆಂದು ತಿಳಿಸುತ್ತಾರೆ. **ಜಾತ್ಯಾದಿ ಧ್ವಂಸತಃ** - ಜಾತ್ಯಾದಿಗಳ ನಾಶವಾಗುವದರಮೂಲಕ, **ಸಾಮ್ಯಂ** - ಸಮಭಾವವಾದರೋ, **ಮುಕ್ತಿಕಾಲೇ** ಮುಕ್ತಿಪ್ರಾಪ್ತಿಯಾಗುವಕಾಲದಲ್ಲಿ ಮಾತ್ರ, **ಭವಿಷ್ಯತಿ** - ಉಂಟಾಗುತ್ತದೆ- ಮುಕ್ತಿಕಾಲದಲ್ಲಿ ಪ್ರಾಕೃತಶರೀರವೇ ವಿರಜಾತರಣ ಅಮಾನವ ಕರಸ್ಪರ್ಶಗಳಿಂದ ತೊಲಗುವದರಿಂದ ಅನಂತರ ಜಾತಿಯು ಇರುವದಿಲ್ಲವು. ಆಗೀಗ ಜಾತಿಭೇದವು ಕಳೆಯುತ್ತದೇವಿನಾ, ಪ್ರಾಕೃತ ಶರೀರವಿರುವಾಗ ಜನ್ಮತಃ ಬಂದ ಜಾತಿಭೇದವು ಇದ್ದೇ ಇರುತ್ತದೆ, ಜಾತಿಯು ಶರೀರಕ್ಕಂಟಿದುದೇ ವಿನಾ ಆತ್ಮವಿಗೆ ಅಂಟಿದುದಲ್ಲವು. ಆತ್ಮವಿನ ಸ್ವರೂಪವು ಅಮೋಘವಾದುದು. **ನೈಜ ಸ್ವರೂ**

## ಜಾತಿ ತದನುಗುಣವೃತ್ತ್ಯ ವ್ಯವಸ್ಥಾಯಾಂ ಪ್ರಮಾಣಾನಿ

**ಭಗವದ್ಗೀತಾದಿಗಳಿಲುಮ್** (೧) “**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾ**

ಪವು ಮುಕ್ತದಶೆಯಲ್ಲೀಗ ಪ್ರಕಾಶಿಸುತ್ತದೆ. ಆಗೀಗ ಆತ್ಮಾ “**ಸ್ವೇನರೂಪೇಣಾಭಿನಿಷ್ಪದ್ಯತೇ**” ಎಂದು ಹೇಳಿದಹಾಗೆ ಸ್ವಯಂ ಪ್ರಕಾಶನಾಗಿ ಸರ್ವಜ್ಞತ್ವಾದಿಗುಣಾಷ್ಟಕಗಳಿಂದ ಕಂಗೊಳಿಸುತ್ತಾನೆಂಬ ಭಾವವು. ಆತ್ಮನು ಶರೀರದಿಂದಿರುವಾಗ ಒಂದು ಜನ್ಮದಲ್ಲಿ ಬ್ರಾಹ್ಮಣನಾಗಬಹುದು. ಇನ್ನೊಂದು ಜನ್ಮದಲ್ಲಿ ಶೂದ್ರನಾಗಬಹುದು. ಇದು ಜನ್ಮತಃ ದೇಹಸಂಬಂಧವಾಗಿ ಉಂಟಾದುದರಿಂದ ಜನ್ಮವಿರುವವರೆಗೂ ತಪ್ಪಿಸಲ್ಲವಾದರೂ, ಒಂದೇ ಜನ್ಮದಲ್ಲೇ ಒಂದು ಜಾತಿಯು ಕಳೆದು ಇನ್ನೊಂದು ಪ್ರಾಪ್ತವಾಗತ್ತದೆಂಬುದು ಅಸಂಬದ್ಧ ಪ್ರಲಾಪವು ಎಂಬ ಭಾವವು. ಇದರಿಂದ ಇಲ್ಲಿ ಶರೀರ ಭೇದದಿಂದ ಸ್ತ್ರೀಯಾಗಿರುವ ಆತ್ಮವೂ ಪುರುಷನಾಗಿರುವ ಆತ್ಮನೂ, ಮುಕ್ತ ದಶೆಯಲ್ಲೂ ಸ್ತ್ರೀಪುರುಷರಾಗಿಯೇ ಇರುತ್ತಾರೆಂಬ ಅಭಿಪ್ರಾಯವು ಶಾಸ್ತ್ರಸಮ್ಮತವಲ್ಲವಾದುದರಿಂದ ಹಾಸ್ಯಾಸ್ಪದವಾಗುತ್ತದೆ. ಆಗಲಿ ಮುಕ್ತಿಯನ್ನು ಹೊಂದುವ ದಶೆಯಲ್ಲಿ, ವೈಷ್ಣವಜಾತಿ ಸಾಮಾನ್ಯತಃ ಎಲ್ಲರಿಗೂ ಮುಕ್ತಿ ಪ್ರಾಪ್ತಿಯಾಗುತ್ತದೆಂದೂ ಆದರಿಂದ ಸಮಾನಭಾವವುಂಟಾಗುತ್ತದೆಂದೂ ಏಕೆ ಭಾವಿಸಕೂಡದೆಂದರೆ ಪ್ರಮಾಣವನ್ನು ಉದಾಹರಿಸುತ್ತಾರೆ. ಭಗವದ್ಗೀತೆಯಲ್ಲಿ, ಸ್ತ್ರೀಯರೂ, ವೈಶ್ಯರೂ ಶೂದ್ರರೂ ಇವರೆಲ್ಲರೂ ಮುಕ್ತಿಯನ್ನು ಹೊಂದುತ್ತಾರೆಂದು ಹೇಳಿ, ಹೀಗಿರುವಾಗ ಉಪಾಯಾನುಷ್ಠಾನಮಾಡಿದ ಬ್ರಾಹ್ಮಣರು ಮುಕ್ತರಾಗುತ್ತಾರೆಂಬುದು ಕೈಮುತಿಕನ್ಯಾಯಸಿದ್ಧವೆಂದು ಹೇಳುತ್ತಾರೆ. ಭಗವದ್ಗೀತೆಯಲ್ಲಿ ಜಾತಿವ್ಯವಸ್ಥೆಯನ್ನೇ ಹೇಳಿ, ಬ್ರಾಹ್ಮಣ್ಯಕ್ಕೆ ಪ್ರಾಶಸ್ತ್ಯವನ್ನು ಹೇಳಿದೆಯೇವಿನಾ, ಎಲ್ಲಾ ಜಾತಿಯೂ ಒಂದೇ ಎಂದು ಹೇಳಿಲ್ಲವು. ಜಾತಿ ಸಾಂಕರ್ಯವು ಪ್ರಬಲವಾಗಿ ನಿಂದಿಸಲ್ಪಟ್ಟಿರುತ್ತದೆ

### ಜಾತಿ ಮತ್ತು ಅದಕ್ಕನುಗುಣ ವೃತ್ತಿ, ಇವುಗಳ ವ್ಯವಸ್ಥೆಯಲ್ಲಿ ಪ್ರಮಾಣಗಳು.

**ಭಗವದ್ಗೀತಾದಿಗಳಿಲುಮ್** - ಭಗವದ್ಗೀತೆ ಮೊದಲಾದವುಗಳಲ್ಲೂ, ಆದಿ ಶಬ್ದದಿಂದ ಮುಂದೆ ಉದಾಹರಿಸುವ, ಭಾರತ ವಿಷ್ಣು ಪುರಾಣಾದಿ ಗ್ರಂಥಗಳಲ್ಲೂ ಎಂಬ ಭಾವವು, (೧) **ಸ್ತ್ರಿಯಃ** - ಸ್ತ್ರೀಯರುಗಳೇಯಾಗಲಿ ವೈಶ್ಯರೇಯಾ

(೧) ಗೀ. ೯-೩೨

**ಸ್ತೇಽಪಿ ಯಾಂತಿ ಪರಾಂಗತಿಂ” (೨) ಸ್ವೇಸ್ವೇ ಕರ್ಮಣ್ಯಭಿರತ ಸ್ಸಂಸಿದ್ಧಿಂ**

ಗಲಿ ಹಾಗೆಯೇ ಶೂದ್ರರೇಯಾಗಲಿ ಹೀಗೆ ಯಾರು **ಪಾಪಯೋನಯಃ** - ಪಾಪ ಜನ್ಮವನ್ನು ಹೊಂದಿದ್ದರೂ, **ತೇಽಪಿ** - ಅಂತವರೂ ಕೂಡ, **ಪರಾಂಗತಿಂ** - ಶ್ರೇಷ್ಠವಾದ ಗತಿಯಾದ ಶ್ರೀಮನ್ನಾರಾಯಣ ಸಾಯುಜ್ಯವನ್ನು, **ಯಾಂತಿ** - ಹೊಂದುತ್ತಾರೆ. ಇವರುಗಳೂ ಕೂಡ ಉಪಾಯಾನುಷ್ಠಾನವಿಲ್ಲದೆ ಮುಕ್ತಿಯನ್ನು ಹೊಂದಲಾರರು. ಪೂರ್ವಜನ್ಮದಲ್ಲಿ ಯೋಗಭ್ರಷ್ಟರಾಗಿ ಈಗ ಸ್ತ್ರೀ ಶೂದ್ರಾದಿ ಜನ್ಮಗಳು ಪ್ರಾಪ್ತವಾಗಿದ್ದರೆ ಆ ಮಹಿಮೆಯಿಂದಲಾಗಲಿ ಅಥವಾ ಇನ್ನು ಯಾವ ಸುಕೃತದಿಂದಲಾಗಲಿ ಅವರುಗಳ ಜನ್ಮಕ್ಕೆ ಅನುಗುಣವಾದ ಉಪಾಯಾನುಷ್ಠಾನ ಮೂಲಕವೆಂದರೆ ಭಾಗವತನನ್ನಾಶ್ರಯಿಸಿ ಆತನು ಇವರುಗಳಿಗಾಗಿ ಮಾಡಿದ ಭರನ್ಯಾಸ ಮೂಲಕ ಮುಕ್ತಿಯನ್ನು ಹೊಂದುತ್ತಾರೆಂಬ ಭಾವವು. ಇದರ ಪೂರ್ವಾರ್ಧವಾದ **“ಮಾಂ ಹಿ ಪಾರ್ಥವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ** ಎಂಬುದರಲ್ಲಿ ಈ ಅಭಿಪ್ರಾಯವು ವ್ಯಕ್ತವು. ಎಂತಹ ಪಾಪಯೋನಿಯಲ್ಲಿ ಜನ್ಮವೆತ್ತಿದ್ದರೂ, ಅವರುಗಳು ಹೇಗೆ ಆಶ್ರಯಿಸತಕ್ಕದ್ದೋ ಹಾಗೆ ಆಶ್ರಯಿಸಿದರೆ, **ಪರಾಂಗತಿಂ ಯಾಂತಿ** ಎಂದು ಹೇಳಲ್ಪಟ್ಟಿರುತ್ತದೆ. ಇದಕ್ಕೆ ಮುಂದೆ **“ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾಃ ಭಕ್ತಾ ರಾಜರ್ಷಯಸ್ತಥಾ”** ಎಂದು ಇದೆ. ಹೀಗೆ ಅಪಕೃಷ್ಟ ಜಾತಿಯವರೂ ಕೂಡ ಅವರವರಿಗೆ ಹೇಳಲ್ಪಟ್ಟ ಉಪಾಯಾನುಷ್ಠಾನದ ಮೂಲಕ ಮುಕ್ತಿಯನ್ನು ಹೊಂದಿದರೆ, ಇನ್ನು ಸುಕೃತಿಗಳಾಗಿ ಬ್ರಾಹ್ಮಣ ಯೋನಿಯಲ್ಲಿ ಜನಿಸಿರುವರು ಹಾಗೆಯೇ, ಓ ಅರ್ಜುನನೇ ನಿನ್ನ ಹಾಗೆಯೇ ರಾಜರ್ಷಿಗಳಾದವರೂ ಸಹ, ಉಪಾಯಾನುಷ್ಠಾನದಲ್ಲಿ ಸಾಮರ್ಥ್ಯವುಳ್ಳವರು ಈ ಭಕ್ತಿಯೋಗದಲ್ಲೇ ಇಳಿದು ನನ್ನನ್ನು ಐಕಾಂತ್ಯ ಭಕ್ತಿಯಿಂದ ಉಪಾಸಿಸಿ ಮುಕ್ತಿಯನ್ನು ಹೊಂದುತ್ತಾರೆಂಬ ವಿಷಯದಲ್ಲಿ ಹೇಳತಕ್ಕದ್ದೇನು? ಇದು ಕೈಮುತಿಕನ್ಯಾಯದಿಂದ ಸಿದ್ಧವೆಂಬಭಿಪ್ರಾಯವು. ಸ್ತ್ರೀಗೆ ನಿದರ್ಶನವಾಗಿ ಶಬರಿಯು, ಶಬರತ್ವ ಸ್ತ್ರೀತ್ವ ಇವೆರಡು ಕಾರಣಗಳಿಂದಲೂ ಅಪಕೃಷ್ಟಳಾಗಿದ್ದರೂ ಮತಂಗಋಷಿಯನ್ನಾಶ್ರಯಿಸಿ, ಅವರು ಮಾಡಿದ ಶರಣಾಗತಿಯ ಮಾಹಾತ್ಮ್ಯದಿಂದಲೂ, ಶ್ರೀರಾಮ ಪ್ರಸಾದದಿಂದಲೂ ಮೋಕ್ಷವನ್ನು ಹೊಂದಿದಳು. ವೈಶ್ಯರೂ ಉಪಾಸನಕ್ಕೆ ಅರ್ಹರೆಂದು ಅಪಶೂದ್ರಾಧಿಕರಣದಲ್ಲಿ ಹೇಳಿದ್ದರೂ, ಅವರುಗಳ ಪ್ರಬೋಧದಲ್ಲಿ ಕೆಲವರಿಗೆ ಉಪಾಸನದಲ್ಲಿ ಯೋಗ್ಯತೆ ಇಲ್ಲದುದರಿಂದ ಇಲ್ಲಿ ಸ್ತ್ರೀ ಶೂದ್ರಾದಿಗಳೊಂದಿಗೆ ಸೇರಿಸಲ್ಪಟ್ಟಿರುತ್ತಾರೆ. ಕಾಂಚೀಪೂರ್ಣರೂ ತುಲಾಧಾರರೂ

(೨) ಗೀ. ೧೮-೪೫,೪೬.

ಲಭತೇ ನರಃ । ಸ್ವಕರ್ಮನಿರತಃ ಸ್ಸಿದ್ಧಿಂ ಯಥಾ ವಿಂದತಿ ತಚ್ಛೃಣು । ....

ವೈಶ್ಯರು. ಈ ಮಹನೀಯರುಗಳೂ ತಮಗೆ ವಿಹಿತವಾದ ಉಪಾಯಾನುಷ್ಠಾನವನ್ನು ಅವಲಂಬಿಸಿ ಮೋಕ್ಷವನ್ನು ಹೊಂದಿರುತ್ತಾರೆ. ಹಾಗೆ ವಿದುರಾದಿ ಶೂದ್ರರೂ ಮಹಾ ಭಾಗವತೋತ್ತಮರೆಂದೆನಿಸಿ, ಬ್ರಾಹ್ಮಣಶ್ರೇಷ್ಠರನ್ನಾಶ್ರಯಿಸಿ ಮುಕ್ತಿಯನ್ನು ಬ್ರಾಹ್ಮಣರಿಗಿಂತ ಅತಿ ಸುಲಭವಾಗಿ ಹೊಂದಿರುತ್ತಾರೆ. ಹೀಗೆ ಅಪಕೃಷ್ಟ ಜಾತಿಯವರೇ ಮುಕ್ತಿಯನ್ನು ಹೊಂದಿರುವಾಗ ಉತ್ಕೃಷ್ಟ ಜಾತಿಯವರಾದ ಬ್ರಾಹ್ಮಣರು ಮುಕ್ತಿಯನ್ನು ಹೊಂದುತ್ತಾರೆಂಬುದರಲ್ಲಿ ಸಂದೇಹವೇನಿದೆ ಎಂಬುದು ಶ್ಲೋಕಾರ್ಥವು. ಈ ಪ್ರಮಾಣವನ್ನು ಶ್ರೀ ದೇಶಿಕೇಂದ್ರರು ಏಕೆ ಉದಾಹರಿಸಿದರೆಂದರೆ, ಸ್ತ್ರೀ ಶೂದ್ರಾದಿ ಜಾತಿಯವರೇ ಮುಕ್ತಿಯನ್ನು ಹೊಂದಿರುತ್ತಾರೆ ಎಂದು ಹೇಳಿರುವದರಿಂದ, ಇವರು ವೈಷ್ಣವತ್ವವನ್ನು ಹೊಂದಿ ಉಪಾಯಾನುಷ್ಠಾನಮಾಡಿ ಮುಕ್ತಿಯನ್ನು ಹೊಂದುವ ಅವಸ್ಥೆಯಲ್ಲಿಯೂ, ಶ್ರೀಕೃಷ್ಣ ಭಗವಾನರವರಿಂದಲೇ ಸ್ತ್ರೀ ಶೂದ್ರಾದಿ ಶಬ್ದಗಳಿಂದ ವ್ಯವಹರಿಸಲ್ಪಟ್ಟಿರುವದರಿಂದ, ದೇಹಾವಸಾನದವರೆಗೂ ಜಾತಿಯು ಹೋಗುವುದೂ ಇಲ್ಲವು, ವ್ಯತ್ಯಸ್ತವಾಗುವುದೂ ಇಲ್ಲವು ಎಂಬ ಭಾವವು ತೋರಿಬರುತ್ತದೆ; ಇದರಿಂದ ಜನ್ಮವ್ಯವಸ್ಥೆಯು ಹೇಳಲ್ಪಟ್ಟಿತು.

(೨) ಮುಂದಿನ ಪ್ರಮಾಣದಿಂದ ಆಯಾ ವರ್ಣದ ವೃತ್ತಿವ್ಯವಸ್ಥೆಯು ಮಾಡಲ್ಪಡುತ್ತದೆ. ಹಿಂದಿನ ಮೂರು ಶ್ಲೋಕಗಳಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಕರ್ಮಗಳನ್ನು ವಿವರಿಸಿ ಮುಂದೆ ಹೇಳುತ್ತಾರೆ, "**ಸ್ವೇಸ್ವೇಕರ್ಮಣ್ಯಭಿರತಃ** - ಹೀಗೆ ಮೇಲೆ ಹೇಳಿದಹಾಗೆ ಅವರವರಿಗೆ ವ್ಯವಸ್ಥಿತಗಳಾದ ಕರ್ಮಗಳಲ್ಲಿ ಆಸಕ್ತಿಯುಳ್ಳ, **ನರಃ** - ಮನುಷ್ಯನು, **ಸಿದ್ಧಿಂ ಲಭತೇ** - ಪರಮಶ್ರೇಯೋರೂಪ ಸಿದ್ಧಿಯನ್ನು ಹೊಂದುವನು. ಹಾಗೆ ತನ್ನತನ್ನ ವರ್ಣಾಶ್ರಮಾಚಾರಗಳಲ್ಲಿ ಪ್ರವೃತ್ತಿಯುಳ್ಳವನಿಗೆ ಎಂದಿಗೂ ಹಾನಿಯಿಲ್ಲವು ಎಂದು ಸೂಚಿಸುವದಕ್ಕಾಗಿ, ನರಃ ಎಂಬ ಪ್ರಯೋಗವು. **ರೀಂಗ್ ಕ್ಷಯೇ** ಎಂಬ ಧಾತುವಿನ ವ್ಯುತ್ಪತ್ತಿಯಿಂದ, ನರಃ ಎಂಬುದರಿಂದ ನಾಶವಿಲ್ಲದವನು, ಅಂತಹ ಜೀವಾತ್ಮನಿಗೆ ಪರಮಶ್ರೇಯಸ್ಸು ಇಲ್ಲದೇ ಹೋಗೋಣವು ಪರಮ ಹಾನಿಯು, ಅಥವಾ ಇಲ್ಲಿ ಐಹಿಕದಲ್ಲಿ ರಮಿಸದೆ ವೈರಾಗ್ಯ ಹೊಂದಿದವನು, ನರ ಶಬ್ದದಿಂದ **ನರಮತೇ** ಎಂಬ ವ್ಯುತ್ಪತ್ತಿಯಿಂದ, ಹೇಳಲ್ಪಟ್ಟನೆಂದೂ ಭಾವಿಸಬಹುದು; **ಸ್ವಕರ್ಮನಿರತಃ** - ಹೀಗೆ ಅವರವರಿಗೆ ವಿಧಿಸಲ್ಪಟ್ಟ ಕರ್ಮಗಳಲ್ಲಿ ನಿರತರಾಗಿರುವವರು, **ಯಥಾ ಸಿದ್ಧಿಂ ವಿಂದತಿ** - ಹೇಗೆ ಇಂತಹ ಸಿದ್ಧಿಯನ್ನು ಹೊಂದುವರೋ, ತಚ್ಛೃಣು-

**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ"॥ (೩) ತಸ್ಮಾತ್ಸಪ್ರಣವಂ ಶೂದ್ರೋ ಮನ್ನಾಮಾನಿ ನಕೀರ್ತಯೇತ್" (೪) ವರ್ಣಾಶ್ರಮಾಚಾರ**

---

ಅದನ್ನು ಸಾವಧಾನದಿಂದ ಕೇಳು ಹೇಳುವೆನು; ಮುಂದೆ "**ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಂ**" ಎಂಬ ಮುಂದಿನ ಶ್ಲೋಕದ ಪೂರ್ವಾರ್ಧವಿರುತ್ತದೆ. ಅದನ್ನು ಶ್ರೀದೇಶಿಕರವರು ಉದಾಹರಿಸಲಿಲ್ಲವು; ಉತ್ತರಾರ್ಧವನ್ನು ಮಾತ್ರ "**ಸ್ವಕರ್ಮಣಾ ತಮಭ್ಯರ್ಚ್ಯ**" ಎಂದು ಉದಾಹರಿಸಿರುತ್ತಾರೆ. ಯಾವನು ಈ ಸಮಸ್ತ ವಿಶ್ವದ ಉತ್ಪತ್ತಿ ಸ್ಥಿತಿಲಯಗಳಿಗೆ ಕಾರಣಭೂತನೋ, ಯಾವನಿಗೆ ಈ ಸಮಸ್ತ ಜಗತ್ತೂ ಶರೀರವಾಗಿ, ಅವುಗಳನ್ನು ವ್ಯಾಪಿಸಿ ಅವುಗಳಿಗೆ ಸತ್ತಾನಿರ್ವಾಹಕನಾಗಿ ಆತ್ಮನಾಗಿದ್ದಾನೋ, **ತಂ**-ಅಂತಹ ನಿರತಿಶಯ ಮಹಿಮೆಯುಳ್ಳ ಸರ್ವೇಶ್ವರನನ್ನೇ, **ಸ್ವಕರ್ಮಣಾ** - ತನಗೆ ವಿಧಿಸಲ್ಪಟ್ಟಿರುವ ಕರ್ಮಗಳಿಂದ **ಅಭ್ಯರ್ಚ್ಯ - ಪೂಜಿಸಿ,** ಅನ್ಯ ದೇವತೆಗಳು ಆ ಕರ್ಮಗಳಲ್ಲಿ ವ್ಯವಹರಿಸಲ್ಪಟ್ಟಿದ್ದರೂ ಭಗವನ್ಮುಖೋಲ್ಲಾಸಕ್ಕಾಗಿ ವಿಹಿತಕರ್ಮವೆಂಬ ಭಾವನೆಯಿಂದ **ಪೂಜಿಸಿದರೆ, ತತ್ತ**ಚ್ಛರೀರಕ ಪರಮಾತ್ಮನೇ ಪೂಜಿಸಲ್ಪಡುವನೆಂಬ ಭಾವವು. **ಮಾನವಃ** - ಮನುಷ್ಯನು, ಯಾವಜಾತೀಯನಾದರೂ ಚಿಂತೆ ಯಿಲ್ಲವೆಂಬ ಭಾವದಿಂದ **ಮಾನವಃ** ಎಂಬ ಪ್ರಯೋಗವು. **ಸಿದ್ಧಿಂ ವಿಂದತಿ** - ಸುಲಭವಾಗಿ ಸಿದ್ಧಿಯನ್ನು ಹೊಂದುವನು; ಇದರಿಂದ ಬ್ರಾಹ್ಮಣನಾಗಿಯೇ ಸಿದ್ಧಿಯನ್ನು ಹೊಂದಬೇಕು, ಶೂದ್ರನಿಗೆ ಸಿದ್ಧಿಯಿಲ್ಲವೆಂಬುದಿಲ್ಲವು. ಅವರವರುಗಳಿಗೆ ವಿಹಿತವಾದ ಕರ್ಮಗಳನ್ನು ಮಾಡಿಕೊಂಡು ಇದ್ದರೆ ಅವರು ಯಾವ ವಿಧ ಉಪಾಯಾನುಷ್ಠಾನವನ್ನು ಮಾಡಬೇಕೋ ಅದಕ್ಕೆ ಅವರ ವಿಹಿತಕರ್ಮವು ಅನುಗ್ರಾಹಕವಾಗಿ ಆ ಉಪಾಯಾನುಷ್ಠಾನದ ಮೂಲಕ ಮುಕ್ತಿಯುಂಟು ಎಂಬ ಭಾವವು. ಇದರಿಂದ ಮುಕ್ತಿಗೆ ನಿಕೃಷ್ಟಜಾತಿಯು ಕಳೆದು ಉತ್ಕೃಷ್ಟ ಜಾತಿಯು ಬರಬೇಕೆಂಬುದರ ಆವಶ್ಯಕತೆಯಿಲ್ಲವು. ಶೂದ್ರ ಚಂಡಾಲರಿಗೂ ಕೂಡ ಮುಕ್ತಿಯುಂಟು, ಇದು ಹಿಂದೆಯೇ ಪ್ರಪತ್ತಿಯೋಗ್ಯಾಧಿಕಾರದಲ್ಲಿ ಬಹು ನಿಪುಣತರವಾಗಿ ಉಪಪಾದಿಸಲ್ಪಟ್ಟಿರುತ್ತದೆ. ಕೆಲವರು ಶೂದ್ರಾದಿಗಳಿಗೆ ಮುಕ್ತಿಯಿಲ್ಲವೆಂದು ಹೇಳುವ ವಾದವು ಇದರಿಂದ ನಿರಸನಮಾಡಲ್ಪಟ್ಟಿತು. ಮೋಕ್ಷಕ್ಕೆ ಸರ್ವಾಧಿಕಾರತ್ವವು ಶ್ರುತಿ ಪ್ರತಿಪಾದ್ಯವು. ಆದುದರಿಂದ ನಿಕೃಷ್ಟಜಾತಿಯ ಪ್ರಹಾಣವೂ, ಉತ್ಕೃಷ್ಟಜಾತಿಯ ಪ್ರಾಪ್ತಿಯೂ, ಬೇಕಾಗಿಲ್ಲವು. ಇವೆರಡೂ

---

(೩) ಭಾರತ (೪) ವಿ. ಪು. ೩. ೮. ೯.

**ವತಾಪುರುಷೇಣ ಪರಃಪುಮಾನ್। ವಿಷ್ಣುರಾರಾಧ್ಯತೇ ಪಂಥಾ ನಾನ್ಯಸ್ತತ್ತೋ
ಷಕಾರಕಃ॥।" (೫)" ನ ಚಲತಿ ನಿಜವರ್ಣಧರ್ಮತೋ ಯಃ" ಇತ್ಯಾದಿಗಳಾಲೇ**

ಅಸಾಧ್ಯ ವಿಷಯವು ಎಂಬುದು ಮುಖ್ಯತಾತ್ಪರ್ಯವು. ಜನ್ಮತಃ ಬಂದುದು ಜನ್ಮತಃ ಕಳಿಯತಕ್ಕದ್ದು ಎಂದು ಶಾಸ್ತ್ರಗಳಿಂದ ಬೋಧಿತವು.

೩. **ತಸ್ಮಾತ್** - ಆ ಕಾರಣದಿಂದ, **ಶೂದ್ರಃ** -ಶೂದ್ರನು, **ಮನ್ನಾಮಾನಿ**-ನನ್ನ ನಾಮಗಳನ್ನು ಅಷ್ಟೋತ್ತರ ಶತ ಸಂಖ್ಯಾರೀತ್ಯಾ, **ಸಪ್ರಣವಂ**-ಪ್ರಣವ ದೊಂದಿಗೆ, **ನಕೀರ್ತ್ತಯೇತ್** - ಹೇಳಕೂಡದು; (ಸಾಧ್ಯೋಪಾಯ ೨೪೬ನೆಯ ಪುಟವನ್ನು ನೋಡಿ) ಇವರಿಂದ ಶೂದ್ರನಿಗೆ ಭಗವನ್ನಾಮ ಸಂಕೀರ್ತನೆ ಕೂಡ ಬ್ರಾಹ್ಮಣಾದಿಗಳಿಗಿಂತ ವ್ಯತ್ಯಸ್ತವಾಗಿಯೇ ಹೇಳಿರುವದರಿಂದ, ವೈಷ್ಣವಭಾಗವತ ನಾಗಿ ಇದ್ದರೂ ನಿಕೃಷ್ಟಜಾತಿಯು ಗತಿಸಿಹೋಗಿ ಉತ್ತಮಜಾತಿಯು ಪ್ರಾಪ್ತ ವಾಗುವದಿಲ್ಲವೆಂಬುದು ವ್ಯಕ್ತವು; ಭಗವನ್ನಾಮ ಸಂಕೀರ್ತನೆಯನ್ನು ಮಾಡುವ ಭಾಗವತನು ಶೂದ್ರನೆಂದೇ ಇಲ್ಲಿಯೂ ವ್ಯವಹರಿಸಲ್ಪಟ್ಟಿರುತ್ತದೆ.

(೪) "**ವರ್ಣಾಶ್ರಮಾಚಾರವತಾ** - ತನ್ನ ವರ್ಣಾಶ್ರಮಗಳಿಗೆ ವಿಹಿತ ವಾದ ಆಚಾರಗಳನ್ನುಳ್ಳ ಪುರುಷನಿಂದ, **ಪರಃಪುಮಾನ್** - ಪರಮ ಪುರುಷ ನಾದ ವಿಷ್ಣುವು, **ಆರಾಧ್ಯತೇ** – ಆರಾಧಿಸಲ್ಪಡುವನು, **ನಾನ್ಯಃಪನ್ಥಾ** - ಇನ್ನುಯಾವ ಮಾರ್ಗವೂ, **ತತ್ತೋಷಕಾರಕಃ** - ಆ ಪರಮ ಪುರುಷನಿಗೆ ಸಂ ತೋಷವನ್ನುಂಟುಮಾಡುವದಿಲ್ಲವು. ವರ್ಣಾಶ್ರಮಗಳಿಗೆ ಅನುಗುಣವಾಗಿ ವಿಧಿಸ ಲ್ಪಟ್ಟ ಆಚಾರಗಳನ್ನನುಷ್ಠಿಸುವದರಿಂದ ಪರಮಪುರುಷನು ಆರಾಧಿಸಲ್ಪಟ್ಟು ಸಂತೋಷವನ್ನು ಹೊಂದಿ ಅನುಗ್ರಹಿಸುವನೆಂಬ ತಾತ್ಪರ್ಯವು. ಅಂತಹ ವರ್ಣಾಶ್ರಮಕ್ಕನುಗುಣವಾದ ಕರ್ಮಾನುಷ್ಠಾನಮೂಲಕ ಆರಾಧಿಸಿದ ಪುರುಷನು, **ಪುರುಸನೋತಿ** ಎಂಬ ವ್ಯುತ್ಪತ್ತಿ ಮೂಲಕ, ಬಹುವಾಗಿ ತನಗೆ ದಾನಕೊಟ್ಟು ಆರಾಧಿಸಿದನೆಂದು ಭಾವಿಸಿ ಭಗವಂತನು ಸಂತೋಷಪಡುವವನಾದುದರಿಂದ ಅಂತಹ ಆರಾಧಕನು, **ಪುರುಷ** ನೆಂದೂ ಅದಕ್ಕೆ ಪ್ರೀತನಾದ ಪರಮ ಪುರುಷನೂ ಪ್ರತಿ ಯಾಗಿ ತಾನೂ ಬಹುವಾಗಿ ಕೊಡುವದರಿಂದ, ಆತನೂ **ಪರಃಪುಮಾನ್** ಎಂದು ಪ್ರಯೋಗಿಸಿರುತ್ತಾರೆ. ಇದರಿಂದ ವರ್ಣಾಶ್ರಮ ಕರ್ಮಗಳನ್ನು ಅನುಷ್ಠಿಸುವಾಗ ಅನ್ಯದೇವತಾಸ್ತುತಿ ಆರಾಧನಾದಿಗಳಿದ್ದರೂ, ಫಲಾಭಿಲಾಷಿಯಾಗದೆ ವಿಹಿತಕರ್ಮ ಗಳನ್ನು ಭಗವನ್ಮುಖೋಲ್ಲಾಸಕ್ಕಾಗಿ ಮಾಡುತ್ತೇನೆಂದು ಸಙ್ಕಲ್ಪಿಸಿ ಮಾಡತಕ್ಕ ದ್ದೆಂದೂ, ಹಾಗೆ ಕರ್ಮಾನುಷ್ಠಾನಮಾಡದಿದ್ದರೆ, ಭಗವತ್ಪ್ರೀತಿಯುಂಟಾಗದೇ ಇರು

ವಿ ಪು ೩-೭ ೨೦.

ವದು ಮಾತ್ರವೇ ಅಲ್ಲದೆ, ಅಜ್ಞಾ ಕೈಙ್ಕರ್ಯಗಳನ್ನು ತ್ಯಜಿಸಿದುದರಿಂದ ಭಗವನ್ನಿಗ್ರಹಕ್ಕೆ ಗುರಿಯಾಗುವನೆಂದೂ,ಭಾವಿಸತಕ್ಕದ್ದು. ಇದು ಔರ್ವರು ಸಗರ ಚಕ್ರವರ್ತಿಗೆ ಬೋಧಿಸುವ ಪ್ರಕರಣವು. ಈ ಅಭಿಪ್ರಾಯವನ್ನೇ ಶ್ರೀ ಪರಾಶರರು ಇನ್ನೂ ಎರಡು ಶ್ಲೋಕಗಳಿಂದಲೂ ಉಪದೇಶಿಸುತ್ತಾರೆ.

ತಸ್ಮಾತ್ಸದಾಚಾರವತಾ ಪುರುಷೇಣ ಜನಾರ್ದನಃ ।
ಆರಾಧ್ಯತೇ ಸ್ವವರ್ಣೋಕ್ತ ಧರ್ಮಾನುಷ್ಠಾನ ಕಾರಿಣಾ ॥
ಬ್ರಾಹ್ಮಣಃ ಕ್ಷತ್ರಿಯೋವೈಶ್ಯ ಶ್ಶೂದ್ರಶ್ಚ ಪೃಥಿವೀಪತೇ ।
ಸ್ವಧರ್ಮತತ್ಪರೋ ವಿಷ್ಣು ಮಾರಾಧಯತಿ ನಾನ್ಯಥಾ ॥

ಈ ಶ್ಲೋಕಗಳ ಅಭಿಪ್ರಾಯವೂ ಮೇಲಿನ ಶ್ಲೋಕಾಭಿಪ್ರಾಯದ ಅನುವಾದವೇ; ಇದರಿಂದಲೂ ಶೂದ್ರಾದಿಗಳಿಗೆ ನಿಕೃಷ್ಟಜಾತಿಯು ತೊಲಗಿ ಉತ್ತಮಜಾತಿಯುಂಟಾಗುತ್ತದೆಂಬವಾದವು ಸರಿಯಲ್ಲವೆಂಬುದು ತೋರಿಬರುತ್ತದೆ. ಆ ಜಾತಿಯಲ್ಲೇ ಮೋಕ್ಷಪ್ರಾಪ್ತಿಯು ಇನ್ನೂ ಸುಲಭವಾಗಿಯೇ ಸಾಧ್ಯವಾದುದರಿಂದ ಉತ್ಕೃಷ್ಟ ಜಾತಿ ಬೇಕೆಂಬಪೇಕ್ಷೆಗೆ ಕಾರಣವೇ ಇಲ್ಲವು.

(೫) ವಿಷ್ಣು ಭಕ್ತನಾದರೆ ನಿಜಧರ್ಮಾಚರಣೆಯು ಬೇಕಿಲ್ಲವೆಂಬ ವಾದಕ್ಕೆ ಪ್ರತ್ಯುತ ವಿರೋಧವಾದ ಪ್ರಮಾಣವಿದು. ವಿಷ್ಣುಭಕ್ತನಾಗಬೇಕಾದರೆ ಸ್ವಕೀಯವರ್ಣಾಶ್ರಮ ಧರ್ಮದಿಂದ ಚಲಿಸದೇ ಇರಬೇಕೆಂದು ಇದು ಉಪದೇಶಿಸುತ್ತದೆ. ಯಮನು ತನ್ನ ಭಟರಿಗೆ ವಿಷ್ಣು ಭಕ್ತರತಂಟೆಗೆ ಹೋಗಬೇಡಿ, ಎಂದು ಹೇಳುವ ಪ್ರಕರಣವು. ಆ ವಿಷ್ಣು ಭಕ್ತರು ಯಾರೆಂದರೆ ಹೇಳುತ್ತಾನೆ.

"ನಚಲತಿ ನಿಜಧರ್ಮವರ್ಣತೋ ಯ ಸ್ಸಮಮತಿ ರಾತ್ಮಸುಹೃದ್ವಿಪಕ್ಷಪಕ್ಷೇ । ನ ಹರತಿ ನ ಚ ಹಂತಿ ಕಿಂಚಿದುಚ್ಚೈ ಸ್ಸಿತಮನಸಂ ತ ಮವೈಹಿ ವಿಷ್ಣುಭಕ್ತಂ"॥ ಎಂಬುದು ಪೂರಾಶ್ಲೋಕವು; ಯಃ - ಯಾವನು, ನಿಜವರ್ಣಧರ್ಮತಃ - ತನ್ನವರ್ಣಕ್ಕೆ ವಿಹಿತವಾದ ಧರ್ಮಾನುಷ್ಠಾನದಿಂದ, ನಚಲತಿ - ಕದಲುವದಿಲ್ಲವೋ, ಎಂದರೆ ವಿಧಿಗನುಸಾರವಾಗಿ ತನ್ನ ವರ್ಣದ ಧರ್ಮಾನುಷ್ಠಾನವನ್ನೇ ಮಾಡುತ್ತಾನೋ, ಆತ್ಮಸುಹೃದ್ವಿಪಕ್ಷಪಕ್ಷೇ - ತನಗೆ ಶತ್ರುಮಿತ್ರರುಗಳಲ್ಲಿ, ಸಮಮತಿಃ - ಸಮತ್ವ ಬುದ್ಧಿಯುಳ್ಳವನು ಯಾರೋ, ಕಿಂಚಿತ್ ನ ಹರತಿ - ಯಾರು ಇತರರ ಸ್ವತ್ತನ್ನು ಸ್ವಲ್ಪವಾಗಲಿ ಅಪಹರಿಸುವದಿಲ್ಲವೋ, ಮತ್ತು ಕಿಂಚಿತ್ ನಹಂತಿ - ಯಾವುದನ್ನು ಕೊಲ್ಲುವದಿಲ್ಲವೋ ಅಥವಾ ನಾಶಮಾಡುವದಿಲ್ಲವೋ, ತಂ - ಅಂತಹ, ಸಿತಮನಸಂ - ಪರಶುದ್ಧ ಮನಸ್ಕನನ್ನು, ವಿಷ್ಣುಭಕ್ತಂ ಅವೈಹಿ - ವಿಷ್ಣುಭಕ್ತನೆಂದು ತಿಳಿ, ಅಂತವರ ತಂಟೆಗೆ ಹೋಗಬೇಡವೆಂದು ಹೇಳುತ್ತಾನೆ. ಇಲ್ಲಿಯೂ ದೇಹಾವಸಾ

**ಭಾಗವತನುಕ್ಕೇ ಯಥಾಪೂರ್ವಂ ಜಾತಿವ್ಯವಸ್ಥೈಯುಂ, ಅದಕ್ಕನುರೂಪ ಮಾನ ವೃತ್ತಿವ್ಯವಸ್ಥೈಯುಂ, ಸುಸ್ಪಷ್ಟಮಾಗ ಚೊಲ್ಲಪಟ್ಟದು.**

**ಇಪ್ಪಡಿ ಭಾಗವತತ್ವಮಾಗಿರ ಗುಣಮುಮ್, ಅದಡಿಯಾಗ ವರುಂ ಪುರುಷಾರ್ಥ ವಿಶೇಷಮುಮ್, ಸಮಾನಮಾಯಿರುಕ್ಕ, ಜಾತಿವಿಶೇಷಙ್ಗ**

---

ನದವರೆಗೂ ನಿಜ ವರ್ಣತಃ - ಸ್ವಕೀಯ ವರ್ಣಕ್ಕೆ ವಿಧಿಸಿದ ಧರ್ಮಾನುಷ್ಠಾನ ದಿಂದ ಕದಲದೆ ಇರಬೇಕೆಂದು ಹೇಳಲ್ಪಟ್ಟಿತು," ಇತ್ಯಾದಿಗಳಾಲೇ - ಇವೇ ಮೊದಲಾದ ಪ್ರಮಾಣಗಳಿಂದ, ಭಾಗವತನಿಗೂ, ಯಥಾ ಪೂರ್ವಂ - ಹಿಂದೆ ಇದ್ದಹಾಗೆ ಎಂದರೆ ಜನ್ಮತಃ ಬಂದಹಾಗೆಯೇ, ಜಾತಿಯು ವ್ಯವಸ್ಥೆಯನ್ನೂ, ಅದ ಕ್ಕನುರೂಪಮಾನ ವೃತ್ತ್ಯವಸ್ಥೈಯುಮ್-ಆ ಜಾತಿಗೆ ಅನುಗುಣವಾಗಿ ಶಾಸ್ತ್ರ ದಲ್ಲಿ ವಿಹಿತವಾದ ಅನುಷ್ಠಾನ ಕ್ರಮವನ್ನೂ, ಸ್ಪಷ್ಟಮಾಗಚೊಲ್ಲಪ್ಪಟ್ಟದು - ವ್ಯಕ್ತವಾಗಿ ಹೇಳಲ್ಪಟ್ಟಿತು. ಈ ಎಲ್ಲಾ ಪ್ರಮಾಣಗಳಲ್ಲೂ ಜನ್ಮತಃ ಬಂದ ಜಾತಿಯು ಎಂದಿಗೂ ತಪ್ಪುವದಿಲ್ಲವೆಂದು ಹೇಳಿರುವದು ಭಾಗವತನ ವಿಷಯವೇ ಯಾದುದರಿಂದ, ಭಾಗವತನ ವಿಷಯದಲ್ಲಿ ಮಾತ್ರ ಜಾತಿಯ ವ್ಯತ್ಯಸ್ತವು ಉಂಟು, ಇತರರ ವಿಷಯದಲ್ಲಿ ಇಲ್ಲವೆಂದು ಹೇಳಲು ಸಾಧ್ಯವಿಲ್ಲವೆಂಬ ತಾತ್ಪರ್ಯವು. ಜಾತಿಯು ಜನ್ಮತಃ ಬಂದುದಾದುದರಿಂದ, ಜನ್ಮವಿರುವವರೆಗೂ ತಪ್ಪಿದ್ದಲ್ಲವೆಂದೂ, ಹಾಗೆಯೇ ಎಂದಿಗೂ ಆ ಜಾತಿಗೆ ವಿಹಿತಗಳಾದ ಪ್ರವೃತ್ತಿಗಳೂ ತಪ್ಪಿದ್ದಲ್ಲವೆಂದೂ, ಹೀಗೆ ಅನೇಕ ಪ್ರಮಾಣಗಳಿಂದಲೂ ಸ್ಥಾಪಿಸಿದರು.

ಆದರೆ ಶ್ರೀ ವ್ಯಾಸ ಮಹರ್ಷಿಯೂ ಕೂಡ "ಶೂದ್ರಸ್ಸಾಧುಃ ಕಲಿಸ್ಸಾಧುಃ" ಎಂದು ಶೂದ್ರನಿಗೆ ಮಾಹಾತ್ಮ್ಯವನ್ನು ಹೇಳಿಲ್ಲವೇ ಎಂದರೆ ಆಪ್ರಮಾಣವು ನಾವು ಮೇಲೆ ಸ್ಥಾಪಿಸಿದ ಅಭಿಪ್ರಾಯವನ್ನೇ ಅನುವಾದಮಾಡಿ ಹೇಳುತ್ತದೆಂದು ಹೇಳುತ್ತಾರೆ.—ಇಪ್ಪಡಿ-ಹೀಗೆ ಮೇಲೆ ಉಪಪಾದಿಸಿದ ರೀತಿಯಲ್ಲಿಭಾಗವತತ್ವ ಮಾಗಿರ ಗುಣಮುಮ್, ಎಲ್ಲಾ ಜಾತಿಯಲ್ಲೂ ಪ್ರಪನ್ನನಾಗಿ ಭಾಗವತಭಾವವನ್ನು ಹೊಂದಿರುವದರ ಮೂಲಕ ಬರುವ ಗುಣರೂಪ ಮಾಹಾತ್ಮ್ಯೆಯೂ, ಅದಡಿ ಯಾಗವರುಮ್ - ಹಾಗೆ ಪ್ರಪನ್ನನಾಗಿ ಭಾಗವತನೆಂದು ಹೇಳಿಸಿಕೊಂಡಿರುವದರ ಮೂಲಕ ಬರುವ, ಪುರುಷಾರ್ಥ ವಿಶೇಷಮುಮ್-ದಿವ್ಯ ವೈಕುಂಠಪ್ರಾಪ್ತಿಯೂ, ಸಮಾನವಾಗಿರುವಾಗ, ಜಾತಿವಿಶೇಷಙ್ಗಳುಮ್-ಜಾತಿ ವಿಶೇಷಗಳೂ, ಪ್ರವೃತ್ತಿ ವಿಶೇಷಙ್ಗಳುಮ್ - ಆಯಾಜಾತಿಗಳಿಗೆ ವಿಧಿಸಲ್ಪಟ್ಟ ಅನುಷ್ಠಾನರೂಪ ಪ್ರವೃತ್ತಿಗಳೂ ಸಹ, ನಿತ್ಯವ್ಯವಸ್ಥಿತಙ್ಗಳೆನ್ನುಮಿಡಮ್ - ಯಾವಾಗಲೂ ನಿಯತವಾದವುಗಳು ಎಂಬ ಸಂದರ್ಭದಲ್ಲಿ, "ಶೂದ್ರಸ್ಸಾಧುಃ - ಶೂದ್ರನು ಮಹಾ

ಳುವ್, ವೃತ್ತಿವಿಶೇಷಙ್ಗಳುವ್, ನಿತ್ಯ ವ್ಯವಸ್ಥಿತಙ್ಗಳೆನ್ನುಮಿಡವ್ (೧) "ಶೂದ್ರಸ್ಸಾಧುಃ ಕಲಿಸ್ಸಾಧುಃ" ಇತ್ಯಾದಿಗಳಿಲುವ್ ಪ್ರಸಿದ್ಧಮ್.

---

ಪುಣ್ಯವಂತನು, "ಕಲಿಸ್ಸಾಧುಃ ಕಲಿಯುಗವು ಧನ್ಯವಾದುದು" ಇತ್ಯಾದಿಗಳಿಲುವ್ - ಎಂಬಿವೇ ಮೊದಲಾದ ಪ್ರಮಾಣಗಳಲ್ಲೂ ಪ್ರಸಿದ್ಧವು; ಮೇಲೆಹೇಳಿದ ಪ್ರಮಾಣಗಳು ಮಾತ್ರವೇ ಅಲ್ಲದೆ, ಈ "ಶೂದ್ರಸ್ಸಾಧುಃ" ಇತ್ಯಾದಿ ಪ್ರಮಾಣಗಳಲ್ಲೂ ಪ್ರಸಿದ್ಧವು. ಅವುಗಳಿಂದ ಸಿದ್ಧವಾದರೆ, ಇದರಿಂದ ಪ್ರಕರ್ಷೇಣ ಸಿದ್ಧವು; ಏಕೆಂದರೆ ಶ್ರೀವ್ಯಾಸಮಹರ್ಷಿಯು ತಾವೇ ವ್ಯಕ್ತಪಡಿಸುತ್ತಾರೆ; ಮೇಲೆ ಹೇಳಿದ ಇತರ ಪ್ರಮಾಣಗಳಿಂದ ಊಹಿಸತಕ್ಕದ್ದಾಗಿರುತ್ತದೆ. ಈ ಪ್ರಮಾಣದಲ್ಲಿ ಆ ಕಷ್ಟವೂ ಇಲ್ಲವು, ಮಹರ್ಷಿಯೇ ವ್ಯಕ್ತಪಡಿಸಿರುತ್ತಾರೆಂಬ ಭಾವವು. ಪ್ರಕರಣವೇನೆಂದರೆ.—ಶ್ರೀ ಪರಾಶರರು ತಮ್ಮ ಪ್ರಿಯ ಶಿಷ್ಯರಾದ ಮೈತ್ರೇಯರಿಗೆ ಕೃತಯುಗದಲ್ಲಿ ತಪಸ್ಸೇ ಮೊದಲಾದ ಕ್ಲೇಶಯುಕ್ತ ಪ್ರಯತ್ನಗಳಿಂದ ಸಾಧ್ಯವಾದುದು, ಕಲಿಯುಗದಲ್ಲಿ ಅಲ್ಪಪ್ರಯತ್ನದಿಂದಲೇ ಅಂತಹ ಮಹತ್ತಾದ ಸಿದ್ಧಿಯನ್ನು ಸಾಧಿಸಬಹುದೆಂದು ಹೇಳಿ, ಅದನ್ನೇ ವಿಶದವಾಗಿ ಬೋಧಿಸುವದಕ್ಕಾಗಿ ಹಿಂದೆ ನಡೆದ ವೃತ್ತಾಂತವನ್ನು ಬೋಧಿಸುತ್ತಾರೆ. ಯಾವ ಕಾಲದಲ್ಲಿ, ಅಲ್ಪಕೋಧರ್ಮೋ ದದಾತಿ ಸುಮಹತ್ಫಲಂ - ಅಲ್ಪಾನುಷ್ಠಾನವು ವಿಶೇಷವಾದ ಮಹತ್ತಾದ ಫಲವನ್ನು ಕೊಡುತ್ತದೆ ಎಂದು ಮುನಿಗಳಲ್ಲಿ ವಾದಹುಟ್ಟಿ ಇದರ ನಿರ್ಣಯವನ್ನು ತಿಳಿಯಬೇಕೆಂದು ಗಂಗಾನದಿಯಲ್ಲಿ ಆಗ ಸ್ನಾನಮಾಡುತ್ತಿದ್ದ ಸರ್ವಜ್ಞರಾದ ನನ್ನ ಮಗ ವ್ಯಾಸಮಹರ್ಷಿಯ ಹತ್ತಿರಬಂದರು. ನನ್ನ ಮಗನು ಅವರ ಮನೋಭಾವವನ್ನರಿತವರಾದುದರಿಂದ ಅವರು ಪ್ರಶ್ನಿಸುವದಕ್ಕೆ ಮುಂದೆಯೇ ಸ್ನಾನಾನಂತರ "ಶೂದ್ರಸ್ಸಾಧುಃ ಕಲಿಸ್ಸಾಧುಃ" ಎಂದು ಹೇಳಿದರು. ಇದು ಚೆನ್ನಾಗಿ ತಿಳಿಯುವದಕ್ಕಾಗಿ ಇನ್ನೊಂದುಸಲ ಸ್ನಾನಮಾಡಿ ಬಂದು ಅದರ ಅರ್ಥವನ್ನು ವಿವರಿಸುತ್ತಾರೆ ಹೇಗೆಂದರೆ, ಸಾಧು ಸಾಧ್ವಿತಿಚೋತ್ಥಾಯ ಶೂದ್ರ ಧನ್ಯೋಸಿಚಾಬ್ರವೀತ್" ಶೂದ್ರಸ್ಸಾಧುಃ ಎಂದು ಹೇಳಿವರಭಿಪ್ರಾಯವು, ಶೂದ್ರನು ಧನ್ಯನು ಮಹಾಪುಣ್ಯವಂತನು ಎಂದು ವಿವರಿಸಿದರು. ಪುನಃ ಸ್ನಾನಮಾಡಿಬಂದು "ಯೋಷಿತಸ್ಸಾಧು ಧನ್ಯಾಸ್ತಾ ಸ್ತಾಭ್ಯೋ ಧನ್ಯತರೋಽಕಃ" ಸ್ತ್ರೀಗಳು ತುಂಬಾ ಸಾಧುಗಳು ಎಂದರೆ ತುಂಬಾ ಧನ್ಯರು, ಪುಣ್ಯವಂತರು, ಅವರುಗಳಿಗಿಂತ ಹೆಚ್ಚು ಪುಣ್ಯವಂತರು ಯಾರು ಇದ್ದಾರೆಂದು ಹೇಳಿ

---

(೧) ವಿ. ಪು. ೬. ೨. ೫.

ದರು ; ಹೀಗೆ ಹೇಳಿಬಿಟ್ಟು ಅಲ್ಲಿ ನೆರದಿದ್ದ ಮುನಿಗಳನ್ನು ಕುರಿತು ಬಂದ ಕಾರ್ಯ ವೇನೆಂದು ಕೇಳಲು; ತಾವು ಈಗ ಹೇಳಿದ ಉಕ್ತಿಗಳ ಅರ್ಥವನ್ನು ಸಮಗ್ರವಾಗಿ ಉಪದೇಶಿಸಬೇಕೆಂದು ಪ್ರಾರ್ಥಿಸಲು. ಅದಕ್ಕೆವ್ಯಾಸರು ಅಲ್ಪಾಯಾಸದಿಂದ ಕಲಿಯುಗ, ಶೂದ್ರರು, ಸ್ತ್ರೀಗಳಿಗೆ ಧನ್ಯತೆಯುಂಟಾಗುತ್ತದೆಂದು ಹಾಗೆ ಹೇಳಿದ ನೆಂದು ಉತ್ತರಕೊಟ್ಟರು. ಇತರ ಯುಗಗಳಲ್ಲಿ ಧ್ಯಾನ, ಯಜ್ಞ, ಅರ್ಚನಾದಿ ತುಂಬಾ ಪ್ರಯಾಸಕರಗಳಾದ ಅನುಷ್ಠಾನಗಳಿಂದ ಸಾಧ್ಯವಾದುದು "ಕಲೌ ಸಂಕೀರ್ತ್ಯ ಕೇಶವಂ" ನಾಮ ಸಂಕೀರ್ತನಮಾತ್ರದಿಂದಲೇ ಉಪಾಯಾನುಷ್ಠಾನಕ್ಕೆ ಸಹಕಾರಿಯಾಗುವದರಿಂದ ಕಲಿಯುಗವು ಧನ್ಯವಾದುದೆಂದು ಹೇಳಿದೆನು. ಬ್ರಾಹ್ಮಣನು ಬಹು ಜಾಗರೂಕನಾಗಿ ಬಹು ಪ್ರಯಾಸದಿಂದ ನಿತ್ಯನೈಮಿತ್ತಿಕಾನುಷ್ಠಾನಗಳಿಂದ ಹೊಂದತಕ್ಕ ಫಲವನ್ನೆಲ್ಲಾ ಶೂದ್ರನು ದ್ವಿಜ ಶುಶ್ರೂಷಮಾತ್ರದಿಂದಲೇ ಹೊಂದುವನಾದುದರಿಂದ ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಗಿಂತ ಶೂದ್ರನು ಧನ್ಯತರನೆಂದು ಹೇಳಿದೆನು. "ಯೋಷಿಚ್ಛುಶ್ರೂಷಣಾದ್ಭರ್ತುಃ ಕರ್ಮಣಾ ಮನಸಾಗಿರಾ" ಸ್ತ್ರೀಯಾದರೋ ಭರ್ತೃವನ್ನು ಮನೋವಾಕ್ಕಾಯಗಳಿಂದ ಶುಶ್ರೂಷೆ ಮಾಡುವದರಿಂದ ಶುಭವನ್ನು ಹೊಂದುವಳು. ಆದುದರಿಂದ ಆಕೆಯೂ ಧನ್ಯತರಳು. ಆದುದರಿಂದ "ಭರ್ತೃಶುಶ್ರೂಷಯಾನಾರೀ ಲಭತೇಸ್ವರ್ಗಮುತ್ತಮಂ। ಅಪಿಯಾ ನಿರ್ನಮಸ್ಕಾರಾ ನಿವೃತ್ತಾದೇವಪೂಜನಾತ್" ಎಂದು ವಾಲ್ಮೀಕಿ ಮಹರ್ಷಿಯೂ ಹೇಳಿರುತ್ತಾರೆ. (ಅಯೋಧ್ಯಾ ೨೪-೨೬) ಯೋಷಿತ್ತು ಮತ್ತು ಕಲಿಯುಗ ವಿಷಯಗಳು ಪ್ರಾಸಂಗಿಕವಾಗಿ ಹೇಳಲ್ಪಟ್ಟವು. ಶೂದ್ರನು ಧನ್ಯನು, ಅಲ್ಪಾಯಾಸದಿಂದ ಬ್ರಾಹ್ಮಣಾದಿಗಳಹಾಗೆಯೇ ಮುಕ್ತಿಯನ್ನು ಹೊಂದಬಹುದೆಂದು ಹೇಳಿರುವದರಿಂದ ಜಾತಿಯೂ ಪ್ರವೃತ್ತಿಯೂ ಸಹ ನಿತ್ಯವ್ಯವಸ್ಥಿತವಾಗಿ ನಿಯತವೆಂದೂ, ಅವುಗಳನ್ನು ಬದಲಾಯಿಸಲು ಸಾಧ್ಯವಿಲ್ಲವೆಂದೂ ಹೇಳಲ್ಪಟ್ಟವು. ಅಲ್ಪಾಯಾಸದಿಂದಲೇ ಶೂದ್ರನಿಗೆ ಬಹುಕಷ್ಟದಿಂದ ಬ್ರಾಹ್ಮಣನಿಗೆ ಲಭಿಸುವ ಪುರುಷಾರ್ಥವು ಲಭಿಸಿದರೆ, ಆತನು ಬ್ರಾಹ್ಮಣನಹಾಗೆ ನಡೆಯಬೇಕೆಂದು ಏಕೆ ಯತ್ನಿಸಿ ಭಗವನ್ನಿಗ್ರಹಕ್ಕೆ ಒಳಗಾಗುತ್ತಾನೋ ತಿಳಿಯದು. ಹಾಗೆಯೇ ಅಲ್ಪಾಯಾಸದಿಂದ ಮಹತ್ತಾದ ಫಲವು ದೊರೆಯುವದರಿಂದ ಬ್ರಾಹ್ಮಣನಾದವನು ನಾನೂ ಶೂದ್ರನಹಾಗೆ ಆಗುವನೆಂದು ಪ್ರವರ್ತಿಸಿದರೆ, ಅವನೂ ತನ್ನ ನಿಯತ ಧರ್ಮಪರಿತ್ಯಾಗದಿಂದ ಭಗವನ್ನಿಗ್ರಹಕ್ಕೆ ಗುರಿಯಾಗುವನೆಂದು ತಿಳಿಯತಕ್ಕದ್ದು.

ಇಲ್ಲಿ "ಜಾತಿ ವಿಶೇಷಜ್ಞಳುರ್" ಎಂದು ಹೇಳಿರುವದರಿಂದ ಬ್ರಾಹ್ಮಣ್ಯಾದಿಗಳನ್ನು ನಿರ್ಧರಿಸುವ ಹೇತುವು ಯಾವುದು ಎಂದು ಸಾರಾಸ್ವಾದಿನಿ ವ್ಯಾಖ್ಯಾ

## ದ್ವಿವಿಧಬ್ರಾಹ್ಮಣ್ಯಾಭಿಧಾನೇನ ಸರ್ವಶಾಸ್ತ್ರಾವಿರೋಧಿತ್ವಂ.

(೧) "ತಮ ಶ್ಶೂದ್ರೇ ರಜಃಕ್ಷತ್ರೇ ಬ್ರಾಹ್ಮಣೇ ಸತ್ವಮುತ್ಕಟವರ್" ಇತ್ಯಾದಿಗಳಿಲ್ ಶೊಲ್ಲುಗಿರ ಪಡಿಯೇ ಸತ್ವಾದಿಗುಣ ತಾರತಮ್ಯವತ್ತಾನ

ತೃವು ಚರ್ಚಿಸಿರುತ್ತಾರೆ. ನೈಯಾಯಿಕನ ಜಾತಿ ಶಬ್ದದಿಂದ ಬ್ರಾಹ್ಮಣ್ಯವನ್ನು ನಿರೂಪಿಸಲು ಸಾಧ್ಯವಿಲ್ಲವು; ಶಿಖಾ ಯಜ್ಞೋಪವೀತಾದಿ ಅಙ್ಗಗಳಿಂದ ನಿರ್ಧರಿಸುತ್ತೇವೆ ಎಂದರೆ, ಕೆಲವು ಬ್ರಾಹ್ಮಣೇತರರು ಇದನ್ನು ಧರಿಸಿರುವದನ್ನು ಕಂಡಿರುವೆವು. ಘಟತ್ವಾದಿ ಅವಯುವ ವಿಶೇಷದಹಾಗೆ ಯಾವುದಾದರೂ ನಿರ್ಧಾರಕವೋ? ಎಂದರೆ ಬ್ರಾಹ್ಮಣ್ಯಕ್ಕೆ ಅಂತಹ ಅವಯುವ ವಿಶೇಷವು ಯಾವುದೂ ಇರುವದಿಲ್ಲವು. ಆತನ ಸಂಧ್ಯಾವಂದನಾದಿ ಅನುಷ್ಠಾನಗಳಿಂದ ನಿರ್ಧರಿಸುತ್ತೇವೆಎಂದರೆ,ಬ್ರಾಹ್ಮಣ್ಯವಿದ್ದರೆ ಅದರಿಂದ ಸಂಧ್ಯಾವಂದನಾದಿ ಅನುಷ್ಠಾನಗಳು ನಿರ್ಧರಿಸಲ್ಪಡುವದರಿಂದ ಆತ್ಮಾಶ್ರಯದೋಷವು. ಮಾತಾಪಿತೃಗಳಿಗೆ ಬ್ರಾಹ್ಮಣ್ಯವಿದ್ದರೆ ಅದರಿಂದ ಬ್ರಾಹ್ಮಣ್ಯವೆಂದರೆ, ಪರಮಾತ್ಮಮುಖದಿಂದ ಬಂದ ಬ್ರಾಹ್ಮಣನೂ, ಅಯೋನಿಜರಾದ ಬ್ರಾಹ್ಮಣರೂ, ಹಾಗೆಯೇ ಅಗಸ್ತ್ಯ ವಾಲ್ಮೀಕಿಗಳೂ ಬ್ರಾಹ್ಮಣರಲ್ಲವೆಂದಾಗುತ್ತದೆ. ಗೋತ್ರಪ್ರವರವುಳ್ಳವರ ಉಪದೇಶವನ್ನು ಹೊಂದಿದ ಗೋತ್ರ ಪ್ರವರ ಉಳ್ಳವರೆಂದರೆ, ಆಗಲೂ ಅಯೋನಿಜರು ಬ್ರಾಹ್ಮಣರಲ್ಲವೆಂದಾಗುತ್ತದೆ. ಆದುದರಿಂದ ಜನ್ಮಮೊದಲು ಮರಣಾಂತದವರೆಗೂ ಬ್ರಾಹ್ಮಣ್ಯವು ಇರತಕ್ಕದ್ದೆಂದು ಹೇಳುವದೂ ಕಷ್ಟವಾಗುತ್ತದೆ. ಹೀಗೆಲ್ಲಾ ತೊಂದರೆಯುಂಟಾಗುವದರಿಂದ ಮುಂದೆ ಶ್ರೀ ದೇಶಿಕರು ಬ್ರಾಹ್ಮಣ್ಯವು ಎರಡುವಿಧವೆಂದೂ, ಮಾನಸಿಕ ಬ್ರಾಹ್ಮಣ್ಯವು ಸತ್ವಗುಣಾಧಿಕ್ಯದಿಂದುಂಟಾಗತಕ್ಕದ್ದೆಂದೂ, ಕಾಯಿಕ ಬ್ರಾಹ್ಮಣ್ಯವು ಜನ್ಮತಃ ಉಂಟಾಗತಕ್ಕದ್ದೆಂದೂ, ಎರಡು ವಿಧವಾಗಿ ವಿಭಾಗಿಸಿ ಮುಂದೆ ಹೇಳುತ್ತಾರೆ.

### ಎರಡು ವಿಧ ಬ್ರಾಹ್ಮಣ್ಯ ಉಂಟೆಂಬುದರಿಂದ ಸರ್ವ ಶಾಸ್ತ್ರಗಳಿಗೂ ಬಾಧಕವಿಲ್ಲವು.

(೧) "ತಮ ಶ್ಶೂದ್ರೇ ಉತ್ಕಟಂ - ಶೂದ್ರನಲ್ಲಿ ಎಂದರೆ ಶೂದ್ರಶರೀರದಲ್ಲಿ ತಮಸ್ಸು ಆಧಿಕ್ಯವು, ಹಾಗೆಯೇ, ಕ್ಷತ್ರೇ - ಕ್ಷತ್ರಿಯ ಶರೀರದಲ್ಲಿ ರಜಸ್ಸು ಉತ್ಕಟವು—ಅಧಿಕವು, ಹಾಗೆಯೇ ಬ್ರಾಹ್ಮಣೇ - ಬ್ರಾಹ್ಮಣಶರೀರದಲ್ಲಿ ಸತ್ವವು ಅಧಿಕವು, ಇಲ್ಲಿ ಅಧಿಕವೆಂದು ಹೇಳಿರುವದರಿಂದ ತ್ರಿಗುಣಗಳಲ್ಲಿ ಮಿಕ್ಕ ಎರಡೆರಡು

ಭಾರ. ಅಶ್ವ. ೪೦. ೧೧

**ಶರೀರತ್ತಿಲ್ ಬ್ರಾಹ್ಮಣ್ಯಾದಿಗಳ್ ವೇರೇ; ಮನಸ್ಸಿಲ್ ಸತ್ವಾದಿಗುಣ ವಿಶೇಷಮಡಿಯಾಗ ಸರ್ವಜಾತಿಗಳಿಲುಮ್ ಪ್ರಶಂಸಾ ವಾಕ್ಯಙ್ಗಳಾಲೇ ಶೊಲ್ಲಪ್ಪಟ್ಟ ಬ್ರಾಹ್ಮಣ್ಯಾದಿಗಳುಮ್ ವೇರೇ.**

ಗುಣಗಳು ಇಲ್ಲವೇ ಇಲ್ಲವು ಎಂಬರ್ಥವಲ್ಲವು; ಅವು ಕಮ್ಮಿಯಾಗಿವೆ ಎಂಬ ಭಾವವು; ಮೂವರಲ್ಲೂ ಮೂರೂ ಉಂಟು. ಆದರೆ ಶೂದ್ರನಲ್ಲಿ ತಮಸ್ಸು ಅಧಿಕವಾಗಿಯೂ ಮಿಕ್ಕ ಎರಡೂ ಅಲ್ಪವಾಗಿಯೂ ಇವೆ ಎಂಬ ಭಾವವು; ಹೀಗೆ ಕ್ಷತ್ರಿಯ ಬ್ರಾಹ್ಮಣ ಶರೀರಗಳ ವಿಷಯದಲ್ಲೂ ಒಂದು ಉತ್ಕಟವಾಗಿಯೂ ಇನ್ನೆರಡು ಅಲ್ಪವಾಗಿಯೂ ಇವೆ. ಎಂದು ತಿಳಿಯತಕ್ಕದ್ದು. ಇಲ್ಲಿ ವೈಶ್ಯನು ಹೇಳಲಿಲ್ಲವು ; ವೈಶ್ಯಶರೀರದಲ್ಲಿ ಹೇಗೆ ಎಂದರೆ ತಮೋಗುಣವು ಶೂದ್ರನಲ್ಲಿರುವ ಹಾಗೆ ತುಂಬಾ ವಿಶೇಷವಾಗಿ ತಲೆದೋರದೆ ಸ್ವಲ್ಪಮಟ್ಟಿಗೆ ತಮೋಗುಣಾಧಿಕ್ಯವನ್ನೇ ಹೊಂದಿರುವ ಶರೀರವು" ಇತ್ಯಾದಿಗಳಿಲೇ - ಇವೇ ಮೊದಲಾದ ಪ್ರಮಾಣಗಳಲ್ಲಿ, **ಶೊಲ್ಲುಗಿರಪಡಿಯೇ** - ಹೇಳಿರುವಹಾಗೆ, **ಸತ್ವಾದಿಗುಣ ತಾರತಮ್ಯವತ್ತಾನ** - ಸತ್ವರಜಸ್ತಮೋಗುಣಗಳ ತರತಮ ಭಾವಗಳನ್ನು ಹೊಂದಿರುವ, **ಶರೀರತ್ತಿಲೆ** - ಶರೀರದಲ್ಲಿರುವ, **ಬ್ರಾಹ್ಮಣ್ಯಾದಿಗಳ್ ವೇರೆ**-ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೇ ಬೇರೆ, ಇದಕ್ಕೆ ಶಾರೀರ ಬ್ರಾಹ್ಮಣ್ಯಾದಿಗಳೆಂಬ ಹೆಸರು; **ಮನಸ್ಸಿಲ್** - ಮನಸ್ಸಿನಲ್ಲಿ ಸತ್ವಾದಿ ಗುಣವಿಶೇಷಗಳ, **ಅಡಿಯಾಗ**- ಮೂಲಕವಾಗಿ, **ಸರ್ವಜಾತಿಗಳಿಲುಮ್ ಪ್ರಶಂಸಾ ವಾಕ್ಯಙ್ಗಳಾಲೇ ಶೊಲ್ಲಪ್ಪಟ್ಟ** - ಸಮಸ್ತ ಜಾತಿಗಳಲ್ಲೂ ಮಾಹಾತ್ಮ್ಯೆಯನ್ನು ತಿಳಿಸುವ ವಾಕ್ಯಗಳಿಂದ ಹೇಳಲ್ಪಟ್ಟ ಬ್ರಾಹ್ಮಣ್ಯಾದಿಗಳೂ ಕೂಡ ಬೇರೆ; ಇಲ್ಲಿ ನಿಕೃಷ್ಟಜಾತಿಯುವನಾದ ಶೂದ್ರಾದಿಗಳನ್ನೂ ಬ್ರಾಹ್ಮಣನೆಂದು ಶ್ಲಾಘಿಸಿ ಹೇಳುವ ಬ್ರಾಹ್ಮಣ್ಯವೇ ಬೇರೆ ಎಂದು ಹೇಳಿದಂದಾಯಿತು. ಇಲ್ಲಿ **ಪ್ರಶಂಸಾ ವಾಕ್ಯಙ್ಗಳಾಲೇ** ಎಂದು ಹೇಳಿರುವದು ಉತ್ಕೃಷ್ಟಜಾತಿಯುವನನ್ನು ನಿಂದಾರೂಪವಾಕ್ಯದಿಂದ ಹೇಳುವ ಮಾನಸ ಶೂದ್ರತ್ವಾದಿಗಳಿಗೂ ಉಪಲಕ್ಷಣವೆಂದು ಭಾವಿಸತಕ್ಕದ್ದು. ಹೀಗೆ ಬ್ರಾಹ್ಮಣ್ಯಾದಿಗಳು ಎರಡು ವಿಧವೆಂದು ಹೇಳಿದರು :—ಜನ್ಮ ಪ್ರಭೃತಿ ಶರೀರದೊಂದಿಗೆ ಬಂದದ್ದು ಒಂದು ವಿಧ ಶಾರೀರಬ್ರಾಹ್ಮಣ್ಯವು : ಮನಸ್ಸಿನ ಸತ್ವೋನ್ಮೇಷದಿಂದ ಆಗಂತುಕವಾಗಿ ಬಂದದ್ದು ಒಂದು ವಿಧ ಮಾನಸ ಬ್ರಾಹ್ಮಣ್ಯವೆಂದುಪದೇಶಿಸಿದರು. ಆದುದರಿಂದ ಭಾರತವಾಕ್ಯವಾದ "ನ ಶೂದ್ರಾ ಭಗವದ್ಭಕ್ತಾಃ" ಎಂಬ ಶ್ಲೋಕಾರ್ಥವೇನೆಂದರೆ, ಇಷ್ಟೇ ಎಂಬಭಿಪ್ರಾಯವು:-ಶಾರೀರ ಶೂದ್ರತ್ವವುಳ್ಳವರು ಭಗವದ್ಭಕ್ತರಾಗಿ ಮನಸ್ಸಿನಲ್ಲಿ ಸತ್ವಾಧಿಕ್ಯವುಳ್ಳವರು ಕಾರಣಾಂತರದಿಂದಾದರೆ, ಅವರು ಮಾನಸ ಶೂದ್ರರಲ್ಲವು, ಅವರುಗಳ ಮನಸ್ಸಿನಲ್ಲಿ ತಮೋ

## ಉಭಯ ವಿಧ ಬ್ರಾಹ್ಮಣ್ಯಯೋ ರ್ವಿವೇಕಃ

೧. ಇವತ್ತಿಲ್ ಶಾರೀರಗುಣ ವಿಶೇಷ ಮಡಿಯಾಗ ವ್ಯವಸ್ಥಿತಙ್ಗಳಾನ

ಗುಣದ ವ್ಯಾಪಾರಗಳಾದ ಕಾಮಕ್ರೋಧಾದಿಗಳಿಲ್ಲವು,ಜ್ಞಾನ ಶಮಾದಿ ಗುಣಯುಕ್ತರಾಗಿ ಬ್ರಾಹ್ಮಣರಿಗೆ ಸಮಾನರಾಗುವದರಿಂದ ವಿಪ್ರಾಃ - ಮಾನಸ ಬ್ರಾಹ್ಮಣರ; ಭಾಗವತರಾದುದರಿಂದ ಪೂಜನೀಯರು ; ಆದುದರಿಂದಲೇ ವಿಪ್ರಾಭಾಗವತಾಸ್ಸ್ಮೃತಾಃ ಎಂದು ಹೇಳಲ್ಪಟ್ಟರು ಹಾಗೆಯೇ ಯೇಹ್ಯ ಭಕ್ತಾ ಜನಾರ್ದನೇ. ಶಾರೀರಕ ಸಂಬಂಧವಾದ ಉತ್ಕೃಷ್ಟವರ್ಣತೆಯಿದ್ದರೂ, ಯಾರಾಗಲಿ ಜನಾರ್ದನನಲ್ಲಿ ಭಕ್ತಿಯಿಲ್ಲದೆ ಭಾಗವತರಲ್ಲವೋ, ಸರ್ವವರ್ಣೇಷುತೇ ಶೂದ್ರಾಃ-ಸಮಸ್ತ ಜಾತಿಗಳಲ್ಲೂ ಅವರೂ ಮನಸ್ಸಿನಲ್ಲಿ ತಮೋಗುಣ ವಿಶಿಷ್ಟರಾದಪ್ರಯುಕ್ತ ಮಾನಸ ಶೂದ್ರರೇ ಸರಿ, ಎಂದರೆ ರಾಗದ್ವೇಷಗಳಿಂದ ತುಂಬಿದ ಮನಸ್ಸುಳ್ಳವರಾದ ಪ್ರಯುಕ್ತ ಶೂದ್ರರು. ಹೇಗೆ ಈ ಗುಣಗಳುಳ್ಳವರು ನಿಂದಾರ್ಹರೋ ಹಾಗೆ ನಿಂದಾರ್ಹರೆಂಬ ಭಾವವು. "ಯೋ ಬ್ರಾಹ್ಮಣಾಯೋಪಗುರೇತ್ತಂ ಶತೇನ ಯಾತಯೇತ್" "ಯಾವನು ಬ್ರಾಹ್ಮಣನನ್ನು ಕುರಿತು ಗದರಿಸುವನೋ ಆತನನ್ನು ನೂರರಷ್ಟು ದಂಡಿಸತಕ್ಕದ್ದು"ಮತ್ತು ಘ್ನಂತಂಶಪಂತಂ ಪರುಷಂ ವದಂತಂ ಯೋಬ್ರಾಹ್ಮಣಂ ನಾರ್ಚಯತೇ ವಿಮೂಢಃ" ಕ್ರೂರ ಮಾತುಗಳನ್ನಾಡಿ ಶಪಿಸುವ ಬ್ರಾಹ್ಮಣನನ್ನೂ ಕೂಡ ಪೂಜಿಸಬೇಕೆಂದು ಹೇಳಿರುವದರಲ್ಲೂ, ಮತ್ತು"ಯಾವತೀರ್ವೈ ದೇವತಾ ಸ್ತಾಸ್ಸರ್ವಾ ವೇದವಿದಿ ಬ್ರಾಹ್ಮಣೇವಸಂತಿ" ಎಷ್ಟು ದೇವತೆಗಳೆಲ್ಲಾ ಇದ್ದಾರೋ ಅವರೆಲ್ಲಾ ವೇದವಿತ್ತಾದ ಬ್ರಾಹ್ಮಣನಲ್ಲೇ ಇದ್ದಾರೆ, ಹೀಗೆಲ್ಲಾ ಪ್ರಶಂಸೆಗೆ ಅರ್ಹವಾದ ಬ್ರಾಹ್ಮಣ್ಯಶಬ್ದವು ಶಾರೀರಮಾತ್ರ ಬ್ರಾಹ್ಮಣ್ಯವನ್ನು ಬೋಧಿಸುವದಿಲ್ಲವು, ಸತ್ವಗುಣಾಧಿಕ್ಯದಿಂದ ಶೋಭಿಸುವ ಮಾನಸ ಬ್ರಾಹ್ಮಣ್ಯವನ್ನೂ ಸಹ ಕುರಿತು ಹೇಳಿದ ಪ್ರಶಂಸೆಯೆಂದು ಭಾವಿಸತಕ್ಕದ್ದು. ಬ್ರಾಹ್ಮಣನಿಗೆ ನಮಸ್ಕಾರವನ್ನು ಮಾಡತಕ್ಕದ್ದು ಎಂದರೆ ಶಾರೀರಮಾತ್ರ ಬ್ರಾಹ್ಮಣ್ಯವಿದ್ದು ಮಾನಸಿಕ ಶೂದ್ರತ್ವವಿರುವನು ನಮಸ್ಕಾರಾದಿಗಳಿಗೆ ಅನರ್ಹನು. ಶಾರೀರ ಮಾನಸಿಕ ಎರಡು ವಿಧ ಬ್ರಾಹ್ಮಣ್ಯವಿದ್ದರೇನೇ ನಮಸ್ಕಾರಾದಿಗಳಿಗೆ ಅರ್ಹನಾಗಿ ಮಾನನೀಯನು ಎಂಬ ಭಾವವೂ ದ್ಯೋತಿತವು.

### ಎರಡು ವಿಧ ಬ್ರಾಹ್ಮಣ್ಯಕ್ಕೂ ಇರುವ ವ್ಯತ್ಯಾಸವು.

೧. ಇವತ್ತಿಲ್ - ಈ ಎರಡುವಿಧ ಬ್ರಾಹ್ಮಣ್ಯಾದಿಗಳಲ್ಲಿ ಶರೀರ ಸಂಬಂಧವಾನ, ಗುಣವಿಶೇಷ ಮಡಿಯಾಗ [illegible] ಶೇಷಗಳ ಮೂಲಕ

**ಶಾರೀರಜಾತಿ ವಿಶೇಷಙ್ಗಳ್ ಉತ್ಪತ್ತಿ ಸಿದ್ಧಙ್ಗಳಾಯ್ ಮರಣಾನ್ತ ಮಾಗ ಸ್ಥಿರಙ್ಗಳಾಯಿರುಕ್ಕುಮ್. ಮಾನಸಮಾನ ಸತ್ವಾದಿಗುಣೋ ನ್ಮೇಷ ಮಡಿಯಾಗ ಚೊಲ್ಲುಗಿರ ಬ್ರಾಹ್ಮಣ್ಯಾದಿಗಳ್ ಸರ್ವಜಾತಿಗಳು**

ವಾಗಿ, ವ್ಯವಸ್ಥಿತಂಗಳಾನ - ಏರ್ಪಟ್ಟ, **ಉತ್ಪತ್ತಿಸಿದ್ಧ ವಿಶೇಷಂಗಳಾಯ್**-ಜನ್ಮಸಿದ್ಧವಾದ ವಿಶೇಷಗಳಾಗಿ, **ಮರಣಾನ್ತಮಾಗ ಸ್ಥಿರಂಗಳಾಗಿರುಕ್ಕುಮ್**-ಶರೀರಸಂಬಂಧವಾದ ಪ್ರಯುಕ್ತ ಮರಣಹೊಂದಿ ಆ ಸ್ಥೂಲ ಶರೀರವು ಕಳೆದು ಹೋಗುವ ತನಕ ಸ್ಥಿರವಾಗಿರತಕ್ಕವು. ಬ್ರಾಹ್ಮಣಜಾತಿಯಲ್ಲಿ ಯಾವಾಗ ಜನ್ಮ ವನ್ನೆತ್ತಿದನೋ ಆ ಶಾರೀರ ಬ್ರಾಹ್ಮಣ್ಯವು ಪ್ರಾಪ್ತವಾಗುತ್ತದೆ ; ಅದು ಮರ ಣಾಂತವಾಗಿ ಈತನಿಗೆ ಅನುಸರಿಸಿ ಬರುತ್ತದೆ ; ಇದು ನಿಯತವು. ಇದು ಹೋಗಿ ಬೇರೆ ಶಾರೀರಕ ಜಾತಿಯು ಎಂದಿಗೂ ಉಂಟಾಗುವದಿಲ್ಲವು. ಏಕೆಂದರೆ ಇವು ಉತ್ಪತ್ತಿ ಸಿದ್ಧವಾಗಿ ಮರಣಾಂತವಾಗಿ ಸ್ಥಿರವಾಗಿರತಕ್ಕದ್ದು. ಸ್ಥಿರವಾಗಿರತಕ್ಕ ದ್ದೆಂದು ಹೇಳಿದುದರಿಂದ ಭಗವದ್ಭಕ್ತನಲ್ಲದವನು ಶೂದ್ರಜಾತಿಯವನಾಗುತ್ತಾ ನೆಂದು ಹೇಳಲು ಸಾಧ್ಯವಿಲ್ಲವೆಂಬ ಭಾವವು ; ಶಾರೀರ ಜಾತಿಯು ಎಂದಿಗೂ ವ್ಯತ್ಯಸ್ತವಾಗುವದಿಲ್ಲವು. ಮುಂದೆ ಮಾನಸ ಬ್ರಾಹ್ಮಣ್ಯವೆಂತಾದ್ದೆಂದು ವ್ಯವಸ್ಥೆ ಮಾಡಿ ಹೇಳುತ್ತಾರೆ:—**ಮಾನಸಮಾನ**-ಮಾನಸವಾದ, ಸತ್ವವೇ ಮೊದಲಾದ **ಗುಣೋನ್ಮೇಷಮಡಿಯಾಗ** - ಗುಣಾಧಿಕ್ಯದ ಮೂಲಕವಾಗಿ, **ಚೊಲ್ಲುಗಿರ ಬ್ರಾಹ್ಮಣ್ಯಾದಿಗಳ್** - ಹೇಳುವ ಬ್ರಾಹ್ಮಣ್ಯಾದಿಗಳು, **ಸರ್ವಜಾತಿಗಳುಕ್ಕುಂ ಸಂಭಾವಿತಙ್ಗಳಾಯ್**-ನಾಲ್ಕು ಜಾತಿಗಳಲ್ಲೂ ಉಂಟಾಗಬಹುದಾಗಿ, **ಪ್ರಹ್ಲಾ ದಾದಿಗಳುಕ್ಕು**-ಜನ್ಮತಃ ರಾಕ್ಷಸನಾದ ಪ್ರಹ್ಲಾದನೇ ಮೊದಲಾದವರುಗಳಿಗೆ, ಆದಿ ಪದದಿಂದ, ವಿದುರ, ಗುಹ, ಮೊದಲಾದವರು ಹೇಳಲ್ಪಟ್ಟರು, **ಜನ್ಮಸಿದ್ಧಙ್ಗಳಾ ಯ್**-ಜನ್ಮ ಉಂಟಾದಾಗಲೇ ಪ್ರಾಪ್ತವಾದವುಗಳಾಗಿ, **ನೀಕ್ಕಿ ಉಳ್ಳಾರ್ಕ್ಕು**-ಇನ್ನು ಳಿಕ್ಕವರಿಗೆ **ಆಚಾರ್ಯಾದಿಸಂಬಂಧಹೇತುಕ್ಕಳಾಲೇ**-ಒಳ್ಳೇ ಗುರುವಿನ ಸಂಬಂಧ ಉಂಟಾದ ಕಾರಣದಿಂದ,**ಆಗಂತುಕಙ್ಗಳಾಯ್**-ಇಂತಹ ಯಾದೃಚ್ಛಿಕ ಸುಕೃತ ಮೂಲಕ ಮಧ್ಯೆ ಬಂದವುಗಳಾಗಿ, **ಇರುಕ್ಕುಮ್** - ಇರುತ್ತದೆ. ಇದಕ್ಕೆ ಕ್ಷತ್ರ ಬಂಧ ವು ನಿದರ್ಶನವು. ಇಲ್ಲಿ ಪ್ರಹ್ಲಾದ ಮೊದಲಾದವರಿಗೆ ಬಂದಿರುವದು ಹುಟ್ಟು ವಾಗಲೇ ಎಂಬ ಭಾವವು. ಪ್ರಹ್ಲಾದನು ಜನ್ಮತಃ ರಾಕ್ಷಸನಾದುದರಿಂದ ಈತನಿಗೆ ಉಂಟಾಗಿರುವ ಸಾತ್ವಿಕಾಧಿಕ್ಯವು ಜನ್ಮಕ್ಕೆ ಮೊದಲೇ ಏರ್ಪಟ್ಟದುದ ರಿಂದ ಜನ್ಮಸಿದ್ಧವೆಂಬ ಪ್ರಯೋಗವು. ಹಾಗೆಯೇ ವಿಭೀಷಣನೂ ಜನ್ಮತಃ ರಾಕ್ಷಸನು ; ಆಂಜನೇಯನು ಜನ್ಮತಃ ತಿರ್ಯಙ್, ಶಬರಿಯು, ಜನ್ಮತಃ ಶಬರ

ಕ್ಕುಮ್ ಸಂಭಾವಿತಙ್ಗಳಾಯ್, ಪ್ರಹ್ಲಾದಿಗಳುಕ್ಕು ಜನ್ಮಸಿದ್ಧಙ್ಗಳಾಯ್ ನೀಕ್ಕಿಯುಳ್ಳಾರ್ಕ್ಕು ಆಚಾರ್ಯಾದಿ ಸಂಬಂಧ ಹೇತುಕ್ಕಳಾಲೇ ಆಗಂತುಕಙ್ಗಳಾಯಿರುಕ್ಕುಮ್.

೨. ಇದಿಲ್ ಶಾರೀರಜಾತಿ ವಿಶೇಷಙ್ಗಳೈ ಇಟ್ಟು ಶಿಲಶಾಸ್ತ್ರಙ್ಗಳ್ ನಿಯತಙ್ಗಳಾಮ್. ಮಾನಸಮಾನ ಬ್ರಾಹ್ಮಣ್ಯಾದಿಗಳೈ ಯಿಟ್ಟು ಅವತ್ತುಕ್ಕೆ

---

ಜಾತಿಯವಳು ; ವಿದುರನು, ಶೂದ್ರನು ; ಪ್ರಹ್ಲಾದ, ಆಂಜನೇಯ ವಿದುರಾದಿಗಳಿಗೆ ಬಂದಿರುವ ಸಾತ್ವಿಕಭಾವವು ಹುಟ್ಟುವಾಗಲೇ ; ವಿಭೀಷಣನಿಗೆ ಚತುರ್ಮುಖನ ವರಪ್ರಸಾದದಿಂದುಂಟಾದುದು ; ಶಬರಿಗೆ ಗುರುವಾದ ಮತಂಗ ಋಷಿಯ ಅನುಗ್ರಹದಿಂದಾದುದರಿಂದ ಆಚಾರ್ಯಸಂಬಂಧದಿಂದುಂಟಾದುದು ; ಕ್ಷತ್ರಬಂಧುವಿಗೆ ಮಾನಸ ಬ್ರಾಹ್ಮಣ್ಯ ಉಂಟಾಗುವದಕ್ಕೆ ನಾರದಮಹರ್ಷಿಯ ಸಂಬಂಧವು. ಜಾನಶ್ರುತಿಗೆ ಮಾನಸ ಬ್ರಾಹ್ಮಣ್ಯ ಉಂಟಾಗುವದಕ್ಕೆ ರೈಕ್ವರ ಸಂಬಂಧವು. ಹೀಗೆ ಅನೇಕ ಹೀನಜಾತಿಯರಿಗೆ ಸತ್ವೋದ್ರೇಕದಿಂದ ಮಾನಸ ಬ್ರಾಹ್ಮಣ್ಯವುಂಟಾಗಲು ಆಚಾರ್ಯ ಸಂಬಂಧವೇ ಹೇತುವು. ಆದುದರಿಂದ ಆಗಂತುಕವೆಂಬ ಭಾವವು. ಜನ್ಮವು ಹೀನಜನ್ಮದಲ್ಲಿಯಾದುದರಿಂದ ಜನ್ಮತಃ ಅಲ್ಲದೆ ಆಗಂತುಕವೆಂಬ ಭಾವವು. ಹೀಗೆ ಹೇಳಿದುದರಿಂದ ಪೂರ್ವಜನ್ಮ ಪ್ರಾಪ್ತವಾದ ಸುಕೃತವು ವ್ಯಾವರ್ತಿಸಲ್ಪಡಲಿಲ್ಲವೆಂದು ಭಾವಿಸತಕ್ಕದ್ದು.

೨. ಮುಂದೆ ಅವರುಗಳಿಗೆ ಆಚಾರ ವ್ಯವಸ್ಥೆ ಹೇಗೆ ಎಂಬುದನ್ನು ತಿಳಿಸುತ್ತಾರೆ—ಶಾರೀರ ಬ್ರಾಹ್ಮಣ್ಯಾದಿಗಳನ್ನು ಕುರಿತೇ, ಶಾಸ್ತ್ರಗಳಲ್ಲಿ ಆಚಾರಗಳು ಆಯಾಜಾತಿಗಳಿಗೆ ನಿಯತವಾಗಿ ಹೇಳಲ್ಪಟ್ಟಿವೆ. ಇವು ತಪ್ಪಿದ್ದೂ ಅಲ್ಲವು, ಬದಲಾಯಿಸಲೂ ಸಾಧ್ಯವಲ್ಲವು. ಮಾನಸ ಬ್ರಾಹ್ಮಣ್ಯಾದಿಗಳು, ಬೇರೆ ಜಾತಿಗಳಲ್ಲೂ ಆಗಂತುಕವಾಗಿ ಬರುವಂತವು ; ಆದುದರಿಂದ, ಈ ಬ್ರಾಹ್ಮಣ್ಯಾದಿ ಆಚಾರಗಳು ಅನ್ವಯಿಸುವದಿಲ್ಲವು ಅವರಿಗೆ ಹೆಚ್ಚಿನ ಪುರುಷಾರ್ಥಗಳ ಪ್ರಾಪ್ತಿಯೂ ಉಂಟು. ತನ್ಮೂಲಕ ಪ್ರಶಂಸೆಯೂ ಉಂಟು. ಜನ್ಮತಃ ಪ್ರಾಪ್ತವಾದ ಜಾತಿಗೆ ವ್ಯತ್ಯಸ್ತವಾದ ಆಚಾರಗಳು ಎಂದಿಗೂ ಅನ್ವಯಿಸುವದಿಲ್ಲವೆಂದು ಉಪದೇಶಿಸುತ್ತಾರೆ—ಇದಿಲ್-ಇವೆರಡು ಬ್ರಾಹ್ಮಣ್ಯಾದಿಗಳಲ್ಲಿ, ಶಾರೀರ ಜಾತಿವಿಶೇಷಙ್ಗಳೈ ಇಟ್ಟು-ಶಾರೀರ ಬ್ರಾಹ್ಮಣ್ಯಾದಿಗಳನ್ನು ಅನುಸರಿಸಿ, ಶಿಲ ಶಾಸ್ತ್ರಙ್ಗಳ್-ಕೆಲವು ಶಾಸ್ತ್ರಗಳು ಎಂದರೆ ಅವುಗಳಲ್ಲಿ ಹೇಳಿರುವ ಆಚಾರಗಳು, ನಿಯತಙ್ಗಳಾಮ್ - ವ್ಯವಸ್ಥಿತವಾದವುಗಳು. ಜನ್ಮತಃ ಬಂದು ಮರಣದೊಂದಿಗೆ ಹೋಗುವ ಬ್ರಾಹ್ಮಣ್ಯಾದಿ ಜಾತಿಗಳಿಗೆ ಇವುಗಳು ಆಚಾರಗಳೆಂದು ಶಾಸ್ತ್ರಗಳಲ್ಲಿ

**ಅನುರೂಪವಾನ ಪುರುಷಾರ್ಥ ತದುಪಾಯಙ್ಗಳುಮ್ ಪ್ರಶಂಸಾದಿಗಳುಮ್ ಸರ್ವಜಾತಿಯಿಲುಮ್ ಸಂಭಾವಿತಙ್ಗಳಾಮ್.**

**ಮಾನಸಬ್ರಾಹ್ಮಣ್ಯಾದೌ ನಿಂದಾಪ್ರಶಂಸಯೋಃ ಕಥನಂ**

---

**ಇದಿಲ್ ಬ್ರಾಹ್ಮಣಾದಿಗಳ್ ಪಕ್ಕಲಿಲೇ ಮಾನಸ ವಿಪರೀತಾಕಾರಙ್ಗಳ್**

---

ಏರ್ಪಟ್ಟವೆ. ಆದುದರಿಂದ ಅವುಗಳೇ ಅನುಷ್ಠೇಯಗಳೇ ವಿನಾ, ಅವುಗಳನ್ನು ಎಂದಿಗೂ ಬದಲಾಯಿಸಕೂಡದೆಂಬ ಭಾವವು; ಹಾಗೆ ಬದಲಾಯಿಸಿದರೆ **"ಶ್ರುತಿ ಸ್ಮೃತಿ ರ್ಮಮೈವಾಜ್ಞಾ"** ಎಂಬಲ್ಲಿ ಹೇಳಿರುವಹಾಗೆ **ಅವುಗಳನ್ನುಲ್ಲಂಘಿಸುವದ** ರಿಂದ ಆಜ್ಞಾಚ್ಛೇದಿಯಾಗಿ ಭಗವನ್ನಿಗ್ರಹಕ್ಕೆ ಗುರಿಯಾಗುವನೆಂಬ ಅಭಿಪ್ರಾಯವೂ, **ನಿಯತಙ್ಗಳ್** ಎಂಬ ಪ್ರಯೋಗದಿಂದ ದ್ಯೋತಿತವು. **ಮುಂದೆ** ಮಾನಸ ಬ್ರಾಹ್ಮಣ್ಯಾದಿಗಳಿಂದ ಆಚಾರ ಭೇದವೇನೂ **ಉಂಟಾಗುವದಿಲ್ಲವು;** **ಆದರಿಂದುಂಟಾಗುವ** ಲಾಭವೇನು ಎಂದರೆ, ಹೆಚ್ಚಿನ **ಪುರುಷಾರ್ಥ ಪ್ರಾಪ್ತಿಯೂ** ಅದಕ್ಕೆ ಬೇಕಾದ ಸಾಧನವೂ, ಆಕಾರಣದಿಂದುಂಟಾಗುವ ಪ್ರಶಂಸೆಯೇ **ಮೊದ** ಲಾದವುಗಳೆಂದು ಹೇಳುತ್ತಾರೆ—**ಮಾನಸವಾನ ಬ್ರಾಹ್ಮಣ್ಯಾದಿಗಳ್ಕ್ಕು ಯಿಟ್ಟು**-ಮಾನಸ ಬ್ರಾಹ್ಮಣ್ಯಾದಿಗಳ ಮೂಲಕವಾಗಿ, **ಆದಿ** ಪದವು ಕ್ಷತ್ರಿಯತ್ವಾದಿಗಳನ್ನು ಸೂಚಿಸುತ್ತದೆ, **ಅನತ್ತುಕ್ಕು ಅನುರೂಪವಾನ**-ಅವುಗಳಿಗೆ ಅನುರೂಪವಾದ, **ಪುರುಷಾರ್ಥ**ವೇನು, ಅವುಗಳನ್ನು ಹೊಂದುವ ಸಾಧನವೇನು, **ಪ್ರಶಂಸಾದಿಗಳುಮ್**-**"ನ ಶೂದ್ರಾ ಭಗವದ್ಭಕ್ತಾಃ"** ಇತ್ಯಾದಿಗಳಲ್ಲಿ ಹೇಳಿರುವ ಹಾಗೆ ಅವುಗಳಿಂದುಂಟಾಗುವ ಮಹಿಮೆ ಮೊದಲಾದವುಗಳೇನು, ಭಾಗವತಗೋಷ್ಠಿಯಿಂದ ಸನ್ಮಾನವೇನು ಇವು ಹೇಳಲ್ಪಟ್ಟವು, **ಸರ್ವಜಾತಿಯಿಲುಮ್**-ಬ್ರಾಹ್ಮಣಾದಿ **ನಾಲ್ಕು** ಜಾತಿಗಳಲ್ಲೂ, **ಸಂಭಾವಿತಙ್ಗಳಾಮ್** - ಉಂಟಾಗಬಹುದು, ಶಾರೀರಸಂಬಂಧ ಬ್ರಾಹ್ಮಣ್ಯಾದಿಗಳಲ್ಲಾದರೋ ಆಚಾರಗಳು ಆಯಾಯಾಜಾತಿಗೆ ಮಾತ್ರ ನಿಯತವು. ಮಾನಸ ಬ್ರಾಹ್ಮಣ್ಯವಾದರೋ ಎಲ್ಲಾ ಜಾತಿಯಲ್ಲೂ ಉಂಟಾಗ ಬಹುದೆಂದು ಹೇಳಿದರು.

**ಮಾನಸಬ್ರಾಹ್ಮಣ್ಯಾದಿಗಳಲ್ಲಿ ನಿಂದಾಪ್ರಶಂಸಗಳ ಕಥನವು.**

---

ಮುಂದೆ ಉತ್ತಮ ವರ್ಣದವನಿಗೆ ಬರುವ **ಶೂದ್ರತ್ವಾದಿ**ಗಳು ನಿಂದ್ಯವೆಂದೂ ಕೀಳುವರ್ಣದವನಿಗೆ ಬರುವ ಬ್ರಾಹ್ಮಣ್ಯಾದಿಗಳು ಪ್ರಶಂಸಾವಹವೆಂದೂ **ಹೇಳುತ್ತಾರೆ. ಇದಿಲ್** - ಈ ಮಾನಸ ಬ್ರಾಹ್ಮಣ್ಯಾದಿಗಳಲ್ಲಿ, **ಬ್ರಾಹ್ಮಣಾದಿಗಳ ಪಕ್ಕಲಿಲೇ** - ಜನ್ಮತಃ ಬ್ರಾಹ್ಮಣನಾಗಿ ಹುಟ್ಟಿರುವನ ವಿಷಯದಲ್ಲಿ, **ಮಾನಸ**

**ವನ್ನಾಲ್, ಶಮದಮಾದಿ ಯೋಗ್ಯಮಾಗ ಶಾಸ್ತ್ರಸಿದ್ಧಮಾನ ಜನ್ಮತ್ತಿಲೇ ಪಿರನ್ದು ತಪ್ಪಿನಾನೆನ್ರು ಮಿಗುವುಮ್ ನಿಂದೈ ನಡಕ್ಕುಮ್. ಜಾತ್ಯನ್ತರಜ್ಞ**

---

**ವಿಪರೀತಾಕಾರಙ್ಗಳ್** - ಮನಸ್ಸಂಬಂಧವಾದ ಬ್ರಾಹ್ಮಣನಿಗೆ ವಿರುದ್ಧವಾಗಿ ಶೂದ್ರಾದಿ ತಮೋನಿಷ್ಠರ ಭಾವಗಳು, **ವನ್ನಾಲ್** - ಪ್ರಾಪ್ತವಾದರೆ, **ಶಮದಮಾದಿಯೋಗ್ಯಮಾಗ** - ಬಾಹ್ಯೇಂದ್ರಿಯ ಅಂತರಿಂದ್ರಿಯ ನಿಗ್ರಹವೇ ಮೊದಲಾದವುಗಳಿಗೆ ಉಚಿತವಾದ ಶಾಸ್ತ್ರಸಿದ್ಧವಾದ, **ಜನ್ಮತ್ತಿಲೇ ಪಿರನ್ದು** - ಅಂತಹ ಜನ್ಮದಲ್ಲಿ ಹುಟ್ಟಿಯೂ ಕೂಡ, **ತಪ್ಪಿನಾನೆನ್ರು**-ಉಚಿತವಾದ ಸ್ಥಿತಿಯನ್ನು ಅತಿಕ್ರಮಿಸಿದನೆಂದು, **ನಿಂದೈನಡಕ್ಕುಮ್** – ನಿಂದೆಯು ನಡೆಯುವನು, ಎಂದರೆ ನಿಂದೆಯು ಉಂಟಾಗುತ್ತದೆಂಬ ಭಾವವು. ಅಂತಹ ಬ್ರಾಹ್ಮಣನನ್ನು ಶೂದ್ರನೆಂದು ಭಾವಿಸಿ ನಿಂದಿಸುವರು. ಬ್ರಾಹ್ಮಣನು ಭಗವಂತನಲ್ಲಿ ಭಕ್ತನಾಗಿರಬೇಕು, ಅಭಕ್ತನಾದರೆ, **ಸರ್ವವರ್ಣೇಷುತೇ ಶೂದ್ರಾಃ ಯೇಹ್ಯಭಕ್ತಾ ಜನಾರ್ದನೇ** ಎಂದು ಹೇಳಿರುವಹಾಗೆ ಶೂದ್ರನೆಂದು ನಿಂದಿಸಲ್ಪಡುವನು. ಬ್ರಾಹ್ಮಣನಿಗೆ ಯೋಗ್ಯವಾದ ಸ್ವಭಾವವು ಶಮ ದಮಾದಿಗಳು, ಆದಿ ಶಬ್ದದಿಂದ ಮುಂದೆ ಹೇಳುವವೆಲ್ಲವೂ ಗ್ರಹಿಸಲ್ಪಟ್ಟವು. **"ವಿದ್ಯತೇ ಬ್ರಾಹ್ಮಣೇದಮಃ"**(ರಾಮಾ.೧೮-೧೬.೯) ಬ್ರಾಹ್ಮಣನೆಂದ ನಂತರ ಆತನಲ್ಲಿ ಸ್ವಲ್ಪಮಟ್ಟಿಗೆ ಮನೋನಿಗ್ರಹವು ಉಂಟೇ ಉಂಟು ಎಂದು ಹೇಳಲ್ಪಟ್ಟಿರುತ್ತದೆ. ಗೀತೆಯಲ್ಲಿ (೧೮-೪೨)**"ಶಮೋ ದಮಸ್ತಪಶ್ಶೌಚಂ ಕ್ಷಾಂತಿ ರಾರ್ಜವ ಮೇವಚ । ಜ್ಞಾನಂ ವಿಜ್ಞಾನ ಮಾಸ್ತಿಕ್ಯಂ ಬ್ರಾಹ್ಮಂ ಕರ್ಮ ಸ್ವಭಾವಜಂ"** ಇವುಗಳೆಲ್ಲಾ ಬ್ರಾಹ್ಮಣನಿಗೆ ಸಹಜವಾದ ಆಕಾರಗಳು. **ಶಮ**ವೆಂದರೆ ಬಾಹ್ಯೇಂದ್ರಿಯಗಳ ನಿಯಮನವು. **ದಮ**ವೆಂದರೆ ಅಂತರಿಂದ್ರಿಯ ನಿಯಮನವು. ಭೋಗವನ್ನು ತಡೆಯುವ ಶಾಸ್ತ್ರಸಿದ್ಧವಾದ ಕಾಯಕ್ಲೇಶವು ತಪಸ್ಸೆನಿಸುತ್ತದೆ. **ಶೌಚಂ** - ಶಾಸ್ತ್ರೀಯ ಕರ್ಮಕ್ಕೆ ಯೋಗ್ಯತೆಯುಳ್ಳವನಾಗಿ ಶುಚಿರ್ಭೂತನಾಗಿರುವಿಕೆಯು. **ಕ್ಷಾನ್ತಿಃ** - ಇತರರಿಂದ ತೊಂದರೆಯುಂಟಾದರೂ ಸಹಿಸಿಕೊಳ್ಳೋಣವು. **ಆರ್ಜವಂ** - ಋಜುವಾಗಿರುವಿಕೆ ಎಂದರೆ ಮನಸ್ಸಿನಲ್ಲೂ ಬಾಹ್ಯವ್ಯಾಪಾರದಲ್ಲೂ ಒಂದೇವಿಧವಾಗಿರುವಿಕೆ, **ಜ್ಞಾನಂ** - ಪರಾವರತತ್ವಗಳ ವಿಷಯವಾದ ಯಥಾರ್ಥಜ್ಞಾನವು, **ವಿಜ್ಞಾನಂ** - ಪರತತ್ವಕ್ಕೆ ಮಾತ್ರವೇ ಅಸಾಧಾರಣವಾಗಿರುವ ವಿಶೇಷಗಳ ಜ್ಞಾನವು. **ಆಸ್ತಿಕ್ಯಂ** - ವೇದ ಪರಮಾತ್ಮ ಮೊದಲಾದವುಗಳಲ್ಲಿ ಸತ್ಯವೆಂಬ ನಿಶ್ಚಯವಾದ ಅಚಾಲ್ಯವಾದ ಜ್ಞಾನವು. ಇವೆಲ್ಲಾ ಬ್ರಾಹ್ಮಣನಿಗೆ ಸ್ವಭಾವಸಿದ್ಧವಾದ ಕರ್ಮಗಳು ಎಂದು ಹೇಳಲ್ಪಟ್ಟಿರುತ್ತದೆ. ಬ್ರಾಹ್ಮಣನಿಗೆ ಮುಖ್ಯವಾಗಿ ಬುದ್ಧಿಯು ಸಾತ್ವಿಕವಾದುದಾಗಿರತ

ಳಿಲೇ ಪಿರನ್ದು ಗುಣೋತ್ತರನಾಯ್ ಪ್ಪೋನ್ದಾನಾಗಿಲ್ (೧) "ಏತೈಸ್ಸವೇ (ತಃ)ತೈ ಶ್ಶೂದ್ರೋಽಪಿ ವಾರ್ಧಕೇ ಮಾನಮರ್ಹತಿ"ಇತ್ಯಾದಿಗಳಿರ್ಪಡಿಯೇ ಪ್ರಶಂಸೈ ಮಿಗವುಮ್ ನಡಕ್ಕುಮ್.

---

ಕ್ಕದ್ದು. "ಪ್ರವೃತ್ತಿಂಚ ನಿವೃತ್ತಿಂಚ ಕಾರ್ಯಾಕಾರ್ಯೇಭಯಾ ಭಯೇ। ಬಂಧಂ ಮೋಕ್ಷಂಚ ಯೋವೇತ್ತಿ ಬುದ್ಧಿಸ್ಸಾಪಾರ್ಥಸಾತ್ವಕೀ॥ (ಗೀ. ೧೮. ೩೦) ಐಹಿಕಾಭ್ಯುದಯಕ್ಕೆ ಸಾಧನವಾದ ಧರ್ಮವನ್ನೂ, ಮೋಕ್ಷಸಾಧನಭೂತ ಧರ್ಮವನ್ನೂ, ಇದು ಅವಶ್ಯಮಾಡತಕ್ಕದ್ದು ಇದು ಬಿಡತಕ್ಕದ್ದೆಂಬುದನ್ನೂ, ಶಾಸ್ತ್ರಾತಿಕ್ರಮ ಹೇಗೆ, ಶಾಸ್ತ್ರಾನುಗುಣವಾಗಿ ನಡೆಯೋಣ ಹೇಗೆ, ಸಂಸಾರ ಬಂಧವು ಹೇಗೆ, ಅದರಿಂದ ಬಿಡುಗಡೆಯೂ ಹೇಗೆ, ಇವುಗಳನ್ನೆಲ್ಲಾ ಯಾವನು ತಿಳಿಯುವನೋ ಅವನ ಬುದ್ಧಿಯು ಸಾತ್ವಿಕ ಬುದ್ಧಿಯು ಎಂದು ಗೀತೆಯಲ್ಲಿ ಹೇಳಲ್ಪಟ್ಟಿರುತ್ತದೆ. ಇಂತಹ ಜ್ಞಾನವನ್ನು ಹೊಂದಲು ಯೋಗ್ಯವಾದ ಜನ್ಮದಲ್ಲಿ ಹುಟ್ಟಿದ್ದರೂ, ಅದರಲ್ಲಿ ಮಮತೆಯಿಲ್ಲದೆ ಮಾರ್ಗವನ್ನು ತಪ್ಪಿದರೆ, ಬ್ರಾಹ್ಮಣನು ನಿಂದ್ಯನಾಗುವದರಿಂದ ಶೂದ್ರನೆಂದು ಹೇಳಲ್ಪಟ್ಟಿರುವನು. ಇಂತಹ ಜ್ಞಾನಗಳಿಲ್ಲದವನು, ಶೂದ್ರನು ಹೇಗೆ ನಿಂದ್ಯನೋ, ಹಾಗೆ ನಿಂದ್ಯನೆಂಬ ಭಾವವು. ಹಾಗಲ್ಲದೆ ಜಾತ್ಯಂತರಂಗಳಿಲೇ-ಬ್ರಾಹ್ಮಣನಲ್ಲದೆ ಬೇರೆ ಜಾತಿಯಲ್ಲಿ, ಪಿರನ್ದು-ಹುಟ್ಟಿ, ಗುಣೋತ್ತರನಾಯ್ ಪ್ಪೋನ್ದಾನಾಗಿಲ್ - ಶ್ರೇಷ್ಠವಾದ ಸತ್ತ್ವೋದ್ರೇಕವುಳ್ಳ ಗುಣವುಳ್ಳವನಾಗಿ ಹೋದರೆ, ಹಾಗೆ ಸತ್ವಾಧಿಕ್ಯವಿರುವದರಿಂದ ಗುರುಜನದಲ್ಲಿ ವಿಶ್ವಾಸವೂ, ಅಭಿಮುಖ್ಯವೂ ಮತ್ತು ಅವರನ್ನಾಶ್ರಯಿಸಿ, ಉಪದೇಶ ಹೊಂದಿ ಭಾಗವತ ಪ್ರವೃತ್ತಿಯುಳ್ಳವನಾದರೆ "ಏತೈಸ್ಸವೇತಃ - ಶಾಂತ್ಯಾದಿ ಇವುಗಳಿಂದ ಸೇರಿದ ಎಂದರೆ ಹಿಂದೆ ಉಪಪಾದಿಸಲ್ಪಟ್ಟ ಆತ್ಮಗುಣಗಳಿಂದ ಸೇರಿದ ಶೂದ್ರೋಽಪಿ - ಶೂದ್ರನೂ ಕೂಡ, ವಾರ್ಧಕೇ - ಮುಪ್ಪಿನ ದೆಶೆಯಲ್ಲಿ, ಮಾನಮರ್ಹತಿ – ಸನ್ಮಾನವನ್ನು ಹೊಂದಲು ಯೋಗ್ಯನು, ಇತ್ಯಾದಿಗಳಿರ್ಪಡಿಯೇ ಇವೇ ಮೊದಲಾದ ಪ್ರಮಾಣಗಳಲ್ಲಿ ಹೇಳಿರುವಹಾಗೆ, ಪ್ರಶಂಸೆ ಮಿಗವುಮ್ ನಡಕ್ಕುಮ್ - ಶ್ಲಾಘ್ಯತೆಯು ಹೆಚ್ಚಾಗಿ ನಡೆಯುತ್ತದೆ.

ಹಿಂದಿನ ವಾಕ್ಯದಲ್ಲಿ ಶಾರೀರ ಬ್ರಾಹ್ಮಣನು ಹೇಗೆ ತನ್ನ ಸ್ವಧರ್ಮಗಳನ್ನು ತ್ಯಜಿಸಿ ನಿಂದ್ಯನಾಗಬಹುದೆಂಬುದನ್ನೂ, ಹೇಗೆ ಬ್ರಾಹ್ಮಣೇತರನು ಮಾನಸ ಬ್ರಾಹ್ಮಣ್ಯವನ್ನು ಹೊಂದಿ ಶ್ಲಾಘನೀಯನಾಗಬಹುದೆಂದು ತಿಳಿಸಿದರು. ಮಾನಸ ಬ್ರಾಹ್ಮಣ್ಯವು ತನಗುಂಟು ಎಂದು ಅಹಂಕಾರಯುಕ್ತನಾದರೆ ಅನರ್ಥ ಉಂಟಾಗುತ್ತ

---

(೧) ಯಾಜ್ಞವಲ್ಕ್ಯ ಸ್ಮೃತಿ.

ಈದೃಶ ಪ್ರಶಂಸಾ ಗರ್ವಯುಕ್ತಾ ಚೇತ್ ಅನರ್ಥಾವಹಾ,
ಕಾರ್ಪಣ್ಯಯುಕ್ತಾ ಚೇತ್ ಪುರುಷಾರ್ಥಸಾಧಿಕಾ.

ಇವತ್ತಿಲಃ ಶಾರೀರವಾಯಃವ್ ಮಾನಸವಾಯುಮ್ ವರುಮುತ್ಕರ್ಷಂ ಗರ್ವಹೇತುವಾವಾಗಿಲ್ ಅನರ್ಥಕರವಾಮ್. ಇವ್ವಿರಣ್ಡು

ದೆಂದೂ, ಅದರಲ್ಲೂ ತನಗೆ ಶಾರೀರ ಮಾನಸ ಎರಡು ವಿಧವಾದ ಉತ್ಕರ್ಷವಿದ್ದುದಾದರೆ ಅಹಂಕಾರವು ಇನ್ನೂ ಹೆಚ್ಚಬಹುದು; ಆಗ ತುಂಬಾ ಅನರ್ಥಕ್ಕೆ ಕಾರಣವಾಗಬಹುದೆಂದೂ, ಅಹಂಕಾರಕ್ಕೆ ಬದಲಾಗಿ ಕಾರ್ಪಣ್ಯ ವಿದ್ದುದಾದರೆ ಉಪಾಯಾನುಷ್ಠಾನಮೂಲಕ ಪುರುಷಾರ್ಥ ಸಿದ್ಧಿಗೆ ಉಪಕಾರಕವಾಗುತ್ತದೆಂದೂ, ಮುಂದೆ ಉಪದೇಶಿಸುತ್ತಾರೆ.

**ಇಂತಹ ಪ್ರಶಂಸೆಯು ಗರ್ವಯುಕ್ತವಾದರೆ ಅನರ್ಥಕ್ಕೂ, ಕಾರ್ಪಣ್ಯಯುಕ್ತವಾದರೆ ಪುರುಷಾರ್ಥ ಪ್ರಾಪ್ತಿಗೂ, ಕಾರಣವಾಗುತ್ತದೆ.**

ಇವತ್ತಿಲ್ - ಈ ಪ್ರಶಂಸಾನಿಂದೆಗಳನ್ನುಂಟುಮಾಡುವ ಶಾರೀರಮಾನಸ ಬ್ರಾಹ್ಮಣ್ಯಗಳಲ್ಲಿ, ಶಾರೀರ ಸಂಬಂಧವಾಗಿಯೂ, ಮಾನಸವಾಗಿಯೂ, ವರುಮ್ ಉತ್ಕೃರ್ಷಂ - ಬರುವ ಶ್ಲಾಘ್ಯತೆಯು, ಗರ್ವಹೇತುವಾವಾಗಿಲ್-ಗರ್ವಕ್ಕೆ ಕಾರಣಭೂತವಾದರೆ, ಎಂದರೆ ಜನ್ಮತಃ ತಾನು ಬ್ರಾಹ್ಮಣನು, ಉತ್ಕೃಷ್ಟವಂಶದಲ್ಲಿ ಜನಿಸಿದವನು, ಮಾನಸಬ್ರಾಹ್ಮಣ್ಯವೂ ತನಗುಂಟು, ಆ ಕಾರಣದಿಂದ ತಾನು ಮಹಾ ಭಾಗವತನೆಂಬ ಗರ್ವ ಉಂಟಾದರೆ, ಅನರ್ಥಕರವಾಮ್ - ಅನರ್ಥವನ್ನುಂಟುಮಾಡುವದಾಗುತ್ತದೆ. ಇವಕ್ಕೆ ದೃಷ್ಟಾಂತವು ಅಜಗರೋಪಾಖ್ಯಾನವು. ನಹುಷರಾಯನು ಇಂದ್ರಪದವಿಯನ್ನು ತನ್ನ ಯಜ್ಞ ಯಾಗಾದಿಬಲದಿಂದ ಪಡೆದುದರಿಂದ, ಶಚೀಪತಿತ್ವವೂ ತನಗೆ ಬರತಕ್ಕದೆಂದು ದುರಾಶೆಯಿಂದ ಪ್ರೇರಿತನಾಗಿ, ಮಹಾ ಪತಿವ್ರತೆಯಾದ ಶಚೀದೇವಿಯನ್ನುಪತ್ನಿಯಾಗಬೇಕೆಂದು ನಿರ್ಬಂಧಿಸಲು; ಆಗ ಆಕೆಯು ಬೃಹಸ್ಪತಿಯ ಬುದ್ಧಿವಾದಾನುಸಾರ, ಮಹರ್ಷಿಗಳೇ ವಾಹಕರಾಗಿರುವ ಪಲ್ಲಕ್ಕಿಯಲ್ಲಿ ಕೂತು ಬಂದರೆ ಆಗಬಹುದೆಂದು ಮಾತನ್ನು ಕೊಡಲು; ಆಗ ನಹುಷನು ತನಗೆ ಪ್ರಾಪ್ತವಾಗಿರುವ ಸರ್ವೋತ್ಕರ್ಷದಿಂದ ಮದಿಸಿದವನಾಗಿ, ಮಹರ್ಷಿಗಳು ತನ್ನ ಪಲ್ಲಕ್ಕಿಯನ್ನು ಹೊರುವಹಾಗೆ ಮಾಡಿ, ಕಾಲಿನ ಕಡೆಯಿದ್ದ ಅಗಸ್ತ್ಯಋಷಿಯನ್ನು, ಕಾಮಾತುರನಾಗಿ ಶಚೀದೇವಿಯಲ್ಲಿಗೆ ಬೇಗಹೋಗುವ ಅವಸರದಿಂದ ಕಾಲಿನಿಂದ ತಿವಿದು ಸರ್ಪ, ಸರ್ಪ, ಬೇಗ ಹೋಗು ಬೇಗ ಹೋಗು, ಎಂದು ಗದರಿಸಲು; ಆಗ ಸರ್ಪವೆಂದು ಹೇಳಿ ಬ್ರಹ್ಮವಿತ್ತಿನ ದೇಶಿ

ಯಿಂದ ಅಪರಾಧಕ್ಕೆ ಗುರಿಯಾದುದರಿಂದ ಸರ್ಪವಾಗೆಂದು ಶಾಪವನ್ನು ಕೊಟ್ಟ ದುದರಿಂದ ದೊಡ್ಡ ಅಜಗರ ಜನ್ಮವನ್ನೆತ್ತಿದನು. ಆದರೆ ನಹುಷನಿಗೆ ಜ್ಞಾನೋದಯ ಉಂಟಾಗಿ ವಿಶಾಪವನ್ನು ಬೇಡಿದುದರಿಂದ, ಯುಧಿಷ್ಠಿರನ ಸಂಬಂಧ ಉಂಟಾದಾಗ ನಿನಗೆ ಶಾಪವಿಮೋಚನೆಯಾಗುತ್ತದೆಂದು ಮಹರ್ಷಿಯು ಅನುಗ್ರಹ ಮಾಡಿದರೆಂಬ ವೃತ್ತಾಂತವನ್ನು ನಿದರ್ಶನವಾಗಿ ಭಾವಿಸ ಬಹುದು. ಅಜಗರನು ಭೀಮನನ್ನು ಹಿಡಿದುಕೊಂಡು, ಯುಧಿಷ್ಠಿರನೊಂದಿಗೆ ಉಕ್ತಿ ಪ್ರತ್ಯುಕ್ತಿಗಳು ನಡೆದಾಗ ಈ ಜಾತಿವ್ಯವಸ್ಥಾ ವಿಷಯವು ಬಹುಸ್ವಾರಸ್ಯವಾಗಿ ಉಪಪಾದಿತವು. "ಬ್ರಾಹ್ಮಣಃ ಕೋಭವೇತ್" ಯಾರು ಬ್ರಾಹ್ಮಣನು ಎಂಬುದು ಸರ್ಪ ಪ್ರಶ್ನೆಯು ಅದಕ್ಕೆ ಯುಧಿಷ್ಠಿರರ ಉತ್ತರವು.—"ಸತ್ಯಂ ದಾನಂ ಕ್ಷಮಾ ಶೀಲ ಮಾನೃಶಂಸ್ಯಂ ತಪೋಘೃಣಾ । ದೃಶ್ಯಂತೇ ಯತ್ರ ನಾಗೇಂದ್ರ ಸ ಬ್ರಾಹ್ಮಣ ಇತಿ ಸ್ಮೃತಃ" ಎಂಬದಾಗಿ. ಇದರ ತಾತ್ಪರ್ಯವೇನೆಂದು ಬ್ರಾಹ್ಮಣನಾಗಿ ಹುಟ್ಟಿದುದಕ್ಕೆ ಅನುಗುಣವಾಗಿ ಇಂತಹ ವೃತ್ತಗಳಿದ್ದರೆ ಅವನೀಗ ಸರಿಯಾದ ಬ್ರಾಹ್ಮಣನು, ಇಲ್ಲದಿದ್ದರೆ ಅಲ್ಲವು ಎಂಬರ್ಥವು. ಇದನ್ನು ಸರಿಯಾಗಿ ಗ್ರಹಿಸದೆ ಬ್ರಾಹ್ಮಣ ಲಕ್ಷಣವಿಲ್ಲದವನು ಬ್ರಾಹ್ಮಣನಾಗಿದ್ದರೂ ಬ್ರಾಹ್ಮಣನಲ್ಲವು, ಅವನು ಶೂದ್ರನು ಎಂದು ತಿಳಿದು, ಹಾಗಾದರೆ ಜಾತಿಯು ವೃಥಾ ಎಂದು ಭಾವಿಸತಕ್ಕದ್ದೇ ಎಂದು ಸರ್ಪನು ಕೇಳಲು; ಅದಕ್ಕೆ ಪ್ರತ್ಯುತ್ತರವಾಗಿ ಯುಧಿಷ್ಠಿರರು ಹೇಳುತ್ತಾರೆ.—"ಜಾತಿರತ್ರ ಮಹಾಸರ್ಪ ಮನುಷ್ಯತ್ವೇ ಮಹಾಮತೇ। ಸಂಕರಾತ್ಸರ್ವವರ್ಣಾನಾಂ ದುಷ್ಪರೀಕ್ಷ್ಯೇತಿ ಮೇ ಮತಿಃ" ಜಾತಿಸಂಕರವುಂಟಾಗಿ ತನ್ಮೂಲಕ ಉಂಟಾಗುವ ಅನರ್ಥಗಳನ್ನು ತಪ್ಪಿಸುವದಕ್ಕಾಗಿ ಜಾತಿವ್ಯವಸ್ಥೆಯಿಂದ ಬ್ರಾಹ್ಮಣನಿಗೆ ಜಾತಕರ್ಮ ಉಪನಯನಾದಿಗಳು ಹೇಳಲ್ಪಟ್ಟಿವೆ; ಆದರೆ, ಅದರಲ್ಲಿ ತತ್ವದರ್ಶಿಗಳು ಶೀಲಕ್ಕೆ ಪ್ರಾಧಾನ್ಯವನ್ನು ಹೇಳುವರು, ಆದುದರಿಂದ ನಾನು ಶೀಲದಿಂದ ಬ್ರಾಹ್ಮಣನು ಯಾಗು ಎಂದು ಹೇಳಿದೆನು, ಎಂದು ಉತ್ತರವನ್ನು ಕೊಟ್ಟರು. ಯಾವಾಗ ವರ್ಣಸಾಂಕರ್ಯವು ನಿಷೇಧಿಸಲ್ಪಟ್ಟಿತೋ, ಅದನ್ನುಂಟುಮಾಡುವ ಸಹಪಙ್ಕ್ತಿ ಭೋಜನ, ಕನ್ಯಾದಾನ, ಪರಿಗ್ರಹಾದಿ ಯಾವುಗಳೂ ಕೂಡದೆಂದು ಹೇಳಿದಂತಾಯಿತು. ಈ ಇತಿಹಾಸವು ಈ ಸಂದರ್ಭದಲ್ಲಿ ಅನುಸಂಧೇಯವು. ನಹುಷನಿಗೆ ಬಂದಿದ್ದ ಶಾರೀರ ಮಾನಸೋತ್ಕರ್ಷಗಳು ಗರ್ವಹೇತುವಾಗಿ ಅನರ್ಥಕ್ಕೆ ಕಾರಣಗಳಾದವು. ಹೀಗೆಯೇ ತಾನು ಕೆಟ್ಟಿದ್ದು ಎಂದು ಯುಧಿಷ್ಠಿರರಿಗೆ ತಿಳಿಸಿ, ಅವರ ಅಪ್ಪಣೆಯನ್ನು ಪಡೆದು ಪುನಃ ಸ್ವರ್ಗವನ್ನು ಕುರಿತು ತೆರಳಿದನೆಂದು ಹೇಳಲ್ಪಟ್ಟಿರುತ್ತದೆ. ಇರಣ್ಡು ವಳಿಯಾಲು ಮುಳ್ಳ ಅಪಕರ್ಷಮ್-ಶಾರೀರ ಬ್ರಾಹ್ಮಣ್ಯವೂ ತನಗಿಲ್ಲವು; ಮಾನಸ ಬ್ರಾಹ್ಮಣ್ಯವೂ ಇಲ್ಲವೆಂಬ ನೈಚ್ಯಭಾವವು,(೧)

ವಳಿಯಾಲು ವುಳ್ಳ ವಪಕರ್ಷಂ (೧) "ಕುಲಙ್ಗಳಾಯ ವೀರಿರಿಣ್ಡಿಲ್" ಎಙ್ಗಿರಪಾಟ್ಟಿಲುಮ್ (೨) "ಜನಿತ್ವಾಹಂ ವಂಶೇ" ಎಙ್ಗಿರ ಶ್ಲೋಕತ್ತಿಲುಮ್ ಶೊಲ್ಲುಗಿರಪಡಿಯೇ ತಾನ್ ನಿನ್ರನಿಲೈತೆಳಿನ್ದು ಕಾರ್ಪಣ್ಯತ್ತೈ ವಿಳೈತ್ತು ಅಕಿಂಚನಾಧಿಕಾರನಾನ ಉಪಾಯ ವಿಶೇಷತ್ತಿಲೇ ಮೂಟ್ಟುವಾಗಿಲ್ ಪುರುಷಾರ್ಥಕಾರಣ ಮಾಕೈಯಾಲೇ ಶ್ಲಾಘ್ಯಮಾಮ್.

---

"ಕುಲಙ್ಗಳಾಯ ವೀರರೆಂಡಿಲ್" ಎಂಬ ಪಾಶುರದಲ್ಲೂ (೨) "ಜನಿತ್ವಾಹಂ ವಂಶೇ" ಎಂಬ ಶ್ಲೋಕದಲ್ಲೂ, ಶೊಲ್ಲುಗಿರ ಪಡಿಯೇ - ಹೇಳಿರುವ ಹಾಗೆ, ತಾನ್ ನಿನ್ರನಿಲೈತೆಳಿನ್ದು-ತಾನು ಈಗ ಇರುವ ದುರವಸ್ಥೆಯನ್ನು ಅರಿತವನಾಗಿ, ಕಾರ್ಪಣ್ಯತ್ತೈ ವಿಳೈತ್ತು - ತನಗೆ ಸರ್ವವಿಧದಲ್ಲೂ ಯೋಗ್ಯತೆ ಇಲ್ಲವೇ ಎಂಬ ದೈನ್ಯವನ್ನು ಮನಸ್ಸಿನಲ್ಲಿ ಬೆಳಸಿದ, ಅಕಿಂಚನಾಧಿಕಾರನಾನ-ಹೀಗೆ ಯೋಗ್ಯತೆ ಇಲ್ಲವೇ ಎಂದು ಅಸಮರ್ಥನಾಗಿರುವವನಿಗೆ ಅಧಿಕಾರವಾದ, ಉಪಾಯವಿಶೇಷತ್ತಿಲೇ-ಪ್ರಪದನಾನುಷ್ಠಾನದಲ್ಲಿ, ಮೂಟ್ಟುವಾಗಿಲ್-ಅವಲಂಬಿಸುವಹಾಗೆ ಮಾಡಿದುದಾದರೆ, ಪುರುಷಾರ್ಥ ಕಾರಣಮಾಗೈಯಾಲೆ - ಮೋಕ್ಷಪ್ರಾಪ್ತಿಗೆ ಕಾರಣವಾಗುವದರಿಂದ, ಶ್ಲಾಘ್ಯಮಾಮ್-ಶ್ಲಾಘ್ಯವಾಗುವದು; ಅಹಂಕಾರ ಮಮಕಾರಗಳು ಸರ್ವಾತ್ಮನಾ ಪ್ರಪನ್ನನಿಗೆ ಕೂಡದೆಂದು ಹೇಳಿರುವದನ್ನೇ ಈಗ ಜ್ಞಾಪಕಕ್ಕೆ ಕೊಡುತ್ತಾರೆ. ತನಗೆ ಎರಡು ವಿಧವಾದ ಬ್ರಾಹ್ಮಣ್ಯವಿದೆ ಎಂದು ಗರ್ವಯುಕ್ತನಾದರೆ ಆತನು ನಷ್ಟನಾಗುತ್ತಾನೆ. ಹೀಗೆ ಉತ್ಕರ್ಷವಿರುವದು ಈತನಿಗೆ ಅನರ್ಥವನ್ನುಂಟುಮಾಡಬಹುದು ಅಪಕರ್ಷವಿದ್ದುದಾದರೆ ತನಗೆ ಶಾರೀರಸಂಬಂಧವಾದ ಜಾತ್ಯುತ್ಕರ್ಷವಾಗಲಿ, ಭಾಗವತತ್ವರೂಪ ಸತ್ವಾದಿ ಗುಣಮೂಲಕವಾಗಿ ಮಾನಸ ಬ್ರಾಹ್ಮಣ್ಯದ ಉತ್ಕರ್ಷವಾಗಲಿ, ಇಲ್ಲವೇ ಎಂಬ ದೈನ್ಯವು ಉಂಟಾಗಿ ತನ್ಮೂಲಕವಾಗಿ ಅಸಮರ್ಥನಿಗೆ ವಿಧಿಸಲ್ಪಟ್ಟಪ್ರಪತ್ತಿಯನ್ನು ಒಬ್ಬ ಆಚಾರ್ಯಮುಖೇನ ಅನುಷ್ಠಿಸಿ, ಪರಮ ಪುರುಷಾರ್ಥವನ್ನು ಹೊಂದಬಹುದು ಎಂಬ ಭಾವವು. ತ್ಯಾಗೋ ಗರ್ವಸ್ಯ ಕಾರ್ಪಣ್ಯಂ ಎಂದೂ, "ಇತಿ ಯಾ ಗರ್ವಹಾನಿ ಸ್ತದ್ದೈನ್ಯಂ ಕಾರ್ಪಣ್ಯ ಮುಚ್ಯತೇ" ಎಂದೂ ಹೇಳಿರುವದರಿಂದ ಗರ್ವವಿದ್ದುದಾದರೆ ಅಪಾಯದ ಬಾಹುಳ್ಯವುಂಟೆಂದೂ, ಅಧಿಕಾರವುಂಟಾಗದೆ ಉಪಾಯವು ಸಿದ್ಧಿಸುವದಿಲ್ಲವೆಂದೂ ಹಿಂದೆ ೯೬೪ ನೆಯ ಪುಟದಲ್ಲಿ ಹೇಳಲ್ಪಟ್ಟಿರುತ್ತವೆ. "ದೃಪ್ತೋ ಧರ್ಮ ಮತಿಕ್ರಾಮತಿ" ಗರ್ವಿಷ್ಠನು ಧರ್ಮವನ್ನು ಅತಿಕ್ರಮಿಸುವನೆಂದು ಹೇಳಿರುವದರಿಂದ

---

(೧) ತಿರುಮಳಿಶೈಯಾಳ್ವಾರ್ ತಿರುಚ್ಚಂದವಿರುತ್ತಂ. ೯೦. (೨) ಆಳ. ಸ್ತೋ. ೬೧.

ಅನರ್ಥವನ್ನು ಹೊಂದುವನು ಎಂಬ ಭಾವವು. ಆದುದರಿಂದ ಯಾವ ಉತ್ಕೃಷ್ಟತೆಯಿಂದಲೂ ಗರ್ವಿತನಾಗದೆ, "**ನ ಧರ್ಮನಿಷ್ಠೋಽಸ್ಮಿ ನ ಚಾತ್ಮವೇದೀ ನಭಕ್ತಿಮಾಂ ಸ್ತ್ವಚ್ಚರಣಾರವಿಂದೇ। ಅಕಿಂಚನೋಽನನ್ಯಗತಿ ಶರಣ್ಯೋ ತ್ವತ್ಪಾದಮೂಲಂ ಶರಣಂ ಪ್ರಪದ್ಯೇ ॥** ಎಂಬ ಅನುಸಂಧಾನವು ಕ್ಷೇಮಕರವು. ಈ ಶ್ಲೋಕಕ್ಕೆ ಕೆಲವರು ಶಾಸ್ತ್ರಸಮ್ಮತವಲ್ಲದ ಅರ್ಥವನ್ನು ಮಾಡಿ ಶ್ರೀ ನಿಗಮಾಂತ ದೇಶಿಕರವರ ಅಭಿಪ್ರಾಯವೂ ಹಾಗೆಯೇ ಎಂದು ಹೇಳುತ್ತಾರೆ. ಮಹಾನುಭಾವರಾದ ಗುರುಗಳು ಶಾಸ್ತ್ರಮರ್ಯಾದೆಗೆ ವಿರುದ್ಧವಾಗಿ ಎಂದಿಗೂ ಅಭಿಪ್ರಾಯಪಡುವದಿಲ್ಲವೆಂದು ಖಂಡಿತವಾಗಿಯೂ ಹೇಳುವೆವು. ಆದುದರಿಂದ ಈ ಶ್ಲೋಕಕ್ಕೆ ಶಾಸ್ತ್ರಸಮ್ಮತವಾದ ಅರ್ಥವನ್ನು ಸೂಕ್ಷ್ಮವಾಗಿ ತಿಳಿಸುವೆವು. **ನ ಧರ್ಮ ನಿಷ್ಠೋಸ್ಮಿ** - ಕರ್ಮಯೋಗವನ್ನು ಅನುಷ್ಠಿಸುವ ಅರ್ಹತೆಯೂ ನನಗಿಲ್ಲವು, **ನಚಾತ್ಮವೇದೀ**- ಆ ಕಾರಣದಿಂದಲೇ, ಆತ್ಮಸಾಕ್ಷಾತ್ಕಾರವನ್ನು ಹೊಂದುವ ಜ್ಞಾನಯೋಗಕ್ಕೆ ಯೋಗ್ಯತೆಯೂ ಇಲ್ಲವು, ಆದುದರಿಂದಲೇ, **ನಭಕ್ತಿಮಾಂ ಸ್ತ್ವಚ್ಚರಣಾರವಿಂದೇ** - ನಿನ್ನ ಪಾದಕಮಲದಲ್ಲಿ ಐಕಾಂತ್ಯ ಪರಭಕ್ತಿಯಿಂದ ಉಪಾಸಿಸುವ ಸಾಮರ್ಥ್ಯವೂ ಇಲ್ಲವು. ಆದುದರಿಂದ **ಆಕಿಂಚನಃ** - ಎರಡು ಉಪಾಯಗಳಲ್ಲಿ ಉಪಾಸನಕ್ಕೆ ಅಸಮರ್ಥನಾಗಿ ದೀನ ದಶೆಯನ್ನು ಹೊಂದಿರುವೆನು. **ಅನನ್ಯಗತಿಃ** - ನೀನಲ್ಲದೆ ನನಗೆ ಬೇರೇ ರಕ್ಷಕರಿಲ್ಲವು, ಅವುಗಳಿಂದ ಶರಣಾಗತಿಗೆ ಬೇಕಾದ ಮುಖ್ಯವಾದ ಅಙ್ಗಗಳು ಹೇಳಲ್ಪಟ್ಟವು, ಆದುದರಿಂದ ಶರಣಂ ಪ್ರಪದ್ಯೇ ಎಂದು ಭರನ್ಯಾಸವನ್ನು ಅನುಷ್ಠಿಸಿರುತ್ತೇನೆಂದು ಹೇಳುತ್ತಾರೆ. ಪೂರ್ವಾರ್ಧದಲ್ಲಿ ಹೇಳಿರುವ ಭಕ್ತಿಯೋಗಕ್ಕೆ ಕರ್ಮಯೋಗ ಜ್ಞಾನಯೋಗಗಳೆರಡೂ ಅಙ್ಗಗಳು, ಇವುಗಳಿಂದ ಸಾಧ್ಯವಾದುದು ಭಕ್ತಿಯೋಗವೆಂದು ಶ್ರೀ ಯಾಮುನೇಯರವರೇ ಗೀತಾರ್ಥಸಙ್ಗ್ರಹದ ಪ್ರಥಮ ಶ್ಲೋಕದಲ್ಲಿ ಸ್ವಧರ್ಮಜ್ಞಾನವೈರಾಗ್ಯ ಸಾಧ್ಯಭಕ್ತ್ಯೈಕಗೋಚರಃ ಎಂಬುದರಿಂದ ವ್ಯಕ್ತಪಡಿಸಿರುತ್ತಾರೆ. ಹಾಗೆಯೇ ಶ್ರೀಯತಿವರ್ಯರೇ ಮೊದಲಾದ ಅವರ ಶಿಷ್ಯಪರಂಪರೆಯವರ ಅಭಿಪ್ರಾಯವು. ಹೀಗಿರುವಾಗ ಮೊದಲನೆಯ ಮೆಟ್ಟಲಾದ ಕರ್ಮಯೋಗಕ್ಕೇ ನನಗೆ ಸಾಮರ್ಥ್ಯವಿಲ್ಲವೆಂದು ಹೇಳಿದ್ದರೆ ಸಾಕಾಗಿತ್ತಲ್ಲಾ, ಅಷ್ಟು ಮಾತ್ರ ಹೇಳದೆ ಜ್ಞಾನಯೋಗಕ್ಕೂ ಶಕ್ತಿ ಇಲ್ಲವು, ಭಕ್ತಿಯೋಗಕ್ಕೂ ಶಕ್ತಿ ಇಲ್ಲವು ಎಂದು ಏಕೆ ಹೇಳಿದರು ? ಎಂಬ ಪ್ರಶ್ನೆಗೆ ಉತ್ತರವಾಗಿ ಕೆಲವರು ಹೇಳುತ್ತಾರೇನೆಂದರೆ, ಹಿಂದಿನ ಜನ್ಮಗಳಲ್ಲಿ ಕರ್ಮಯೋಗ ಸಿದ್ಧಿಯುಂಟಾಗಿದ್ದರೆ ಅದನ್ನು ಬಿಟ್ಟು ಜ್ಞಾನಯೋಗವನ್ನನುಷ್ಠಿಸು ಎಂದರೆ, ಅದಕ್ಕೂ ನನಗೆ ಸಾಮರ್ಥ್ಯವಿಲ್ಲವೆಂದೂ, ಹಿಂದಿನ ಜನ್ಮಗಳಲ್ಲಿ ಕರ್ಮಯೋಗ ಜ್ಞಾನಯೋಗಗಳ ಸಿದ್ಧಿಯುಂಟಾಗಿದ್ದರೆ, ಅವುಗಳನ್ನು ಬಿಟ್ಟು ಭಕ್ತಿಯೋಗವನ್ನಾದರೂ ಅನುಷ್ಠಿಸು ಎಂದರೆ

ಅದಕ್ಕೂ ನನಗೆ ಸಾಮರ್ಥ್ಯವಿಲ್ಲವೆಂದೂ,ಹೇಳಿದರು ಎಂದು ಅಭಿಪ್ರಾಯಪಡುವರು. ಇದು ಸರಿಯಾದ ಅಭಿಪ್ರಾಯವಲ್ಲವು. ಏಕೆಂದರೆ ಹಿಂದಿನ ಜನ್ಮದ ಸ್ಮರಣೆಯು ಯಾರಿಗೂ ಇರುವದಾಗಿ ತೋರಿಬರುವದಿಲ್ಲವು. ಹಾಗೆ ಸ್ಮೃತಿ ಇದ್ದು ಯಾವ ನಾದರೂ ಒಬ್ಬನು ಅನುಷ್ಠಿಸಿದರೆ ಅಂತಹ ಸ್ಮೃತಿಯಿಲ್ಲದವನೂ ಕೂಡ ಕರ್ಮ ಯೋಗವನ್ನು ತ್ಯಜಿಸುವದಕ್ಕೆ ಮೇಲು ಪಙ್ಕ್ತಿಯನ್ನು ಹಾಕಿಕೊಟ್ಟಹಾಗಾಗುವ ದಿಲ್ಲವೇ ? ಹಾಗೆ ಬ್ರಾಹ್ಮಣಜನ್ಮ ಉಂಟಾಗಿ ಕರ್ಮಯೋಗವು ಸಿದ್ಧಿಸಿದ್ದು, ಕಾರಣಾಂತರದಿಂದ ಶೂದ್ರಯೋನಿಯಲ್ಲಿ ಜನಿಸಿದರೆ ಆತನೂಕೂಡ ಶಾಸ್ತ್ರವಿರುದ್ಧ ನಿಷ್ಠೆಯಾದ ಉಪಾಸನವನ್ನು ಮಾಡಬಹುದು ಎಂದು ಅನುಮತಿಯನ್ನಿತ್ತಹಾಗಾ ಗುವದಿಲ್ಲವೇ ? ಪುನರ್ಜನ್ಮವು ಯಾವಾಗ ಉಂಟಾಯಿತೋ, ಆಗ ಬಾಲನಾಗಿ ಮಾತನ್ನು ಕಲಿಯಬೇಕು, ವಿದ್ಯಾ ವ್ಯಾಸಙ್ಗಬೇಕು, ಬ್ರಾಹ್ಮಣನಾಗಿ ಹುಟ್ಟಿದರೆ ಉಪನಯನ ಸಂಸ್ಕಾರಬೇಕು, ಹಾಗೆಯೇ ಮುಮುಕ್ಷುವಾದರೆ ಪುನಃ ಕರ್ಮ ಯೋಗವನ್ನು ಭಕ್ತ್ಯಂಗವಾಗಿ ಅನುಷ್ಠಿಸಲೇ ಬೇಕು. ಹಾಗೆಯೇ ಶ್ರೀಯತಿವ ರ್ಯರವರ ಅಭಿಪ್ರಾಯವು.—ಅರ್ಜುನನು ಶ್ರೀಕೃಷ್ಣಭಗವಾನವರನ್ನು ಕುರಿತು ಕರ್ಮಯೋಗನಿಷ್ಠನು ಯೋಗಭ್ರಷ್ಟನಾದರೆ ಅವನಿಗೆ ಏನುಗತಿ ಎಂದು ಪ್ರಶ್ನಿಸಿದ್ದ ಕ್ಕೆ, ಪ್ರಶ್ನೆಯನ್ನು,ಕರ್ಮಯೋಗಾರಂಭದಶೆ ಎಂದೂ,ಪರಿಪಕ್ವ ಕರ್ಮಯೋಗಿ ಎಂದೂ, ಕರ್ಮಯೋಗಾರಂಭವನ್ನು ಮಾಡಬೇಕೆಂಬ ಸಙ್ಕಲ್ಪದೆಶೆ ಎಂದೂ, ಹೀಗೆ ಮೂರಾಗಿ ಭಾಗಿಸಿಕೊಂಡು, ಪರಿಪಕ್ವಯೋಗಿಯ ವಿಷಯವನ್ನು ಬೋಧಿಸುವಾಗ ಹೇಳುತ್ತಾ ರೇನೆಂದರೆ---"**ಪರಿಪಕ್ವಯೋಗ ಶ್ಚಲಿತಶ್ಚೇತ್ ಯೋಗಿನಾಂ ಧೀಮತಾಂ-ಯೋಗಂ ಕುರ್ವತಾಂ ಸ್ವಯಮೇವ ಯೋಗೋಪದೇಶಕ್ಷಮಾಣಾಂ ಕುಲೇ ಭವತಿ**" ಅಂತಹ ಪರಿಪಕ್ವ ಕರ್ಮಯೋಗನಿಷ್ಠನೂ ಕೂಡ ಯೋಗಭ್ರಷ್ಟನಾದರೆ ಕರ್ಮಯೋಗವನ್ನು ತಾನೇ ಅನುಷ್ಠಿಸಿಕೊಂಡು ಅದನ್ನು ಉಪದೇಶಿಸುವ ಯೋ ಗ್ಯತೆ ಇರುವ ಕರ್ಮಯೋಗನಿಷ್ಠನ ಮನೆಯಲ್ಲಿ ಜನ್ಮವೆನ್ನುತ್ತಾನೆಂದು ಹೇಳಲ್ಪ ಟ್ಟಿದೆ ಅದುದರಿಂದ ಪರಿಪಕ್ವಯೋಗಿಗೂ ಕೂಡ ಉತ್ತರ ಜನ್ಮದಲ್ಲಿಯೂ ಕರ್ಮ ಯೋಗಾರಂಭವನ್ನೇ ಮಾಡಬೇಕೆಂಬುದು ವ್ಯಕ್ತವು. ಹಿಂದಿನ ಜನ್ಮದ ಕರ್ಮ ಯೋಗಾನುಷ್ಠಾನವು ಏನೊಂದೂ ಕಾರ್ಯಕಾರಿಯಲ್ಲವೋ ? ಎಂದರೆ ಹಿಂದಿನ ಜನ್ಮದ ಕರ್ಮಯೋಗನಿಷ್ಠೆಯ ಸಂಸ್ಕಾರದಿಂದ ಉತ್ತರ ಜನ್ಮದಲ್ಲಿ ಕರ್ಮಯೋಗ ಸಿದ್ಧಿಯು ಸುಲಭವಾಗಿ ಕ್ಷಿಪ್ರವಾಗಿ ಉಂಟಾಗುತ್ತದೆಂದು ಹೇಳಿದರೆ ಸಮಂಜಸವು. ಅಂತವನಿಗೆ ಕರ್ಮಯೋಗನಿಷ್ಪತ್ತಿಯುಂಟಾಗಿ ಭಕ್ತಿಯೋಗವೂ ಸಿದ್ಧಿಸಿ ಮೋಕ್ಷ ವನ್ನು ಹೊಂದುವನು. ಕರ್ಮಯೋಗವೇ ಬೇಡವೆಂದರೆ ಶಾಸ್ತ್ರವಿರುದ್ಧ ವಿಷಯ ವಾಗುತ್ತದೆ. ಕರ್ಮಯೋಗರೂಪವಾದ ಅಙ್ಗದ ಸಾನ್ನಿಧ್ಯವಿಲ್ಲದುದರಿಂದ ಭಕ್ತಿ

**ಇಪ್ಪಡಿಕ್ಕು ಜಾತಿವ್ಯವಸ್ಥೈಯುಂವ್ ಜಾತ್ಯನುರೂಪಮಾನ ವೃತ್ತಿವ್ಯವಸ್ಥೈಯುಮ್ ಉಣ್ಡಾನಾಲುಮ್, ಸರ್ವರುಕ್ಕುಂ ಭಾಗವತ ನಿಬಂಧನಮಾಗ ಮುನ್ಬುಕೊನ್ನ (ಸಮರ್ಥಿತ್ತ)ಉದ್ದೇಶ್ಯತ್ವ ಪ್ರತಿಪತ್ತಿಕ್ಕು ವಿರೋಧಮಿಲ್ಲೈ.**

---

ಯೋಗವೂ ಸಿದ್ಧಿಸುವದಿಲ್ಲವು. ಹಾಗಾದರೆ ಶ್ರೀ ಯಾಮುನೇಯರು ಮೂರನ್ನು ಏಕೆ ಹೇಳಿದರು ? ಎಂದರೆ, ಭಕ್ತಿಯೋಗಸ್ವರೂಪದ ನಿರೂಪಣೆಯನ್ನು ಮಾಡಿ, ಅದಕ್ಕೆ ಕರ್ಮಯೋಗನಿಷ್ಠೆ, ಜ್ಞಾನಯೋಗನಿಷ್ಠೆ ಭಕ್ತಿಯೋಗನಿಷ್ಠೆ ಇವೆಲ್ಲವೂ ಬೇಕು, ಇವುಗಳಲ್ಲಿ ಒಂದನ್ನೂ ಕೂಡ ಅನುಷ್ಠಿಸಲು ಯೋಗ್ಯತೆ ಇಲ್ಲವೆಂದು ತಿಳಿಸುವದಕ್ಕಾಗಿಯೂ ಭಕ್ತ್ಯನ್ಯಾಸಕ್ಕಾದರೋ ಇಂತಹ ನಿಷ್ಠೆಗಳು ಯಾವುವು ಬೇಕಿಲ್ಲದೆ ಅಸಮರ್ಥನಿಗೆ ಯೋಗ್ಯವಾದ ಉಪಾಯವೆಂದು ತಿಳಿಸುವದಕ್ಕಾಗಿಯೂ ಎಂದೂ ಭಾವಿಸತಕ್ಕದ್ದು. ಪೂರ್ವಪೂರ್ವ ನಿಷೇಧವನ್ನುಪಪಾದಿಸಿ ಅಜ್ಞಮಾತ್ರದಿಂದಲೇ ಫಲನಿಷ್ಪತ್ತಿಯೂ, ಹಾಗೆಯೇ ಉತ್ತರೋತ್ತರ ನಿಷೇಧದಿಂದ ಅಜ್ಞಿ ಇಲ್ಲದೆ ಬರೀ ಕರ್ಮಯೋಗಾದಿಗಳಿಂದ ಫಲನಿಷ್ಪತ್ತಿಯೂ ಸಹ, ಗಮನಿಕಾ ಬರೀ ಊಹೆ ಎಂಬುದು ಶ್ರೀ ನಿಗಮಾಂತದೇಶಿಕರವರ ಅಭಿಪ್ರಾಯವು. ಗಮನಿಕಾ ಶಬ್ದಕ್ಕೆ "ಗಮನಿಕಾ ಕಾಪಿಲೀ ಕ್ವಾಪಿಲೀನಾ. ಎಂಬ ಪ್ರಯೋಗವು ಅನುಸಂಧೇಯವು. ಕಾರ್ಪಣ್ಯವನ್ನು ಪ್ರಕಟಿಸುವ ಎರಡು ಪ್ರಮಾಣಗಳನ್ನು ಉದಾಹರಿಸುತ್ತಾರೆ. ಅವುಗಳು ಯಾವುವೆಂದರೆ —

ಕುಲಙ್ಗಳಾಯ ಈರಿರಣ್ಡಿಲೊನ್ರಿಲುಮ್ ಪಿರನ್ದಿಲೇನ್। ಎಂಬ ಪಾಶುರವು; ಇದರ ಅರ್ಥಕ್ಕೆ ಕೃತಕೃತ್ಯಾಧಿಕಾರದ ೧೨೭ನೆಯ ಪುಟವನ್ನು ನೋಡಿ. ಹಾಗೆಯೇ "ಜನಿತ್ವಾಹಂ ವಂಶೇ" ಎಂಬ ಶ್ರೀ ಯಾಮುನೇಯರ ಶ್ಲೋಕಾರ್ಥಕ್ಕೆ, ಸಾಧ್ಯೋಪಾಯ ಶೋಧನಾಧಿಕಾರದ ೨೨೩ನೆಯ ಪುಟವನ್ನು ನೋಡಿ. ಇದರಿಂದ ನಾವು ಮುಖ್ಯವಾಗಿ ಗ್ರಹಿಸತಕ್ಕ ವಿಷಯವೇನೆಂದರೆ, ಎಂತಹ ಉತ್ಕೃಷ್ಟ ಜಾತಿಯಲ್ಲಾಗಲಿ ವಂಶದಲ್ಲಾಗಲಿ ಜನ್ಮವಿದ್ದರೂ, ಮಾನಸ ಶುದ್ಧಿ ಇದ್ದು ಮಾನಸ ಬ್ರಾಹ್ಮಣ್ಯವಿದ್ದರೆ ಉಪಾಯಾನುಷ್ಠಾನ ಮೋಕ್ಷಪ್ರಾಪ್ತಿಗಳಿಗೆ ಸಾಧಕವು, ಆದರೆ ಮಾನಸ ಶುದ್ಧಿ ಇದೆ ಎಂಬ ಗರ್ವವಿರಕೂಡದು; ತಾನು ಅಸಮರ್ಥನೇ ಎಂಬ ಕಾರ್ಪಣ್ಯವಿರಬೇಕು ; ಹೀಗೆ ಕಾರ್ಪಣ್ಯವಿದ್ದುದಾದರೆ ಜನ್ಮತಃ ಎಷ್ಟು ನಿಕೃಷ್ಟನಾಗಲಿ, ಆತನಿಗೆ ಉಪಾಯಾನುಷ್ಠಾನ ಮೋಕ್ಷಪ್ರಾಪ್ತಿಗಳಿಗೆ ಅವಕಾಶವುಂಟು ಎಂಬುದು. ಮಾನಸಬ್ರಾಹ್ಮಣ್ಯವಿರುವ ಸತ್ತ್ವ ವಿವೃದ್ಧಿಯುಳ್ಳ ಪುರುಷನು ಸನ್ಮಾನಾರ್ಹನೆಂದು, ಈ ಎಲ್ಲಾ ಪ್ರಮಾಣಗಳು ಹೇಳುತ್ತವೆ ಎಂದು ಒಪ್ಪಿ

ಕೊಳ್ಳುವದಕ್ಕೆ ಏನೊಂದೂ ವಿರೋಧವಿರುವದಿಲ್ಲವೆಂದು ಹೇಳಿ ಪ್ರಕೃತಾಭಿಪ್ರಾಯವನ್ನು ನಿಗಮನವಾಡಿ ಹೇಳುತ್ತಾರೆ—ಈತನಿಗೆ ಶರೀರಮೂಲಕವಾಗಿ ಬಂದ ಜಾತಿ ವ್ಯವಸ್ಥೆಯೂ, ಅದಕ್ಕನುಗುಣವಾದ ಶಾಸ್ತ್ರವಿಹಿತ ಧರ್ಮರೂಪ ಆಚಾರ ವ್ಯವಸ್ಥೆಯೂ, ಇವೆರಡೂ ತಪ್ಪಿದಲ್ಲವೆಂದು ಸ್ಥಾಪಿಸಿದರು. **ಇಪ್ಪಡಿಕ್ಕು** - ಈಗ ಹಿಂದೆ ಉಪಪಾದಿಸಿ ಸ್ಥಾಪಿಸಿರುವ ಪ್ರಕಾರ, **ಜಾತಿವ್ಯವಸ್ಥೈಯುಮ್** - ಜಾತಿಯು ಶರೀರತಃ ಬಂದುದರಿಂದ ಮರಣಾಂತದವರೆಗೂ ಬದಲಾಯಿಸಲು ಸಾಧ್ಯವಿಲ್ಲವೆಂದೂ, **ಜಾತ್ಯನುರೂಪಮಾನ** - ಆ ಜಾತಿಗೆ ಉಚಿತವಾದ, **ವೃತ್ತವ್ಯವಸ್ಥೈಯುಮ್** - ಆಚಾರವಿಂತಾದೆಂಬ ಶಾಸ್ತ್ರನಿಬಂಧನೆಯು, **ಉಂಡಾನಾಲುಮ್** - ಪ್ರಾಪ್ತವಾದರೂ, **ಸರ್ವರುಕ್ಕುಮ್** - ನಾಲ್ಕು ವರ್ಣದವರೆಲ್ಲರಿಗೂ **ಭಾಗವತನಿಬಂಧನಮಾಗ** - ಸತ್ತ್ವೋದ್ರೇಕವುಳ್ಳ ಮನಸ್ಸನ್ನು ಹೊಂದಿರುವದರ ಮೂಲಕ ಭಾಗವತರಿಂದುಂಟಾದ, **ಮುನ್ಪು ಶೊನ್ನ** - ಹಿಂದೆ ಹೇಳಿದ, **ಉದ್ದೇಶ್ಯತ್ವ ಪ್ರತಿಪತ್ತಿಕ್ಕುಮ್** - ಆತನು ಬ್ರಾಹ್ಮಣನಸಾಗೆ ಮಾನಾರ್ಹನೆಂದು ಉದ್ದೇಶಿಸಿ ಹೇಳಬೇಕಾಗಿರುವ ಅನುಸಂಧಾನಕ್ಕೆ, **ವಿರೋಧಮಿಲ್ಲೈ** - ವಿರೋಧವಿಲ್ಲವು. ನಾಲ್ಕು ವರ್ಣದಲ್ಲೂ ಸತ್ತ್ವೋದ್ರೇಕಮೂಲಕ ಪ್ರಶಂಸನೀಯನಾಗಿ ಮಾನಾರ್ಹನೆಂದು ಭಾವಿಸುವದರಲ್ಲಿ ಏನೊಂದೂ ವಿರೋಧವಿಲ್ಲವೆಂಬ ಭಾವವು.

ಹೀಗೆ ಭಾಗವತತ್ವ ಉಂಟಾಗಿರುವ ಸರ್ವವರ್ಣದಲ್ಲೂ ಭೇದ ಉಂಟು. ಕೆಲವರು ಮೋಕ್ಷವನ್ನು ಕೋರದೆ ಪ್ರಯೋಜನಾಂತರದಲ್ಲಿ ದೃಷ್ಟಿಯಿಟ್ಟು ಶರಣಾಗತಿಯನ್ನು ಮಾಡಿ ಪ್ರಪನ್ನರಾಗಬಹುದು. ಇನ್ನು ಕೆಲವರು ಐಹಿಕಾದಿ ಸುಖಗಳನ್ನು ತೃಣೀಕರಿಸಿ, ಮೋಕ್ಷಾರ್ಥಿಗಳಾಗಿರಬಹುದು. ಇವರಿಬ್ಬರೂ ಸಹ ಒಂದೇ ವಿಧವಾಗಿ ಮಾನ್ಯರೇ ಹೇಗೆ? ಎಂಬ ಪ್ರಶ್ನೆಯು ಪ್ರಾಸಙ್ಗಿಕವಾಗಿ ಉಂಟಾಗುತ್ತದೆ. ಅದಕ್ಕೆ ಉತ್ತರವನ್ನು ಹೇಳುವವರಾಗಿ ಮೊದಲನೆಯ ವಿಧ ಭಾಗವತನು ಏಕಾನ್ತಿ ಎಂದು ಕರೆಯಲ್ಪಟ್ಟು ಮಾನ್ಯನೆಂದೂ, ಎರಡನೆಯವನೀಗ ಚೊಕ್ಕಭಂಗಾರವು ಭಂಗಾರಗಳಲ್ಲೆಲ್ಲಾ ಹೇಗೆ ಸರ್ವೋತ್ಕೃಷ್ಟವೋ, ಹಾಗೆ ಪರಮೈಕಾಂತಿ ಎಂದೆನಿಸಿ ಸರ್ವೋತ್ಕೃಷ್ಟನೆಂದೂ, ಉಪದೇಶಿಸುತ್ತಾರೆ. ಇಂತಹ ವ್ಯತ್ಯಾಸವು ಗೀತೆಯಲ್ಲೂ, ಅನುಗೀತೆಯಲ್ಲೂ ಉಪಪಾದಿಸಲ್ಪಟ್ಟಿದೆ. ಅದನ್ನೇ ಶ್ರೀ ಯಾಮುನೇಯರೂ ಗೀತಾರ್ಥ ಸಙ್ಗ್ರಹದಲ್ಲಿ ಉಪದೇಶಿಸಿರುವದರಿಂದ, ಆ ಗೀತಾರ್ಥ ಸಙ್ಗ್ರಹ ಶ್ಲೋಕಗಳನ್ನು ಉದಾಹರಿಸಿ, ಭಗವತ್ಪ್ರಪನ್ನರಲ್ಲಿ ಪ್ರಯೋಜನಾಂತರಾಪೇಕ್ಷೆಯುಳ್ಳವನು ಏಕಾನ್ತಿ ಎಂದೂ, ಮೋಕ್ಷೈಕಪ್ರಾಪ್ತಿಕಾಮನು ಪರಮೈಕಾಂತಿ ಎಂದೂ ಶ್ರೀ ಯಾಮುನೇಯರು ವಿಭಾಗಿಸಿ ಹೇಳಿದುದನ್ನೇ ಇಲ್ಲಿ ಉಪದೇಶಿಸುತ್ತಾರೆ.

## ಭಾಗವತೇಷು ಏಕಾನ್ತೀ ಮಾನ್ಯಃ, ಪರಮೈಕಾನ್ತೀತು ಸರ್ವಶ್ರೇಷ್ಠಃ.

ಇಬ್ಭಗವತ್ಪ್ರರರಿಲ್ (೧) "ಐಕಾಂತ್ಯಂ ಭಗವತ್ಯೇಷಾಂ ಸಮಾನ ಮಧಿಕಾರಿಣಾಮ್" ಎಙ್ಗರಪಡಿಯೇ, ದೇವತಾಂತರ ಸ್ಪರ್ಶ ಮತ್ತವರ್‌ಗಳ್ ಏಕಾಂತಿಗಳ್; ಅವರ್‌ಗಳಿಲ್ ವೈತ್ತುಕೊಂಡು (೨) "ಜ್ಞಾನೀತುಪರಮೈಕಾಂತೀ" ಎಙ್ಗರಪಡಿಯೇ ಪ್ರಯೋಜನಾಂತರ ಸ್ಪರ್ಶಮುಮತ್ತವರ್‌ಗಳ್ ಪರಮೈಕಾಂತಿ

## ಭಾಗವತರಲ್ಲಿ ಏಕಾನ್ತಿಯು ಮಾನ್ಯನು ; ಪರಮೈಕಾನ್ತಿಯಾದರೋ ಸರ್ವೋತ್ಕೃಷ್ಟನು

ಇಬ್ಭಗವತ್ಪ್ರರರಿಲ್ - ಹೀಗೆ ಭಗವಂತನಲ್ಲಿ ಶರಣಾಗತಿಮಾಡಿರುವದರಿಂದ ಭಗವಂತನಲ್ಲಿ ನಿರತರಾಗಿರುವವರಲ್ಲಿ (೧) ಏಷಾಂ ಅಧಿಕಾರಿಣಾಂ - ಆರ್ತನೂ, ಅರ್ಥಾರ್ಥಿಯು, ಜಿಜ್ಞಾಸುವು, ಜ್ಞಾನಿಯು, ಹೀಗೆ ಈ ನಾಲ್ಕು ವಿಧ ಭಕ್ತರುಗಳಿಗೂ, ಭಗವತಿ - ಭಗವಂತನಲ್ಲಿ, ಐಕಾನ್ತ್ಯಂ - ಏಕಾಂತ ಚಿತ್ತದಿಂದಧ್ಯಾನವು, ಸಮಾನಂ - ಸಮಾನವಾದುದು; ಮುಂದೆ ಯಾವತ್ಪ್ರಾಪ್ತಿ ಪರಾರ್ಥೀಚೇತ್ತದೇವಾತ್ಯನ್ತಮಶ್ನುತೇ - ಎಂದಿರುತ್ತದೆ. ಆ ಐಕಾಂತ್ಯವು ಎಲ್ಲಿವರೆಗೂ ಜ್ಞಾನಿಯಲ್ಲದೆ ಇತರರಿಗೆ ಇರುತ್ತದೆಂದರೆ ಹೇಳುತ್ತಾರೆ, ತತ್ - ಆ ಐಕಾಂತ್ಯವು ಪರಾರ್ಥೀಚೇತ್ - ಇತರ ಪ್ರಯೋಜನ ಉಳ್ಳದಾದರೆ, ಯಾವತ್ಪ್ರಾಪ್ತಿ- ಆ ಇತರ ಪ್ರಯೋಜನವು ಲಭಿಸುವವರೆಗೂ, ಅತ್ಯನ್ತಮಶ್ನುತೇ - ವಿಶೇಷವಾಗಿ ಪಡೆಯುತ್ತಾನೆ, ಎಙ್ಗರಪಡಿಯೇ - ಎಂದು ಹೇಳಿರುವಹಾಗೆ, ದೇವತಾಂತರಸ್ಪರ್ಶಂ ಅತ್ತವರ್‌ಗಳ್ - ಅನ್ಯ ದೇವತಾ ಸಂಬಂಧವನ್ನು ಹೋಗಲಾಡಿಸಿಕೊಂಡಿರುವವರು, ಏಕಾಂತಿಗಳು. ಅವರ್‌ಗಳಿಲ್ ವೈತ್ತುಕೊಂಡು- ಆ ಏಕಾಂತಿಗಳ ಮಧ್ಯದಲ್ಲೂ (೨) "ಜ್ಞಾನೀತು ಪರಮೈಕಾಂತೀ" - ಜ್ಞಾನಿಯಾದರೋ ಪರಮೈಕಾಂತಿಯು" ಎಙ್ಗರಪಡಿಯೇ - ಎಂದು ಹೇಳಿರುವಹಾಗೆ, ಪ್ರಯೋಜನಾಂತರಸ್ಪರ್ಶ ಮತ್ತವರ್‌ಗಳ್-ಐಶ್ವರ್ಯಾದಿ ಬೇರೆ ಪ್ರಯೋಜನದ ಸಂಬಂಧವನ್ನು ತ್ಯಜಿಸಿದವರು, ಪರಮೈಕಾಂತಿಗಳು ಎಂದೆನಿಸುತ್ತಾರೆ. ನಶ್ವರಗಳಾದ ಭೋಗಗಳಲ್ಲಿ ಮಮತೆಯಿಲ್ಲದ ಪರಮಾತ್ಮಪ್ರಾಪ್ತಿ ತತ್ಕೈಙ್ಕರ್ಯಗಳಲ್ಲೇ ಮಮತೆಯುಳ್ಳವರು ಪರಮೈಕಾಂತಿಗಳು ಎಂದು ಹೇಳಿದರು. ಜ್ಞಾನೀತು ಪರಮೈಕಾಂತಿ ಎಂಬ ಪೂರಾ ಶ್ಲೋಕವು ಯಾವುದೆಂದರೆ "ಜ್ಞಾನೀತು ಪರಮೈಕಾನ್ತೀ ತದಾಯತ್ತಾತ್ಮ ಜೀವನಃ । ತತ್ಸಂ

---

(೧) ಮತ್ತು (೨) ಗೀತಾರ್ಥ ಸಙ್ಗ್ರಹ. ೨೯.

ಗಳ್. ಅವರ್‌ಗಳಿಲ್ ವೈತ್ತುಕೊಂಡು ವಿಳಂಬಾಕ್ಷಮರಾಯ್ ಸರ್ವಶಕ್ತಿಯಾನ ಶೇಷಿಪಕ್ಕಲಿಲೇ ಭರಂನ್ಯಾಸಂ ಪಣ್ಣಿ ಚೆಯ್‌ಗಿರ ಕೈಙ್ಕರ್ಯತ್ತುಕ್ಕು ಪ್ರಯೋಜನಾಂತರಂ ಕೋಲುಗೈ, ಪೊಲಿಶೈಕ್ಕಿಡುವಾರ್ ಮಾತ್ರಮೆಙ್ಗಿರ ಶ್ರುತ್ಯರ್ಥತ್ತೈತೆಳಿನ್ದು, ಇಕ್ಕೈಙ್ಕರ್ಯತ್ತುಕ್ಕು ಮೋಕ್ಷಮುಮ್ ಪ್ರಯೋಜನಮೆನ್ರುಕೋಲಾದೆ, ಕೈಙ್ಕರ್ಯೈಕ ಪ್ರಯೋಜನರಾಯಿರುಕ್ಕುಮವರ್‌ಗಳುಡೈಯ ಪರಮೈಕಾಂತಿತ್ವಮ್ ಷೋಡಶವರ್ಣ ಸುವರ್ಣತ್ತೋಡೊಕ್ಕುಮ್.

---

ಶ್ಲೇಷ ವಿಯೋಗೈಕ ಸುಖದುಃಖಸ್ತದೇಕಧೀಃ ॥ ಇಲ್ಲಿ ಪರಮೈಕಾನ್ತಿ ಎಂದರೆ ಏಕಾಂತಿಯಾಗಿ ಶ್ರೇಷ್ಠನು, ಏತಕ್ಕೆಂದರೆ ಐಹಿಕದಲ್ಲಿ ಆಸಕ್ತಿಯಿಲ್ಲದೆ ಮೋಕ್ಷೈಕಪರನಾದುದರಿಂದ. ಅವನು ಎಂತವನೆಂದರೆ ತದಾಯತ್ತಾತ್ಮ ಜೀವನಃ - ಆತನಿಗೆ ಅಧೀನವಾದ ಆತ್ಮಸ್ವರೂಪವುಳ್ಳವನು ಅದು ಹೇಗೆಂದರೆ ವಿವರಿಸುತ್ತಾರೆ.—ತತ್ಸಂಶ್ಲೇಷ ಇತ್ಯಾದಿ-ಆತನ ಸಂಶ್ಲೇಷಯೇ ಆತನಿಗೆ ಪರಮಾನಂದವಾಗಿಯೂ,ವಿಯೋಗವೇ ಆತನಿಗೆ ಅತೀವ ದುಃಖಕರವಾಗಿಯೂ ಉಳ್ಳವನು, ತದೇಕಧೀಃ - ಆತನೊಬ್ಬನಲ್ಲೇ ಮನಸ್ಸನ್ನಿಟ್ಟು ಧ್ಯಾನಿಸುವನೇ ವಿನಾ, ಇನ್ನು ಯಾವ ಫಲದಲ್ಲೂ ಆತನಿಗೆ ದೃಷ್ಟಿ ಇಲ್ಲವು, ಆದುದರಿಂದ ಅವರು "ಮಚ್ಚಿತ್ತಾ ಮದ್ಗತಪ್ರಾಣಾಃ" (ಗೀ. ೧೦-೯) ಎಂಬಲ್ಲಿ ಹೇಳಿರುವಹಾಗೆ ವೃತ್ತಿಯುಳ್ಳವರು. ಅವರ್‌ಗಳಿಲ್ ವೈತ್ತುಕೊಂಡು-ಅವರುಗಳ ಮಧ್ಯದಲ್ಲೂ ಎಂದರೆ ಆ ನಾಲ್ಕು ಏಕಾನ್ತಿಗಳ ಮಧ್ಯದಲ್ಲೂ, ವಿಳಂಬಾಕ್ಷಮರಾಯ್-ಮೋಕ್ಷಪ್ರಾಪ್ತಿಯಲ್ಲಿ ವಿಳಂಬವನ್ನು ಸಹಿಸದೇ ಇರುವವರಾಗಿ, ಈ ಸಂಸಾರ ಕ್ಲೇಶವನ್ನನುಭವಿಸುವದು ಬೆಂಕಿಯಮಧ್ಯದಲ್ಲಿರುವಹಾಗೆ ಭಾವಿಸಿ ವಿಳಂಬವನ್ನು ಸಹಿಸದವರಾಗಿ,ಸರ್ವಶಕ್ತನಾಗಿ ಶೇಷಿಯಾಗಿರುವವನಲ್ಲಿ, ಭರನ್ಯಾಸವನ್ನನುಷ್ಠಿಸಿ, ಚೆಯ್‌ಗಿರ ಕೈಙ್ಕರ್ಯತ್ತುಕ್ಕು - ಮಾಡುವ ಕೈಙ್ಕರ್ಯಕ್ಕೆ, ಪ್ರಯೋಜನಾಂತರಮ್‌ಕೋಲುಗೈ-ನಶ್ವರಗಳಾದ ಇತರ ಪ್ರಯೋಜನಗಳನ್ನು ಪ್ರಾರ್ಥಿಸೋಣವು, ಪೊಲಿಶೈಕ್ಕು ಇಡುವಾರ ಮಾತ್ರಮೆಙ್ಗಿರಶ್ರುತ್ಯರ್ಥತ್ತೈ - ಬಡ್ಡಿಗಾಗಿ ಮಾತ್ರವೇ ಹಣವನ್ನು ಹಾಕುವವರು" ಎಂಬ ಶ್ರುತಿಯ ಅರ್ಥವನ್ನು, ತೆಳಿನ್ದು - ಆ ಶ್ರುತಿಯ ಉಪದೇಶವನ್ನು ಚನ್ನಾಗಿ ತಿಳಿದವರಾಗಿ, ಎಂದರೆ, ಮೂಲಧನದ ವಿಷಯದಲ್ಲಿ ಜಾಗರೂಕತೆಯಿಲ್ಲದೆ ಬಡ್ಡಿಯ ವಿಷಯದಲ್ಲಿಮಾತ್ರ ಆಶೆಯುಳ್ಳವರಾಗಿ ಎಂಬ ಭಾವವು, ಕೈಂಕರ್ಯತ್ತುಕ್ಕು ಮೋಕ್ಷಮುಮ್ ಪ್ರಯೋಜನಮೆನ್ರು ಕೋಲಾದೇ-ತಾನು ಅಪೇಕ್ಷಿಸಿದ ಕೈಙ್ಕರ್ಯಕ್ಕೆ ಮೋಕ್ಷವೂ ಒಂದು ಪ್ರಯೋಜನವೆಂದು ಪ್ರಾರ್ಥಿಸದೆ, ಕೈಂಕರ್ಯೈಕ ಪ್ರಯೋಜನರಾಯ್ ಇರುಕ್ಕುಮವರ್

ಗಳುದ್ದೈಯು - ತಮಗೆ ಲಭಿಸುವ ಕೈಙ್ಕರ್ಯವೇ ಪ್ರಯೋಜನವೆಂದು ಭಾವಿಸಿರುವವರ ಪರಮೈಕಾಂತಿತ್ವವು, ಷೋಡಶವರ್ಣ ಸುವರ್ಣತೋಽಡೊಕ್ಕ್ಯಮ್ - ೧೬ ಬಣ್ಣದ ಚಿನ್ನಕ್ಕೆ ಸಮಾನವಾಗಿರುತ್ತದೆ. ಒಂದುರೂಪಾಯಿಗೆ ೧೬ ಆಣೆಯು ಹೇಗೋ ಹಾಗೆ ಸುವರ್ಣದ ೧೬ ಭಾಗದಲ್ಲಿ ಸಂಪೂರ್ಣವಾಗಿ ಎಲ್ಲಾ ಭಾಗವೂ ಸುವರ್ಣವಾಗಿದ್ದರೆ, ಹೇಗೆ ಹಲಸಿನ ತೊಳೆಯುಹಾಗೆ ಪ್ರಕಾಶಿಸುತ್ತಾ ರಮಣೀಯವಾಗಿರುವವೂ ಅಲ್ಲದೆ ಅನರ್ಘ್ಯವಾದುದೂ ಆಗುತ್ತದೋ, ಹಾಗೆ ಆ ಪರಮೈಕಾಂತಿತ್ವವು, ಸರ್ವೋತ್ಕೃಷ್ಟವಾದುದು ಎಂಬ ತಾತ್ಪರ್ಯವು. ಪರಮಾತ್ಮನು "ಪತಿಂ ವಿಶ್ವಸ್ಯ" ಎಂದು ಹೇಳಿರುವಹಾಗೆ ಸರ್ವಶೇಷಿಯು; ಇದು ಆತನಿಗೇನೆ ಅಸಾಧಾರಣ ಧರ್ಮವು, ಹಾಗೆಯೇ ದಾಸ್ಯವೇ ಈ ಚೇತನನಿಗೆ ಅಸಾಧಾರಣ ಧರ್ಮವು. ಹೀಗೆ ಸ್ವಾಮಿ ಭೃತ್ಯ ಸಂಬಂಧವೇ ನಿತ್ಯವಾದುದರಿಂದ, ಭೃತ್ಯನಿಗೆ ಕೈಙ್ಕರ್ಯ ಮಾಡುವದೇ ಯುಕ್ತವಾದ ಧರ್ಮವು; ಹೀಗೆ ಕೈಙ್ಕರ್ಯ ಮಾಡುತ್ತೇನೆಯಾದುದರಿಂದ ತನಗೆ ಮೋಕ್ಷವನ್ನು ಕೊಡು ಎಂದು ಪ್ರಾರ್ಥಿಸಕೂಡದು. ಆದುದರಿಂದ ಶರಣಾಗತಿಯನ್ನನುಷ್ಠಿಸುವದರಲ್ಲಿ ಕೈಙ್ಕರ್ಯೈಕ ಪ್ರಯೋಜನನಾಗಿರಬೇಕೇ ವಿನಾ ಮೋಕ್ಷವನ್ನು ಯಾಚಿಸಕೂಡದು. ಆದುದರಿಂದಲೇ ಹಿಂದೆ ಪುರುಷಾರ್ಥ ಕಾಷ್ಠಾಧಿಕಾರದ ಸಙ್ಗ್ರಹ ಶ್ಲೋಕದಲ್ಲಿ "ನಾಥೇ ನಸ್ತೃಣಮನ್ಯದನ್ಯದಪಿ ವಾ" ಎಂಬಲ್ಲಿ ಮೋಕ್ಷವನ್ನೂ ಕೂಡ ನ ಯಾಚಾಮಹೇ - ನಾನು ಯಾಚಿಸುವದಿಲ್ಲವೆಂದು ಹೇಳಿಕೊಂಡನು. ಹೀಗೆ ಪರಮಾತ್ಮನಿಗೆ ಕೈಙ್ಕರ್ಯವನ್ನೆಸಗುವದೇ ತನಗೆ ಸ್ವರೂಪವೆಂಬುದು ಶ್ರೀ ಲಕ್ಷ್ಮಣಸ್ವಾಮಿಯು ಶ್ರೀರಾಮನಲ್ಲಿ ಮಾಡಿದ ಶರಣಾಗತಿಯಲ್ಲಿ ಸ್ಪಷ್ಟವು. "ಸ ಭ್ರಾತುಶ್ಚರಣೌ ಗಾಢಂ ನಿಪೀಡ್ಯ ರಘುನಂದನಃ । ಸೀತಾ ಮುವಾಚಾತಿಯಶಾ ರಾಘವಂ ಚ ಮಹಾವ್ರತಂ" (ಅಯೋಧ್ಯಾ. ೩೧. ೨) ರಘುನಂದನನಾದ ಲಕ್ಷ್ಮಣನು, ತನ್ನ ಮುಂದೆ ಪ್ರಾರ್ಥಿಸುವ ಪ್ರಯೋಜನ ಪ್ರಾಪ್ತಿಗಾಗಿ ಪುರುಷಕಾರತ್ವ ಉಪಾಯತ್ವ ಉಪೇಯತ್ವಗಳನ್ನು ಹೊಂದಿರುವ ಸೀತೆಯ ಸಮಕ್ಷಮದಲ್ಲಿ "ಮಿತ್ರಭಾವೇನ ಸಂಪ್ರಾಪ್ತಂ ನ ತ್ಯಜೇಯಂ ಕಥಂಚನ" ಎಂದೂ. ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ । ಅಭಯಂ ಸರ್ವ ಭೂತೇಭ್ಯೋ ದದಾಮ್ಯೇತದ್ವ್ರತಂ ಮಮ" ಎಂದು ಮಹಾವ್ರತವನ್ನು ಕೈಕೊಂಡಿರುವ ಶ್ರೀರಾಮನಲ್ಲಿ ಜ್ಯೇಷ್ಠಭ್ರಾತಾ ಪಿತೃಸಮಃ ಎಂದು ಹೇಳಿರುವದರಿಂದ ಮಾತ್ರವೇ ಶರಣಾಗತಿಯನ್ನನುಷ್ಠಿಸದೇ, ಪರತತ್ವವೆಂದೇ ಶರಣಾಗತಿಯನ್ನನುಷ್ಠಿಸಿರುತ್ತಾನೆ. "ಭ್ರಾತಾ ನಿವಾಸಶ್ಶರಣಂ ಸುಹೃತ್" ಎಂದು ಉಪನಿಷತ್ತಿನಲ್ಲಿರುವ ಹಾಗೆ ಇಲ್ಲಿನ ಭ್ರಾತುಃ ಎಂಬ ಶಬ್ದವು ಸಿದ್ಧೋಪಾಯನಾಗಿಯೂ, ಪ್ರಾಪ್ಯ

ನಾಗಿಯೂ, ಸರ್ವ ವಿಧಬಂಧುವು ತನಗೆ ಶ್ರೀರಾಮನೇ ಎಂದು ಸೂಚಿಸಲ್ಪಟ್ಟಿತು. ಹಾಗೆಯೇ ಇನ್ನೊಂದು ಕಡೆಯಲ್ಲೂ ಭ್ರಾತಾ ಭರ್ತಾ ಚ ಬಂಧುಶ್ಚ ಪಿತಾ ಚ ಮಮರಾಘವಃ ಎಂದು ಹೇಳಿರುವದರಿಂದ ಸರ್ವ ಸುಹೃತ್ತಾದ ಶ್ರೀರಾಮನಲ್ಲಿ "ಅಹಂ ತ್ವಾನುಗಮಿಷ್ಯಾಮಿ-ನಾನು ನಿನ್ನನ್ನನುಸರಿಸಿ ಬರುವೆನು" ಅನುಜ್ಞೆಯನ್ನು ಕೊಡಬೇಕೆಂದುಪ್ರಾರ್ಥಿಸಿ ಹೇಳುತ್ತಾನೆ.–ನದೇವ ಲೋಕಾ ಕ್ರಮಣಂ ಕಾಮಯೇ ನತ್ವಯಾ ವಿನಾ- ದೇವಾನಾಂ ಪೂ ರಯೋಧ್ಯಾ ಎಂಬಲ್ಲಿ ಹೇಳಿರುವ ಪರಮಪದ ಪ್ರಾಪ್ತಿಯನ್ನೂ, ತ್ವಯಾವಿನಾ ಅಪೇಕ್ಷಿಸುವನಲ್ಲವೆಂದು ತಿಳಿಸಿ, ಕುರುಷ್ವಮಾನುನುಚರಂ ವೈಧರ್ಮ್ಯಂ ನೇಹ ವಿದ್ಯತೇ! ಕೃತಾರ್ಥೋಹಂಭವಿಷ್ಯಾಮಿ ತವ ಚಾರ್ಥಃಪ್ರಕಲ್ಪತೇ . ನನ್ನನ್ನು ನಿನಗೆ ದಾಸನಾಗಿ ಮಾಡಿಕೋ. ಇದರಲ್ಲಿ ವೈಧರ್ಮ್ಯವೇನೂ ಇಲ್ಲವು, ಸ್ವಾಮಿಯಾದ ನಿನ್ನ ಸೇವ್ಯ ಧರ್ಮವೂ ಪೂರ್ಣವಾಯಿತು, ದಾಸನಾದ ನನ್ನ ಸೇವಕಧರ್ಮವೂ ಪೂರ್ಣವಾಯಿತು, ನಿನ್ನ ಕೈಂಕರ್ಯ ಪ್ರಾಪ್ತಿಯಿಂದ ನಾನು ಕೃತಾರ್ಥನಾದೆನು, ತವಚಾರ್ಥಃ ಪ್ರಕಲ್ಪತೇ-ಅದು ನಿನಗೇನೆ ಪ್ರಯೋಜನವೇ ವಿನಾ ನನಗೇನೂ ಅಲ್ಲವು. ಹೀಗೆ ಪರಮಪದವನ್ನು, ಕೋರದೆ, "ಭವಾಂಸ್ತು ಸಹ ವೈದೇಹ್ಯಾ ಗಿರಿಸಾನುಷು ರಂಸ್ಯತೇ। ಅಹಂ ಸರ್ವಂ ಕರಿಷ್ಯಾಮಿ ಜಾಗ್ರತಸ್ಸ್ವಪತಶ್ಚತೇ॥ ಎಂಬ ಶ್ಲೋಕದಲ್ಲಿ ಸೀತಾರಾಮರಿಬ್ಬರಿಗೂ ಕೈಂಕರ್ಯವನ್ನೇ ಪ್ರಾರ್ಥಿಸಿರುತ್ತಾನೆ. ಇದೀಗ ಚೇತನನ ಸ್ವರೂಪಕ್ಕೆ ಯೋಗ್ಯವಾದುದರಿಂದ, ಅಂತಹ ಪರವೈಕಾಂತಿತ್ವವು ಸಂಪೂರ್ಣ ಬಣ್ಣವುಳ್ಳ ಚೊಕ್ಕ ಭಂಗಾರಕ್ಕೆ ಸಮಾನವೆಂದು ಹೇಳಿದರು. ಆದುದರಿಂದ ಇಂತಹ ಪರವೈಕಾಂತಿಯು ಸರ್ವ ಶ್ರೇಷ್ಠನೆಂಬ ಭಾವವು. ಈ ವಾಕ್ಯದಲ್ಲಿ ಪ್ರಯೋಜನಾಂತರವನ್ನು ಪ್ರಾರ್ಥಿಸೋಣವು ನಿಂದಿಸಲ್ಪಟ್ಟಿರುತ್ತದೆ. ಇದಕ್ಕೆ ಪ್ರಮಾಣವಾಗಿ ಶ್ರುತಿಯನ್ನು ಸೂಚಿಸಿರುತ್ತಾರೆ:—ಪೊಲಿಶೈಕ್ಕಿಡುವಾರ್ ಮಾತ್ರಮೆಜ್ಜ್ಗರ ಶ್ರುತಿಯು ಯಾವುದೆಂದರೆ, "ಕುಸೀದಮೇಕೇವಿಹರಂತಿ ಸರ್ವೇಯ ಆಶೀರ್ವದಂತೋ ದದತ್ಯಕಿಂಚಿತ್ । ಪರ್ಯನ್ತಲೋಕಾಸ್ತ್ವಿಹತೇ ಭವಂತಿ ಅನಾಶಿಷಸ್ತು ವಿಜಯಾಯಾ ನಂತಾಯ" "ಯೇ – ಯಾರು ಆಶೀರ್ವದಂತಃ - ಪುರುಷಾರ್ಥಾಭಿಲಾಷಿಗಳಾಗಿ, ದದತ್ಯತ್ರಕಿಂಚಿತ್ - ಈ ಸಂದರ್ಭದಲ್ಲಿ ಸ್ವಲ್ಪ ಕೈಂಕರ್ಯವನ್ನು ಮಾಡುವರೋ, ಕುಸೀದಮೇಕೇ ವಿಹರಂತಿ ಸರ್ವೇ - ಕೆಲವರೆಲ್ಲರೂ ಬಡ್ಡಿಯಿಂದಲೇ ಜೀವಿಸುವರು ಯಾರೋ ಹಾಗೆ ಎಂದು ತಿಳಿಯತಕ್ಕದ್ದಾಗಿರುತ್ತದೆ, ಏಕೆಂದರೆ ತೇ ಸರ್ವೇ ಅವರೆಲ್ಲರೂ,ಪರ್ಯನ್ತ ಲೋಕಾಸ್ತ್ವಿಹ ಭವಂತಿ - ಮೂಲಧನವು ಹೇಗೆ ಅಸ್ಥಿರವೋ ಅಂತಹ ಅಸ್ಥಿರಗಳಾದ ಲೋಕಗಳನ್ನು ಹೊಂದುವರು. ಬಡ್ಡಿಯ ಅಪೇಕ್ಷೆಯಿಲ್ಲದವರು ಸ್ಥಿರವಾದ

## ಉದ್ಧೃತ ಭಾಗವತೋತ್ಕರ್ಷೇ ಮಹರ್ಷಿ ದಿವ್ಯಸೂಕ್ತ್ಯಯೋಃಪಿ ಸಂತಿ.

ಇವನ್ಮಾತ್ತ್ರರಿಯುಮ್ ಮಹರ್ಷಿಗಳ್ ಮಹಾಭಾರತಾದಿಗಳಿಲೇ ಇಪ್ಪರ ನ್ವೈಕಾಂತಿಗಳುಡೈಯ ಮಾಹಾತ್ಮ್ಯತ್ತೈ ಪ್ರಪಂಚಿತ್ತಾರ್‌ಗಳ್.

---

ಮೂಲಧನವನ್ನು ಇಟ್ಟುಕೊಂಡು ಹೇಗೆ ಸುಖವಾಗಿರುವರೋ, ಹಾಗೆ, ಅನಾಶಿಷಸ್ತು - ಫಲಾಭಿಲಾಷೆಗಳಿಲ್ಲದವರಾದರೋ, ಅನಂತಾಯ ವಿಜಯಾಯಭವಂತಿ-ಅಪಾರವಾದ ನಿರವಧಿಕ ನಿತ್ಯಕೈಂಕರ್ಯಗಳನ್ನೆಸಗುವವರು ಆಗುವರು." ಹಾಗೆಯೇ ಏಕಾಯನ ಶಾಖೆಯಲ್ಲಿ, "ಅಥಭೋ ಭಗವಂತಂ ಯಾಚೇತ ನಭೋ ಇತ್ಯಾಹ ಆಶ್ರಯತವ್ಯೋಭಗವಾನ್ ಭವತಿ, ನತ್ವೇವ ಯಾಚಿತವ್ಯಃ" ಎಂದುಫಲಾಭಿಕಾಂಕ್ಷೆಯು ಕೂಡದೆಂದು ಹೇಳಲ್ಪಟ್ಟಿರುತ್ತದೆ, ಹಾಗೆಯೇ "ಯಸ್ಯ ಸರ್ವೇ ಸಮಾರಂಭಾಃ ಅನಾಶೀರ್ಬಂಧನಾ ಇಹ। ತ್ಯಾಗೇ ಯಸ್ಯ ಹುತಂ ಸರ್ವಂ ಸತ್ಯಾಗೀ ಸ ಚ ಪಂಡಿತಃ" ಎಂಬಲ್ಲೂ ಫಲಾಕಾಂಕ್ಷೆಯಿಲ್ಲದೆ ಬಂಧನಕ್ಕೊಳಗಾಗದೆ ಕರ್ಮಾನುಷ್ಠಾನವನ್ನು ಮಾಡುವವನೇ ಕರ್ಮವನ್ನು ಪರಮಾತ್ಮನಲ್ಲಿ ಸಮರ್ಪಿಸಿದವನು, ಆತನೇ ಪಂಡಿತನು, ಏಕೆಂದರೆ ಪರಮಾತ್ಮ ಪ್ರೀತ್ಯರ್ಥವಾಗಿ ಕರ್ಮವನ್ನು ಮಾಡಿ ಫಲಾಭಿಲಾಷೆಯಿಲ್ಲದೆ ಸಾತ್ವಿಕ ತ್ಯಾಗಮೂಲಕವಾಗಿ ಅದನ್ನು ಪರಮಾತ್ಮನಲ್ಲಿ ಸಮರ್ಪಿಸುವನೆಂಬ ಭಾವವು. ಇಂತಹ ಭಾಗವತನು ಪರಮೈಕಾಂತಿಗಳಲ್ಲಿ ಚೊಕ್ಕ ಬಣ್ಣದ ಸುವರ್ಣವೆಂದು ಕೊಂಡಾಡಿದುದಕ್ಕೆ ಮಹರ್ಷಿಗಳ ದಿವ್ಯಸೂಕ್ತಿಗಳುಂಟೋ ಎಂದರೆ ಮಹರ್ಷಿಗಳೆಲ್ಲಾ ಹಾಗೆಯೇ ಪ್ರಾಶಸ್ತ್ಯವನ್ನು ಹೇಳಿರುತ್ತಾರೆಂದು ತಮ್ಮ ಅಭಿಪ್ರಾಯವನ್ನು ಸಮರ್ಥಿಸುತ್ತಾರೆ. ಆದರೆ ಗ್ರಂಥವಿಸ್ತರ ಭಯದಿಂದ ಅವುಗಳನ್ನು ಉದಾಹರಿಸಲಿಲ್ಲವು ಆ ಗ್ರಂಥಾಲೋಡನೆಯುಳ್ಳವರಿಗೆ ವೇದ್ಯವಾಗಲು ಸಂದೇಹವಿಲ್ಲವೆಂಬ ಭಾವವು.

**ಇಂತಹ ಸುವರ್ಣ ಸದೃಶ ಭಾಗವತೋತ್ಕರ್ಷೆಯ ವಿಷಯದಲ್ಲಿ ಅನೇಕ ಮಹರ್ಷಿಸೂಕ್ತಿಗಳುಂಟು.**

---

ಇವನ್ಮಾತ್ತು - ಈ ವಿಷಯವಾದ ಮರ್ಯಾದೆಯನ್ನು ಎಂದರೆ ಚೊಕ್ಕಭಂಗಾರದ ಉತ್ಕರ್ಷಕ್ಕೆ ಸಮಾನವಾದುದು ಭಾಗವತೋತ್ಕರ್ಷವು ಎಂಬ ಮರ್ಯಾದೆಯನ್ನು, ಅರಿಯುಮ್ ಮಹರ್ಷಿಗಳ್-ವೇದಾರ್ಥಗಳನ್ನು ತಿಳಿದಿರುವ ವ್ಯಾಸರೇ ಮೊದಲಾದ ಮಹರ್ಷಿಗಳು,ಜ್ಞಾನದ ಅಚ್ಚುಮಡವನ್ನು ಸೇರಿದವರಾದುದರಿಂದಲೇ ಅವರಿಗೆ ಮಹರ್ಷಿಗಳು ಎಂಬ ಹೆಸರು ಎಂಬ ಭಾವವು. ಮಹಾ ಭಾರತಾದಿಗಳಲ್ಲಿ,

ಇಲ್ಲಿ ಆದಿ ಪದದಿಂದ ಶ್ರೀ ಭಾಗವತ, ಹರಿಭಕ್ತಿಸುಧೋದಯ, ಸ್ಕಾಂದಪುರಾಣ, ಭೃಗುಸಂಹಿತಾದಿಗಳು ಹೇಳಲ್ಪಟ್ಟವು. ಪರಮೈಕಾಂತಿಗಳ-ಮೋಕ್ಷಾರ್ಥಿಯಾಗಿ ಪ್ರಪನ್ನನೂ ಭಾಗವತನೂ ಎಂದೆನಿಸುವವನ, ಮಾಹಾತ್ಮ್ಯವನ್ನು, **ಪ್ರಪಂಚಿತ್ತಾರ್‌ಗಳ್** - ವಿಸ್ತರಿಸಿ ತಿಳಿಸಿರುತ್ತಾರೆ. ಭಾರತದಲ್ಲಿ ಹೇಳಿರುವದು, **"ಯೇ ಯಜನ್ತಿ ಹರಿಂ ಸರ್ವೇ ಬ್ರಾಹ್ಮಣಾ ಏವ ತೇ ಸ್ಮೃತಾಃ"** ಮತ್ತು **"ನ ಶೂದ್ರಾ ಭಗವದ್ಭಕ್ತಾ ವಿಪ್ರಾ ಭಾಗವತಾ ಸ್ಸ್ಮೃತಾಃ"** ಶ್ರೀ ಭಾಗವತದಲ್ಲಿ - **"ಶ್ವಪಚೋಪಿ ಮಹೀಪಾಲ ವಿಷ್ಣುಭಕ್ತೋ ದ್ವಿಜಾಧಿಕಃ"** ಎಂದೂ, **"ನ ಶೂದ್ರಾ ಭಗವದ್ಭಕ್ತಾಃ"** ಎಂದೂ ಇರುತ್ತದೆ. ಹರಿಭಕ್ತಿ ಸುಧೋದಯದಲ್ಲಿ - **"ಶುಚಿಸದ್ಭಕ್ತಿದೀಪ್ತಾಗ್ನಿ ದಗ್ಧದುರ್ಜಾತಿ ಕಿಲ್ಬಿಷಃ । ಶ್ವಪಚೋಪಿ ಬುಧೈಃ ಶ್ಲಾಘ್ಯೋ ನವೇದಾಢ್ಯೋಪಿ ನಾಸ್ತಿಕಃ"** ಇಲ್ಲಿಯೂ ಶ್ವಪಚನಾಗಿದ್ದರೂ ಪರಮಾತ್ಮನಲ್ಲಿ ಭಕ್ತಿಯುಕ್ತನಾಗಿದ್ದರೆ ಪಂಡಿತ ಮಾನ್ಯನೆಂದು ಹೇಳಲ್ಪಟ್ಟಿರುತ್ತದೆ. ಸ್ಕಾಂದದಲ್ಲಿ, **"ವಿಷ್ಣೋಃ ಚಕ್ರಾಂಕಿತಂ ಗಾತ್ರಂ ಶೂದ್ರೇಷ್ವಪಿಚ ದೃಶ್ಯತೇ । ತೇನೈ ಸ್ವರ್ಗಸ್ಯ ನೇತಾರೋ ಬ್ರಾಹ್ಮಣಾಭುವಿ ದೇವತಾಃ"** ಹೀಗೆ ಭಾಗವತರನ್ನಾಶ್ರಯಿಸಿ ಪಂಚ ಸಂಸ್ಕಾರಾದಿಗಳನ್ನು ಹೊಂದಿದವರು ಶೂದ್ರರಲ್ಲೂ ಉಂಟೆಂದೂ, ಅಂತವರು ಈ ಭೂಮಿಯಲ್ಲಿರುವ ದೇವತೆಗಳು ಎಂದರೆ ಬ್ರಾಹ್ಮಣರಿಗೆ ಸಮಾನರೆಂದು ಹೇಳಲ್ಪಟ್ಟಿರುತ್ತದೆ. **ನಶೂದ್ರಾ ಭಗವದ್ಭಕ್ತಾಸ್ತೇಹಿ ವಿಪ್ರಾ ಇತಿ ಸ್ಮೃತಾಃ"** ಎಂದೂ ಇದೆ. ಹಾಗೆಯೇ **ಯಾಃ ಕ್ರಿಯಾ ಸ್ಸಂಪ್ರಯುಕ್ತಾಸ್ಸ್ಯುರೇಕಾಂತಗತಬುದ್ಧಿಭಿಃ । ತಾಸ್ಸರ್ವಾಶ್ಶಿರಸಾ ದೇವಃ ಪ್ರತಿಗೃಹ್ಣಾತಿ ವೈಸ್ವಯಂ"** ಎಂಬಲ್ಲಿ ಜಾತಿನೊಡಲಾದವುಗಳನ್ನು ಹೇಳದೆ ಎಲ್ಲಾ ಏಕಾಂತವನ್ನು ಹೊಂದಿದ ಬುದ್ಧಿಯುಳ್ಳವರ ಆರಾಧನರೂಪ ಕೈಂಕರ್ಯಗಳನ್ನೆಲ್ಲಾ ದೇವನು ಶಿರಸಾವಹಿಸುವನೆಂದು, ಸರ್ವವರ್ಣದವರಿಗೂ ಮಾಹಾತ್ಮ್ಯವು ಸಮಾನವಾಗಿ ಹೇಳಲ್ಪಟ್ಟಿರುತ್ತದೆ. ಹೀಗೆ ಭಾಗವತ ಮಾಹಾತ್ಮ್ಯವನ್ನು ಹೇಳುವ ಸಂದರ್ಭದಲ್ಲೆಲ್ಲಾ ತಾವು ಉಪದೇಶಿಸಿದಹಾಗೆಯೇ ಅಭಿಪ್ರಾಯವೆಂದು ತಿಳಿಯತಕ್ಕದ್ದೆಂಬ ಭಾವವು.

ಹೀಗೆ ಮಹರ್ಷಿಗಳು ಹೇಳಿದ್ದರೂ ನೀವು ಹೇಳಿದಹಾಗೆಯೇ ಅರ್ಥಮಾಡಿದಕೆ ವಿಹಗೇಂದ್ರ ಸಂಹಿತೆಯಲ್ಲಿ ಎಂತಹ ನಿಕೃಷ್ಟ ಜನ್ಮವನ್ನು ಹೊಂದಿದ್ದರೂ **"ನಾರಾಯಣೈಕ ನಿಷ್ಠಸ್ಯ"** ಎಂಬ ಶ್ಲೋಕದಲ್ಲಿ ಮಹಾಭಾಗವತನ ವೃತ್ತಿಯೆಲ್ಲವೂ ಕೂಡ ಭಗವದರ್ಚನವೆಂದೂ ಆತನು ಹೇಳುವದೆಲ್ಲವೂ ಮಂತ್ರಜಪವೆಂದೂ, ಆತನ ಈಕ್ಷಣವೆಲ್ಲಾ ಧ್ಯಾನವೆಂದೂ, ಆತನ ಪಾದಸಂಬಂಧವುಳ್ಳ ಅಶುದ್ಧ ಜಲವೂ ಪಾವನವೆಂದೂ, ಹೀಗೆಲ್ಲಾ ನಾನಾವಿಧವಾಗಿ ಹೇಳೋಣವು,

## "ನಾರಾಯಣೈಕನಿಷ್ಠಸ್ಯೇ"ತಿ ಶ್ಲೋಕದ್ವಯಸ್ಯ ನಿಷ್ಕರ್ಷಾರ್ಥಃ

ಇವರ್ ಪ್ರಭಾವತ್ರೈಪತ್ರ (೧) "ನಾರಾಯಣೈಕನಿಷ್ಠಸ್ಯ ಯಾಯಾ ವೃತ್ತಿಸ್ತದರ್ಚನಂ । ಯೋಯೋ ಜಲ್ಪಸ್ಸಜಪಸ್ತದ್ಧ್ಯಾನಂ ಯನ್ನಿರೀಕ್ಷಣಂ ತತ್ಪಾದಾಂಬ್ವತುಲಂ ತೀರ್ಥಂ ತದುಚ್ಛಿಷ್ಟಂ ಸುಪಾವನಂ । ತದುಕ್ತಿಮಾತ್ರಂ ಮಂತ್ರಾಗ್ರ್ಯಂ ತತ್ಸ್ಪೃಷ್ಟಮಖಿಲಂ ಶುಚಿ" ಎಂಬೆರಡು ಶ್ಲೋಕಗಳು

---

ಶಾಸ್ತ್ರಾಭಿಪ್ರಾಯವನ್ನು ಮೀರಿ ಹೇಳಿದಂತೆ ಆಗುವದಿಲ್ಲವೇ? ಅದಕ್ಕೇನು ಉತ್ತರವೆಂದು ಪೂರ್ವಪಕ್ಷಿಯು ಆಕ್ಷೇಪಿಸಬಹುದೆಂದು ಭಾವಿಸಿ, ಆ ಶ್ಲೋಕಗಳಿಗೆ ಸರ್ವ ಸಮಂಜಸವಾದ ಅರ್ಥವನ್ನು ಬೋಧಿಸುತ್ತಾರೆ. ಹೀಗೆ ಸರ್ವ ಸಮಂಜಸಾರ್ಥವನ್ನು ಬೋಧಿಸದೇ ಹೋದರೆ ತುಂಬಾ ಅನರ್ಥಗಳುಂಟಾದೀತೆಂದು ಭಾವಿಸಿ, ಪರಮ ಕರುಣೆಯಿಂದ ನಿಷ್ಕರ್ಷಾರ್ಥವನ್ನು ತಿಳಿಸುತ್ತಾರೆ.

"ನಾರಾಯಣೈಕನಿಷ್ಠಸ್ಯ" ಎಂಬೆರಡು ಶ್ಲೋಕಗಳ ನಿಷ್ಕರ್ಷವಾದ ಅರ್ಥವು.

---

ಇವರ್ - ಈ ಜನ್ಮ ನಿಕೃಷ್ಟತೆಯುಳ್ಳ ಮಹಾ ಭಾಗವತನ, ಪ್ರಭಾವತ್ರೈಪತ್ರ - ಮಾಹಾತ್ಮ್ಯೆಯನ್ನು ಕುರಿತ, (೧) "ನಾರಾಯಣೈಕನಿಷ್ಠಸ್ಯ - ಅನ್ಯ ದೇವತಾ ಸಂಬಂಧವಿಲ್ಲದೆ ಪರತತ್ವವಾದ ನಾರಾಯಣನೊಬ್ಬನಲ್ಲೇ ನಿಷ್ಠೆಯುಳ್ಳ ಮಹಾ ಭಾಗವತನ, ಯಾಯಾ ವೃತ್ತಿಃ - ಯಾವಯಾವ ಅನುಷ್ಠಾನವೇ ಆಗಲಿ, ಅವೆಲ್ಲಾ, ತದರ್ಚನಂ - ಆ ಭಗವಂತನ ಅರ್ಚನೆಯ ರೂಪವಾದುದು ; ಯೋಯೋ ಜಲ್ಪಃ - ಆತನು ಯಾವ ಯಾವುದನ್ನು ಹೇಳುವನೋ ಸಜಪಃ - ಅವೆಲ್ಲವೂ ಜಪರೂಪವಾದುದು, ಯನ್ನಿರೀಕ್ಷಣಂ - ಯಾವುದನ್ನು ದೃಷ್ಟಿಸಿ ನೋಡುವನೋ, ತತ್ ಅದು, ಧ್ಯಾನಂ - ಧ್ಯಾನವು ; ತತ್ಪಾದಾಂಬು, ಆತನ ಪಾದಸ್ಪರ್ಶವಾದ ಜಲವು, ಅತುಲಂ ತೀರ್ಥಂ - ಅಸದೃಶವಾದ ಪವಿತ್ರವಾದ ತೀರ್ಥವು, ತದುಚ್ಛಿಷ್ಟಂ - ಆತನು ಊಟ ಮಾಡಿದನಂತರ ಮಿಕ್ಕಿದುದು, ಸುಪಾವನಂ - ತುಂಬಾ ಪವಿತ್ರವಾದುದು ; ತದುಕ್ತಿ ಮಾತ್ರಂ - ಆತನ ಮಾತೇ, ಮಂತ್ರಾಗ್ರ್ಯಂ - ಶ್ರೇಷ್ಠವಾದ ಮಂತ್ರವು ; ತತ್ಸ್ಪೃಷ್ಟಂ ಅಖಿಲಂ - ಆತನು ಮುಟ್ಟಿದುದು ಎಲ್ಲವೂ, ಶುಚಿ - ಬಹು ಪವಿತ್ರವಾದುದು ; ಇಲ್ಲಿ ಶಾಸ್ತ್ರವಿರುದ್ಧವಾದ ವೃತ್ತಿಯೇ ಹೇಳಲ್ಪಟ್ಟಿತಲ್ಲವೇ ಎಂದರೆ, ಸಮಾಧಾನವನ್ನು ಹೇಳುತ್ತಾರೆ.—

---

(೧) ವಿಹಗೇಂದ್ರ ಸಂಹಿತೆ.

ಪ್ರಮಾಣಮೇಯಯಾಗಿಲುಮ್, ಇಙ್ಗು ಯಾಯಾವೃತ್ತಿ ಸ್ತದರ್ಚನಂ” ಎನ್ರು ದು, ಶಾಸ್ತ್ರವಿರುದ್ಧವೃತ್ತಿಯೈಚ್ಚೊನ್ನಪಡಿಯನ್ರು ; ದೇಶಕಾಲಾಧಿ ವೈಗುಣ್ಯತ್ತಾಲೇ (೧) “ಆಪತ್ಸ್ವನಂತರಾವೃತ್ತಿಃ” ಎಙ್ಗರ ನಿಲೈಯಿಲೆ ನಿನ್ರು

---

ಎಙ್ಗರಶ್ಲೋಕಙ್ಗಳ್-ಎಂಬ ಶ್ಲೋಕಗಳು, ಪ್ರಮಾಣಮೇಯಯಾಗಿಲುಮ್-ಶ್ರೀ ಯಾಮುನೇಯರೇ ಮೊದಲಾದವರು ಯಾರೂ ಪ್ರಮಾಣವಾಗಿ ಉದಾಹರಿಸದಿದ್ದರೂ ಸಂಹಿತಾವಾಕ್ಯವಾಗಿರುವದರಿಂದ ಪ್ರಮಾಣವೆಂದೊಪ್ಪಿಕೊಂಡರೂ, ಇಙ್ಗು - ಈ ಸಂದರ್ಭದಲ್ಲಿ, “ಯಾಯಾವೃತ್ತಿ ಸ್ತದರ್ಚನಂ” ಎನ್ರದು - ಎಂದು ಹೇಳಿರುವದು, ಶಾಸ್ತ್ರ ವಿರುದ್ಧವಾದ ವೃತ್ತಿಯನ್ನು ಎಂದರೆ ಆಚಾರವನ್ನು, ಚೊನ್ನಪಡಿಯನ್ರು - ಹೇಳಿದಹಾಗೆ ಅಭಿಪ್ರಾಯುವಲ್ಲವು. ಭಗವದರ್ಚನವಾಗುತ್ತದೆಂದು ಹೇಳಬೇಕಾದರೆ, ಶಾಸ್ತ್ರವಿರುದ್ಧವಾಗಿರುವದನ್ನು ಸಂಹಿತೆಯು ಭಗವದರ್ಚನೆಯಾಗುತ್ತದೆಂದು ಎಂದಿಗಾದರೂ ಹೇಳೀತೋ? ಮತ್ತು ಆ ಭಾಗವತನು ಶಾಸ್ತ್ರವಿರುದ್ಧವಾದುದನ್ನು ಎಂದಿಗಾದರೂ ಅನುಷ್ಠಿಸುವನೋ? ಎರಡೂ ಇಲ್ಲವು. ಆದುದರಿಂದ ಸರಿಯಾಗಿ ಅರ್ಚನಾದಿಗಳನ್ನು ನಡೆಸಲು ಸಾಧ್ಯವಿಲ್ಲದೆ ಗೌಣವಾಗಿ ಅರ್ಚನಾರೂಪವಲ್ಲಿ ಅನುಷ್ಠಿಸಿದರೂ ಮಹಾಭಾಗವತನಾದ ಪ್ರಯುಕ್ತ, ಆ ಕಿಂಚಿತ್ಕಾರವನ್ನೂ ಕೂಡ ಅರ್ಚನರೂಪದಲ್ಲಿ ಭಾವಿಸಿ ಸರ್ವೇಶ್ವರನು ತೃಪ್ತನಾಗುವನೆಂಬ ಭಾವವು. ಹಾಗಲ್ಲದೆ ಯಾ ಯಾ ವೃತ್ತಿಃ ಎಂಬುದರಿಂದ ತನ್ನ ದಂತಧಾವನ ಸ್ನಾನಾದಿ ವೃತ್ತಿಗಳೂ ಯಾವ ವೃತ್ತಿಗಳೇ ಆಗಲಿ ಅರ್ಚನರೂಪವಲ್ಲದುದು ಆರಾಧನೆಯಾಗುವದಿಲ್ಲವು, ಆದುದರಿಂದ ಆ ವೃತ್ತಿಯು ಆರಾಧನರೂಪವಾದುದೇ ಆಗಿರಬೇಕೆಂದೂ, ಅದರಲ್ಲಿ ಏನಾದರೂ ಕ್ರಮದಲ್ಲಿ ಮಾತ್ರ ವ್ಯತ್ಯಾಸವೇ ವಿನಾ ಶಾಸ್ತ್ರ ವಿಷಯದಲ್ಲಿ ವಿರುದ್ಧವಾದುದೇನೂ ಅಲ್ಲವೆಂದು ತೋರಿ ಬರುತ್ತದೆಯಾದುದರಿಂದ, ಹಾಗೆಯೇ ಶಾಸ್ತ್ರ ನಿಷಿದ್ಧವಾದವೂ ಎಂದಿಗೂ ಅರ್ಚನೆಯಲ್ಲವೆಂಬುದೂ ವ್ಯಕ್ತವು. ಅದಕ್ಕೆ ಇನ್ನೊಂದುವಿಧವಾಗಿಯೂ ನಿರ್ವಾಹವನ್ನು ಹೇಳುತ್ತಾರೆ. ಈ ಸಂಹಿತಾ ಶ್ಲೋಕಗಳಿಗೆ ಮೇಲೆ ಮೇಲೆ ತೋರುವ ಅರ್ಥವನ್ನು ಹೇಳತಕ್ಕದ್ದಲ್ಲವು. ಏಕೆಂದರೆ ಅವು ಶಾಸ್ತ್ರವಿರುದ್ಧಾರ್ಥಗಳಾಗುವವು. ಭಾಗವತ ಮಾಹಾತ್ಮ್ಯೆಯನ್ನು ಪ್ರತಿಪಾದಿಸುವದರಲ್ಲೇ ಈ ಶ್ಲೋಕಗಳಿಗೆ ಅಭಿಪ್ರಾಯವಾದುದರಿಂದ ಸರ್ವಸಮಂಜಸಾರ್ಥಗಳನ್ನು ಹೇಳಲು ಉಪಕ್ರಮಿಸುತ್ತಾರೆ. ಯಾಯಾವೃತ್ತಿಸ್ತದರ್ಚನಮ್ ಎಂಬಲ್ಲಿ ಯಾ ಯಾ ವೃತ್ತಿಃ ತತ್ ಸಾ ಸಾ ತದರ್ಚನಮ್ ಎಂದು ಅಧ್ಯಾಹಾರಮಾಡಿಕೊಳ್ಳತಕ್ಕದ್ದು, ದೇಶಕಾಲಾದಿವೈಗುಣ್ಯತ್ತಾಲೆ - ದೇಶಕಾಲಗಳು ವಿಪರೀತವಾಗಿ ಒದಗಿರುವದರಿಂದ (೧)

**ಲುಮ್, ಅದು ಸಮಾರಾಧನೋಪಯುಕ್ತಮಾನ ಸಮ್ಯಗುಪಾದಾನಮಾಮೆ ಪ್ರಪದಿ; (೨) "ಮನ್ನಿಮಿತ್ತಕೃತಂ ಪಾಪಮಪಿ ಧರ್ಮಾಯ ಕಲ್ಪತೇ" ಎನ್ರ**

---

**"ಆಪತ್ಸ್ವನಂತರಾವೃತ್ತಿಃ"** - ಆಪತ್ತುಗಳಲ್ಲಾದರೋ ವಿರುದ್ಧಾಚರಣೆಯು ಯುಕ್ತವು, ಎಜ್ಞರನಿಲ್ಲೆಯಿಲೆ - ಎನ್ನುವ ಸ್ಥಿತಿಯಲ್ಲಿ, **ನಿನ್ರಾಲುಮ್** - ಆ ವಿರುದ್ಧಾಚರಣೆಯು ಇದ್ದರೂ ಅದು, **ಸಮಾರಾಧನೋಪಯುಕ್ತ ಮಾನ** - ಭಗವಂತನ ಆರಾಧನೆಗೆ ಯೋಗ್ಯವಾದ, **ಸಮ್ಯಗುಪಾದಾನ ಮಾಮೆನ್ಪ್ರಪದಿ**- ಒಳ್ಳೇ ಪರಿಕರ ದ್ರವ್ಯಗಳನ್ನೆಲ್ಲಾ ಒದಗಿಸಿಕೊಂಡು ಮಾಡಿದ ಆರಾಧನೆಯ ಹಾಗೆ ಆಗುತ್ತದೆಂದು ಹೇಳಲ್ಪಟ್ಟಿತೆಂದಾದರೂ ಇಟ್ಟುಕೊಳ್ಳಬಹುದು. ಭಗವದಾರಾಧನೆಗೆ ಬೇಕಾದ ಪರಿಕರಗಳನ್ನು ಒದಗಿಸಿಕೊಳ್ಳುವವರಲ್ಲಿ ಸ್ವಲ್ಪ ಶಾಸ್ತ್ರಕ್ಕೆ ವಿರುದ್ಧವಾಗಿದ್ದರೂ, ಸರ್ವೇಶ್ವರನು ಅದನ್ನು ಪರಿಗಣಿಸದೆ ಅದನ್ನೂ ಅರ್ಚನೆಯಾಗಿ ಭಾವಿಸಿ ಸುಪ್ರೀತನಾಗುವನೆಂದು ಅರ್ಥವನ್ನಾದರೂ ಮಾಡಬಹುದೆಂಬ ತಾತ್ಪರ್ಯವು. ಇದರಿಂದ **ಯಾಯಾವೃತ್ತಿಃ** ಎಂಬುದರಿಂದ ಸಿಕ್ಕಿದ ವೃತ್ತಿಗಳೆಂದು ಅರ್ಥಮಾಡಲು ಸಾಧ್ಯವಿಲ್ಲವು. ಆತನ ಆರಾಧನೋಪಯುಕ್ತವಾದ ವೃತ್ತಿಯೇ ಇಲ್ಲಿ ಮುಖ್ಯವಾಗಿ ಹೇಳಲ್ಪಟ್ಟಿತೆಂಬ ಭಾವವು. ಭಾನುವಾರದ ದಿನ ತುಳಸೀ ಹರಣವು ಕೂಡದೆಂದು ಹೇಳಲ್ಪಟ್ಟಿರುತ್ತದೆ. ಈ ಮಹಾ ಭಾಗವತನು ದೇಶಕಾಲಾನುಗುಣವಾಗಿ ಯಾವುದೋ ಒಂದು ಪ್ರದೇಶದಲ್ಲಿ ಒಂದಾನೊಂದು ಕಾಲದಲ್ಲಿರುವಾಗ, ಇನ್ನು ಯಾವ ದ್ರವ್ಯಗಳನ್ನು ಒದಗಿಸಿಕೊಳ್ಳಲು ಸಾಧ್ಯವಿಲ್ಲವಾಗಿ, ಆ ಭಾನುವಾರದ ದಿನ ಹತ್ತಿರವಿದ್ದ ತುಳಸೀಗಿಡದಿಂದ ಶೂದ್ರನಾಗಿದ್ದರೂ ತುಳಸೀದಳಗಳನ್ನೆತ್ತಿ ಭಗವಂತನಿಗೆ ಸಮರ್ಪಿಸಿದರೂ, ಅದೂ ಅರ್ಚನೆಯೆಂದೇ ಭಗವಂತನು ಭಾವಿಸಿ ಸುಪ್ರೀತನಾಗುವನೆಂಬುದು ಅಭಿಪ್ರಾಯವು. **"ಮನ್ನಿಮಿತ್ತಂ ಕೃತಂಪಾಪ ಮಪಿ ಧರ್ಮಾಯ ಕಲ್ಪತೇ"** ಇದು ಸರ್ವೇಶ್ವರನ ವಾಕ್ಯವು; **ಮನ್ನಿಮಿತ್ತಂ** - ನನ್ನ ಆರಾಧನೆ ಮೊದಲಾದವುಗಳ ಮೂಲಕವಾಗಿ, **ಕೃತಂ ಪಾಪಮಪಿ**–ಮಾಡಲ್ಪಟ್ಟುದು ಅಧರ್ಮವಾಗಿ ಪರಿಣಮಿಸಿದರೂ, ತೋರಿಬಂದರೂ **ಧರ್ಮಾಯಃಕಲ್ಪತೇ** - ಧರ್ಮಾನುಷ್ಠಾನವಾಗಿಯೇ ಆಗುತ್ತದೆ- **ಎನ್ರುಕ್ಕುಮ್** – ಎಂದು ಹೇಳಿರುವದಕ್ಕೂ ಇದುವೇ ತಾತ್ಪರ್ಯವು - ಈಗ ನಾವು ಮೇಲೆ ತಿಳಿಸಿದುದೇ ತಾತ್ಪರ್ಯವು ; ಎಂದರೆ ಮನಃಪೂರ್ವಕವಾಗಿ, ಅಂತಹ ನಾರಾಯಣೈಕನಿಷ್ಠನು ಮಾಡಿದ ಪಾಪಗಳೆಲ್ಲಾ ಧರ್ಮವೆಂಬ ಮುಖ್ಯಾರ್ಥವು ತಾತ್ಪರ್ಯವಲ್ಲವು. ಆತನು ಮಾಡುವ ಧರ್ಮಾಚರಣೆಯಲ್ಲೇ ಏನಾದರೂ ಅಧರ್ಮವು ಪ್ರಾಪ್ತವಾದರೆ ಅದನ್ನು ಸರ್ವೇಶ್ವರನು ಅಧರ್ಮವೆಂದು ಭಾವಿಸುವನ

ದುಕ್ಕು ವಿಡುಮೇ ತಾತ್ಪರ್ಯಮ್. ಇಙ್ಙನಲ್ಲಾದಪ್ಪೋದು ಅತಿ ಪ್ರಸಙ್ಗಮ್ ವರುಮ್. "ಯಾಯಾಚೇಷ್ಟಾ" ಎನ್ರು ಪಾಠಮಾನಾಲುಮ್ ಅರ್ಥಪ್ರಾಪ್ತ ಶಾಸ್ತ್ರಪ್ರಾಪ್ತಙ್ಗಳ್ ಪೋಲೆ ಸ್ವಭಾವ ಪ್ರಾಪ್ತಙ್ಗಳಾನ ನಿಮೇಷೋನ್ಮೇಷಾದಿ ಗಳುಮ್ ಸಮರ್ಪಣೀಯಙ್ಗಳಾಗ ರಹಸ್ಯಶಾಸ್ತ್ರ ಸಿದ್ಧಮಾಗೈಯಾಲೇ

---

ಲ್ಲವು ಎಂದು ಭಾಗವತ ಪ್ರಶಂಸೆಗಾಗಿ ಹೇಳಿದ ವಾಕ್ಯವು. ಪ್ರಶಂಸಾರೂಪವಾಕ್ಯ ವಾದುವದರಿಂದ ನಾವು ಹೇಳಿದ ಲಾಕ್ಷಣಿಕಾರ್ಥವೇ ಸಮಂಜಸವಾದುದೆಂಬ ಭಾವವು. ಸಾಯಂಕಾಲ ಆರು ಘಂಟೆಗೆ ಸರಿಯಾಗಿ ಸಂಧ್ಯಾವಂದನೆಯನ್ನು ಮಾಡಬೇಕು, ಕಾಲಾತಿಕ್ರಮದಿಂದ ನಡೆಸುವದು ಅಧರ್ಮವು; ದೇವಸ್ಥಾನದ ಕೆಲಸದಲ್ಲೇ ಮಗ್ನನಾಗಿ, ಅಲ್ಲಿನ ಉತ್ಸವ ಮೊದಲಾದ ಕೆಲಸಗಳೆಲ್ಲಾ ನಡೆದ ನಂತರ ರಾತ್ರಿ ಹತ್ತುಘಂಟೆಯ ಸಮಯದಲ್ಲಿ ಸಂಧ್ಯಾನುಷ್ಠಾನವನ್ನು ನಡೆಸಿದರೂ ಅದೂ ಸರಿಯಾದ ಅನುಷ್ಠಾನವೆಂದೇ ಭಗವಂತನು ಭಾವಿಸುವನೆಂಬ ತಾತ್ಪರ್ಯವು. ಹೀಗೆ ಲಾಕ್ಷಣಿಕಾರ್ಥವನ್ನು ಹೇಳದೆ, ಮೇಲೆ ತೋರುವಹಾಗೆಯೇ ಅರ್ಥವೆಂದು ಭಾವಿಸಿದರೆ, ಶಾಸ್ತ್ರವಿರುದ್ಧಾಚರಣೆಗೆ ಹೇತುವಾಗುತ್ತದೆಂದು ತಿಳಿಸುತ್ತಾರೆ.—ಇಙ್ಙನಲ್ಲಾದಪ್ಪೋದು - ಯಾಯಾವೃತ್ತಿಸ್ತದರ್ಚನಮ್ ಎಂಬುದಕ್ಕೆ ಹೀಗೆ ನಾವು ಹೇಳಿದಹಾಗೆ ಅರ್ಥವೆಂದು ಭಾವಿಸದೇ ಇದ್ದರೆ, ಅತಿಪ್ರಸಙ್ಗಮ್ ವರುಮ್ - ವಿಪರೀತಗಳಾದ ಅತಿವಾದಗಳುಂಟಾಗಬಹುದು. ಹೇಗೆಂದರೆ ಭಗವದರ್ಶನೆಗಾಗಿ ಧನಿಕನನ್ನು ಕೊಂದುಹಾಕಿ ಅವನಲ್ಲಿರುವ ಹಣವನ್ನು ತೆಗದುಕೊಂಡು ಈ ನಾರಾಯಣೈಕನಿಷ್ಠನು ಬರುವದೂ ಯುಕ್ತವೆಂದಾಗಬಹುದೆಂದಾಗುತ್ತದೆಂಬ ತಾತ್ಪರ್ಯವು. ಯಾ ಯಾ ವೃತ್ತಿಃ ಎಂಬುದಕ್ಕೆ ಬದಲಾಗಿ ಯಾಯಾಚೇಷ್ಟಾ ಎಂಬ ಪಾಠಾಂತರವೂ ಉಂಟು, ಆಗಲೂ ಸಮಂಜಸಾರ್ಥವನ್ನು ಹೇಳಲು ಸಾಧ್ಯವೆಂದು ತೋರಿಸುತ್ತಾರೆ. "ಯಾಯಾಚೇಷ್ಟಾ" ಎನ್ರು ಪಾಠಮಾನಾಲುಮ್ - ಯಾ ಯಾ ಚೇಷ್ಟಾ ಎಂದು ಪಾಠವಾದರೂ, ಅರ್ಥಪ್ರಾಪ್ತಶಾಸ್ತ್ರಪ್ರಾಪ್ತಙ್ಗಳ್ ಪೋಲೇ - ಅರ್ಥಪ್ರಾಪ್ತಙ್ಗಳು ದೇಹಧಾರಣಾರ್ಥಗಳು, ಶಾಸ್ತ್ರಪ್ರಾಪ್ತಂಗಳ್ ಸದಾಚಾರ ರೂಪಗಳು, ಇವುಗಳ ಹಾಗೆ, ಇದೀಗ ಸಾರದೀಪಿಕೆ ಮತ್ತು ಸಾರಾಸ್ವಾದಿನಿಯುವರುಗಳ ಅರ್ಥವು. ಯಾದೃಚ್ಛಿಕವಾಗಿ ಪ್ರಾಪ್ತವಾದ ಶಾಸ್ತ್ರವಿಹಿತ ಪ್ರಯೋಜನವೆಂದಿರುತ್ತದೆ, ಇದಕ್ಕೆ ನಿದರ್ಶನವಾಗಿ ದೇವಾಲಯದ ಸುತ್ತಲೂ ಹಚ್ಚಿರುವ ದೀಪಗಳಿಗೆ ಎಣ್ಣೆಯನ್ನು ಹಾಕುವದಕ್ಕಾಗಿ ಸುತ್ತಿದರೆ ಪ್ರದಕ್ಷಿಣೆಯನ್ನು ಮಾಡಿದ ಫಲವು ಸಿದ್ಧಿಸುವಹಾಗೆ, ಮತ್ತು ಗಂಗಾ ನದಿಯಲ್ಲಿ ಮೈಯೆಲ್ಲಾ ಕೆಸರಾಗಿದೆ ಎಂದು ಮೈತೊಳೆಯಲು

ಸ್ನಾನಮಾಡಿದರೆ ಗಂಗಾಸ್ನಾನಫಲವು ಸಿದ್ಧಿಸಿದಹಾಗೆ, ಸ್ವಭಾವ ಪ್ರಾಪ್ತ ಜ್ಞಳಾನ-ಸ್ವಾಭಾವಿಕವಾಗಿ ನಡೆಯುವ, **ನಿಮೇಷೋನ್ಮೇಷಾದಿಗಳ್**. ಕಣ್ಣುಮುಚ್ಚಿ ಕಣ್ಣು ತೆರೆಯುವದೇ ಮೊದಲಾದವುಗಳು, ಆದಿ ಶಬ್ದದಿಂದ ಊಟಮಾಡುವದೂ ಮಲಗುವದೂ ಓಡ್ಯಾಡುವದೂ, ಇವೆಲ್ಲಾ ಹೇಳಲ್ಪಟ್ಟವು, **ಸಮರ್ಪಣೀಯ ಜ್ಞಳಾಗ** - ಜಗನ್ನಾಥನಲ್ಲಿ ಅರ್ಚನೆಯರೂಪದಲ್ಲಿ ಸಮರ್ಪಿಸಲು ಯೋಗ್ಯಗಳಾಗಿ, **ರಹಸ್ಯಶಾಸ್ತ್ರಸಿದ್ಧವಾಗೈಯಾಲೇ** - ರಹಸ್ಯ ಶಾಸ್ತ್ರವು ಭಗವಚ್ಛಾಸ್ತ್ರವು, ಆದರಲ್ಲಿ ವ್ಯಕ್ತವಾಗಿ ಹೇಳಿರುವದರಿಂದ, **ತದರ್ಚನ ಮೆನ್ನಲಾಮ್** - ಭಗವಂತನ ಅರ್ಚನೆಯಾಗುತ್ತದೆಂದೂ ಒಪ್ಪಿಕೊಳ್ಳಬಹುದು. ಭಾಗವತನಾದ ಪರಮೈಕಾಂತಿಯು ಶಾಸ್ತ್ರವಿರುದ್ಧವಲ್ಲದ ಎಲ್ಲಾ ಚೇಷ್ಟೆಗಳನ್ನೂ ಕೂಡ ದೇಹಪೋಷಣ ಮೊದಲಾದ ಸಮಸ್ತ ಕರ್ಮಗಳನ್ನೂ ಕೂಡ, ಆತನು ಭಗವದರ್ಪಣ ಬುದ್ಧಿಯಿಂದ ಭಗವಂತನಲ್ಲಿ ಸಮರ್ಪಿಸುವದರಿಂದ ಅವೂ ಭಗವದರ್ಚನ ರೂಪವಾದುದೆಂದು ಅರ್ಥಮಾಡಿದರೂ ಯುಕ್ತವೇ ಸರಿ ಎಂಬ ಅಭಿಪ್ರಾಯವು. ಭಗವಚ್ಛಾಸ್ತ್ರದಲ್ಲಿ ಎಲ್ಲಿ ಹಾಗೆ ಹೇಳಿರುತ್ತದೆ, ಎಂದರೆ, "**ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾವಾ ಪ್ರಕೃತೇಃ ಸ್ವಭಾವಾತ್ । ಕರೋಮಿಯದ್ಯತ್ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯಾಮಿ**" ಮನೋವಾಕ್ಕಾಯಗಳಿಂದಲೂ, ಇಂದ್ರಿಯಗಳೂ ಮನಸ್ಸು ಬುದ್ಧಿಮೂಲಕವಾಗಿಯೂ, ಪ್ರಕೃತಿಸಂಬಂಧವಿರುವದರಿಂದಲೂ, ಮಾಡುವದನ್ನೆಲ್ಲಾ ಪರಮಾತ್ಮನಾದ ನಾರಾಯಣನಲ್ಲಿ ಸಮರ್ಪಿಸುವೆನು ಎಂಬುದು ಈ ಶ್ಲೋಕತಾತ್ಪರ್ಯವು. ಇಲ್ಲಿ ಹೇಳಲ್ಪಟ್ಟ ಕರ್ಮಗಳೆಲ್ಲಾ ಶಾಸ್ತ್ರರೀತ್ಯಾ ನಿಷಿದ್ಧಗಳಾಗಿದ್ದರೆ ಹೇಗೆ ಭಗವದರ್ಚನೆಗೆ ಯೋಗ್ಯಗಳಲ್ಲವೋ, ಹಾಗೆಯೇ, **ಯಾಯಾವೃತ್ತಿ ಸ್ತದರ್ಚನಮ್** ಎಂಬ ಪಾಠದಲ್ಲೂ, "**ಯಾಯಾಚೇಷ್ಟಾತದರ್ಚನಂ**"ಎಂಬ ಪಾಠಾಂತರದಲ್ಲೂ ಸಹ, ಶಾಸ್ತ್ರ ನಿಷಿದ್ಧಗಳಲ್ಲದ ವೃತ್ತಿ, ಚೇಷ್ಟೆಗಳೇ ಹೇಳಲ್ಪಟ್ಟಂದು ಮುಂದಿನವಾಕ್ಯದಿಂದ ತಿಳಿಸುತ್ತಾರೆ– **ಇದು** - ಈ ಭಗವದರ್ಚನ ರೂಪವಾದ ಸ್ವಭಾವ ಪ್ರಾಪ್ತವಾದ ವ್ಯಾಪಾರವು ಅಥವಾ ಚೇಷ್ಟೆಯು, **ನಿಷಿದ್ಧತ್ತಿಲ್** - ಶಾಸ್ತ್ರನಿಷಿದ್ಧವಾದ ವಿಷಯದಲ್ಲಿ, **ಪ್ರಸಜ್ಞಿಯಾದು** - ಸಂಬಂಧಿಸುವದಿಲ್ಲವು ಪರಮೈಕಾಂತಿಯಾದ ಭಾಗವತನಾದುದರಿಂದ ಆತನು ಮನೋವಾಕ್ಕಾಯಗಳ ಮೂಲಕ ನಿಷಿದ್ಧ ಕರ್ಮಗಳನ್ನು ಎಂದಿಗೂ ಅನುಷ್ಠಿಸುವದೇ ಇಲ್ಲವಾದುದರಿಂದ, ಅಂತಹ ನಿಷಿದ್ಧ ಕರ್ಮಗಳು ಹೇಳಲ್ಪಡಲೇ ಇಲ್ಲವೆಂಬುದೇ ತತ್ತ್ವಾರ್ಥವು. ಮುಂದಿನ ವಾಕ್ಯದಲ್ಲಿ ಈ ಅಭಿಪ್ರಾಯವನ್ನೇ ಸೂಚಿಸುತ್ತಾರೆ.—ಭಗವಂತನಲ್ಲಿ ಆ ಸ್ವಭಾವಪ್ರಾಪ್ತ ಕರ್ಮಗಳು ಸಮರ್ಪಣೀಯಗಳಾಗಬೇಕಾದರೆ ಶಾಸ್ತ್ರನಿಷಿದ್ಧಗಳಲ್ಲದೆ ಇರಬೇಕೆಂಬುದೇ ಆ

"ತದರ್ಚನ" ಮೆನ್ನಲಾವ್. ಇದು ನಿಷಿದ್ಧತ್ತಿಲ್ ಪ್ರಸಙ್ಗಿಯಾದು- ಪ್ರತಿಷಿದ್ಧಮಿಲ್ಲಾದ ಸ್ವಭಾವಾರ್ಥ ಶಾಸ್ತ್ರಪ್ರಾಪ್ತಙ್ಗಳಿರೇ ಸಮರ್ಪಣೀಯಙ್ಗಳಾಗ ಓದಪ್ಪಟ್ಟದು. ಇದಿರ್ ಉಪಬ್ರಹ್ಮಣಮಾನ (೧) ಯತ್ಕರೋಷಿ ಯದ

---

ರಹಸ್ಯ ಶಾಸ್ತ್ರದಲ್ಲಿ ಹೇಳಲ್ಪಟ್ಟಿತೆಂದು ತಿಳಿಸುತ್ತಾರೆ. **ಪ್ರತಿಷಿದ್ಧಮಲ್ಲಾದ** - ಶಾಸ್ತ್ರನಿಷಿದ್ಧಗಳಲ್ಲದ, **ಸ್ವಭಾವಾರ್ಥಶಾಸ್ತ್ರ ಪ್ರಾಪ್ತಙ್ಗಳಿರೇ**-"**ಯದಶ್ನಾತಿ ಯತ್ಪಿಬತಿ ತದಸ್ಯ ಸೋಮಪಾನಂ**" ಎಂದು (ತೈ. ನಾ.) ಶ್ರುತಿಯಲ್ಲಿ ಶ್ಲಾಘಿಸಿ ಹೇಳಿರುವಹಾಗೆ, ಸ್ವಭಾವ ಸಿದ್ಧವಾಗಿ ನಡೆಯುವ ಅನ್ನಪಾನಾದಿಗಳೂ ಮತ್ತು ಶಾಸ್ತ್ರ ವಿಹಿತವಾಗಿರುವ ಕರ್ಮಗಳೂ ಇವೇ, **ಸಮರ್ಪಣೀಯಮಾಗ ಓದಪ್ಪಟ್ಟದು** - ಭಗವಂತನಿಗೆ ಸಮರ್ಪಿಸಲು ಯೋಗ್ಯವೆಂದು "**ಕಾಯೇನ ವಾಚಾ**" ಎಂಬಲ್ಲಿ ಭಗವಚ್ಛಾಸ್ತ್ರದಲ್ಲಿ ಹೇಳಲ್ಪಟ್ಟಿತು. ಮತ್ತು ಇಲ್ಲಿ **ಓದಪ್ಪಟ್ಟ** ಎಂದರೆ "**ಯದಶ್ನಾತಿ ಯತ್ಪಿಬತಿ**" ಇತ್ಯಾದಿ ಶ್ರುತಿಯಲ್ಲೂ ಮತ್ತು **ಯತ್ಕರೋಮಿ ಯದಶ್ನಾಮಿ ಯಜ್ಜುಹೋಮಿ ದದಾಮಿಯತ್ । ಯತ್ತಪಸ್ಯಾಮಿ ಭಗವನ್ ತತ್ಕರೋಮಿ ತ್ವದರ್ಪಣಮ್** ಇತ್ಯಾದಿ ಮಂತ್ರಗಳಲ್ಲೂ **ಓದಪಟ್ಟದು** ಎಂಬ ಭಾವವು. ಇದರಿಂದ ಅಧರ್ಮವ್ಯಾಪಾರಗಳನ್ನು ಮಾಡಿ, ಶ್ರೀಕೃಷ್ಣಾರ್ಪಣಮಸ್ತು ಎಂದರೆ ಅವು ಭಗವದರ್ಚನವಾಗುವದಿಲ್ಲವು. ಅಧರ್ಮದಿಂದ ದ್ರವ್ಯವನ್ನು ಸಂಪಾದಿಸಿ, ಅದರಿಂದ ಭಗವಂತನಿಗೆ ನಿವೇದನ, ಉತ್ಸವ, ಆಲಯ ನಿರ್ಮಾಣಗಳನ್ನು ಮಾಡಿದರೆ, ಅದು ತದರ್ಚನವೆಂದಿಗೂ ಆಗುವದಿಲ್ಲವು, ಭಗವಂತನು ಪ್ರೀತನಾಗುವದಿಲ್ಲವು. ಶ್ರೀರಂಗದಲ್ಲಿ ಉತ್ತರದ ಕಡೆಯಗೋಪುರವನ್ನು ಒಬ್ಬ ವೇಶ್ಯಾಸ್ತ್ರೀಯು ಕಟ್ಟಿಸಿದುದರಿಂದ ಶ್ರೀ ರಙ್ಗನಾಥನಿಗೆ ಅದು ಇಷ್ಟವಾಗದೆ ಆ ಕಡೆ ಉತ್ಸವದ ಪ್ರವೇಶವೇ ಇಲ್ಲವೆಂದು ಹೇಳುತ್ತಾರೆ. ಆದುದರಿಂದ ಧರ್ಮಕ್ಕೆ ಅವಿರುದ್ಧಗಳಾದ ವ್ಯಾಪಾರಗಳು ಮಾತ್ರವೇ ತದರ್ಚನವಾಗುತ್ತವೆಂಬುದು ಮುಖ್ಯಾಭಿಪ್ರಾಯವು. ಪರಮಭಾಗವತನ ವಿಷಯದಲ್ಲಿ ಮಾತ್ರವೇ ಅನ್ನಪಾನಾದಿಗಳು ಸಮರ್ಪಣೀಯಗಳಾಗಿ ಅದರಿಂದ ಅರ್ಚಿಸಲ್ಪಡುವದು. ಇತರ ಸಾಧಾರಣದ ವಿಷಯಗಳಲ್ಲಿ ಹಾಗಲ್ಲವೆಂಬುದೂ ದ್ಯೋತಿತವು. ತಾವು ಈಗ ಅರ್ಥಮಾಡಿರುವದೇ ಸಮಂಜಸಾರ್ಥವೆಂದು ತೋರಿಸುವದಕ್ಕಾಗಿ, ಇವರ ಉಪಬೃಹ್ಮಣವೇ "**ಯತ್ಕರೋಷಿಯದಶ್ನಾಸಿ**" ಎಂಬ ಗೀತಾಶ್ಲೋಕವೆಂದೂ, ಅದರ **ಭಾಷ್ಯ**ದಲ್ಲಿ ತಮಗೆ ಪರಮಾಚಾರ್ಯಸ್ಥಾನದಲ್ಲಿರುವ ಶ್ರೀ ಭಾಷ್ಯಕಾರರೂ ಹೀಗೆಯೇ ವ್ಯಾಖ್ಯಾನಮಾಡಿರುತ್ತಾರೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ.

**ಶ್ನಾಸಿ” ಎಙ್ಗರ ಶ್ಲೋಕತ್ತುಕ್ಕುಮ್ ಇಪ್ಪಡಿ ಶಾಸ್ತ್ರವಿರೋಧಮಿಲ್ಲಾದ ವಿಷಯತ್ತಿಲೇ ತಾತ್ಪರ್ಯಮ್. ಇನತ್ತಿಲ್ ಶಾಸ್ತ್ರವಿರುದ್ಧಙ್ಗಳ್ ವಂದಾಲ್**

---

**ಇದಿೞ ಉಪಬೃಹ್ಮಣಮಾನ** - ಈ ಭಗವಚ್ಛಾಸ್ತ್ರದ ಶ್ಲೋಕದ ಉಪಬೃಹ್ಮಣ ನಾದ, **ಯತ್ಕರೋಷಿ ಯದಶ್ನಾಸಿ** ಎಂಬುವ ಶ್ಲೋಕಕ್ಕೂ ಕೂಡ, ಶಾಸ್ತ್ರ ವಿರೋಧವಿಲ್ಲದ, **ವಿಷಯತ್ತಿಲೆ** - ವಿಷಯದಲ್ಲಿ ಎಂದರೆ ಅಂತಹ ಕರ್ಮಗಳನ್ನು ಬೋಧಿಸುವದರಲ್ಲಿ, **ತಾತ್ಪರ್ಯಮ್** - ಅಭಿಪ್ರಾಯವು. ಈ ಗೀತಾಶ್ಲೋಕಾಭಿಪ್ರಾಯವೂ, “**ಕಾಯೇನ ವಾಚಾ**” ಎಂಬ ಭಗವಚ್ಛಾಸ್ತ್ರದ ಶ್ಲೋಕಾಭಿಪ್ರಾಯವೂ ಎರಡೂ ಒಂದೇ ಎಂಬುದು ಅಭಿಪ್ರಾಯವು. ಅದರ ಅರ್ಥವನ್ನು ಸರಿಯಾಗಿ ಗ್ರಹಿಸಿದ ಪಕ್ಷದಲ್ಲಿ, ಅಲ್ಲಿ ಹೇಳಿರುವ ಕರ್ಮಗಳೂ ಸಹ ಶಾಸ್ತ್ರನಿಷಿದ್ಧಗಳಲ್ಲದ ಕರ್ಮಗಳೆಂಬುದು ವ್ಯಕ್ತಪಡುತ್ತವೆಂಬ ಭಾವವು. ಆ ಪೂರಾ ಶ್ಲೋಕವು ಯಾವುವೆಂದರೆ,

(೧) **ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿಯತ್ ।**
**ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ ॥**

ಇದರರ್ಥವೇನೆಂದರೆ.—ಇದು ಶ್ರೀಕೃಷ್ಣನವಾಕ್ಯವು. ಅರ್ಜುನನನ್ನು ಕುರಿತು ನೀನು ಮಹಾತ್ಮನಾದ ಜ್ಞಾನಿಯಾಗಬೇಕೆಂದು ಉಪದೇಶಿಸಿ, ಅಂತಹ ಜ್ಞಾನಿಯು ಮಾಡುವ ಕರ್ಮಗಳೆಲ್ಲಾ ಶಾಸ್ತ್ರವಿಹಿತವಾದವುಗಳಾದುದರಿಂದ ಅವುಗಳನ್ನೆಲ್ಲಾ ಭಗವಂತನಾದ ತನ್ನಲ್ಲೇ ಸಮರ್ಪಿಸತಕ್ಕದ್ದೆಂದು ಉಪದೇಶಿಸುತ್ತಾರೆ,—**ಯತ್ಕರೋಷಿ** - ನೀನು ದೇಹಯಾತ್ರಾದಿಗಳಿಗಾಗಿ ಯಾವ ವಿಹಿತ ಲೌಕಿಕ ಕರ್ಮವನ್ನು ಮಾಡುತ್ತೀಯೋ, ಇಲ್ಲಿ ಸಮಸ್ತಗಳಾದ, ಶಾಸ್ತ್ರವಿಹಿತಗಳಾಗಿ, ಪ್ರಾಣಿಗಳಿಗೂ ತನಗೂ ಸಹ ಅನುಕೂಲಗಳಾಗಿ, ಪ್ರಾಣಿಸಾಮಾನ್ಯಕ್ಕೆ ಹಿತಕರವಾಗಿರುವ, ಕರ್ಮಗಳು ಹೇಳಲ್ಪಟ್ಟವು. ಆದರೆ ಪ್ರಕರಣಾನುಗುಣವಾಗಿ ಜ್ಞಾನಿಯಾದ ಮಹಾತ್ಮನಿಗೆ ಇತರ ಲೌಕಿಕ ಕರ್ಮಗಳು ಅಷ್ಟು ಆವಶ್ಯಕವಾದವಲ್ಲವುದರಿಂದ ಶ್ರೀ ಭಾಷ್ಯಕಾರರು ಇವುಗಳನ್ನು ಸೇರಿಸಿ ಬರೆಯಲಿಲ್ಲವು, ಆದರೆ ಅರ್ಜುನನ ವಿಷಯದಲ್ಲಿ ಯಾದರೋ ಲೋಕಕ್ಕೆಲ್ಲಾ ಅತಿಹಿತಕರವಾದ ದುರ್ಯೋಧನಾದಿಗಳಾದ ಲೋಕಕಂಟಕರ ವಧೆಯು ಆವಶ್ಯಕವಾದುದರಿಂದ, ಲೋಕಸುಖಪ್ರದಗಳಾದ ಕರ್ಮಗಳೂ ಸಹ ಇಲ್ಲಿ ಹೇಳಲ್ಪಟ್ಟವು. **ಯದಶ್ನಾಸಿ**-ದೇಹಧಾರಣೆಯ ಉದ್ದೇಶ್ಯಮಾತ್ರದಿಂದ ಉಪಭೋಗ ಬೇಕೆಂಬ ಆಶೆಯಿಂದಲ್ಲದೆ ಆರುವಿಧ ದೋಷಗಳು ಯಾವವೂ ಇಲ್ಲದ ಸಾತ್ವಿಕವಾದ ಆಹಾರವಾಗಿರುವ ಯಾವುದನ್ನು ಶಾಸ್ತ್ರವಿರುದ್ಧವಲ್ಲದ ರೀತಿಯಲ್ಲಿ ತಿನ್ನುತ್ತೀಯೋ, ಇತರರ ದುಡ್ಡಿನಮೂಲಕವಾಗಲಿ, ಕದ್ದ ದುಡ್ಡಿನಮೂಲಕವಾಗಲಿ,

---

(೧) ಗೀ. ೯. ೨೭.

**ಅಧಿಕಾರಾನುರೂಪಸಮಾನ, ನೈಮಿತ್ತಿಕಮ್ ನಿಗ್ರಹ ಶಮನಮ್ ಕಾರ್ಯಮ್ (ಶಮನಮಾನಕೈಙ್ಕರ್ಯಮ್). "ಯೋಯೋ ಜಲ್ಪಸ್ಸ ಜಪಃ" ಎಙ್ಗಿರದು**

---

ಸಂಪಾದಿಸಿದ ಅನ್ನವನ್ನು ಮದ್ಯಾದಿ ಶಾಸ್ತ್ರ ದುಷ್ಟವಾದವುಗಳನ್ನಾಗಲಿ ಸರ್ವೇಶ್ವರನಿಗೆ ಸಮರ್ಪಿಸಲು ಅರ್ಹವಲ್ಲವೆಂಬುದು ದ್ಯೋತಿತವು, **ಯಜ್ಜುಹೋಷಿ, ದದಾಸಿಯತ್, ಯತ್ ತಪಸ್ಯಸಿ** ಎಂಬುದರಿಂದ ಶಾಸ್ತ್ರ ವಿಹಿತ ರೀತಿಯಲ್ಲಿ ಧರ್ಮಾರ್ಜಿತ ವಿತ್ತದಿಂದ ಅನುಷ್ಠಿಸಿದ ಯಜ್ಞ ದಾನ ತಪಸ್ಸುಗಳು ಹೇಳಲ್ಪಟ್ಟವು, ಹೀಗೆ ಯಾವ ಲೌಕಿಕ ವೈದಿಕ ಕರ್ಮಗನ್ನು ನನ್ನ ಆಜ್ಞಾರೂಪ ಶಾಸ್ತ್ರಗಳಿಗೆ ವಿರೋಧವಿಲ್ಲದಹಾಗೆ ಮಾಡುತ್ತೀಯೋ, ಅವುಗಳನ್ನೆಲ್ಲಾ, **ಕುರುಷ್ವಮದರ್ಪಣಂ**-ನನ್ನಲ್ಲಿ ಸಮರ್ಪಿಸಿಬಿಡು. ಹೇಗೆ ಸಮರ್ಪಿಸತಕ್ಕದ್ದು? ಎಂದರೆ ಕರ್ತೃತ್ವಾಭಿಮಾನ, ಫಲಾಭಿಸಂಧಿಗಳಿಲ್ಲದಹಾಗೆ ಸಾತ್ವಿಕತ್ಯಾಗವನ್ನು ಹೇಳಿಯಾಗಲಿ, ಅಥವಾ **"ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾವಾ ಪ್ರಕೃತೇಃ ಸ್ವಭಾವಾತ್"** ಎಂಬ ಸರ್ವರಿಗೂ ವಿದಿತವಾದ ಭಗವಚ್ಛಾಸ್ತ್ರ ಶ್ಲೋಕಮೂಲಕವಾಗಲಿ ಸಮರ್ಪಿಸತಕ್ಕದ್ದು ಎಂಬ ಭಾವವು. ಸಮರ್ಪಣೆ ಎಂದರೆ ಕರ್ತೃತ್ವ ಫಲಮಮತಾಗಳ ತ್ಯಾಗವೇ ಎಂದು ತಿಳಿಯತಕ್ಕದ್ದು. ಹೀಗೆ ಭಗವಂತನಲ್ಲಿ ಸಮರ್ಪಿಸುವಾಗ ಭಗವನ್ನಿಗ್ರಹವನ್ನುಂಟುಮಾಡುವ ಶಾಸ್ತ್ರವಿರುದ್ಧವಾದುವನ್ನು ಸಮರ್ಪಿಸಬಹುದೋ? ಆತನು ಅಙ್ಗೀಕರಿಸುವನೋ? ಎಂದಿಗೂ ಇಲ್ಲವೆಂಬುದು ವ್ಯಕ್ತವು ಹಾಗಲ್ಲವೆ ಮಹಾಭಾಗವತನು ಒಂದುವೇಳೆ ಶಾಸ್ತ್ರವಿರುದ್ಧಾನುಷ್ಠಾನವನ್ನು ಮಾಡಿ ಭಗವದರ್ಪಣವಾಗಿ ಸಮರ್ಪಿಸಿದುದೂ ಭಗವಂತನಿಗೆ ಗ್ರಾಹ್ಯವಾದರೆ, ಶಾಸ್ತ್ರವಿರುದ್ಧಾಚರಣೆಗೆ ಪ್ರಾಯಶ್ಚಿತ್ತರೂಪವಲ್ಲಿ ವಿಧಿಸಿರುವ ಶಾಸ್ತ್ರಗಳಿಗೆ ಸ್ವಲ್ಪಮಟ್ಟಿಗೆ ವೈಯರ್ಥ್ಯ ಉಂಟಾಗಲಿಲ್ಲವೇ ಎಂಬಾಕ್ಷೇಪವೂ ಉಂಟಾಗುತ್ತದೆ. ಹಾಗೆ ಶಾಸ್ತ್ರವಿರುದ್ಧಾಚರಣೆಯು ಪ್ರಾಪ್ತವಾದರೆ ಅದಕ್ಕಾಗಿ ವಿಧಿಸಲ್ಪಟ್ಟ ಪ್ರಾಯಶ್ಚಿತ್ತವು ತಪ್ಪದು. ಅದನ್ನನುಷ್ಠಿಸಿ ಭಗವನ್ನಿಗ್ರಹ ಶಮನವನ್ನು ಮಾಡಿಕೊಳ್ಳಬೇಕೆಂದು ಮುಂದಿನವಾಕ್ಯದಿಂದ ತಿಳಿಸುತ್ತಾರೆ.——**ಇವತ್ತಿಲ್**-ಹೀಗೆ ಈ ಭಾಗವತನ ವೃತ್ತಿಗಳಲ್ಲೂ, **ಶಾಸ್ತ್ರವಿರುದ್ಧಙ್ಗಳ್ ವಂದಾಲ್** - ಶಾಸ್ತ್ರವಿರುದ್ಧವಾದವು ಪ್ರಾಪ್ತವಾದರೂ, **ಅಧಿಕಾರಾನುರೂಪಸಮಾನ**-ಈ ಅಧಿಕಾರಿಗೆ ಶಾಸ್ತ್ರದಲ್ಲಿ ವಿಹಿತವಾದ, **ನೈಮಿತ್ತಿಕಂ**-ನೈಮಿತ್ತಿಕರೂಪ ಪ್ರಾಯಶ್ಚಿತ್ತವು, **ನಿಗ್ರಹ ಶಮನಮ್ ಕಾರ್ಯಮ್**-ಭಗವಂತನ ನಿಗ್ರಹ ಸಙ್ಕಲ್ಪವನ್ನು ಶಮನಮಾಡುವದು ಆವಶ್ಯಕವು. **ಶಮನಮಾನ ಕೈಙ್ಕರ್ಯಮ್** - ಎಂಬ ಪಾಠವಾದರೆ ಭಗವಂತನ ನಿಗ್ರಹವನ್ನು ಶಮನಮಾಡುವ ಕೈಙ್ಕರ್ಯವನ್ನು ನಡೆಸತಕ್ಕದ್ದೆಂಬ ಭಾವವು. ಯಾವಾಗ ನಿಷಿದ್ಧಾ

**ವುದು, (೧) "ಪಾರುಷ್ಯಮತಿವಾದಶ್ಚ ಪೈಶುನ್ಯಂ ಚೈವ ಸರ್ವಶಃ । ಅನಿಬದ್ಧ ಪ್ರಲಾಪಶ್ಚ ವಾಙ್ಮಯಂ ಸ್ಯಾಚ್ಚತುರ್ವಿಧಮ್"॥ ಎನ್ನು ಶಾಸ್ತ್ರ ಪ್ರತಿಷಿದ್ಧಮಾನ ವೃಥಾ ಜಲ್ಪತ್ತೈ ಚೊನ್ನ ಪಡಿಯನ್ನು; ತತ್ತ್ವ ಹಿತ ವಿಷಯ**

ಚರ್ಚೆಯು ಪ್ರಾಪ್ತವಾಯಿತೋ, ಆಗ "ಪ್ರಾಯಶ್ಚಿತ್ತಂ ಸಮಾಚರೇತ್" ಎಂದು ವಿಧಿ ಇರುವದರಿಂದ, ಅವನ್ನೇ ಕೈಙ್ಕರ್ಯ ರೂಪದಲ್ಲಿ ಅನುಷ್ಠಿಸಬೇಕೆಂಬ ತಾತ್ಪರ್ಯವು. ಸಾರಾಸ್ವಾದಿನಿಯವರು ಈ ಸಂದರ್ಭದಲ್ಲಿ ಹೇಳಿರುವದೇನೆಂದರೆ — **ಶಾಸ್ತ್ರವಿರುದ್ಧಙ್ಗಳ್ ವಂದಾಲ್** - ಎಂದರೆ ಜ್ಞಾನಿಯಾಗಿ ಮೋಕ್ಷಾರ್ಥಿಯಾಗಿದ್ದೂ ಕೂಡ ಒಂದು ವೇಳೆ ಬಂಧಕಗಳಾದ ಕೈಙ್ಕರ್ಯಗಳನ್ನು ಆಚರಿಸಿದರೆ, ಭಗವನ್ನಿಗ್ರಹ ಶಮನರೂಪವಾದ ಪ್ರಾಯಶ್ಚಿತ್ತ ರೂಪ ಕೈಙ್ಕರ್ಯವೂ ಆತನಿಗೆ ಸ್ವರೂಪೋಚಿತವಾದುದರಿಂದ, ನಿಕೃಷ್ಟತೆಯನ್ನೇನೂ ಉಂಟುಮಾಡುವದಿಲ್ಲವೆಂದು ಹೇಳಲ್ಪಟ್ಟಿತೆಂದು ಅಭಿಪ್ರಾಯ ಪಟ್ಟಿರುತ್ತಾರೆ.

ಮುಂದೆ ಆ ವಿಹಗೇಂದ್ರಸಂಹಿತಾಶ್ಲೋಕದಲ್ಲಿ "**ಯೋಯೋ ಜಲ್ಪಸ್ಸಸ ಜಪಃ**" ಆ ಭಾಗವತನ ಪ್ರಲಾಪವೆಲ್ಲಾ ಜಪರೂಪವೆಂದು ಹೇಳಿದುದರ ಅಭಿಪ್ರಾಯವೇನೆಂಬುದನ್ನು ಉಪದೇಶಿಸುತ್ತಾರೆ. **ಯೋ ಯೋ ಜಲ್ಪ ಸ್ಸಸ ಜಪಃ**" - ನಾರಾಯಣೈಕನಿಷ್ಠನ ಯಾವ ಯಾವ ವಾದಉಂಟೋ, ಅವೆಲ್ಲವೂ ಜಪರೂಪವೇ ಎಙ್ಗಿರುದು **ವುದು** ಎಂದು ಹೇಳಿರುವವೂ (೧)"**ಪಾರುಷ್ಯಂ**-ಕಠಿನೋಕ್ತಿಯೂ, **ಅತಿವಾದಶ್ಚ**-ವಸ್ತುಸ್ವಭಾವಕ್ಕನುಗುಣವಲ್ಲದ ಅತಿಶಯೋಕ್ತಿಯೂ, **ಸರ್ವಶಃ** ಎಲ್ಲಾ ಕಡೆಯಲ್ಲೂ **ಪೈಶುನ್ಯಂ** - ಪರಸ್ಪರ ಮೈತ್ರಿಯು ಕೆಡುವಹಾಗೂ ಇತರರಿಗೆ ಪೀಡಾ ಉಂಟಾಗುವದಕ್ಕಾಗಿಯೂ ಚಾಡಿ ಹೇಳೋಣವು, **ಅನಿಬದ್ಧಪ್ರಲಾಪಶ್ಚ** - ಅಸಙ್ಗತವಾದ ಹೆಚ್ಚಾದಮಾತು, ಹೀಗೆ ವಾಕ್ಕಿನ ಮೂಲಕವಾದ ಪಾಪಗಳು, ಅಪರಾಧಗಳು, **ಚತುರ್ವಿಧಮ್ ಸ್ಯಾತ್** - ನಾಲ್ಕು ವಿಧಗಳಾಗಿವೆ **ಎನ್ನು** - ಎಂದು **ಶಾಸ್ತ್ರಪ್ರತಿಷಿದ್ಧಮಾನ** - ಶಾಸ್ತ್ರದಲ್ಲಿ ನಿಷೇಧಿಸಲ್ಪಟ್ಟ, **ವೃಥಾ ಜಲ್ಪತ್ತೈ** - ವ್ಯರ್ಥವಾದ ಮಾತನ್ನು, **ಶೊನ್ನಪಡಿಯನ್ನು** - ಹೇಳಿತೆಂಬ ಅಭಿಪ್ರಾಯವಲ್ಲವು. ಹೀಗೆ ನಾಲ್ಕು ವಿಧಗಳಾದ ವಾಕ್ಕಿನ ಮೂಲಕ ಮಾಡುವ ಅಪರಾಧಗಳು **ಯೋ ಯೋ ಜಲ್ಪಸ್ಸ ಸ ಜಪಃ** ಎಂಬಲ್ಲಿ, ಇಲ್ಲಿ ಜಲ್ಪ ಶಬ್ದದ ಮೂಲಕ ಹೇಳಲ್ಪಡಲಿಲ್ಲವು. ಅಂತವು ಹೇಗೆ ಜಪವಾದೀತು? "**ವಾದೇನ ಬ್ರಾಹ್ಮಣಂ ಜಿತ್ವಾ ಹೃಷ್ಟೋ ಭವತಿ ಯೋ ದ್ವಿಜಃ । ಶ್ಮಶಾನೇ ಪಾದಪ ಸ್ಸಸ್ಯಾದ್ಗೃಧ್ರ ಕಂಕನಿಷೇವಿತಃ**" ಬ್ರಾಹ್ಮಣನಾದ ಬ್ರಹ್ಮವಿತ್ತನ್ನು ವಾದದಿಂದ

(೧) ಮನು ಸ್ಮೃತಿ. ೧೨. ೬.

ಮಾಗ, "ಶಿಷ್ಯಗುರು ಸಬ್ರಹ್ಮಚಾರಿ ಶಿಷ್ಟಶ್ರೇಯೋರ್ಥಿ"ಗಳೊಡೆ ಅಜ್ಞಾತ ಜ್ಞಾಪನಾರ್ಥಮಾಗವುಮ್, ಜ್ಞಾತಸ್ಥಿರೀಕರಣಾರ್ಥಮಾಗವುಮ್, ಸಂಶಯ ನಿರಾಕರಣಾರ್ಥ ಮಾಗವುಮ್, (ಪಣ್ಣುಮ್) ಉಕ್ತಿ ಪ್ರತ್ಯುಕ್ತಿ ಪರಂಪರೈಗಳೈಚ್ಚೊಲ್ಲುಗಿರದು. (೧) "ನವಿಗೃಹ್ಯ ಕಥಂ ಕುರ್ಯಾತ್" ಎನ್ರು ಸಾಮಾ

ಜಯಿಸಿ ಯಾವನು ಹರ್ಷಿಸುತ್ತಾನೋ ಅವನು ಶ್ಮಶಾನದ ಗೃಧ್ರ ಕಂಕ ಪಕ್ಷಿಗಳಿಗೆ ಆಕರವಾದ ಗಿಡವಾಗಿ ಹುಟ್ಟುವನು." ಎಂದು ಹೇಳಿರುವದರಿಂದ ಇಂತಹ ದುರವಸ್ಥೆಗೆ ನಾರಾಯಣೈಕನಿಷ್ಠನು ಎಂದಿಗೂ ಗುರಿಯಾಗನು. ನಾರಾಯಣೈಕನಿಷ್ಠನಾದ ಭಾಗವತನು ಎಂದಿಗಾದರೂ ವಾಕ್ಯಸಮೂಲಕ ಅಪರಾಧಗಳನ್ನು ಮಾಡುವನೋ? ಅಮ ಜಯವಾಪಿತೋ? ಎರಡೂ ಇಲ್ಲವೆಂಬ ಭಾವವು. ಜಲ್ಪ ಶಬ್ದವು ಅಕಾರಣದಿಂದ ಶುಷ್ಕವಾದ ವಾದವನ್ನು ಎಂದಿಗೂ ಬೋಧಿಸಲಾರದು. ಹಾಗಾದರೆ ಜಲ್ಪಶಬ್ದಕ್ಕೆ ಏನು ಅಭಿಪ್ರಾಯವೆಂದರೆ ಹೇಳುತ್ತಾರೆ.—ತತ್ತ್ವಹಿತ ವಿಷಯಮಾಗ-ಶ್ರೀಮನ್ನಾರಾಯಣನೇ ತತ್ತ್ವವೆಂದೂ,ಭಕ್ತಿಪ್ರಪತ್ತಿಗಳಲ್ಲಿ ಒಂದರ ಅನುಷ್ಠಾನವೇ ಹಿತವೆಂದು ಹೇಳಿಸಿಕೊಳ್ಳುವದೆಂದೂ,ಆದುದರಿಂದ ಅದರ ವಿಷಯವಾಗಿ ಶಿಷ್ಯನು, ಗುರುವು, ಸಬ್ರಹ್ಮಚಾರಿ ಎಂದರೆ ಒಬ್ಬ ಆಚಾರ್ಯರನ್ನೇ ಆಶ್ರಯಿಸಿ ಶಿಷ್ಯರಾಗಿರುವ ಸಹಾಧ್ಯಾಯಿಗೆ ಹೆಸರು; ಆದುದರಿಂದ ಸಹಾಧ್ಯಾಯಿಯಾ ಮತ್ತು ಶಿಷ್ಯರು ಇಂತಹ, ಶ್ರೇಯೋರ್ಥಿಗಳೊಡೆ-ಪುರುಷಾರ್ಥಗಳನ್ನು ಅಪೇಕ್ಷಿಸುವವರೊಂದಿಗೆ, (೧) ಅಜ್ಞಾತ ಜ್ಞಾಪನಾರ್ಥಮಾಗವುಮ್ - ತಿಳಿಯದೇ ಇರುವದನ್ನು ತಿಳಿದುಕೊಂಡು ಜ್ಞಾಪಕದಲ್ಲಿಡುವದಕ್ಕಾಗಿಯೂ, (೨) ಜ್ಞಾತಸ್ಥಿರೀಕರಣಮಾಗುವುಮ್ - ತಿಳಿದಿರುವ ವಿಷಯಗಳನ್ನು ಪ್ರಮಾಣಗಳ ಮೂಲಕ ಸಮರ್ಥನೆ, ಉಪಪಾದನೆಗಳ ಮೂಲಕ ಧೃಢಪಡಿಸಿಕೊಳ್ಳುವದಕ್ಕಾಗಿಯೂ, (೩) ಸಂಶಯ ನಿರಾಕರಣಾರ್ಥ ಮಾಗುವುಮ್ - ಮನಸ್ಸಿನಲ್ಲಿ ಉಂಟಾಗಿರುವ ಸಂಶಯಗಳು ತೊಲಗುವದಕ್ಕಾಗಿಯೂ, ಮಾಡುವ, ಉಕ್ತಿಪ್ರತ್ಯುಕ್ತಿ ಪರಂಪರೈಗಳೈ ಚ್ಚೊಲ್ಲುಗಿರದು - ಒಬ್ಬರು ಹೇಳಿದುದಕ್ಕೆ ಬದಲಾಗಿ ಇನ್ನೊಬ್ಬರು ಹೇಳುವ ಸಮಾಧಾನರೂಪವಾಗಿರುವದರ ಅಥವಾ ಒಬ್ಬರು ಕೇಳಿದಪ್ರಶ್ನೆಗೆ ಸಮಂಜಸವಾದ ಉತ್ತರಗಳ ಪರಂಪರೆಯನ್ನು, ಈ ಜಲ್ಪಃ ಎಂಬ ಶಬ್ದವು, ಶೊಲ್ಲುಗಿರದು-ಬೋಧಿಸುತ್ತದೆ ; ಆದುದರಿಂದ ಜಲ್ಪ ವೆಂದರೆ ವಾಗ್ರೂಪದೋಷಗಳು ಯಾವುವೂ ಅಲ್ಲವು, ನಿರರ್ಥಕವಾದ ಹರಟೆಯೂ ಅಲ್ಲವು, ತತ್ತ್ವಹಿತಗಳ ವಿಷಯವಾಗಿರುವ ಪ್ರಯೋಜನ ರೂಪವಾದ ಉಕ್ತಿ ಪ್ರತ್ಯುಕ್ತಿಗಳೇ ಇಲ್ಲಿ ಜಲ್ಪ

(೧) ಮನು. ೪. ೭೨

ವೆಂದು ಹೇಳಲ್ಪಟ್ಟಿತು. ಇಲ್ಲಿ ಜ್ಞಾತವ್ಯಾಂಶಗಳು ಮೂರೆಂದು ಎಲ್ಲಾ ಶಾಸ್ತ್ರಗಳಲ್ಲೂ ಉಪಪಾದಿತವಾಗಿದ್ದರೂ, ಇಲ್ಲಿ ಮುಮುಕ್ಷುವು ತತ್ವಹಿತಗಳು ಯಾವುವು ಎಂಬುದನ್ನು ತಿಳಿದು ಹಿತವನ್ನು ಆಚರಿಸಿದರೆ ಪುರುಷಾರ್ಥವು ಸ್ವತಃ ಸರ್ವೇಶ್ವರನಿಂದ ಸಿದ್ಧವಾದ ದರಿಂದ, ತತ್ವಹಿತ ವಿಷಯವಾಗ ಎಂದು ಎರಡು ಮಾತ್ರವೇ ಹೇಳಲ್ಪಟ್ಟಿತು; ಅಥವಾ ತತ್ವಹಿತಗಳು ಯಾವಾಗ ಹೇಳಲ್ಪಟ್ಟವೋ ಇವು ಪುರುಷಾರ್ಥಕ್ಕೆ ಉಪಲಕ್ಷಣವಾಗಿ ಅದೂ ಹೇಳಲ್ಪಟ್ಟಿತೆಂದೇ ಭಾವಿಸಬಹುದು ; ಅಥವಾ ಮೋಕ್ಷಾರ್ಥ ಗ್ರಂಥವಾದುದರಿಂದ ಪುರುಷಾರ್ಥವು ವ್ಯಕ್ತವೆಂಬ ಭಾವದಿಂದ ಹೇಳಲ್ಪಡಲಿಲ್ಲವೆಂದೂ ಭಾವಿಸಬಹುದು. ಯಾವಾಗ ನಾರಾಯಣೈಕ ಪ್ರಯೋಜನನಾಗಿ ಪರಮ ಭಾಗವತನೆನಿಸಿದನೋ, ಆಗ ಆತನ ಸಾಮಾನ್ಯ ಜಲ್ಪವೂ ಕೂಡ,ಸದಾ ತತ್ವಹಿತ ಪುರುಷಾರ್ಥಗಳ ವಿಷಯವಾದುದರಿಂದ,ಅವುಗಳ ಸಂಬಂಧವಾದ ಜಲ್ಪವೇ–ಮಾತೇ ಆತನಿಗೆ ಜಪವೆಂಬ ಭಾವವು ಅಂತವನೆಂದಿಗೂ ವಾಗ್ರೂಪದೋಷಕ್ಕೆ ಗುರಿಯಾಗನು, ನಿರರ್ಥಕಗಳಾದ ಗೊಡ್ಡು ಹರಟೆಯಲ್ಲಿ ಕಾಲವನ್ನು ಕಳೆಯುವದೂ ಇಲ್ಲವು. ಅಂತವನೊಂದಿಗೆ ಜಲ್ಪವೆಂದರೆ ಸಂಭಾಷಣೆಯು ಮೂರುವಿಧ ಪ್ರಯೋಜನಗಳಿಗೆ ಸಹಕಾರಿಯಾಗಬಹುದೆಂದು ಹೇಳಿದರು. (೧) ತತ್ವಹಿತಪುರುಷಾರ್ಥಗಳ ವಿಷಯದಲ್ಲಿ ತಿಳಿಯದೇ ಇರುವ ಅಂಶವನ್ನು ಗ್ರಹಿಸುವದಕ್ಕೂ, (೨) ತಿಳಿದಂಶದ ಸಮರ್ಥನೆಯಿಂದ ಎದರ ಜ್ಞಾನವು ದಾರ್ಢ್ಯವನ್ನು ಹೊಂದುವದಕ್ಕೂ, (೩) ಸಂಶಯಾದಿಗಳಿದ್ದರೆ ನಿವರ್ತಿಸಿ ಹೋಗುವದಕ್ಕೂ,ಸಹಕಾರಿಯಾಗಬಹುದೆಂಬುದು ತಾತ್ಪರ್ಯವು. ಇದೀಗ ಯೋ ಯೋ ಜಲ್ಪ ಸ್ಸ ಜಪಃ ಎಂಬುದರಭಿಪ್ರಾಯವೆಂದು ಉಪದೇಶಿಸಿದರು. ಇಂತಹ ಮೂರು ಪ್ರಯೋಜನಗಳುಳ್ಳವೇ ಶಿಷ್ಯಸಹಾಧ್ಯಾಯಿ ಗುರುಗಳ ಸಂಭಾಷಣೆಯು ಎಂದು ನ್ಯಾಯಸೂತ್ರವಾದ, "ತಂ ಶಿಷ್ಯ ಗುರುಸಬ್ರಹ್ಮಚಾರಿ ಶಿಷ್ಟಶ್ರೇಯೋರ್ಥಿಭಿರಭ್ಯುಪೇಯಾತ್'' ಎಂಬುದನ್ನು ಜ್ಞಾಪಿಸುವದಕ್ಕಾಗಿ ಶಿಷ್ಯಗುರುಬ್ರಹ್ಮಚಾರಿ ಶಿಷ್ಟಶ್ರೇಯೋರ್ಥಿಗಳೊಡೆ ಎಂಬ ಪ್ರಯೋಗವು. ಹೀಗೆ ಜಲ್ಪಶಬ್ದಕ್ಕೆಎಲ್ಲಾದರೂ ಅರ್ಥಉಂಟೋ? ಜಲ್ಪ ಶಬ್ದಕ್ಕೆ ಹೇಗಾದರೂಮಾಡಿ ತಾನು ವಾದದಲ್ಲಿ ಜಯಿಸಬೇಕೆಂಬ ಅಪೇಕ್ಷೆಯುಳ್ಳವನ, ವಾದ ಪರಂಪರೆಯೆಂದು ಅರ್ಥವಾಗುವಾಗ, ಶಾಸ್ತ್ರವಿಹಿತವಾದ ಪರಮ ಪ್ರಯೋಜನವನ್ನುಂಟುಮಾಡುವ ಉಕ್ತಿ ಪ್ರತ್ಯುಕ್ತಿಗಳ ಪರಂಪರೆಯೆಂದು ಅರ್ಥ ಹೇಳಬಹುದೋ? ಎಂದಾಕ್ಷೇಪವನ್ನು ತಂದು ಜಲ್ಪಶಬ್ದಕ್ಕೆ ಮುಖ್ಯಾರ್ಥವನ್ನೇ ಹೇಳತಕ್ಕದ್ದು ; ಜಲ್ಪಾಕನ, ಎಂದರೆ ವಾಚಾಲನ ನಿಷ್ಠುರವಾದ ವಾಹವೀಗ ಜಲ್ಪವೆಂದು ಹೇಳತಕ್ಕದ್ದು, ಎಂದು ನಿರ್ಬಂಧಿಸಿದರೆ ಆಗಲೂ ಸಮಂಜಸಾರ್ಥವು ಸಾಧ್ಯವೆಂದು ಉಪದೇಶಿಸುತ್ತಾರೆ. ವಾದಗಳನ್ನು

ನ್ಯೇನ ಚೊಲ್ಲಚೆಯ್ದೇಯುಮ್, (೨) "ಯಥಾಶಕ್ತಿ ನಿಗೃಹ್ಣೀಯಾದ್ದೇವ ತಾಗುರು ನಿಂದಕಾನ್" ಎನ್ರು ವಿಶೇಷಿತ್ತು ಧರ್ಮಶಾಸ್ತ್ರಸಿದ್ಧಮಾಗೈಯಾಲೇ ಬಾಹ್ಯಕುದೃಷ್ಟಿಗಳೈ ಪ್ಪತ್ತ ವಿಜಿಗೀಷುವಾಗ ಚೊಲ್ಲುಮ್ ವಾಕ್ಯ ಪರಂಪರೈಯೈ ಜಲ್ಪಮೆನ್ನದಾಗವುಮಾಮ್. "ತದ್ಧ್ಯಾನಂ ಯನ್ನಿರೀಕ್ಷಣಂ" ನಿಷಿದ್ಧ

---

ಮಾಡುವಾಗ, ಜಗಳವು ಕೂಡದೆಂದೂ ನಿಷ್ಠುರೋಕ್ತಿಗಳು ಸಾಧುವಲ್ಲವೆಂದೂ ನಿಂದಿಸಿದ್ದರೂ, ಸ್ವಸಿದ್ಧಾಂತ ಸ್ಥಾಪನೆಗಾಗಿ ಬಾಹ್ಯಕುದೃಷ್ಟಿ ಸಿದ್ಧಾಂತಗಳನ್ನು ಖಂಡಿಸಿ ಹೇಳುವದು ಯುಕ್ತವಾದುದರಿಂದ ಜಲ್ಪ ಶಬ್ದದಿಂದ ಅಂತಹ ಖಂಡನವು ಹೇಳಲ್ಪಟ್ಟಿದ್ದರೂ ಆಗಲೂ ಸಮಂಜಸವಾದ ಅಭಿಪ್ರಾಯವೇ ಆಯಿತು ಎಂದು ಅದನ್ನೂ ಅಙ್ಗೀಕರಿಸಿ ಹೇಳುತ್ತಾರೆ. (೧) "ವಿಗೃಹ್ಯ-ಜಗಳವಾಡುತ್ತಾ, **ನಕಥಾಂ ಕುರ್ಯಾತ್** ಎನ್ರು-ಕಥೆಯನ್ನು ಮಾಡಬೇಡ, ಎಂದರೆ ವಾದ ಮೊದಲಾದವುಗಳನ್ನು ಮಾಡತಕ್ಕದ್ದಲ್ಲವೆಂದು, **ಸಾಮಾನ್ಯೇನ ಚೊಲ್ಲಚ್ಚೆಯ್‌ದೇಯುಮ್** - ಸಾಮಾನ್ಯೋಕ್ತಿಯಿಂದ ಹೇಳಲ್ಪಟ್ಟಿದ್ದರೂ, (೨) **"ಯಥಾಶಕ್ತಿ** - ನಿನಗೆ ಎಷ್ಟರಮಟ್ಟಿಗೆ ನಿರಸನ ಮಾಡಲು ಶಕ್ತಿಯುಂಟೋ, ಅಷ್ಟರಮಟ್ಟಿಗೆ, **ದೇವತಾ ಗುರುನಿಂದಕಾನ್** - ಭಗವಂತನನ್ನೂ ಗುರುಗಳನ್ನೂ ದೂಷಿಸುವ ಚಾರ್ವಾಕಾದಿಗಳನ್ನು. **ನಿಗೃಹ್ಣೀಯಾತ್** - ನಿಗ್ರಹಿಸತಕ್ಕದ್ದು" **ಎನ್ರು** - ಎಂಬದಾಗಿ, **ವಿಶೇಷಿತ್ತು ಧರ್ಮಶಾಸ್ತ್ರಸಿದ್ಧ ಮಾಗೈಯಾಲೇ** - ವಿಶೇಷ ವಿಧಿಯು ಧರ್ಮಶಾಸ್ತ್ರದಿಂದ ಸಿದ್ಧವಾಗಿರುವದರಿಂದ, **ಬಾಹ್ಯಕುದೃಷ್ಟಿಗಳೈಪ್ಪತ್ತ**-ವೇದಪ್ರಮಾಣವನ್ನು ಅಙ್ಗೀಕರಿಸದವರು ವೇದಬಾಹ್ಯರು, ವೇದಗಳಿಗೆ ಮನಸ್ಸುಬಂದಹಾಗೆ ಪರಸ್ಪರ ಸಾಮಂಜಸ್ಯವಿಲ್ಲದಹಾಗೆ ಅಪಾರ್ಥಗಳನ್ನು ಹೇಳುವವರು ಕುದೃಷ್ಟಿಗಳು, ಇಂತವರನ್ನು ಕುರಿತು, **ವಿಜಗೀಷುವಾಗ**-ವಾದಮೂಲಕ ಜಯಿಸಲು ಇಚ್ಛೆಯಿಂದ, **ಚೊಲ್ಲುಮ್ ವಾಕ್ಯಪರಂಪರೈಯೈ**-ಹೇಳುವ ವಾದಗಳನ್ನು, **ಜಲ್ಪಮೆನ್ನದಾಗವುಮಾಮ್** - ಜಲ್ಪವೆಂದು ಹೇಳಲ್ಪಟ್ಟಿತೆಂದಾದರೂ ಆಗಬಹುದು. ಸಾಮಾನ್ಯ ವಿಧಿಯೇನೋ ಮನುಧರ್ಮಶಾಸ್ತ್ರಪ್ರಕಾರ, ವಾದಗಳಲ್ಲಿ ಜಗಳವನ್ನು ನಿಷೇಧಿಸಿ ಹೇಳಿತು. ಆದರೆ ಬಾಹ್ಯ ಕುದೃಷ್ಟಿಗಳೊಂದಿಗೆ ವಾದಮಾಡುವಾಗ ಅವರ ಪೂರ್ವಪಕ್ಷಗಳನ್ನು ಯಥಾಶಕ್ತಿ ಖಂಡಿಸಲೇಬೇಕು ಎಂದು ವಿಶೇಷವಿಧಿ ಇರುವದರಿಂದ ಜಲ್ಪವೆಂದರೆ ಖಂಡನರೂಪವಾದ ಪರಂಪರೈಯೆಂದು ಅರ್ಥಮಾಡಿದರೂ ಯುಕ್ತವಾದುದೇ. ಅಂತವನೊಂದಿಗೆ ಕೋಪದಿಂದ ವಾದಮಾಡಬಹುದೋ? ಎಂದರೆ, ಆತನು ಭಗವಂತನನ್ನೂ ಗುರುಗಳನ್ನೂ ದೂಷಿಸುವವನಾದುದರಿಂದ, ಅಂತವನೊಂದಿಗೆ ಈ ಜಲ್ಪರೂಪವಾದ ವಾದವು ಆವಶ್ಯಕವಾದುದೇ ಎಂಬ ಭಾವವು. **ನಾವು ಒಂದು**

ನೃತ್ತಾದಿದರ್ಶನತ್ತೈಚ್ಚೊನ್ನಪಡಿಯುನ್ರು. ಕೈಙ್ಕರ್ಯಾರ್ಥವಾಗ ಪ್ರವರ್ತಿಕ್ಕ್ವೆನ್ರೋದು, ಇರ್ವ ಕಣ್ಣುಕ್ಕಿಲಕ್ಕಾನ ಪದಾರ್ಥಙ್ಗಳೆಲ್ಲಾವರ್ (೧) "ಅಹಂ

ವಿಧವಾಗಿ ಜಲ್ಪ ಶಬ್ದಕ್ಕೆ ಅರ್ಥಹೇಳಿ, ಯೋ ಯೋ ಜಲ್ಪಸ್ಸಜಪಃ ಎಂಬುದರ ಅಭಿಪ್ರಾಯವನ್ನು ತೋರಿಸಿವೆವು. ಜಲ್ಪಶಬ್ದಕ್ಕೆ ಹಾಗೆ ಅರ್ಥವಲ್ಲವು, ವಾದದಲ್ಲಿ ಗೆಲ್ಲಬೇಕೆಂದು ಹಟ ಹಿಡಿದಿರುವವನ ವಾಗ್ಜಾಲವೆಂದೇ ಅರ್ಥಮಾಡಬೇಕೆಂದು ನಿರ್ಬಂಧಿಸಿದರೆ, ಹಾಗೂ ಆಗಬಹುದೆಂದು, ಆಗಲು ಸಮಂಜಸಾರ್ಥವು ಸಾಧ್ಯವೆಂದು ತಿಳಿಸಿದರು.

ಮುಂದೆ ಅದೇ ಸಂಹಿತಾ ವಾಕ್ಯದ "ತದ್ಧ್ಯಾನಂ ಯನ್ನಿರೀಕ್ಷಣಂ" ಎಂಬುದಕ್ಕೆ ಸರಿಯಾದ ಅರ್ಥವನ್ನು ತಿಳಿಸುತ್ತಾರೆ.—"ತದ್ಧ್ಯಾನಂ ಯನ್ನಿರೀಕ್ಷಣಂ" ಎನ್ರದು - ಎಂದು ಹೇಳಿರುವದು, ನಿಷಿದ್ಧನೃತ್ತಾದಿ ದರ್ಶನತ್ತೈಚ್ಚೊನ್ನಪಡಿಯುನ್ರು - ನಿಷಿದ್ಧವಾಗಿರುವ ವಾರಾಂಗನೆ ಮೊದಲಾದವರ ನೃತ್ತವನ್ನು ಹೇಳಲ್ಪಟ್ಟಿತೆಂಬರ್ಥವಲ್ಲವು. ಅಂತವರ ನಾಟ್ಯವನ್ನು ಅವರು ಆಕಸ್ಮಾತ್ತಾಗಿ ನೋಡುತ್ತಾನಿಂತರೆ ಅದೂ ಕೂಡ ಧ್ಯಾನವೆಂದು ಈ ಸಂಹಿತೆಯು ಬೋಧಿಸಲಿಲ್ಲವು. ಈ ವೈಷ್ಣವ ಮಹಾಭಾಗವತನು ಪ್ರಸನ್ನನಾಗಿ ಅಂತಹ ಅಧರ್ಮಿಯ ನೃತ್ಯವನ್ನು ಎಂದಿಗೂ ನೋಡುತ್ತಾ ಇರಲಾರನು. ಅಂತಾದ್ದು ಎಂದಿಗೂ ಧ್ಯಾನವಾಗಲಾರದು. ಸಂಹಿತೆಯು ಎಂದಿಗೂ ಅಂತಹ ದೋಷಾವಹವಾದ ನಿರೀಕ್ಷಣೆಯನ್ನಾಗಲಿ, ಅಥವಾ ಇನ್ನು ಯಾವುದರ ವೃಥಾ ನಿರೀಕ್ಷಣೆಯನ್ನಾಗಲಿ ಧ್ಯಾನವೆಂದು ಹೇಳಲಾರದು. ಆತನು ಸತತ ಭಗವಂತನ ಧ್ಯಾನದಲ್ಲೇ ಇರುವವನಾದುದರಿಂದ, ಗಿರಿ, ತಟಾಕ, ನದಿ, ವನವೇ ಮೊದಲಾದ ಯಾವುದನ್ನು ನಿರೀಕ್ಷಿಸಿದರೂ ಆತನಿಗೆ ಭಗವದಾತ್ಮಕವಾಗಿಯೇ ಕಾಣುವದರಿಂದ ಅವುಗಳನ್ನೆಲ್ಲಾ ನೋಡುವದರಲ್ಲೂ ಸಹ ಆತನನ್ನೇ ಧ್ಯಾನಿಸುವನು ಎಂಬಭಿಪ್ರಾಯವೆಂದು ಮುಂದಿನ ವಾಕ್ಯದಿಂದ ಉಪದೇಶಿಸುತ್ತಾರೆ.—ಕೈಂಕರ್ಯಾರ್ಥವಾಗ - ಇಂತಹ ಭಾಗವತನು ಮಾಡುವದನ್ನೆಲ್ಲಾ ಯತ್ಕರೋಷಿ ಯದಶ್ನಾಸಿ" ಎಂದು (ಗೀ. ೯. ೨೭) ಹೇಳಿರುವಹಾಗೆ ಭಗವದರ್ಪಣ ಬುದ್ಧಿಯಿಂದ ಮಾಡುವದರಿಂದ ಎಲ್ಲವೂ ಕೈಂಕರ್ಯವಾಗುತ್ತದೆ, ಆದುದರಿಂದ ಕೈಂಕರ್ಯವಾಗುವದಕ್ಕಾಗಿ, ಪ್ರವರ್ತಿಕ್ಕ್ವೆನ್ರೋದು - ಪ್ರವರ್ತಿಸುವಾಗ, ಎಂದರೆ ಇವನ ಪ್ರವೃತ್ತಿಗಳೆಲ್ಲಾ ಕೈಂಕರ್ಯರೂಪವಾದುದರಿಂದ ಎಂಬರ್ಥವು, ಇರ್ವ ಕಣ್ಣುಕ್ಕಿಲಕ್ಕಾನ" ಈ ಸಾರೂಪ್ಯನಿಷ್ಠನ ಕಣ್ಣಿಗೆ ಲಕ್ಷ್ಯವಾದ ಪದಾರ್ಥಗಳ

(೧) ವಿ. ಪು. ೧. ೨೨. ೮೭.

**ಹರಿ ಸ್ಸರ್ವ ಮಿದಂ ಜನಾರ್ದನಃ" ಇತ್ಯಾದಿಗಳಿರ್ಪಡಿಯೇ (೨) "ನಿರ್ಕಿನ್ನ ದೆಲ್ಲಾ ಮ್ ನೆಡುಮಾಲ್" ಎನ್ರು ಬ್ರಹ್ಮಾತ್ಮಕಮಾಯ್ ತೋನ್ರುಮ್ ಪ್ರಕಾರತ್ತೈ ಚ್ಚೊನ್ನಪಡಿ.**

---

ಲ್ಲವೂ (೧) ಅಹಂ - ಜೀವಾತ್ಮನಾದ ನಾನೂ, ಹರಿಃ - ತಚ್ಛರೀರಕನಾಗಿರುವದರಿಂದ ಹರಿಯೇ ಎಂದರೆ ನಾನೂ ಶ್ರೀ ಹರ್ಯಾತ್ಮಕನು, ಹಾಗೆಯೇ, ಸರ್ವಮಿದಂ- ಈ ಚಿದಚಿದಾತ್ಮಕವಾದ ಸಮಸ್ತ ಜಗತ್ತೂ ತಚ್ಛರೀರಕವಾದ, ಜನಾರ್ದನಃ - ಜನಾರ್ದನನೇ, ಎಂದರೆ ಸಮಸ್ತ ಚಿದಚಿತ್ತುಗಳೂ ಭಗವಂತನಿಗೆ ಶರೀರವಾಗಿರುವದರಿಂದ, ಶರೀರ ಬೋಧಕ ಶಬ್ದಗಳೆಲ್ಲಾ ಶರೀರಿಯನ್ನು ಬೋಧಿಸುವದರಿಂದ, ಸಮಸ್ತವೂ ಭಗವದಾತ್ಮಕವೆಂಬ ಭಾವವು," ಇತ್ಯಾದಿಗಳಿರ್ ಪಡಿಯೇ- ಇಂತಹ ಪ್ರಮಾಣಗಳಲ್ಲಿ ಹೇಳಿರುವಹಾಗೆ, ನಿರ್ಕಿನ್ನದೆಲ್ಲಾಮ್ - ಜಗತ್ತಿನಲ್ಲಿದ್ದ ಕಣ್ಣಿಗೆ ಕಾಣುವದೆಲ್ಲವೂ, ನೆಡುಮಾಲ್ - ಶ್ರಿಯಃಪತಿಯು, ಸರ್ವೇಶ್ವರನು, ಎಂದರೆ ಎಲ್ಲವೂ ಭಗವದಾತ್ಮಕವು." ಎನ್ರು - ಎಂಬದಾಗಿ, ಬ್ರಹ್ಮಾತ್ಮಕಮಾಯ್-ಎಲ್ಲವೂ ಪರಬ್ರಹ್ಮನಿಗೆ ಶರೀರವಾಗಿ, ಆತನು ಇದಕ್ಕೆಲ್ಲಾ, ಐತದಾತ್ಮ್ಯ ಮಿದಗ್ಂಸರ್ವಂ (ಛಾಂ. ೬.೮.೭) ಎಂದು ಶ್ರುತಿಯಲ್ಲಿ ಹೇಳಿರುವಹಾಗೆ ಆತ್ಮವು, ಆದುದರಿಂದ ಎಲ್ಲವೂ ಭಗವದಾತ್ಮಕವಾಗಿ, ತೋನ್ರುಮ್ -ತೋರುವ, ಪ್ರಕಾರತ್ತೈ ಚ್ಚೊನ್ನಪಡಿ - ಪ್ರಕಾರವನ್ನು ಹೇಳಿತೆಂದು ಭಾವಿಸತಕ್ಕದ್ದು. ಆದುದರಿಂದ ತದ್ಧ್ಯಾನಂ ಯನ್ನಿರೀಕ್ಷಣಮ್ ಎಂದರೆ ಆತನು ಯಾವುವನ್ನು ನೋಡಿದರೂ ಅವೆಲ್ಲವೂ ಭಗವದಾತ್ಮಕವೆಂಬ ಭಾವವು. ಆತನ ಕಣ್ಣಿನಲ್ಲಿ ಪರಮಾತ್ಮನೇ ಕಟ್ಟಿರುವದರಿಂದ ಹಾಗೆಯೇ ಎಲ್ಲವೂ ಆತನಿಗೆ ಭಗವದಾತ್ಮಕವಾಗಿಯೇ ತೋರುತ್ತದೆ. ಅವುಗಳಲ್ಲೆಲ್ಲಾ ಪರಮಾತ್ಮನನ್ನೇ ನೋಡುವನು. ಮಾರೀಚನು ತನಗೆ ಅಂತ್ಯಕಾಲ ಒದಗಿತೆಂದು ಭಾವಿಸಿ ದುಷ್ಟನಾದ ರಾವಣನಿಂದ ವಧಿಸಲ್ಪಡುವದಕ್ಕಿಂತ ಶ್ರೀ ರಾಮನಿಂದ ವಧಿಸಲ್ಪಟ್ಟರೆ ತನಗೆ ಸದ್ಗತಿಯುಂಟೆಂದು ಯಾವಾಗ ಶ್ರೀರಾಮನನ್ನೇ ಧ್ಯಾನಿಸುತ್ತಾ ಆತನಲ್ಲೇ ಸಕ್ತವಾದ ಮನಸ್ಸನ್ನುಳ್ಳವನಾದನೋ, ಆಗ ವಿಶ್ವವೆಲ್ಲಾ ಆತನಿಗೆ ಪರಬ್ರಹ್ಮಾತ್ಮಕವಾಗಿ ತೋರಿದುದರಿಂದ ಹೇಳುತ್ತಾನೆ—"ವೃಕ್ಷೇ ವೃಕ್ಷೇ ಚ ಪಶ್ಯಾಮಿ ಚೀರಕೃಷ್ಣಾಜಿನಾಂಬರಂ" "ಪ್ರತಿಯೊಂದು ವೃಕ್ಷದಲ್ಲೂ ನಾರುಮಡಿ ಕೃಷ್ಣಾಜಿನಗಳನ್ನು ಧರಿಸಿರುವ ಭಗವಂತನಾದ ಶ್ರೀ ರಾಮಚಂದ್ರನನ್ನೇ ಕಾಣುತಲಿದ್ದೇನೆ" ಎಂಬದಾಗಿ (ರಾ. ಅರಣ್ಯ. ೩೯. ೧೪). ಹೀಗೆ ಚಿದಚಿತ್ತುಗಳಿಂದ ಸೇರಿದ ಜಗತ್ತಿಗೂ ಪರಮಾತ್ಮನಿಗೂ ಶರೀರಾತ್ಮ ಭಾವವಿರುವದರಿಂದ

---

(೨) ನಾನ್ಮುಗನ್ ತಿರುವಂದಾದಿ. ೫೪.

ಜಗತ್ತಿನೊಂದಿಗೆ ಪರಮಾತ್ಮನಿಗೆ ಸಮಾನಾಧಿಕರಣ್ಯವು ಕೂಡುತ್ತದೆ ; ಇತರ ಸಿದ್ಧಾನ್ತಿಗಳಿಗೆ ಸಾಮಾನಾಧಿಕರಣ್ಯವೇ ಕೂಡುವದಿಲ್ಲವು. ಇದೆಲ್ಲಾ ಪ್ರಧಾನ ಪ್ರತಿತಂತ್ರಾಧಿಕಾರದಲ್ಲಿ ನಿಪುಣತರವಾಗಿ ಉಪಪಾದಿಸಲ್ಪಟ್ಟಿರುತ್ತದೆ. ಹೀಗೆ "ಅಹಂ ಹರಿಃ" ಎಂದು ಸಾಮಾನಾಧಿಕರಣ್ಯವನ್ನು ಹೇಳುವ ಈ ಶ್ಲೋಕದ ಹಿಂದಿನ ಶ್ಲೋಕದಲ್ಲೇ ಈ ಶರೀರಾತ್ಮಭಾವವನ್ನು ಸ್ಪಷ್ಟವಾಗಿ ಹೇಳಿರುತ್ತಾರೆ. ಈ ಎರಡು ಶ್ಲೋಕಗಳೂ ಯಾವುವೆಂದರೆ "ಯಾನಿ ಮೂರ್ತಾನ್ಯ ಮೂರ್ತಾನಿ ಯಾನ್ಯತ್ರಾ ನ್ಯತ್ರವಾ ಕ್ವಚಿತ್ । ಸಂತಿ ವೈ ವಸ್ತುಜಾತಾನಿ ತಾನಿ ಸರ್ವಾಣಿ ತದ್ವಪುಃ" ಆಕೃತಿಯುಳ್ಳವು ಯಾವುವೋ ಆಕೃತಿಯಿಲ್ಲದವಾಗಿಯೂ ಇರುವ ವಾಯು, ಆಕಾಶಾದಿಗಳು ಯಾವುವೋ, ಮತ್ತು ಇಲ್ಲಾಗಲಿ ಇನ್ನೆಲ್ಲಾಗಲಿ ಇರುವ ಸಮಸ್ತ ವಸ್ತು ಸಮೂಹವೆಲ್ಲವೂ ಆ ಭಗವಂತನಿಗೆ ಶರೀರವೆಂದು ಸ್ಪಷ್ಟವಾಗಿ ಹೇಳಿ, ಹೀಗೆ ಎಲ್ಲವೂ ಭಗವದಾತ್ಮಕವಾದುದರಿಂದ ಮುಂದಿನ ಶ್ಲೋಕವು "ಅಹಂ ಹರಿ ಸ್ಸರ್ವಮಿದಂ ಜನಾರ್ದನೋ ನಾನ್ಯತ್ತತಃ ಕಾರಣ ಕಾರ್ಯಜಾತಂ । ಈದೃಙ್ಮನೋ ಯಸ್ಯ ನ ತಸ್ಯ ಭೂಯೋ ಭವೋದ್ಭವಾ ದ್ವಂದ್ವಗತಾ ಭವಂತಿ" ಅಹಂ ಹರಿಃ ಇತ್ಯಾದಿ ಸಾಮಾನಾಧಿಕರಣ್ಯವನ್ನು ಬೋಧಿಸುತ್ತದೆ. ಇದರರ್ಥವೇನೆಂದರೆ "ನಾನೂ ತಚ್ಛರೀರಕ ಹರಿಯೇ, ಈಪರಿ ದೃಶ್ಯವಾದ ಜಗತ್ತೆಲ್ಲವೂ ತಚ್ಛರೀರಕ ಜನಾರ್ದನನೇ, ಹೀಗೆ ಕಾರಣ ಸಮೂಹವೂ ಕಾರ್ಯ ಸಮೂಹವೂ ಎಲ್ಲವೂ ಭಗವಂತನಲ್ಲದೆ ಬೇರೆಯಲ್ಲವು, ಹೀಗೆ ಮನೋಭಾವವು ಯಾರಿಗೋ ಅಂತವನಿಗೆ ಪುನಃ ದೇಹೋತ್ಪತ್ತಿಗಳೂ ರಾಗದ್ವೇಷಾದಿ ದ್ವಂದ್ವರೂಪಗಳಾದ ರೋಗಾದಿಗಳೂ ಉಂಟಾಗುವದಿಲ್ಲವು." ಎಂದರ್ಥವು. ಶ್ರೀ ಪರಾಶರರು ಇನ್ನೊಂದುಕಡೆಯಲ್ಲೂ ಪರಮಾತ್ಮನಿಗೆ ಎಲ್ಲವೂ ಶರೀರವು, ಆತನು ಎಲ್ಲಕ್ಕೂ ಆತ್ಮಾ, ಎಂದು ಹೇಳಿ, ಜ್ಯೋತೀಂಷಿ ವಿಷ್ಣುರ್ಭುವನಾನಿ ವಿಷ್ಣುಃ" "ಜ್ಯೋತಿಸ್ಸೆಲ್ಲಾ ವಿಷ್ಣುವು ಲೋಕಗಳೆಲ್ಲಾ ವಿಷ್ಣುವು,'' ಎಂದು ಆರಂಭಿಸಿ "ಯದಸ್ತಿ ಯನ್ನಾಸ್ತಿ ಚ ವಿಪ್ರವರ್ಯ" ಓ ದ್ವಿಜಶ್ರೇಷ್ಠರಾದ ಮೈತ್ರೇಯರೇ ಅಸ್ತಿ ಶಬ್ದವಾಚ್ಯವಾಗಿರುವ ಎಲ್ಲಾ ಚಿದ್ವಸ್ತುವೂ, ನಾಸ್ತಿ ಶಬ್ದವಾಚ್ಯವಾದ ಎಲ್ಲಾ ಅಚಿದ್ವಸ್ತುವೂ, ಎಲ್ಲವೂ ಮಹಾವಿಷ್ಣುವೇ ಎಂದು ಸಾಮಾನಾಧಿಕರಣ್ಯವನ್ನು ತಮ್ಮ ಶಿಷ್ಯರಿಗೆ ಉಪದೇಶಿಸಿರುತ್ತಾರೆ. ಹಾಗೆಯೇ ಭಾರ್ಗವ ಮಹರ್ಷಿಯ ಪುತ್ರರಾಗಿ ಜ್ಞಾನ ನಿಧಿಗಳಾದ ತಿರುಮಳಿಶೈಯಾಳ್ವಾರ್‌ರವರು ತಮ್ಮ ಗ್ರಂಥವಾದ ನಾನ್ಮುಗನ್ತಿರುವಂದಾದಿ ಯಲ್ಲಿ ಅಂತಹ ಸಾಮಾನಾಧಿಕರಣ್ಯವನ್ನೇ "ನಿಶ್ಕಿನ್ನದೆಲ್ಲಾ ನೆಡುಮಾಲೇ" ಎಂಬುದರಿಂದ ಉಪದೇಶಿಸಿರುತ್ತಾರೆ. ಆ ಪಾಶುರವು ಯಾವುವೆಂದರೆ.—"ದೈವರಾಯ್ ನಿಶ್ಕ ಮತ್ತೇವುಮ್ ಅತ್ತೇ ವರಿಲ್ ।

"ತತ್ಪಾದಾಂಬ್ವತುಲಂ ತೀರ್ಥಮ್" ಎನ್ರದುವುಮ್ ಪ್ರಾಪ್ತವಿಷಯ ತ್ತಿಲೇ ಗುಣಾಧಿಕ್ಯಮ್ ಶೊಲ್ಲುಗಿರದು.

---

ಮೂವರಾಯ್ ನಿರ್ಕುಮ್ ಮುದುಪುಣರ್ಪ್ಪುಮ್ - ಯಾವರಾಯ್ । ನಿರ್ಕಿನ್ರದೆಲ್ಲಾಮ್ ನೆಡುಮಾಲೆನ್ರೋರಾತಾರ್ । ಕರ್ಕಿನ್ರದೆಲ್ಲಾ ಙ್ಕಡೈ ।೫೪।। "ಚತುರ್ಮುಖ ರುದ್ರೇಂದ್ರಾದಿಗಳಿಗೆಲ್ಲಾ ಅಂತರಾತ್ಮನಾಗಿ ನಿಯಾಮಕನಾಗಿರುವ ಪ್ರಕಾರವನ್ನೂ ಬ್ರಹ್ಮ ವಿಷ್ಣು ರುದ್ರರಾಗಿರುವವರ ಮಧ್ಯೇ ತಾನೆ ಪ್ರಥಮಾವತಾರಿಯಾಗಿ ಲೋಕಪಾಲನಾರ್ಥಕ್ಕಾಗಿ ನಿಂತಿರುವ ಪ್ರಕಾರವನ್ನೂ, ಮತ್ತು ಸಮಸ್ತ ವಿಶ್ವವೂ ತನಗೆ ಶರೀರವಾಗಿ "ತತ್ಸೃಷ್ಟ್ವಾ ತದೇವಾನುಪ್ರಾವಿಶತ್" ಎಂದು ಶ್ರುತಿಯು ಹೇಳುವಹಾಗೆ ಈ ಅನುಪ್ರವೇಶದಮೂಲಕ ಎಲ್ಲಕ್ಕೂ ಆತ್ಮನಾಗಿರವದರಿಂದ, ಸಮಸ್ತ ವಿಶ್ವಕ್ಕೆಲ್ಲಾ ನಾಮರೂಪ ಭಾಕ್ತ್ವವನ್ನೂ ಸತ್ತೆಯನ್ನೂ ಕೊಟ್ಟದುದರ ಮೂಲಕ, ತಾನೇ ಎಲ್ಲಾ ವಿಶ್ವವು ಎಂದು ಭಗವಂತನು ತೋರುತ್ತಿರುವನೆಂಬುದನ್ನೂ ತಿಳಿಯದವನ ಜ್ಞಾನವು ನಿರರ್ಥಕವಾದುದು" ಎಂಬುದು ಈ ಪಾಶುರಾರ್ಥವು. ಇಂತಹ ಸಾಮಾನಾಧಿಕರಣ್ಯವೇ "ಮುನಿಯೇ ನಾನ್ಮುಕನೇ ಮುಕ್ಕಣ್ಣಪ್ಪಾ" (ತಿರು. ೧೦. ೧೦. ೧.) ಎಂಬಲ್ಲೂ ಹೇಳಲ್ಪಟ್ಟಿರುತ್ತದೆ. ಇಂತಹ ಭಗವದಾತ್ಮಕತ್ವವನ್ನು "ತದ್ಧ್ಯಾನಂ ಯನ್ನಿರೀಕ್ಷಣಂ" ಎಂಬ ಸಂಹಿತಾವಾಕ್ಯವು ಬೋಧಿಸುತ್ತದೆಂಬ ಭಾವವು.

ಮುಂದಿನ ವಾಕ್ಯವಾದ ತತ್ಪಾದಾಂಬ್ವತುಲಂ ತೀರ್ಥಮ್ ಎಂದರೆ "ಆತನ ಪಾದ ತೀರ್ಥವು ಅಸದೃಶ ಪವಿತ್ರತೆಯುನ್ನು ಹೊಂದಿದುದು" ಎಂಬುದರ ಅಭಿಪ್ರಾಯವೇನೆಂದು ತಿಳಿಸುತ್ತಾರೆ.—ಎನ್ರದುವುಮ್ - ಎಂದು ಹೇಳುವ ಈ ವಾಕ್ಯವೂ, ಪ್ರಾಪ್ತ ವಿಷಯತ್ತಿಲೇ - ಶಾಸ್ತ್ರವಿಹಿತವಾಗಿ ಹೇಳಲ್ಪಟ್ಟ ವಿಷಯಗಳಲ್ಲಿ, ಗುಣಾಧಿಕ್ಯಂ - ಉತ್ಕರ್ಷವನ್ನು, ಶೊಲ್ಲುಗಿರದು - ಬೋಧಿಸುತ್ತದೆ. ಭಾಗವತನ ಪಾದೋದಕವು ಮಹಾ ಪವಿತ್ರವಾದುದು ಎಂಬ ವಿಷಯವು ನಿರ್ವಿವಾದವಾದುದು, "ತೀರ್ಥಾದಚ್ಯುತಪಾದಜಾದ್ಗುರುತರಂ ತೀರ್ಥಂ ತದೀಯಾಂಘ್ರಿಜಮ್" ಭಾಗವತರ ಪಾದೋದಕವು, ಭಗವಂತನ ಪಾದತೀರ್ಥಕ್ಕಿಂತಲೂ, ಅಥವಾ ಗಂಗಾನದೀ ತೀರ್ಥಕ್ಕಿಂತಲೂ ಪಾವನತರವೆಂದು ಹೇಳಲ್ಪಟ್ಟಿರುತ್ತದೆ. "ಯೋ ಮೂರ್ಧ್ನಿ ಧಾರಯೇದ್ವಿಪ್ರಃ ಹೃಷ್ಟೋ ಮಹತ್ಪಾದತಲೋದಕಮ್ । ಸಸ್ನಾತಸ್ಸರ್ವತೀರ್ಥೇಷು ಪುಣ್ಯವಾನ್ನಾತ್ರ ಸಂಶಯಃ" "ಯಾವನು ಮಹಾತ್ಮರ ಪಾದೋದಕವನ್ನು ಶಿರಸಾ ಧರಿಸುವನೋ, ಅವನು ಸಮಸ್ತ ಪುಣ್ಯತೀರ್ಥಗಳಲ್ಲೂ ಸ್ನಾನಮಾಡಿದ ಫಲವನ್ನು ಹೊಂದಿ ಪರಿಶುದ್ಧನಾಗಿ ಸುಕೃತಿಯಾಗುವ

ಪಾದೋದಕಂ ತೀರ್ಥವಾಗ ಚೊನ್ನ ವಿಷಯತ್ತಿಲ್ ನಾರಾಯಣೈಕನಿಷ್ಠತ್ವಂ

ನೆಂಬುದರಲ್ಲಿ ಏನೊಂದೂ ಸಂದೇಹವಿಲ್ಲವು. ಮತ್ತು "ಪ್ರಾಯಶ್ಚಿತ್ತಮಿದಂಪುಣ್ಯಂ
ಮಹಾಪಾತಕಿನಾ ಮಪಿ। ವೈಷ್ಣವಾಂಘ್ರಿಜಲಂ ಶುಭ್ರಂ ಭಕ್ತ್ಯಾ ಸಂಪ್ರಾ
ಶ್ಯತೇ ಯದಿ" ಮಹಾ ಪಾತಕಿಗಳಿಗೂ ಕೂಡ, ಇದು ಒಳ್ಳೇ ಉತ್ಕೃಷ್ಟವಾಗಿ
ಶ್ಲಾಘ್ಯವಾದ ಪ್ರಾಯಶ್ಚಿತ್ತವು, ಅದು ಯಾವುದೆಂದರೆ, ಮಹಾ ವೈಷ್ಣವನ
ಪವಿತ್ರಕರವಾದ ಪಾದೋದಕವನ್ನು ಭಕ್ತಿಯಿಂದ ಸೇವನೆ ಮಾಡುವದು"
ಎಂದೂ ಹೇಳಲ್ಪಟ್ಟಿರುತ್ತದೆ. ಮಹಾ ಭಾಗವತೋತ್ತಮನ ಪಾದೋದಕಕ್ಕೆ
ಅಷ್ಟು ಮಹಿಮೆ ಎಂಬುದನ್ನು ಸ್ವಾಮಿ ಶ್ರೀ ಕೃಷ್ಣಭಗವಾನರೇ, ವಿರಕ್ತ
ಶಿಖಾಮಣಿಯಾಗಿ ಭಾಗವತಾಗ್ರೇಸರರಾದ ಕುಚೇಲರ ಪಾದಗಳನ್ನು ತೊಳೆದು,
ಆ ಪಾದೋದಕವನ್ನು "ಅಗ್ರಹೀಚ್ಛಿರಸಾ ರಾಜನ್ ಭಗವಾನ್ ಲೋಕಪಾ
ವನಃ" (ಭಾಗ. ೧೦. ೮೦. ೧೮) ಸರ್ವ ಲೋಕಕ್ಕೂ ತಾನೇ ಪಾವನತ್ವವ
ನ್ನುಂಟುಮಾಡುವನಾಗಿದ್ದರೂ ಶ್ರೀಕೃಷ್ಣನು ಶಿರಸಾ ಧಾರಣಮಾಡಿ, ಬ್ರಾಹ್ಮಣ
ಪಾದೋದಕಕ್ಕೆ ಮಾಹಾತ್ಮ್ಯವನ್ನು ತೋರಿಸಿಕೊಟ್ಟಿರುತ್ತಾರೇ ವಿನಾ, ಇನ್ನು
ಯಾವ ವರ್ಣದವರು ಎಷ್ಟು ಮಹಿಮೆಯುಳ್ಳವರಾಗಿದ್ದರೂ, ಅಂತಹ ವಿದುರಾದಿ
ಗಳ ಸಂದರ್ಭದಲ್ಲೂ ಕೂಡ ಇಂತಹ ಪ್ರವೃತ್ತಿಯನ್ನು ಸರ್ವೇಶ್ವರನು ಪ್ರದ
ರ್ಶಿಸಲಿಲ್ಲವು. ಈ ಪಾದೋದಕ ಸಿಸೇವಣ ವಿಷಯದಲ್ಲಿ, ಕೀಳು ವರ್ಣದವನು
ಪಾದೋದಕವನ್ನು ಸ್ವೀಕರಿಸತಕ್ಕ ಕ್ರಮ ವು ಹೇಗೆಂದರೆ—ಉತ್ತಮವರ್ಣದವನಾಗಿ
ವೈಷ್ಣವ ಶಿಖಾಮಣಿಯಾಗಿ, ಬ್ರಹ್ಮವಿತ್ತಾದ ಮಹಾ ಭಾಗವತನಾಗಿದ್ದರೆ ಪರಮ
ಗ್ರಾಹ್ಯವು. ಹಾಗೆ ಹೊರೆಯದಿದ್ದರೆ, ತನ್ನ ವರ್ಣದ ಮಹಾ ಭಾಗವತನ
ಪಾದೋದಕವಾದರೂ ಗ್ರಾಹ್ಯವೇ. ಹಾಗಲ್ಲದೆ ನಾರಾಯಣೈಕನಿಷ್ಠನಾದ ಇವನು
ಕೀಳು ವರ್ಣದವನಾಗಿದ್ದರೂ ಉತ್ತಮ ವರ್ಣದವನಿಗೆ ಗ್ರಾಹ್ಯವೆಂಬ ಭಾವ
ವಲ್ಲವು ಈ ವಾಕ್ಯದ ಅಭಿಪ್ರಾಯವೇನೆಂದರೆ, ಈತನು ಮಹಾ ಭಾಗವತ
ನಾಗಿ ಮಾಹಾತ್ಮ್ಯಯುಳ್ಳವನಾದುದರಿಂದ, ಆ ವರ್ಣದವರೆಲ್ಲಾ ಆತನ
ಪಾದೋದಕವನ್ನು, "ಅತುಲಂ ತೀರ್ಥಮ್" ಎಂದು ಭಾವಿಸಿ, ತುಂಬಾ ಪಾವನ
ವಾದುದೆಂದು ಪರಿಗ್ರಹಿಸತಕ್ಕದ್ದೆಂಬುದು. ಇದರ ಅಭಿಪ್ರಾಯವೇನೆಂಬುದನ್ನು
ಮುಂದಿನ ವಾಕ್ಯದಿಂದ ವಿಶದೀಕರಿಸುತ್ತಾರೆ. ಅಂತಹ ತೀರ್ಥವು ಪರಿ
ಗ್ರಾಹ್ಯವಾಗಬೇಕಾದರೆ, ಅಂತವನ ತೀರ್ಥವು ಪರಿಗ್ರಾಹ್ಯವೆಂದು ಶಾಸ್ತ್ರವು
ವಿಧಿಸಿರಬೇಕು, ಹಾಗಿದ್ದಪಕ್ಷದಲ್ಲಿ ಅಂತಹ ನಾರಾಯಣೈಕ ನಿಷ್ಠನ ಪಾದೋದಕಕ್ಕೆ
ಮಾಹಾತ್ಮ್ಯಯು ಹೆಚ್ಚು ಎಂದು ಈ ಸಂಹಿತೆಯು ತಿಳಿಸಿತು ಎಂದು ಹೇಳು

**ಉಂಡಾಯಿತ್ತಾಗಿಲ್ ಅದು ಸರ್ವಾಧಿಕ ತೀರ್ಥವೆನ್ರಪಡಿ; ಅಲ್ಲದು ಭಾಗವತನುಡೈಯ ಪಾದತ್ತಿಲೇ ಯಾದೃಚ್ಛಿಕಮಾಗ ಪಟ್ಟ ನಿರ್ಮಾಲ್ಯಜಲಾದಿಗಳುಮ್ "ಅತುಲ"ಮಾನ ತೀರ್ಥ ಮಾ ಮೆನ್ರ ಪಡಿಯನ್ರು.**

---

ತ್ತಾರೆ.—**ಪಾದೋದಕಂ** - ಒಂದು ವರ್ಣದವನ ಪಾದೋದಕವು, **ತೀರ್ಥಮಾಗ** - ಪಾವನರೂಪವಾಗಿ ಪರಿಗ್ರಾಹ್ಯವೆಂದು, **ಚೊನ್ನವಿಷಯತ್ತಿಲ್** - ಶಾಸ್ತ್ರವು ವಿಧಿಸಿರುವ ಸಂದರ್ಭದಲ್ಲಿ, **ಅದು** - ಆ ಪಾದೋದಕವು, **ಸರ್ವಾಧಿಕ ತೀರ್ಥ ಮೆನ್ರಪಡಿ** - ಸರ್ವಾಧಿಕವಾದ ತೀರ್ಥವೆಂದು ಹೇಳಿತೆಂಬ ಭಾವವು. **ಬ್ರಾಹ್ಮಣಾಃ ಪಾದತೋ ಮೇಧ್ಯಾಃ** ಎಂದು ಬ್ರಾಹ್ಮಣ ಪಾದೋದಕವು ಪರಿಗ್ರಾಹ್ಯವೆಂಬ ಪ್ರಮಾಣವಿರುವದರಿಂದ, ಅಂತವನು **ನಾರಣೈಕನಿಷ್ಠ**ನಾಗಿ, ಬ್ರಹ್ಮವಿತ್ತಾಗಿರುವ ಭಾಗವತನಾದರೆ, ಅಂತಹ ಪಾದೋದಕದಷ್ಟು ಪವಿತ್ರಕರವಾದುದಿಲ್ಲವೆಂದೂ, ಅಂತಹ ಪಾದೋದಕವು ಪರಿಗ್ರಾಹ್ಯವೆಂದೂ ಹೇಳಿತು. ಅಂತಹ ನಾರಾಯಣೈಕ ನಿಷ್ಠನು, ಪ್ರಪನ್ನನಾಗಿ ಜ್ಞಾನಿಯಾಗಿ, ಶೂದ್ರವರ್ಣದವನಾದರೆ, ಶೂದ್ರವರ್ಣದವನ ಪಾದೋದಕವು ಶೂದ್ರರಿಗೆ ಮಾತ್ರವೇ ಪರಿಗ್ರಾಹ್ಯವಾಗಿ, ಬ್ರಾಹ್ಮಣಾದಿಗಳಿಗೆ ಪರಿಗ್ರಾಹ್ಯವು ಶಾಸ್ತ್ರವಿರುದ್ಧವಾದುದರಿಂದ, ಆಗ ಆ ಪಾದೋದಕವು ಇತರ ಶೂದ್ರಾದಿಗಳಿಗೆ ಪರಮ ಪವಿತ್ರವಾದುದಾಗಿ ಪರಮ-ಗ್ರಾಹ್ಯವೆಂದು ಭಾವಿಸತಕ್ಕದ್ದು. ಅಂತವನ ಪಾದೋದಕವನ್ನು ಬ್ರಾಹ್ಮಣರೂ ಕೂಡ ಪರಿಗ್ರಹಿಸಬಹುದೆಂಬರ್ಥವಲ್ಲವು. ಹಾಗೆ ಅರ್ಥಮಾಡಿದರೆ ಶಾಸ್ತ್ರವನ್ನು ಪರಿತ್ಯಜಿಸಿ ಮಾಡಿದ ಅಭಿಪ್ರಾಯವಾಗುತ್ತದೆಂಬ ಭಾವವು. ಈ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟು, " **ಪ್ರಾಪ್ತವಿಷಯತ್ತಿಲೇ ಗುಣಾಧಿಕ್ಯಮ್ ಶೊಲ್ಲುಗಿರದು"** ಎಂಬ ಪ್ರಯೋಗವು ; **ಅಲ್ಲದು**-ಹಾಗಲ್ಲದೆ, **ಭಾಗವತನುಡೈಯಪಾದತ್ತಿಲೇ** - ಭಾಗವತನ ಪಾದದಲ್ಲಿ, **ಯಾದೃಚ್ಛಿಕಮಾಗಪಟ್ಟ**-ಶ್ರೀ ಪಾದತೀರ್ಥ ಪಂಗ್ರಹ ಶಾಸ್ತ್ರಕ್ರಮ ಒಂದೂ ಇಲ್ಲದೆಸುಮ್ಮನೆ ಅಕಸ್ಮಾತ್ತಾಗಿ ಪಾದಕ್ಕೆ ತಗಲಿದ, **ನಿರ್ಮಾಲ್ಯ ಜಲಾದಿಗಳುಮ್** - ಅಪರಿಶುದ್ಧವಾದ ಕಾಲುತೊಳದ ನೀರೇ ಮೊದಲಾದವು, ಆದಿಶಬ್ದದಿಂದ ಬೀದಿಯಲ್ಲಿ ತುಳಿದ ನೀರೇ ಮೊದಲಾದವು ಹೇಳಲ್ಪಟ್ಟವು, **ಅತುಲಮಾನ ತೀರ್ಥಮಾಮೆನ್ರ ಪಡಿಯನ್ರು** - ಅಸದೃಶ ಪವಿತ್ರಕರವಾದ ತೀರ್ಥವಾಗುತ್ತದೆಂದು ಹೇಳಿದುದಲ್ಲವು. ಶ್ರೀ ಪಾದತೀರ್ಥಕ್ಕೆ ಸಮಯವೂ, ಪ್ರಕಾರವೂ ಎಲ್ಲವೂ ಶಾಸ್ತ್ರಗಳಿಂದಲೂ ಸಂಪ್ರದಾಯಗಳಿಂದಲೂಸಿದ್ಧವು. ಅದೂ ಅಲ್ಲದೆ ಶ್ರೀಪಾದತೀರ್ಥಸೇವನೆಯ ಕಾಲದಲ್ಲಿ ಮಂತ್ರೋಕ್ತಿಯೂ ಕೂಡ ಆವಶ್ಯಕವು, "ಅಜನ್ಮಕೃತ ಪಾಪಾ

**"ತದುಚ್ಛಿಷ್ಟಂ ಸುಪಾವನಮ್" ಎನ್ರದುವುಮ್ ಪುನರುಪನಯನಾದಿ ಪ್ರಕರಣಙ್ಗಳಿಲೇ ಪಾವನಮಾಗ ಶಾಸ್ತ್ರಪ್ರಾಪ್ತಮಾನ ಉಚ್ಛಿಷ್ಟವಿಶೇಷತ್ತುಕ್ಕು ಇಗ್ಗುಣವಿಶೇಷಮುಡಿಯಾಗ ಪಾವನತ್ವಾತಿಶಯಮ್ ಶೊನ್ನಪಡಿ ;**

---

ನಾಂ ಪ್ರಾಯಶ್ಚಿತ್ತಂ ಮನೀಷಿಭಿಃ। ನಿರ್ಣೀತಂ ಭಗವದ್ಭಕ್ತ ಪಾದೋದಕ ನಿಷೇವಣಮ್" ಎಂಬುದು ಶ್ಲೋಕವು. ತದನುಗುಣವಾಗಿ ಅನುಷ್ಠಿಸಿ ಪರಿಗ್ರಹಿಸಬೇಕೇವಿನಾ ಮಹಾತ್ಮನ ಕಾಲಿನಮೇಲೆ ಬಿದ್ದನೀರು ಎಂದು, ಆತನು ಮಾಡಿಕೊಂಡ ಪಾದ ಪ್ರಕ್ಷಾಳನಾದಿತೀರ್ಥವೆಲ್ಲಾ ಪವಿತ್ರವಾದುದೆಂದು ಅರ್ಥಮಾಡತಕ್ಕದ್ದಲ್ಲವು ಶಾಸ್ತ್ರಾನುಮತಿಯೂ ಸಂಪ್ರದಾಯ ವ್ಯವಸ್ಥೆಯೂ ಎರಡೂ ಈ ವಿಷಯದಲ್ಲಿ ಆವಶ್ಯಕವೆಂಬ ಭಾವವು.

ಮುಂದೆ ಅದರ ಮುಂದಿನ ವಾಕ್ಯವಾದ "ತದುಚ್ಛಿಷ್ಟಂ ಸುಪಾವನಮ್" ಎಂಬುದರ ಅಭಿಪ್ರಾಯವನ್ನು ವ್ಯವಸ್ಥೆಮಾಡಿ ಹೇಳುತ್ತಾರೆ. **"ತದುಚ್ಛಿಷ್ಟಂ ಸುಪಾವನಮ್ ಎನ್ರದುವುಮ್**-ಎಂದು ಹೇಳಿರುವದೂ, **ಪುನರುಪನಯನಾದಿ ಪ್ರಕರಣಙ್ಗಳಿಲೇ** - ಪ್ರಾಯಶ್ಚಿತ್ತರೂಪದಲ್ಲಿ ಪುನರುಪನಯನವಾಗಬೇಕೆಂದು ವಿಧಿಸಿರುವ ಪ್ರಕರಣಗಳಲ್ಲಿವಿಕಲ್ಪಿಸಿ, **ಪಾವನಮಾಗ**-ಅದಕ್ಕೆಬದಲಾಗಿ ಪ್ರಾಯಶ್ಚಿತ್ತರೂಪದಲ್ಲಿ, **ಶಾಸ್ತ್ರಪ್ರಾಪ್ತಮಾನ**-ವೈಖಾನಸಬೋಧಾಯನೀಯಾಖಂಡಾದರ್ಶಾದಿಶಾಸ್ತ್ರಗಳಲ್ಲಿ ವಿಧಿಸಿರುವ, **ಉಚ್ಛಿಷ್ಟವಿಶೇಷತ್ತುಕ್ಕು**-ಗುರು, ಪಿತಾ, ಜ್ಯೇಷ್ಠಭ್ರಾತಾಯವರ ಭೋಜನೋಚ್ಛಿಷ್ಟಕ್ಕೆ, **ಇಗ್ಗುಣ ವಿಶೇಷ ಮುಡಿಯಾಗ** - ಆ ಗುರು, ಪಿತಾ ಮೊದಲಾದವರಲ್ಲಿ ಈ ನಾರಾಯಣೈಕ ನಿಷ್ಠತೆಯ ಮೂಲಕವಾಗಿ, **ಪಾವನತ್ವಾತಿಶಯಮ್**-ದೋಷಪರಿಹಾರ ರೂಪವಾದ ಪಾರಿಶುದ್ಧ್ಯದ ಮಾಹಾತ್ಮ್ಯೆಯನ್ನು, **ಶೊನ್ನಪಡಿ**-ಹೇಳಲ್ಪಟ್ಟಹಾಗೆ ಭಾವಿಸತಕ್ಕದ್ದು. ಕೆಲವು ಅಕೃತ್ಯಗಳಿಗೆ ಪುನರುಪನಯನವನ್ನು ವಿಧಿಸಿ ಅದಕ್ಕೆ ಅನುಕೂಲವಿಲ್ಲದಿದ್ದರೆ ಅದಕ್ಕೆ ಬದಲಾಗಿ ಕೆಲವು ವಿಕಲ್ಪಗಳು ವಿಧಿಸಲ್ಪಟ್ಟಿವೆ. ಹೇಗೆಂದರೆ, **"ಅಥಾತಃ ಪುನರುಪನಯನಂ"** ಎಂದು ಹೇಳಲಾರಂಭಿಸಿ, ಅನಂತರ **"ವ್ಯಾಹೃತೀಶ್ಚ ಹುತ್ವಾ, ಪುನರುಪನಯನಂ ಕರೋತಿ, ಅಥವಾ ಸಾವಿತ್ರೀಮಷ್ಟಶತ ಮಾವರ್ತ್ಯಾಭಿಮೃಶ್ಯಘೃತಂ ಪ್ರಾಶ್ನೀಯಾತ್; ಗುರೋರುಚ್ಛಿಷ್ಟಂ ವಾ ಭುಂಜೀತ, ತತಃ ಪೂತೋಭವತಿ"** ಎಂದು ಪುನರುಪನಯನಕ್ಕೆ ಬದಲಾಗಿ ಗುರುವಿನ ಉಚ್ಛಿಷ್ಟ ಭೋಜನದಿಂದ ಅಪವಿತ್ರತೆಯು ಹೋಗಿ ಪರಿಶುದ್ಧನಾಗುತ್ತಾನೆಂದು ಹೇಳಲ್ಪಟ್ಟಿರುತ್ತದೆ. ಆ ಸಂದರ್ಭದಲ್ಲಿ ಆ ಗುರುವು ನಾರಾಯಣೈಕನಿಷ್ಠನಾದರೆ ಪಾವನತಾತಿಶಯವು ಲಭಿಸುತ್ತದೆಂಬುದು ಈ ಸಂಹಿತಾವಾಕ್ಯಾರ್ಥವೆಂಬಭಾವವು. ಆದರೆ ಹೀಗೆ ಅಭಿಪ್ರಾಯ

**ಮತ್ತುಮ್, ಶಿಷ್ಯಪುತ್ರಾದಿಗಳುಕ್ಕು ನಾರಾಯಣೈಕನಿಷ್ಠತ್ವಮುಂಡಾನಾಲ್ ಆಚಾರ್ಯಾದಿಗಳುಕ್ಕು ಅವರ್‌ಗಳುಡೈಯ ಉಚ್ಛಿಷ್ಟಂ ಸುಪಾವನಮೆನ್ರಪಡಿಯುನ್ರು.**

---

ವಾದರೆ ಭಕ್ತಾಂಘ್ರಿರೇಣುರವರು ವೈಷ್ಣವೋಚ್ಛಿಷ್ಟ ಭೋಜನವು ಎಲ್ಲರಿಗೂ ಪಾವನತ್ವವನ್ನುಂಟುಮಾಡುತ್ತದೆಂದು ಹೇಳಿರವಾಗ, ಇದು ಪ್ರಾಯಶ್ಚಿತ್ತ ವಿಷಯವೆಂದು ಹೇಗೆ ಹೇಳಲಾಗುತ್ತದೆಂದು ಆಕ್ಷೇಪಿಸಿದರೆ, ಈ ಆಕ್ಷೇಪಕ್ಕೆ ಕಾರಣವಿಲ್ಲವೆಂದೂ, ಆ ದಿವ್ಯಸೂರಿಗಳ ಅಭಿಪ್ರಾಯವೂ ಸಹ ಪ್ರಾಯಶ್ಚಿತ್ತವಿಷಯವೇ ಎಂದೂ, ಆ ಉಚ್ಛಿಷ್ಟ ಸೇವನೆಯು ಯಾವ ಸಂದರ್ಭದಲ್ಲಿ ವಿಹಿತವೋ ಆ ಸಂದರ್ಭದಲ್ಲಿ ಮಾತ್ರವೇ ಉಪಾದೇಯವೇ ವಿನಾ, ಎಲ್ಲಾ ಸಂದರ್ಭವಲ್ಲೂ ಹೇಳಲ್ಪಡಲಿಲ್ಲವೆಂದೂ ತಿಳಿಸುತ್ತಾರೆ. ಯಾವ ಸಂಧರ್ಭದಲ್ಲಿ ಉಪಾದೇಯವೆಂದರೆ? "ಯೇನಾಮಂತ್ರವರಂ ಪ್ರಾದಾತ್ ಸಂಸಾರೋಚ್ಛೇದ ಸಾಧನಂ। ಪ್ರತೀಚ್ಛೇದ್ಗುರುವರ್ಯಸ್ಯ ತಸ್ಯೋಚ್ಛಿಷ್ಟಂ ಸುಪಾವನಮ್। ಗುರೋಸ್ಸ್ವಸ್ಯ ಯದುಚ್ಛಿಷ್ಟಂ ಭೋಜ್ಯಂ ತತ್ಪುತ್ರ ಶಿಷ್ಯಯೋಃ" ಎಂದರೆ "ಯಾರು ಶ್ರೇಷ್ಠವಾದ ಮೂಲಮಂತ್ರವನ್ನು (ದ್ವಯವೆಂದೂ ಅರ್ಥಮಾಡಬಹುದು) ದಯಪಾಲಿಸಿ ಸಂಸಾರ ನಿವೃತ್ತಿಯನ್ನುಂಟುಮಾಡಿದನೋ ಅಂತಹ ಮಹಾಗುರುವಿನ ಉಚ್ಛಿಷ್ಟವನ್ನು ತಾನೂ ತನ್ನ ಪುತ್ರಶಿಷ್ಯರು ಪಾವನವೆಂದು ಸ್ವೀಕರಿಸಬಹುದು." ಎಂದು ಹೇಳಿದೆಯೇ ವಿನಾ ಎಲ್ಲಾ ಸಂದರ್ಭದಲ್ಲೂ ವಿಹಿತವೆಂದು ಹೇಳಿಲ್ಲ ಇರುವದರಿಂದಲೂ, (ಇಂತಹ ವಿಹಿತ ಭೋಜನವೂ ಕೂಡ ಈಗ ತುಂಬಾ ಬಳಕೆಯಲ್ಲಿಲ್ಲವು.) ತಾವು ಈಗ ಉಪದೇಶಿಸಿದುದೇ ಸರಿಯಾದಭಿಪ್ರಾಯವೆಂದೂ, ಇದು ಪ್ರಮಾಣವೆಂಬವಕ್ಕೆ, ಇದನ್ನೇ ಆಗಮ ಪ್ರಾಮಾಣ್ಯದಲ್ಲಿ ಶ್ರೀ ಯಾಮುನೇಯರವರು ಉದಾಹರಿಸಿರುತ್ತಾರೆಂದೂ ತಿಳಿಸುತ್ತಾರೆ— ಮತ್ತುಮ್ - ಇಷ್ಟೇ ಅಲ್ಲದೆ, ಶಿಷ್ಯಪುತ್ರಾದಿಗಳುಕ್ಕು - ಶಿಷ್ಯ, ಮಗ, ಆದಿಶಬ್ದದಿಂದ ತಮ್ಮನು ಮೊದಲಾದವರುಗಳಿಗೇ, ನಾರಾಯಣೈಕನಿಷ್ಠತ್ವಮುಂಡಾನಾಲ್ – ನಾರಾಯಣೈಕನಿಷ್ಠತ್ವವು ಉಂಟಾದರೆ, ಆಚಾರ್ಯಾದಿಗಳುಕ್ಕು–ಆಚಾರ್ಯ ಆದಿಶಬ್ದದಿಂದ ಪಿತಾ ಮತ್ತು ಜ್ಯೇಷ್ಠ ಭ್ರಾತೃಗಳಿಗೆ, ಅವರ್‌ಗಳುಡೈಯ ಉಚ್ಛಿಷ್ಟಂ - ಶಿಷ್ಯನ ಉಚ್ಛಿಷ್ಟವು ಗುರುವಿಗೂ, ಮಗನ ಉಚ್ಛಿಷ್ಟವು ತಂದೆಗೂ, ಕನಿಷ್ಠನ ಉಚ್ಛಿಷ್ಟವು ಜ್ಯೇಷ್ಠನಿಗೂ, ಸುಪಾವನಮೆನ್ರಪಡಿಯುನ್ರು-ಸುಪಾವನವೆಂದು ಸಂಹಿತೆಯು ಹೇಳಿತು ಎಂಬರ್ಥವೂ ಅಲ್ಲವು. ನಾರಾಯಣೈಕನಿಷ್ಠನಾದ ಮಾತ್ರದಿಂದಲೇ ಶಿಷ್ಯನ, ಮಗನ, ಕನಿಷ್ಟನ, ಉಚ್ಛಿಷ್ಟಗಳು ಕ್ರಮವಾಗಿ ಆಚಾರ್ಯ, ತಂದೆ, ಜ್ಯೇಷ್ಠಭ್ರಾತಾ ಇವರುಗಳಿಗೆ ಪಾವನವಾಗುತ್ತದೆಂದು ಸಂಹಿತೆಯು, ತದುಚ್ಛಿಷ್ಟಂ ಸುಪಾವನಂ ಎಂಬುದರಿಂದ ಹೇಳಲ್ಪಡಲಿಲ್ಲವು

(೧) "ನಿರ್ಮಾಲ್ಯಂ ಭಕ್ಷಯಿತ್ವೈವ ಮುಚ್ಛಿಷ್ಟ ಮಗುರೋರಪಿ । ಮಾಸಂ ಪಯೋವ್ರತೋಭೂತ್ವಾ ಜಪನ್ನಷ್ಟಾಕ್ಷರಂ ಸದಾ । ಬ್ರಹ್ಮಕೂರ್ಚಂ ತತಃ ಪೀತ್ವಾ ಪೂತೋ ಭವತಿ ಮಾನವಃ" ಎನ್ನು ಭಗವದ್ಧರ್ಮನಿಷ್ಠನುಕು ಸಮಯಾಚಾರಂ ಚೊಲ್ಲುಗಿರ ಸನತ್ಕುಮಾರ ಸಂಹಿತಾವಚನತ್ತೈ ಆಗನು

---

ಎಂಬ ಭಾವವು. ಆದುದರಿಂದ ಉಚ್ಛಿಷ್ಟಪಾವನತ್ವವು ಶಾಸ್ತ್ರದಲ್ಲಿ ಯಾವ ಸಂದರ್ಭದಲ್ಲಿ ವಿಹಿತವೋ, ಆ ಸಂದರ್ಭದಲ್ಲಿ ಮಾತ್ರವೇ ಪಾವನವೆಂದು ಭಾವಿಸತಕ್ಕದ್ದು. ಸರ್ವತ್ರ ಅನ್ವಯಿಸತಕ್ಕದ್ದಲ್ಲವು ನಿರ್ಮಾಲ್ಯಂ-ಅನ್ಯದೇವತಾನಿವೇದನವಾಗಿ ತಚ್ಛೇಷವಾದ ಅನ್ನಾದಿಗಳನ್ನೂ, ಭಕ್ಷಯಿತ್ವಾ-ಭೋಜನಮಾಡಿ, ಎಂದರೆ ಅಕಸ್ಮಾತ್ತಾಗಿ ಭೋಜನಮಾಡಿವ ದಾವರೆ ಎಂಬರ್ಥವು, ಏವಂ-ಹಾಗೆಯೇ, ಅಗುರೋಃ-ಗುರುವಲ್ಲದೇ, ಎಂದರೆ ಆಚಾರ್ಯ, ಪಿತಾ, ಜ್ಯೇಷ್ಠಭ್ರಾತಾ ವಲ್ಲದೇ ಇರುವವರ, ಉಚ್ಛಿಷ್ಟಮಪಿ-ಉಚ್ಛಿಷ್ಟವನ್ನೂ ಕೂಡ, ಭಕ್ಷಯಿತ್ವಾ - ಭೋಜನ ಮಾಡಿದರೂ, ಅದಕ್ಕೆ ಪ್ರಾಯಶ್ಚಿತ್ತವಾಗಿ ಏನು ಮಾಡತಕ್ಕದ್ದೆಂದರೆ, ಸಂಹಿತೆಯು ತಿಳಿಸುತ್ತದೆ, ಮಾಸಂ ಪಯೋವ್ರತೋಭೂತ್ವಾ-ಒಂದು ತಿಂಗಳಕಾಲ ಆಹಾರಕ್ಕಾಗಿ ಬರೀ ಹಾಲು ಮಾತ್ರ ಕುಡಿಯುವ ವ್ರತವನ್ನು ಅವಲಂಬಿಸಿದವನಾಗಿ, ಸದಾ - ಯಾವಾಗಲೂ, ಎಂದರೆ ತನ್ನ ನಿತ್ಯನೈಮಿತ್ತಿಕಾನುಷ್ಠಾನ ದೇಹಯಾತ್ರೆ ಮೊದಲಾದವುಗಳು ಕಳೆದ ಮಿಕ್ಕಕಾಲವೆಲ್ಲಾ, ಅಷ್ಟಾಕ್ಷರಂ ಜಪನ್-ಅಷ್ಟಾಕ್ಷರ ಮಂತ್ರವನ್ನು ಜಪಿಸುವವನಾಗಿ, ಬ್ರಹ್ಮಕೂರ್ಚಂ ತತಃ ಪೀತ್ವಾ - ಅನಂತರ ಪಂಚಗವ್ಯವನ್ನು ಪ್ರಾಶನಮಾಡಿದರೆ, ಪೂತೋಭವತಿ ಮಾನವಃ-ಮನುಷ್ಯನು ಪವಿತ್ರನಾದವನಾಗುವನು. ಇಲ್ಲಿ ಮಾನವಃ-ಎಂದು ಹೇಳಿದರೂ, ಉಪನಯನ ಸಂಸ್ಕಾರಕ್ಕೆ ಅರ್ಹನಾದವನೇ ಇಲ್ಲಿ ಹೇಳಲ್ಪಟ್ಟನೆಂದು ಭಾವಿಸತಕ್ಕದ್ದು. ಹಾಗಾದರೆ ಗುರುಗಳಾಗಿ ಅವರ ಉಚ್ಛಿಷ್ಟವು ಉಪಾದೇಯವಾಗಿ ಇರುವವರು ಯಾರೆಂದರೆ.—"ಪಿತುರ್ಜ್ಯೇಷ್ಠಸ್ಯ ಭ್ರಾತುರುಚ್ಛಿಷ್ಟಂ ಭೋಕ್ತವ್ಯಂ" ಎಂದು ಆಪಸ್ತಂಬ ಸೂತ್ರದಲ್ಲಿ ಹೇಳಿರುವ ಹಾಗೆ, ಗುರು, ತಂದೆ, ಅಣ್ಣಂದಿರು. "ತದುಚ್ಛಿಷ್ಟಂ ಸುಪಾವನಂ" ಇತ್ಯಾದಿ ಸಂಹಿತಾವಾಕ್ಯವೂ ಉಪನಯನ ಸಂಸ್ಕಾರಾರ್ಹನಿಗೆ ಪಾವನವಾಗಿ, ತದುಚ್ಛಿಷ್ಟಂ ಎಂದು ಹೇಳಿರುವದರಿಂದ, ಆ ವಾಕ್ಯವೆಲ್ಲಾ ದ್ವಿಜನನ್ನು ಕುರಿತದ್ದೆಂದೇ ಭಾವಿಸತಕ್ಕದ್ದು" ಎನ್ನು - ಎಂಬದಾಗಿ, ಭಗವದ್ಧರ್ಮನಿಷ್ಠನುಕ್ಕು-ಭಕ್ತಿಮಾರ್ಗದಿಂದ ಭಗವಂತನನ್ನಾಶ್ರಯಿಸಿ ಯೋಗಾರೂಢನಾಗಿರುವವನಿಗೆ, ಸಮಯಾಚಾರಂ - "ಧರ್ಮಜ್ಞಸಮಯಃ ಪ್ರಮಾಣಂ ವೇದಾಶ್ಚ" ಎಂಬಲ್ಲಿ ಹೇಳಿರುವ ಹಾಗೆ ಭಾಗವತರ ಸಂಪ್ರದಾಯವೂ ಮುಖ್ಯಪ್ರಮಾಣವಾಗಿರುವದ

ಪ್ರಾಮಾಣ್ಯತ್ತಿಲೇ ಆಳವಂದಾರ್ ಉದಾಹರಿತ್ತರುಳಿನಾರ್. ಆಗೈಯಾಲೇ (೧) "ಪೋನಕಮ್ ಶೆಯ್‌ದ ಶೇಡನ್ತ್ತುರುವರೇಲ್ ಪುನಿತಮನ್ರೇ"

ರಿಂದ ಅಂತಹ ಸಂಪ್ರದಾಯಾಚಾರವನ್ನು, ಚೊಲ್ಲುಗಿರ - ಉಪದೇಶಿಸುವ, ಸನತ್ಕುಮಾರ ಸಂಹಿತಾವಾಕ್ಯವನ್ನು ಆಗಮಪ್ರಾಮಾಣ್ಯವೆಂಬ ತಮ್ಮ ಗ್ರಂಥದಲ್ಲಿ; ಆಳವಂದಾರ್-ಶ್ರೀ ಯಾಮುನೇಯರು, ಉದಾಹರಿತ್ತರುಳಿನಾರ್-ಉದಾಹರಿಸಿ ಕೃಪೆಗೈದರು. ಅಂತಹ ಜ್ಞಾನ ನಿಧಿಗಳೇ ಈ ಶ್ಲೋಕವನ್ನು ಪ್ರಮಾಣವಾಗಿ ಉದಾಹರಿಸಿದನಂತರ ಅದರಮೇಲೆ ಇನ್ನು ಯಾವ ಆಕ್ಷೇಪವೂ ಇಲ್ಲವೆಂಬಭಾವವು. ಇದಕ್ಕೆ ಪಂಚಗವ್ಯವೆಂಬ ಹೆಸರು ಏಕೆಂಬ ಅಪೇಕ್ಷೆಯಲ್ಲಿ "ಶಕೃದ್ಗೋಮೂತ್ರ ಮಾಜ್ಯಂಚ ಕುಶಾಂಬುದಧಿ ಪೈಪಯಃ" ಈ ಗೋಸಂಬಂಧವಾದ ಐದೂ ಸೇರುವದರಿಂದ ಎಂದು ತಿಳಿಯತಕ್ಕದ್ದು. ಅವುಗಳನ್ನು ಮಿಶ್ರಮಾಡುವ ಕ್ರಮ, ಪುಣ್ಯಾಹ, ಅಗ್ನಿಯಲ್ಲಿ ಹೋಮಮಾಡುವ ಕ್ರಮ, ಮಂತ್ರ ಮೊದಲಾದವುಗಳೆಲ್ಲಾ ಆ ಸನತ್ಕುಮಾರ ಸಂಹಿತೆಯ ನಾರಾಯಣೀಯದಲ್ಲಿ ಹೇಳಲ್ಪಟ್ಟಿರುತ್ತದೆ. ಇದಕ್ಕೆ ಸರ್ವಪೋಷಹರ ಮಾಹಾತ್ಮ್ಯಯುಳ್ಳದೆಂದು ಅಲ್ಲಿ ಹೇಳಲ್ಪಟ್ಟಿರುತ್ತದೆ. ಮನೋವಾಕ್ಕರ್ಮಗಳಿಂದ ಮಾಡಲ್ಪಟ್ಟ ಸರ್ವಾಪರಾಧಗಳಿಗೂ, ದುಷ್ಟ ಸಂಸರ್ಗ,ದುಷ್ಟಾನ್ನಪ್ರಾಶನ ಇವೇ ಮೊದಲಾದವುಗಳೆಲ್ಲಾ ಅಗ್ನಿಯಲ್ಲಿ ತೂಲರಾಶಿ ದಗ್ಧವಾಗುವಹಾಗೆ ದಗ್ಧವಾಗುತ್ತವೆಂದು ಹೇಳಲ್ಪಟ್ಟಿರುತ್ತದೆ. ಆದುದರಿಂದ ಪಿತಾವೂ ಜ್ಯೇಷ್ಠಭ್ರಾತಾ ಪಿತೃವಿಗೆ ಸಮಾನವಾದುದರಿಂದ ಇವರುಗಳು ಗುರುವಿಗೆ ಸಮಾನರು, ಇವರುಗಳ ಉಚ್ಛಿಷ್ಟಮಾತ್ರ ಪ್ರಾಯಶ್ಚಿತ್ತ ರೂಪದಲ್ಲಿ ಗ್ರಾಹ್ಯವೆಂದು ಹೇಳಿದಂತೆ ಆಯಿತು. ಹಾಗಲ್ಲದೆ ಹೀಗೆ ಗುರುಗಳಲ್ಲದಿರುವ ಅಗುರೋಃ ಸಾಕ್ಷಾತ್ತಾದ ಉಚ್ಛಿಷ್ಟವು ಪ್ರಾಮಾದಿಕವಾಗಿ ಸಂಬಂಧಿಸಿದರೆ,ಮೇಲೆ ಹೇಳಿದ ರೀತಿಯಲ್ಲಿ ಒಂದು ತಿಂಗಳ ಕ್ಷೀರಾನ್ನ ವ್ರತ,ಅಷ್ಟಾಕ್ಷರ ಜಪ,ಪಂಚಗವ್ಯಪ್ರಾಶನ ಪ್ರಾಯಶ್ಚಿತ್ತಗಳು ಹೇಳಲ್ಪಟ್ಟಿವೆ ಎಂಬ ಭಾವವು. ಹೀಗಿರುವಾಗ ನಾರಾಯಣ ನಿಷ್ಠನ ಉಚ್ಛಿಷ್ಟವು ಹೇಗೆ ಸಾಕ್ಷಾತ್ತಾಗಿ ಪಾವನವಾದೀತೆಂಬ ಭಾವವು. ಹೀಗೆ ಗುರು, ಗುರುವಿಗೆ ಸಮಾನರಾದವರ ಸಾಕ್ಷಾತ್ ಭುಕ್ತಶೇಷವು ಪ್ರಾಯಶ್ಚಿತ್ತರೂಪವಾದುದು, ಇವರಲ್ಲದೆ ಇತರರ ಉಚ್ಛಿಷ್ಟ ಸಂಬಂಧ ಉಂಟಾದರೆ ಪ್ರಾಯಶ್ಚಿತ್ತವು ವಿಧಿಸಲ್ಪಟ್ಟಿತೆಂದು ಹೇಳಿದರು. ಆದರೆ ಮಹಾ ಭಾಗವತರಾದ ತೊಂಡರಡಿಪ್ಪೊಡಿಯಾಳ್ವಾರವರು ಮಹಾಭಾಗವತನ ಭುಕ್ತಶೇಷವು "ಪೋನಕಮ್ ಶೆಯ್‌ದ" ಎಂಬ ಪಾಶುರದಲ್ಲಿ ಮಹಾಪವಿತ್ರ

(೧) ತಿರುಮಾಲೆ ೪೧.

ಎನ್ರ್ದುವುಮ್ ಗುರುವಿಷಯ ಮಾಮಿತ್ತನ್ನೈ. ಪೊದುಮಾನಾಲುಮ್, ಭಗವ

ಕರವಾದುವೆಂದು ಹೇಳಿದ್ದಾರಲ್ಲಾ ಅದಕ್ಕೆ ನಿರ್ವಾಹ ಹೇಗೆ ಎಂದರೆ, ಆಳ್ವಾರ್ ಸೂಕ್ತಿಯಾದುದರಿಂದ ನಮಗೆ ಪರಮ ಗ್ರಾಹ್ಯವು. ಅದನ್ನು ಶಾಸ್ತ್ರಕ್ಕೆ ಅವಿರೋಧವಾಗಿ ನಮನಮಾತತಕ್ಕದ್ದು ಯುಕ್ತವಾದುದರಿಂದ, ಅದನ್ನು ಎಲ್ಲರ ಭುಕ್ತಶೇಷವೆಂದು ಭಾವಿಸದೆ ಈ ಗುರುಗಳ ಭುಕ್ತಶೇಷವೆಂದಾದರೂ ಅರ್ಥಮಾಡಬಹುದು. ಹಾಗಲ್ಲವ್ರ, ಗುರು ಎಂದು ಹೇಳದೇ ಇರುವಾಗ, ಹಾಗೆ ಭಾವಿಸುವದು ಹೇಗೆ ಸಾಧ್ಯವು ಎಂದು ಆಕ್ಷೇಪ ತಂದರೆ, ಶಾಸ್ತ್ರವಿರೋಧವನ್ನು ತಪ್ಪಿಸುವದಕ್ಕಾಗಿ, ಅವರು ಊಟಮಾಡಿದ ಶೇಷವೆಂದರೆ ಸಾಕ್ಷಾತ್ ಭುಕ್ತಶೇಷವೆಂಬು ಅರ್ಥಮಾಡದೆ ಭಾಂಡಶೇಷವೆಂದಾದರೂ ಅರ್ಥಮಾಡಬಹುದು ಎಂದು ಎರಡುವಿಧ ನಿರ್ವಾಹವನ್ನು ಮುಂದಿನ ಎರಡುವಾಕ್ಯಗಳಿಂದ ತಿಳಿಸುತ್ತಾರೆ.-(೧) "**ಪೋನಕಮ್ ಶೆಯ್ದಶೇಡಮ್** - ತಾವು ಭೋಜನಮಾಡಿ ಮಿಕ್ಕ ಶೇಷವನ್ನು, ತರುವ ರಾಕಿಲ್- ಕೃಪಯಾ ಕೊಡುವರಾದರೆ, ಅನ್ರೇ - ಆಗಲೇ, **ಪುನಿದಮ್**-ಸದ್ಯಃ ಪಾವನವೆಂಬ ಭಾವವು" ಎನ್ರಿದುವುಮ್ - ಎಂದು ಹೀಗೆ ಹೇಳಿರುವದೂ ಸಹ, ಗುರು ವಿಷಯ ಮಾಮುತ್ತನ್ನೈ - ಗುರು ಶಬ್ದಕ್ಕೆ ಅರ್ಹರಾದ ಆಚಾರ್ಯ, ಪಿತಾ, ಜ್ಯೇಷ್ಠ ಭ್ರಾತಾ ಇವರುಗಳ ವಿಷಯವಾಗುತ್ತದೆ; ಅಷ್ಟೇ ಆ ವಾಕ್ಯದ ಅಭಿಪ್ರಾಯವು, ಎಂದರೆ ಶಾಸ್ತ್ರಪಜ್ತಿಗೆ ಅವಿರೋಧೇನ ಹಾಗೆ ತಾನೇ ಆ ವಾಕ್ಯದ ಅಭಿಪ್ರಾಯವೆಂಬ ಭಾವವು. ಆ ಪೂರಾ ಪಾಶುರವು ಯಾವುದೆಂದರೆ.—

"ವಾನುಳಾರರಿಯಲಾಗಾ ವಾನವಾ ವೆನ್ಬರಾಗಿಲ್ ।
ತೇನುಲಾನ್ ತುಳಪ ಮಾಲೈ ಚ್ಚೆನ್ನಿಯಾ ವೆನ್ಬರಾಗಿಲ್ ।
ಊನಮಾಯಿನಗಳ್ ಚೆಯ್ಯುಮೂನ ಕಾರಕರ್ ಗಳೇನುಮ್ ।
ಪೋನಕಮ್ ಚೆಯ್ದ ಶೇಡಮ್ ತರುವರೇಲ್ ಪುನಿದಮನ್ರೇ॥

ಇದರರ್ಥವು " ಊನಂ ಆಯಿನಗಳ್ ಚೆಯ್ಯುಮ್ - ತಾವು ಕೊಲ್ಲುವದಲ್ಲದೆ, ಊನಕಾರರ್ಗಳೇನುಮ್ – ಇತರರನ್ನು ಪ್ರೇರಿಸಿ ಕೊಲ್ಲಿಸುವಹಾಗೆ ಮಾಡುವರಾದರೂ ವಾನುಳಾರ್ - ಮೇಲಿನ ಲೋಕಗಳಲ್ಲಿರುವ ಚತುರ್ಮುಖ ಬ್ರಹ್ಮಾದಿಗಳಿಂದ, ಅರಿಯಲಾಗಾ - ಇಂತವನೆಂದು ವಿಮರ್ಶಿಸಿ ತಿಳಿಯಲಾಗದ, ವಾನವಾ – ಪರಮ ಪದದಲ್ಲಿರುವ ಪರವಾಸುದೇವನೇ, ಎನ್ಬರಾಗಿಲ್ - ಎಂದು ಹೇಳುವರಾದರೆ, ಎಂದರೆ ಆಶ್ರಯಿಸುವರಾದರೆ, ತೇನ್ ಉಲಾಮ್ - ಪರಿಮಳ ರೂಪ ಮಧುವನ್ನು ಸ್ರವಿಸುತ್ತಿರುವ, ತುಳಪಂ ಮಾಲೈ - ತುಳಸಿಯ ಮಾಲೆಯನ್ನು, ಚೆನ್ನಿಯಾ - ಮುಡಿ

ಯಲ್ಲಿ ಧರಿಸಿರುವನೇ, ಎನ್ಪರಾಗಿಲ್ - ಪ್ರಾಪ್ಯನು ಎಂದು ಹೇಳುವರಾದರೂ, ಅಂತವರು, ಪೋನಕನ್ ಶೆಯ್‌ದ ಶೇಡನ್ - ಭಾಂಡಸ್ಥಭುಕ್ತ ಶೇಷವನ್ನು, ತರುವರೇಲ್-ಕೃಪೆಮಾಡಿಕೊಟ್ಟರೆ, ಅನ್ರೇ ಪುನಿದನ್-ಸದ್ಯಃ ಪಾವನವು; ಆದರೆ ಸಾರಾಸ್ವಾದನಿಯವರು, ಊನವೃತ್ತಿಗಳ್ ಎಂದರೆ ಆಪತ್ತಿನಲ್ಲಿ ಕೃಷ್ಯಾದಿ ವ್ಯಾಪಾರಗಳನ್ನವಲಂಬಿಸಿದವರೆಂದೂ, ಊನಕಾರಕರ್ - ಎಂದರೆ ಇಂತಹ ವೃತ್ತಿಯನ್ನು ಇತರರಿಗೆ ಬೋಧಿಸಿ ಅಂತಹ ವೃತ್ತಿಯನ್ನವಲಂಬಿಸುವಹಾಗೆ ಮಾಡುವವರೆಂದು ಅರ್ಥಮಾಡಿರುತ್ತಾರೆ. ಇತರರು ಈ ಪಾಶುರದಲ್ಲಿರುವ ಶೇಷವು ಸಾಕ್ಷಾತ್ ಭುಕ್ತ ಶೇಷವೆಂದೇ ಅರ್ಥಮಾಡಿ ಲೋಕವಿರುದ್ಧವಾಗಿಯೂ ಲೋಕ ಪರಿಗ್ರಹವಿಲ್ಲದೆಯೂ ಇರುವ ಅರ್ಥವನ್ನು ಹೇಳಿದರಲ್ಲಾ ಎಂಬ ಪರಿತಾಪದಿಂದ ತಾವೇ ಮುಂದಿನ ವಾಕ್ಯದಿಂದ ಸರಿಯಾದ ಅಭಿಪ್ರಾಯವನ್ನು ದಯಪಾಲಿಸಿರುವದೂ ಅಲ್ಲದೆ ತಾತ್ಪರ್ಯ ಚಂದ್ರಿಕೆಯಲ್ಲಿ ಈ ಪಾಶುರಾರ್ಥವನ್ನು ಸರಿಯಾಗಿ ಬೋಧಿಸುವ ಒಂದು ಕಾರಿಕೆಯನ್ನೇ ಅನುಗ್ರಹಿಸಿರುತ್ತಾರೆ. "ದಿವ್ಯೈರವೇದ್ಯವಿಭವೇತಿ ಯದಿಬ್ರುವಂತಿ ಮಾಧ್ವೀಮನೋಜ್ಞ ತುಳಸೀ ಕ ಯದೀತಿ ಚಾಹುಃ। ಊನಕ್ರಿಯಾ ಅಪಿ ಪರಾನ ಪಿ ಕಾರಯಂತೋ ಭುಕ್ತಾಧಿಕಂ ದದತಿ ಚೇನ್ನನುತತ್ಪವಿತ್ರಂ" ಸ್ವರ್ಗದಲ್ಲಿರುವ ದೇವತೆಗಳಿಂದಲೂ ಅರಿಯಲು ಅಸಾಧ್ಯವಾದ ವಿಭವವುಳ್ಳವನೇ ಎಂದು ಹೇಳಿದುದಾದರೆ ಹಾಗೆಯೇ, ಮಧುಪೂರ್ಣವಾಗಿ ಮನೋಹರವಾದ ತುಳಸೀಮಾಲೆಯುನ್ನುಳ್ಳವನೇ ಎಂದೂ ಸಹ ಹೇಳಿದುದಾದರೂ, ಅಂತವರು ದೇಹಧಾರಣಾರ್ಥವಾಗಿ ಕೊಲ್ಲುವದೇ ಮೊದಲಾದ ನಿಕೃಷ್ಟವೃತ್ತಿಯಲ್ಲಿದ್ದವರಾದರೂ ಅಥವಾ ಅಂತಹ ನಿಕೃಷ್ಟವೃತ್ತಿಯನ್ನು ಇತರರಿಂದ ಮಾಡಿಸಿದವರೇಯಾದರೂ ಅಂತವರು ಊಟಮಾಡಿದನಂತರ ಹೆಚ್ಚಾಗಿ ಭಾಂಡದಲ್ಲಿ ನಿಂತು ಶೇಷವಾದುದನ್ನು ದಯಪಾಲಿಸಿದುದಾದರೆ ಅದು ತುಂಬಾ ಪಾವನವಾದುದಲ್ಲವೇ? ಎಂಬುದು ಶ್ಲೋಕತಾತ್ಪರ್ಯವು.

ಈ ಮೇಲಿನ ಕಾರಿಕೆಯಿಂದ ತೋರಿಬರುವ ಅಭಿಪ್ರಾಯವೇ ಈ ಪಾಶುರದ ತಾತ್ಪರ್ಯವೆಂದು ಮುಂದಿನ ವಾಕ್ಯದ ಮೂಲಕ ಶ್ರೀ ದೇಶಿಕರವರೇ ಉಪದೇಶಿಸುತ್ತಾರೆ.—ಈ ಮೇಲಿನ ಪಾಶುರದಲ್ಲಿ ಹೇಳಿರುವದನ್ನು ಪರಿಶೀಲಿಸಿದುದಾದರೆ, ಸಾಮಾನ್ಯನಾದ ನಾಮ ಸಂಕೀರ್ತನಪರನಾದವನ ಉಚ್ಛಿಷ್ಟವು ಪರಮಪಾವನವೆಂದು ಹೇಳಿರುವಾಗ, ಆ ಸಾಮಾನ್ಯನು ಆಚಾರ್ಯನು ಪಿತಾ ಭ್ರಾತಾವಾಗಿರಬೇಕೆಂದು ಅರ್ಥಹೇಳಬೇಕೆಂಬ ನಿರ್ಬಂಧವು ಸರಿಯೇ ಎಂದು ಪೂರ್ವಪಕ್ಷಿಯು ಎದ್ದು ಕೂತರೆ, ಇನ್ನೊಂದು ವಿಧವಾಗಿ ಮುಂದಿನ ವಾಕ್ಯದಿಂದ ನಿರ್ವಾಹವನ್ನು ತೋರಿಸುತ್ತಾರೆ. ಆ ಪಾಶುರದ ತಾತ್ಪರ್ಯವನ್ನು ತಾವೇ ಅನುಗ್ರಹಿಸುತ್ತಾರೆ.

**ತ್ಸಂಕೀರ್ತ್ತನ ಪರರ್ ದೇಶಕಾಲಾದಿವೈಗುಣ್ಯತ್ತಾಲೇ ಊನವೃತ್ತಿಗಳ್ಳುಮಾಯ್ ಊನಕಾರಕರ್‌ಗಳು ಮಾಯಿರುನ್ದಾರುಗಳೇ ಯಾಗಿಲುಮ್, ತಾಙ್ಗಳ್ ಅಮು ದುಶೆಯ್ದ ಶೇಡನ್ತರುವರಾಗಿಲ್ ಪುನಿದುಮಾ ಮೆನ್ರಿದಿತ್ತನ್ನೈ. ಇದಿಲ್ ಶೇಷ ಶಬ್ದಂ "ಅನ್ನಶೇಷಃ ಕಿಂ ಕ್ರಿಯತಾಂ, ಇಷ್ಟೈಸ್ಸಹ ಭುಜ್ಯತಾಮ್" ಇತ್ಯಾದಿಗಳಿಲ್‌ನ್ಯಾಯತ್ತಾಲೇ ಭಾಂಡಸ್ಥವಿಷಯಮಾನಾಲ್ ವಿರೋಧಮಿಲ್ಲೈ.**

---

**ಪೊಮುವಾನಾಲುಮ್** - ಗುರುಗಳ ಉಚ್ಛಿಷ್ಟವೆಂದೇ ಹೇಳಿತೆಂದು ಭಾವಿಸದೇ ಸಾಮಾನ್ಯವಾಗಿ ಎಲ್ಲಾ ಭಾಗವತರ ವಿಷಯದಲ್ಲೂ ಹೇಳಿತೆಂದು ನಿಮ್ರಪ್ಪಾನುಸಾರ ಇಟ್ಟುಕೊಂಡರೂ, ಆಗ ಪಾಶುರಾಭಿಪ್ರಾಯವೇನಾಗಬಹುದೆಂದರೆ ಉಪದೇಶಿಸುತ್ತಾರೆ.—**ಭಗವತ್ಸಂಕೀರ್ತ್ತನಪರರ್** - ಭಗವಂತನ ನಾಮ ಸಂಕೀರ್ತನಪರರು, **ದೇಶಕಾಲಾದಿವೈಗುಣ್ಯತ್ತಾಲೆ** - ಬ್ರಾಹ್ಮಣನಿಗೆ ವಿಹಿತವಾದ ವೃತ್ತಿಗಳಿಂದ ದೇಹಯಾತ್ರೆಯನ್ನು ನಡೆಸಲು ಸಾಧ್ಯವಿಲ್ಲದಹಾಗೆ ಈತನಿರುವ ದೇಶ ಮತ್ತು ಕಾಲಗಳು ವೈಪರೀತ್ಯವನ್ನುಹೊಂದಿದುದರಿಂದ, **ಊನವೃತ್ತಿಗಳುಮಾಯ್**-ಹೀನವೃತ್ತಿಗಳಾದ ಮಾಂಸವಿಕ್ರಯ, ಕೃಷಿ ವಾಣಿಜ್ಯ ಸೇವಾವೃತ್ತಿ ಮೊದಲಾದವುಗಳನ್ನು ಅವಲಂಬಿಸಿದವರಾಗಿ **ಊನಕಾರಕರ್‌ಗಳುಮಾಯಿರುನ್ದಾರ್‌ಗಳೇಯಾಗಿಲುಮ್**–ಅಂತಹ ನಿಕೃಷ್ಟವೃತ್ತಿಗಳನ್ನು ಇತರರು ಅವಲಂಬಿಸುವ ಹಾಗೆ ಮಾಡಿಸುವವರೇ ಆದರೂ) **ತಾಙ್ಗಳ್‌ಅಮುದುಶೆಯ್ದಶೇಡಮ್** - ತಾವು ಊಟಮಾಡಿ ನಂತರ(ಭಾಂಡದಲ್ಲಿ, ಮಿಕ್ಕ ಶೇಷವನ್ನು, **ತರುವರಾಗಿಲ್** - ದಯವಿಟ್ಟು ಕೊಡುವವರಾದರೆ, **ಪುನಿದುಮಾಮ್** - ಪವಿತ್ರವಾದುದಾಗುವದು, **ಅತ್ತನ್ನೈ** - ಅಷ್ಟೇ ಅವರ ಅಭಿಪ್ರಾಯವು. ಮನೆಯಲ್ಲಿರುವವರೆಲ್ಲರಿಗೂ ಊಟವಾದನಂತರ ಮನೆಯ ಕೆಲಸ ಮಾಡುವವರಿಗೆ ಭಾಂಡವಲ್ಲಿ ಮಿಕ್ಕ ಅನ್ನವನ್ನು ಕೊಡುವ ಪದ್ಧತಿಯ ಪ್ರಕಾರ ಕೊಟ್ಟರೆ ಅವರಿಗೂ ಆ ನಾರಾಯಣೈಕನಿಷ್ಠನು ಊಟಮಾಡಿ ಪಾತ್ರದಲ್ಲಿ ಮಿಕ್ಕ ಅನ್ನವು, ಅವನೊಂದಿಗೆ ಸೇರಿದವರಿಗೆಲ್ಲಾ ಪಾವನಕರವು ಎಂದು ಸಂಹಿತಾವಾಕ್ಯದ ಅರ್ಥವೆಂಬ ಭಾವವು. **ಇದಿಲ್** - ಈ ಆಳ್ವಾರ್ರವರ ಪಾಶುರದಲ್ಲಿನ ಶೇಷ ಶಬ್ದವು, "ಅನ್ನಶೇಷಃ ಕಿಂ ಕ್ರಿಯತಾಂ" ಎಂದರೆ "ಇನ್ನು ಅಡಿಗೆಯಲ್ಲಿ ಮಿಕ್ಕಿರುವದನ್ನೆಲ್ಲಾ ಏನು ಮಾಡಬೇಕು ಅಪ್ಪಣೆಯಾಗಬೇಕೆಂ"ದು ಶ್ರಾದ್ಧ ಕರ್ತ್ತಾ ನಿಮಂತ್ರಣಕ್ಕೆ ಬರಮಾಡಿಕೊಂಡ ಭಾಗವತರನ್ನು ಪ್ರಶ್ನಿಸಿದುದಾದರೆ, ಅದಕ್ಕೆ ಅವರ ಪ್ರತಿವಚನವಾಗಿ "**ಇಷ್ಟೈಸ್ಸಹ ಭುಜ್ಯತಾಂ**" - ತಮ್ಮ ಬಂಧು ಬಳಗದವರೊಂದಿಗೆ ಭೋಜನ ಮಾಡಬಹುದು" ಎಂದು ಹೇಳಿರುವದೇ, **ಇತ್ಯಾದಿಗಳಿಲ್** - ಮೊದಲಾದವುಗಳಲ್ಲಿರುವ, **ನ್ಯಾಯತ್ತಾಲೇ** - ನ್ಯಾಯದ ಪ್ರಕಾರ, **ಭಾಂಡಸ್ಥವಿಷಯಮಾನಾಲ್**-

ಉಚ್ಛಿಷ್ಟ ಶಬ್ದಂ ತಾನುಮ್ ಶ್ರುತ್ಯಾದಿಗಳಿಲೇ ಭುಕ್ತಶಿಷ್ಟಮಾಯ್ ಪಾಕ ಪಾತ್ರಸ್ಥಮಾನದಿಲುಮ್ ಪ್ರಯುಕ್ತಮ್. (೧) "ಪರಿತ್ಯಜೇದ ರ್ಥಕಾಮೌ

ಅಡಿಗೆ ಮಾಡಿದ ಪಾತ್ರದಲ್ಲಿ ಮಿಕ್ಕಿರುವದನ್ನೇ ಈ ಉಚ್ಛಿಷ್ಟ ಶಬ್ದವು ಉದ್ದೇಶಿಸಿ ಹೇಳಿತು ಎಂದು ಅಭಿಪ್ರಾಯವಾದರೆ, ವಿರೋಧವಿಲ್ಲೈ - ವಿರೋಧವಿಲ್ಲವು. ಇಲ್ಲಿ ಅನ್ನಶೇಷವೆಂದರೆ ಭುಕ್ತಾನ್ನ ಶೇಷವಲ್ಲವೆಂದೂ ಭಾಂಡಸ್ಥ ಅನ್ನ ಶೇಷವೆಂದೂ ಹೇಗೆ ಅರ್ಥವೋ ಹಾಗೆಯೇ ಶ್ರೀ ತೊಂಡರಡಿಪ್ಪೊಡಿಯಾಳ್ವಾರ ವರ ಪಾಶುರದಲ್ಲೂ, ಪೋನಕಮ್ ಶೆಯ್ದ ಶೇಡಂ ಎಂಬಲ್ಲೂ ಭುಕ್ತ ಶೇಷ ವಲ್ಲವೆಂದೂ, ಭಾಂಡಸ್ಥಾನ್ನಶೇಷವೆಂದೂ, ಅರ್ಥಮಾಡಿದರೆ ಯಾವ ಶಾಸ್ತ್ರ ಪಜ್ತಿಗೂ ವಿರೋಧವಿಲ್ಲವೆಂಬ ಭಾವವು. ಈ ವಿಹಗೇಂದ್ರ ಸಂಹಿತಾವಾಕ್ಯದಲ್ಲಿ "ತದುಚ್ಛಿಷ್ಟಂ ಸುಪಾವನಂ" ಎಂದಿರುತ್ತದೆ. ಉಚ್ಛಿಷ್ಟ ಶಬ್ದಕ್ಕೆ ಶೇಷ ವೆಂದು ಅರ್ಥಮಾಡಿ ಭುಕ್ತಶೇಷವಲ್ಲ ಭಾಂಡಸ್ಥ ಶೇಷವೆಂದು ಅರ್ಥಮಾಡಿದರೆ, ಅದು ಒಪ್ಪತಕ್ಕದ್ದೇ ಎಂಬ ಭಾವವು. ಆದರೆ ಉಚ್ಛಿಷ್ಟವೆಂದರೆ ಸಾಧಾರಣವಾಗಿ ಭುಕ್ತಶೇಷವೆಂದೇ ಅರ್ಥವು, ಉಚ್ಛಿಷ್ಟಕ್ಕೆ ಭಾಂಡಸ್ಥ ಶೇಷವೆಂಬರ್ಥವು ಆಗುವದಿಲ್ಲವೇ ಎಂಬಾಕ್ಷೇಪ ಬಂದೀತೆಂದು ಭಾವಿಸಿ ಹೀಗೆ ಪ್ರಯೋಗವು ಶ್ರುತಿ ಗಳಲ್ಲೂ ಉಂಟೆಂದು ತಿಳಿಸುತ್ತಾರೆ.

ಉಚ್ಛಿಷ್ಟಶಬ್ದಮ್ ತಾನುಮ್ - ಉಚ್ಛಿಷ್ಟ ಶಬ್ದವೂ ಕೂಡ, ಶ್ರುತ್ಯಾದಿ ಗಳಲ್ಲಿ, ಭುಕ್ತಶಿಷ್ಟಮಾಯ್ - ಭಾಗವತರು ಊಟಮಾಡಿದನಂತರ ಶೇಷವಾಗಿ, ಪಾಕಪಾತ್ರಸ್ಥ ಮಾನತಿಲುಮ್ ಪ್ರಯುಕ್ತಮ್ - ಅಡಿಗೆ ಮಾಡಿದ ಪಾತ್ರದಲ್ಲಿ ರುವದರಲ್ಲಿ ಪ್ರಯೋಗಿಸಲ್ಪಟ್ಟಿರುತ್ತದೆ. ಆ ಶ್ರುತಿವಾಕ್ಯಗಳು ಯಾವುದೆಂಬು ದನ್ನು ವ್ಯಾಖ್ಯಾತೃಗಳು ತೋರಿಸಿರುತ್ತಾರೆ.—(೧) "ಅದಿತಿಃ ಪುತ್ರಕಾಮಾ ಸಾಧ್ಯೇಭ್ಯೋದೇವೇಭ್ಯೋಬ್ರಹ್ಮೌದನಮಪಚತ್, ತಸ್ಯಾ ಉಚ್ಛೇಷಣ ಮದದುಃ" ಎಂಬ ಶ್ರುತಿಯನ್ನು ಸಾರಾಸ್ವಾದಿನಿಯವರು ಉದಾಹರಿಸಿರುತ್ತಾರೆ. "ಅದಿತಿಯು ಪುತ್ರನನ್ನು ಪಡೆಯಬೇಕೆಂಬ ಅಭಿಲಾಷೆಯುಕ್ತಳಾಗಿ ಸಾಧ್ಯರಿಗೂ ದೇವತೆಗಳಿಗೂ ಬ್ರಹ್ಮೌದನವನ್ನು ಅಡಿಗೆಮಾಡಿ ಬಡಿಸಿದಳು. ಅನಂತರ ಅವರು ಊಟವಾದನಂತರ ಮಿಕ್ಕ ಅನ್ನವನ್ನು ಅನುಗ್ರಹಿಸಿಕೊಟ್ಟರು" ಎಂದು ಹೇಳಿ ರುತ್ತಾರೆ. (೨) ಸಾರಪ್ರಕಾಶಿಕೆಯವರು (೨) ಉಚ್ಛಿಷ್ಟಂ ಮೇ ಪಿತಂ ಸ್ಯಾತ್" (೩)"ನ ಸ್ವಿದೇತೇ ಪ್ರ್ಯಚ್ಛಿಷ್ಟಾ" (೪) "ಉಚ್ಛೇಷಣೇನ ಜುಹೋತಿ" (೫) "ಉಚ್ಛೇಷಣ ಭಾಗೋ ವೈರುದ್ರಃ", (೬) ಅಗ್ನಿಹೋತ್ರೋಚ್ಛೇಷಣ

(೧) ಮನು. ೪. ೧೭೬.

ಮಭ್ಯಾತನಕ್ತಿ " ಎಂಬೀ ಶ್ರುತಿವಾಕ್ಯಗಳನ್ನುದಾಹರಿಸಿರುತ್ತಾರೆ. ಇಲ್ಲಿ ಆದಿ ಶಬ್ದದಿಂದ ತ್ವಯೋಪ ಭುಕ್ತಸ್ರಗ್ಗಂಧ ವಾಸೋಲಂಕಾರ ಚರ್ಚಿತಾಃ || ಉಚ್ಛಿಷ್ಟ ಭೋಜಿನೋ ದಾಸಾ ಸ್ತವನಾಯಾಂತರೇಮ ಹಿ" ಇತ್ಯಾದಿಗಳು ಹೇಳಲ್ಪಟ್ಟವು. ಇದು ಭಾಗವತ ವಾಕ್ಯವು. ಹಾಗಾದರೆ ಉಚ್ಛಿಷ್ಟ ಶೇಷ ವೆರಡು ಶಬ್ದಗಳಿಗೂ ಭಾಂಡಸ್ಥ ಮಿಕ್ಕ ಶೇಷಕ್ಕೂ ಭೋಜನ ಪಾತ್ರದಲ್ಲಿ ಮಿಕ್ಕ ಶೇಷಕ್ಕೂ ಸಹ ವ್ಯಕ್ತವಾಗಿ ಪ್ರಯೋಗವಿದೆ ಎಂದು ಉಪಪಾದಿಸಿದ ಹಾಗಾದ ಮೇಲೆ, ಇತರರಿಂದ ದ್ರವ್ಯ ಪ್ರತಿಗ್ರಹಮಾಡಿ, ಆದ್ರವ್ಯದಿಂದ ಯೋಗಾದಿಗಳ ನ್ನನುಷ್ಠಿಸಿದರೆ ಹೇಗೆ ಶ್ರೇಯಸ್ಸಾಧನತ್ವವು ಉಂಟೋ, ಹಾಗೆಯೇ ಭೋಜನ ಪಾತ್ರಶೇಷಕ್ಕೂ ಶ್ರೇಯಃಸ್ಸಾಧನತ್ವ ಉಂಟೆಂದು ಏಕೆ ಭಾವಿಸಕೂಡದು ? ಗುರು ವಾಗಿದ್ದರೇನೇ ಭೋಜನಪಾತ್ರಸ್ಥಶೇಷವು ಅಂಗೀಕಾರ್ಯವು, ಗುರುವಲ್ಲದಿದ್ದರೆ ಭಾಂಡಸ್ಥ ಶೇಷವು ಪರಿಗ್ರಾಹ್ಯವೆಂಬ ನಿಬಂಧನವೇತಕ್ಕೆ? ಎಂದಾಕ್ಷೇಪತರುವ ರಂದು, ಭಾವಿಸಿ ಈ ಸಂದರ್ಭದಲ್ಲಿ ಮನುಸ್ಮೃತಿಯಲ್ಲಿ ಹೇಳಲ್ಪಟ್ಟಿರುವ ನ್ಯಾಯ ಮೀಗ ಗ್ರಾಹ್ಯವೆಂದು ಹೇಳಿ, "ತದುಚ್ಛಿಷ್ಟಂ ಸುಪಾವನಂ" ಎಂಬ ವಾಕ್ಯಾಭಿ ಪ್ರಾಯ ವಿಷಯವನ್ನು ನಿಗಮನಮಾಡುತ್ತಾರೆ. ಆ ನ್ಯಾಯವೇನೆಂದರೆ ಧರ್ಮ ವರ್ಜಿತೌ - ಶಾಸ್ತ್ರವಿರುದ್ಧವಾದವುಗಳು, ಯೌ - ಯಾವ, ಅರ್ಥ ಕಾಮಗಳು, ಸ್ಯಾತಾಂ - ಆಗುತವೋ ಅಂತಹ ಅರ್ಥಕಾಮೌ - ಅರ್ಥ ಕಾಮಗಳನ್ನು, ಪರಿತ್ಯ ಜೇತ್ - ಸಂಪೂರ್ಣವಾಗಿ ತ್ಯಜಿಸತಕ್ಕದ್ದು; ಅಂತಹ ಅರ್ಥಕಾಮಗಳಲ್ಲಿ ಲೇಶವಾ ದರೂ ಸಂಗವಿಡಕೂಡದು. ಒಂದುವೇಳೆ ಅದು ಶಾಸ್ತ್ರ ಸಮ್ಮತವಾಗಿ, ಧರ್ಮಂಚಾಪಿ- ಧರ್ಮವೆಂದು ಹೇಳಿಸಿಕೊಂಡು, ಅಸುಖೋದರ್ಕವಾ - ದುಃಖಪ್ರಾಚುರ್ಯ ವುಳ್ಳದ್ದಾಗಿಯೂ, ಲೋಕ ಸಂರುಷ್ಟಮೇವ ಚ - ಬಹುಜನಗಳಿಗೆ ಸಮ್ಮತ ವಿಲ್ಲದೆ ಅವರಿಗೆ ವಿರುದ್ಧವಾದುದೇಯಾದರೆ, ಅದನ್ನು ಕೂಡ, ಪರಿತ್ಯಜೇತ್ - ಬಿಡತಕ್ಕದ್ದು ; ಆದುದರಿಂದ ಈಭಾಗವತನ ಭೋಜನಪಾತ್ರಶೇಷವು (ಎಂಜಲು) ಒಂದುವೇಳೆ ಶಾಸ್ತ್ರವಿಹಿತವಾದುದೆಂದು ಬಲಾತ್ಕರಿಸಿ ಹೇಳಿದರೂ ಅದು ಲೋಕ ಸಮ್ಮತನಲ್ಲದ ವಿಷಯವಾದುದರಿಂದ ತ್ಯಾಜ್ಯವೇ ಎಂದು ಮುಗಿಸಿರುತ್ತಾರೆ. ಲೋಕಸಮ್ಮತಿ ಇಲ್ಲದುದು ಶಾಸ್ತ್ರವಿಹಿತವಾದುದಾದರೂ ಪರಿತ್ಯಾಜ್ಯವೆಂದರೆ, ಶಾಸ್ತ್ರವಿಹಿತವೋ ಇಲ್ಲವೋ ಎಂಬ ಎರಡು ಪಕ್ಷಾಭಿಪ್ರಾಯಗಳೂ ಇದ್ದು ಸಂದಿ ಗ್ಧವಾಗಿದ್ದೂ ಲೋಕಸಮ್ಮತಿಯಿಲ್ಲದುದು ಪರಿತ್ಯಾಜ್ಯವೆಂದು ಹೇಳಲೇ ಕೆಲಸ

ವಿಲ್ಲವೆಂಬ ಭಾವವು. ಇದು ಕೈಮುತಿಕ ನ್ಯಾಯಸಿದ್ಧವು. ಈ ವಿಷಯದಲ್ಲಿ ಈ ವ್ಯವಸ್ಥೆಯು ತುಂಬಾ ಮುಖ್ಯವಾದುದರಿಂದ ಇಂತಹ ಅಪಾರ್ಥಗಳನ್ನನುಸರಿಸಿ ಶಾಸ್ತ್ರವಿಹಿತ ಆಚಾರಗಳಿಗೆ ಶೈಥಿಲ್ಯ ಉಂಟಾಗುತ್ತದೆಂಬ ಭಯದಿಂದ ಶ್ರೀ ದೇಶಿಕರವರು ಇಷ್ಟು ದೂರ ಚರ್ಚಿಸಿ ಆ ಸಂದರ್ಭದಲ್ಲಿ ತಮ್ಮ ಸಿದ್ಧಾಂತವನ್ನು ಸ್ಥಾಪಿಸಿರುತ್ತಾರೆ. ಪ್ರಾಯಶ್ಚಿತ್ತರೂಪದಲ್ಲಿ ಆಚಾರ್ಯ ಪಿತಾ ಜ್ಯೇಷ್ಠ ಭ್ರಾತಾಗಳ ಭೋಜನ ಪಾತ್ರಸ್ಥ ಉಚ್ಛಿಷ್ಟವು ವಿಧಿಸಲ್ಪಟ್ಟಿರುತ್ತದೆ. ಮಿಕ್ಕ ಭಾಗವತ ಬ್ರಾಹ್ಮಣನ ವಿಷಯದಲ್ಲಿ ಭಾಂಡಸ್ಥ ಶೇಷವು ಪರಿಗ್ರಾಹ್ಯವು. ಪ್ರಾಮಾದಿಕ ವಶಾತ್ ಅಂತಹ ಉಚ್ಛಿಷ್ಟ ಸಂಬಂಧವುಂಟಾದರೆ ಪಂಚಗವ್ಯಾದಿ ಪ್ರಾಯಶ್ಚಿತ್ತಗಳು ವಿಧಿಸಲ್ಪಟ್ಟಿವೆ. ಇವರಿಂದ ಕೈಮುತಿಕ ನ್ಯಾಯಸಿದ್ಧವಾದುದು ಯಾವುದೆಂದರೆ: ಶೂದ್ರೋಚ್ಛಿಷ್ಟವು, ಆತನು ಭಾಗವತನಾಗಿ ಪ್ರಪನ್ನನಾಗಿದ್ದರೂ ಪರಿತ್ಯಾಜ್ಯವು, ಭಾಂಡಸ್ಥ ಶೇಷಸಂಬಂಧ ಉಂಟಾದರೂ ಪ್ರಾಯಶ್ಚಿತ್ತವು ಅವಶ್ಯಕವು. ಇವುಗಳೆಲ್ಲಾ ಧರ್ಮಶಾಸ್ತ್ರಗಳಲ್ಲಿ ವ್ಯಕ್ತವು.

ಇಲ್ಲಿ ಮನುವು, ಧರ್ಮವೂ ಕೂಡ ಬಹುಜನ ಸಂರುಷ್ಟವಾದರೆ ಪರಿತ್ಯಾಗ ಮಾಡು ಎಂದು ಹೇಳಿರುವದು, ಪ್ರಜಾಪರಿಪಾಲನ ವಹಿಸಿರುವವರಿಗೂ ಹಿತೋಪದೇಶವಾಗಿರುತ್ತದೆ. ತಾವು ಮಾಡಿರುವ ಏರ್ಪಾಡುಗಳು ತಮಗೆ ಧರ್ಮವಾಗಿ ತೋರಿ, ಅದಕ್ಕೆ ಪ್ರತಿಯಾಗಿ ನಡೆಯೋಣವು ಶಿಕ್ಷಾರ್ಹವಾಗಿದ್ದರೂ, ಜನಸಾಮಾನ್ಯಕ್ಕೆ ಅದು ರುಚಿಸದೇ ಹೋದರೆ, ಪ್ರಜಾ ಕ್ಷೇಮಕ್ಕಾಗಿಯೇ ಆ ಅಧಿಕಾರಿಗಳು ಸರ್ವೇಶ್ವರನಿಂದ ನಿಯಮಿಸಲ್ಪಟ್ಟಿರುವದರಿಂದ, ಅಂತಹ ಏರ್ಪಾಡುಗಳನ್ನು ಕೂಡ ಲೋಕ ಸಮ್ಮತಿಯುಂಟಾಗುವವರೆಗೂ ಪರಿತ್ಯಾಗವೇ ಮಾಡತಕ್ಕದ್ದೆಂಬುದೂ ಸಹ ಸೂಚಿತವು. ಆದರೆ ಅನೇಕ ದ್ವಿಜರ ಆಚಾರಗಳು ದ್ವಿಜೇತರರಾದ ಶೂದ್ರಾದಿಗಳಿಗೆ ಸಮರ್ಪಕವಾಗುವದಿಲ್ಲವು. ಆ ಕಾರಣದಿಂದ, ಆಚಾರಃಪ್ರಥಮೋ ಧರ್ಮೋ ಧರ್ಮಸ್ಯ ಪ್ರಭುರಚ್ಯುತಃ ಎಂಬ ಪ್ರಮಾಣಕ್ಕೆ ವಿರುದ್ಧವಾಗಿ ಆಚಾರಗಳನ್ನೂ ಸತ್ಸಂಪ್ರದಾಯಗಳನ್ನೂ ಪರಿತ್ಯಾಗಮಾಡತಕ್ಕದ್ದಲ್ಲವು. ಪಂಚಮರ ದೇವಾಲಯ ಪ್ರವೇಶವು ಬಹುಜನ ಸಮ್ಮತಿಯಿಲ್ಲದ ಪಕ್ಷದಲ್ಲಿ ಸಮ್ಮತಿಯುಂಟಾಗುವವರೆಗೂ ಬಲಾತ್ಕರಿಸಿ ಕ್ಲೇಶವನ್ನುಂಟುಮಾಡಿ, ಪರಸ್ಪರ ಮೈತ್ರಿಗೆ ಹಾನಿಯನ್ನುಂಟುಮಾಡಕೂಡದೆಂಬಂಶವು ಇದರಿಂದ ತೋರಿಬರುತ್ತದೆ. ಸತ್ಸಂಪ್ರದಾಯರೀತ್ಯಾ ನಿಷಿದ್ಧವೇ. ಆ ಕಾರಣದಿಂದಲೇ ಸತ್ಸಂಪ್ರದಾಯವನ್ನು ಕಾಪಾಡುವದಕ್ಕಾಗಿಯೇ ತದುಚ್ಛಿಷ್ಟಂಸುಪಾವನಂ ಎಂಬ ವಾಕ್ಯವಿಷಯದಲ್ಲಿ ಸತ್ಸಂಪ್ರದಾಯ ವ್ಯವಸ್ಥೆ ಹೇಗೆ ಎಂಬುದನ್ನು ಚೆನ್ನಾಗಿ ತಿಳಿಯಪಡಿಸಿದರು. ಆದುದರಿಂದ ಎರಡು

“ತದುಕ್ತಿಮಾತ್ರಂ ಮಂತ್ರಾಗ್ರ್ಯಂ” ಎನ್ರದು, ಇವರ್ ತಞ್ಞಮಾಗ ಉಪದೇಶಿತ್ತ ಭಾಷಾವಾಕ್ಯಙ್ಗಳುಂ ತಿರುಮಂತ್ರಙ್ಗಳ್ ಪೋಲೆ ಆದರಿತ್ತು ಅನುಸಂಧಿಕ್ಕವೇಣುಮೆನ್ರಪಡಿ ; ಅಲ್ಲದು ಇವರ್ ಶೊಲ್ಲುಮ್ ಲೌಕಿಕ ವ್ಯವ

---

ವಿಧವಾಗಿ ತದುಚ್ಛಿಷ್ಟಂ ಸುಪಾವನಂ ಎಂಬುದಕ್ಕೆ ಅರ್ಥಹೇಳಿದರೆ ನಿರ್ವಿವಾದವೆಂದು ಮುಗಿಸಿದರು.

(೧) ಆತನು ಊಟಮಾಡಿದ ಎಲೆಯಲ್ಲಿ ಮಿಕ್ಕಶೇಷವೆಂದು ಅರ್ಥಮಾಡುವದಾದರೆ ಶಾಸ್ತ್ರವಿರುದ್ಧವಲ್ಲದೆ ಇರುವದಕ್ಕಾಗಿ, ಆತನು ಮಂತ್ರಪ್ರದನಾದ ಆಚಾರ್ಯನಾಗಿರಬೇಕು, ಅಥವಾ ಪ್ರಾಯಶ್ಚಿತ್ತರೂಪದಲ್ಲಿ ಪಾವನವಾಗಬೇಕಾದರೆ ಪಿತಾ, ಜ್ಯೇಷ್ಠ ಭ್ರಾತಾವಾಗಿರಬೇಕು.

(೨) ಅಥವಾ ಉಚ್ಛಿಷ್ಟ ಶಬ್ದಕ್ಕೆ ಭಾಂಡಸ್ಥ ಅನ್ನಶೇಷವೆಂದಾದರೂ ಅರ್ಥಮಾಡತಕ್ಕದ್ದು. ಮೊದಲನೆಯ ವಿಷಯದಲ್ಲೂ ಲೋಕಸಮ್ಮತಿ ಇಲ್ಲವಾದರೆ ಭಾಂಡಸ್ಥ ಶೇಷವೆಂದೇ ಅರ್ಥಮಾಡುವದೇ ಯುಕ್ತವೆಂದು ತೀರ್ಮಾನಿಸಿದರು.

ಆದರ ಮುಂದಿನ ವಾಕ್ಯವಾದ “ತದುಕ್ತಿಮಾತ್ರಂ ಮಂತ್ರಾಗ್ರ್ಯಂ” ಎಂಬುದರ ಅಭಿಪ್ರಾಯವೇನೆಂಬುದನ್ನು ಮುಂದೆ ಉಪದೇಶಿಸುತ್ತಾರೆ. ತದುಕ್ತಿಮಾತ್ರಂ ಇತ್ಯಾದಿ-ಆ ನಾರಾಯಣೈಕ ನಿಷ್ಠನ ಸೂಕ್ತಿಯೇ ಶ್ರೇಷ್ಠವಾದ ಮಂತ್ರದಹಾಗೆ ಮಹಿಮೆಯುಳ್ಳದ್ದು ಎಂಬರ್ಥವು. ಇದರ ತಾತ್ಪರ್ಯವೇನೆಂಬುದನ್ನು ಹೇಳುತ್ತಾರೆ—ಇವರ್ - ಈ ನಾರಾಯಣೈಕ ನಿಷ್ಠನು ತಞ್ಞಮಾಗ-ಉಪದೇಶಿತ್ತ- ಶಿಷ್ಯನಿಗೆ ಆತ್ಮೋಜ್ಜೀವನಕ್ಕಾಗಿ ಉಪದೇಶಿಸಿದ, ಭಾಷಾವಾಕ್ಯಙ್ಗಳುಮ್ - ಆತನ ಸಾಧಾರಣ ವಾಕ್ಯಗಳನ್ನೂ ಕೂಡ, ತಿರುಮನ್ತ್ರಗಳ್ ಪೋಲೇ - ಅಷ್ಟಾಕ್ಷರ ಮೊದಲಾದ ಮಂತ್ರಗಳಹಾಗೆ, ಆದರಿತ್ತು-ತುಂಬಾ ಆದರವನ್ನು ತೋರಿಸಿ, ಅನುಸಂಧಿಕ್ಕವೇಣು ಮೆನ್ರಪಡಿ : ಅನುಸಂಧಾನವನ್ನು ಮಾಡಬೇಕೆಂದು ಹೇಳಿದಂತೆ ಭಾವಿಸತಕ್ಕದ್ದು. ಅಂತಹ ಭಾಗವತನು ತನ್ನ ಶಿಷ್ಯನಿಗೆ ಉಪದೇಶಿಸುವ ಸಾಮಾನ್ಯೋಕ್ತಿಗಳೂ ಶಾಸ್ತ್ರವಿಹಿತ ವಿಷಯಗಳೇ, ಆದುದರಿಂದ ಮಂತ್ರಗಳ ಉಪದೇಶದಲ್ಲಿ ಎಷ್ಟು ಆದರವನ್ನು ತೋರಿಸಿ ಪರಿಗ್ರಹಿಸತಕ್ಕದ್ದೋ, ಅಷ್ಟು ಆದರದಿಂದ ಅಂತವನು ಉಪದೇಶಿಸಿದವುಗಳನ್ನು ಅನುಸಂಧಾನಮಾಡತಕ್ಕದ್ದೆಂಬ ಭಾವವು. ಇನ್ನು ಯಾವ ಅಭಿಪ್ರಾಯವು ಸರಿಯಾದುದಲ್ಲವೆಂದರೆ ಹೇಳುತ್ತಾರೆ.— ಅಲ್ಲದು - ಹಾಗಲ್ಲದೆ, ಇವನ್-ಈ ನಾರಾಯಣೈಕನಿಷ್ಠನು ಶೊಲ್ಲುಮ್-ಹೇಳುವ ಲೌಕಿಕ ವ್ಯವಹಾರಙ್ಗಳ್ - ಲೌಕಿಕೋಕ್ತಿಗಳೆಲ್ಲಾ, ಇತರರ ಹತ್ತಿರ ಲೌಕಿಕ ವಿಷಯವಾಗಿ ಮಾತಾಡುವದೆಲ್ಲಾ, ಜಪಾದಿ ಯೋಗ್ಯಙ್ಗಳ್ - ಮಂತ್ರಗಳು

**ಹಾರಙ್ಗಳ್ ಜಪಾದಿಯೋಗ್ಯಙ್ಗಳೆನ್ರುಪಡಿಯನ್ರು. (೧) ಶೊಲ್ಲುಮವಿಡು ಶುರುತಿಯಾಮ್" ಎನ್ರದುಕ್ಕುಮ್ ಇಪ್ಪಡಿಹಿತಾರ್ಥಮಾನವಾಕ್ಯಮೇ ವಿಷಯಂ.**

---

ಹೇಗೆ ಜಪಯೋಗ್ಯಗಳೋ ಹಾಗೆ, ಜಪಮಾಡುವದಕ್ಕೆ ಯೋಗ್ಯಗಳಾಗಿ, **ಎನ್ರುಪಡಿಯನ್ರು**-ಎಂದು ಹೇಳಿದಹಾಗೆ ಅಲ್ಲವು. **ತದುಕ್ತಿಮಾತ್ರಂಮಂತ್ರಾಗ್ರ್ಯವ್** ಎಂಬಲ್ಲಿ ಅಷ್ಟಾಕ್ಷರಾದಿ ಮಂತ್ರಗಳಿಗೆ ಸಮಾನವಾದುದು ಎಂದು ಯಾವಾಗ ಹೇಳಲ್ಪಟ್ಟಿತೋ, ಆಗ ಆತನು ಹೇಳುವ ವಾಕ್ಯಗಳು ಮಹಿಮೆಯುಳ್ಳದ್ದೆಂದೂ, ಅಂತಹ ಮಾತುಗಳನ್ನೇ ಆತನು ಸಾಮಾನ್ಯವಾಗಿ ಆಡತಕ್ಕದ್ದೆಂದೂ, ಏರ್ಪಟ್ಟನಂತರ, ಲೌಕಿಕ ವ್ಯಾಪಾರೋಕ್ತಿಗಳು ಇದರಿಂದ ವ್ಯಾವರ್ತಿಯನ್ನು ಹೊಂದಿದವೆಂಬುದು ಸ್ವತಸ್ಸಿದ್ಧವೆಂಬಭಿಪ್ರಾಯವು. (೧) **ಶೊಲ್ಲುಮ್** - ಹೇಳುವ, **ಅವಿಡು** - ಪರಿಹಾಸೋಕ್ತಿಯೂ, **ಶುರುತಿಯಾಮ್** – ಶ್ರುತಿಯು ಹೇಗೆ ಪ್ರಮಾಣವಾಗಿ ಆಪ್ತವಾಕ್ಯವೋ ಹಾಗೆ ಹಿತೋಕ್ತಿಯಾಗುತ್ತದೆ, ಅಥವಾ ಜ್ಞಾನಿಯಾಗಿ ಶ್ರುತ್ಯರ್ಥವನ್ನೇ **ಉಪಪಾದಿಸಿರುವಂತಹುದಾಗುತ್ತದೆ** ಎಂಬ **ಭಾವವು**. ಈ ಜ್ಞಾನಸಾರದ ಪಾಶುರವು ಯಾವುದೆಂದರೆ "**ಅಲ್ಲಿ ಮಲರ್ಪಾವೈಕ್ಕನ್ಪರಡಿಕ್ಕನ್ಪರ್ । ಶೊಲ್ಲುಮವಿಡು ಶುರದಿಯಾಮ್, ನಲ್ಲ ಪಡಿಯಾಮನುನೂರ್ಕವರ್ ಶರಿದೈ । ಪಾರ್ವೈಶೆಡಿಯಾರ್ವಿನತ್ತೊಗೈಕ್ಕುತ್ತೀ ॥ ಅಲ್ಲಿಮಲರ್** - ಕಮಲವಾಸಿನಿಯಾದ, **ಪಾವೈಕ್ಕೆ** - ಶ್ರೀಮಹಾಲಕ್ಷ್ಮಿಯ, **ಅನ್ಪರ್** - ಪ್ರೀತಿಗೆ ವಿಷಯಭೂತನಾದ ಸರ್ವೇಶ್ವರನ, **ಅಡಿಕ್ಕು** - ಪಾದಕಮಲಗಳಿಗೆ, **ಅನ್ಪರ್** - ಪ್ರೀತಿಪಾತ್ರರಾದ ಭಕ್ತರು, **ಶೊಲ್ಲುಮ್** – ಹೇಳುವ, ಅನುಗ್ರಹಿಸುವ, **ಅವಿಡು** - ಪರಿಹಾಸೋಕ್ತಿಯೂ, **ಶುರುದಿಯಾಮ್** – ಶ್ರುತಿಪ್ರತಿಪಾದ್ಯಾಭಿಪ್ರಾಯವುಳ್ಳದು. ಇಲ್ಲಿ **ವೇದಶಾಸ್ತ್ರರಥಾರೂಢಾಃ ಜ್ಞಾನಖಡ್ಗಧರಾ ದ್ವಿಜಾಃ।ಕ್ರೀಡಾರ್ಥಮಪಿ ಯದ್ಬ್ರೂಯುಃ ಸ ಧರ್ಮಃ ಪರಮೋ ಮತಃ"** ಎಂಬುದು ಅನುಸಂಧೇಯವು. ಇಲ್ಲಿ ಧರ್ಮವೆಂದರೆ ವೇದದಲ್ಲಿ ಹೇಳಿರುವ ವಿಧಿನಿಷೇಧರೂಪವಾಕ್ಯಗಳು. **ಮನುನೂಲಕ್ಕು** - ಮನುಧರ್ಮಶಾಸ್ತ್ರಕ್ಕೆ, **ಅವರ್ ಚರಿತೈ** - ಆ ಭಕ್ತರುಗಳ ದಿವ್ಯ ಅನುಷ್ಠಾನರೂಪ ಪ್ರವೃತ್ತಿಗಳು, **ನಲ್ಲಪಡಿಯಾಮ್** - ನಮಗೆ ಅನುವರ್ತಿಸಲು ಒಳ್ಳೇ ನಿದರ್ಶನಗಳಾಗುವುವು, ಮನುಧರ್ಮಶಾಸ್ತ್ರವು ಹೇಗೆ ಸನ್ಮಾರ್ಗ ಪ್ರವರ್ತನೆಯನ್ನು ಬೋಧಿಸುತ್ತದೋ, ಹಾಗೆ ಸನ್ಮಾರ್ಗ ಬೋಧಕಗಳು ಅವರುಗಳ ಸಚ್ಚರಿತ್ರೆಗಳು ಎಂದಾಗಲಿ, ಅಥವಾ **ಮನುನೂಲಕ್ಕುನಲ್ಲಪಡಿಯಾಮ್** - ಮನುಶಾಸ್ತ್ರಕ್ಕೂ ಮೀರಿದ ಸನ್ಮಾರ್ಗ ಬೋಧಕಗಳು ಅವರ ಸಚ್ಚರಿತ್ರೆಗಳೆಂದಾಗಲಿ ಆಗಬಹುದು. ಮನುಧರ್ಮ

---

(೧) ಜ್ಞಾನಸಾರಂ ೪೦, ಕೊನೆಯ ಪಾಶುರವು.

ಶಾಸ್ತ್ರವಾದರೋ ಸುಮ್ಮನೆ ಬೋಧಿಸುತ್ತದೆ. ಇವರು ಸ್ವತಃ ಅನುಷ್ಠಾನ ಮೂಲಕ ತೋರಿಸುವದರಿಂದ ಅದಕ್ಕಿಂತ ಮೇಲೆಂಬ ಭಾವವು. "ವಾಸುದೇವಂ ಪ್ರಪನ್ನಾನಾಂ ಯಾನ್ಯೇವ ಚರಿತಾನಿವೈ। ತಾನ್ಯೇವ ಧರ್ಮಶಾಸ್ತ್ರಾಣೀತ್ಯೇವಂ ವೇದವಿದೋ ವಿದುಃ" ಎಂಬುವ ಅನುಸಂಧೇಯವು. ಪಾರ್ವೈ - ಅವರ ದಿವ್ಯ ಕಟಾಕ್ಷವೀಕ್ಷಣವು, ಶೆಡಿಯನಾರ್ - ಒತ್ತಾಗಿ ಬೆಳೆದ ಕಳೆಯಹಾಗಿರುವ, ವಿನೈತ್ತೊಗೈಕ್ಕು - ಪಾಪ ಸಮೂಹಕ್ಕೆ, ತೀ - ಅಗ್ನಿಯಾಗುವದು. "ನ ಶುಧ್ಯತಿ ತಥಾ ಜನ್ತುಃ ತೀರ್ಥವಾರಿ ಶತೈರಪಿ। ಲೀಲಯೈವ ಯಥಾ ಭೂಪ ವೈಷ್ಣವಾನಾಂ ಹಿ ವೀಕ್ಷಣೈಃ" ಎಂಬುದು ಅನುಸಂಧೇಯವು. ಮತ್ತು "ನಹ್ಯಮ್ಮಯಾನಿ ತೀರ್ಥಾನಿ ನದೇವಾ ಮೃಚ್ಛಿಲಾಮಯಾಃ। ತೇ ಪುನನ್ತ್ಯುರುಕಾಲೇನ ದರ್ಶನಾದೇವ ಸಾಧವಃ" ಪುಣ್ಯತೀರ್ಥಗಳೂ, ಪುಣ್ಯಕ್ಷೇತ್ರಗಳಲ್ಲಿರುವ ಮೃಚ್ಛಿಲಾಮಯವಾದ ಅರ್ಚಾಮೂರ್ತಿಯು ಬಹುದಿನ ಸೇವೆಮಾಡುವದರಿಂದ ಪಾಪವಿನಾಶ ಮೂಲಕ ಪಾವನತ್ವವನ್ನುಂಟುಮಾಡುತ್ತವೆ. ಸಾಧುಗಳು ಕಟಾಕ್ಷವೀಕ್ಷಣಮಾತ್ರದಿಂದಲೇ ಒಡನೇ ಪವಿತ್ರೀಕರಿಸುತ್ತಾರೆಂಬ ತಾತ್ಪರ್ಯವು. ಇಲ್ಲಿ ವೈಷ್ಣವನೆಂಬುದು ಬರೀಜನ್ಮವನ್ನು ಬೋಧಿಸುವದಿಲ್ಲವು, ಆತನು ವಿಷ್ಣುಭಕ್ತನಾಗಿ ಪ್ರಪನ್ನನಾಗಿರಬೇಕೆಂದು ತಿಳಿಯುವದು. ಈ ಪಾಶುರವನ್ನುಳ್ಳ ಜ್ಞಾನಸಾರವನ್ನು ಅನುಗ್ರಹಿಸಿದವರು, ಮೊದಲು ಯಜ್ಞಮೂರ್ತಿ ಎಂಬ ನಾಮಧೇಯದಿಂದ ಅದ್ವೈತ ಸಿದ್ಧಾಂತಿಗಳು. ಇವರು ಶ್ರೀರಂಗದಲ್ಲಿ ಶ್ರೀ ಯತಿವರ್ಯರೊಂದಿಗೆ ೧೮ ದಿನಗಳು ವಾದಮಾಡಿದರು. ೧೭ ದಿನಗಳಲ್ಲೂ ಯಜ್ಞಮೂರ್ತಿಯವರ ವಾದವೇ ಪ್ರಬಲವಾಗಿತ್ತು. ೧೮ನೆಯ ದಿನ ಶ್ರೀವರದನ ಕೃಪೆಯಿಂದ, ಶ್ರೀ ಯಾಳವಂದಾರರ ಮಾಯಾವಾದಿ ಖಂಡನ ಮತ್ತು "ಪ್ರಣವೋ ಧನುಃ". ಎಂಬ ಉಪನಿಷದ್ವಾಕ್ಯಗಳ ಉಪಬ್ರಹ್ಮಣದಿಂದ ಯಜ್ಞಮೂರ್ತಿಯನ್ನು ಯತಿವರ್ಯರು ಗೆದ್ದು, ಅವರನ್ನು ಶಿಷ್ಯರನ್ನಾಗಿ ಮಾಡಿಕೊಂಡು, ಅರುಳಾಳಪ್ಪೆರುಮಾಳೆಮ್ಬೆರುಮಾನಾರ್ ಎಂದು ಶ್ರೀ ವರದನ ಮತ್ತು ತಮ್ಮ ಎರಡು ನಾಮಗಳು ಸೇರಿದ ನಾಮಧೇಯವನ್ನು ಕೊಟ್ಟರು ಎಂಬ ಇತಿಹಾಸ ಉಂಟು. ಆ ಮಹಾನುಭಾವರು ಈ ಉಪನಿಷತ್ತುಗಳ ಅರ್ಥಗಳನ್ನು ಗರ್ಭೀಕರಿಸಿ ಸ್ತ್ರೀಯರೇ ಮೊದಲಾದವರುಗಳಿಗೂ ಅನುಕೂಲಿಸುವಂತೆ ಅನುಗ್ರಹಿಸಿರುವದರಿಂದ ಇದಕ್ಕೆ ಜ್ಞಾನಸಾರವೆಂಬ ಹೆಸರು. ಇದರಲ್ಲಿ ಅಮೋಘಗಳಾದ ೪೦ ಪಾಶುರಗಳಿವೆ. ಜ್ಞಾನಸಾರವೆಂಬ ಹೆಸರಿಗೆ ಅನುಗುಣವಾದ ಮಾಹಾತ್ಮ್ಯೆಯುಳ್ಳದು," ಎನ್ಪ್ರದುಕ್ಕುಮ್ - ಈ ಮೇಲೆ ಹೇಳಿದ ಪಾಶುರಾರ್ಥಕ್ಕೂ ಕೂಡ, ಇಪ್ಪಡಿ - ತದುಕ್ತಿಮಾತ್ರಂ ಮಂತ್ರಾಗ್ರ್ಯಂ ಎಂಬ ವಾಕ್ಯದಲ್ಲಿ ಆತನು ಆತ್ಮೋಜ್ಜೀವನಕ್ಕಾಗಿ ಶಿಷ್ಯನಿಗೆ ಮಾಡುವ ಉಪದೇಶವೀಗ ಉದ್ದೇಶ್ಯವೆಂದು

## ಭಾಗವತ ಸ್ಪರ್ಶಮಾಹಾತ್ಮ್ಯಂ ವಿಹಿತ ವಿಷಯಂ ಏವ.

"ತತ್ಸ್ಪೃಷ್ಟಮಖಿಲಂ ಶುಚಿ" ಎನ್ರದು, ಆತುರವಿಷಯತ್ತಿಲ್ ಸ್ಪೃಷ್ಟ್ವಾ ಸ್ನಾನನ್ಪೋಲವುಮ್, ದೀಕ್ಷಾಕಾಲತ್ತಿಲ್ ವಿಷ್ಣುಹಸ್ತ ಪ್ರದಾನಾಖ್ಯ ಸ್ಪರ್ಶನ್ಪೋಲುವುಮ್, ತಿರುಪ್ರತಿಷ್ಠೈಯಿಲ್ ಮಹಾಭಾಗವತ ಸ್ಪರ್ಶನ್ಪೋಲುವುಮ್, ಮತ್ತುಮ್ ಸ್ಪರ್ಶಂ ವಿಹಿತಮಾನ ವಿಡಙ್ಗಳಿಲೇ ಇವನುಡೈಯಸ್ಪರ್ಶಂ ಪೆತ್ತದಾಗಿಲ್ ಸ್ಪೃಷ್ಟಮಾನವೈ ಯೆಲ್ಲಾಮ್ ಪರಿಶುದ್ಧಮಾ ಮೆನ್ರಪಡಿ ;

---

ನಾವು ಸಮರ್ಥಿಸಿ ಹೇಳಿದ ಹಾಗೆಯೇ, ಹಿತಾರ್ಥಮಾನ - ಹಿತವೇ ಪ್ರಯೋಜನವಾಗಿವುಳ್ಳ, ಹಿತವು ಯಾವುದೆಂದರೆ ಯಾವ ಉಪಾಯವನ್ನವಲಂಬಿಸಿದರೆ ಮೋಕ್ಷವನ್ನು ಹೊಂದಬಹುದೋ, ಅದೇ ಹಿತವು, ಇದನ್ನು ಬೋಧಿಸುವ, ವಾಕ್ಯಮೇ ವಿಷಯಮ್-ವಾಕ್ಯವೇ ವಿಷಯವಾಗಿರುವಂತಾದ್ದು; ಎಂದರೆ ಅಲ್ಲಿ ಹೇಳಿರುವ ಪರಿಹಾಸೋಕ್ತಿಯೂ ಕೂಡ, ಹಿತಾನುಷ್ಠಾನವನ್ನೇ ಬೋಧಿಸುತ್ತದೆಂಬ ಭಾವವು. ವೇದಶಾಸ್ತ್ರರಥಾರೂಢಾ ಜ್ಞಾನಖಡ್ಗಧರಾ ದ್ವಿಜಃ। ಕ್ರೀಡಾರ್ಥಮಪಿಯದ್ಬ್ರೂಯು ಸ್ಸ ಧರ್ಮಃ ಪರಮೋ ಮತಃ" ॥ ಎಂಬುದು ಇಲ್ಲಿ ಅನುಸಂದೇಹವು. ಅವರು ಪರಿಹಾಸಕ್ಕಾಗಿ ಆಡುವ ಮಾತೂ ಸಹ ಧರ್ಮವೇ ಸರಿ ಎಂದು ಹೇಳಲ್ಪಟ್ಟಿರುತ್ತದೆ.

## ಭಾಗವತನ ಸ್ಪರ್ಶದ ಮಾಹಾತ್ಮ್ಯವು ಶಾಸ್ತ್ರವಿಹಿತ ವಿಷಯವೇ.

"ತತ್ಸ್ಪೃಷ್ಟಮಖಿಲಂ ಶುಚಿ" - ಆ ನಾರಾಯಣನಿಷ್ಠನು ಮುಟ್ಟಿದುದೆಲ್ಲಾ ಪವಿತ್ರವೇ ಎಂಬರ್ಥವುಳ್ಳ ವಾಕ್ಯದ ಸರಿಯಾದಭಿಪ್ರಾಯವೇನೆಂಬುದನ್ನು ತಿಳಿಸುತ್ತಾರೆ.-ಶಾಸ್ತ್ರನಿಷಿದ್ಧವಾದುದೆಲ್ಲವನ್ನೂ ಈತನು ಮುಟ್ಟಿಬಿಟ್ಟರೆ ಅವು ಪವಿತ್ರಗಳಾಗುವುದಿಲ್ಲವೆಂದೂ, ಶಾಸ್ತ್ರವಿಹಿತಗಳಾದುವನ್ನು ಮುಟ್ಟಿದರೆ ಅದಕ್ಕೆ ಪಾವನತ್ವ ಉಂಟಾದ ಮಹಿಮೆಯನ್ನು ಹೊಂದುತ್ತದೆಂಬುದರಲ್ಲಿ ತಾತ್ಪರ್ಯವೆಂದೂ, ಉಪದೇಶಿಸುತ್ತಾರೆ. ಇದನ್ನೇ ವ್ಯಾಜಮಾಡಿಕೊಂಡು, ಆಹಾರಾದಿಗಳಲ್ಲಿ ಶಾಸ್ತ್ರನಿಷಿದ್ಧವಾದುವು ಯಾವುವೆಂಬುದನ್ನು ತಿಳಿಸಿ, ಇಂತವುಗಳನ್ನೆಲ್ಲಾ ಆ ನಾರಾಯಣೈಕನಿಷ್ಠನು ಮುಟ್ಟಿದರೆ ಪವಿತ್ರವಾಗುತ್ತದೆಂಬ ಭ್ರಮೆಯು ಕೂಡದೆಂದು ಹಿತೋಪದೇಶವನ್ನು ಮಾಡುತ್ತಾರೆ—"ತತ್ಸ್ಪೃಷ್ಟಮಖಿಲಂ ಶುಚಿ" ಎನ್ರದು - ಆತನು ಮುಟ್ಟಿದುದೆಲ್ಲಾ ಪವಿತ್ರವಾಗುತ್ತದೆ ಎಂದು ಹೇಳಿರುವದು, (೧) ಆತುರವಿಷಯತ್ತಿಲ್-ಒಬ್ಬನು ರೋಗಿಷ್ಠನಾಗಿರುವ ಸಂದರ್ಭದಲ್ಲಿ, ಸ್ಪೃಷ್ಟ್ವಾ - ಅಂತವನು ಸ್ನಾನದಿಂದ ಶುದ್ಧಿಯನ್ನು ಹೊಂದಬೇಕಾದರೆ ಅನಾತುರನಾದವನು ಎಂದರೆ ರೋಗವಿಲ್ಲದವನು ಸ್ನಾನಮಾಡುವದು, ಆತುರನನ್ನು ಮುಟ್ಟುವದು, ಹೀಗೆ ಹತ್ತು

ಸಲ ಮಾಡಿದರೆ ಶುದ್ಧನಾಗುತ್ತಾನೆಂಬ ಶಾಸ್ತ್ರವಿದೆ, ಆ ರೀತಿಯಲ್ಲಿ ಸ್ಪೃಷ್ಟ್ವಾ-ಮುಟ್ಟಿದರೆ, ಸ್ನಾನವೊಪ್ಪೇಲುವುಮ್ – ಈ ಆತುರನಿಗೆ ಸ್ನಾನವಾಗಿ ಪರಿಶುದ್ಧತೆಯನ್ನು ಹೊಂದಿದ ಹಾಗೂ (೨) ದೀಕ್ಷಾಕಾಲತ್ತಿಲ್ - ಮಂತ್ರೋಪದೇಶ ದೀಕ್ಷಾಕಾಲದಲ್ಲಿ, ವಿಷ್ಣುಹಸ್ತ ಪ್ರದಾನಾಖ್ಯಸ್ಪರ್ಶವೊಪ್ಪೇಲುವುಮ್ - ಆಚಾರ್ಯರು ತಮ್ಮ ಶಿಷ್ಯನನ್ನು ಕೈಯಿಂದ ಮುಟ್ಟಿದರೆ ಜ್ಞಾನದೀಪ್ತಿಯು ಉಂಟಾಗುವ ರೀತಿಯಲ್ಲಿ, ಈ ಶಿಷ್ಯನಿಗೆ ಜ್ಞಾನವಿಕಾಸವುಂಟಾಗುತ್ತದೆಂಬ ಅಭಿಪ್ರಾಯದಿಂದ ಮಾಡುವ ವಿಷ್ಣುಹಸ್ತಪ್ರದಾನ-ಉಪಪಾದ ಸ್ಪರ್ಶದ ಹಾಗೂ (೩) ತಿರುಪ್ರತಿಷ್ಠೈಯಿಲೇ ಮಹಾಭಾಗವತಸ್ಪರ್ಶವೊಪ್ಪೇಲುವುಮ್ - ಭಗವತ್ಪ್ರತಿಷ್ಠೆಯು ನಡೆಯಬೇಕಾದ ಸಂದರ್ಭದಲ್ಲಿ ಅಧಿವಾಸಾದಿ ಕ್ರಮಗಳು ಬಹಳವಾಗಿ ಪಾಂಚರಾತ್ರಾದಿಗಳಲ್ಲಿ ಹೇಳಲ್ಪಟ್ಟವೆ, ಅವುಗಳನ್ನೆಲ್ಲಾ ಸರಿಯಾಗಿ ನಡೆಸಲು ಅನುಕೂಲವಿಲ್ಲದ ಸಂದರ್ಭದಲ್ಲಿ ಮಹಾಭಾಗವತೋತ್ತಮನಾಗಿರುವ ಒಬ್ಬನನ್ನಾದರೂ ಕರೆಸಿ, ಆತನಕೈಯಿಂದ ಸ್ಪರ್ಶಿಸಲ್ಪಟ್ಟರೆ ಪ್ರತಿಷ್ಠೆಯಾದ ಹಾಗೆ ಭಾವನೆಯು ಶಾಸ್ತ್ರದಲ್ಲಿರುವುದರಿಂದ, ತಿರುಪ್ರತಿಷ್ಠೈಯಿಲೇ – ಭಗವಂತನ ಶಿಲಾವಿಗ್ರಹಾದಿ ಪ್ರತಿಷ್ಠೆಯಲ್ಲಿ, ಮಹಾಭಾಗವತಸ್ಪರ್ಶವೊಪ್ಪೇಲುವುಮ್-ಜ್ಞಾನನಿಷ್ಠೆ ಕರ್ಮನಿಷ್ಠೆಗಳಿಂದ ಮಹಾಪ್ರಖ್ಯಾತನಾದ ಭಾಗವತನ ಸ್ಪರ್ಶದ ಹಾಗೂ, ಮತ್ತುಮ್ - ಈ ಮೂರು ನಿದರ್ಶನಗಳಲ್ಲದೆ ಇನ್ನೂ ಇತರ ಸಂದರ್ಭಗಳಲ್ಲೂ, ಅವು ಯಾವುದೆಂದರೆ, ವಿವಾಹವಾಗುವ ಕನ್ಯಾ ಮಾಂಗಲ್ಯದ, ಬ್ರಹ್ಮೋಪದೇಶ ಸಂಸ್ಕಾರಹೊಂದುವ ವಟುವಿನ ಯಜ್ಞೋಪವೀತದ,ಇವರುಗಳಿಗೆ ಪೂಜಾಕಾಲದಲ್ಲಿ ಕೊಡುವ ವಸ್ತ್ರಾಭರಣಗಳ, ಭಾಗವತಸ್ಪರ್ಶದ ಹಾಗೂ, ಹೀಗೆ, ಸ್ಪರ್ಶಂವಿಹಿತಮಾನ ವಿಡಙ್ಗಳಿಲೇ- ಸ್ಪರ್ಶವು ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ಸಂದರ್ಭಗಳಲ್ಲಿ, ಇವನುಡೈಯ ಸ್ಪರ್ಶಂ ಪೆತ್ತದಾಗಿಲ್ - ಈ ನಾರಾಯಣೈಕನಿಷ್ಠನ ಕರಸ್ಪರ್ಶವನ್ನು ಹೊಂದಿದುದಾದರೆ, ಸ್ಪೃಷ್ಟಮಾನವೈಯೆಲ್ಲಾಮ್–ಹೀಗೆ ಆತನು ಮುಟ್ಟಿದುದೆಲ್ಲಾ, ಪರಿಶುದ್ಧಮಾಮೆನ್ರುಪಡಿ - ಪರಿಶುದ್ಧವಾಗುತ್ತವೆ ಎಂದು ಹೇಳಲ್ಪಟ್ಟತೆಂದು ಭಾವಿಸತಕ್ಕದ್ದು. ಶಾಸ್ತ್ರಗಳಲ್ಲಿ ಎಲ್ಲೆಲ್ಲಿ ಕರಸ್ಪರ್ಶವು, ಅತಿಶಯದಾಯಕವಾಗಿಯೂ, ಅಂಶಾದ್ಯಾದಿಗಳಿಲ್ಲದವುಗಳಾಗಿಯೂ, ಪವಿತ್ರತೆಯನ್ನು ಹೊಂದುತ್ತವೆ ಎಂದು ಹೇಳಲ್ಪಟ್ಟರುತ್ತದೋ ಆಯಾ ಸಂದರ್ಭಗಳಲ್ಲಿ ಈ ನಾರಾಯಣೈಕ ನಿಷ್ಠನ ಕರಸ್ಪರ್ಶವು ಅಂತಹ ಪವಿತ್ರತೆಯನ್ನುಂಟುಮಾಡುತ್ತದೆ, ಎಂದು ಅರ್ಥನಿರ್ಣಯವನ್ನು ಮಾಡಿದರು. ಯಾವುದು ಸ್ಪರ್ಶದಿಂದ ಶುದ್ಧವಾಗುತ್ತದೆಂದು ಶಾಸ್ತ್ರವಿಹಿತವೋ ಅದು ಈ ನಾರಾಯಣೈಕನಿಷ್ಠನು ಮಹಾ ಭಾಗವತನಾದ ಪ್ರಯುಕ್ತ, ಪರಿತಃ ಶುದ್ಧವಾದುದಾಗುತ್ತದೆ. ಸಂಪೂರ್ಣವಾಗಿಶುದ್ಧವಾಗುತ್ತದೆಂದು ತಿಳಿಸುವದಕ್ಕಾಗಿಯೇ

ಇಲ್ಲಿ ಪರಿಶುದ್ಧಮಾನ್ ಎಂಬ ಪ್ರಯೋಗವು. ಮುಂದೆ ನಿಷಿದ್ಧವಾದವುಗಳನ್ನು ಈ ಭಾಗವತ ಸ್ಪರ್ಶದಿಂದ ಶುದ್ಧವಾಗುವದಿಲ್ಲವೆಂದು ಹೇಳುವ ಸ್ಥಲದಲ್ಲಿ ಪರಿ ಎಂಬ ಉಪಸರ್ಗವನ್ನು ಬಿಟ್ಟು ಹೇಳಿರುವದರಿಂದಲೂ, ಶುದ್ಧವೆಂದು ಶಾಸ್ತ್ರವಿಹಿತವಾದುದೇ ಹೆಚ್ಚು ಶುದ್ಧಿಯನ್ನು ಹೊಂದುತ್ತದೆ ಎಂದು ಪರಿಶುದ್ಧ ಪ್ರಯೋಗವು. ಇದನ್ನು ಸ್ಥಾಪಿಸುವದಕ್ಕಾಗಿ ಮುಖ್ಯವಾಗಿ ಮೂರು ನಿದರ್ಶನಗಳನ್ನು ದಯಪಾಲಿಸಿರುತ್ತಾರೆ. (೧) ಆತುರನನ್ನು ಅನಾತುರನು ೧೦ ಸಲ ಸ್ನಾನಮಾಡಿ ೧೦ ಸಲ ಸ್ಪರ್ಶಿಸಿದರೆ, ಆತುರನು ಹೇಗೆ ಪವಿತ್ರತೆಯನ್ನು ಹೊಂದುವನೋ ಹಾಗೆ ಎಂದು ಹೇಳಲ್ಪಟ್ಟಿತು. ಇದಕ್ಕೆ ಪ್ರಮಾಣವು.—

ಆತುರಸ್ನಾನ ಉತ್ಪನ್ನೇ ದಶಕೃತ್ವೋ ಹ್ಯನಾತುರಃ। ಸ್ನಾತ್ವಾ ಸ್ನಾತ್ವಾ ಸ್ಪೃಶೇದ್ಯೇನಂ ತತಶ್ಶುದ್ಧ್ಯೇತ್ಸ ಆತುರಃ। ಆತುರಾಚೇದೃತುಮತೀ ಸೂತಿಕಾ ವಾ ತಥಾವಿಧಾ। ಸ್ಪೃಷ್ಟ್ವಾತಾಮಪರಾ ಸ್ನಾಯಾದ್ದ್ವಾತ್ರಿಂಶದ್ದ್ವಾರಮೇವವಾ। ಜ್ವರಾಭಿಭೂತಾ ಯಾನಾರೀ ರಜಸಾ ಚ ಪರಿಪ್ಲುತಾ। ಚತುರ್ಥೇಹನಿ ಸಂಪ್ರಾಪ್ತೇ ಸ್ಪೃಶೇದನ್ಯಾತು ತಾಂ ಸ್ತ್ರಿಯಂ। ಸಾ ಸಚೇಲಾವಗಾಹ್ಯಾಪಸ್ಸ್ನಾತ್ವಾ ಸ್ನಾತ್ವಾಪುನಸ್ಸ್ಪೃಶೇತ್"ಎಂದು ಹೇಳಲ್ಪಟ್ಟಿರುತ್ತದೆ. "ಆತುರನಿಗೆ ಆಶೌಚಾದಿಗಳು ಪ್ರಾಪ್ತವಾಗಿಯಾಗಲಿ ಇನ್ನು ಯಾವಕಾರಣದಿಂದಾಗಲಿ ಸ್ನಾನಮಾಡಿಸಬೇಕಾಗಿ ಒದಗಿದರೆ, ಅಂತಹ ರೋಗಿಷ್ಟನು ಸ್ನಾನಮಾಡುವದು ಸರಿಯಲ್ಲವಾದುದರಿಂದ ರೋಗಿಷ್ಟನಲ್ಲದವನು ತಾನು ಸ್ನಾನಮಾಡಿ ರೋಗಿಯನ್ನು ಮುಟ್ಟುವದು ಹೀಗೆ ಹತ್ತುಸಾರಿ ಮಾಡಿದರೆ, ಆ ಆತುರನು ಶುದ್ಧಿಯನ್ನುಹೊಂದುವನು. ಹಾಗೆಯೇ ಋತುಮತಿಯಾಗಿ ಆಗಲಿ, ಅಥವಾ ಮಗುವನ್ನು ಹಡೆದ ನಂತರವಾಗಲಿ ಕಾಯಿಲೆಯವಳಾಗಿ ಆದರೆ, ಆಗಲೂ, ಕಾಯಿಲೆ ಯಿಲ್ಲದ ಇನ್ನೊಬ್ಬ ಹೆಂಗಸು ಅವಳನ್ನು ಮುಟ್ಟಿ ಮುಟ್ಟಿ ೩೨ ಸಲ ಸ್ನಾನಮಾಡಿದರೆ ಪರಿಶುದ್ಧಳಾಗುವಳು. ಹಾಗೆಯೇ ರಜಸ್ವಲೆಯಾದ ಸ್ತ್ರೀಯು ಜ್ವರಪೀಡಿತಳಾದರೆ, ಆಕೆಯನ್ನು ಇನ್ನೊಬ್ಬಳು ಮುಟ್ಟಿ ಮುಟ್ಟಿ ಸಚೇಲ ಸ್ನಾನ ಮಾಡಿದರೂ ಶುದ್ಧಳಾಗುವಳು" ಎಂಬುದು ತಾತ್ಪರ್ಯವು (೨) ಪಂಚರಾತ್ರಾದಿ ಮಂತ್ರದೀಕ್ಷಾಕಾಲದಲ್ಲಿ ಆಚಾರ್ಯನು ಶಿಷ್ಯನನ್ನು ಸ್ಪರ್ಶಿಸಿದರೆ, ವಿಷ್ಣು ಹಸ್ತವನ್ನು ಇಟ್ಟಹಾಗೆ ಎಂಬ ಭರದ್ವಾಜ ಸಂಹಿತಾ ಪ್ರಮಾಣಾನುಸಾರವಾಗಿ ಅಂತಹ ಸ್ಪರ್ಶದಹಾಗೆ ಈತನ ಸ್ಪರ್ಶವೂ ಎಂದು ತಿಳಿಯತಕ್ಕದ್ದೆಂಬ ಭಾವವು. ಆ ಸಂಹಿತಾ ಪ್ರಮಾಣವು ಯಾವುವೆಂದರೆ.—"ಕರೇಣ ಸಂಸ್ಪೃಶನ್ಗಾತ್ರಂ ಮಂತ್ರವಿದ್ಭಾವಯೇತ್ತ್ರಯತ್। ಏಷಾಹಿ ಸರ್ವ ಮಂತ್ರಾಣಾಂ ದೀಕ್ಷೇತ್ಯಾಹ ಮುನಿ ಸ್ಸ್ವಯಮ್।" ಶಿಷ್ಯನ ಶರೀರವನ್ನು ಕೈಯಿಂದ ಚನ್ನಾಗಿ ಸ್ಪರ್ಶಿಸುತ್ತಾ ಮಂತ್ರಜ್ಞನಾದ ಆಚಾ

ರ್ಯನು ಶಿಷ್ಯನನ್ನು ಭಾವಿಸುವದು ಯಾವುದುಂಟೋ, ಅದೇ ಸರ್ವಮಂತ್ರಗಳ ಉಪದೇಶಕ್ಕೆ ದೀಕ್ಷೆ ಎಂದು ಮುನಿಯು ತಾನೇ ಹೇಳಿರುತ್ತಾರೆ." ಎಂಬುದು ಇವರ ತಾತ್ಪರ್ಯವು. (೩) ಭಗವತ್ಪ್ರತಿಷ್ಠೆಯಲ್ಲಿ ಮಹಾಭಾಗವತನ ಕರಸ್ಪರ್ಶವು ಪ್ರತಿಷ್ಠಾಕ್ರಮದಷ್ಟು ಮಾಹಾತ್ಮ್ಯಯುಳ್ಳದು ಎಂಬ ಸಂದರ್ಭದಲ್ಲಿ ಪ್ರಮಾಣವು. " ಅಧಿವಾಸಾದಿಕಂ ಕರ್ಮ ಯಥಾವತ್ಕರ್ತು ಮಕ್ಷಮಃ। ಮಹಾ ಭಾಗವತಸ್ಪರ್ಶ ಮೇಕಂವಾ ಕಾರಯೇತ್ಸುಧೀಃ" ಎಂಬುದು, ಧಾನ್ಯ ಜಲಾದ್ಯಧಿವಾಸಗಳು ಬಿಂಬಕ್ಕೆ ಪಾಂಚರಾತ್ರಾದ್ಯಾಗಮಗಳಲ್ಲಿ ಹೇಳಲ್ಪಟ್ಟಿವೆ; ಇವುಗಳನ್ನು ಶಾಸ್ತ್ರವಿಧ್ಯನುಸಾರ ನಡೆಸಲು ಅಶಕ್ತನಾದ ಪಕ್ಷದಲ್ಲಿ ಪ್ರಾಜ್ಞನಾದವನು, ಮಹಾ ಭಾಗವತನಿಂದ ಸ್ಪರ್ಶ ಒಂದನ್ನಾದರೂ ಮಾಡಿಸತಕ್ಕದ್ದು," ಎಂಬುದು ಇದರಭಿಪ್ರಾಯವು. ಸಾರಾಸ್ವಾದಿನಿಯವರು ಉದಾಹರಿಸಿರುವದು ಈ ಮೇಲಿನ ಶ್ಲೋಕವು. ಸಾರಪ್ರಕಾಶಿಕಾ ಮತ್ತು ಸಾರ ವಿವರಣಿಯವರುಗಳು "ಅಧಿವಾಸಾದಿಕಂ ಕರ್ತುಮಶಕ್ತಶ್ಚೇದಥಾಪದಿ। ಮಹಾಭಾಗವತಸ್ಪರ್ಶ ಮೇಕಂ ವಾ ಕಾರಯೇದ್ಬುಧಃ" ಎಂದು ಪಾಠಾಂತರವಾಗಿ ಉದಾಹರಿಸಿರುತ್ತಾರೆ. ಆಪತ್ಕಾಲದಲ್ಲಿ ಅಧಿವಾಸಾದಿಗಳನ್ನು ನಡೆಸಲು ಆಶಕ್ತವಾದರೆ ಎಂಬುದು ಅಭಿಪ್ರಾಯವಾಗುತ್ತದೆ ಭಗವತ್ಸ್ಪರ್ಶಮಾಹಾತ್ಮ್ಯಯಿಂದ ಧ್ರುವಾದಿಗಳಿಗೆ ಒಳ್ಳೇ ಜ್ಞಾನ ಯೋಗದ ಪ್ರಾಪ್ತಿಯುಂಟೆಂಬುದು ಇತಿಹಾಸಗಳಿಂದ ವ್ಯಕ್ತವು. "ಕಮ್ಬುನಾ ಪಸ್ಪರ್ಶ ಬಾಲಂ ಕೃಪಯಾ ಕಪೋಲೇ"ಎಂದು ಹೇಳಿರುವಹಾಗೆ ಯಾವಾಗ ಭಗವಂತನ ಸ್ಪರ್ಶ ಉಂಟಾಯಿತೋ ಆಗ ಪರಿಜ್ಞಾತ ಪರಾತ್ಮನಿರ್ಣಯ" ನಾದನೆಂದು ಹೇಳಲ್ಪಟ್ಟು, "ಯೋನ್ತಃ ಪ್ರವಿಶ್ಯ ಮಮ ವಾಚ ಮಿಮಾಂ"ಎಂಬ ಅತ್ಯದ್ಭುತ ಸ್ತೋತ್ರನನ್ನು ಧ್ರುವನು ಮಾಡಿರುತ್ತಾನೆಂದು ಹೇಳಲ್ಪಟ್ಟಿರುತ್ತದೆ. ಇಂತಹ ಮಹಿಮೆಯೇ ತದೀಯರಾದ ಅನೇಕ ಮಹರ್ಷಿಗಳಿಗೂ ಭಾಗವತೋತ್ತಮರುಗಳಿಗೂ ಉಂಟೆಂಬುದೂ ವ್ಯಕ್ತವು. ಅವರ ಸ್ಪರ್ಶವು ಹಾಗಿರಲಿ, "ದರ್ಶನಾದೇವ ಸಾಧವಃ" ಎಂದು ಹೇಳಿರುವದರಿಂದ ಅವರುಗಳ ಕೃಪಾ ಪುರಸ್ಸರವಾದ ಈಕ್ಷಣವೇ ಮಾಹಾತ್ಮ್ಯಯುಳ್ಳದ್ದಾಗಿರುವಾಗ ಸಾಧುಗಳ ಸ್ಪರ್ಶವು ತುಂಬಾಮಾಹಾತ್ಮ್ಯಯುಳ್ಳದೆಂಬುದು ಕೈಮುತಿಕ ನ್ಯಾಯಸಿದ್ಧವು. ಇದಕ್ಕೆ ಸ್ವಾಮಿ ದೇಶಿಕರವರೇ ನಿದರ್ಶನವು. ಇವರು ಜನಿಸಿದ ಕಾಲದಲ್ಲೇ ಭಗವದನುಗ್ರಹವಿದ್ದುದರಿಂದ ಮಹತ್ತಾದ ಜ್ಞಾನವುಳ್ಳವರೆಂಬುದನ್ನು ಕಾಲಕ್ಷೇಪಕಾಲದಲ್ಲಿ ಶ್ರೀ ನಡಾದೂರ್ ಅಮ್ಮಾಳ್ (ವರದಾರ್ಯರೆಂಬ ಅಪರನಾಮಧೇಯವು) ತಿಳಿದವರಾಗಿ ಅವರನ್ನೆತ್ತಿ ತಮ್ಮ ತೊಡೆಯಮೇಲೆ ಕೂರಿಸಿಕೊಂಡು ಹರಿಸುದುದರಿಂದ ಮೊದಲೇ ಜ್ಞಾನದೀಪ್ತಿಯುಳ್ಳ ಈ ಮಹಾನುಭಾವರು ದೇದೀಪ್ಯವಾದ ಜ್ಞಾನಪ್ರಭೆ

ಯುಳ್ಳವರಾದರೆಂಬುದು ವ್ಯಕ್ತವಾದ ವಿಷಯವು. ಹಾಗೆಯೇ ಈ ನಾರಾಯ ಣೈಕನಿಷ್ಠನಾದ ಮಹಾ ಭಾಗವತೋತ್ತಮನಿಗೂ ಉಂಟೆಂಬಂಶವೇ ಇಲ್ಲಿಉಪ ಪಾದಿತವು. ಮಾಹಾತ್ಮ್ಯೆಯನ್ನು ಹೊಂದಲು ಯೋಗ್ಯವೆಂದು ಶಾಸ್ತ್ರವಿಹಿತ ವಸ್ತುಗಳಿಗೆ ಅತಿಶಯ ಉಂಟಾಗುತ್ತದೆಂಬುವದರಲ್ಲಿ ಸಂದೇಹವಿಲ್ಲವು. ಮಹಾ ಭಾಗವತನಾಗಿ ಸ್ಪರ್ಶಿಸಿದರೇನೋ ಮಾಹಾತ್ಮ್ಯೆಯುಂಟೆಂದು ಯಾವಾಗ ಸ್ಥಾಪಿ ತವೋ, ದುರಾಚಾರಿಗಳಾದ ಪಾಪಿಷ್ಠರ ಸ್ಪರ್ಶದಿಂದ ಕೇಡುಂಟಾಗುತ್ತದೆಂಬುದೂ ಇದರಿಂದ ವ್ಯಕ್ತವು. ಇದರಿಂದ ಪಾಶ್ಚಾತ್ಯರ ಹಸ್ತಲಾಘವರೂಪ ದುರಾಚಾರ ವನ್ನು (ಷೇಕ್ ಹ್ಯಾಂಡಸೆಂಬುದನ್ನು) ನಾವು ಅನುಕರಿಸುವದು ಅನೇಕ ಕೇಡುಗಳಿಗೆ ಗುರಿಯಾಗಿ, ಲೌಕಿಕದಲ್ಲೂ ಪರಸ್ಪರ ಸ್ವೇದದಲ್ಲಿರುವ ರೋಗಗಳು ಒಬ್ಬರಿಂದೊಬ್ಬ ರಿಗೂ ವ್ಯಾಪಿಸಲು ಸಹಕಾರಿಯಾಗುತ್ತದೆ. ಇಂತಹ ಅನರ್ಥಗಳನ್ನು ಮನಸ್ಸಿ ನಲ್ಲಿಟ್ಟೇ "ನಮಃ" ಎಂಬ ಉಕ್ತಿಯಾಗಲಿ, ಕೈಮುಗಿಯುವದಾಗಲಿ, ಮಿತ್ರಸಮಾ ಗಮದಲ್ಲಿ ನಮ್ಮಲ್ಲಿ ಏರ್ಪಟ್ಟಿರುತ್ತದೆ. ಹೀಗೆ "ತತ್ಸ್ಪೃಷ್ಟಮಖಿಲಂ ಶುಚಿ" ಎಂಬುದಕ್ಕೆ ಸಿದ್ಧಾನ್ತಾರ್ಥವನ್ನು ಉಪದೇಶಿಸಿ, ಅನಂತರ ಯಾವುದು ಸರಿ ಯಾದ ಅಭಿಪ್ರಾಯವಲ್ಲವು ಎಂಬುದನ್ನು ಹೇಳುತ್ತಾರೆ. ಹೀಗೆ ಸಿದ್ಧಾನ್ತಾರ್ಥವು ಲಭಿಸುವುದಕ್ಕೆ ತತ್ಸ್ಪೃಷ್ಟಮಖಿಲಂ ಶುಚಿ ಎಂಬುದಕ್ಕೆ ಸ್ವಾರಸ್ಯಾದಿನಿಯಮರು, ಅಖಿಲಂ ಎಂಬುದನ್ನು ಸ್ಪೃಷ್ಟಂ ಎಂಬುದಕ್ಕೆ ವಿಶೇಷಣಮಾಡದೆ, ಅಖಿಲಂ ಶುಚಿ ಎಂದು ಶುಚಿ ಶಬ್ದದೊಂದಿಗೆ ಅನ್ವಯಿಸಿದರೆ, ಕಾರ್ತ್ಸ್ನ್ಯೇನಶುಚಿ- ಸಂಪೂರ್ಣಶುಚಿ ಭಾವವನ್ನು ಹೊಂದುತ್ತದೆಂದು ಅರ್ಥಮಾಡಿದರೆ, ಶಾಸ್ತ್ರವಿಹಿತ ವಾದುದು ಆತನಿಂದ ಸ್ಪರ್ಶಿಸಲ್ಪಟ್ಟರೆ, ಸಂಪೂರ್ಣಪರಿಶುದ್ಧತೆಯನ್ನು ಹೊಂದು ತ್ತದೆಂಬ ಅರ್ಥವು ಸರಸವಾಗಿ ಉಂಟಾಗುತ್ತದೆಂದು ಹೇಳಿರುತ್ತಾರೆ.

**ಸ್ಪರ್ಶಮಾಹಾತ್ಮ್ಯವು ವಿಹಿತ ವಿಷಯದಲ್ಲಿ ಅಲ್ಲದಿದ್ದರೆ, ಬಾಧಕವನ್ನು ತಿಳಿಸುತ್ತಾರೆ.**

---

ಹೀಗೆ ಭಾಗವತ ಸ್ಪರ್ಶಮಾಹಾತ್ಮ್ಯೆಯು ಶಾಸ್ತ್ರವಿಹಿತ ವಿಷಯದಲ್ಲಿ ! ಮಾ ತ್ರವೇ ಎಂದು ಇಟ್ಟುಕೊಳ್ಳದೇ, ಆತನು ಮುಟ್ಟಿದುದೆಲ್ಲಾ ಪವಿತ್ರವಾದುದಾದರೆ, ಶಾಸ್ತ್ರನಿಷಿದ್ಧವೆಂದು ಹೇಳಿದುದನ್ನೆಲ್ಲಾ ಅವನ ಕೈಯಿಂದ ಮುಟ್ಟಿಸಿಬಿಟ್ಟು ಪವಿತ್ರ ವಾದವುಗಳಾಯಿತೆಂದು ಭಾವಿಸಿ ಅವುಗಳನ್ನು ಪರಿಗ್ರಹಿಸಬಹುದೆಂದಾಗು ವುದರಿಂದ ಶಾಸ್ತ್ರಕ್ಕೆ ವೈಪರೀತ್ಯವನ್ನು ಏರ್ಪಡಿಸದಂತಾಗುತ್ತದೆ. ನಿಷೇಧಿಸುವ ಶಾಸ್ತ್ರವನ್ನೆಲ್ಲಾ ಪರಿತ್ಯಾಗಮಾಡಿದಂತಾಗುತ್ತದೆ ಎಂದು ಉಪದೇಶಿಸುತ್ತಾರೆ.

## ಸ್ಪರ್ಶಮಾಹಾತ್ಮ್ಯಂ ವಿಹಿತವಿಷಯೇ ನೋಚೇತ್, ಬಾಧಮಾಹ

ಅಲ್ಲದ್ಮು, (೧) "ಉದುಂಬರಂ ನಖಾದೇತ್ತು" (೨) "ಕಾಲಿಂಗೋ ದುಂಬರಾಲಾಬು ಬಿಂಬಾನಿ ಪರಿವರ್ಜಯೇತ್ । ತಾನ್ಯಶ್ನತಸ್ತು ಸತತಂ ನಿತ್ಯಂ ದೂರತರೋ ಹರಿಃ॥" (೩) "ವೃಂತಾಕಕೇತಕಾಲಿಂಗ ಬಿಲ್ವೋದುಂಬರ ಭಿಸ್ಸಟಾಃ । ಯೋ ಭಕ್ಷಯತಿ ಸಮ್ಮೋಹಾತ್ ತಸ್ಯದೂರತರೋ ಹರಿಃ ॥ ಕಾಲಿಂಗೀಂ ಕ್ಷುದ್ರವಾರ್ತಾಂಚ ದಗ್ಧಾನ್ನಂ ಮಸೌಸಲೀಂತಥಾ । ತುಂಬಿಕಾಫಲಮುಶ್ರೀಯಾ

---

ಅಲ್ಲದು - ಸ್ಪರ್ಶಮಾಹಾತ್ಮ್ಯೆಯು ಶಾಸ್ತ್ರವಿಹಿತ ವಿಷಯದಲ್ಲಿ ಮಾತ್ರವೇ ವಿನಾ ಶಾಸ್ತ್ರ ನಿಷಿದ್ಧ ವಿಷಯುದಲ್ಲಲ್ಲವೆಂದು ಅಙ್ಗೀಕರಿಸದೇ ಹೋದರೆ, (೧) ಉದುಂಬರಂ - ಅತ್ತೀಕಾಯಿ ಅಥವಾ ಹಣ್ಣನ್ನು, ನಖಾದೇತ್ - ತಿನ್ನಬಾರದು" ಎಂಬ ವಿಧಿಯು ವ್ಯರ್ಥವಾಗುತ್ತದೆಂಬ ಭಾವವು. ಏಕೆಂದರೆ ಅತನ ಕೈಯಲ್ಲಿ ಮುಟ್ಟಿಸಿ ಈ ನಿಷಿದ್ಧವಾದ ಪದಾರ್ಥವನ್ನು ತಿನ್ನಬಹುದೆಂದು ಏರ್ಪಡುತ್ತದೆ. ಹಾಗೆಯೇ ಪಿಪ್ಪಲಂಚ ವಟಂ ಚೈವ ಶಣಶಾಕಂ ತಥೈವಚ ಎಂಬುದು ಪೂರ್ವಾರ್ಧವು ಪಿಪ್ಪಲಂ - ಅಶ್ವತ್ಥಮರದ ಹಣ್ಣು, ವಟಂ- ಆಲದ ಹಣ್ಣು, ಶಣಶಾಕಂ – ಶಣಬುಃ ಇದು ಭೀಷ್ಮರು ಯುಧಿಷ್ಠಿರರಿಗೆ ಆಯುಸ್ಸಿಗೆ ಸಾಧಕಬಾಧಕಗಳಾದವುಗಳನ್ನು ಉಪದೇಶಿಸುವ ಸಂದರ್ಭವು. (೨) ಕಾಲಿಂಗಂ – ಮೂಲಂಗಿಯು, ಅಲಾಬು – ಸೋರೇಕಾಯಿ, ಬಿಂಬ - ತೊಂಡೇಕಾಯಿ ಮತ್ತು ಹಣ್ಣು ಇವುಗಳನ್ನು ಪರಿವರ್ಜಯೇತ್ - ಇವುಗಳು ತಾಮಸಾಹಾರಗಳಾದುದರಿಂದ ಪರಿತ್ಯಜಿಸತಕ್ಕದ್ದು. ತಾನ್ಯಶ್ನತಸ್ತು ಸತತಂ - ಅವುಗಳನ್ನು ಊಟಮಾಡುತ್ತಾ ಬಂದರೆ, ನಿತ್ಯಂ ದೂರತರೋ ಹರಿಃ-ಅಂತವನಿಗೆ ಶ್ರೀ ಹರಿಯು, ಯಾವಾಗಲೂ ದೂರವಾಗಿಯೇ ಇರುವನು,ಜ್ಞಾನಶೂನ್ಯತೆಯುಂಟಾಗುವದರಿಂದ. (೩)ವೃಂತಾಕ- ಬಿಳೀ ಬದನೇಕಾಯಿ, ಕೇತಕ-ತೇತ್ತಾಂಜಿಕ್ಕೊಟ್ಟೆ ಎಂದರೆ ಚಿಲ್ಲದಬೀಜ, ಬಿಲ್ವ - ಬಿಲ್ವದ ಹಣ್ಣು, ಭಿಸ್ಸಟಾಃ - ಸೀದು ಹೋದ ಆಹಾರವು, ಇವುಗಳನ್ನೂ, ಸಂಮೋಹಾತ್ - ಅಜ್ಞಾನದಿಂದ, ಯೋ ಭಕ್ಷಯತಿ - ಯಾವನು ಊಟಮಾಡುತ್ತಾನೋ, ತಸ್ಯ - ಅವನಿಗೆ, ಹರಿಃ ದೂರತರಃ - ಶ್ರೀಹರಿಯು ದೂರವಾಗಿರುವನು, ಇವುಗಳು ಅಜ್ಞಾನ ದಾಯಿಕಗಳಾದುದರಿಂದ ಒಳ್ಳೇ ಜ್ಞಾನವು ಉತ್ಪನ್ನವಾಗದಿರುವದರಿಂದ ಶ್ರೀ ಹರಿಯನ್ನು ಆಶ್ರಯಿಸುವದಿಲ್ಲವು, ಆ ಕಾರಣ

---

(೧) ಭಾರತ ಅನು. ೧೬೧. ೯೭. (೨) ೩. ಭಾರ ಅನು. ೧೬೧. ೯೭.

ತ್ರಸ್ಯ ದೂರತರೋಹರಿಃ" | "ಯೋತ್ತಿ ತಾಮಸಾಹಾರಕೆ ಕಾಲಿಂಗ ಮಸೂರ ಬಿಸ ಕಾನ್ಯಪಿ | ಅಂತಕಾಲೇ ಜಗನ್ನಾಥಂ ಗೋವಿಂದಂ ನಸ್ಮರಿಷ್ಯತಿ" (೩) "ತುಂಬಂ ಕೋಶಾತಕಂಚೈವ ಪಲಂಡುನ್ ಗೃಂಜನಂ ತಥಾ | ಛತ್ರಾಕಂ ವಿಡ್ವರಾಹಂ ಚ ಭುಕ್ತ್ವಾ ಚಾಂದ್ರಾಯಣಂ ಚರೇತ್ |" (೪) "ನಾಳಿಕಾಚಣ ಛತ್ರಾಕ ಕುಸುಂಭಾಲಾಬು ವಿಡ್ಭವಾನ್ | ಕುಂಭೀಕಂಚುಕವೃಂತಾಕ ಕೋವಿದಾರಾಂಶ್ಚ ವರ್ಜಯೇತ್ | ಕ್ಷೀರಂ ಲವಣ ಸಂಮಿಶ್ರ ಮುಚ್ಛಿಷ್ಟೇ ಪಿ ಚ ಯದ್ಘೃತಂ |

ದಿಂದ ಶ್ರೀ ಹರಿಯು ಇವನಿಗೆ ದೂರವಾಗಿರುವನು ಎಂಬ ಭಾವವು. ಕಾಲಿಂಗೀಂ- ಕೊಮ್ಮಟ್ಟೆಲೆ. ಕ್ಷುದ್ರವಾರ್ತಾಂಚ - ಕಿತ್ತವಳ್ಳೆ ಎಂದರೆ ರಾಮುಗುಳ್ಳ, ಧಗ್ಧಾನ್ನಂ - ಸೀದ, ಹೋದ ಅನ್ನವು, ಮಾಸಲೀ - ನಿಲಪ್ಪನೈ ಎಂದು ವ್ಯಾಖ್ಯಾನವು, ತುಂಬಿಕಾಫಲಂ - ಸೋರೆಕಾಯಿ, ಯಃ - ಯಾವನು, ಅಶ್ನೀಯಾತ್ - ತಿನ್ನುವನೋ, ತಸ್ಯ - ಅವನಿಗೆ, ಹರಿಯು ದೂರ ವಾಗಿರುವನು, "ಮಸೂರ - ಕರುವು ಹಾಕಿದ ಹತ್ತು ದಿನಗಳ ಒಳಗೆ ಕರವ ಹಾಲನ್ನೂ, ಬಿಸಕಾನ್ಯಪಿ - ತಾವರೇ ಗೆಡ್ಡೆಯನ್ನೂ, ಯೋತ್ತಿ - ಯಃ ಅತ್ತಿ - ಯಾವನು ತಿನ್ನುತ್ತಾನೋ, ಅವನು, ಅಂತ್ಯಕಾಲದಲ್ಲಿ ಜಗತ್ತಿಗೆ ಸ್ವಾಮಿಯಾದ ಗೋವಿಂದನನ್ನು ಸ್ಮರಿಸುವದಿಲ್ಲವು; ತಾಮಸಾಹಾರವನ್ನು ಸ್ವೀಕ ರಿಸುವುದರಿಂದ ಅಜ್ಞಾನ ಮುಚ್ಚಿಕೊಂಡು ಅಂತ್ಯ ಕಾಲದಲ್ಲಿ ಭಗವಂತನ ಸ್ಮರ ಣೆಯು ಉಂಟಾಗುವದಿಲ್ಲವೆಂಬ ಭಾವವು." ತುಂಬಂ - ವೇಲಂಗಾಯ್ ಎಂದು ವ್ಯಾಖ್ಯಾನವು, ಕೋಶಾತಕ - ಹೀರೇಕಾಯಿ, ಪಲಂಡುಂ - ಈರುಳ್ಳಿ, ಗೃಂಜನಂ ಬೆಳ್ಳುಳ್ಳಿ, ಛತ್ರಾಕಂ - ನಾಯಿಯ ಕೊಡೆ, ವಿಡ್ವರಾಹಂ ಚ - ಊರ ಪನ್ನಿ ಎಂಬ ಗೆಡ್ಡೆ ; ಇವುಗಳನ್ನು ಭುಕ್ತ್ವಾ - ತಿಂದುದಾದರೆ, ಚಾಂದ್ರಾಯಣಂ ಚರೇತ್ - ಪ್ರಾಯಶ್ಚಿತ್ತರೂಪದಲ್ಲಿ ಚಾಂದ್ರಾಯಣವ್ರತವನ್ನಾಚರಿಸತಕ್ಕದ್ದು. (೪) ನಾಳಿಕಾ - ತೆಂಗಿನ ಕಾಯಿಯಲ್ಲಿರುವ ನೀರುಕೆಯು, ಚಣ - ಕಡಬುಸೊಪ್ಪು ಕುಸುಂಭ - ಕುಸುಂಭವು, ವಿಡ್ಭವಾನ್ - ಮನುಷ್ಯರ ಗೊಬ್ಬರ ಹಾಕಿ ಬೆಳಿಸಿದವು ಗಳನ್ನೂ, ಕುಂಭೀ-ಕೊಳ್ ಎಂದು ವ್ಯಾಖ್ಯಾನವು, ಹಳಸಿದ ಅನ್ನವು, ಕಂಚುಕ- ವರ್ತುಳಾಲಾಬು ಎಂದು ವ್ಯಾಖ್ಯಾನ, ದುಂಡಗಿರುವ ಸೋರೆಕಾಯಿ ಎಂದರ್ಥ ವಾಗುತ್ತದೆ, ಇದಕ್ಕೆ ಕುಡುಕ್ಕಚ್ಚಿರೈ ಎಂದು ಶ್ರೀ ಶೆಟ್ಟಿಲೂರು ನರಸಿಂಹಾಚಾರ್ಯರು ಬರೆದಿರುತ್ತಾರೆ. ಕೋವಿದಾರಂ - ಕೊನ್ನೈ ಎಂದೂ, ಕೋಕಿಲಕ್ಕಾಯ್ ಎಂದೂ ವ್ಯಾಖ್ಯಾನವು. ಇವುಗಳನ್ನೂ ಸಹ ವರ್ಜಯೇತ್ - ಬಿಡತಕ್ಕದ್ದು.

(೩) ಭಾರ. ಅಶ್ವ. ೧೧೨.೪೪ (೪)

ಪಾನಂ ರಜಕ ತೀರ್ಥೇ ಚ ಸುರಾಪಾನಸಮಂ ವಿದುಃ॥" (೫) "ಆರನಾಳಂ ನಸೇವೇತ ಕದಾಚಿದ್ಭಗನತ್ಪರಃ। ಸುರಾಕಲ್ಪಂ ಹಿ ತತ್ ಜ್ಞೇಯಂ ತಸ್ಮಾದ್ಯತ್ನೇನ ವರ್ಜಯೇತ್(೬)"ಪ್ರಮಾದಾದಪಿ ಕೀಲಾಲಂ ಯಸ್ಸ್ಪೃಶೇದ್ವೈಷ್ಣವೋ ನರಃ। ಉಪಚಾರಶತೇನಾಪಿ ನಕ್ಷಮಾಮಿ ವಸುಂಧರೇ।" (೭) "ಏಕಾದಶ್ಯಾಂ

ಉಪಯೋಗಿಸತಕ್ಕದ್ದಲ್ಲವು, ಲವಣ ಸಮ್ಮಿಶ್ರಂ - ಉಪ್ಪುಸೇರಿದ, ಕ್ಷೀರಂ-ಹಾಲನ್ನೂ,ಉಚ್ಛಿಷ್ಟೇಪಿ ಚ ಯದ್ಘೃತಂ-ಎಂಜಲಿನಮೇಲೆ ಪುನಃ ತುಪ್ಪವನ್ನೂ ಎಂದರೆ ಊಟದ ಮಧ್ಯದಲ್ಲಿ ಪುನಃ ತುಪ್ಪವನ್ನು ಹಾಕಿಸಿಕೊಳ್ಳುವದನ್ನೂ, ರಜಕ ತೀರ್ಥೇಚ ಪಾನಂ - ಅಗಸರು ಒಗೆಯುವ ಸ್ಥಳದಲ್ಲಿನ ನೀರನ್ನು ಕುಡಿಯುವದು, ಇವುಗಳನ್ನು, ಸುರಾಪಾನಸಮಂ - ಮದ್ಯಪಾನಕ್ಕೆ ಸಮವಾದುದಾಗಿ, ವಿದುಃ - ತಿಳಿಯುತ್ತಾರೆ, ಎಂದರೆ ಮದ್ಯಪಾನವು ಹೇಗೆ ಜ್ಞಾನಾರೋಗ್ಯಗಳಿಗೆ ಕುಂದುಕವೋ, ಹಾಗೆಯೇ ಕುಂದಕವೆಂಬ ಭಾವವು. (೫) ಆರನಾಳಂ-ಅನ್ನನೆನೆಹಾಕಿ ಇಟ್ಟು ಹುಳಿಯಾದ ನೀರು, ಭಗವತ್ಪರಃ - ಭಗವಂತನಲ್ಲಿ ಆಸಕ್ತನಾದವನು, ಎಂದರೆ ಪ್ರಪನ್ನನು, ಕದಚಿತ್ - ಎಂದಿಗೂ, ನಸೇವೇತ - ಸೇವನೆ ಮಾಡಬಾರದು,ಹಿ-ಏಕೆಂದರೆ, ತತ್ - ಅದು, ಸುರಾಕಲ್ಪಂ - ಮದ್ಯಕ್ಕೆ ಸಮಾನವಾದುದೆಂದು, ಜ್ಞೇಯಂ - ತಿಳಿಯತಕ್ಕದ್ದು, ತಸ್ಮಾತ್ - ಆಕಾರಣದಿಂದ ಯತ್ನೇನ ವರ್ಜಯೇತ್ - ಯತ್ನಮಾಡಿ ತ್ಯಜಿಸತಕ್ಕದ್ದು, ಬಿಸಲು ಹೊತ್ತಿನಲ್ಲಿ ಅದನ್ನು ಕುಡಿದರೆ ಆಪ್ಯಾಯನವಾಗುವದರಿಂದ ಅದನ್ನು ಕುಡಿಯಬೇಕೆಂಬ ಆಶೆಯನ್ನು ತೊರೆಯುವದು ದುರ್ಲಭವಾದುದರಿಂದ ಯತ್ನೇನ ಎಂಬ ಪ್ರಯೋಗವು, ಭಗನತ್ಪರನು ಕುಡಿಯಬಾರದೆಂದು ಹೇಳಿರುವದರಿಂದ ಭಗವಂತನಲ್ಲಿ ಮನಸ್ಸನ್ನು ತಪ್ಪಿಸುತ್ತದೆಂಬುದು ಬೋಧಿತವು. (೬) "ಪ್ರಮಾದದಿಂದಲೂ ಕೂಡ, ಕೀಲಾಲಂ - ರಕ್ತವನ್ನು, ಯಾವ ವೈಷ್ಣವನಾದವನು, ಸ್ಪೃಶೇತ್ - ಮುಟ್ಟುವನೋ,ಅವನನ್ನು ಅನಂತರ ಆತನು ಮಾಡುವ, ಉಪಚಾರ ಶತೇನಾಪಿ-ನೂರು ವಿಧವಾದ ಉಪಚಾರಗಳಿಂದಲೂ ಎಂದರೆ ಅನೇಕ ಆರಾಧನೆಗಳಿಂದಲೂ, ಹೇ ವಸುಂಧರೇ-ಓ ಭೂಮಿದೇವತೆಯೇ, (ವರಾಹಾವತಾರಿಯಾದ ಸ್ವಾಮಿಯು ತನ್ನಿಂದ ರಕ್ಷಿತಳಾದ ಭೂಮಿಯನ್ನು ಕುರಿತು ಹೇಳುವ ವಾಕ್ಯವಾಗಿದೆ;) ನಕ್ಷಮಾಮಿ - ನಾನು ಕ್ಷಮಿಸುವದಿಲ್ಲವು, ಇಲ್ಲಿ ರಕ್ತವನ್ನು ಮುಟ್ಟುವದನ್ನೇ ನಿಂದಿಸಿದನಂತರ, ಅದರ ಸೇವನೆಯು ಪರಮ ದೋಷಾವಹವೆಂಬುದು ವ್ಯಕ್ತವು. ಇಲ್ಲಿ ಸ್ಪೃಶೇತ್ - ಎಂದು ಇರುವದರಿಂದ, ಕೆಲವರು ಕೀಲಾಲಂ - ಎಂದರೆ ಸಮು

(೫) ಶಾಂಡಿಲ್ಯ ಸ್ಮೃತಿ. ೨. ೫೯. (೬) ವರಾಹ ಪುರಾಣ.

**ಸುರಶ್ರೇಷ್ಠ ಯೋ ಭುಙ್ಕ್ತೇ ದ್ವಿಜಜನ್ಮವಾನ್। ಪ್ರತಿಗ್ರಾಸ ಮಯಂ ಭುಙ್ಕ್ತೇ ಕಿಲ್ಬಿಷಂ ಶ್ವಾನವಿಟ್ಸಮಮ್" "ಏಕಾದಶ್ಯಾಂ ತು ಯೋ ಭುಙ್ಕ್ತೇ ಶಕ್ತ ಸ್ಸನ್ನಿರುಪದ್ರವಃ। ಸುರಾಪಾನಸಮಂ ಪಾಪಂ ಭವೇ ತ್ತಸ್ಯ ನ ಸಂಶಯಃ। ಮದ್ಯಪಾನಾ ತ್ಸುರಶ್ರೇಷ್ಠ ಪಾತ್ಯೈವ ನರಕಂ ವ್ರಜೇತ್। ಏಕಾದಶ್ಯನ್ನಕಾಮುಸ್ತು ಪಿತೃಭಿ ಸ್ಸಹ ಮಜ್ಜತಿ"(೮) "ಅನ್ನದೋಷಾ ದಶಮನಾ ನ್ನಾನಾವಿಷಯ ದರ್ಶನಾತ್।**

---

ದ್ರದ ನೊರೆಯೆಂದು ಅರ್ಥಮಾಡಿರುತ್ತಾರೆ. ಸಮುದ್ರದ ನೊರೆಯನ್ನು ಮುಟ್ಟಕೂಡದೆಂದು ಶಾಸ್ತ್ರವಿರುತ್ತದೆಯಾದುದರಿಂದ ಹಾಗೆ ಅರ್ಥಮಾಡಿದರು. (೭) ಓ ಸುರಶ್ರೇಷ್ಠನೇ, **ಏಕಾದಶ್ಯಾಂ** - ಏಕಾದಶೀ ದಿನದಲ್ಲಿ, **ಯಃ** - ಯಾವ, **ದ್ವಿಜಜನ್ಮವಾನ್** – ದ್ವಿಜ ಜನ್ಮವನ್ನು ಹೊಂದಿರುವವನು, ಇದರಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೂ ಹೇಳಲ್ಪಟ್ಟರು, ಶೂದ್ರನು ಹೇಳಲ್ಪಡಲಿಲ್ಲವು, **ಭುಙ್ಕ್ತೇ** – ಊಟಮಾಡುವನೋ, **ಅಯಂ** - ಇವನು, **ಪ್ರತಿಗ್ರಾಸಂ** - ತುತ್ತು ತುತ್ತಿಗೂ, **ಶ್ವಾನವಿಟ್ಸಮಂ** - ನಾಯಿಯ ಅಮೇಧ್ಯಕ್ಕೆ ಸಮಾನವಾದ, **ಕಿಲ್ಬಿಷಂ** - ಪಾಪವನ್ನು, **ಭುಙ್ಕ್ತೇ** - ತಿನ್ನುತ್ತಾನೆ" ಏಕಾದಶಿಯಲ್ಲಿ, **ಶಕ್ತಸ್ಸನ್** - ಕಾಯಪುಷ್ಟಿಯುಳ್ಳವನಾಗಿಯೂ, **ನಿರುಪದ್ರವಃ** – ರೋಗಾದಿಗಳೊಂದೂ ಇಲ್ಲದವನಾಗಿಯೂ ಇರುವ, **ಯಃ** – ಯಾವನು ಎಂದರೆ ಯಾವ ದ್ವಿಜನು, **ಭುಙ್ಕ್ತೇ** – ಅನ್ನವನ್ನು ಊಟಮಾಡುವನೋ, **ತಸ್ಯ** - ಅಂತವನಿಗೆ, **ಸುರಾಪಾನ ಸಮಂ ಪಾಪಂ** - ಹೆಂಡವನ್ನು ಕುಡಿದುದಕ್ಕೆ ಸಮವಾದ ಪಾಪವು, **ಭವೇತ್**-ಉಂಟಾಗುತ್ತದೆ, **ನಸಂಶಯಃ** - ಅದರಲ್ಲಿ ಸಂದೇಹವಿಲ್ಲವು. ಓ ಸುರ ಶ್ರೇಷ್ಠನೇ, **ಮದ್ಯಪಾನಾತ್ ಪಾತ್ಯೈವ** - ಮದ್ಯಪಾನವನ್ನು ಮಾಡುವದರ ದೆಶೆಯಿಂದ ಕುಡಿದವನೊಬ್ಬನೇ, **ನರಕಂ ವ್ರಜೇತ್** - ನರಕವನ್ನು ಹೊಂದುತ್ತಾನೆ, **ಏಕಾದಶ್ಯನ್ನಕಾಮುಸ್ತು** - ಏಕಾದಶಿಯಲ್ಲಿ ಅನ್ನದಲ್ಲಿ ಅಪೇಕ್ಷೆಯುಳ್ಳವನಿಗೆ ಎಂದರೆ ಅದನ್ನು ಭೋಜನಮಾಡುವವನಿಗೆ, **ಪಿತೃಭಿಸ್ಸಹಮಜ್ಜತಿ** - ಪಿತೃಗಳೊಂದಿಗೆ ನರಕಗಳಲ್ಲಿ ಮುಳುಗುವನು" (೮) **ಅನ್ನದೋಷಾತ್** - ಆಹಾರದೋಷಗಳಿಂದಲೂ, ಈ ಆಹಾರ ದೋಷಗಳು ಆರು ವಿಧಗಳೆಂದು ಭಾವಿಸಲ್ಪಟ್ಟವೆ, ಅವು ಯಾವುವೆಂದರೆ. (೧) ಜಾತಿ, (೨) ಕ್ರಿಯಾ, (೩) ಕಾಲ, (೪) ಸಂಸರ್ಗ, (೫) ಆಶ್ರಯ, (೬) ನಿಮಿತ್ತ, ದುಷ್ಟಗಳು. ಜಾತಿ ದುಷ್ಟವಾದವು – ರಾಜಸ ತಾಮಸ ಪದಾರ್ಥಗಳು, ಮೂಲಂಗಿ, ಬೆಳ್ಳುಳ್ಳಿ, ಈರುಳ್ಳಿ, ಬಿಳೀಬದನೇಕಾಯಿ, ಹೀರೆಕಾಯಿ, ನಾಯಿಕೊಡೆ, ಕಲ್ಲಂಗಡಿ ಹಣ್ಣು ಇತ್ಯಾದಿ, (೨) ಕ್ರಿಯಾದುಷ್ಟಗಳು - ಮೈಲಿಗೆ

---

(೭) ಸನತ್ಕುಮಾರ ಸಂಹಿತೆ. (೮) ಗರುಡ ಪುರಾಣಂ.

**ದೇಹಶೌಚಾದಿ ವಿರಹಾತ್ಸಮುಲಂ ಜಾಯತೇ ಮನಃ(೯)"ಆಲಸ್ಯಾ ದನ್ನದೋ ಷಾಚ್ಚ ಮೃತ್ಯು ರ್ವಿಪ್ರಾನ್ ಜಿಘಾಂಸತಿ" ಇತ್ಯಾದಿಗಳಿಂದಲೇ ನಿಷಿದ್ಧವಾನನ್ನೆ ಯೆಲ್ಲಾವನ್ ಇರ್ವ ತೊಟ್ಟನಾರೇ ಶುದ್ಧವೂ ಮನಃಪ್ರಪಡಿ ಯನ್ನು.**

ಯಲ್ಲೂ, ಋತುಸ್ನಾನ ದಿನದಲ್ಲಿ ಭಾರ್ಯೆಯಿಂದ ಮಾಡಲ್ಪಟ್ಟ ಅನ್ನವೂ, ಪಂಚ ಸಂಸ್ಕಾರವಿಲ್ಲದ ಬ್ರಾಹ್ಮಣನಿಂದ ಮಾಡಲ್ಪಟ್ಟ ಅನ್ನವೂ, ಅಶುಚಿ ಪಾತ್ರೆಗಳಲ್ಲಿ ಮಾಡಲ್ಪಟ್ಟ ಅನ್ನವೂ, ಸ್ವಾಮಿಗೆ ನಿವೇದನವಿಲ್ಲದ ಅನ್ನವೂ, ಇತ್ಯಾದಿ (೩) ಕಾಲ ದುಷ್ಟಗಳು,—ತುಂಬಾ ಹಳೆಯದಾಗಿ ವಾಸನೆಯುಳ್ಳ ಪದಾರ್ಥಗಳು, ಕರಿದು ತುಂಬಾ ದಿನಗಳಾದ ಭಕ್ಷ್ಯಾದಿಗಳು, ಪಕ್ವಾನ್ನವು ೬ ಘಂಟೆಗಿಂತ ಹೆಚ್ಚಾದುದು, ರಾತ್ರಿ ಪಕ್ವವಾಗಿ ಬೆಳಿಗ್ಗೆ ಶೇಷವಾಗಿರುವದು ಇವೇ ಮೊದಲಾದವು. (೪) ಸಂಸರ್ಗ ದುಷ್ಟಗಳು - ಕ್ರಿಮಿ ಮತ್ತು ಕೂದಲುಗಳಿಂದ ಸೇರಿದ ಅನ್ನವು, (ಕೂದಲಿನ ಸಂಸರ್ಗವಿದ್ದರೆ ದೇವರ ತೀರ್ಥದಿಂದ ಶುದ್ಧಿಮಾಡಿ ಸ್ವೀಕರಿಸುವ ಸಂಪ್ರದಾಯ ಉಂಟು.) ಸಂನ್ಯಾಸಿಗಳು ಸ್ಪರ್ಶಿಸಿದ ಅಥವಾ ಕೊಟ್ಟ ಅನ್ನವು, ಶೂದ್ರಾದಿಗಳಿಂದ ಸ್ಪರ್ಶಿಸಲ್ಪಟ್ಟ ಅಥವಾ ದೃಷ್ಟಿಸಲ್ಪಟ್ಟ ಅನ್ನವು, ಇತ್ಯಾದಿಗಳು (೫) ಆಶ್ರಯ ದುಷ್ಟಗಳು,-ಕೆಲವು ಕಂಚಿನಲ್ಲೂ ಕಬ್ಬಿಣದಲ್ಲೂ ಇಟ್ಟ ಪದಾರ್ಥಗಳು ಕೂಡದೆಂದು ಹೇಳಲ್ಪಟ್ಟಿವೆ. ಹಾಗೆಯೇ, ಹಾಲೂ ಕರುವು ಹಾಕಿದ ಹತ್ತುದಿನಗಳೊಳಗಿನ ಹಸುವಿನದಾಗಲಿ,ಕರುವಿಲ್ಲದೆ ಅಥವಾ ಬೇರೆಕರುವಿನಿಂದ ಕರೆದಹಸುವಿನದಾಗಲಿ ದೋಷ ಯುಕ್ತವಾದುದೆಂದು ಹೇಳಲ್ಪಟ್ಟಿರುತ್ತದೆ. (೬) ನಿಮಿತ್ತದುಷ್ಟಗಳು-ಬ್ರಾಹ್ಮಣನು ವಿಕ್ರಯಿಸಿದ ಹಾಲು, ನಾಯಿ, ಕಾಗೆ, ಕೋಳಿ, ಇಲಿ, ಬೆಕ್ಕು ಮುಂತಾದವುಗಳು ಮುಟ್ಟಿದ ಆಹಾರಗಳು, ಪಾದಪ್ರಕ್ಷಾಳನ ಶೇಷೋದಕವೂ, ಪಾದಸ್ಪರ್ಶ ಆಹಾರಾದಿಗಳೂ, ಸತ್ರ, ಅರವಟ್ಟಿಗೆ ಹೋಟಲುಗಳಲ್ಲಿ ಕೊಡಲ್ಪಡುವ ಪದಾರ್ಥಗಳು ದ್ವೇಷಿಯ ಅನ್ನವು, ಕಳ್ಳತನದಿಂದ ತಂದ ಅನ್ನವು, ಚನ್ನಾಗಿ ತೊಳೆಯದ ಶಾಖ ಫಲಾದಿಗಳೂ, ಮಳೆಯನೀರು, ಇನ್ನೂ ವಿಸ್ತರವಾಗಿ ತಿಳಿಯಬೇಕಾದರೆ ಶ್ರೀ ಜನಾರ್ದನೈಯ್ಯಂಗಾರ್ರವರು ಎಲ್ಲರೂ ತಿಳಿಯುವಹಾಗೆ ಕನ್ನಡದಲ್ಲಿ ಬರೆದಿರುವ ಸತ್ಸಂಪ್ರದಾಯ ದೀಪಿಕೆಯ ಆಚಾರಕಾಂಡದಲ್ಲಿ ಕಾಣಬಹುದು. ಹೀಗೆ (೮) ಅನ್ನದೋಷಾತ್-ಅನ್ನ ದೋಷಗಳಿಂದಲೂ, ಅಶಮನಾತ್-ಶಾಂತಿಯಿಲ್ಲದೆ ಕಾಮಕ್ರೋಧಾದಿಗಳಿಗೆ ವಶವಾಗಿರುವದರಿಂದಲೂ, ನಾನಾವಿಷಯ ದರ್ಶನಾತ್-ಬಹುವಿಧಗಳಾದ ವಿಷಯಗಳನ್ನು ನೋಡುವದರಿಂದಲೂ ಎಂದರೆ ಅವುಗಳ ಅನುಭವದಿಂದಲೂ, ದೇಹ ಶೌಚಾದಿ ವಿರಹಾತ್ - ದೇಹ ನೈರ್ಮಲ್ಯಾದಿಗಳಿಲ್ಲದಿರು

(೯) ಮನು. ೫. ೩.

ವದರಿಂದಲೂ, ಇಲ್ಲಿ ಆದಿ ಶಬ್ದದಿಂದ ದೇಹಾರೋಗ್ಯ ಪಾಲನಾದಿಗಳು ವಿವಕ್ಷಿತ ಗಳು, ಇವುಗಳಿಂದೆಲ್ಲಾ ಮನಃ - ಮನಸ್ಸು. ಸಮಲಂ - ಮಲಯುಕ್ತವಾದುದಾಗಿ ದೋಷಯುಕ್ತವಾದುದಾಗಿ, ಜಾಯತೇ - ಉತ್ಪನ್ನವಾಗುತ್ತದೆ; (೯) ಆಲ ಸ್ಯಾತ್ - ನಿತ್ಯ ನೈಮಿತ್ತಿಕಾನುಷ್ಠಾನಗಳನ್ನು ಶಾಸ್ತ್ರರೀತ್ಯಾ ನಡೆಸಲು ಸೋ ಮಾರಿತನದಿಂದಲೂ, ಅನ್ನದೋಷಾಚ್ಚ - ಮೇಲೆ ವಿವರಿಸಿದ ಆಹಾರದ ದೋಷ ದಿಂದಲೂ, ಮೃತ್ಯುಃ - ಜರಾಮರಣಾದಿಗಳುಳ್ಳ ಜನ್ಮ ಸಂತತಿಯು, ವಿಪ್ರಾನ್ - ಬ್ರಾಹ್ಮಣರನ್ನು, ಜಿಘಾಂಸತಿ - ಕೊಲ್ಲುತ್ತದೆ ಎಂದರೆ ಕ್ಲೇಶಪಡಿಸುತ್ತದೆ. ಬ್ರಾಹ್ಮಣನಿಗೆ ನಿತ್ಯ ನೈಮಿತ್ತಿಕ ಪಂಚಮಹಾಯಜ್ಞಾದಿಗಳನ್ನು ಮಾಡಲು ಬೇಸರ ವಿರಕೂಡದು. ಬೇಸರವಿದ್ದರೆ ಪಾಪಗಳು ನಶಿಸದಿರುವದರಿಂದ ರೋಗಪೀಡಿತ ನಾಗುವನು. ಹೀಗೆ ಕರ್ಮನಿಷ್ಠನಾಗಿ ಉಪಾಯಾನುಷ್ಠಾನಮಾಡಿ ಸದ್ಗತಿಯನ್ನು ಹೊಂದಲು ಪೂರ್ಣಾನುಕೂಲವಿರುವದು ವಿಪ್ರಜನ್ಮವು, ಹೀಗಿದ್ದರೂ ಅಂತಹ ಸುಸಮಯವನ್ನು ಕಳೆದುಕೊಳ್ಳುತ್ತಾನಲ್ಲಾ ಎಂದು ಇಲ್ಲಿ ವಿಪ್ರಾನ್ ಎಂಬ ಪ್ರಯೋಗವು; "ಮೃತ್ಯು ಸಂಸಾರವರ್ತ್ಮನಿ" ಎಂಬಲ್ಲಿ ಹೇಳಿರುವಹಾಗೆ, ಮೃತ್ಯು ವೆಂದರೆ ಪುನಃ ಪುನಃ ಸಂಸಾರ ಯೋಗವು, ಜಿಘಾಂಸತಿ - ಕೊಲ್ಲುತ್ತದೆ.ಎಂದರೆ ನಿರತಿಶಯ ಸುಖಾನುಭವಕ್ಕೆ ಅವಕಾಶವಿಲ್ಲದೆ ಆತ್ಮಹಾನಿಯುಂಟಾಗಿ ಕ್ಲೇಶಗಳಿಗೆ ಗುರಿ ಮಾಡುತ್ತದೆಂಬ ಭಾವವು," ಇತ್ಯಾದಿಗಳಾಲೇ - ಇವೇ ಮೊದಲಾದ ಪ್ರಮಾಣಗಳಿಂದ, ನಿಷಿದ್ಧಮಾನನ್ಯೆಯೆಲ್ಲಾನ್ - ನಿಷಿದ್ಧಗಳೆಂದು ವಿಧಿಸಲ್ಪ ಟ್ಟಿರುವುವೆಲ್ಲಾ, ಇರ್ತತೋಟ್ಟಿನಾರೆ - ಈ ನಾರಾಯಣೈಕ ನಿಷ್ಠನು ಮುಟ್ಟಿ ಬಿಟ್ಟರೆ, ಶುದ್ಧಮಾಮೆನ್ರು ಪಡಿಯುನ್ರು - ಶುದ್ಧನಾಗಿ ಪರಿಗ್ರಾಹ್ಯಗಳಾ ಗುವವು ಎಂದು ಹೇಳಲ್ಪಟ್ಟಹಾಗೆ ಅಲ್ಲವು. ನಾರಾಯಣೈಕನಿಷ್ಠನಾಗಿ ಪ್ರಪದನಾನುಷ್ಠಾನಮಾಡಿದ ಮಾತ್ರದಿಂದಲೇ, ಅವನಿಗೆ ಈ ಆಹಾರ ದುಷ್ಟವಾದವೇ ಮೊದಲಾದವುಗಳನ್ನು ಆಹಾರ ಯೋಗ್ಯಗಳಾಗಿ ಮಾಡುವ ಪ್ರಭಾವ ಉಂಟೆಂಬ ಭ್ರಮೆಯು ಕೂಡದೆಂದು ಉಪದೇಶಿಸಿದರು. ಆದುದರಿಂದ "ತತ್ಸ್ಪೃಷ್ಟಮಖಿಲಂ ಶುಚಿ" ಎಂಬ ವಾಕ್ಯಕ್ಕೆ ಮೇಲೆ ಸಿದ್ಧಾಂತಿಸಿ ಹೇಳಲ್ಪಟ್ಟ ರೀತಿಯಲ್ಲಿ, ಶಾಸ್ತ್ರವಿಹಿತವಾದ ವಸ್ತುಸ್ಪರ್ಶದಲ್ಲಿ ಈತನ ಸ್ಪರ್ಶವು ಮಾಹಾತ್ಮ್ಯ ಯನ್ನುಂಟುಮಾಡುತ್ತದೆಂಬ ಅಭಿಪ್ರಾಯದಲ್ಲೇ ತಾತ್ಪರ್ಯವು ಎಂದು ಹೀಗೆ ವಿಹಗೇಂದ್ರ ಸಂಹಿತಾವಾಕ್ಯಗಳಿಗೆ ಸರ್ವಸಮಂಜಸಾರ್ಥಗಳನ್ನು ತಿಳಿಸಿ, ನಿಗಮನ ಮಾಡಿರುತ್ತಾರೆ. ಆಗಲಿ ಈ ವಿಹಗೇಂದ್ರ ಸಂಹಿತಾ ವಾಕ್ಯಗಳಿಗೆ ಇಷ್ಟುದೂರ ಅರ್ಥವ್ಯವಸ್ಥೆಯು ಏತಕ್ಕೆ? ಎಂದರೆ, ನಮ್ಮಲ್ಲೇ ಕೆಲವರು ಈ ಶ್ಲೋಕಗಳ ಸರಿ ಯಾದ ಅರ್ಥವನ್ನು ಗ್ರಹಿಸದೆ ಅಪಾರ್ಥಗಳನ್ನು ಕಲ್ಪಿಸಿರುವದರಿಂದ ಬುದ್ಧಿ

ಏತತ್ಸಂಹಿತಾ ವಾಕ್ಯಸ್ಯ ವ್ಯವಸ್ಥಾನಙ್ಗೀಕಾರೇ ಬಾಧಕಮಾಹ.

---

**ಇಷ್ಪಡಿ ವಿಷಯ ವ್ಯವಸ್ಥೈ ಪಣ್ಣಾದಪೋದು, ಪರಿಗೃಹೀತತಮಙ್ಗಳಾನ ಬಹುಶಾಸ್ತ್ರಙ್ಗಳೋಡುಮ್, ಶಿಷ್ಟಾನುಷ್ಠಾನತ್ತೋಡುಮ್, ವಿರೋಧಿಕ್ಕೈಯಾಲೇ ಅತಿವಾದಮಾತ್ರಮಾಯ್ ವಿಡುಮ್**

---

ಭ್ರಮ ಉಂಟಾಗಿ ಶಾಸ್ತ್ರ ವಿರುದ್ಧಾಚರಣೆಗೆ ಹೇತುವಾಗುತ್ತದೆಂದು ಭೀತರಾಗಿ, ಪರಮ ಕೃಪೆಯಿಂದ ಮಾಡಿದ ಉಪದೇಶವೆಂದು ಭಾವಿಸತಕ್ಕದಾಗಿರುತ್ತದೆ. ಹಾಗೆ ಭಿನ್ನಾರ್ಥಕಲ್ಪಿಸಿದವರ ದೂಷಣೆಯ ಪ್ರಕರಣವು ಇದು ಎಂದು ಭಾವಿಸಿದರೆ ಶ್ರೀ ದೇಶಿಕರವರಿಗಿರುವ ಪರಮ ದಯಾಳುತ್ವವನ್ನೂ ತಿಳಿಯದ ಅಜ್ಞಾನದ ಪ್ರಕಾಶವನ್ನು ವ್ಯಕ್ತಪಡಿಸಿಕೊಂಡಹಾಗಾಗುತ್ತದೆ. ಶ್ರೀ ದೇಶಿಕರವರೇ ಮುಂದಿನ ವಾಕ್ಯದಿಂದ ಅಷ್ಟು ದೂರ ಆ ವಾಕ್ಯಗಳಿಗೆ ವಿಷಯ ವ್ಯವಸ್ಥೆಯನ್ನು ಮಾಡಿದುದಕ್ಕೆ ಕಾರಣವನ್ನು ತಿಳಿಸುತ್ತಾರೆ.

ಈ ಸಂಹಿತಾ ವಾಕ್ಯಾರ್ಥ ವ್ಯವಸ್ಥೆಯನ್ನು ಹೀಗೆ ಅಙ್ಗೀಕರಿಸದಿದ್ದರೆ ಉಂಟಾಗುವ ಬಾಧಕಗಳನ್ನು ಹೇಳುತ್ತಾರೆ.

---

**ಇಷ್ಪಡಿ ವಿಷಯ ವ್ಯವಸ್ಥೈಪಣ್ಣಾದಪೋದು** - ಮೇಲೆ ಶ್ರಮಪಟ್ಟು ಉಪಪಾದಿಸಿ ಈ ವಾಕ್ಯಗಳು ಯಾವ ವಿಷಯಗಳನ್ನು ಬೋಧಿಸುತ್ತವೆ ಎಂದು ಅರ್ಥನಿರ್ಣಯ ರೂಪ ವ್ಯವಸ್ಥೆಯನ್ನು ಮಾಡದೆ ಹೋದರೆ, **ಪರಿಗೃಹೀತ ತಮಙ್ಗಳಾನ** - ಅತ್ಯಂತ ಉಪಾದೇಯಗಳಾದ ಎಂದರೆ ಪ್ರಮಾಣಗಳೆಂದು ನಾವು ಅಙ್ಗೀಕರಿಸಬೇಕಾಗಿರುವ, **ಬಹು ಶಾಸ್ತ್ರಙ್ಗಳೋಡುಮ್** - ತಾವು ಉದಾಹರಿಸಿರುವ ಶಾಸ್ತ್ರವು ಎಲ್ಲೋ ಕೆಲವು, ಹಾಗಲ್ಲದೆ ಇತರ ಅನೇಕ ಶಾಸ್ತ್ರಗಳಿಗೂ, **ಶಿಷ್ಟಾನುಷ್ಠಾನತ್ತೋಡುಮ್** - ಪೂರ್ವಾಚಾರ್ಯರುಗಳ ಅನುಷ್ಠಾನರೂಪವಾದ ಸತ್ಸಂಪ್ರದಾಯಕ್ಕೂ ಸಹ, **ವಿರೋಧಿಕ್ಕೈಯಾಲೇ** - ವಿರೋಧವಾಗುತ್ತದೆಯಾದುದರಿಂದ **ಅತಿವಾದಮಾತ್ರ**ವಾಗುತ್ತದೆ. ಅಂತಹ ವಿರೋಧಾಭಿಪ್ರಾಯವು (೧) ಬಹು ಶಾಸ್ತ್ರಪ್ರಮಾಣಕ್ಕೆ ವಿರುದ್ಧವಾದುದೂ ಆಗುತ್ತದೆ. (೨) ಪೂರ್ವಾಚಾರ್ಯರುಗಳ ಅನುಷ್ಠಾನಕ್ಕೂ ವಿರೋಧವಾದುದಾಗುತ್ತದೆಂಬ ಭಾವವು. ಯಾವಾಗ ಅಭಿಪ್ರಾಯವು ಇವೆರಡಕ್ಕೂ ವಿರೋಧವಾಯಿತೋ, ಆಗ ಅತಿವಾದಮಾತ್ರದಲ್ಲೇ ಅದಕ್ಕೆ ಪರಿಣಾಮವೆಂಬ ಭಾವವು. ಇಲ್ಲಿ ಬಹು ಶಾಸ್ತ್ರಪ್ರಮಾಣಗಳಿಗೆ ವಿರೋಧ ಉಂಟಾಗುತ್ತದೆಂದು ಶ್ರೀ ದೇಶಿಕರವರು ಸಙ್ಗ್ರಹವಾಗಿ ಹೇಳಿ

ದುದನ್ನು ವಿಸ್ತರಿಸಿ ಸಾರಪ್ರಕಾಶಿಕೆಯವರು ಇನ್ನೂ ಕೆಲವು ಪ್ರಮಾಣಗಳನ್ನು ಉದಾಹರಿಸುತ್ತಾರೆ. ಅವುಗಳಲ್ಲಿ ಕೆಲವು ಯಾವುವೆಂದರೆ.—

"ಕೇಶಕೀಟಾನುಸರಣಂ ನಖರೋಮಾನುಕೃಂತನಂ । ತೃಣಾಗ್ರಚ್ಛೇದನಂ ವೃಕ್ಷಗುಲ್ಮಾನಾಂ ಭೇದನಂ ವೃಥಾ ।" "ಸ್ತ್ರೀಬಾಲವೃದ್ಧಾತುರಾಣಾ ಮನ್ಯೇಷಾಂ ತಾಡನಂ ಕ್ರುಧಾ । ಪರದಾರ ಪರದ್ರವ್ಯ ಪರಾಮರ್ಶಂಚ ಕಾಮತಃ । ಅಙ್ಗುಲ್ಯಾಸ್ಫೋಟನಂ ಲೀಲಾ ಪಾಣಿತಾಳಾದಿ ಹೇಳನಮ್ । ತರ್ಜನಂ ಚೈವ ಮಾದೀನಿ ಬಹಿಷ್ಕೃತ್ಯ ಶುಭಾನುಗಃ । ಪರಾಪವಾದಂ ಪಾರುಷ್ಯಂ ವಿವಾದ ಮನೃತಂ ತಥಾ । ಅಸಚ್ಛಾಸ್ತ್ರಸ್ಯ ಪಠನಂ ಅಸದ್ಭಿಸ್ಸಹ ಭಾಷಣಂ । ಇತ್ಯಾದಿಷು ವಚೋ ಹಿತ್ವಾ ಸ್ವಾಧ್ಯಾಯಜಪತತ್ಪರಃ" "ನ ಪ್ರೇಕ್ಷೇತ ನಗ್ನಾಂ ಸ್ತ್ರಿಯಮ್" "ನೇಕ್ಷೇತೋದ್ಯಂತ ಮಾದಿತ್ಯಮ್", "ಕಪಾಲಸ್ಥಂ ಯಥಾತೋಯಂ ಶ್ವದೃತೌಚ ಯಥಾಪಯಃ । ದುಷ್ಟಂ ಸ್ಯಾತ್ಸ್ಥಾನ ದೋಷೇಣ," "ರುದ್ರಾಲಯ ಸಮೀಪಸ್ಥಂ ಶ್ಮಶಾನಾಂತರ ಮಾಸ್ಥಿತಂ । ಚಂಡಾಳಶ್ರೇಣಿ ಸಂಬಂಧಂ ನವಾರಿ ಸಮುಪಸ್ಪೃಶೇತ್" "ಏಕಪಙ್ಕ್ತ್ಯುಪವಿಷ್ಟಾನಾಂ ವಿಪ್ರಾಣಾಂ ಸಹಭೋಜನೇ । ಯದ್ಯೇಕೋಪಿ ತ್ಯಜೇತ್ಪಾತ್ರಂ ಶೇಷಮನ್ನಂ ನ ಭೋಜಯೇತ್ । ಮೋಹಾದ್ಭುಂಜೀತ ಚೇದ್ವಿಪ್ರಃ ಪಙ್ಕ್ತ್ಯಾಮುಚ್ಛಿಷ್ಟ ಭೋಜನಂ । ಪ್ರಾಯಶ್ಚಿತ್ತಂ ಚರೇದ್ವಿಪ್ರಃ ಕೃಛ್ರಂ ಸಾಂತಪನಂ ಸ್ಮೃತಮ್ । ಏಕಪಙ್ಕ್ತ್ಯಾತು ಭುಂಜಾನ ಉಚ್ಛಿಷ್ಟಂ ಸ್ಪೃಶತೇ ಯದಿ । ದ್ವಾವನ್ನಂ ವಿಸೃಜೇಯಾತಾಂ ಭುಕ್ತ್ವಾ ಚಾಂದ್ರಾಯಣಂ ಚರೇತ್ ।" "ಸಮಾನ ಪಙ್ಕ್ತಿ ಭುಂಜಾನೇಷು ವಾ, ಯತ್ರಾನುತ್ಥಾಯೋಚ್ಛಿಷ್ಟಂ ಪ್ರಯಚ್ಛೇದಾಚಾಮೇದ್ವಾಕುತ್ಸಯಿತ್ವಾವಾ, ಯತ್ರಾನ್ನಂ ದದ್ಯುರ್ಮನುಷ್ಯೈರಾಘ್ರಾತ ಮನ್ಯೈರ್ವಾ"; "ದಿವಾಕೀರ್ತ್ಯ ಮುದಿಕ್ಯಾಂಚ ಪತಿತಂ ಸೂತಿಕಾಂ ತಥಾ । ಶವಂ ತತ್ಸ್ಪೃಷ್ಟಿನಂ ಚೈವ ಸ್ಪೃಷ್ಟ್ವಾಸ್ನಾನಂ ಸಮಾಚರೇತ್ । ಅಬುದ್ಧಿ ಪೂರ್ವಕಂ ಸ್ಪರ್ಶೇ ದ್ವಯೋಸ್ಸ್ನಾನಂ ವಿಧೀಯತೇ । ತ್ರಯಾಣಾಂ ಬುದ್ಧಿ ಪೂರ್ವೇತು ತತ್ಸ್ಪೃಷ್ಟಿನ್ಯಾಯಕಲ್ಪನಾ ।" "ಶವಸ್ಪೃಷ್ಟ ತತ್ಸ್ಪೃಷ್ಟ್ಯುಪಸ್ಪರ್ಶನೇ ಸಚೇಲಮುದಕೋ ಪಸ್ಪರ್ಶನಾ ಚ್ಛುಧ್ಯೇತ್" ಇತ್ಯಾದಿ ಬಹುಶಾಸ್ತ್ರ ವಿರೋಧವುಂಟಾಗುತ್ತದೆಂದು ಉದಾಹರಿಸಿರುತ್ತಾರೆ. ಗ್ರಂಥವಿಸ್ತರ ಭಯದಿಂದ ಇವುಗಳ ಅರ್ಥವನ್ನು ಬರೆಯಲಿಲ್ಲವು.

ಮುಂದೆ ತತ್ಸಂಪ್ರದಾಯಕ್ಕೂ ವಿರೋಧವಾಗುತ್ತದೆಂದು ಹೇಳುತ್ತಾರೆ.— ಮಹಾಪ್ರಭಾವ ನಾನ - ಮೇಲೆ ಉಪಪಾದಿಸಿದ ರೀತಿಯಲ್ಲಿ ಮಹಾವೈಷ್ಣವನಾಗ ಪದ್ರುಶನನನ್ನು ಸುಷ್ಠಿಸಿ, ನ ಹಾಭಾ ನತೋತ ನ ನೆಬಿಬ ಹಿಂಗೆ ಮಹಾ

ಮಹಾಪ್ರಭಾವನಾನ ಪರನ್ಮೈಕಾಂತಿ ಪಕ್ಕಲಿಲುಮ್ ಇಶ್ಶಾಸ್ತ್ರೀಯ ನಿಯಮಮ್ ಕುಲೈಯಾದೆನ್ನು ಮಿಡಮ್, ನಾಥಮುನಿಗಳ್, ಆಳವನ್ದಾರ್, ಎಂಬೆರುಮಾನಾರ್ ಉಳ್ಳಿಟ್ಟ ಪರಮಾಚಾರ್ಯರುಗಳುಡೈಯ ಅಂತಿಮದಿವಸಾವಧಿಯಾನ. ಅನುಷ್ಠಾನಙ್ಗಳೈ ಕೇಟ್ಟು ತ್ತೆಳಿನ್ದು ಕೊಳ್‌ವದು.

---

ಪ್ರಭಾವವನ್ನುಳ್ಳ ಪರಮೈಕಾಂತಿಯು, ಪಕ್ಕಲುಮ್ - ವಿಷಯದಲ್ಲೂ, ಈ ಶಾಸ್ತ್ರೀಯ ನಿಯಮವು, ಹೀಗೆ ಶಾಸ್ತ್ರಾನುಗುಣವಾದ ಅನುಷ್ಠಾನವು, ಕುಲೆ ಯಾದೆನ್ನುಮಿಡಮ್ - ವ್ಯತ್ಯಾಸವನ್ನು ಹೊಂದುವದಿಲ್ಲವು ಅಥವಾ ನಾಶವಾಗುವ ದಿಲ್ಲವೆಂಬುದನ್ನು, ನಾಥಮುನಿಗಳು, ಆಳವಂದಾರ್, ಎಂಬೆರುಮಾನಾರ್‌ರರು, ಇವರುಗಳಲ್ಲಿ, ಉಳ್ಳಿಟ್ಟ ಪರಮಾಚಾರ್ಯರುಗಳುಡೈಯ-ಅಂತರ್ಭೂತರಾದ ಅವರ ಈಚಿನ ಶಿಷ್ಯ, ಪ್ರಶಿಷ್ಯರುಗಳೂ, ಅವರ ಶಿಷ್ಯರುಗಳೂ, ಹೀಗೆ ಕ್ರಮವಾಗಿ ಬಂದ ಪರಮಾಚಾರ್ಯರುಗಳ ; ಈಗ ಇಲ್ಲಿ ವಕ್ತೃವಾಗಿರುವವರೇ ಪರಮಾಚಾರ್ಯರುಗಳಲ್ಲಿ ಅಗ್ರಗಣ್ಯರಾಗಿರುವದರಿಂದ ಇವರನುಷ್ಠಾನವೇ ನಮಗೆ ಪರಮೋಪಾದೇಯ ವೆಂಬುದನ್ನು ಗ್ರಹಿಸತಕ್ಕದ್ದಾಗಿರುತ್ತದೆ ; ಅಂತಿಮ ದಿವಸಾವಧಿಯಾನ ಅನು ಷ್ಠಾನಙ್ಗಳೈ - ದೇಹಾವಸಾನವಾಗುವ ದಿನದವರೆಗೂ ತಪ್ಪದೆ, ಆಲಸ್ಯಾದಿಗಳೂ ಇಲ್ಲದೆ ನಿತ್ಯನೈಮಿತ್ತಿಕಾದಿಗಳೇ ಮೊದಲಾದವುಗಳನ್ನೆಲ್ಲಾ ಶಾಸ್ತ್ರೀಯನಿಯಮಾ ನುಸಾರ ಅನುಷ್ಠಿಸಿದುದನ್ನು, ಕೇಟ್ಟು-ತಮ್ಮ ತಮ್ಮ ಪ್ರಾಜ್ಞರಾದ ಆಚಾರ್ಯರುಗಳ ಮೂಲಕ ಕೇಳಿ, ತೆಳಿನ್ದು ಕೊಳ್‌ವದು - ತಿಳಿದುಕೊಳ್ಳುವದು. ಮಹಾ ಪ್ರಭಾವನಾನ-ಎಂದು ಇಲ್ಲಿ ಹೇಳಿರುವದರಿಂದ ಸಾಧಾರಣ ಮನುಷ್ಯರ ಪ್ರವೃ ತ್ತಿಯು, ಪ್ರಯೋಜನವಿಲ್ಲವೆಂಬುದು ಏರ್ಪಟ್ಟಿತು; ಅವು ಸತ್ಸಂಪ್ರದಾಯವೆನಿ ಸುವದಿಲ್ಲವು. ನಾಥಮುನಿಗಳು ದೇಹಾವಸಾನದವರೆಗೂ ಉಪಾಸನ, ಪಾಠ ಪ್ರವಚನ, ಭಗವದ್ಭಾಗವತ ಕೈಙ್ಕರ್ಯಗಳಲ್ಲೇ ತಮ್ಮ ಸ್ಥಳವಾದ ವೀರನಾರಾ ಯಣಪುರಿಯಲ್ಲೇ ವಾಸಮಾಡಿಕೊಂಡಿದ್ದರೆಂಬ ವೃತ್ತಾಂತ ಉಂಟು. ಆಳವಂ ದಾರ್ರವರು ತಾವು ನಿರಂತರ ಅನುಷ್ಠಿಸುತ್ತಿದ್ದ ಬುದ್ಧಿವಾದಗಳನ್ನೇ ಚರಮ ದಶೆ ಯಲ್ಲೂ ತಮ್ಮ ಶಿಷ್ಯರಿಗೆ ಉಪದೇಶಿಸಿರುತ್ತಾರೆ; ಅದರಲ್ಲಿ ಮುಖ್ಯವಾಗಿ ಶಾಸ್ತ್ರೀಯ ನಿಯಮನಾನುಸಾರ ಆಜ್ಞಾನುಜ್ಞಾಕೈಙ್ಕರ್ಯಗಳಲ್ಲಿ ಪ್ರವೃತ್ತಿಯು ಹೇಳ ಲ್ಪಟ್ಟಿರುತ್ತದೆ. ಗುರು ಪರಂಪರಾಸಾರದ ೯೨ನೆಯ ಪುಟ ನೋಡಿ. ಹಾಗೆಯೇ ಶ್ರೀ ಯತಿವರ್ಯರು ಆಜ್ಞಾಕೈಙ್ಕರ್ಯಗಳನ್ನು ಯಥಾಶಾಸ್ತ್ರಂ ಅನುಷ್ಠಿಸುತ್ತಾ ಇದ್ದರೆಂಬುದು ದೇಹಾವಸಾನದಿನದಲ್ಲೂ ಪ್ರಾತಸ್ಸಂಧ್ಯಾವಂದನಕಾಲದಲ್ಲಿ ಅರ್ಘ್ಯ ಕೊಡುವಾಗ ಎದ್ದು ನಿಂತುಕೊಳ್ಳಲು ಶಕ್ತಿ ಇಲ್ಲದಿದ್ದರೂ ಇಬ್ಬರು ಶಿಷ್ಯರನ್ನು

ಕರೆದು ಎಬ್ಬಿಸಿ ನಿಲ್ಲಿಸುವಹಾಗೆ ಆಜ್ಞಾಪಿಸಿ ಅರ್ಘ್ಯಪ್ರದಾನವನ್ನೂ ಗಾಯತ್ರ್ಯು ಪಸ್ಥಾನವನ್ನು ಅನುಷ್ಠಿಸದರೆಂಬ ಇತಿಹಾಸ ಉಂಟು. ಶಿಷ್ಯರಿಗೂ ಚರಮ ದಶೆಯಲ್ಲಿ ಶಾಸ್ತ್ರೀಯ ನಿಯಮಾನುಸಾರ ಪ್ರವೃತ್ತಿಯನ್ನು ಉಪದೇಶಿಸಿರುತ್ತಾರೆ. ಶಾಸ್ತ್ರೀಯನಿಯಮಸಾಧಿಕಾರದ ೧೪೩೨ ರಿಂದ ೧೪೪೫ ನೆಯ ಪುಟಗಳನ್ನು ಪರಾಂಬರಿಸಿ.

ಈಚಿನ ಆಚಾರ್ಯರುಗಳಲ್ಲಿ ಕೆಲವರು, ಮಹಾ ಪರವೈಕಾಂತಿಯಾಗಿ ಪ್ರಪನ್ನನಾಗಿ ಜ್ಞಾನನಿಷ್ಠೆ ಇರುವವನಿಗೆ ವರ್ಣಾಶ್ರಮ ಧರ್ಮಗಳನ್ನನುಸರಿಸಿದ ನಿತ್ಯ ನೈಮಿತ್ತಿಕಾದಿ ಶಾಸ್ತ್ರೀಯ ನಿಯಮನವು ಅನಾವಶ್ಯಕವೆಂದು ಅಭಿಪ್ರಾಯ ಪಡುವರು. ಈ ಅಭಿಪ್ರಾಯವು ಅದ್ವೈತಿಗಳಭಿಪ್ರಾಯಕ್ಕೆ ಸಮಾನವಾದುದಾಗಿ ಶ್ರೀ ಗೀತಾಚರಮ ಶ್ಲೋಕಕ್ಕೆ, ಈ ಅದ್ವೈತಿಗಳು ಹೇಳುವ ಅಭಿಪ್ರಾಯವನ್ನನುಸರಿಸಿರುವದಾಗಿರುವದರಿಂದ, ಪ್ರಾಸಙ್ಗಿಕವಾಗಿ ಆ ಅಭಿಪ್ರಾಯಗಳು ಸರಿಯಲ್ಲವೆಂದು ಉಪದೇಶಿಸುತ್ತಾರೆ. ಅವರುಗಳ ಪೂರ್ವಪಕ್ಷ ಹೇಗೆಂದರೆ, "ಲಿಪ್ಯಂತೇ ನ ಚ ಪಾಪೇನ ವೈಷ್ಣವಾ ವೀತಕಲ್ಮಷಾಃ। ಪುನಂತಿ ಸಕಲಂ ಲೋಕಂ ಸಹಸ್ರಾಂಶು ರಿವೋದಿತಃ" ಸಾರ ವಿವರಣೆಯವರು, ಈ ಶ್ಲೋಕದ ಪೂರ್ವಾರ್ಧವನ್ನು "ಲಿಪ್ಯತೇ ನ ಸಪಾಪೇನ ವೈಷ್ಣವೋ ವೀತಕಲ್ಮಷಃ" ಎಂದು ಏಕವಚನದಲ್ಲಿ ಉದಾಹರಿಸಿರುತ್ತಾರೆ, ಅರ್ಥಭೇದವಿಲ್ಲವು. ವೈಷ್ಣವನಾದ ಪ್ರಪನ್ನನು ಸರ್ವಪಾಪಗಳಿಂದಲೂ ವಿನಿರ್ಮುಕ್ತನಾಗಿರುವದರಿಂದ, ಅವನಿಗೆ ಪಾಪವು ಲೇಪಿಸುವದಿಲ್ಲವು, ಆತನು ಉದಿಸಿದ ಸೂರ್ಯನೋಪಾದಿಯಲ್ಲಿ ಸಕಲ ಲೋಕವನ್ನು ಪವಿತ್ರೀ ಕರಿಸುವನೆಂದು" ಹೇಳಿರುವದರಿಂದ ಆತನನಿಗೆ ಶಾಸ್ತ್ರವಶ್ಯತ್ವವು ಏಕೆ? ಅದೂ ಅಲ್ಲದೆ ಗೀತೆಯಲ್ಲಿ "ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ। ಬುದ್ಧೌ ಶರಣ ಮನ್ವಿಚ್ಛ ಕೃಪಣಾಃ ಫಲಹೇತವಃ" (ಗೀ ೨-೪೯)ಬುದ್ಧಿ ಯೋಗಕ್ಕಿಂತ ಕರ್ಮಾನುಷ್ಠಾನವು ಅವರವೆಂದರೆ ನಿಕೃಷ್ಟವೆಂದು ಹೇಳಿರುತ್ತದೆಯಲ್ಲ? ಎಂಬಾಕ್ಷೇಪಗಳು. ಹಾಗೆಯೇ ಚರಮ ಶ್ಲೋಕದಲ್ಲಿ "ಸರ್ವಧರ್ಮಾನ್ ಪರಿತ್ಯಜ್ಯ" ಎಂದು ಇರುವದರಿಂದಲೂ ಶಾಸ್ತ್ರಾನುಷ್ಠಾನವು ಪರವೈಕಾಂತಿಯಾದ ಜ್ಞಾನಿಗೆ ಅನಾವಶ್ಯಕವು; "ಲೋಕಸಙ್ಗ್ರಹಮೇವಾಪಿ ಸಂಪಶ್ಯನ್" (ಗೀ ೩-೨೦) ಎಂಬಲ್ಲಿ ಪ್ರಪನ್ನನಾದ ನೀನು ಮಾಡಿದ ಕರ್ಮತ್ಯಾಗವನ್ನು ನೋಡಿ, ಲೋಕದ ಜನರೂ ಕರ್ಮಭ್ರಷ್ಟರಾಗುವದರಿಂದ, ಅದಕ್ಕಾಗಿ ನೀನು ಕರ್ಮಮಾಡತಕ್ಕದ್ದು ಎಂದು ಹೇಳಿರುವದರಿಂದ ಜ್ಞಾನಿಯಾದ ಪ್ರಪನ್ನನಿಗೆ ಅನಾವಶ್ಯಕವೆಂಬುದು ಸಿದ್ಧವು; ಹೀಗೆ ಇಂತಹ ಶ್ಲೋಕಗಳಿಗೆಲ್ಲಾ ಅಪಾರ್ಥವನ್ನು ಕಲ್ಪಿಸಿ ಆಕ್ಷೇಪಿಸಿದರೆ, ಅದಕ್ಕೆ ಸಮಾಧಾನವನು ಮುಂದೆ ಹೇಳು

**ಪ್ರಪನ್ನಾನಾಮಪಿ ಯಾವಚ್ಛರೀರ ಪಾತಂ ಶಾಸ್ತ್ರವಶ್ಯತ್ವ ಮಾವಶ್ಯಕಮ್**

**ವೇದವೈದಿಕ ಶಾಸ್ತ್ರಙ್ಗಳಿಲ್ಸೊಲ್ಲುಗಿರ ನಿಯಮಙ್ಗಳೈ ಬಾಹ್ಯರುಂ ಕುದೃಷ್ಟಿಗಳುಂ ಭ್ರಾನ್ತಿಯಾಲೇ ವಿಡುಗಿರವಿಡಮ್ ತಾಮಸತ್ಯಾಗಮೆನ್ರು,**

ತ್ತಾರೆ. ಈ ಆಕ್ಷೇಪಗಳು ಸರಿಯಲ್ಲವೆಂದು ಮುಂದೆ ಬಹು ನಿಪುಣವಾಗಿ ಉಪಪಾದಿಸಿ, ವರ್ಣಾಶ್ರಮಾದಿ ಧರ್ಮಾನುಷ್ಠಾನಗಳನ್ನು ಶಾಸ್ತ್ರೀಯನಿಯಮಾನುಸಾರ ನಡೆಸಲೇ ಬೇಕೆಂದು ಹೇಳಿ, ಉಲ್ಲಂಘಿಸಿದರೆ ಭಗವನ್ನಿಗ್ರಹಕ್ಕೆ ವ್ಯರ್ಥವಾಗಿ ಪಾತ್ರರಾಗುತ್ತಾರಲ್ಲಾ, ಎಂಬ ಪರಿತಾಪದಿಂದ ಪರಮ ಹಿತೋಕ್ತಿರೂಪದಲ್ಲಿ ಮುಂದೆ ತಿಳಿಸುತ್ತಾರೆ. ಹಾಗೆ ತಿಳಿಸುವಾಗ ಶ್ರೀಕೃಷ್ಣ ಭಗವಾನರವರ ಸ್ವೋಕ್ತಿಯಿಂದಲೇ ವ್ಯಕ್ತವೆಂಮ ಆ ಪ್ರಮಾಣವನ್ನೇ ಉದಾಹರಿಸಿ ಉಪದೇಶಿಸುತ್ತಾರೆ.—ಆದುದರಿಂದ ಮೇಲೆ ಪೂರ್ವಪಕ್ಷಿಗಳು ಉದಾಹರಿಸಿದ ಮೂರು ಶ್ಲೋಕಗಳ ಸರಿಯಾದ ತಾತ್ಪರ್ಯವೇನೆಂದು ತಿಳಿಯದೇ ಇರುವದರಿಂದುಂಟಾದ ಪೂರ್ವಪಕ್ಷವೆಂದು ಅಪ್ಪಣೆ ಕೊಡಿಸುತ್ತಾರೆ.

**ಪ್ರಪನ್ನರಿಗೂ ಕೂಡ ದೇಹಾವಸಾನದವರೆಗೂ ಶಾಸ್ತ್ರೋಕ್ತ ವರ್ಣಾಶ್ರಮಧರ್ಮಗಳು ಆವಶ್ಯಕವು.**

**ವೇದವೈದಿಕ ಶಾಸ್ತ್ರಙ್ಗಳಿಲ್**-ವೇದಶಾಸ್ತ್ರ ಇದರಲ್ಲೇ ಉಪನಿಷತ್ತುಗಳೂ ಸೇರಿದವು, **ವೈದಿಕ ಶಾಸ್ತ್ರಙ್ಗಳಿಲ್** - ವೈದಿಕವೆಂದರೆ ವೇದಸಂಬಂಧವಾದುದು, ಸ್ಮೃತಿಗಳು ವೇದೋಪಬೃಹ್ಮಣ ರೂಪಗಳಾದ ಬ್ರಹ್ಮಸೂತ್ರ, ಧರ್ಮಶಾಸ್ತ್ರ, ಇತಿಹಾಸ, ವಿಷ್ಣುಪುರಾಣ ಗೀತಾಶಾಸ್ತ್ರ ಮೊದಲಾದವುಗಳಲ್ಲಿ **ಚೊಲ್ಲುಗಿರ ನಿಯಮಙ್ಗಳೈ** - ಹೇಳುವ ವಿಧಿ ನಿಷೇಧರೂಪಗಳಲ್ಲಿರುವ ಶಾಸನಗಳನ್ನು, **ಬಾಹ್ಯರುಮ್** - ವೇದಬಾಹ್ಯರು, ವೇದಗಳನ್ನು ಪ್ರಮಾಣವೆಂದು ಭಾವಿಸದೇ ಇರುವರನ್ನೂ, **ಕುದೃಷ್ಟಿಗಳುಮ್** - ವೇದಗಳನ್ನು ಪ್ರಮಾಣವೆಂದೇನೋ ಭಾವಿಸಿ ಅವುಗಳಿಗೆ ಪರಸ್ಪರ ವಿರೋಧಉಂಟಾಗುವಹಾಗೆ ಅಪಾರ್ಥಗಳನ್ನೂ ಕಲ್ಪಿಸುವರನ್ನೂ, (ಇವರುಗಳನ್ನು ೧೭ ಪಂಗಡವಾಗಿ ನಮ್ಮ ಆಳ್ವಾರ್ ಆಚಾರ್ಯರುಗಳು ವಿಭಾಗಿಸಿರುತ್ತಾರೆ. ೨೦೯-೨೨೩ನೆಯ ಪುಟಗಳನ್ನು ನೋಡಿ,) **ಭ್ರಾಂತಿಯಾಲೇ** - ಶಾಸ್ತ್ರಜ್ಞಾನವಿಲ್ಲದ ಅಜ್ಞಾನ ವಿಜೃಂಭಣೆಯಿಂದ, ವಿಡುಗಿರ ವಿಡಂ - ಬಿಡುವ ಸಂದರ್ಭವನ್ನು, ತಾಮಸತ್ಯಾಗಮೆನ್ರು - ತಾಮಸ ಗುಣ ಪ್ರಾಚುರ್ಯ ರೂಪತ್ಯಾಗವೆಂದು, "ನಿಯತಸ್ಯತು" ಎಂಬ ಶ್ಲೋಕದಲ್ಲಿ, ಗೀತಾಚಾರ್ಯರಾದ ಶ್ರೀಕೃಷ್ಣಭಗವಾನರವರು, ಅರುಳಿಚ್ಚೆಯ್ದಾನ್-ಪರಮಾಕೃಪಯಾ



(೧)"ನಿಯತಸ್ಯ ತು ಸನ್ನ್ಯಾಸಃ ಕರ್ಮಣೋ ನೋಪಪದ್ಯತೇ । ಮೋಹಾ ತ್ತಸ್ಯ ಪರಿತ್ಯಾಗ ಸ್ತಾಮಸಃ ಪರಿಕೀರ್ತಿತಃ" ಎಂಬ ಗೀತಾಶ್ಲೋಕತ್ತಾಲೇ ಯಿರುಳಿ

ತಾವೇ ಉಪದೇಶಿಸಿರುತ್ತಾರೆ; ಅಂತಹ ತ್ಯಾಗವನ್ನು ತಾವೇ ನಿಂದಿಸಿರುತ್ತಾರೆಂಬ ಭಾವವು, ಆದುದರಿಂದ ವಿಹಿತ ಕರ್ಮಗಳು ಬಿಡತಕ್ಕದ್ದಲ್ಲವೆಂಬ ತಾತ್ಪರ್ಯವು. ಆ ಶ್ಲೋಕತಾತ್ಪರ್ಯವೇನೆಂದರೆ. (೧) ನಿಯತಸ್ಯ ತು ಕರ್ಮಣಃ- ಈ ಈ ವರ್ಣಾಶ್ರಮಾಧಿಕಾರಿಗಳಿಗೆ ಈ ಈ ಕರ್ಮಗಳು, ಈ ಈ ನಿತ್ಯನೈಮಿತ್ತಿಕಾನುಷ್ಠಾನಗಳೆಂದೂ, ಈ ದೇಹವಿರುವತನಕ ಕ್ಲಿಪ್ತವಾದವೆಂದು ಶಾಸ್ತ್ರಗಳಲ್ಲಿ ನಿಯತವಾಗಿ ಹೇಳಿರುವ ಕರ್ಮಗಳ, ಸನ್ನ್ಯಾಸಸ್ತು - ಪರಿತ್ಯಾಗವಾದರೋ, ನೋಪಪದ್ಯತೇ - ಜನ್ಮತಃ ಶರೀರಕ್ಕೆ ಅಂಟಿದುದಾಗಿ ಬಂದಿರುವದರಿಂದ ಶರೀರವಿರುವವರಿಗೂ ಎಂದಿಗೂ ಉಂಟಾಗಲಾರದು, ಮೋಹಾತ್ - ಅಂತಹ ಕರ್ಮಗಳು ಬಂಧಕಗಳು ಎಂಬ ಅಜ್ಞಾನದಿಂದ, ತಸ್ಯಪರಿತ್ಯಾಗಃ - ಅಂತಹ ವಿಹಿತ ವರ್ಣಾಶ್ರಮೋಚಿತ ಕರ್ಮದ ಪರಿತ್ಯಾಗವು, ತಾಮಸಃ ಪರಿಕೀರ್ತಿತಃ - ತಾಮಸವೆಂದು ಶಾಸ್ತ್ರದಲ್ಲಿ ಹೇಳಲ್ಪಟ್ಟಿರುತ್ತದೆ. ನಿತ್ಯನೈಮಿತ್ತಿಕಾನುಷ್ಠಾನಗಳು ಬಂಧವಿಮೋಚನೆಗೆ ಸಾಧಕಗಳೆಂದು, "ಅವಿದ್ಯಯಾ ಮೃತ್ಯುಂತೀರ್ತ್ವಾ ವಿದ್ಯಯಾ ಮೃತ ಮಶ್ನುತೇ" ಬ್ರಹ್ಮವಿದ್ಯೆಗೆ ನಿತ್ಯನೈಮಿತ್ತಿಕಕರ್ಮಾನುಷ್ಠಾನಗಳು ಸಹಾಯಭೂತಗಳೆಂದು ಎಂದರೆ ಅಙ್ಗಗಳೆಂದು "ಸಹಕಾರಿತ್ವೇನ" ಎಂಬ ಸೂತ್ರದಲ್ಲಿ ಹೇಳಲ್ಪಟ್ಟಿರುತ್ತದೆ. ಕರ್ಮ ಜ್ಞಾನಾನುಷ್ಠಾನಗಳಿಂದ, "ಶುದ್ಧ ಭಾವಂಗತಃ" ಪರಿಶುದ್ಧ ಮನಸ್ಕನಾಗಿ, "ಭಕ್ತ್ಯಾ ಶಾಸ್ತ್ರಾದ್ವೇದ್ಮಿಜನಾರ್ದನಂ" ಬ್ರಹ್ಮವಿದ್ಯಾ ಶಾಸ್ತ್ರಗಳಲ್ಲಿ ಹೇಳಿರುವಹಾಗೆ ಭಕ್ತಿಯೋಗದಿಂದ ಜನಾರ್ದನನನ್ನು ಸಾಕ್ಷಾತ್ಕರಿಸುವೆನೆಂಬ ಅಮೋಘವಾದ ಸಂಜಯವಾಕ್ಯದಿಂದಲೂ ವ್ಯಕ್ತವು, (ಭಾರ. ಉ. ೬೮-೫) ಇದೂ ಅಲ್ಲದೆ ಗೀತೆಯ "ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ" (ಗೀ. ೧೮. ೪೫.) ಎಂಬ ಶ್ಲೋಕದಿಂದಲೂ "ಯಜ್ಞ ದಾನ ತಪಃ ಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್" (ಗೀ. ೧೮. ೪) ಎಂಬಲ್ಲೂ ಸಹ, ಸ್ವಕೀಯ ವರ್ಣಾಶ್ರಮೋಚಿತ ವಿಹಿತ ಕರ್ಮಾನುಷ್ಠಾನಗಳ ಆವಶ್ಯಕತೆಯು ವ್ಯಕ್ತವು. ಹಾಗೆಯೇ "ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ" (ಗೀ.೧೮-೪೬) ಎಂಬಲ್ಲೂ ವರ್ಣಾಶ್ರಮ ಧರ್ಮಗಳು ಮುಖ್ಯವಾಗಿ ಅನುಷ್ಠೇಯಗಳು; ಮತ್ತು "ಶ್ರುತಿ ಸ್ಮೃತ್ಯುದಿತಂ ಕರ್ಮ ಮನಸಾಪಿ ಚ ಯೋ ನರಃ । ಸಮುಲ್ಲಂಘ್ಯ ಪ್ರವರ್ತಂತೇ ನ ಭಕ್ತಾ ಮಮ ಭಾಮಿನಿ" ಎಂದು ವರ್ಣಾಶ್ರಮ ಧರ್ಮೋ

(೧) ಗೀ. ೧೮. ೭,

**ಚೈಯ್‌ದಾನ್. ಕುಟುಂಬಭರಣಾದಿಗಳುಕ್ಕಲೈನ್ನು ಸನ್ನ್ಯಾಸಾದಿಗಳೈಪತ್ತು ನಾರ್‌ಪ್ಪೋಲೆ, ದುಃಖರೂಪಙ್ಗಳಾನ ಪ್ರವೃತ್ತಿಗಳುಕ್ಕು ಚೊಲ್ಲಿಪ್ಪಿ ವಿಡುಗಿರ**

ಲ್ಲಂಘನ ಮಾಡುವವರು ನನ್ನ ಭಕ್ತರಲ್ಲವೆಂದು ಸ್ವಾಮಿಯೇ ತನ್ನ ಪತ್ನಿಯಾದ ಭೂಮಿದೇವಿಗೆ ವರಾಹ ಪುರಾಣದಲ್ಲಿ ಹೇಳಿರುತ್ತಾರೆ. "ಯಸ್ತು ಭೋಗತಯಾ ವಿಷ್ಣೋಃ ಸ್ವಕೃತ್ಯಂ ಕುರುತೇ ಸದಾ। ಸಭವೇತ್ಪರಮೈಕಾಂತೀ ಮಹಾಭಾಗವತೋತ್ತಮಃ। ಯಸ್ತ್ವನ್ಯೈ ವೈಷ್ಣವಂ ಲಿಙ್ಗಂ ಧೃತ್ವಾಪಿ ತನುಸಾವೃತಃ। ತ್ಯಜೇತ್ತು ವೈಷ್ಣವಂ ಕರ್ಮ ಸೋಽಪಿ ಪಾಷಂಡತಾಂ ವ್ರಜೇತ್" ಎಂಬ, "ವರ್ಣಾಶ್ರಮಾಚಾರವತಾ ಪುರುಷೇಣ ಪರಃ ಪುಮಾನ್। ವಿಷ್ಣುರಾರಾಧ್ಯತೇ ಪನ್ಥಾ ನಾನ್ಯಸ್ತತ್ತೋಷಕಾರಕಃ" ಎಂಬ ಪ್ರಮಾಣಗಳು ಅನುಸಂಧೇಯಗಳು. ಆದುದರಿಂದ ನಿತ್ಯನೈಮಿತ್ತಿಕಾನುಷ್ಠಾನ ಕರ್ಮತ್ಯಾಗವು ಸರ್ವಾತ್ಮನಾ ಕೂಡದೆಂದು ಅವುಗಳ ಆವಶ್ಯಕತೆಯು ಮುಖ್ಯವಾಗಿ ಈ ಶ್ಲೋಕದಲ್ಲಿ ಉಪದೇಶಿಸಲ್ಪಟ್ಟಿದ್ದರೂ, ಪೂರ್ವಾಪರ ಸಾಮಂಜಸ್ಯವನ್ನು ನೋಡದೆ, ಸರ್ವಧರ್ಮಾನ್ ಪರಿತ್ಯಜ್ಯ ಎಂಬುದಕ್ಕೆ ಅಜ್ಞಾನುಜ್ಞಾ ಕೈಙ್ಕರ್ಯಗಳ ತ್ಯಾಗವೆಂದು ಅರ್ಥಮಾಡಿರುವದು ಆಶ್ಚರ್ಯವು. ಶಾಸ್ತ್ರವಶ್ಯತೆ ಆವಶ್ಯಕವೆಂಬುದು ಶಾಸ್ತ್ರೀಯನಿಯಮನಾಧಿಕಾರದಲ್ಲಿ ವ್ಯಕ್ತವು, ಗಳ೨೧ ಮತ್ತು ೧೪೬ನೆಯ ಪುಟಗಳನ್ನು ನೋಡಿ. ಶ್ರುತಿಯೂ ಕೂಡ "ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ। ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ" ಎಂದು ವಿಹಿತ ಕರ್ಮಗಳನ್ನು ಮರಣಾವಧಿ ಮಾಡತಕ್ಕದ್ದೆಂದು ವಿಧಿಸಿ, ಅನಂತರ ಇಂತಹ ಅನುಷ್ಠಾನವು ಕರ್ಮ ಕರ್ತೃತ್ವ ಫಲತ್ಯಾಗಗಳೊಂದಿಗೆ ಅನುಷ್ಠಿಸಲ್ಪಡುವದರಿಂದ ಮೋಕ್ಷಾರ್ಥಿಗೆ ಬಂಧಕವಲ್ಲವೆಂದು ಹೇಳಿರುತ್ತದೆ. ಇಲ್ಲಿ ತಾಮಸತ್ಯಾಗಕ್ಕೆ ಅರ್ಥಹೇಳಿ, ಮುಂದಿನ ಎರಡು ಶ್ಲೋಕಗಳಿಂದಲೂ ರಾಜಸ, ಸಾತ್ವಿಕತ್ಯಾಗ ಶಬ್ದಗಳಿಗೆ ಗೀತಾ ಪ್ರಮಾಣಮೂಲಕ ಅರ್ಥವೇನೆಂಬುದನ್ನು ಮುಂದೆ ಉಪದೇಶಿಸುತ್ತಾರೆ.—ಕುಟುಂಬ ಭರಣಾದಿಗಳಕ್ಕಲೈನ್ನು - ಹೆಂಡತಿ ಮಕ್ಕಳ ಸಂರಕ್ಷಣೆಯೇ ಮೊದಲಾದವು ದುಃಖಕರವೆಂದು ಭಾವಿಸಿ, ಇಲ್ಲಿ ಆದಿ ಪದದಿಂದ, ಅದಕ್ಕೆ ಬೇಕಾದ ದ್ರವ್ಯಾರ್ಜನೆ, ಅದಕ್ಕಾಗಿ ಕಾಯಕ್ಲೇಶ, ವ್ಯಾಧಿ, ವಿಯೋಗಾದಿಗಳ ಸಂದರ್ಭದಲ್ಲಿ ದ್ರವ್ಯವ್ಯಯ ದೇಹಾಸೌಖ್ಯಾದಿಗಳು ಸಙ್ಗ್ರಹಿಸಲ್ಪಟ್ಟವು ;. ಸನ್ನ್ಯಾಸಾದಿಗಳೈ ಪತ್ತುನಾರ್‌ಪ್ಪೋಲೆ - ಸನ್ಯಾಸವೇನು, ಆದಿಶಬ್ದದಿಂದ ಬ್ರಹ್ಮಚರ್ಯವನ್ನೇನು, ಇವುಗಳನ್ನು ಅವಲಂಬಿಸುವರ ಹಾಗೆ, ದುಃಖ ರೂಪಙ್ಗಳಾನಪ್ರವೃತ್ತಿಗಳುಕ್ಕು - ಕಷ್ಟಸಾಧ್ಯವಾದುದರಿಂದ ದೇಹಕ್ಲೇಶಕರಗಳಾದ ಪ್ರವೃತ್ತಿಗಳಿಗೆ, ಚೊಲ್ಲಿಪ್ಪಿ - ಅಂಜಿಕೆಯಿಂದ, ಸೋಮಾರಿ

**ವಿಡವುಮ್ ರಾಜಸತ್ಯಾಗಮೆನ್ನುಮಿಡತ್ತೈ (೨) "ದುಃಖಮಿತ್ಯೇವ ಯಃ ಕರ್ಮ ಕಾಯಕ್ಲೇಶ ಭಯಾತ್ತ್ಯಜೇತ್ । ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗ ಫಲಂ ಲಭೇತ್" ಎನ್ರು ಅರುಳಿಚ್ಚೆಯ್‌ದಾನ್.**

---

ತನದಿಂದ, ವಿಡುಗಿರ ವಿಡವುಮ್ - ನಿತ್ಯ ನೈಮಿತ್ತಿಕಾದಿ ವಿಹಿತ ಕರ್ಮಗಳನ್ನು ತ್ಯಜಿಸುವ ಪ್ರಕರಣವನ್ನು, ರಾಜಸತ್ಯಾಗಮೆನ್ನುಮಿಡತ್ತೈ - ರಾಜಸತ್ಯಾಗವೆನ್ನಲ್ಪಡುತ್ತದೆಂಬುವ ಸಂದರ್ಭವನ್ನು "ದುಃಖಮಿತ್ಯೇವ" ಎಂಬ ಶ್ಲೋಕದಲ್ಲಿ ಗೀತಾಚಾರ್ಯನಾದ ಶ್ರೀಕೃಷ್ಣಭಗವಾನರವರು ಅರುಳಿಚ್ಚೆಯ್‌ದಾನ್-ಕೃಪಯಾ ಉಪದೇಶಿಸಿರುತ್ತಾರೆ. ಈ ಶ್ಲೋಕ ತಾತ್ಪರ್ಯವೇನೆಂದರೆ. (೨) **ಯಃ**-ಯಾವನು, **ಕರ್ಮ** - ಮೋಕ್ಷದಾಯಕವಾದ ಉಪಾಸನವನ್ನೂ, ಅದಕ್ಕಂಗವಾಗಿರುವ ವರ್ಣಾಶ್ರಮಾದಿ ಅಜ್ಞಾರೂಪ ನಿತ್ಯನೈಮಿತ್ತಿಕ ಕರ್ಮವನ್ನೂ, **ದುಃಖಮಿತ್ಯೇವ** - ದ್ರವ್ಯಾರ್ಜನಾದಿ ದುಃಖಯುಕ್ತವಾದುದೆಂದೂ, **ಕಾಯಕ್ಲೇಶಭಯಾತ್** - ಬಹುದೇಹಾಯಾಸವೇನು, ಅದರಿಂದುಂಟಾಗುವ ಕ್ಲೇಶವೇನು, ಇವುಗಳ ಭಯದಿಂದ, **ತ್ಯಜೇತ್** - ಅನುಷ್ಠಿಸದೇ ಬಿಟ್ಟು ಬಿಡುವನೋ, **ಸಃ** - ಅಂತವನು, **ರಾಜಸತ್ಯಾಗಂ ಕೃತ್ವಾ** - ಇಂತಹ ತ್ಯಾಗವು ರಾಜಸ ತ್ಯಾಗವು, ಅಂಥಾದ್ದನ್ನು ಮಾಡಿದವನಾಗಿ, **ತ್ಯಾಗಫಲಂ** - ತಾನು ಮಾಡಿದುದು ಶಾಸ್ತ್ರವಿರುದ್ಧವಾದುದೆಂಬ ಜ್ಞಾನ ಉಂಟಾಗುವದೇನು, ಧ್ಯಾನ ನಿಷ್ಪತ್ತಿಯೇನು, ಮತ್ತು ಶಾಸ್ತ್ರದಲ್ಲಿ ವಿಹಿತತ್ಯಾಗಕ್ಕೆ ಫಲವಾಗಿ ಮೋಕ್ಷಪ್ರಾಪ್ತಿಯೇನು, ಇಂತಹ ಪರಂಪರಾ ರೂಪತ್ಯಾಗ ಫಲವನ್ನು **ನಲಭೇತ್** - ಹೊಂದುವದಿಲ್ಲವು" ಎಂಬುದು ಈ ಶ್ಲೋಕತಾತ್ಪರ್ಯವು. ಅಗ್ನಿಸಾಕ್ಷಿಯಾಗಿ ವಿವಾಹಮಾಡಿಕೊಂಡ ಸಹಧರ್ಮ ಚಾರಿಣಿಯನ್ನೂ ಮಕ್ಕಳನ್ನೂ ಸಲಹುವ ಕ್ಲೇಶಗಳಿಂದ ತಪ್ಪಿಸಿಕೊಳ್ಳುವದಕ್ಕಾಗಿಯೇ, ಅವರುಗಳನ್ನು ತ್ಯಜಿಸಿ ಯತ್ಯಾಶ್ರಮುವನ್ನು ಕೆಲವರು ಅವಲಂಬಿಸಿರುವದನ್ನು ನೋಡಿ, ಅಂತಹ ಪ್ರವೃತ್ತಿಯು ಸರಿಯಲ್ಲವೆಂದು ತಿಳಿಸುವದಕ್ಕಾಗಿ "ಕುಟುಂಬ ಭರಣಾದಿಗಳಕ್ಕೈಲೈನ್ನು ಸನ್ನ್ಯಾಸಾದಿಗಳ್ಳೈ ಪತ್ತುವಾರ್‌ಪೋಲೆ" ಎಂಬ ಪ್ರಯೋಗವು. ಸನ್ನ್ಯಾಸಕ್ಕೆ ಐಹಿಕಗಳಲ್ಲಿ ವೈರಾಗ್ಯವೇ ಮುಖ್ಯವಾದುದರಿಂದ ಅಂತಹ ಪರಮ ವೈರಾಗ್ಯದಿಂದಿರುವವನು ಸನ್ಯಾಸಿಗಿಂತ ಮೇಲಾದವನು. ಸ್ವತಃ ವೈಶ್ವದೇವಾದಿ ನಿತ್ಯಕರ್ಮಗಳನ್ನು ನಡೆಸಿ ಪವಿತ್ರವಾದ ಅನ್ನವನ್ನು ಸೇವಿಸುತ್ತಾ, ಕೂಡಿದಮಟ್ಟಿಗೆ ಇತರರಿಗೂ ಉಪಯೋಗವಾಗಿ ಅಗ್ನಿಸಾಕ್ಷಿಯಾಗಿ ಮಾಡಿದ ಪ್ರತಿಜ್ಞೆಗೆ ವಿರೋಧವಿಲ್ಲದೆ ನಡೆದುಕೊಂಡು, ಯತಿಗಳ ವೈರಾಗ್ಯಕ್ಕೂ ಹೆಚ್ಚಾದ ವೈರಾಗ್ಯದಿಂದ ಇರಬಹುದು.

---

(೨) ಗೀ. ೧೮. ೮.

## ಸಾತ್ವಿಕ ತ್ಯಾಗ ಶಬ್ದಾರ್ಥಃ.

ತನ್ನಧಿಕಾರಾನುರೂಪವಾಗ ತ್ತವಿರವೇಣ್ಡುವೈತ್ತವಿರ್‌ನ್ದು, ವೇಣ್ಡುವ ವೈ ಶೆಯ್ಯುಮಿಡತ್ತಿಲ್, ನಾ‌ ಸ್ವತಂತ್ರನಾಯ್ ಶೆಯ್‌ಗಿರ್ರೇ ಎನ್ರುಮ್, ಎನಕ್ಕು ಇಕ್ಕರ್ಮಙ್ಗಳ್ ಶೇಷಭೂತಮೆನ್ರುಮ್, ಎನಕ್ಕು ಇನ್ನ ಫಲತ್ತುಕ್ಕು ಇದು ತಾನೇ ಸಾಧನಮೆನ್ರುಂ,ಪಿರಕ್ಕುಂ ನಿನವೈ ಮಾತ್ತಿ, ಸರ್ವೇಶ್ವರ ಶೆಯ್

---

ಸ್ವಾಮಿ ದೇಶಿಕರವರೇ ಇಂತಹ ಗೃಹಸ್ಥಾಶ್ರಮಿಗೆ ಸರ್ವೋತ್ಕೃಷ್ಟ ನಿದರ್ಶನವು. ಆದುದರಿಂದಲೇ ಶ್ರೀ ವೇದವ್ಯಾಸರು ಈ ಗೃಹಸ್ಥಾಶ್ರಮವನ್ನು "ಮಹಾಶ್ರಮ"ವೆಂದು ಕೊಂಡಾಡಿರುತ್ತಾರೆ. ಮುಂದೆ ಶಾಸ್ತ್ರ ವಿಹಿತ ನಿತ್ಯನೈಮಿತ್ತಿಕ ಕರ್ಮಗಳ ಕರ್ತೃತ್ವ, ಮಮತೆ, ಫಲತ್ಯಾಗಪೂರ್ವಕವಾದ ಅನುಷ್ಠಾನವು, ಮೋಕ್ಷಫಲಕ್ಕೆ ಸಹಕಾರಿಯಾಗಿ ಶಾಸ್ತ್ರವಿಹಿತವಾಗಿ ಸಾತ್ವಿಕ ತ್ಯಾಗವೆಂದುಹೇಳಿ ಅದರ ಸ್ವರೂಪವನ್ನು ನಿರೂಪಿಸುತ್ತಾರೆ.

## ಸಾತ್ವಿಕತ್ಯಾಗಶಬ್ದದ ಅರ್ಥವು.

**ತನ್ನಧಿಕಾರಾನುರೂಪವಾಗ** - ತನ್ನ ವರ್ಣವೇನು ಆಶ್ರಮವೇನು ಇಂತಹ ಅಧಿಕಾರಕ್ಕೆ ಅನುಗುಣವಾಗಿ, **ತವಿರವೇಣ್ಡುವೈ ತ್ತವಿರ್‌ನ್ದು** - ಶಾಸ್ತ್ರದಲ್ಲಿ ತ್ಯಾಜ್ಯವೆಂದು ವಿಧಿಸಿರುವದನ್ನು ತ್ಯಜಿಸಿ, **ವೇಣ್ಡುವವೈ ಶೆಯ್ಯುಮಿಡತ್ತಿಲ್**- ಮಾಡಬೇಕೆಂದಿರುವ ವಿಹಿತ ಕರ್ಮವನ್ನು ಮಾಡುವ ಸಂದರ್ಭದಲ್ಲಿ, **ನಾ‌ ಸ್ವತಂತ್ರನಾಯ್ ಶೆಯ್‌ಗಿರ್ರೇ ಎನ್ನುಮ್** - ನಾನೇ ಸ್ವತಂತ್ರನಾದ ಕರ್ತೃವಾಗಿ ನಾನು ಮಾಡುತ್ತೇನೆಂದೂ, **ಎನುಕ್ಕು ಇಕ್ಕರ್ಮಙ್ಗಳ್ ಶೇಷಭೂತಮೆನ್ನುಮ್** – ನನಗೆ ಈ ಕರ್ಮಗಳು ಅಧೀನವಾದವೆಂದೂ, **ಎನುಕ್ಕು ಇನ್ನ ಫಲತ್ತುಕ್ಕು ಇದು ತಾನೇ ಸಾಧನಮೆನ್ರುಮ್** - ನನಗೆ ಅಭಿಮತವಾಗಿರುವ ಈ ಫಲಕ್ಕೆ ಈಗ ನಾನು ಮಾಡುತ್ತಿರುವ ಕರ್ಮವೇ ಸಾಧನವೆಂದೂ, ಹೀಗೆ ಸ್ವತಂತ್ರ ಕರ್ತೃತ್ವವೇನು, ಕರ್ತೃತ್ವದಲ್ಲಿ ಮಮತೆ ಯೇನು, ಫಲಾಭಿಸಂಧಿ ಏನು, ಇಂತಹ ಮೂರು ವಿಧ ಮಮತೆಯೂ ಪ್ರಪನ್ನನಿಗೆ ಯುಕ್ತವಾದುವಲ್ಲವಾದುದರಿಂದ **ಪಿರುಕ್ಕುಮ್ ನಿನವೈ ಮಾತ್ತು** - ಆದರೂ ಇಂತಹ ಅಹಂಕಾರ ಮಮಕಾರಗಳು ಹುಟ್ಟುವ ಜ್ಞಾನವನ್ನು ನಿರಾಕರಿಸಿ, ಎಂದರೆ ಕರ್ತೃತ್ವತ್ಯಾಗವೇನು, ಮಮತಾ ತ್ಯಾಗವೇನು, ಫಲತ್ಯಾಗವೇನು, ಇವುಗಳೊಂದಿಗೆ ಎಂಬ ತಾತ್ಪರ್ಯವು, ಹಾಗಾದರೆ ಹೇಗೆ ಅನುಸಂಧಾನವಿರಬೇಕೆಂದರೆ ಹೇಳುತ್ತಾರೆ.—**ಸರ್ವೇಶ್ವರ ಶೆಯ್ಯ**

**ವಿಕ್ಕೈ ಅವನುಕ್ಕು ಶೇಷಮಾನ ಕೈಙ್ಕರ್ಯತ್ತೈ ಅವನುಗಪ್ಪೇ ಪ್ರಯೋಜನ ಮಾಗ ಅನುಸನ್ಧಿತ್ತು ಅನುಷ್ಠಿಕ್ಕೈಕ ಸಾತ್ವಿಕತ್ಯಾಗ ಮೆನ್ರು ಮಿಡತ್ತೈ,**

---

**ವಿಕ್ಕೈ** - ತಾನು ಈಗಮಾಡಿದ ಕರ್ಮವನ್ನು ಸರ್ವೇಶ್ವರನು ಮಾಡಿಸಲಾಗಿ, **ಅವನುಕ್ಕು ಶೇಷಮಾನ ಕೈಙ್ಕರ್ಯತ್ತೈ** - ಅವನಿಗೇ ಅಧೀನವಾದ ಕೈಙ್ಕರ್ಯವನ್ನು ಎಂದರೆ ಆತನ ಕೃಪೆಯಿಲ್ಲದೆ ಅಂತಹ ಕೈಙ್ಕರ್ಯವು ಎಂದಿಗೂ ನೆರವೇರದೆಂಬ ಭಾವವು, **ಅವನುಗಪ್ಪೇ** - ಆತನ ಸಂಪ್ರೀಣನವೇ, **ಪ್ರಯೋಜನಮಾಗ**- ತನಗೆ ಪ್ರಯೋಜನವಾಗಿ, **ಅನುಸಂಧಿತ್ತು**-ಅನುಸಂಧಾನಮಾಡಿ, **ಅನುಷ್ಠಿಕ್ಕೈಕ**- ಅನುಷ್ಠಿಸೋಣವು, **ಸಾತ್ವಿಕತ್ಯಾಗ ಮೆನ್ರು ಮಿಡತ್ತೈ**—ಸಾತ್ವಿಕತ್ಯಾಗವಾಗುತ್ತದೆಂಬ ಸಂದರ್ಭದಲ್ಲಿ,ಗೀತಾ ಮುಂದಿನ ಶ್ಲೋಕಪ್ರಮಾಣವನ್ನು ಉದಾಹರಿಸುತ್ತಾರೆ.- ವಿಧಿ ವಿಹಿತ ಕರ್ಮಗಳನ್ನು ಅನುಷ್ಠಿಸೋಣವು ಸಾತ್ವಿಕ ತ್ಯಾಗರೂಪವಾದುದೆಂದು ಹೇಳಿಸಿಕೊಳ್ಳಬೇಕಾದರೆ ಅನುಸಂಧಾನವು ಹೇಗಿರತಕ್ಕದ್ದೆಂದರೆ-—(೧) ನನಗೆ ಈ ಕರ್ಮದಲ್ಲಿ ಸ್ವತಂತ್ರ ಕರ್ತೃತ್ವವಿಲ್ಲವು, ಸರ್ವೇಶ್ವರನದೇ ಕರ್ತೃತ್ವವು, ಅವನೇ ಈಕೆಲಸವನ್ನು ನಿಂತು ಮಾಡಿಸುವನೆಂದೂ, ಕರ್ಮವು ಸಾಙ್ಗವಾಗಿ ನೆರವೇರಿದ ನಂತರ ಅವನೇ ನಿಂತು ಕರ್ಮವನ್ನು ನೆರವೇರಿಸಿದನೆಂದೂ, (೨) ಈ ಕರ್ಮವು ಅವನದೇ ವಿನಾ ನನ್ನದಲ್ಲವೆಂದೂ, (೩) ಈ ಕರ್ಮದಲ್ಲಿ ಭಗವತ್ಪ್ರೀತಿಯಲ್ಲದೆ ಇನ್ನು ಯಾವ ಫಲವನ್ನೂ ಕೋರುವದಿಲ್ಲವೆಂದೂ, ಅನುಸಂಧಾನವಿರತಕ್ಕದ್ದೆಂಬ ಭಾವವು; ಈ ಅನುಸಂಧಾನಕ್ಕಾಗಿ ನಮ್ಮಲ್ಲಿ ಕರ್ಮಾರಂಭದಲ್ಲೂ ಕರ್ಮಸಮಾಪ್ತಿಯಲ್ಲೂ ಸಾತ್ವಿಕ ತ್ಯಗವು ಹೇಳಲ್ಪಡುತ್ತದೆ. ಅದು ಯಾವುದೆಂದರೆ.—

"ಭಗವಾನೇವ ಸ್ವನಿಯಾಮ್ಯ ಸ್ವರೂಪಸ್ಥಿತಿ ಪ್ರವೃತ್ತಿ ಸ್ವಶೇಷತೈಕರಸೇನ ಮಯಾ ಸ್ವಕೀಯೈಶ್ಚೋಪಕರಣೈಃ ಸ್ವಾರಾಧನೈಕಪ್ರಯೋಜನಾಯ ಪರಮಪುರುಷ ಸ್ಸರ್ವಶೇಷೀ ಸ್ವಶೇಷಭೂತ ಮಿದಂ ಕರ್ಮ ಸ್ವಸ್ಮೈ ಸ್ವಪ್ರೀತಯೇ ಸ್ವಯಮೇವ ಕಾರಯತಿ" ಎಂದು ಆರಂಭದಲ್ಲೂ, "ಕಾರಿತವಾನ್" ಎಂದು ಪರಿಸಮಾಪ್ತಿಯಲ್ಲೂ ಹೇಳುತ್ತಾ, ಅನುಸಂಧಾನವು ಇದಕ್ಕೆ ಪೂರ್ವಭಾವಿಯಾಗಿ ಸಙ್ಕಲ್ಪ ಬಲಮಂತ್ರಾನುಸಂಧಾನಗಳು ವಿಧಿಸಲ್ಪಟ್ಟಿರುತ್ತವೆ. ಅವು ಹೇಗೆಂದರೆ? ಸಙ್ಕಲ್ಪವು.—"ಕೃತಂಚ ಕರಿಷ್ಯಾಮಿ,ಭಗವನ್ನಿತ್ಯೇನ ಭಗವತ್ಪ್ರೀತ್ಯರ್ಥೇನ ಮಹಾವಿಭೂತಿ ಚಾತುರಾತ್ಮ್ಯ ಭಗವದ್ವಾಸುದೇವ ಪಾದಾರವಿಂದಾರ್ಚನೇನ, ಭಗವಂತಂವಾಸುದೇವಂ ಕರ್ಮಣಾ ಆರಾಧಯಿಷ್ಯಾಮಿ" ಎಂಬುದು. ಬಲಮಂತ್ರಾನು ಸಂಧಾನವು ಹೇಗೆ? ಎಂದರೆ "ಭಗವತೋ ಬಲೇನ, ಭಗವತೋ ವೀರ್ಯೇಣ, ಭಗವತಸ್ತೇಜಸಾ ಭಗವತಃ ಕರ್ಮಣಾ ಭಗವತಃ ಕರ್ಮ ಕರಿಷ್ಯಾಮಿ"

(೩)"ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇऽರ್ಜುನ । ಸಙ್ಗಂ ತ್ಯಕ್ತ್ವಾ ಫಲಂಚೈವ ಸತ್ಯಾಗ ಸ್ಸಾತ್ವಿಕೋ ಮತಃ" ಎನ್ರು ಅರುಳಿಚ್ಚೆಯ್‌ದಾನ್.

---

ಎಂದು ಅನುಸಂಧಾನವು. ಕರ್ಮಾರಂಭವೂ ಅವನದೇ ಎಂಬುದಕ್ಕೆ "ಸ್ವಶೇಷಭೂತೇನ ಮಯಾಸ್ವೀಯೈ ಸ್ಸರ್ವಪರಿಚ್ಛದೈಃ । ವಿಧಾತುಂ ಪ್ರೀತಮಾತ್ಮಾನಂ ದೇವಃ ಪ್ರಕ್ರಮತೇ ಸ್ವಯಂ" ಎಂಬ ವಾಕ್ಯವೂ ಪ್ರಮಾಣವೇ. ಈ ಸಾತ್ವಿಕ ತ್ಯಾಗವೇ ಮುಂದಿನ ಗೀತಾಶ್ಲೋಕದಲ್ಲಿ ಉಪಪಾದಿತವೆಂದು ತಿಳಿಸುತ್ತಾರೆ.

(೩) "ಯತ್ಕರ್ಮ - ಯಾವಕರ್ಮವು, (ಜಾತ್ಯೇಕವಚನವು) ನಿಯತಂ- ಆಜ್ಞಾ ಕೈಙ್ಕರ್ಯರೂಪವಾಗಿ ವರ್ಣಾಶ್ರಮೋಚಿತ ನಿತ್ಯನೈಮಿತ್ತಿಕ ಕರ್ಮವಾಗಿ ಶಾಸ್ತ್ರದಲ್ಲಿ ವಿಧಿಸಲ್ಪಟ್ಟಿರುತ್ತದೋ, ಕಾರ್ಯಮಿತಿ - ಅವಶ್ಯಕವಾಗಿ ನನ್ನ ಆರಾಧನ ರೂಪಭಾವನೆಯಿಂದ ಮಾಡತಕ್ಕದೆಂದು, ಹೇ ಅರ್ಜುನನೇ, ಕ್ರಿಯತೇ - ಮಾಡಲ್ಪಡುತ್ತದೆಯೋ, ಇನ್ನೂ ಹೇಗೆ ಮಾಡಲ್ಪಡತಕ್ಕದ್ದೆಂದರೆ ಹೇಳುತ್ತಾರೆ, ಸಙ್ಗಂತ್ಯಕ್ತ್ವಾ - ಕರ್ಮಾನುಷ್ಠಾನವೇ ಸ್ವಯಂ ಪ್ರಯೋಜನವು, ನನಗೆ ಫಲದಲ್ಲಿ ಮಮತೆ ಇಲ್ಲವೆಂದು, ಆ ಕರ್ಮದಲ್ಲಿ ಸಙ್ಗವನ್ನು ತ್ಯಜಿಸಿ, ಇನ್ನೂ ಹೇಗೆ ಎಂದರೆ, ಫಲಂಚೈವತ್ಯಕ್ತ್ವಾ - ಆ ಕರ್ಮದಫಲವನ್ನೂ ತ್ಯಜಿಸಿ, ಭಗವಂತನ ಪ್ರೀತಿಯೇ ಮುಖ್ಯವೇ ವಿನಾ ನನಗೆ ಫಲದಲ್ಲಿ ಯಾವ ಸಙ್ಗವೂ ಇಲ್ಲವೆಂದೂ, ಹೀಗೆ ನಿಯತವಾದ ಕರ್ಮವು ಅನುಷ್ಠಿಸಲ್ಪಟ್ಟರೆ ಅದೇ ಸಾತ್ವಿಕ ತ್ಯಾಗವೆಂದು, ಮತಃ - ನನ್ನ ಅಭಿಪ್ರಾಯವು" ಎನ್ರು - ಎಂಬದಾಗಿ, ಅರುಳಿಚ್ಚೆಯ್‌ದಾನ್- ಶ್ರೀ ಕೃಷ್ಣಭಗವಾನವರು ಕೃಪಯಾ ಉಪದೇಶಿಸಿರುತ್ತಾರೆ. ಸಾತ್ವಿಕತ್ಯಾಗದಲ್ಲಿ ಕರ್ಮಾನುಷ್ಠಾನ ಉಂಟು. ಆದರೆ ನಾನು ಮಾಡುತ್ತೇನೆಂಬ ಮಮತಾ ಇಲ್ಲವು, ಫಲಾಭಿಸಂಧಿಯೂ ಇಲ್ಲವು, ಸರ್ವೇಶ್ವರನೇ ಕರ್ಮವನ್ನಾರಂಭಿಸಿ, ನಡೆಸಿ ಪೂರೈಸುವನೆಂದೂ ಆದರಿಂದ ಭಗವಂತನು ತನ್ನ ಪ್ರೀತ್ಯರ್ಥವಾಗಿಯೇ ನಡೆಸಿಕೊಳ್ಳುವನೆಂದೂ ಅನುಸಂಧಾನವಿರುತ್ತದೆ. ತಾಮಸ ರಾಜಸ ತ್ಯಾಗಗಳಲ್ಲಾದರೋ ಕರ್ಮಾನುಷ್ಠಾನವೇ ತ್ಯಾಜ್ಯವು ತಾಮಸ ತ್ಯಾಗದಲ್ಲಿ ಮೋಹದಿಂದ ಕರ್ಮಪರಿತ್ಯಾಗವೂ, ರಾಜಸದಲ್ಲಿ ಅನುಷ್ಠಾನವು ದುಃಖರೂಪವಾದುದು ದೇಹಾಯಾಸ ಮನಃಕ್ಲೇಶಗಳುಳ್ಳದೆಂಬ ಭಾವನೆಯಿಂದ ಕರ್ಮಪರಿತ್ಯಾಗವೂ ಹೇಳಲ್ಪಟ್ಟವು. ಹೀಗೆ ನಿತ್ಯನೈಮಿತ್ತಿಕರೂಪ ಆಜ್ಞಾ ಕೈಙ್ಕರ್ಯಗಳು ಅವಶ್ಯಕವಾಗಿ ಅನುಷ್ಠಿಸತಕ್ಕವೆಂದೂ ಪದೇಪದೇ ಅನೇಕ ಕಡೆಗಳಲ್ಲಿ, "ನಿಯತಂ ಕುರು ಕರ್ಮತ್ವಂ"

---

(೩) ಗೀ. ೧೮. ೯

(ಗೀ, ೩. ೮.) "ತಸ್ಮಾದಸಕ್ತಸ್ಸತತಂ ಕಾರ್ಯಂ ಕರ್ಮ ಸಮಾಚರ"(ಗೀ. ೩. ೧೯) "ಕರ್ಮಣ್ಯೇ ವಾಧಿಕಾರಸ್ತೇ ಮಾಫಲೇಷು ಕದಾಚನ। ಮಾಕರ್ಮ ಫಲಹೇತುರ್ಭೂಃ ಮಾತೇಸಙ್ಗೋಸ್ತ್ವಕರ್ಮಣಿ"(ಗೀ. ೨. ೪೭) "ಸ್ವೇಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ" (ಗೀ. ೧೮. ೪೫) "ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ" (ಗೀ. ೧೮. ೪೬) ಹೀಗೆಲ್ಲಾ ಹೇಳಿದ್ದರೂ, "ಸರ್ವಧರ್ಮಾನ್ ಪರಿತ್ಯಜ್ಯ" ಎಂಬ (ಗೀ. ೧೮. ೬೬) ಶ್ಲೋಕದಲ್ಲಿ ಸರ್ವ ಕರ್ಮ ಪರಿತ್ಯಾಗವು ಉಪದೇಶಿಸಲ್ಪಟ್ಟಿತು ಎಂದರೆ ಪರಸ್ಪರ ವಿರುದ್ಧಾಭಿಪ್ರಾಯಗಳನ್ನು ಉಪದೇಶಿಸಿದ ಹಾಗಾಗುವದಿಲ್ಲವೇ ಎಂದು ಕೇಳಬೇಕಾಗುತ್ತದೆ. ಆದುದರಿಂದ ಗೀತೆಯಲ್ಲಿ ಕರ್ಮ ಪರಿತ್ಯಾಗವನ್ನು ಎಲ್ಲಿಯೂ ಬೋಧಿಸಲಿಲ್ಲವು. ವಿಹಿತಕರ್ಮಪರಿತ್ಯಾಗಮಾಡಿದ ಅರ್ಜುನನಿಗೆ ಬುದ್ಧಿಯನ್ನು ಕಲಿಸಿ ಕರ್ಮಪರಿತ್ಯಾಗ ಕೂಡದೆಂಬುದಕ್ಕಾಗಿಯೇ ಗೀತಾಶಾಸ್ತ್ರವೆಂದು ತಿಳಿಯತಕ್ಕದ್ದು. ಏಕೆಂದರೆ ಕರ್ಮಕುರು, ಯುಧ್ಯಸ್ವ, ಇತ್ಯಾದಿ ಪ್ರಯೋಗಗಳೇ ಇರುತ್ತವೆ. ಕ್ಷತ್ರಿಯ ಧರ್ಮಪರಿತ್ಯಾಗಮಾಡಿ ಗಾಂಡೀವವನ್ನು ಬಿಸಾಡಿದ ಅರ್ಜುನನನ್ನು ಪುನಃ ಧನುಸ್ಸನ್ನು ತೆಗೆದುಕೊಂಡು ಯುದ್ಧ ಮಾಡುವ ಹಾಗೆ ಪ್ರೇರಿಸುವದು ಯುಕ್ತವಾಗಿರುವಾಗ ಸರ್ವ ಕರ್ಮ ಪರಿತ್ಯಾಗದಉಪದೇಶವು ಎಂದಿಗೂ ಸಮಂಜಸವಾಗಲಾರದು ಕರಿಷ್ಯೇ ವಚನಂತವ –| ನೀನು ಆಜ್ಞಾಪಿಸಿದ ರೀತಿಯಲ್ಲಿ ಮಾಡುವೆನು ಎಂದು ಕರಿಷ್ಯೇ ಎಂಬುದರಿಂದ (ಗೀ ೧೮-೭೩) ತನ್ನ ಇತಿಕರ್ತವ್ಯತಾಂಶವನ್ನು ಒಪ್ಪಿಕೊಂಡು ಬಿಟ್ಟು ಯುದ್ಧವನ್ನು ಸಂಪೂರ್ಣವಾಗಿ ನಡೆಸಿರುತ್ತಾನೆ. ಆದುದರಿಂದ ನಿಯತಕರ್ಮಗಳಾದ ನಿತ್ಯನೈಮಿತ್ತಿಕ ರೂಪ ಆಜ್ಞಾ ಕೈಂಕರ್ಯಗಳನ್ನು, ಕರ್ತೃತ್ವದಲ್ಲಿ ಮಮತೆಯನ್ನು ನೀಗಿ, ಕರ್ಮವು ಭಗವಚ್ಛೇಷಭೂತವೆಂದು ತಿಳಿದು, ಆತನ ಪ್ರೀತ್ಯರ್ಥವಾಗಿಯೇ ತಾನು ಅನುಷ್ಠಿಸತಕ್ಕದ್ದೇವಿನಾ, ಕರ್ಮದಲ್ಲಿ ಸಙ್ಗವೂ, ನಾನು ಮಾಡುತ್ತೇನೆಂಬ ಮಮತೆಯೂ, ಫಲದಲ್ಲಿ ಅಪೇಕ್ಷೆಯೂ, ಕೂಡದೆಂದು ಉಪದೇಶಿಸಲ್ಪಟ್ಟು, ಅದೇ ಸಾತ್ವಿಕತ್ಯಾಗವೆಂದು ಹೇಳಲ್ಪಟ್ಟಿತು. ಆದುದರಿಂದ ತ್ಯಾಗೀ ಯಾರೆಂದರೆ ಫಲ, ಕರ್ತೃತ್ವ, ಕರ್ಮಗಳಲ್ಲಿ ಸಙ್ಗವನ್ನು ಎಂದರೆ ಮಮತೆಯನ್ನು ತೊರದವನೇ ಎಂದು ಮುಂದಿನ ಶ್ಲೋಕದಲ್ಲಿ "ಯಸ್ತುಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ" ಕರ್ಮತ್ಯಾಗ ಫಲತ್ಯಾಗವೆರಡನ್ನೂ ತ್ಯಾಗಮಾಡಿದವನು ತ್ಯಾಗೀ ಎಂದು ಹೇಳಲ್ಪಡುವನು. ಇಲ್ಲಿ ಕರ್ಮತ್ಯಾಗೀ ಎಂದರೆ ಕರ್ಮವನ್ನೇ ತ್ಯಾಗಮಾಡಿದವನೆಂಬರ್ಥವಲ್ಲವು, ಗೀತೋಪದೇಶವು ಮುಖ್ಯವಾಗಿ ತನಗೆ ವಿಹಿತಗಳಾದ ಕರ್ಮಗಳನ್ನುಷ್ಠಾನಕ್ಕಾಗಿಯೇ ಎಂದು ಭಾವಿಸತಕ್ಕದ್ದು. ಇದರಿಂದ ಉಪಾಯಾನುಷ್ಠಾನ ವಿರೋಧಿ ಪಾಪಗಳು ತೊಲಗಿ ಉಪಾಯವು ಕೈಗೂಡಿ ಮೋಕ್ಷಪ್ರಾಪ್ತಿಯುಂಟಾಗುತ್ತ

## ಸಾತ್ವಿಕತ್ಯಾಗಸ್ಯ ಪರಾಕಾಷ್ಠಾ ದಶಾವಾಹ.

ಇಬ್ಭಗವತ್ಪ್ರೀತಿ ಪ್ರಯೋಜನವಾಗ ಅನುಷ್ಠಿಕ್ಕಿರ ವಿಡತ್ತಿಲ್, ಇಷ್ಪ್ರೀ

ದೆಂಬುದೇ ಅದರ ಸಾರತಮವಾದ ಉಪದೇಶವು. ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ವ ಮಾನಶುಃ" ಎಂಬ (ತೈ. ನಾರಾ. ೪) ಶ್ರುತಿ ವಾಕ್ಯವಲ್ಲೂ, ಯಾವ ಯತಿಗಳು ಹೊಂದುವ ಮೋಕ್ಷವುಂಟೋ ಅದನ್ನು, ಕರ್ಮಣಾ ಎಂದರೆ ಫಲಾಭಿಸಂಧಿ ಇರುವ ಕರ್ಮದಿಂದಲಾಗಲಿ ಅಥವಾ ಕೇವಲ ಫಲಾಭಿಸಂಧಿ ರಹಿತವಾದ ಕರ್ಮದಿಂದಲಾಗಲಿ ಮಾತ್ರವೇ ಹೊಂದಲು ಸಾಧ್ಯವಲ್ಲವು. ಇಲ್ಲಿ ತ್ಯಾಗೇನ ಎಂದರೆ ಕರ್ಮವನ್ನು ಪರಿತ್ಯಾಗಮಾಡುವದರಿಂದ ಎಂಬರ್ಥವಲ್ಲವು. ಇಲ್ಲಿ ತ್ಯಾಗ ವೆಂದರೆ ಸನ್ಯಾಸಸ್ತ್ಯಾಗ ಇತ್ಯುಕ್ತಶ್ಶರಣಾಗತಿರಿತ್ಯಪಿ" ಎಂಬಲ್ಲಿ ಹೇಳಿರುವ ಹಾಗೆ ಶರಣಾಗತಿಯು ಅರ್ಥವು. ಅಂತಹ ಫಲಾಭಿಸಂಧಿರಹಿತವಾದ ನಿತ್ಯನೈಮಿತ್ತಿಕ ಕರ್ಮಗಳ ಅನುಷ್ಠಾನವು ಭಗವದುಪಾಸನಕ್ಕೆ ಸಹಕಾರಿಯಾಗಿ ಮೋಕ್ಷ ಹೇತುವು. ಪ್ರಪದನದಲ್ಲಿ ಅದ್ವಾರಕವಾಗಿಯೇ ಭಗವನ್ಮುಖೋಲ್ಲಾಸಕರವಾಗಿ ಉಪಯುಕ್ತವು. ಮುಂದೆ ಆ ಸಾತ್ವಿಕ ತ್ಯಾಗದ ಪರಾಕಾಷ್ಠೆ ಯಾವುದೆಂದರೆ ತಿಳಿಸುತ್ತಾರೆ.

### ಸಾತ್ವಿಕತ್ಯಾಗದ ಪರಾಕಾಷ್ಠಾದಶೆಯನ್ನು ತಿಳಿಸುತ್ತಾರೆ.

ನಿತ್ಯನೈಮಿತ್ತಿಕಕರ್ಮಗಳ ಅನುಷ್ಠಾನವು ಆಯಾಸ ಸಾಧ್ಯವಾದುದು. ಹೀಗಿರುವಾಗ ಅವಕ್ಕೆ ಸುಖರೂಪತ್ವವೆಲ್ಲಿಯದು? ಸ್ವಯಂ ಪ್ರಯೋಜನವೆಂಬ ಅನುಸಂಧಾನವು ಹೇಗೆ ಕೂಡುತ್ತದೆ? ಅನಿಷ್ಟ ನಿವೃತ್ತಿಗಾಗಿಯಲ್ಲವೇ ಅವುಗಳ ಅನುಷ್ಠಾನವು? ಅನಿಷ್ಟ ನಿವೃತ್ತಿಯಾದನಂತರ ಅದರ ಆವಶ್ಯಕತೆಯೇನು? ಇತ್ಯಾದಿ ಪೂರ್ವಪಕ್ಷಗಳಿಗೂ ಸಮಾಧಾನವನ್ನು ಮುಂದಿನವಾಕ್ಯದಿಂದತಿಳಿಸುತ್ತಾರೆ. ಇದೂ ಅಲ್ಲದೆ ಭಕ್ತಿಯೋಗ ನಿಷ್ಠನಿಗೆ ಮೋಕ್ಷ ಪ್ರದತ್ವವಿಷಯದಲ್ಲಿ ಯೋಗನಿಷ್ಪತ್ತಿಗೂ ದೇಹಾವಸಾನವುಂಟಾಗುವವರೆಗೂ ಅಭಯಪ್ರದಾನವಿಲ್ಲವು. ಭರನ್ಯಾಸನಿಷ್ಠನಿಗಾದರೋ ಹಾಗಲ್ಲವು. ಆತನು ಸಕೃಚ್ಛರಣಾಗತಿಮಾಡಿದ ತತ್ಕ್ಷಣದಲ್ಲೇ ಅಭಯ ಪ್ರದಾನವಾಗುತ್ತದೆ. ಮೋಕ್ಷವು ಹೇಗಾದರೂ ಸಿದ್ಧವು. ಹೀಗಿರುವಾಗ ಅನಿಷ್ಟನಿವೃತ್ತಿರೂಪದಲ್ಲಿ ಆಗತಕ್ಕದ್ದುತಾನೇ ಯಾವುದಿರುತ್ತದೆ? ಇತ್ಯಾದಿ ಸರ್ವ ಪೂರ್ವಪಕ್ಷಗಳಿಗೂ ಸಮಾಧಾನವನ್ನು ಹೇಳಿ, ಇಂತಹ ಪ್ರಪನ್ನನು ಕೈಂಕರ್ಯಗಳನ್ನನುಷ್ಠಿಸಿದ ನಂತರ ಸಾತ್ವಿಕತ್ಯಾಗಾನುಸಂಧಾನವೀಗ ಸಾತ್ವಿಕತ್ಯಾಗದ ಎಲ್ಲೈ ನಿಲಮಾಗಕ್ಕೆಡಪದು-ಪರಾಕಾಷ್ಠಾದಶೆಯಾಗುತ್ತದೆಂದು ಉಪದೇಶಿಸುತ್ತಾರೆ.

**ತಿಕ್ಕು ಮೋಕ್ಷಮುಮ್ ಫಲಮಾಗಕ್ಕೊಳ್ಳಾದೇ ಪೂರ್ವ್ವಪ್ರಪತ್ತಿಯಾಲ್ ಪಿರನ್ದ ಪರಮ ಕಾರುಣಿಕರ್ ಪ್ರಸಾದತ್ತಾಲೇ, ಮೋಕ್ಷಮ್ ಸಿದ್ಧಮೆನ್ರು**

---

**ಇಬ್ಭಗವತ್ಪ್ರೀತಿ ಪ್ರಯೋಜನಮಾಗ** - ಭಗವತ್ಪ್ರೀತಿಯೇ ಸರ್ವಪ್ರಯೋಜನವಾಗಿ, ಇದರಿಂದ ತನಗೆ ಯಾವ ಪ್ರಯೋಜನವಿಲ್ಲವೆಂಬ ಅನುಸಂಧಾನವು ದ್ಯೋತಿತವು, **ಅನುಷ್ಠಿಕ್ಕಿರ ವಿಡತ್ತಿಲ್** - ಅನುಷ್ಠಿಸುವ ಸಂದರ್ಭದಲ್ಲಿ, ಯಾವಾಗ ಪ್ರಪದನಾನುಷ್ಠಾನವಾಯಿತೋ ಆಗ ಮೋಕ್ಷವನ್ನು ದೇಹಾವಸಾನದಲ್ಲಿ ಕೊಡುವೆನೆಂಬ ವಾಗ್ದಾನವಾದನಂತರ, ಈ ಆಜ್ಞಾಗಳ ಸ್ವರೂಪ ನಿತ್ಯ ನೈಮಿತ್ತಿಕಾನುಷ್ಠಾನವು ಏತಕ್ಕೆ ? ಎಂಬಾಕ್ಷೇಪಕ್ಕೆ ಸಮಾಧಾನಾರ್ಥವಾಗಿ ಇಲ್ಲಿ **ಭಗವತ್ಪ್ರೀತಿ ಪ್ರಯೋಜನಮಾಗ** ಎಂಬ ಪ್ರಯೋಗವು. "**ಆಜ್ಞಾಚ್ಛೇದೀ ಮಮದ್ರೋಹೀ**" ಎಂದು ಹೇಳಿರುವಹಾಗೆ, ಪ್ರಾರಬ್ಧ ಕರ್ಮಾನುಭವಕ್ಕಾಗಿ ಅಂಟಿದ ದೇಹದೊಂದಿಗೆ ಬಂದು, ದೇಹದೊಂದಿಗೆ ಹೋಗುವ, ನಿತ್ಯನೈಮಿತ್ತಿಕ ಕರ್ಮಗಳನ್ನು ಆಚರಿಸದೇ ಇದ್ದರೆ ಪರಮ ಪುರುಷನ ಅಪ್ರೀತಿಯು ಉಂಟಾಗದೇಇರುವದಕ್ಕಾಗಿ ಆವಶ್ಯಕವೇ ವಿನಾ, ಆಜ್ಞಾಗಳಸ್ವರೂಪನಾದುವಲ್ಲವೆಂದು ಹೇಳುವದಕ್ಕಾಗಿ, ಇಬ್ಭಗವತ್ಪ್ರೀತಿ ಪ್ರಯೋಜನಮಾಗ ಎಂಬ ಪ್ರಯೋಗವು. **ಇಪ್ಪ್ರೀತಿಕ್ಕು ಮೋಕ್ಷಮುಮ್ ಫಲಮಾಗ ಕ್ಕೊಳ್ಳಾದೇ** - ಹೀಗೆ ನಿತ್ಯನೈಮಿತ್ತಿಕಾನುಷ್ಠಾನಗಳಿಂದ ಭಗವತ್ಪ್ರೀತಿಯುಂಟಾದರೂ, ಆದಕ್ಕೆ ಪ್ರತಿಫಲವಾಗಿ ಮೋಕ್ಷವನ್ನೂ ಪ್ರಾರ್ಥಿಸದೆ, ಭರನ್ಯಾಸದಿಂದ ಕೃತಕೃತ್ಯನಾದರೂ, ಆಶ್ರಯಿಸಿದವನಿಗೆ ತುಂಬಾ ಸಂತೋಷ ಉಂಟಾಗಿರುವಾಗ ತನ್ನ ಮನೋರಥವನ್ನು ಸೂಚಿಸುವದು ಒಳ್ಳೆಯದಲ್ಲವೋ, ಹಾಗೆ ಯುಕ್ತವಾದರೆ ತನಗೆ ಬೇಕಾದ ಮೋಕ್ಷವನ್ನು ಕೊಡು ಎಂದು ಹಿಂದಿನ ಗೋಪ್ತೃತ್ವವರಣದಲ್ಲಿ ಅಪೇಕ್ಷಿಸಿದುದನ್ನು ಜ್ಞಾಪಕಕ್ಕೆ ಕೊಡಕೂಡದೋ ? ಎಂದರೆ ಹಾಗೆ ಜ್ಞಾಪಕ ಕೊಡುವದು ತನ್ನ ಸ್ವರೂಪಕ್ಕೂ ಪರಮೋದಾರಿಯಾದ ಪರಮಾತ್ಮನ ಸ್ವರೂಪಕ್ಕೂ ಕುಂದಕವೆಂಬ ಭಾವದಿಂದ ಹೇಳುತ್ತಾರೇನೆಂದರೆ.—**ಪೂರ್ವ್ವಪ್ರಪತ್ತಿಯಾಲ್ ಪಿರನ್ದ ಪರಮ ಕಾರುಣಿಕರ್ ಪ್ರಸಾದತ್ತಾಲೇಸಿದ್ಧಮ್** - ಹಿಂದೆ ಆಚಾರ್ಯಮುಖೇನ ಅನುಷ್ಠಿಸಿದ ಸಕೃತ್ ಸಾಙ್ಗಪ್ರಪದನದಿಂದಲೇ ಉಂಟಾದ ನಿರತಿಶಯ ಕರುಣಾನಿಧಿಯ ಅನುಗ್ರಹದಿಂದಲೇ ಮೋಕ್ಷವು ಸಿದ್ಧವು, **ಎನ್ರುನಿನೈತ್ತು**-ಎಂದು ದೃಢವಾಗಿ ನಂಬಿ, ಅನುಷ್ಠಿಸತಕ್ಕದ್ದು ಎಂದು ಹೇಳುತ್ತಾರೆ. ಮಹಾ ವಿಶ್ವಾಸದಿಂದ ಶರಣಾಗತಿಯನ್ನು ಅನುಷ್ಠಿಸಿದ್ದಾಯಿತು. ಸತ್ಯಸಙ್ಕಲ್ಪನು, "**ನತ್ಯಜೇಯಂ ಕಥಂಚನ**" ವೆಂದೂ "**ದದಾಮ್ಯೇ ತದ್ವ್ರತಂಮಮ**" ವೆಂದೂ, "**ನಮೇ ಮೋಘಂ ವಚೋ**

**ನಿನ್ನೈತ್ತು, ಮುಕ್ತನುಡೈಯ ಕೈಙ್ಕರ್ಯಮ್ಪೋಲವುಮ್, ಅರೋಗನುಡೈಯ**

**ಭವೇತ್**" ಎಂದೂ, "**ಅನೃತಂ ನೋಕ್ತಂ ಪೂರ್ವಂಮೇ ನ ಚ ವಕ್ಷ್ಯೇ ಕದಾಚನ**" ಎಂದೂ, ಹೇಳಿರುವಹಾಗೆ ವಾಗ್ದಾನ ಮಾಡಿಬಿಟ್ಟು ಹಿಂತೆಗೆಯುವದಿಲ್ಲವು. ಹೀಗಿರುವಾಗ ಪುನಃ ಮೋಕ್ಷವನ್ನು ಕೊಡು ಎಂದು ಜ್ಞಾಪಿಸಿದರೆ, ಮಹಾವಿಶ್ವಾಸಯುಕ್ತನಾದ ಈ ಪ್ರಪನ್ನನ ಸ್ವರೂಪಕ್ಕೂ ಹಾನಿಯು; ಪರಮಾತ್ಮನ ಸ್ವರೂಪಕ್ಕೂ ಹಾನಿಯು; ಹೇಗೆಂದರೆ ಆತನ ಪರಮ ಕಾರುಣ್ಯಕ್ಕೂ, ಔದಾರ್ಯಕ್ಕೂ ಸತ್ಯಸಙ್ಕಲ್ಪತೆಗೂ ಕುಂದಕವು. ಆದುದರಿಂದ ಹಾಗೆ ಜ್ಞಾಪಿಸುವದು ತುಂಬಾ ಹಾಸ್ಯಾಸ್ಪದವೆಂಬ ಭಾವವು. ಇದನ್ನೇ ಮನಸ್ಸಿನಲ್ಲಿಟ್ಟು ಹಿಂದೆ ಪುರುಷಾರ್ಥಕಾಷ್ಠಾಧಿಕಾರದಲ್ಲಿ"**ನಾಥೇ ನ ಸ್ತೃಣ ಮನ್ಯದನ್ಯದಪಿವಾ....ವಾಚಾನ ಯಾಚಾಮಹೇ**"ಐಹಿಕ ಸ್ವರ್ಗಾದಿ ಅಣಿಮಾದಿ ಐಶ್ವರ್ಯಗಳನ್ನೂ ಕೈವಲ್ಯವನ್ನೂ, ಮೋಕ್ಷವನ್ನೂ ಸಹ ನಾನು ವಾಚಾ ಯಾಚಿಸುವದಿಲ್ಲವೆಂದು ಅವುಗಳ ಹೆಸರುಗಳಾದ ಐಶ್ವರ್ಯ ಸ್ವರ್ಗ ಭೋಗಗಳೆಂದು ಕೂಡ ಹೇಳಲು ಇಷ್ಟವಿಲ್ಲದೆ ಸುಮ್ಮನೆ ತೃಣ, ಅನ್ಯತ್, ಅನ್ಯತ್ ಹೀಗೆಲ್ಲಾ ಹೇಳಿಕೊಂಡಿರುತ್ತಾರೆ. ಐಶ್ವರ್ಯ ಶಬ್ದದಿಂದ ಉಚ್ಚರಿಸಲು ಯೋಗ್ಯವಾದುದು ಮುಕ್ತೈಶ್ವರ್ಯ ಒಂದೇ ಎಂದು ಅದೇ ಶ್ಲೋಕದಲ್ಲಿ **ಮುಕ್ತೈಶ್ವರ್ಯ ದಿನಪ್ರಭಾತ ಸಮಯಾ ಸತ್ತಿಂ ಪ್ರಸತ್ತಿಂ ಮುಹುಃ**" ಎಂಬದಾಗಿ ಪ್ರಯೋಗಿಸಿರುತ್ತಾರೆ. ತಾನು ಮೋಕ್ಷಾರ್ಥಿಯು ಎಂದು ಪ್ರಪನ್ನನು ಹೇಳಿಕೊಳ್ಳುವದು ತನ್ನ ಸ್ವರೂಪಕ್ಕೆ ತುಂಬಾ ಕುಂದಕವೆಂಬುದು ಸಿದ್ಧವು, ಪರಮಾತ್ಮ ಸ್ವರೂಪಕ್ಕೆ ಕುಂದಕವೆಂಬ ಮಾತು ಹಾಗಿರಲಿ. ಇದು ಹಿಂದೆ ೧೪೧೨-೩ ನೆಯ ಪುಟಗಳಲ್ಲಿ ಉಪಪಾದಿತವು. ಹೀಗೆ ನಿತ್ಯ ನೈಮಿತ್ತಿಕ ರೂಪದಲ್ಲಿರುವ ಆಜ್ಞಾ ಕೈಙ್ಕರ್ಯಗಳನ್ನನುಷ್ಠಿಸುವದರಿಂದ ಆತನು ಸುಪ್ರೀತನಾಗುವದೇ ಈತನಿಗೆ ಪ್ರಯೋಜನನೆಂಬುದು ಏರ್ಪಟ್ಟಿತು. ಸತ್ಯಸಙ್ಕಲ್ಪನು ಪರಮ ಕರುಣೆ, ಔದಾರ್ಯಾದಿಗಳಿಂದ ಸಙ್ಕಲ್ಪಿಸಿರುವದರಿಂದ ಅದು ಸಿದ್ಧವೆಂಬ ಪೂರ್ಣ ನಂಬಿಕೆಯಿಂದ ಇನ್ನೇನನ್ನು ಪ್ರಾರ್ಥಿಸಕೂಡದೆಂಬುದು ಸಿದ್ಧವು. ಇದನ್ನು ಕೆಲವು ದೃಷ್ಟಾಂತಗಳ ಮೂಲಕ ಸ್ಥಾಪಿಸುತ್ತಾರೆ. (೧) **ಮುಕ್ತನುಡೈಯಕೈಙ್ಕರ್ಯಮ್ಪೋಲವುಮ್** - ಮುಕ್ತನು ಮಾಡುವ ಕೈಙ್ಕರ್ಯದಹಾಗೆ; ಮುಕ್ತನು ಭಗವತ್ಪ್ರೀತಿಗಾಗಿಯೇ ಮಾಡತಕ್ಕದ್ದು ಹೇಗೋ, ಹಾಗೆ ಈ ಕರ್ಮಗಳನ್ನು ಕೈಙ್ಕರ್ಯರೂಪದಲ್ಲಿ ಭಗವತ್ಪ್ರೀತ್ಯರ್ಥವಾಗಿಯೇ ಮಾಡತಕ್ಕದ್ದು. ಮುಕ್ತನಿಗೆ ನಿರತಿಶಯಾನಂದದೊಂದಿಗೆ ಭಗವತ್ಪ್ರಾಪ್ತಿಯುಂಟಾದನಂತರ, ಇನ್ನೇನೂ ಬೇಕಾಗಿಲ್ಲವು, ಆದರೂ ದಾಸಭೂತನಾದ ತನಗೆ ಶೇಷವೃತ್ತಿಯೇ ಯುವರಾಜ್ಯ ಪಟ್ಟವೆಂದು ಭಾವಿಸಿ

**ಪಾಲ್ ವಾರ್‌ತ್ತುಣ್ಣುಗೈ ಪ್ಪೋಲುವುಮ್, ಅನುಷ್ಠಿಕ್ಕೈ ಸಾತ್ವಿಕತ್ಯಾಗತ್ತಿನ್ ಎಲ್ಲೈ ನಿಲಮಾಗಕ್ಕಡವದು. ಇದು ಪಶಿತ್ತು ಉಣ್ಬಾರ್‌ಕು ಮಾತ್ರಮ್; ಇಜ್ಗ**

---

ಹೇಗೆ ಮಾಡುತ್ತಾನೋ, ಹಾಗೆಯೇ ಈ ಉಪಾಯಾನುಷ್ಠಾನವನ್ನು ಮಾಡಿ ಕೃತಕೃತ್ಯನಾದ "**ಅಮೃತ ಇಹಭವತಿ**" ಎಂಬ ಆನಂದದಿಂದ ಇರುವ ಪ್ರಪನ್ನನೂ ಕೂಡ, ನಿತ್ಯನೈಮಿತ್ತಿಕಾನುಷ್ಠಾನಗಳು ಸರ್ವೇಶ್ವರನಿಗೆ ಕೃತಜ್ಞತಾಭಾವದಿಂದ ಮಾಡುವ ಕೈಙ್ಕರ್ಯಗಳೆಂದು ಭಾವಿಸಿ, ಅವುಗಳಿಂದ ಆತನು ಪ್ರೀತನಾಗುವನೆಂದು ನಂಬಿ ಅನುಷ್ಠಿಸತಕ್ಕದ್ದೆಂಬ ತಾತ್ಪರ್ಯವು. ಇದು ಇನ್ನು ಯಾವ ಪ್ರಯೋಜನಾಭಿಪ್ರಾಯವೂ ಇಲ್ಲದೆ ಭಗವತ್ಪ್ರೀತಿಗಾಗಿಯೇ ಅನುಷ್ಠಾನವೆಂಬುದಕ್ಕೆ ದೃಷ್ಟಾಂತವು (೨) ಇನ್ನೊಂದು ದೃಷ್ಟಾಂತವನ್ನೂ ದಯಪಾಲಿಸುತ್ತಾರೆ.—"**ಅರೋಗನುಡೈಯ ಪಾಲ್‌ವಾತ್ತುಣ್ಣುಗೈಪ್ಪೋಲವುಮ್** - ರೋಗವಿಲ್ಲದವನು ಹಾಲನ್ನು ತೆಗದುಕೊಂಡು ಕುಡಿಯುವಹಾಗೂ ಈ ನಿತ್ಯನೈಮಿತ್ತಿಕಗಳ ಅನುಷ್ಠಾನವೆಂದೂ ಉಪದೇಶಿಸಿರುತ್ತಾರೆ ಸಾಧಾರಣವಾಗಿ ಹಾಲಿನ ಸೇವನೆಯು ರೋಗಿಗೆ ಆರೋಗ್ಯಪ್ರಾಪ್ತಿಗಾಗಿ ಹೇಳಲ್ಪಟ್ಟಿರುತ್ತದೆ. ಅರೋಗನಿಗೆ ಅನಾವಶ್ಯಕವಾದರೂ ಹಾಲಿನಲ್ಲಿ ಪ್ರೀತಿಮಾತ್ರದಿಂದ ಹೇಗೆ ಕುಡಿದು ದೇಹಾರೋಗ್ಯವನ್ನು ದೃಢಪಡಿಸಿಕೊಳ್ಳುತ್ತಾನೋ, ಹಾಗೆಯೇ ನಿತ್ಯನೈಮಿತ್ತಿಕಾನುಷ್ಠಾನಗಳನ್ನು ಇಷ್ಟದಿಂದ ಅನುಷ್ಠಿಸಿ ಭಗವತ್ಪ್ರೀತಿಯು ವೃದ್ಧಿ ಹೊಂದುವಹಾಗೆ ಮಾಡಿಕೊಳ್ಳತಕ್ಕದ್ದೆಂಬ ಭಾವವು. ಇದು, ಸ್ವಯಂ ಪ್ರಯೋಜನವೆಂದು ಬೋಧಿಸುವದಕ್ಕಾಗಿ ಕೊಟ್ಟ ದೃಷ್ಟಾಂತವು. ಹೀಗೆ ನಿತ್ಯನೈಮಿತ್ತಿಕ ಕರ್ಮಗಳನ್ನು, **ಅನುಷ್ಠಿಕ್ಕೈ**-ಅನುಷ್ಠಿಸೋಣವು **ಸಾತ್ವಿಕ ತ್ಯಾಗತ್ತಿನ್** - ಸಾತ್ವಿಕತ್ಯಾಗದ, **ಎಲ್ಲೈ ನಿಲಮಾಗಕ್ಕಡವದು** - ಆಚೆಯ ದಡವಾಗಿ ಆಗುವದು, ಎಂದರೆ ಅದರ ಪರಮಾವಧಿ ಸ್ಥಳವಾಗಿ ಆಗುತ್ತದೆಂಬ ಭಾವವು. ಪ್ರಪನ್ನನಾದ ಪರಮಭಾಗವತನು ಮಹಾ ವಿಶ್ವಾಸದಿಂದ ಮಾಡುವ ನಿತ್ಯನೈಮಿತ್ತಿಕಾನುಷ್ಠಾನಗಳ ಅನುಸಂಧಾನವೀಗ ಈ ಸಾತ್ವಿಕ ತ್ಯಾಗದ ಚರಮಾವಧಿ ದಶೆ, ಪರಾಕಾಷ್ಠಾ ದಶೆಯೆಂದು ಭಾವಿಸತಕ್ಕದ್ದೆಂಬ ತಾತ್ಪರ್ಯವು.

ಹಿಂದೆ ಪೂರ್ವಪಕ್ಷಿಯು ನಿತ್ಯನೈಮಿತ್ತಿಕ ಕರ್ಮಗಳ ಅನುಷ್ಠಾನವು ಆಯಾಸಸಾಧ್ಯವಾದುದರಿಂದ, ಅದು ಸುಖರೂಪವಾಗುವದಿಲ್ಲವು; ಅದರಲ್ಲಿ ಭೋಗ್ಯತಾಬುದ್ಧಿ ಉಂಟಾಗುವದಕ್ಕೆ ಕಾರಣವಿಲ್ಲವೆಂದು ಆಕ್ಷೇಪವನ್ನು ಹೇಳಿದ್ದನು. ಅದಕ್ಕೆ ದೃಷ್ಟಾಂತ ಮುಖೇನ ಸಮಾಧಾನವನ್ನು ಹೇಳುತ್ತಾರೆ.—**ಇದು** - ಹೀಗೆ ನಿತ್ಯನೈಮಿತ್ತಿಕ ಕರ್ಮಾನುಷ್ಠಾನವು ಸಾತ್ವಿಕತ್ಯಾಗದ ಪರಾಕಾಷ್ಠಾಯುಕ್ತವಾಗಿರುವದು, **ಪಶಿತ್ತು ಉಣ್ಬಾರ್ಕ್ಕು ಮಾತ್ರಮ್** - ಹಸಿವಿನಿಂದ ಊಟಮಾಡುವರಿಗೆ

**ನಲ್ಲಾದಪೋದು, ಒಟ್ಟುತ್ತುಕ್ಕಪ್ಪಮ್ ತಿಣ್ಬಾರ್ ಮಾತ್ರಮ್.**

ಮಾತ್ರ ಹೇಗೋ ಹಾಗೆ; ಎಂದರೆ ಊಟಮಾಡಬೇಕು ಎಂಬ ಹಸಿವಿನಿಂದ ಊಟ ಮಾಡುವವರಿಗೂ ಕೂಡ ಹೇಗೆ ಊಟದಲ್ಲಿ ಭೋಗ್ಯತಾ ಬುದ್ಧಿ ಯುಂಟಾಗುತ್ತದೋ ಹಾಗೆ ಎಂಬ ಭಾವವು. ಆಯಾಸ ಸಾಧ್ಯವಾದುದಕ್ಕೆ ಭೋಗ್ಯತಾಬುದ್ಧಿ ಹೇಗೆ ಎಂದರೆ ಹಸಿವಿನಿಂದ ಪೀಡಿತನಿಗೆ ಆಹಾರ ಸಂಪಾದ ನೆಯು ಆಯಾಸ ಸಾಧ್ಯವಾಗಿ ಕ್ಷುನ್ನಿವೃತ್ತಿಗೆ ಕಾರಣಭೂತವಾದರೂ ಆ ಆಹಾರದಲ್ಲಿ ಭೋಗ್ಯತಾಬುದ್ಧಿಯು ಹೇಗೆ ಉಂಟಾಗುತ್ತದೋ ಹಾಗೆ ಎಂಬ ಭಾವ ವು ಅಂತವನಿಗೆ ಊಟಮಾಡುವದೇನೂ ಆಯಾಸಕರವಾದ ಪ್ರವೃತ್ತಿಯಲ್ಲವು. ಹಾಗೆಯೇ ಸಾರಪ್ರಕಾಶಿಕಾವ್ಯಾಖ್ಯಾತೃವು ಇನ್ನೊಂದು ದೃಷ್ಟಾಂತವನ್ನು ಕೊಟ್ಟಿ ರುತ್ತಾರೆ. ಒಬ್ಬ ಕಾಮಿನಿಯನ್ನು ವಶಮಾಡಿಕೊಳ್ಳುವದಕ್ಕಾಗಿ ಆಕೆಯ ಪರಿಚರಣ ವನ್ನು ಆಯಾಸವೆಂದು ಭಾವಿಸದೆ ಪ್ರೀತಿಯಿಂದ ಕಾಮುಕನು ಕೈಕೊಳ್ಳುವನೋ, ಹಾಗೆಯೇ ಈ ಪ್ರಪನ್ನನೂ ಸ್ವಾಮಿಯನ್ನು ಪ್ರೀತಿಗೊಳಿಸುವದಕ್ಕಾಗಿ ಆಯಾಸಾ ದಿಗಳನ್ನು ಪರಿಗಣಿಸದೇ ಇರುವದು ಮಾತ್ರವೇ ಅಲ್ಲದೆ, ಪರಮ ಸಂತೋಷ ದಿಂದ ಭಗವಂತನು ಪ್ರೀತನಾಗುವನೆಂಬ ಭಾವದಿಂದ ನಿತ್ಯನೈಮಿತ್ತಿಕಾನುಷ್ಠಾನ ಗಳನ್ನು ಕೈಕೊಳ್ಳುವನೆಂಬ ಭಾವವು. ಇಜ್ಞನಲ್ಲಾದಪೋದು - ಹೀಗೆ ಹಸಿವಿ ನಿಂದ ಉಂಡವರಹಾಗೆ ಭೋಗ್ಯತ್ವ ಬುದ್ಧಿ ಇಲ್ಲದೇ ಹೋದರೆ, ಓಟ್ಟುತ್ತುಕ್ಕ ಪ್ಪಮ್ ತಿಣ್ಬಾರ್ ಮಾತ್ರಮ್, ಒಟ್ಟುತ್ತುಕ್ಕು - ಹಸಿವಿಲ್ಲದೆ ಬರೀ ಪಂಥಕ್ಕಾಗಿ, ಅಪ್ಪಮ್ - ಭಕ್ಷ್ಯವಿಶೇಷವನ್ನು, ತಿಣ್ಬಾರ್ ಮಾತ್ರಮ್ - ತಿನ್ನುವರಹಾಗಾಗು ವದು; ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನವು ಅನಿಷ್ಟ ನಿವೃತ್ತಿಪ್ರಯೋಜನ ಕ್ಕಾಗಿ ಎಂದು ಇಷ್ಟುಮಾತ್ರವೇಯಾದರೆ, ಇಷ್ಟು ಅಪ್ಪಗಳನ್ನು ತಿಂದರೆ ಇಷ್ಟು ರೂಪಾಯಿಗಳ ಪಂದ್ಯವೆಂದು ಜೂಜು ಕಟ್ಟಿಕೊಂಡು ತಿಂದರೆ ಹೇಗೆ ಭೋಗ್ಯತಾ ಬುದ್ಧಿಯಿಲ್ಲದೆ ಹೋಗುತ್ತದೋ, ಹಾಗೆಯೇ ನಿತ್ಯ ನೈಮಿತ್ತಿಕಗಳಲ್ಲೂ ಭೋಗ್ಯತಾ ಬುದ್ಧಿಯು ಇಲ್ಲದೆ ಹೋಗುತ್ತದೆ ಎಂಬ ತಾತ್ಪರ್ಯವು. ಆ ಭೋಗ್ಯತ್ವವುಂಟಾಗ ಬೇಕಾದರೆ ಹಸಿವಿರಬೇಕು, ಹಾಗೆಯೇ ಇಲ್ಲಿಯೂ ಈ ನಿತ್ಯನೈಮಿತ್ತಿಕಾನುಷ್ಠಾನ ದಿಂದ ಭಗವತ್ಪ್ರೀತಿಯುಂಟಾಗಬೇಕೆಂಬ ಶ್ರದ್ಧೆಯಿಂದ ಮಾಡಿದರೆ ಅದಕ್ಕೆ ಭೋಗ್ಯ ತ್ವವೂ ಉಂಟಾಗುತ್ತದೆಂಬ ಭಾವವು. ದುಡ್ಡಿಗಾಗಿ ದ್ಯೂತಮಾಡಿಕೊಂಡು ತಿನ್ನುವವರಿಗೆ ಹಣದಮೇಲೆ ಪ್ರೀತಿಯೇ ವಿನಾ, ಸ್ವಯಂಪ್ರಯೋಜನ ಬುದ್ಧಿ ಯಿಲ್ಲವು, ಊಟದ ಆನಂದವೇ ಇಲ್ಲವು. ಈ ಕರ್ಮಾನುಷ್ಠಾನದಲ್ಲಿ ಪಾಪ ಪರಿ ಹಾರಕ್ಕಾಗಿ ನಾನು ಮಾಡುತ್ತೇನೆಂಬ ಫಲಸಂಗಬುದ್ಧಿ ಇಲ್ಲದೆ ಭೋಗ್ಯತಾಬುದ್ಧಿ

## ಗೀತಾ ಚರಮಶ್ಲೋಕೇ ನ ಕರ್ಮಸ್ವರೂಪತ್ಯಾಗೋಕ್ತಿಃ, ಅಪಿತು ಸಾತ್ವಿಕ ತ್ಯಾಗೋಕ್ತಿಃ.

(ಗೀತಾಭಾಷ್ಯತ್ತಿಲ್) "ಸರ್ವಧರ್ಮಾನ್ ಪರಿತ್ಯಜ್ಯ" ಎನ್ಗಿರ ವಿಡತ್ತಿಲ್ ಪ್ರಥಮ ಯೋಜನೈಯಿಲ್ ಬುದ್ಧಿವಿಶೇಷರೂಪಮಾನ ಸಾತ್ವಿಕತ್ಯಾಗಂ ಶೊಲ್ಲುಗಿರದೆನ್ರು ಶ್ರೀ ಭಾಷ್ಯಕಾರರರುಳಿಚ್ಚೆಯ್‌ದಾರ್.

---

ಇದು ಭಗವತ್ಪ್ರೀತಿಗಾಗಿಯೇ ಮಾಡುತ್ತೇನೆಂಬ ಭಾವವಿರಬೇಕೆಂಬ ತಾತ್ಪರ್ಯವು.

ಮುಂದೆ ಪೂರ್ವಪಕ್ಷಿಯು ಹೇಳಬಹುದೇನೆಂದರೆ—ಗೀತಾ ಚರಮಶ್ಲೋಕದಲ್ಲಿ, ಸರ್ವಧರ್ಮಾನ್ ಪರಿತ್ಯಜ್ಯ ಎಂದು ಹೇಳುವಾಗ, ಸರ್ವ ನಿತ್ಯನೈಮಿತ್ತಿಕ ಕರ್ಮಾನುಷ್ಠಾನವೂ ಪ್ರಪನ್ನನಿಗೆ ಅನಾವಶ್ಯಕವೆಂಬ ಭಾವದಿಂದ ಹೇಳಲ್ಪಡಲಿಲ್ಲವೋ? ಅದ್ವೈತಸಿದ್ಧಾಂತಿಗಳು ಹಾಗೆ ಅಭಿಪ್ರಾಯಪಡುವರಲ್ಲವೇ? ಸರ್ವಧರ್ಮಾನ್ ಎಂಬಲ್ಲಿ ಸರ್ವ ಶಬ್ದದಲ್ಲಿ ಈ ನಿತ್ಯನೈಮಿತ್ತಿಕ ಕರ್ಮಾನುಷ್ಠಾನಗಳು ಸೇರಲಿಲ್ಲವೋ? ಎಂದರೆ ಅಲ್ಲಿಯೂ ಸಾತ್ವಿಕತ್ಯಾಗವೇ ಹೇಳಲ್ಪಟ್ಟಿತೆಂದು ಶ್ರೀ ಭಾಷ್ಯಕಾರರು ಆ ಶ್ಲೋಕಕ್ಕೆ ವ್ಯಾಖ್ಯಾನವನ್ನು ದಯಪಾಲಿಸಿರುತ್ತಾರೆಂದು ತಿಳಿಸುತ್ತಾರೆ.

## ಗೀತಾ ಚರಮಶ್ಲೋಕದಲ್ಲೂ ಹೇಳಿರುವುದು ಸಾತ್ವಿಕತ್ಯಾಗವೇ ವಿನಾ ಆಜ್ಞಾ ಕೈಙ್ಕರ್ಯ ತ್ಯಾಗವಲ್ಲವು.

ಗೀತೆಯ ೧೮-೬೬ನೆಯ ಶ್ಲೋಕವು ಗೀತಾ ಚರಮಶ್ಲೋಕವೆನಿಸುತ್ತದೆ. ಈ ಶ್ಲೋಕವು ತುಂಬಾ ಅರ್ಥಗರ್ಭಿತವಾಗಿರುವದರಿಂದ ಮೂರು ರಹಸ್ಯಗಳಲ್ಲಿ ಒಂದಾಗಿ ನಾವು ಭಾವಿಸುವೆವು. ಮುಂದೆ ಶ್ರೀ ದೇಶಿಕರವರೇ ಇವರಲ್ಲಿ ತೋರಿ ಬರುವ ಸಮಸ್ತಾರ್ಥಗಳನ್ನು ಸವಿಸ್ತಾರವಾಗಿ ವ್ಯಕ್ತಪಡಿಸುತ್ತಾರೆ. ಸರ್ವಧರ್ಮಾನ್ ಪರಿತ್ಯಜ್ಯ ಎಂಬುದಕ್ಕೆ ಸ್ವಾಮಿ ಭಾಷ್ಯಕಾರರವರು ಎರಡು ವಿಧವಾದ ಯೋಜನೆಯನ್ನು ತೋರಿಸಿರುತ್ತಾರೆ. ಪ್ರಥಮಯೋಜನೆಯಲ್ಲಿ ಸರ್ವಧರ್ಮಾನ್ ಪರಿತ್ಯಜ್ಯ ಎಂಬುದಕ್ಕೆ ಅದೇ ೧೮ನೆಯ ಅಧ್ಯಾಯದ ಆದಿಯಲ್ಲಿ "ನಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ । ಯಸ್ತು ಕರ್ಮಫಲತ್ಯಾಗೀ ಸತ್ಯಾಗೀತ್ಯಭಿಧೀಯತೇ" (ಗೀ ೧೮. ೧೧) ಆಜ್ಞಾಕೈಂಕರ್ಯಗಳಾದ ನಿತ್ಯನೈಮಿತ್ತಿಕ ಕರ್ಮಗಳು ಈತನು ದೇಹಭೃತ್ತಾಗಿ ಜನ್ಮವೆತ್ತಿರುವದರಿಂದ ಅದಕ್ಕನುಗುಣವಾಗಿ ಜನ್ಮವಿರುವ ತನಕ ಅಂಟಿದ್ದು; ಇದನ್ನು ಬಿಡಲು ಸಾಧ್ಯವಿಲ್ಲವು ಎಂದು ಹೇಳಿ, ಕರ್ಮಗಳಲ್ಲಿ ಕರ್ತೃತ್ವ, ಮಮತಾ, ಫಲತ್ಯಾಗಗಳೇ ಉಪದೇಶಿಸಲ್ಪಟ್ಟಿರುವದರಿಂದ ಅದಕ್ಕನುಸಾರವಾಗಿಯೇ ಅರ್ಥ ಹೇಳಬೇಕೇ ವಿನಾ, ಅದಕ್ಕೆ ವಿರುದ್ಧವಾಗಿ ವರ್ಣಾಶ್ರಮ

ರ್ಮ ತ್ಯಾಗವನ್ನು ಹೇಳಬಹುದೋ? ಇದನ್ನೇ ಮನಸ್ಸಿನಲ್ಲಿಟ್ಟು ಶ್ರೀ ಭಾಷ್ಯ
ಾರರು, ಸರ್ವಧರ್ಮಾನ್ ಪರಿತ್ಯಜ್ಯ ಎಂದರೆ ಈಗ ಹೇಳಿ ಮುಗಿಸಿದ ಪರಮ ನಿಶ್ರೇ
ಯಸ್ಸಿಗೆ ಸಾಧನಗಳಾದ ಮತ್ತು ನನ್ನ ಆರಾಧನರೂಪಗಳಾದ ಕರ್ಮಯೋಗ ಜ್ಞಾನ
ಯೋಗ ಭಕ್ತಿಯೋಗಗಳ ಪರಂಪರೆಯಲ್ಲಿ, ಕರ್ತೃತ್ವ, ಮಮತಾ, ಫಲ ಇವುಗ
ಳನ್ನು ಪರಿತ್ಯಾಗಮಾಡಿ ನನ್ನಲ್ಲಿ ನಿರತಿಶಯ ಪ್ರೀತಿಯಿಂದ ಮಾಡತಕ್ಕದ್ದೆಂದು
ರ್ಥಮಾಡಿ ಸಾತ್ವಿಕತ್ಯಾಗವೇ ಹೇಳಲ್ಪಟ್ಟಿತೆಂದು ಉಪದೇಶಿಸುತ್ತಾರೆ.–ಯಾವಾಗ
ರ್ಮಗಳಲ್ಲಿ ಕರ್ತೃತ್ವವೂ, ಮಮತೆಯೂ, ಫಲವೂ, ತ್ಯಾಗಮಾಡಲ್ಪಟ್ಟಿತೋ
ಗ ಹೇಳಲ್ಪಟ್ಟ ಸರ್ವಧರ್ಮಗಳ ಪರಿತ್ಯಾಗವೇ ಆಯಿತು ಎಂಬ ಭಾವದಿಂದ
ಸರ್ವಧರ್ಮಾನ್ ಪರಿತ್ಯಜ್ಯ" ಎಂದು ಹೇಳಲ್ಪಟ್ಟಿತೆಂದು ಉಪದೇಶಿಸುತ್ತಾರೆ.
ರ್ವಧರ್ಮಾನ್ ಪರಿತ್ಯಜ್ಯ ಎಙ್ಗುರವಿಡತ್ತಿಲ್ - ಎಂಬ ಸ್ಥಳದಲ್ಲಿ, ಪ್ರಥಮ
ಯೋಜನೆಯಿಲ್–ಶ್ರೀ ಭಾಷ್ಯಕಾರರು ಎಂಡು ವಿಧವಾಗಿ ಅರ್ಥಮಾಡಬಹುದೆಂದು
ಹೇಳಿ, ದಯಪಾಲಿಸಿದ ಮೊದಲನೆಯ ಅಭಿಪ್ರಾಯದ ಪ್ರಕಾರ, ಬುದ್ಧಿ ವಿಶೇಷ
ರೂಪಮಾನ - ಅನುಸಂಧಾನ ರೂಪವಾದ, ಸಾತ್ವಿಕತ್ಯಾಗವು ಶೊಲ್ಲುಗಿರ
ನ್ರು - ಹೇಳಲ್ಪಡುತ್ತದೆಂದು, ಶ್ರೀ ಭಾಷ್ಯಕಾರರುಳಿಚ್ಚೆಯ್‌ದಾರ್-ಶ್ರೀಭಾಷ್ಯ
ಾರರು ಕೃಪಯಾ ಭಾಷ್ಯವನ್ನು ಬರೆದಿರುತ್ತಾರೆ. ಅಲ್ಲಿ ಅವರು ಅಪ್ಪಣೆ ಕೊಡಿಸಿ
ುವದೇನೆಂದರೆ.—ಇಲ್ಲಿ ಸರ್ವಧರ್ಮಾನ್ ಎಂಬಲ್ಲಿ ಸರ್ವ ಶಬ್ದಕ್ಕೆ ಅರ್ಥವೇನೆಂಬು
ದನ್ನು ತಿಳಿಸುತ್ತಾರೆ. ಕರ್ಮಯೋಗ ಜ್ಞಾನಯೋಗ ಭಕ್ತಿಯೋಗ ರೂಪಾನ್
ಸರ್ವಾನ್ ಧರ್ಮಾನ್" ಹೀಗೆ ಹಿಂದೆ ಇಷ್ಟುದೂರ ಉಪಪಾದಿಸಿ ಹೇಳಲ್ಪಟ್ಟ ಸಕಲ
ಧರ್ಮಗಳನ್ನೂ, ಅದು ಎಂತಹವೆಂದರೆ ಹೇಳುತ್ತಾರೆ- ಪರಮ ನಿಶ್ರೇಯಸ
ಸಾಧನ ಭೂತಾನ್" ನಿರತಿಶಯ ಮೋಕ್ಷಸಾಧನಭೂತವಾಗಿ ನನ್ನ ಆರಾಧನ
ರೂಪವಾದುದೆಂದು ಹೇಳಲ್ಪಟ್ಟಿತು. ಇಂತಹ ಸಾಧನ ಕರ್ಮಗಳನ್ನೆಲ್ಲಾ, ಪರಿ
ತ್ಯಜ್ಯ ವೆಂಬುದಕ್ಕೆ ಮುಂದೆ ಅರ್ಥ ಬರೆಯುತ್ತಾರೆ. "ಉಕ್ತರೀತ್ಯಾ ಫಲಕರ್ಮ
ಕರ್ತೃತ್ವಾದಿ ಪರಿತ್ಯಾಗೇನ ಪರಿತ್ಯಜ್ಯ" ಮೇಲೆ ನಾನು ನಿನಗೆ ಉಪದೇಶಿಸಿದ
ರೀತಿಯಲ್ಲಿ ಆ ಯೋಗ ಪರಂಪರೆಗಳಲ್ಲಿ ಕರ್ಮದಲ್ಲಿ ಮಮತಾ ಕರ್ತೃತ್ವ ಅವು
ಗಳ ಫಲವೆಲ್ಲವನ್ನೂ ಪರಿತ್ಯಾಗಮಾಡುವರೀತಿಯಲ್ಲಿ ತ್ಯಜಿಸಿ ಎಂದು ಅರ್ಥಮಾಡಿ
ುತ್ತಾರೆ. ಹೀಗೆ ಅರ್ಥಮಾಡುವದರಿಂದ ಪೂರ್ವಾಪರವಿರೋಧವಿಲ್ಲದೆ ಸಾಮಂ
ಜಸ್ಯ ಉಂಟಾಗುತ್ತದೆ, ಹಾಗಲ್ಲದೆ ಸರ್ವ ಶಬ್ದವಿರುವದರಿಂದ ಈಗ ಉಪದೇಶಿ
ಸಿದ ಸರ್ವ ಧರ್ಮಗಳಲ್ಲದೆ ವರ್ಣಾಶ್ರಮ ಸಮಸ್ತಧರ್ಮಗಳ ಪರಿತ್ಯಾಗಕ್ಕೂ ಅನು
ಜ್ಞೆಯನ್ನು ಇಲ್ಲಿ ಶ್ರೀಕೃಷ್ಣಭಗವಾನರವರು ದಯಪಾಲಿಸಿದರೆಂದು ಅರ್ಥಮಾಡಿ
ಬಿಟ್ಟರೆ, ದುಷ್ಟನಿಗ್ರಹರೂಪವಾದ ಕ್ಷತ್ರಿಯಧರ್ಮ ಪರಿತ್ಯಾಗಮಾಡಿದವನಿಗೆ,

ನೀನು ಮಾಡಿದುದು ಅಧರ್ಮವು ಎಂದು ಹೇಳುತ್ತಾ ಬಂದು, ಕೊನೆಗೆ ಕ್ಷತ್ರಿಯ ಧರ್ಮವನ್ನೂ ಬಿಡತಕ್ಕದ್ದೇ ಎಂದು ಹೇಳಿದರೆ, ಗೀತಾ ಶಾಸ್ತ್ರಕ್ಕೆ ಸಾಮಂಜಸ್ಯವೂ ಐಕಕಂಠ್ಯವೂ ತೊಲಗಿದವು. ಉಪದೇಶಕನ ಮಾತುಗಳು ಬುದ್ಧಿ ವೈಕಲ್ಯವಿರುವ ಹುಚ್ಚನಹಾಗೆ ವಿಪರೀತವಾದುವುಗಳಾಗಿ ನಂಬಿಕೆಗೆ ಅರ್ಹವಲ್ಲವೆಂದಾಗುತ್ತದೆ. ವರ್ಣಸಂಕರವಾಗುತ್ತದೆಯೇ ಎಂಬ ಗೀತಾಚಾರ್ಯರ ವಿಷಾದವೂ ವ್ಯರ್ಥವು. ಹೀಗೆ ಅಸಂಬದ್ಧ ಪ್ರಲಾಪಕ್ಕೆ ಆಸ್ಪದವಾಗುತ್ತದೆ. ಆಜ್ಞಾ ಕೈಙ್ಕರ್ಯಗಳನ್ನು ವಿಧಿಸುವ ಸಮಸ್ತ ಶಾಸ್ತ್ರಗಳಿಗೂ ವಿರುದ್ಧವಾಗುತ್ತದೆ. ಹೀಗೆ ಸರ್ವಧರ್ಮಗಳ ಸ್ವರೂಪತ್ಯಾಗದ ಉಪದೇಶವೇ ಪಾರಮಾರ್ಥಿಕವಾದರೆ, ಇಷ್ಟುದೂರ ಶ್ರೀಕೃಷ್ಣ ಭಗವಾನರವರು ಈ ಕಷ್ಟವಾದ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ ಪರಂಪರೆಯನ್ನೂ ಯಾವಜ್ಜೀವ ಉಪಾಸನೆಯನ್ನೂ ಅಷ್ಟು ಕಷ್ಟಪಟ್ಟು ಏಕೆ ಉಪದೇಶಿಸಿದರು? ಎಂದು ಕೇಳಬೇಕಾಗುತ್ತದೆ. ಇದೇ ವಾಸ್ತವವಾದರೆ ಅರ್ಜುನನು ಬಿಸಾಡಿದ ಗಾಂಡೀವವನ್ನು ತೆಗೆದುಕೊಂಡು ಯುದ್ಧ ಮಾಡಲು ಈ ಶ್ಲೋಕವು ಹೇಗೆ ಪ್ರೋತ್ಸಾಹವನ್ನು ಕೊಟ್ಟೀತು? ಸರ್ವ ಕರ್ಮ ಪರಿತ್ಯಾಗವು ಮುಖ್ಯವೆಂದು ಹೇಳುವವರಿಗೆ ಆ ಶ್ಲೋಕದಲ್ಲೇ ಪುನಃ ಕರ್ಮ ಬೋಧನೆಯು ಶರಣಂ ವ್ರಜ ಎಂದು ಹೇಳಲ್ಪಟ್ಟದೆಯಲ್ಲಾ? ಆಗಲೂ ಅದೂ ಸರ್ವ ಕರ್ಮ ಪರಿತ್ಯಾಗದಲ್ಲಿ ಸೇರಲಿಲ್ಲವೇ? ಸರ್ವ ಕರ್ಮಗಳ ಪರಿತ್ಯಾಗ ಮಾಡು ಎಂದು ಹೇಳುವಾಗಲೇ ಪುನಃ ಕರ್ಮಬೋಧನೆಯೇ? ಕರಿಷ್ಯೇ ವಚನಂತವ (ಗೀ. ೧೮. ೭೩) ನಿನ್ನ ಆಜ್ಞಾನುಸಾರವಾಗಿಯುದ್ಧ ಮಾಡುತ್ತೇನೆಂದು ಅರ್ಜುನನು ಒಪ್ಪಿಕೊಂಡಿದುದು ಹೇಗೆ? "ಕರಿಷ್ಯೇವಚನಂತವ" ಎಂಬುದಕ್ಕೂ ವಿಜಾತೀಯವಾಗಿ ಅರ್ಥಮಾಡಿರುತ್ತಾರೆ. "ನಮೇ ಕರ್ತ್ತವ್ಯಮಸ್ತೀತ್ಯಭಿಪ್ರಾಯಃ" ಕರ್ತ್ತವ್ಯವಾಗಿರುವದು ನನಗೆ ಯಾವುದೂ ಇಲ್ಲವೆಂಬುದು ಅಭಿಪ್ರಾಯವೆಂದು ವ್ಯಾಖ್ಯಾನ ಮಾಡಿರುತ್ತಾರೆ. ಹಾಗಾದರೆ ಯುದ್ಧಮಾಡುವದೂ ಕರ್ತ್ತವ್ಯವಲ್ಲವೆಂದಾಯಿತು. ಕರ್ತ್ತವ್ಯವನ್ನು ಬಿಡತಕ್ಕದ್ದು ಸರ್ವಾತ್ಮನಾ ಕೂಡದೆಂದು ಹೇಳುವದಕ್ಕೇನೇ ಗೀತಾ ಶಾಸ್ತ್ರವು ಹೊರಟದ್ದು. ಅರ್ಜುನನು ತನಗೆ ಕರ್ತ್ತವ್ಯವೇ ಇಲ್ಲವೆಂದು ತಿಳಿದರೆ ಆತನು ಹೇಗೆ ಪ್ರಾಜ್ಞನಾದಾನು? ಕರಿಷ್ಯೇ ವಚನಂ ತವ ಎಂಬುದಕ್ಕೆ "ನಮೇ ಕರ್ತ್ತವ್ಯಮಸ್ತಿ ಎಂದು ವ್ಯಾಖ್ಯಾನ ಹೇಗೋ ಪ್ರಾಜ್ಞರೇ ಊಹಿಸತಕ್ಕದ್ದು. ಇಂತಹ ಅನೇಕ ಆಕ್ಷೇಪಣೆಗೆ ಉತ್ತರವಿಲ್ಲದೇ ಹೋಗುವದರಿಂದ ಶ್ರೀ ಭಾಷ್ಯಕಾರರ ಸಾತ್ತ್ವಿಕ ತ್ಯಾಗರೂಪದ ಭಾಷ್ಯವೇ ಪರಮ ಸಮಂಜಸವಾದುದು ಎಂಬ ಭಾವದಿಂದ, "ಸಾತ್ತ್ವಿಕತ್ಯಾಗಂ ಶೊಲ್ಲುಗಿರದೆನ್ರು ಶ್ರೀ ಭಾಷ್ಯಕಾರರುಳಿಚ್ಚೆಯ್ದಾರ್" ಎಂಬ ಪ್ರಯೋಗವು

ಚರಮಶ್ಲೋಕೋಕ್ತ ಸಾತ್ವಿಕತ್ಯಾಗಾನುಸಂಧಾನವಿಶೇಷಂ
ಪ್ರಪತ್ತಿನಿಷ್ಠಸ್ಯಾಪಿ ಸತ್ತಾದಾಯಕಃ.

ಇಬ್ಬುದ್ಧಿವಿಶೇಷಮ್ ಸ್ವತಂತ್ರಪ್ರಪತ್ತಿನಿಷ್ಠನುಕ್ಕು ಪ್ರಪತ್ತ್ಯನುಷ್ಠಾನ ಕಾಲತ್ತಿಲುಮ್, ಪಿನ್ಬು ಸ್ವಯಂ ಪ್ರಯೋಜನಮಾಯ್ ಉಪಾಯತ್ತೋಡು ತುವಕ್ಕತ್ತ ಉತ್ತರ ಕೃತ್ಯತ್ತಿಲು ಮುಪಜೀವ್ಯಮ್.

ಚರಮ ಶ್ಲೋಕದಲ್ಲಿನ ಸಾತ್ವಿಕತ್ಯಾಗರೂಪಾನುಸಂಧಾನವು ಪ್ರಪತ್ತಿನಿಷ್ಠನಿಗೂ ಸತ್ತಾದಾಯಕವು.

ಹೀಗೆ ಕರ್ತೃತ್ವಫಲಗಳಲ್ಲಿ ಮಮತೆಯನ್ನು ಮುಕ್ತಸಜ್ಜನಾಗಿ ಯೋಗವನ್ನು ಅದಕ್ಕೆ ಅಜ್ಞವಾದ ಶರಣಾಗತಿಯೊಂದಿಗೆ ಅನುಷ್ಠಿಸತಕ್ಕದ್ದು ಗೀತಾಶಾಸ್ತ್ರದ ಫಲಿತಾರ್ಥವೆಂದು ಹೇಳಿ ಶರಣ್ಯನು ಉಪದೇಶವನ್ನು ನಿಗಮನ ಮಾಡಿದರು ಎಂದು ಹೇಳಿದರೆ ಈ ಚರಮ ಶ್ಲೋಕದ ಉಪದೇಶವು ಭಕ್ತಿಯೋಗನಿಷ್ಠನಿಗೆ ಮಾತ್ರ ಪ್ರಯೋಜನವೆಂದು ಹೇಳಿದಂತಾಯಿತು. ಭರನ್ಯಾಸನಿಷ್ಠನಿಗೂ ಈ ಶ್ಲೋಕವು ತೃತೀಯ ರಹಸ್ಯವಾಗಿ ತುಂಬಾ ಉಪಯುಕ್ತವಾದುದು ಎಂದು ಹೇಳಿ "ವೇದೋತ್ತಂಸವಿಹಾರಸಾರಥಿಗಿರಾ ಗುಂಭೇನ ವಿಸ್ರಂಭಿತಃ" ಎಂದು ಹಿಂದೆ ಸಾರನಿಷ್ಕರ್ಷಾಧಿಕಾರದಲ್ಲಿ ಈ ಶ್ಲೋಕಾನುಸಂಧಾನವು ಪರಮ ಮಹತ್ತಾದುದೆಂದೂ ತುಂಬಾ ಉಪಜೀವ್ಯವಾದುದೆಂದೂ, ಶ್ಲಾಘಿಸಲ್ಪಟ್ಟಿತಲ್ಲಾ, ಆತನಿಗೂ ಹೇಗೆ ಉಪಯುಕ್ತವೆಂದರೆ ತಿಳಿಸುತ್ತಾರೆ.—ಇಬ್ಬುದ್ಧಿ ವಿಶೇಷಮ್-ಈ ಚರಮ ಶ್ಲೋಕದಲ್ಲಿ ಉಪಪಾದಿಸಲ್ಪಟ್ಟ ಸಾತ್ವಿಕತ್ಯಾಗರೂಪ ಅನುಸಂಧಾನ ವಿಶೇಷವು, ಸ್ವತಂತ್ರ ಪ್ರಪತ್ತಿನಿಷ್ಠನುಕ್ಕುಮ್ ಈ ಲಘೂಪಾಯವಾದ ಭರನ್ಯಾಸನಿಷ್ಠನಿಗೂ ಕೂಡ, ಪ್ರಪತ್ತ್ಯನುಷ್ಠಾನಕಾಲತ್ತಿಲುಮ್-ಪ್ರಪತ್ತಿಯನ್ನು ಅನುಷ್ಠಿಸುವಾಗಲೂ, ಪಿನ್ಬು - ಅನಂತರದಲ್ಲೂ, ಸ್ವಯಂ ಪ್ರಯೋಜನವಾಗಿ, ಉಪಾಯತ್ತೋಡು ತುವಕ್ಕತ್ತ - ಉಪಾಯಾನುಷ್ಠಾನಕ್ಕೆ ಏನೊಂದೂ ಸಂಬಂಧವಿಲ್ಲದ ಉತ್ತರಕೃತ್ಯತ್ತಿಲುಮ್ - ಉತ್ತರ ಕೃತ್ಯಾಧಿಕಾರದಲ್ಲಿ ಹೇಳಲ್ಪಟ್ಟ ಹನ್ನೆರಡು ವಿಧ ಉತ್ತರ ಕೃತ್ಯಗಳಲ್ಲಿ ;ನಿತ್ಯನೈಮಿತ್ತಿಕ ಕರ್ಮಾನುಷ್ಠಾನವು ಭಗವದಾರಾಧನರೂಪವಾಗಿ ಅಥವಾ ಕೈಙ್ಕರ್ಯರೂಪವಾಗಿ ಉಪಜೀವ್ಯಮ್ – ಸತ್ತಾದಾಯಕವಾದುದು, ಈತನ ಸ್ವರೂಪಕ್ಕೆ ಯೋಗ್ಯವಾದುದು; ಭಗವತ್ಪ್ರೀತಿಯನ್ನು ವೃದ್ಧಿ ಮಾಡಿಕೊಡುವ ದ್ವಾರಾ ಸತ್ತೆಯನ್ನುಂಟುಮಾಡುವಂಥಾದ್ದೆಂಬ ಭಾವವು. ಆ ಭಗವಂತನ ಪ್ರೀತ್ಯತಿಶಯವಿಲ್ಲದೆ ಈತನಿಗೆ ಆತ್ಮ

ಧಾರಣೆಯೇ ಇಲ್ಲವಾದುದರಿಂದ **ಉಪಜೀವ್ಯವ್** ಎಂಬ ಪ್ರಯೋಗವು. ಈ ಅನುಸಂಧಾನವು ಭರನ್ಯಾಸವನ್ನು ಅನುಷ್ಠಿಸುವಕಾಲದಲ್ಲಿ ಉಪಜೀವ್ಯವಾದುದು ಹೇಗೆಂದರೆ,—ಶ್ರೀ ನಿಗಮಾಂತ ಗುರುಗಳು ಶ್ರೀ ನ್ಯಾಸ ದಶಕದ ಪ್ರಥಮ ಶ್ಲೋಕದಲ್ಲೇ ವ್ಯಕ್ತಪಡಿಸಿರುತ್ತಾರೆ. **"ಅಹಂ ಮದ್ರಕ್ಷಣ ಭರೋ ಮದ್ರಕ್ಷಣ ಫಲಂತಥಾ। ನಮಮ ಶ್ರೀಪತೇ ರೇವೇತ್ಯಾತ್ಮಾನಂ ನಿಕ್ಷಿಪೇದ್ಬುಧಃ"** ನಾನೂ ನನ್ನ ರಕ್ಷಣದ ಭಾರವೂ ನನ್ನ ರಕ್ಷಣೆಯಿಂದುಂಟಾಗುವ ಫಲವೂ ಈ ಮೂರೂ ಲಕ್ಷ್ಮಿಯೊಂದಿಗೆ ನಿತ್ಯಯೋಗ ಹೊಂದಿರುವ ಲಕ್ಷ್ಮೀವಲ್ಲಭನದೇ ವಿನಾ ನನ್ನದಲ್ಲವು, ಎಂಬ ಅನುಸಂಧಾನದಿಂದ ಶಾಸ್ತ್ರಜ್ಞಾನಹೊಂದಿದ ವಿವೇಕಿಯು, ತನ್ನ ಆತ್ಮಾವನ್ನು ಪರಮಾತ್ಮನಲ್ಲಿ ಸಮರ್ಪಿಸತಕ್ಕದ್ದು ಎಂಬುದು ಶ್ಲೋಕಾರ್ಥವು, ಇದೇ ಶರಣಾಗತಿಯು ಎಂಬ ತಾತ್ಪರ್ಯವು. ತಾನೂ ಲಕ್ಷ್ಮೀನಾರಾಯಣರ ವಸ್ತುವು; ಯಾವಾಗ ಅವರ ವಸ್ತುವಾಯಿತೋ, ಅದನ್ನು ರಕ್ಷಿಸಿಕೊಳ್ಳುವ ಭಾರವು ಅವರದೇ. ಯಾವಾಗ ಅವರುಗಳೇ ತಮ್ಮ ವಸ್ತುವನ್ನು ರಕ್ಷಿಸಿಕೊಳ್ಳುತ್ತಾರೋ, ಆಗ ಅದರಿಂದುಂಟಾಗುವಫಲವೂ ಅವರದೇ ಎಂಬುದು ಸಿದ್ಧವು, ಹೀಗೀಗ ಅನುಸಂಧಾನವು ಭರನ್ಯಾಸಕಾಲದಲ್ಲಿಇರತಕ್ಕದ್ದು. ಇದೇ ಸಾತ್ವಿಕತ್ಯಾಗರೂಪವಾದುದು. ಈ ಸಾತ್ವಿಕ ತ್ಯಾಗರೂಪ ಬುದ್ಧಿವಿಶೇಷವು, ಅದೇ ನ್ಯಾಸ ದಶಕದ ಮೂರನೆಯ ಶ್ಲೋಕದಲ್ಲಿ ಇನ್ನೂ ವ್ಯಕ್ತವು. **"ಸ್ವಾಮಿನ್ ಸ್ವಶೇಷಂ ಸ್ವವಶಂ ಸ್ವಭರತ್ವೇನ ನಿರ್ಭರಮ್। ಸ್ವದತ್ತ ಸ್ವಧಿಯಾಸ್ವಾರ್ಥಂ ಸ್ವಸ್ಮಿನ್ ನ್ಯಸ್ಯಸಿ ಮಾಂ ಸ್ವಯಮ್"** ಮೊದಲಿನಶ್ಲೋಕದಲ್ಲಿ ತನ್ನ ಆತ್ಮವನ್ನು ಪ್ರಾಜ್ಞನಾದವನು ಶ್ರೀಪತಿಯ ಪಾದಾರವಿಂದದಲ್ಲಿ ಸಮರ್ಪಿಸತಕ್ಕದ್ದು ಎಂದು ಹೇಳಿದರು. ಈ ಸಮರ್ಪಿಸುವ ಕಾರ್ಯವಾದ ಶರಣಾಗತಿಯೂ ಕೂಡ ಆತನ ಆಧೀನವಾಗಿ ಆತನೇ ಅದನ್ನೂ ನಡೆಸಿಕೊಳ್ಳುತ್ತಾನೆ, ತಾನು ಸಂಪೂರ್ಣ ಪರತಂತ್ರನೆಂದು ಹೇಳಲ್ಪಡುತ್ತದೆ, ಓ ಸ್ವಾಮಿಯೇ, ಜಗತ್ತಿನ ಸರ್ವ ಸ್ವತ್ತು ನಿನ್ನದಾಗಿ ನಾನೂ ನಿನ್ನ ಸ್ವತ್ತಾದುದರಿಂದ, ನನಗೂ ಸಹ ನೀನು ನಿಯಾಮಕನು, ಆದುದರಿಂದಲೇ **ಸ್ವಶೇಷಂ** - ನಿನ್ನ ಸ್ವಂತ ಉಪಯೋಗಕ್ಕಾಗಿಯೇ ನಾನು ಇರುವದು, ಆ ಕಾರಣದಿಂದ, **ಸ್ವವಶಂ** - ಸಂಪೂರ್ಣವಾಗಿ ನಿನಗೆ ಅಧೀನನಾದವನನ್ನು, ಇನ್ನೂ ಎಂತವನನ್ನು ಎಂದರೆ, **ಸ್ವದತ್ತ ಸ್ವಧಿಯಾ**- ಈ ಉಪಾಯಾನುಷ್ಠಾನಕ್ಕೆ ಬೇಕಾದ ಸುಜ್ಞಾನವೂ ನಿನ್ನಿಂದಲೇ ಕೊಡಲ್ಪಟ್ಟದುದು ; ಆದುದರಿಂದ ಅಂತಹ ಬುದ್ಧಿಯನ್ನುಂಟುಮಾಡಿ, **ಸ್ವಾರ್ಥಂ** - ನಿನ್ನ ಸ್ವತ್ತಾದ, **ಮಾಂ** - ದಾಸನಾದ ನನ್ನನ್ನು, **ಸ್ವಯಮ್** - ತಾನೇ ಎಂದರೆ ನೀನೇ, **ಸ್ವಸ್ಮಿನ್** - ನಿನ್ನಲ್ಲೇ, **ನ್ಯಸ್ಯಸಿ** - ಸರ್ವರಕ್ಷಣ ಭರವನ್ನು ಇಟ್ಟುಕೊಳ್ಳುತ್ತೀಯೆ, ಭರನ್ಯಾಸವನ್ನು ಮಾಡಿಸಿಕೊಂಡವನು ನೀನೇ ಎಂಬ

ದಾಗಿ ಸಾತ್ವಿಕ ತ್ಯಾಗವು ಪ್ರಪತ್ತ್ಯನುಷ್ಠಿಸಿದನಂತರವೂ ಹೇಗೆ ಉಪಜೀವ್ಯವೆಂದು ಕೇಳಬಹುದು. ಪ್ರಪತ್ತಿಯನ್ನು ಯಾವಾಗ ಅನುಷ್ಠಿಸಿಬಿಟ್ಟನೋ ಆವಾಗ ಕೃತಕೃತ್ಯನಾದನು, ಅಂತವನಿಗೆ ಈ ನಿತ್ಯ ನೈಮಿತ್ತಿಕಗಳಿಂದ ಉಪಾಯಭಾವದಲ್ಲಿ ಸಾಧಿಸಬೇಕಾದುದು ಯಾವುದೂ ಇಲ್ಲವಾದುದರಿಂದ ಉಪಾಯತ್ವೇನ ಬಿಡುತಕ್ಕುವೆಂದು ಹೇಳಿರುತ್ತಾರೆ. ಆದರೂ, ಈತನ ಜನ್ಮಕ್ಕೆ ಅಂಟಿದುದು ವರ್ಣಾಶ್ರಮೋಚಿತ ನಿತ್ಯಕರ್ಮಗಳಾದುದರಿಂದ ಅವುಗಳನ್ನು ತ್ಯಾಗವಮಾಡಿದರೆ, ಅಂತಹ ಮಹೋಪಕಾರಕನ ಅಪ್ರೀತಿಗೆ ಗುರಿಯಾಗುವದರಿಂದ, ಅಂತಹ ಮಹೋಪಕಾರಕನಲ್ಲಿ ಕೃತಜ್ಞತಾಭಾವವನ್ನಿಟ್ಟು ಆತನ ಮುಖೋಲ್ಲಾಸಕ್ಕಾಗಿ ಮಾಡತಕ್ಕವುಗಳಾಗಿವೆ. ಅವುಗಳಿಂದ ಯಾವುದೊಂದು ಪ್ರಯೋಜನವೂ ಆಗತಕ್ಕದ್ದಿಲ್ಲವಾದುದರಿಂದ, ಅವುಗಳ ಕರ್ತೃತ್ವ, ಮಮತಾ, ಫಲಗಳಲ್ಲಿ ಈತನಿಗೆ ಆಶೆಯಿಲ್ಲವೇ ಇಲ್ಲವು. ಅವುಗಳು ಸ್ವಯಂ ಪ್ರಯೋಜನವಾಗಿ ಭಗವತ್ಪ್ರೀತಿಯನ್ನುಂಟುಮಾಡುವ ಕೈಂಕರ್ಯಗಳು, ಅವುಗಳು ಅವನಿಗೇ ಭೋಗ್ಯವಾದವು ಎಂಬ ಅಭಿಸಂಧಿಯಿಂದ ಅನುಷ್ಠಿಸತಕ್ಕವೆಂಬ ತಾತ್ಪರ್ಯವು. ವಿಭಿಃ ಕರ್ಮಭಿಃ ಭಗವಾನ್ ಪ್ರಿಯತಾಂ ವಾಸುದೇವಃ - ಎಂದು ಅವುಗಳನ್ನೆಲ್ಲಾ ಸಮರ್ಪಿಸತಕ್ಕದ್ದೆಂಬ ಭಾವವು

ಹೀಗೆ ಸ್ವಾಮಿ ದೇಶಿಕರವರು ಚರಮ ಶ್ಲೋಕಾಭಿಪ್ರಾಯವನ್ನು ಪ್ರದರ್ಶಿಸುವವರಲ್ಲಿ ಇನ್ನೊಂದು ವಿಶೇಷಾಭಿಪ್ರಾಯವು ಗ್ರಹಿಸತಕ್ಕದ್ದು ಇರುತ್ತದೆ. ಶ್ರೀಮದ್ಗೀತಾ ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವದು, ಗುರು ಲಘು ಉಪಾಯಗಳೆರಡರಲ್ಲಿ ಗುರೂಪಾಯವಾದ ಭಕ್ತಿಮಾರ್ಗವೇ ಸಮರ್ಥನಾದ ಅರ್ಜುನನಿಗೆ ಉಪದೇಶಿಸಲ್ಪಟ್ಟಿರುವದರಿಂದ, ಶ್ರೀಪತಿಯನ್ನು ವಶಮಾಡಿಕೊಳ್ಳಬೇಕಾದರೆ ಎರಡು ವಿಧ ಉಪಾಯಗಳಲ್ಲೂ, "ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ" (ಶ್ರೀಭಾಷ್ಯ) ಎಂದು ಶ್ರೀ ಯತಿವರ್ಯರು ನಿರ್ಧರಿಸಿರುವದರಿಂದ, ಅಙ್ಗ ಶರಣಾಗತಿಯು ಭಕ್ತಿಯೋಗಕ್ಕೂ, ಅಙ್ಗಿ ಶರಣಾಗತಿಯೂ ಭರನ್ಯಾಸಕ್ಕೂ, ಆವಶ್ಯಕವೆಂದು ನಿಸ್ಸಂಶಯವಾಗಿ ಏರ್ಪಟ್ಟಿತು. ಆದುದರಿಂದ ಶ್ರೀ ಯತಿವರ್ಯರು ಈ ಚರಮಶ್ಲೋಕ ವ್ಯಾಖ್ಯಾನದಲ್ಲಿ, ಲೀಲಾಸಾರಥಿಯು ವಿಧಿಸಿರುವದು ಭಕ್ತ್ಯಙ್ಗವಾಗಿ ಶರಣಾಗತಿಯನ್ನು ಮಾಡು ಎಂದು ಎರಡುವಿಧವಾಗಿ ಯೋಜನೆಯನ್ನು ತೋರಿಸಿರುತ್ತಾರೆ. ಅನಾದಿಕಾಲದಿಂದಲೂ ಬಂದಿರುವ ಪಾಪಪುಣ್ಯಗಳು ತೊಲಗಿದಲ್ಲದೆ ಮೋಕ್ಷಪ್ರಾಪ್ತಿಯು ಇಲ್ಲವು. ಮೊದಲನೆಯ ಯೋಜನೆಯಲ್ಲಿ, ಕರ್ಮಜ್ಞಾನ ಭಕ್ತಿಯೋಗರೂಪ ಧರ್ಮಗಳನ್ನು ಸಾತ್ವಿಕತ್ಯಾಗಪೂರ್ವಕ ಅನುಷ್ಠಿಸಿ ಶರಣಾಗತಿಮಾಡಿದರೆ ಸಂಪೂರ್ಣ ಪಾಪಗಳಿಂದ ಬಿಡುಗಡೆಯೆಂದು ಉಪದೇಶಿಸಲ್ಪಟ್ಟಿತು. ಎರಡನೆಯ ಯೋಜನೆ

ಯಲ್ಲಿ, ಸರ್ವಧರ್ಮಾ - ಈ ಅನಂತಗಳಾದ ವಿಧವಿಧ ಪಾಪಗಳಿಗೆ ಹೇಳಲ್ಪಟ್ಟಿರುವ ವಿಧ ವಿಧ ಪ್ರಾಯಶ್ಚಿತ್ತರೂಪಗಳಾದ ಸರ್ವವಿಧ ಧರ್ಮಗಳನ್ನೂ, ಪರಿತ್ಯಜ್ಯ - ಬಿಟ್ಟು, ಮಾಮೇಕಂ ಶರಣಂವ್ರಜ-ನನ್ನನ್ನು ಶರಣಹೊಂದು, ಆ ಪಾಪಗಳನ್ನೆಲ್ಲಾ ನಾಶಮಾಡಿ ಬಿಡುತ್ತೇನೆಂದು ಉಪದೇಶಿಸಲ್ಪಟ್ಟಿತು. ಆದರೆ ಯತಿವರ್ಯರು ಈ ಗೀತೋಪದೇಶಪ್ರಕಾರ ಭಕ್ತ್ಯುಪಾಯವನ್ನು ಅವಲಂಬಿಸಲಿಲ್ಲವು. ಅವರು ದಯಪಾಲಿಸಿರುವ ಗದ್ಯತ್ರಯಗಳಿಂದ ಭರನ್ಯಾಸವನ್ನು, ಇತರ ಶರಣಾಗತಿ ಶಾಸ್ತ್ರಗಳಪ್ರಕಾರ ಅವಲಂಬಿಸಿ, ಅಂಗಿ ಶರಣಾಗತಿಯನ್ನೇ ಅನುಷ್ಠಿಸಿವರೆಂದು ವ್ಯಕ್ತಪಡುತ್ತದೆ. ಈ ಚರಮ ಶ್ಲೋಕವು ಶರಣಾಗತಿಯನ್ನು ಉಪಪಾದಿಸಿರುವದರಿಂದ, ಆ ದಿವ್ಯ ಲೀಲಾ ಸಾರಥಿಯ ಸೂಕ್ತಿಗೂ, ಅದರ ಶ್ರೀ ಯತಿವರ್ಯರ ಈ ಅಮೋಘ ಭಾಷ್ಯಕ್ಕೂ ಸಹ, ತಾವು ಅನುಷ್ಠಿಸಿದ ಸ್ವತಂತ್ರ ಪ್ರಪತ್ತಿಯ ವಿಷಯವಾಗಿ ವಿಧೇಯಾಂಶವೇನಾದರೂ ಉಂಟೋ ಎಂಬ ವಿಷಯವು ವಿವಾದಾಸ್ಪದವಾಗಿರುತ್ತದೆ. ಇಂತಹ ಶಙ್ಕಾನಿವಾರಣಾರ್ಥವಾಗಿ ಎರಡು ವಿಧ ಯೋಜನೆಯೂ ಈ ಭರನ್ಯಾಸರೂಪ ಶರಣಾಗತಿಗೂ ಅನ್ವಯಿಸುವ ಹಾಗೆಯೇ ಶ್ರೀ ಯತಿವರ್ಯರು ಉಪದೇಶಿಸಿರುತ್ತಾರೆಂದು ಶ್ರೀ ದೇಶಿಕರವರು ಪರಮ ಕೃಪಯಾ ತೋರಿಸಿರುತ್ತಾರೆ. ಅಲ್ಲಿ ಭಕ್ತಿಯೋಗ ನಿಷ್ಠನಿಗೆ ಹೇಳಲ್ಪಟ್ಟ ಸಾತ್ವಿಕತ್ಯಾಗವು ಪ್ರಪತ್ತಿನಿಷ್ಠನಿಗೂ ಅನ್ವಯಿಸುತ್ತದೆಂದು ಹಿಂದಿನ ವಾಕ್ಯದಲ್ಲಿ ತೋರಿಸಿ, ಈತನಿಗೂ ಉಪಜೀವ್ಯವೆಂದೂ, ಈ ಕೃತಕೃತ್ಯನ ಸ್ವರೂಪಕ್ಕೆ ಉಚಿತವಾದುದೆಂದೂ, ಉಪದೇಶಿಸಿದರು. ಹಾಗೆಯೇ ಎರಡನೆಯ ಯೋಜನೆಯ ಅಭಿಪ್ರಾಯವೂ ಭರನ್ಯಾಸನಿಷ್ಠನಿಗೂ ಅನ್ವಯಿಸುತ್ತದೆಂದು ಮುಂದಿನ ವಾಕ್ಯದಿಂದ ವ್ಯಕ್ತಪಡಿಸುತ್ತಾರೆ. ಶ್ರೀ ಯತಿವರ್ಯರು ದಯಪಾಲಿಸಿರುವ ಭಾಷ್ಯವನ್ನು ಚನ್ನಾಗಿ ಪರಿಶೀಲಿಸಿ ನೋಡಿದುದಾದರೆ ಆ ವ್ಯಾಖ್ಯಾನವನ್ನು ಪ್ರಪತ್ತಿಪರವಾಗಿಯೇ ಅನ್ವಯಿಸಬಹುದಾಗಿರುತ್ತದೆ. ಇದೇ ತಮಗೆ ಅಭಿಪ್ರೇತವೆಂದು ಶ್ರೀ ದೇಶಿಕರವರು ವ್ಯಕ್ತವಾಗಿ ಅಪ್ಪಣೆ ಕೊಡಿಸುತ್ತಾರೆ. ಶರಣಾಗತಿಯು ಸಿದ್ಧೌಷಧಿಯಾದುದರಿಂದ ಎರಡುವಿಧ ಉಪಾಯನಿಷ್ಠರಿಗೂ ಇರುವ ರೋಗಗಳನ್ನು ನಿವಾರಣಮಾಡುತ್ತದೆಂಬುದರಲ್ಲಿ ಸಂದೇಹವೇ ಇಲ್ಲವು.

**ಶ್ರೀ ಭಾಷ್ಯಕಾರರ ಉಪಾಯಾನ್ತರ ನೈರಪೇಕ್ಷ್ಯವನ್ನು ವಿಧಿಸುವ ಎರಡನೆಯ ಯೋಜನೆಯು ಪ್ರಪತ್ತ್ಯುಪಾಯಕ್ಕೂ ಸಙ್ಗತವಾದುದೇ.**

---

**ದ್ವಿತೀಯ ಯೋಜನೈಯಿಲ್** - ಎರಡನೆಯ ವಿಧವಾಗಿ ಅನ್ವಯಿಸಿರುವದರಲ್ಲಿ, ಎರಡನೆಯ ವಿಧವಾಗಿ "ಸರ್ವಧರ್ಮಾನ್ ಪರಿತ್ಯಜ್ಯ" ವೆಂಬುದಕ್ಕೆ

ಶ್ರೀ ಭಾಷ್ಯಕಾರಾಣಾಂ ಉಪಾಯಾನ್ತರ ನೈರಪೇಕ್ಷ್ಯ ವಿಧೇಯತ್ವ ರೂಪ ದ್ವಿತೀಯ ಯೋಜನಾಚ ಪ್ರಪತ್ತ್ಯುಪಾಯಸ್ಯಾಪಿ ಸಙ್ಗತಾ.

ದ್ವಿತೀಯ ಯೋಜನೈಯಿಲ್ ಅಲ್ಪಶಕ್ತಿಯಾಯ್ ವಿಳಂಬಾಕ್ಷಮನಾನನನುಕ್ಕು ದುಷ್ಕರನಾಯ್ ಚಿರಕಾಲ ಸಾಧ್ಯಮಾನ ಉಪಾಯಾಂತರತ್ತೈ ಪ್ಪಾರ್ತು ಶೋಕಂ ಪಿರಕ್ಕ, ಅನನುಡೈಯ ಶೋಕಾಪನೋದನಾರ್ಥಮಾಗ

ವ್ಯಾಖ್ಯಾನ ಮಾಡಿರುವದರಲ್ಲಿ, ಅಲ್ಪ ಶಕ್ತಿಯಾಯ್ - ಆ ಪಾಪಗಳಿಗೆಲ್ಲಾ, ವಿಧಿಸಲ್ಪಟ್ಟ ಪ್ರಾಯಶ್ಚಿತ್ತಗಳನ್ನೆಲ್ಲಾ ಅನುಷ್ಠಿಸಲು ಅಶಕ್ತನಾಗಿ ಅಥವಾ ಕರ್ಮಯೋಗಾದಿ ಪರಂಪರೆಗಳನ್ನು ಅನುಷ್ಠಿಸಲು ಅಶಕ್ತನಾಗಿ ವಿಳಂಬಾಕ್ಷಮ ನಾನನುಕ್ಕು - ಭಕ್ತ್ಯುಪಾಯನಿಷ್ಠನು ಒಂದು ವೇಳೆ ದೇಹಾವಸಾನದಲ್ಲೇ ಮೋಕ್ಷವಿಲ್ಲದಿದ್ದರೂ ವಿಳಂಬವನ್ನು ಸಹಿಸುವನು, ಹಾಗೆ ವಿಳಂಬವನ್ನು ಸಹಿಸದೇ ಇರುವ ಪ್ರಪತ್ತ್ಯುಪಾಯನಿಷ್ಠನಿಗೆ, ದುಷ್ಕರನಾಯ್ - ಅವಲಂಬಿಸಲು ಸಾಧ್ಯವಲ್ಲದೆ, ಚಿರಕಾಲ ಸಾಧ್ಯಮಾನ ಉಪಾಯಾಂತರತ್ತೈ - ಬಹುಕಾಲ ಸಾಧಿಸಬೇಕಾಗಿರುವ ಬೇರೇ ಉಪಾಯವಾದ ಪ್ರಾಯಶ್ಚಿತ್ತರೂಪ ಧರ್ಮಗಳನ್ನು, ಅಥವಾ ಸಾಙ್ಗಭಕ್ತಿಯೋಗವನ್ನು ಪಾರ್ತ್ತು - ನೋಡಿ ಎಂದರೆ ಆಲೋಚಿಸಿ ತಿಳಿದು, ಶೋಕಂ ಪಿರಕ್ಕ - ಈ ಅಧಿಕಾರಿಗೆ ಶೋಕ ಉಂಟಾಗಲಾಗಿ, ಇಂತಹ ಕಷ್ಟತರವಾದ ಉಪಾಯಾನುಷ್ಠಾನವನ್ನು ಮಾಡಲು ನನಗೆ ಸಾಮರ್ಥ್ಯವಿಲ್ಲವೇ ಎಂದು, ಅನನುಡೈಯ - ಅಂತಹ ಶೋಕಿಸುತ್ತಿರುವವನಿಗೆ, ಶೋಕಾಪನೋಧನಾರ್ಥಮಾಗ-ಶೋಕೋಪಶಮನಾರ್ಥವಾಗಿ, ಸುಕರಮಾಯ್-ಆ ಪ್ರಾಯಶ್ಚಿತ್ತಗಳ ಅನುಷ್ಠಾನಗಳಹಾಗೆಯೂ, ಕರ್ಮಯೋಗಾದಿಗಳ ಹಾಗೆಯೂ, ಕಷ್ಟವಲ್ಲದೆ ಅನುಷ್ಠಿಸಲು ಸುಲಭವಾಗಿ ಸಕೃತ್ಕರ್ತ್ತವ್ಯಮಾನ-ಒಂದೇ ಸಲ ಅನುಷ್ಠಿಸಬೇಕಾಗಿರುವ, ಉಪಾಯಾಂತರತ್ತೈ-ಇನ್ನೊಂದಾದ ಲಘೂಪಾಯರೂಪವಾಗಿ ಈ ಅಙ್ಗರೂಪ ಭರನ್ಯಾಸವನ್ನು, ವಿಧಿತ್ತದಾಕ್ಕಿ-ವಿಧಿಸಿತು ಎಂದು ತಿಳಿದು, ನೀ ಉಪಾಯಾಂತರತ್ತಿಲ್-ನೀನು ಈ ಪ್ರಾಯಶ್ಚಿತ್ತಗಳ ಅನುಷ್ಠಾನವೆಂಬ ಬೇರೇ ಕಷ್ಟವಾದ ಉಪಾಯದಲ್ಲಿ, ಅಥವಾ ಭಕ್ತಿಯೋಗದಲ್ಲಿ, ಅಲೆಯವೇಣ್ಡಾವೆಙ್ಗರದೆನ್ರು-ಬಳಲಿ ಬೆಂಡಾಗಬೇಡವೆಂದು ಹೇಳುತ್ತದೆಂದು, ಅರುಳಿಚ್ಚೆಯ್‌ದಾರ್-ಕೃಪಯಾ ಉಪದೇಶಿಸಿದರು, ಇದಕ್ಕೆ ಕರ್ತೃ ಪದವು "ಶ್ರೀ ಭಾಷ್ಯಕಾರರ್" ಎಂದು ಹಿಂದೆ ಇದೆ. ಈ ಎರಡನೆಯ ಯೋಜನೆಯಲ್ಲಿ ಶ್ರೀ ಭಾಷ್ಯಕಾರರು ಹೇಳಿರುವದೇನೆಂದರೆ.—ಪಾಪಗಳಿಂದ ಬಿಡುಗಡೆಯನ್ನು ಹೊಂದಿ, ಮಹಾಪುಣ್ಯಶಾಲಿಯಾಗಿ ಭಗವಂತನಿಗೆ ತುಂಬಾ ಅತ್ಯರ್ಥಪ್ರಿಯನಾ

**ಸುಕರಮಾಯ್ ಸಕೃತ್ಕರ್ತವ್ಯಮಾನ ಉಪಾಯಾಂತರತ್ತೈ ವಿಧಿತ್ತದಾಕ್ಕಿ ನೀಯುಪಾಯಾಂತರತ್ತಿಲ್ ಅಲೈಯವೇಣ್ಡಾವೆನ್ಗಿರದೆನ್ರು ಅರುಳಿಚ್ಚೆಯ್ದಾರ್.**

ದವನಾದರೀಗ ಭಕ್ತಿಯೋಗದಲ್ಲಿ ಪ್ರವೃತ್ತಿಯುಂಟಾದೀತು. ಈಗ ತನಗಾದರೋ (ಅರ್ಜುನನು) ಆ ಭಕ್ತಿಯೋಗವನ್ನಾರಂಭಿಸುವದಕ್ಕೇ ಪ್ರತಿಬಂಧಕಗಳಾಗಿ ಅನಂತ ಪಾಪಗಳಿವೆ ; ಹೀಗಿರುವದರಿಂದ ಆಯಾಯಾ ಪಾಪಗಳಿಗೆ ನಾನಾ ವಿಧ ವಾದ ಪ್ರಾಯಶ್ಚಿತ್ತಗಳು ವಿಧಿಸಲ್ಪಟ್ಟಿವೆ- ಅವುಗಳನ್ನೆಲ್ಲಾ ಪರಿಮಿತಕಾಲದಲ್ಲಿ ಅನುಷ್ಠಿಸಿ ಪಾಪಗಳನ್ನು ಕಳೆದುಕೊಳ್ಳುವದೆಂದರೆ ಸಾಧ್ಯವಿಲ್ಲವು. ಆದುದರಿಂದ **ಸರ್ವಧರ್ಮಾನ್ ಪರಿತ್ಯಜ್ಯ** – ಹಾಗೆ ಪ್ರಾಯಶ್ಚಿತ್ತರೂಪಗಳಾಗಿರುವ ಸರ್ವ ಧರ್ಮ ಗಳನ್ನೂ ಪರಿತ್ಯಾಗಮಾಡಿ, **ಮಾಮೇಕಂ ಶರಣಂವ್ರಜ** – ಲಕ್ಷ್ಮೀಯುಕ್ತನಾದ ನನ್ನನ್ನೊಬ್ಬನನ್ನೇ ಶರಣು ಹೊಂದು, ನಮ್ಮಿಬ್ಬರಲ್ಲೂ ಶರಣಾಗತಿಯನ್ನುಮಾಡು, ಸಮಸ್ತ ಪಾಪಗಳಿಂದಲೂ ಬಿಡಿಸುವೆನು, ಅಳಬೇಡವೆಂಬರ್ಥವು. ಪಾಪವು ಅನಂತವು, ಅವುಗಳ ಪ್ರಾಯಶ್ಚಿತ್ತಗಳೂ ಅನಂತವು ; ಇವುಗಳನ್ನೆಲ್ಲಾ ಅನುಷ್ಠಿ ಸಲು ಸಾಧ್ಯವಿಲ್ಲವೇ ಏನು ಮಾಡಲಿ ಎಂದು ಒಬ್ಬ ಅಧಿಕಾರಿಯು ಅತ್ತರೆ, ಅದಕ್ಕೆ ಅಪಾರಕಾರುಣ್ಯ ಔದಾರ್ಯಾದಿಗಳಿಂದ ಪ್ರೇರಿತನಾಗಿ ಸಿದ್ಧೋಪಾಯನಾದ ಸರ್ವೇಶ್ವ ರನು, ನೀನು ಏಕೆ ಅಳುತ್ತೀ, ಅಳಬೇಡಯ್ಯಾ, ನೀನು ನನ್ನನ್ನು ಶರಣವನ್ನು ಹೊಂದು, ನನ್ನಲ್ಲಿ ಶರಣಾಗತಿಯನ್ನು ಮಾಡು, ನಾನು ಸಮಸ್ತ ಪಾಪಗಳಿಂದಲೂ ನಿನ್ನನ್ನು ಬಿಡಿಸುವೆನು ಎಂದು ಶ್ರೀ ಕೃಷ್ಣಭಗವಾನ್ ಉಪದೇಶಿಸಿದರೆಂದು ವ್ಯಾಖ್ಯಾನವನ್ನು ಬರೆದಿರುತ್ತಾರೆ. ಈ ಉಪದೇಶದ ಮುಖ್ಯ ಸಾರಾಂಶವೇನಾ ಯಿತೆಂದರೆ ಶ್ರೀ ದೇಶಿಕರವರು ಹೇಳುತ್ತಾರೆ. ಸಾರ್ವತ್ರಿಕವಾಗಿ ಅನ್ವಯಿಸಿದರೆ,

> "ಸುದುಷ್ಕರೇಣ ಶೋಚೇದ್ಯೋ ಯೇನ ಯೇನೇಷ್ಟಹೇತುನಾ ।
> ಸ ಸ ತಸ್ಯಾಹ ಮೇವೇತಿ ಚರಮಶ್ಲೋಕೇ ಸಙ್ಗ್ರಹಃ ॥"

ಎಂಬುದು ಚರಮಶ್ಲೋಕದ ಸಙ್ಗ್ರಹಾರ್ಥವೆಂದು ಹೇಳಿದರು. ಪ್ರಾಯಶ್ಚಿತ್ತ ಗಳನ್ನೆಲ್ಲಾ ಅನುಷ್ಠಿಸಲು ನನಗೆ ಸಾಮರ್ಥ್ಯವಿಲ್ಲವೇ ಎಂದು ಶೋಕಿಸಿದರೆ, ಅದಕ್ಕೆ ಬದಲಾಗಿ ಶರಣಾಗತಿಯನ್ನು ಮಾಡು ನನ್ನ ಕಾಲನ್ನು ಹಿಡಿದುಕೋ ಆ ಪ್ರಾಯ ಶ್ಚಿತ್ತಗಳನ್ನನುಷ್ಠಿಸಿದ ಫಲರೂಪವಾದ ಸರ್ವ ಪಾಪ ನಿವೃತ್ತಿಯನ್ನುಂಟುಮಾಡು ವೆನು ಎಂದು ಹೇಳಿದುದರಿಂದ, ಸಾರ್ವತ್ರಿಕವಾಗಿ ಯಾವ ಯಾವ ಫಲಕ್ಕಾಗಿ ಯಾವ ಯಾವ ಧರ್ಮಾನುಷ್ಠಾನಗಳನ್ನು ಮಾಡಲು ಅಸಮರ್ಥನಾಗಿ ಶೋಕಿಸಿ ನನ್ನಲ್ಲಿ ಶರಣಾಗತಿಯನ್ನು ಮಾಡುವನೋ, ಆಯಾ ಧರ್ಮಾನುಷ್ಠಾನಸ್ಥಾನದಲ್ಲಿನಿಂತು ನಾನು ಆಯಾ ಫಲಗಳನ್ನು ನಾನೇ ಕೊಡುತ್ತೇನೆಂಬುದು ಈ ಶ್ಲೋಕದ ಸಾರಾಂಶವು. ಆದುದ

ರಿಂದ ಈ ಗೀತೆಯಲ್ಲಿ ವಿವರಿಸಿದ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗಗಳ ಸರ್ವಾನುಷ್ಠಾನಗಳನ್ನು ನಡೆಸಲು ಕಷ್ಟವೇ, ನನ್ನಿಂದ ಸಾಧ್ಯವಿಲ್ಲವೇ, ಎಂದು ಶೋಕಿಸಿ, ನನ್ನಲ್ಲಿ ಶರಣಾಗತಿಯನ್ನು ಮಾಡಿದರೆ(ಸ್ವತಂತ್ರ ಪ್ರಪತ್ತಿ)ಆ ಎಲ್ಲಾ ಧರ್ಮಗಳ ಸ್ಥಾನದಲ್ಲಿ ನಾನೇ ನಿಂತು, ಅವುಗಳ ಅನುಷ್ಠಾನ ಫಲವಾದ ಮೋಕ್ಷವನ್ನು ನಾನೇ ಕೊಡುವೆನೆಂಬ ಅರ್ಥವು ಸುವ್ಯಕ್ತವು. ಹೀಗೆ ಈ ಅಭಿಪ್ರಾಯವು ಶ್ರೀ ಭಾಷ್ಯಕಾರರ ಎರಡನೆಯ ಯೋಜನೆಯ ಭಾಷ್ಯದಲ್ಲಿ ಸುವ್ಯಕ್ತವೆಂದು ಶ್ರೀ ದೇಶಿಕರವರು ಉಪದೇಶಿಸಿರುತ್ತಾರೆ. ಆದುದರಿಂದ ಶ್ರೀ ಭಾಷ್ಯಕಾರರು ಗೀತೆಯಲ್ಲಿ ಉಪದೇಶಿಸಿರುವದೇ ಒಂದು, ತಾವು ಅನುಷ್ಠಿಸಿದುದೇ ಒಂದು ಎಂಬಾಕ್ಷೇಪಣೆಗಾಗಲಿ, ಅವರು ಭರನ್ಯಾಸವನ್ನನುಷ್ಠಿಸಲೇ ಇಲ್ಲವು, ಆ ಕಾರಣದಿಂದ ಅದು ಉಪಾಯವೇ ಅಲ್ಲವು, ಎಂಬ ಆಕ್ಷೇಪಣೆಗಾಗಲಿ, ಅಥವಾ ಈ ಭರನ್ಯಾಸವನ್ನು ಗೀತೆಯಲ್ಲಿ ಶ್ರೀ ಯತಿವರ್ಯರು ಅನುಮೋದಿಸಲೇ ಇಲ್ಲವು, ಅಥವಾ ಗೀತೆಯು ಭರನ್ಯಾಸನಿಷ್ಠೆಯನ್ನು ಬೋಧಿಸಲೇ ಇಲ್ಲವು ಎಂಬೀ ಎಲ್ಲಾ ಆಕ್ಷೇಪಣೆಗಳಿಗೂ ಕಾರಣವೇ ಇಲ್ಲವು. ವಿಷಯಗಳನ್ನು ಚನ್ನಾಗಿ ವಿಮರ್ಶಿಸಿ ತಿಳಿಯದೇ ಇರುವದೇ ಈ ಆಕ್ಷೇಪಣೆಗಳಿಗೆಲ್ಲಾ ಕಾರಣವು. ಆದುದರಿಂದ ಪ್ರಪತ್ತಿಯು ಅಙ್ಗವೇ ಆಗಲಿ, ಅಙ್ಗಿಯೇ ಆಗಲಿ ಸರ್ವಾಭೀಷ್ಟಪ್ರದವು. ಈತನಿಗೆ ಏನೇನು ಇಷ್ಟವಿದೆಯೋ, ಅದಕ್ಕೆ ಸಾಧನವಾಗಿ ಯಾವ ಯಾವ ಧರ್ಮಗಳು ಶಾಸ್ತ್ರಗಳಲ್ಲಿ ಹೇಳಲ್ಪಟ್ಟು ಅವಕ್ಕೆ ಈ ಅಧಿಕಾರಿಗೆ ಆ ಧರ್ಮಾನುಷ್ಠಾನಗಳಲ್ಲಿ ತನಗೆ ಅಶಕ್ತತೆಯೆಂಬ ಅಭಿಸಂಧಿಯೂ, ತನ್ಮೂಲಕ ಶೋಕವೂ, ಇದ್ದುದಾದರೆ, ಆ ಧರ್ಮಗಳ ಅನುಷ್ಠಾನಗಳಿಲ್ಲದೇನೆ ಆ ಶರಣಾಗತಿಯ ಮಾಹಾತ್ಮ್ಯಯಿಂದ ಅವನಿಗೆ ಇಷ್ಟವಾದ ಫಲಗಳನ್ನೆಲ್ಲಾ ಕೊಟ್ಟುಬಿಡುವನು ಎಂಬುದು ಮುಖ್ಯತಾತ್ಪರ್ಯವು. ಈ ಶರಣಾಗತಿಯು ಹೀಗೆ ಸರ್ವಕರ್ಮ್ಯಸಿದ್ಧಾಷಧಿಯಾದುದರಿಂದ, "ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ" ಎಂದು ಸಾರತಮವಾದ ಉಪದೇಶವನ್ನು ಶ್ರೀ ಯತಿವರ್ಯರು ದಯಪಾಲಿಸಿರುತ್ತಾರೆ. ಇದೇ ಸರ್ವೋಪನಿಷತ್ತುಗಳ ಸಾರತಮ ಉಪದೇಶವು. ಏವ ಎಂಬ ಅವಧಾರಣವು ಇತರವಲ್ಲವೆಂದು ವ್ಯಾವರ್ತಿಸಿ ಪ್ರದರ್ಶಿಸುತ್ತದೆ. ವಿದಿತಸ್ಸಹಿಧರ್ಮಜ್ಞಶ್ಶರಣಾಗತವತ್ಸಲಃ। ತೇನ ಮೈತ್ರೀ ಭವತು ತೇ ಯದಿ ಜೀವಿತುಮಿಚ್ಛಸಿ ॥ ಆದುದರಿಂದ ಸೀತೆಯು ಮಹಾಪಾಪಿಯಾದ ರಾವಣನಿಗೆ ಉಪದೇಶಿಸಿರುತ್ತಾಳೆ, ಏನೆಂದರೆ—ಆಭಗವಂತನು ಧರ್ಮಜ್ಞನು, ನೀನುಮಾಡುವ ಉಪಾಯಾನುಷ್ಠಾನವನ್ನು ತಿಳಿದುಕಾಪಾಡುವವನು, ಶರಣಾಗತವತ್ಸಲನು, ಇದು ವಿದಿತಃ-ಸರ್ವಶಾಸ್ತ್ರ ಪ್ರಸಿದ್ಧವು, ಹಾಗೆಯೇ ಲೋಕಪ್ರಸಿದ್ಧವು. ಆದುದರಿಂದ ನಿನ್ನ ಆತ್ಮೋಜ್ಜೀವನವನ್ನು ಮಾಡಿಕೊಳ್ಳಬೇಕೆಂಬ ಅಪೇಕ್ಷೆಯಿದ್ದುದಾದರೆ, ಶರಣಾಗತಿಯನ್ನನುಷ್ಠಿಸು. ಹೀಗೆ ಎರಡು ಯೋಜನಗಳಿಂದಲೂ,

ಸರ್ವಧರ್ಮಾನ್ ಪರಿತ್ಯಜ್ಯ ವೆಂಬುದರಿಂದ ನಿತ್ಯನೈಮಿತ್ತಿಕ ವರ್ಣಾಶ್ರಮಗಳನ್ನೆಲ್ಲಾ ಬಿಟ್ಟುಬಿಡು ಎಂದು ಉಪದೇಶಿಸಲಿಲ್ಲವೆಂದು ಸ್ಥಾಪಿಸಲ್ಪಟ್ಟಿತು. ಏಕೆಂದರೆ ನಿತ್ಯ ನೈಮಿತ್ತಿಕಗಳಿಗೂ ಸಕೃತ್ಪ್ರಪದನಾನುಷ್ಠಾನಕ್ಕೂ ಏನೊಂದೂ ಸಂಬಂಧವೇ ಇಲ್ಲವು, ಭಕ್ತ್ಯುಪಾಯಾನುಷ್ಠಾನವಲ್ಲಾದರೋ ನಿತ್ಯನೈಮಿತ್ತಿಕಾದಿ ಆಶ್ರಮ ಧರ್ಮಗಳು ಉಪಾಸನಕ್ಕೆ ಅಙ್ಗವೆಂದು ವಿಹಿತತ್ವಾಧಿಕರಣದಲ್ಲಿ ಶಾರೀರಕಸೂತ್ರ ಗಳಿಂದ ಉಪಪಾದಿತವಾಗಿವೆ. ಆದುದರಿಂದ ಅವುಗಳನ್ನು ಪರಿತ್ಯಾಗಮಾಡಿದರೆ ಪ್ರತ್ಯವಾಯವು ಸಿದ್ಧವು, ಹೀಗೆ ಎರಡನೆಯ ಯೋಜನೆಯ ಪ್ರಕಾರ ಈ ಚರಮ ಶ್ಲೋಕವಿಷಯದಲ್ಲಿ ಶ್ರೀ ಭಾಷ್ಯಕಾರರ ಅಭಿಪ್ರಾಯವು ಅಂಗರೂಪ ಶರಣಾಗತಿ ಮಾತ್ರವೇ ಹೇಳಲ್ಪಟ್ಟಿತೆಂದು ಭಾವಿಸುವದು, ಮುಂದವು. ಶರಣಾಗತಿಯು ಸರ್ವ ಫಲಪ್ರದವೆಂದು,"ತಸ್ಯ ಚ ವಶೀಕರಣಂತಚ್ಛರಣಾಗತಿರೇವ"ಎಂಬ ಶ್ರೀಭಾಷ್ಯ ದಲ್ಲಿ ಘಂಟಾ ಘೋಷವಾಗಿ ತಿಳಿಸಿರುತ್ತಾರೆ. ಹೀಗೆ ಅರ್ಥ ಮಾಡಿದ ನಂತರ ಎಲ್ಲಾ ಫಲಗಳಿಗೂ ಶರಣಾಗತಿಯನ್ನನುಷ್ಠಿಸಬಹುದೆಂದು ಏರ್ಪಟ್ಟನಂತರ, ಮೋಕ್ಷಪ್ರಾಪ್ತಿ ಗಾಗಿ ಸ್ವತಂತ್ರ ಪ್ರಪತ್ತಿಯೂ ಆಗಬಹುದೆಂಬುದು ಸಿದ್ಧವು. ಆದುದರಿಂದ ಶ್ರೀ ದೇಶಿಕರವರು ಅಙ್ಗಪ್ರಪತ್ತಿ, ಅಂಗಿ ಪ್ರಪತ್ತಿ ಎರಡಕ್ಕೂ ಅನ್ವಯಿಸುವಹಾಗೆಯೇ ಶ್ರೀ ಭಾಷ್ಯಕಾರರು ಅರ್ಥ ಹೇಳಿರುತ್ತಾರೆಂದೇ "ದ್ವಿತೀಯಯೋಜನೈಯಿಲ್" ಎಂದಾರಂಭಿಸಿಹೇಳಿರುವ ವಾಕ್ಯದಿಂದ ಉಪದೇಶಿಸಿರುತ್ತಾರೆ. ಈಗಅಂಗಿಪ್ರಪತ್ತಿಪರ ವಾಗಿಯೇ ಅರ್ಥವು ಹೇಗೆಂದರೆ.—ಅಲ್ಪಶಕ್ತಿಯಾಯ್-ಕರ್ಮಯೋಗಾದಿ ಧರ ಗಳನ್ನೆಲ್ಲಾ ಅನುಷ್ಠಿಸಲು ಶಕ್ತಿಸಾಲದವನಾಗಿ, ವಿಳಂಬಾಕ್ಷಮನಾನವನುಕ್ಕು - ಇನ್ನೊಂದು ಜನ್ಮದ ವಿಳಂಬವನ್ನು ಸಹಿಸದವನಾಗಿರುವ ಅಧಿಕಾರಿಗೆ, ದುಷ್ಕರಮಾ ಯ್-ಬಹುಕಷ್ಟವಾಗಿ, ಚಿರಕಾಲಸಾಧ್ಯಮಾನ ಉಪಾಯಾಂತರತ್ತೈ-ಬಹುಕಾಲ ಅಭ್ಯಾಸಮಾಡಿದರೆ ಸಾಧ್ಯವಾಗಬಹುದಾದ ಭಕ್ತಿಯೋಗವನ್ನು, ಪಾರ್ತು-ಪರ್ಯಾ ಲೋಚಿಸಿ, ಶೋಕಂ ಪಿರಕ್ಕ–ಶೋಕವು ಹುಟ್ಟಲಾಗಿ, ಅವನುಡೈಯ-ಅಂತಹ ಅಸ ಮರ್ಥನಾಗಿ ಕಾರ್ಪಣ್ಯವನ್ನು ಹೊಂದಿರುವ ಅಧಿಕಾರಿಯ, ಶೋಕೋಪಶಮನೋದ ನಾರ್ಥಮಾಗ-ಶೋಕೋಪಶಮನಾರ್ಥವಾಗಿ, ಸುಕರಮಾಯ್-ಅನುಷ್ಠಿಸಲು ಸುಲಭವಾಗಿ, ಸಕೃತ್ಕರ್ತವ್ಯಮಾನ-ಒಂದೇಸಲ ಅನುಷ್ಠಿಸಬೇಕಾಗಿರುವ, ಉಪಾ ಯಾಂತರತ್ತೈ-ಬೇರೆ ಉಪಾಯವಾದ ಸ್ವತಂತ್ರ ಪ್ರಪತ್ತಿಯನ್ನು, ವಿಧಿತ್ತವಾಕ್ಕಿ- ವಿಧಿಸಲ್ಪಟ್ಟಿತೆಂದು ನೀನು ತಿಳಿ, ಉಪಾಯಾಂತರತ್ತಿಲ್ ಅಲೈಯವೇಣ್ಡಾ– ಭಕ್ತ್ಯುಪಾಯದಲ್ಲಿ ನೀನು ಬಳಲಿ ಬೆಂಡಾಗಬೇಡ ಎಂದು, ಅರುಳಿಚ್ಚೆಯ್ ದಾರ್ -ಉಪದೇಶಿಸಿದರು ಎಂಬದಾಗಿ ಅರ್ಥಹೇಳತಕ್ಕದ್ದು.

ಹೀಗೆ ಸ್ವತಂತ್ರ ಪ್ರಪತ್ತಿಗೂ ಈ ಚರಮ ಶ್ಲೋಕವು ಅನ್ವಯಿಸುತ್ತದೆ ಎಂದು

**ಇಪ್ಪಪತ್ತ್ಯನುಷ್ಠಾನುತ್ತುಕ್ಕು ಪೂರ್ವ್ವಾವಸ್ಥೈಯಿಲ್ ಉಪಾಯಾನ್ತರಾನನ್ವಯಂ ದೈವಾದಾ ಗತಮಾಮ್ ಪ್ರಪತ್ತ್ಯಧಿಕಾರತ್ತಿಲೇ ಶೊರುಕ್ಕಕಡವದು. ಉತ್ತರಾವಸ್ಥೈಯಿಲ್ ಉಪಾಯಾನ್ತರಾನನ್ವಯಂ ಶಾಸ್ತ್ರಾದಾಗತಮಾಯ್ ಇಪ್ರಪತ್ತಿಯಿನುಡೈಯ ನೈರಪೇಕ್ಷ್ಯತ್ತಿಲೇ ನಿರ್ಕಕ್ಕಡವದು.**

ಅಙ್ಗೀಕರಿಸಿದನಂತರ, ತನಗೆ ಅಭಿಮತವಾದ ಮೋಕ್ಷಪ್ರಾಪ್ತಿಗೆ ಬೇಕಾದ ಭಕ್ತಿಯೋಗಾನುಷ್ಠಾನಕ್ಕೆ ತನಗೆ ಸಾಮರ್ಥ್ಯವಿಲ್ಲವೇ ಎಂಬ ಶೋಕವಿರಬೇಕೆಂಬುದು ಏರ್ಪಟ್ಟಿತು. ಆದುದರಿಂದ ಅಂತಹ ಉಪಾಯಾಂತರವಾದ ಭಕ್ತಿಯೋಗದಲ್ಲಿ ತನಗೆ ಅನ್ವಯವಿಲ್ಲವೆಂಬ ಅಭಿಸಂಧಿಯು ಆವಶ್ಯಕವು ಎಂದೂ, ಅಂತಹ ಅಭಿಸಂಧಿಯು ಶರಣಾಗತ್ಯನುಷ್ಠಾನಕ್ಕೆ ಪೂರ್ವದಲ್ಲೂ ಅನಂತರದಲ್ಲೂ ಇರತಕ್ಕದ್ದೆಂದೂ, ಉಪದೇಶಿಸಿರುತ್ತಾರೆ.—**ಇಪ್ಪಪತ್ತ್ಯನುಷ್ಠಾನತ್ತುಕ್ಕು** - ಈ ಭರನ್ಯಾಸವನ್ನು ಅನುಷ್ಠಿಸುವದಕ್ಕೆ, **ಪೂರ್ವ್ವಾವಸ್ಥೈಯಿಲ್** - ಮುಂಚಿನ ಅವಸ್ಥೆಯಲ್ಲಿ, **ಉಪಾಯಾನ್ತರಾನನ್ವಯಂ** - ಭಕ್ತ್ಯುಪಾಯಾನುಷ್ಠಾನದಲ್ಲಿ ಸಂಬಂಧವು ಇಲ್ಲದಿರೋಣವು, **ದೈವಾದಾಗತಮಾಯ್**-ಸರ್ವೇಶ್ವರಸಙ್ಕಲ್ಪದಿಂದುಂಟಾದುದಾಗಿ, **ಪ್ರಪತ್ತ್ಯಧಿಕಾರತ್ತಿಲೇ**-ಆಕಿಂಚಿನ್ಯಾದಿಗಳಿಂದ ಉಂಟಾದ ಪ್ರಪತ್ತ್ಯನುಷ್ಠಾನದ ಅಧಿಕಾರದಲ್ಲಿ, **ಶೊರುಕ್ಕ ಕಡವದು** - **ಸೇರಿಸಲು** ಸಹಕಾರಿಯಾಗುತ್ತದೆ. **ಉತ್ತರಾವಸ್ಥೈಯಿಲ್** - ಪ್ರಪದನಾನುಷ್ಠಾನ ಮಾಡಿದನಂತರವೂ, **ಉಪಾಯಾನ್ತರಾನನ್ವಯಂ** – ಈ ಭಕ್ತಿಯೋಗದಲ್ಲಿ ತನಗೆ ಸಾಮರ್ಥ್ಯವಿಲ್ಲದಿರೋಣವು, **ಶಾಸ್ತ್ರಾದಾಗತಮಾಯ್** - ಶಾಸ್ತ್ರದಿಂದ ತೋರಿಬಂದು, **ಪ್ರಪತ್ತಿಯಿನುಡೈಯ ನೈರಪೇಕ್ಷತ್ತಿಲೇ** – ಪ್ರಪತ್ತ್ಯನುಷ್ಠಾನಕ್ಕೆ ಇನ್ನು ಯಾವುದರ ನೈರಪೇಕ್ಷೆಯಲ್ಲಿ, **ನಿರ್ಕಕ್ಕಡವದು** - ಇರುವಂತಾದ್ದಾಗುತ್ತದೆ. **ಸಕೃದೇವಹಿ ಶಾಸ್ತ್ರಾರ್ಥಃ ಕೃತೋಽಯಂ ತಾರಯೇನ್ನರಃ** - ಭರನ್ಯಾಸವು ಒಂದೇಸಲ ಮಾಡತಕ್ಕದ್ದೇವಿನಾ, ಪುನಃ ಕರ್ತ್ತವ್ಯಾಂಶವು ಏನೂ ಇರುವದಿಲ್ಲವೆಂದೂ, **ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ । ಅಭಯಂ ಸರ್ವ್ವಭೂತೇಭ್ಯೋ ದದಾಮ್ಯೇ ತದ್ವ್ರತಂ ಮಮ"** ನಾನು ನಿನ್ನವನು ರಕ್ಷಿಸಿಬಿಡು ಎಂದು ಹೇಳಿ ಒಂದು ಸಲ ಶರಣಾಗತಿಯನ್ನು ಮಾಡಿದರೆ ಸಾಕು ಅವನಿಗೆ ಮೋಕ್ಷವನ್ನು ಕೊಡುತ್ತೇನೆಂಬುದೇ ನನ್ನವ್ರತವು ಎಂದೂ, ಹೇಳಿರುವದರಿಂದ, ಉಪಾಯಾನ್ತರದಲ್ಲಿ ಅನ್ವಯವು ಇಲ್ಲವೆಂಬುದು ಸಿದ್ಧವು. ಪ್ರಪದನವೇ ಒಂದು ಸಲ ಮಾಡತಕ್ಕದ್ದೆಂದೂ, ಅನಂತರ ಇನ್ನು ಯಾವುದನ್ನೂ ಮಾಡುವ ಆವಶ್ಯಕವಿಲ್ಲವು ಎಂದೂ, ಹೇಳಿದನಂತರ, ಭಕ್ತ್ಯುಪಾಯಾನುಷ್ಠಾನವು ಅನಾವಶ್ಯಕವೆಂಬುದು ಕೈಮುತಿಕ

"ಪರಿತ್ಯಜ್ಯ" ವೆಙ್ಗಿರ ವಿಡತ್ತಿಲ್ ಅಧಿಕಾರಂ ವಿವಕ್ಷಿತ ಮಾನಾಲ್, "ಮಾಮೇಕಂ" ಎಙ್ಗಿರವಿಡತ್ತಿಲೇ,ನೈರಪೇಕ್ಷ್ಯಮುಮ್ ಅನುಸಂಧಿಕ್ಕ ಪ್ರಾಪ್ತಮ್. "ಪರಿತ್ಯಜ್ಯ"ವೆನ್ರು ನೈರಪೇಕ್ಷ್ಯಂ ವಿವಕ್ಷಿತಮಾನಾಲ್,"ಮಾಶುಚಃ"ಎಂಗಿರ ಶೋಕ ನಿಷೇಧತ್ತಾಲೆ, ಅಕಿಞ್ಚನನಾಯ್ ನಿರ್ಕಿರ ನಿಲೈ ಶೋತ್ತುಗೈಯಾಲೇ ಅಧಿಕಾರಮುಮ್ ಅರ್ಥಸಿದ್ಧಮಾಗಕ್ಕಡವದು. ಅಪ್ಪೋದು

---

ದಿಗಳೈ-ಇನ್ನು ಯಾವುದು ಬೇಡವೆಂಬಿವೇ ಮೊದಲಾದವುಗಳನ್ನು, ಶೊಲ್ಲುಗಿರ ದೆನ್ರುತಾತ್ಪರ್ಯಮ್ - ಹೇಳುತ್ತದೆಂಬ ಅಭಿಪ್ರಾಯವು. ಭಕ್ತ್ಯುಪಾಯಕ್ಕೆ ಸರ್ವ ಪಾಪಗಳ ನಿವೃತ್ತಿಗಾಗಿ ಪ್ರಾಯಶ್ಚಿತ್ತಾನುಷ್ಠಾನಗಳ ನೈರಪೇಕ್ಷ್ಯವೂ, ಪ್ರಪತ್ತ್ಯುಪಾಯಕ್ಕೆ ಸರ್ವಧರ್ಮಗಳ ನೈರಪೇಕ್ಷ್ಯವೂ ಹೇಳಲ್ಪಟ್ಟಿತೆಂಬ ಭಾವವು. ಮುಂದೆ ಇವೆರಡರ ಎಂದರೆ ಅಧಿಕಾರ, ನೈರಪೇಕ್ಷ್ಯಗಳ ಅಭಿಪ್ರಾಯಗಳು ಇಬ್ಬರಿಗೂ ಆವಶ್ಯಕವೆಂದು ತೋರಿಸುತ್ತಾರೆ. ಇಪ್ಪಡಿ – ಮೇಲಿನ ವಾಕ್ಯಗಳಲ್ಲಿ ಉಪಪಾದಿಸಿದ ರೀತಿಯಲ್ಲಿ, ಪರಿತ್ಯಜ್ಯ ವೆಙ್ಗಿರವಿಡತ್ತಿಲ್ - ಪರಿತ್ಯಜ್ಯವೆಂದು ಹೇಳುವ ಸ್ಥಳದಲ್ಲಿ, ಅಧಿಕಾರಂ ವಿವಕ್ಷಿತಮಾನಾಲ್ - ಅಧಿಕಾರವನ್ನು ಹೇಳುವ ಇಷ್ಟವಾದರೆ, ಮಾಮೇಕಂ ಎನ್ನುವ ಸ್ಥಳದಲ್ಲಿ, ನೈರಪೇಕ್ಷ್ಯಮ್ ಅನುಸಂಧಿಕ್ಕ ಪ್ರಾಪ್ತಮ್ - ನನ್ನೊಬ್ಬನನ್ನೇ ಶರಣಹೊಂದು ಎನ್ನುವದರಿಂದ ಇನ್ನೇನನ್ನೂ ಮಾಡತಕ್ಕ ಆವಶ್ಯಕವಿಲ್ಲವೆಂಬ ನೈರಪೇಕ್ಷ್ಯವನ್ನು ಅನುಸಂಧಾನಮಾಡತಕ್ಕದ್ದಾಗಿರುತ್ತದೆ. ಪರಿತ್ಯಜ್ಯವೆನ್ರು ನೈರಪೇಕ್ಷ್ಯಂ ವಿವಕ್ಷಿತಮಾನಾಲ್ – ಈ ಪರಿತ್ಯಜ್ಯವೆಂಬಲ್ಲಿವಿಧ್ಯರ್ಥವಾದ ಅನ್ಯನೈರಪೇಕ್ಷ್ಯವನ್ನು ಹೇಳುವದೇ ಇಷ್ಟವಾದರೆ, ಮಾಶುಚಃ ಎಙ್ಗಿರ ಶೋಕನಿಷೇಧತ್ತಾಲೇ - ಮುಂದೆ ಅಳಬೇಡವೆಂದು ಶೋಕವನ್ನು ನಿಷೇಧಿಸಿರುವದರಿಂದ, ಅಕಿಂಚನನಾಯ್ ನಿರ್ಕಿರ ನಿಲೈ ಶೋತ್ತುಗೈಯಾಲೇ – ಇದಕ್ಕೆ ಮುಂಚೆ ಆತನಿಗೆ ಶೋಕವಿತ್ತು ಎಂದು ಊಹಿಸತಕ್ಕದ್ದಾದುದರಿಂದ, ಶೋಕರೂಪ ಕಾರ್ಪಣ್ಯವು ಈತನಿಗೆ ಇತ್ತು ಎಂದು ತೋರಿಬರುವದರಿಂದ, ಆಕಿಂಚನ್ಯರೂಪ ಅಧಿಕಾರವೂ ಸಹ, ಅರ್ಥಸಿದ್ಧಮಾಗಕ್ಕಡವದು - ಸಾಕ್ಷಾತ್ತಾಗಿ ಶಬ್ದರೂಪದಲ್ಲಿ ಹೇಳದಿದ್ದರೂ ಅರ್ಥವಾಗಿ ಬೋಧಿತವಾಗುತ್ತದೆಂಬ ಭಾವವು. ಹೀಗೆ ಅನುವಾದ ರೂಪ ಅರ್ಥದಿಂದ ಅಧಿಕಾರವೂ, ವಿಧಿರೂಪ ಅರ್ಥದಿಂದ ಇತರ ನೈರಪೇಕ್ಷವೂ ಹೇಳಲ್ಪಟ್ಟವೆಂದು ಅಭಿಪ್ರಾಯಪಟ್ಟರೂ, ಈ ಎರಡೂ ಎಂದರೆ ಅಧಿಕಾರವೂ ಅನ್ಯನೈರಪೇಕ್ಷ್ಯವೂ ಹೀಗೆ ಎರಡೂ ಹೇಳಲ್ಪಡುವ ಆವಶ್ಯಕವಿರುವದರಿಂದ, ಶ್ರೀ ಭಾಷ್ಯಕಾರರ ಎರಡು ಯೋಜನೆಗಳೂ ಬಹು ಸ್ವಾರಸ್ಯವಾಗಿ ಸರ್ವಸಮಂಜಸಗಳಾಗಿ ವೈಯಾಕರಣರು ತಲೆ

**ಪ್ರಕೃತೋಪಾಸನ ನ್ಯಾಯಾತ್ತದಙ್ಗಾನಾ ಮುಪಸ್ಥಿತೌ ।**
**ಅನ್ಯೇಷಾಂ ಚೈತದಙ್ಗತ್ವತ್ಯಾಗೋಽತ್ರ ಪ್ರತಿಪಾದ್ಯತೇ ॥೮೮॥**

ತೂಗುವ ಅರ್ಥಗಳಾಗಿವೆ ಎಂಬ ಭಾವವು ಸೂಚಿತವು.

ಈಗ ಪ್ರಸಕ್ತವಾಗಿರುವ ವಿಷಯವು ಸರ್ವಧರ್ಮಾನ್ ಪರಿತ್ಯಜ್ಯ ವೆಂದು ಹೇಳಿರುವದರಿಂದ ನಿತ್ಯನೈಮಿತ್ತಿಕರೂಪ ವರ್ಣಾಶ್ರಮಧರ್ಮಗಳನ್ನು ಸ್ವರೂಪತಃ ತ್ಯಾಗಮಾಡಬಹುದೇ ? ಸಂಧ್ಯಾವಂದನಾದಿಗಳನ್ನು ಪ್ರಪನ್ನನು ತ್ಯಜಿಸಬಹುದೇ ? ಎಂಬ ವಿಷಯವಾದುದರಿಂದ, ಹೀಗೆ ಎರಡನೆಯ ಯೋಜನೆಯಲ್ಲಿ, ಪಾಪನಿವಾರಕ ಧರ್ಮಗಳಾದ ಪ್ರಾಯಶ್ಚಿತ್ತಾದಿಗಳನ್ನು ಪರಿತ್ಯಾಗ ಮಾಡಬಹುದೆಂಬ ವಿಧಿಯು ಏರ್ಪಟ್ಟನಂತರ, ನಿತ್ಯನೈಮಿತ್ತಿಕಗಳಿಗೂ ಪಾಪಪರಿಹಾರ ಶಕ್ತಿಯಿದೆ ಎಂದು ಹೇಳುವದಾದರೆ ಅವುಗಳನ್ನೂ ಏಕೆ ಪರಿತ್ಯಾಗ ಮಾಡಕೂಡದು ಎಂದು ಆಕ್ಷೇಪ ಬಂದರೆ ಅದಕ್ಕೆ ಸಮಾಧಾನವನ್ನು ಹೇಳುತ್ತಾರೆ —

ಅಪ್ಪೋಽಪೇದು - ಹಾಗೆ ನೈರಪೇಕ್ಷ್ಯವು ವಿವಕ್ಷಿತವಾಗಿ, ನೈರಪೇಕ್ಷ್ಯ ಅರ್ಥವನ್ನೇ ಸರ್ವಧರ್ಮಾನ್ ಪರಿತ್ಯಜ್ಯ ಎಂಬಲ್ಲಿ ಹೇಳಿದರೆ, ಆಗ, **ಪ್ರಕೃತೋಪಾಸನ ನ್ಯಾಯಾತ್** - ಉಪಾಸನವು ಗೀತಾ ಶ್ಲೋಕದಲ್ಲಿ ಪ್ರಕೃತವಾಗಿರುವದರಿಂದ, ಅಂತಹ ಪ್ರಕೃತವಾದ ಉಪಾಸನೆಯಲ್ಲಿ, ಆ ಪ್ರಕರಣದಲ್ಲಿ ಹೇಳಲ್ಪಟ್ಟ ಅಙ್ಗಗಳು ಇಲ್ಲಿ ನಿಷೇಧಿಸಲ್ಪಡಲಿಲ್ಲವೆಂದು ಇಟ್ಟುಕೊಳ್ಳುವದು ಹೇಗೆ ನ್ಯಾಯವೋ, ಆ ಕಾರಣದಿಂದ, ತದಙ್ಗಾನಾಮುಪಸ್ಥಿತೌ - ಅದರ ಅಙ್ಗಗಳಾದ ಗತಿಚಿಂತನಾದಿಗಳ, ಮತ್ತು ಅನ್ಯೇಷಾಂ - ಸಹಕಾರಿತ್ವೇನ ಹೇಳಲ್ಪಟ್ಟ ಇತರಗಳಾದ ನಿತ್ಯನೈಮಿತ್ತಿಕ ಕರ್ಮಾನುಷ್ಠಾನದ, **ಉಪಸ್ಥಿತೌ ಸತ್ಯಾಂ** - ಪ್ರಸಕ್ತಿಯುಂಟಾಗಲಾಗಿ, **ತೇಷಾಂ** - ಅವುಗಳ, **ಏತದಙ್ಗತ್ವ ತ್ಯಾಗಏವ** - ಈ ಪ್ರಪತ್ತಿಗೇನೂ ಅವುಗಳನ್ನು ಅಙ್ಗವಾಗಿ ಭಾವಿಸುವದರ ತ್ಯಾಗವು, **ಅತ್ರ** - ಈ ಚರಮ ಶ್ಲೋಕದಲ್ಲಿ, **ಪ್ರತಿಪಾದ್ಯತೇ** . ಪ್ರತಿಪಾದಿಸಲ್ಪಡುತ್ತದೆ. ಪ್ರಪತ್ತಿಗೆ ಅದರ ಅಙ್ಗಗಳಾದ ಆನುಕೂಲ್ಯಾದಿಗಳ ಹೊರತು, ಇತರಗಳಾದ ಈ ಗತಿಚಿಂತನ ನಿತ್ಯನೈಮಿತ್ತಿಕಾದಿಗಳು ಆ ಭಕ್ತ್ಯುಪಾಯಕ್ಕೆ ಅಙ್ಗವಾಗಿ ಹೇಳಿದ ಹಾಗೆ, ಈ ಪ್ರಪತ್ತಿಗೆ ಅವು ಅಙ್ಗಗಳಲ್ಲವಾದುದರಿಂದ,ಅವುಗಳ ನೈರಪೇಕ್ಷ್ಯವು ಹೇಳಲ್ಪಟ್ಟಿತು. ಅಙ್ಗಗಳಾಗಿರುವದರ ನೈರಪೇಕ್ಷ್ಯವು ಬೋಧಿಸಲ್ಪಟ್ಟರೆ,ಆ ಗತಿಚಿಂತನ ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನಗಳು ಬೇಡಲೇಬೇಡ ಎಂದು ಹೇಗೆ ಅರ್ಥವಾಗುತ್ತದೆ ? ಇವು ಆ ಉಪಾಯಕ್ಕೆ ಅಙ್ಗಗಳಾಗಿ ಹೇಳಲ್ಪಡಲಿಲ್ಲವೆಂದರೆ ಅವುಗಳು ಬೇಡಲೇ ಬೇಡ ಎಂದು ಹೇಗಾಗುತ್ತವೆ ಎಂಬಭಾವವು. ಅವು ಜನ್ಮಕ್ಕೆ ಅಂಟಿದ ಆಜ್ಞಾ ಕೈಙ್ಕ

"ಏಕ" ಶಬ್ದಮ್ ಸಾತ್ವಿಕ ತ್ಯಾಗತ್ತಾಲೇ ತನ್ಸಕ್ಕಲಿಲ್ ಪರಾಧೀನ ಕರ್ತೃತ್ವಾದಿಗಳೈ ವಿವಕ್ಷಿತ್ತಲ್, ಫಲೋಪಾಯೈಕ್ಯತ್ತೈ ಚೊಲ್ಲುದಲ್,

---

ರ್ಯಗಳಾಗಿರುವದರಿಂದ, ಭಗವತ್ಪ್ರೀತ್ಯರ್ಥವಾಗಿ ಅನುಷ್ಠಿಸಲೇಬೇಕೆಂದು ಸ್ಥಾಪಿಸಿ ಮುಂದೆ ಈ ಸಂದರ್ಭದಲ್ಲಿ ಆನೆಯ ಕಾರಿಕೆಯನ್ನನುಗ್ರಹಿಸುತ್ತಾರೆ.

ಆದುದರಿಂದ ನಾವು ಮುಖ್ಯವಾಗಿ ಗ್ರಹಿಸುವ ಭಾಗವು ಇಷ್ಟೇ,—ಗತಿಚಿಂತನ ನಿತ್ಯನೈಮಿತ್ತಿಕಾದಿಗಳು ಭಕ್ತ್ಯುಪಾಯಕ್ಕೆ ಅಙ್ಗಗಳಾಗಿ ಅವುಗಳನ್ನು ಬಿಡಲು ಮಾರ್ಗವೇ ಇಲ್ಲವು, ಏಕೆಂದರೆ ವಿಹಿತತ್ವಾಧಿಕರಣದಲ್ಲಿ "ಸಹಕಾರಿತ್ವೇನ ಚ" ಎಂಬ ಶಾರೀರಕ ಸೂತ್ರದಲ್ಲಿ ವ್ಯಕ್ತವಾಗಿ ಹಾಗೆ ಹೇಳಲ್ಪಟ್ಟಿದೆ. ಆದುದರಿಂದ ಸರ್ವ ಧರ್ಮಾನ್ ಪರಿತ್ಯಜ್ಯ ಎಂಬುದಕ್ಕೆ ಎರಡನೆಯ ಯೋಜನೆಯಲ್ಲಿ ಪಾಪನಿವಾರಕ ಗಳಾದ ಅನೇಕ ಪ್ರಾಯಶ್ಚಿತ್ತ ಧರ್ಮಗಳ ತ್ಯಾಗವೆಂದು ಅರ್ಥ ಹೇಳಲ್ಪಟ್ಟಿತು. ಈಗ ಪ್ರಪತ್ತ್ಯುಪಾಯಕ್ಕೆ ನಿತ್ಯನೈಮಿತ್ತಿಕ ಧರ್ಮಾನುಷ್ಠಾನವು ಅಙ್ಗವಲ್ಲದುದರಿಂದ ಹೇಗೆ ಅರ್ಥವು ಹೇಳಲ್ಪಡಬೇಕೆಂಬ ಆಶಯದಲ್ಲಿ, ಅಙ್ಗತ್ವೇನ ತ್ಯಾಗಾರ್ಥವನ್ನು ಹೇಳಿದರೆ, ಪ್ರಪತ್ತಿಗೆ ಈ ನಿತ್ಯನೈಮಿತ್ತಿಕಗಳ ನೈರಪೇಕ್ಷ್ಯವು ಹೇಳಿದಂತಾಯಿತು ; ಅವುಗಳನ್ನು ಸ್ವರೂಪತಃ ತ್ಯಾಗಮಾಡತಕ್ಕದ್ದೂ ಅಲ್ಲವು ; ಆಜ್ಞಾಕೈಙ್ಕರ್ಯಗಳಾ ದುದರಿಂದ ಭಗವನ್ಮುಖೋಲ್ಲಾಸಕ್ಕಾಗಿ ಮಾಡತಕ್ಕವೆಂಬುದೂ ಸಿದ್ಧಿಸಿತು ಎಂಬ ಭಾವವು.

ಪ್ರಥಮ ಯೋಜನೆಯಲ್ಲಿ ಪರಿತ್ಯಜ್ಯ ಎಂಬಲ್ಲಿರುವ ಲ್ಯಪ್ ಪ್ರತ್ಯಯದ ಅರ್ಥ ವಾಗಿ ಅನುವಾದಾರ್ಥವನ್ನು ಉಪಪಾದಿಸುವದಕ್ಕಾಗಿ ಸ್ವರೂಪ ತ್ಯಾಗಾರ್ಥವನ್ನು ಹೇಳದೆ, ಏಕ ಶಬ್ದದಿಂದ ಅನ್ಯನೈರಪೇಕ್ಷ್ಯವನ್ನು ಸಾಧಿಸಿದಿರಿ. ಈಗ ಎರಡನೆಯ ಯೋಜನೆಯಲ್ಲಿ ಲ್ಯಪ್ ಪ್ರತ್ಯಯವೇ ಅನ್ಯನೈರಪೇಕ್ಷ್ಯವನ್ನು ಬೋಧಿಸಿದರೆ ಏಕ ಶಬ್ದವೂ ಅದನ್ನೇ ಬೋಧಿಸುತ್ತದೆ ಎಂಬುದು ಹೇಗೆ ಸಮಂಜಸವು? ಆಗ ಏಕ ಶಬ್ದದ ಪ್ರಯೋಜನವೇನು? ಎಂಬಾಕ್ಷೇಪವು ನ್ಯಾಯವಾದುದು. ಅದಕ್ಕಾಗಿ ಆಗ ಏಕ ಶಬ್ದಕ್ಕೆ ಅನ್ಯನೈರಪೇಕ್ಷ್ಯ ಬೋಧಕಾರ್ಥವನ್ನು ಹೇಳುವದಿಲ್ಲವು, ಅದಕ್ಕೆ ಬೇರೇ ಮೂರು ವಿಧವಾಗಿ ಅರ್ಥಸ್ವಾರಸ್ಯವನ್ನು ಕಲ್ಪಿಸಬಹುದೆಂದು ಸಮಾಧಾನವನ್ನು ಹೇಳುತ್ತಾರೆ.—ಪರಿತ್ಯಜ್ಯವೆಂಬುದು ಅನ್ಯನೈರಪೇಕ್ಷ್ಯವನ್ನು ಬೋಧಿಸಿತು, ಮಾಶುಚಃ ಎಂಬುದು ಅರ್ಥವಾಗಿ ಅಧಿಕಾರವನ್ನು ಬೋಧಿಸಿತು, ಎಂದರೆ, ಆ ಸಂದರ್ಭದಲ್ಲಿ ಈ "ಏಕ" ಶಬ್ದವು ಯಾವ ಅನುಸಂಧಾನವನ್ನುಂಟು ಮಾಡುತ್ತದೆಂದರೆ ಹೇಳುತ್ತಾರೆ :—ಏಕಶಬ್ದವು, (೧) ಸಾತ್ವಿಕತ್ಯಾಗತ್ತಾಲೇ - ಸಾತ್ವಿಕತ್ಯಾಗದ ಮೂಲಕ, ಅಹಂ ಮದ್ರಕ್ಷಣ ಭರೋ ಮದ್ರಕ್ಷಣ ಫಲಂ

ಏಕಮೇ ಸರ್ವೋಪಾಯ ಸ್ಥಾನತ್ತಿಲೇ ನಿರ್ಕಿರ ನಿಲೈಯೈ ಕಾಟ್ಟುದಲ್, ಶೆಯ್ಯ ಕ್ಕಡವದು.

---

ತಥಾ। ನನುಮ” ಎಂದು ಸಾತ್ವಿಕತ್ಯಾಗದ ಮೂಲಕ ಭರಸಮರ್ಪಣೆ ಮಾಡುವ ದರಿಂದ, ತನ್ಪಕ್ಕಲಿಲ್ - ಅಧಿಕಾರಿಯಾದ ತನ್ನಲ್ಲಿ, ಪರಾಧೀನ ಕರ್ತೃತ್ವಾದಿ ಗಳೈ ವಿವಕ್ಷಿತ್ತಲ್-“ಪರಾತ್ತು ತಚ್ಛ್ರುತೇಃ” ಎಂಬ ಶಾರೀರಕ ಸೂತ್ರದಲ್ಲಿ ಹೇಳಿರವಹಾಗೆ, ತಾನು ಎಲ್ಲಾ ಕರ್ಮದಲ್ಲೂ ಅಸ್ವತಂತ್ರನು, ಸ್ವತಂತ್ರಕರ್ತಾ ವಾಗಿರುವ ಮಾಮೇಕಂ ನನ್ನೊಬ್ಬನನ್ನೇ ಎಂದು, ಆತನಲ್ಲಿ ಸ್ವತಂತ್ರ ಕರ್ತೃತ್ವ ವನ್ನೂ, ತನ್ನಲ್ಲಿ ಆತನಿಗೆ ಪಾರತಂತ್ರ್ಯವನ್ನೂ, ಈ ಏಕಶಬ್ದವು ಬೋಧಿಸುತ್ತದೆಂದಾ ಗಲಿ, (೨) ಫಲೋಪಾಯೈಕ್ಯತ್ತೈಚ್ಚೊಲ್ಲುದಲ್ – ಪ್ರಾಪ್ಯನಾದ ನನ್ನನ್ನು ಹೊಂದುವದಕ್ಕೆ, ಮಾಮೇಕಂ-ಸಿದ್ಧೋಪಾಯನಾಗಿಯೂ ನಾನೇ, ಫಲವಾದ ಪ್ರಾಪ್ಯವೂ ನಾನೇ, ಹೀಗೆ ಎರಡೂ ನಾನೊಬ್ಬನೇಯೆಂದು ಬೋಧಿಸಿ,ಶರಣಂವ್ರಜ ಎಂದು ಹೇಳಿತೆಂದಾಗಲಿ, (೩) ಅಥವಾ, ಏಕಮೇ ಸರ್ವೋಪಾಯಸ್ಥಾನತ್ತಿಲೇ ನಿರ್ಕಿರ ನಿಲೈಯೈಕಾಟ್ಟುದಲ್ – ತಾನೊಬ್ಬನೇ ಸಮಸ್ತ ಉಪಾಯಸ್ಥಾನದಲ್ಲೂ ನಿಂತಿರುವ ಸ್ಥಿತಿಯನ್ನು ಈ ಏಕಶಬ್ದವು ತೋರಿಸುತ್ತದೆ ಎಂದಾಗಲಿ, ಹೀಗೆ ಶೆಯ್ಯಕ್ಕಡವದು - ಅನುಸಂಧಾನವನ್ನುಂಟುಮಾಡುತ್ತದೆಂದು ಇಟ್ಟುಕೊಳ್ಳ ಬಹುದು. ಹೀಗೆ ವಿಕಲ್ಪಿಸಿ ಹೇಳಿರುವದರಿಂದ ಯಾವುದಾದರೂ ಒಂದರ ಅನು ಸಂಧಾನ ಮಾತ್ರವನ್ನೇ ಇಟ್ಟುಕೊಳ್ಳಬಹುದು. ಮೂರರಲ್ಲೂ ಅರ್ಥಸ್ವಾರ ಸ್ಯವಿರುವದರಿಂದ, ಶ್ಲೋಕದ ಇತರ ಪದಗಳಿಂದ ಇನ್ನು ಎರಡರ ಅನು ಸಂಧಾನವನ್ನು ಅರ್ಥವಾಗಿ ಊಹಿಸದ ಪಕ್ಷದಲ್ಲಿ, ಮೂರನ್ನೂ ಇಟ್ಟುಕೊಳ್ಳ ಬಹುದು. ಹೀಗೆ ಏಕಶಬ್ದಕ್ಕೆ ಮೂರುವಿಧವಾಗಿ ಅರ್ಥಸ್ವಾರಸ್ಯವನ್ನು ಕಲ್ಪಿಸ ಬಹುದು ; ಆ ಪದವು ನಿರರ್ಥಕವಾಗುವದಿಲ್ಲವೆಂದು ಉಪದೇಶಿಸಿದರು. ಪ್ರಕೃತ ಹಿಂದಿನ ಕಾರಿಕೆಯಲ್ಲಿ ನಿತ್ಯನೈಮಿತ್ತಿಕ ಕರ್ಮಾನುಷ್ಠಾನಗಳು ಪ್ರಪದನಕ್ಕೆ ಅಙ್ಗ ವಲ್ಲವು. ಅಙ್ಗತ್ವೇನ ಅವುಗಳ ಪರಿತ್ಯಾಗವೂ ಸಹ ಬೋಧಿಸಲ್ಪಟ್ಟಿತೆಂದು ಹೇಳಿದ ನಂತರ, ಅವುಗಳನ್ನನುಷ್ಠಿಸಲೇಬೇಕು ಎಂಬ ನಿರ್ಬಂಧತಾನೇ ಏಕೆ? ಪ್ರಪದನಕ್ಕೆ ಬೇಕಿಲ್ಲವು. ಉತ್ತರಕಾಲದಲ್ಲೂ ಅದಕ್ಕೇನೂ ಸಹಾಯವಲ್ಲವು. ಇದೂ ಅಲ್ಲದೆ ಈತನು ಕೃತಕೃತ್ಯನು. ಅವುಗಳನ್ನು ಅನುಷ್ಠಿಸಲೇಬೇಕೆಂದು ನಿರ್ಬಂಧಹೇಗೆ ಎಂದರೆ, ಅದಕ್ಕೆ ಸಮಾಧಾನವನ್ನು ಹೇಳಿ, ತಮ್ಮ ಆಚಾರ್ಯರ ಅಭಿಪ್ರಾಯವೂ ಸಹ ಹಾಗೆಯೇ ಎಂದು ಸ್ಥಾಪಿಸಿ, ಸ್ಥಾಪಿಸಲ್ಪಟ್ಟ ಅಭಿಪ್ರಾಯ ವನ್ನು ಕಾರಿಕೆಗಳ ಮೂಲಕ ಉಪದೇಶಿಸುತ್ತಾರೆ.—

**ನಿತ್ಯನೈಮಿತ್ತಿಕ ಕರ್ಮಾನನುಷ್ಠಾನೇ ಪ್ರತ್ಯವಾಯೋ ದುರ್ಲಂಘ್ಯಃ**

---

**ಪ್ರಪತ್ತಿಕ್ಕಾಗ ವೊನ್ರುಮ್ ಅನುಷ್ಟಿಕ್ಕ ವೇಣ್ಡಾವಾಗಿಲುಮ್, ಸ್ವತಂತ್ರಾಧಿಕಾರತ್ತಾಲೇ ಕಿಙ್ಕರನಾನ ವಿವನುಕ್ಕು ಸ್ವಾಮಿನುಡೈಯ ವಾಜ್ಞಾತಿಲಂಘನ ಮಾಗಾದೆನ್ರು ಸಮರ್ಥಿತ್ತಾರ್‌ಗಳ್.**

---

ನಿತ್ಯನೈಮಿತ್ತಿಕಗಳನ್ನನುಷ್ಠಿಸದಿದ್ದರೆ ಪ್ರತ್ಯವಾಯವು ತಪ್ಪಿದ್ದಲ್ಲವು.

---

**ಪ್ರಪತ್ತಿಕ್ಕಗ** - ಈ ಪ್ರಪದನಕ್ಕಾಗಿ, **ಒನ್ರುಮ್ ಅನುಷ್ಟಿಕ್ಕವೇಂಡಾವಾಗಿಲುಮ್** - ಯಾವುದನ್ನೂ ಅನುಷ್ಠಿಸಬೇಕಾದುದು ಇಲ್ಲವೆಂದು ಹೇಳಿದುದು ಸತ್ಯವಾದರೂ, ಹೇಳಿದ ಕಾರಣವನ್ನೇನೋ ಒಪ್ಪಕ್ಕದ್ದೇ, ಆ ಕಾರಣದಿಂದ ಅವು ಅವಶ್ಯಕವಾಗಿ ಅನುಷ್ಠಿಸತಕ್ಕದ್ದು ಎಂದೇನೂ ಹೇಳುವದಿಲ್ಲವು, ಇನ್ನು ಯಾವ ಕಾರಣದಿಂದ ಆವಶ್ಯಕವೆಂದು ಹೇಳುತ್ತೀರಿ ಎಂದರೆ ತಿಳಿಸುತ್ತಾರೆ;—**ಸ್ವತಂತ್ರಾಧಿಕಾರತ್ತಾಲೇ** - ಇದಲ್ಲದೆ ಶಾಸ್ತ್ರದಲ್ಲಿ ಸ್ವತಂತ್ರವಾಗಿ ಪ್ರಮಾಣಸಿದ್ಧವಾದ ನಿತ್ಯನೈಮಿತ್ತಿಕಗಳಲ್ಲಿ ಅಧಿಕಾರವಿರುವದರಿಂದ, **ಕಿಙ್ಕರನಾನ ಇವನುಕ್ಕು**—ಸ್ವತಃ ದಾಸಭೂತನಾಗಿ ಸ್ವಾಮಿಯ ಇಷ್ಟಾನುಸಾರ ಕೈಙ್ಕರ್ಯಮಾಡುವದೇ ಕರ್ತವ್ಯವಾಗಿರುವ ಈ ಪ್ರಪನ್ನನಿಗೆ, **ಸ್ವಾಮಿಯುನುಡೈಯ ಆಜ್ಞಾತಿಲಂಘನಂ ಕೂಡಾದೆನ್ರು** - ಈ ನಿತ್ಯ ನೈಮಿತ್ತಿಕಗಳ ಅನುಷ್ಠಾನವು ತನ್ನ ಸ್ವಾಮಿಯ ಆಜ್ಞಾಕೈಙ್ಕರ್ಯಗಳಾದುದರಿಂದ, ಅಂತಹ ತನ್ನ ಸ್ವಾಮಿಯ ಆಜ್ಞೆಯ ಉಲ್ಲಂಘನೆಯು ಸರಿಯಲ್ಲವೆಂದು, **ಸಮರ್ಥಿತ್ತಾರ್‌ಗಳ್** - ಸಮರ್ಥನೆ ಮಾಡಿದರು, ಯಾರೆಂದರೆ ತಮ್ಮ ಗುರುಗಳಾಗಿ ತಮಗೆ ಉಪದೇಶಿಸಿದ ಮಹಾನುಭಾವರಾದ ಅಪ್ಪುಳ್ಳಾರ್ ಪ್ರಭೃತಿಗಳೆಂಬ ತಾತ್ಪರ್ಯವು. ಶಾಸ್ತ್ರಪ್ರಕ್ರಿಯೆಯಪ್ರಕಾರ "ಶ್ರುತಿ ಸ್ಮೃತಿರ್ಮಮೈವಾಜ್ಞಾ ಯಸ್ತಾ ಮುಲ್ಲಂಘ್ಯವರ್ತತೇ। ಆಜ್ಞಾಚ್ಛೇದೀ ಮಮದ್ರೋಹೀ ಮದ್ಭಕ್ತೋಽಪಿ ನವೈಷ್ಣವಃ", ಇಲ್ಲಿ **ಮದ್ಭಕ್ತೋಽಪಿ ನವೈಷ್ಣವಃ** ಎಂದು ಹೇಳಿರುವದರಿಂದ, **ಅಹರಹಸ್ಸಂಧ್ಯಾಮುಪಾಸೀತ** ಇತ್ಯಾದಿ ಶಾಸ್ತ್ರಪ್ರಮಾಣಗಳಿಗೆ ವಿರೋಧವಾಗಿ ನಡೆಯುವವನು, **ಮದ್ಭಕ್ತೋಽಪಿ** ನನ್ನ ಭಕ್ತನಾಗಿ ಪ್ರಪನ್ನನಾಗಿದ್ದರೂ, **ನವೈಷ್ಣವಃ** - ವಿಷ್ಣುವಾದ ನನಗೆ ಸಂಬಂಧಿಸಿದವನಲ್ಲವು ಎಂದು ಹೇಳಿರುವದರಿಂದ, ಭಗವನ್ನಿಗ್ರಹಕ್ಕೆ ಒಳಪಟ್ಟವನೆಂದು ತಿಳಿಯಬಹುದು. ಇದೂ ಅಲ್ಲದೆ ತಮ್ಮ ಗುರುಗಳುಪದೇಶವು ಹಾಗೆಯೇ, ಆದುದರಿಂದ ವರ್ಣಾಶ್ರಮ ಧರ್ಮತ್ಯಾಗವು ಸರ್ವೇಶ್ವರನ ಆಜ್ಞೆಯನ್ನುಲ್ಲಂಘಿಸಿದ

**ಆಜ್ಞಾವಿರೋಧಿಭಿಃ ಸ್ವಾರ್ಹಪ್ರಾಯಶ್ಚಿತ್ತಪರಾಙ್ಮುಖೈಃ ।**
**ಸ್ವಾಧಿಕಾರೋಚಿತ ಸ್ಸರ್ವೈಃ ಪ್ರತ್ಯವಾಯೋ ದುರತ್ಯಯಃ ॥೪೯॥**

ಹಾಗಾಗುವದರಿಂದ ಪ್ರತ್ಯವಾಯಕರವೆಂದು ತಮ್ಮಗುರುಗಳೂ ಶಾಸ್ತ್ರದಲ್ಲಿರುವ ದನ್ನೇ ಸಮರ್ಥಿಸಿ ಹೇಳಿದರು ಎಂಬ ತಾತ್ಪರ್ಯವು.

ಆದರೆ ಪ್ರಪನ್ನನು ಕೃತಕೃತ್ಯನು, ಪ್ರಪದನವನ್ನು ಮಾಡಿದ ಒಡನೆಯೇ "ಸಕೃದೇವಪ್ರಪನ್ನಾಯ" ಎಂಬಲ್ಲಿ ಹೇಳಿರುವಹಾಗೆ ಅಭಯವು ದತ್ತವಾಯಿತು. ನರಕಾದಿಗಳ ಭಯವೆಂದಿಗೂ ಇಲ್ಲವು. ಹೀಗಿರುವಾಗ, ನಿತ್ಯನೈಮಿತ್ತಿಕಗಳ ತ್ಯಾಗವು ಆಜ್ಞಾತಿಲಂಘನೆಯು ಹೇಗಾಗುತ್ತದೆ? ಆದರಿಂದ ಪ್ರತ್ಯವಾಯತಾನೇ ಹೇಗೆ? ಭಕ್ತಿಮಾರ್ಗಕ್ಕೇನೋ ಅಙ್ಗವಾಗಿರುವದರಿಂದ ಅತಿಲಂಘನಮಾಡಿದರೆ ಪ್ರತ್ಯವಾಯವಿರತಕ್ಕದ್ದು ನ್ಯಾಯವು. ಇದು ಭರನ್ಯಾಸಕ್ಕೆ ಅಙ್ಗವೂ ಅಲ್ಲವು. ಆದರ ಫಲಕ್ಕಾಗಿಯಾಗಲಿ, ಸಹಕಾರಿಯಲ್ಲವು. ಏನಾದರೂ ಸ್ವಲ್ಪ ಪ್ರಯೋಜನವಿದ್ದರಲ್ಲವೇ ಅನುಷ್ಠಿಸತಕ್ಕದ್ದು. "ಪ್ರಯೋಜನ ಮನುದ್ದಿಶ್ಯ ನಮಂದೋಪಿ ಪ್ರವರ್ತತೇ" ಪ್ರಯೋಜನವಿಲ್ಲದಿದ್ದರೆ ಅಲ್ಪಜ್ಞನೂಕೂಡ ಪ್ರವರ್ತಿಸುವನಿಲ್ಲವೆಂದು ಹೇಳಲ್ಪಟ್ಟರುತ್ತದೆ; ಹೀಗಿರುವಾಗ ಇಂತಹ ಆಜ್ಞಾಗಳಸ್ತನರೂಪವಾದ ನಿತ್ಯ ನೈಮಿತ್ತಿಕಾನುಷ್ಠಾನದ ವಿಚಾರದಲ್ಲಿ ನಿರ್ಬಂಧವೇಕೆ? ಎಂಬ ಪೂರ್ವಪಕ್ಷತಂದರೆ ಆದಕ್ಕೆ ಸಮಾಧಾನವನ್ನು ಹೇಳುತ್ತಾರೆ. ಬಿಟ್ಟರೆ ಪ್ರತ್ಯವಾಯ ಉಂಟೆಂದೂ, ಅನುಷ್ಠಿಸಿದರೆ ಎರಡು ವಿಧ ಪ್ರಯೋಜನ ಉಂಟೆಂದೂ, ಎರಡು ಕಾರಿಕೆಗಳಿಂದ ತಿಳಿಸುತ್ತಾರೆ. **ಆಜ್ಞಾವಿರೋಧಿಭಿಃ** - ಸರ್ವೇಶ್ವರನ ವಿಧಿನಿಷೇಧರೂಪ ಆಜ್ಞೆಗಳಿಗೆ ವಿರೋಧಿಗಳಾದ ಎಂದರೆ **ಅಕೃತ್ಯ ಕರಣ** - ಮಾಡಬೇಡವೆಂದು ವಿಧಿಸಿದುದನ್ನು ಮಾಡುವ ಮತ್ತು **ಕೃತ್ಯಾಕರಣ** - ಅವಶ್ಯ ಕರ್ತವ್ಯವೆಂದು ವಿಧಿಸಿದುದನ್ನು ಬಿಡುವ ಪ್ರವೃತ್ತಿಗಳನ್ನುಳ್ಳ, **ಸ್ವಾರ್ಹಪ್ರಾಯಶ್ಚಿತ್ತ ಪರಾಙ್ಮುಖೈಃ** - ಅದಕ್ಕಾಗಿ ತನಗೆ ಯೋಗ್ಯವೆಂದು ವಿಧಿಸಲ್ಪಟ್ಟ ಪ್ರಾಯಶ್ಚಿತ್ತಗಳನ್ನುಳ್ಳ ಎಂದರೆ ಶಕ್ತನಾಗಿ ಭಕ್ತ್ಯುಪಾಯದಲ್ಲಿರುವವನಿಗೆ ಪ್ರಾಯಶ್ಚಿತ್ತರೂಪದಲ್ಲಿ ಉಪಾಸನವನ್ನಾಗಲಿ, ಅಶಕ್ತನಾಗಿರುವ ಪ್ರಪದನಾನುಷ್ಠಾತೃವಿಗೆ ಪುನಃ ಪಾಪನಿವಾರಕ ಶರಣಾಗತಿಯನ್ನಾಗಲಿ, **ಸರ್ವೈಃ** - ಎಲ್ಲಾ ಪ್ರಪನ್ನರಿಂದಲೂ, **ಸ್ವಾಧಿಕಾರೋಚಿತಃ** - ಈಗ ತಾನು ಭಕ್ತ್ಯುಪಾಯ ನಿಷ್ಠನಾಗಲಿ ಅಥವಾ ಭರನ್ಯಾಸನಿಷ್ಠನಾಗಲಿ ಆಗಿರುವ ಅಧಿಕಾರಕ್ಕೆ ಯೋಗ್ಯವಾದ, **ಪ್ರತ್ಯವಾಯಃ** - ಲಘುದಂಡನರೂಪ ಪ್ರತ್ಯವಾಯವು, **ದುರತ್ಯಯಃ** - ಮೀರಲಸಾಧ್ಯವು, ದಾಟಲಸಾಧ್ಯವಾದುದು. ನಿತ್ಯನೈಮಿತ್ತಿಕ ಕರ್ಮಗಳು ಆಜ್ಞಾ ಕೈಙ್ಕರ್ಯಗಳು, ಇವುಗಳು ತ್ಯಜಿಸತಕ್ಕದ್ದಲ್ಲ

## ನಿತ್ಯನೈಮಿತ್ತಿಕ ಕರ್ಮಾನುಷ್ಠಾನೇ ಲಾಭದ್ವಯ ಮಸ್ತಿ.

ಆಜ್ಞಾನುಪಾಲನೇ ತತ್ತತ್ಪ್ರತ್ಯವಾಯ ನಿವಾರಣಮ್ ।
ಸ್ವಾಮಿನಸ್ತೋಷತಃ ಪ್ರೀತಿ ರಿತಿ ಲಾಭದ್ವಯಂ ಸ್ಥಿರಮ್ ॥೫೦॥

ವೆಂದು ಹಿಂದೆಯೇ ಉತ್ತರ ಕೃತ್ಯಾಧಿಕಾರದಲ್ಲಿ ಉಪಪಾದಿತವು. ಬುದ್ಧಿಪೂರ್ವಕವಾಗಿ ಈ ಆಜ್ಞಾಕೈಙ್ಕರ್ಯಗಳನ್ನು ತ್ಯಜಿಸಿದರೆ ದಾಸನಾದವನು ತನ್ನ ಸ್ವಾಮಿಯ ಆಜ್ಞೆಗಳನ್ನು ಉಲ್ಲಂಘಿಸಿದುವರಿಂದ ಬುದ್ಧಿಪೂರ್ವೋತ್ತರಾಘಕ್ಕೆ ಗುರಿಯಾಗುವನು. ಆದುದರಿಂದ ಅದಕ್ಕಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳದೇ ಹೋದರೆ ಅಲ್ಪದಂಡನೆಗಳಾದ ಕಂಜಾಭಸಂತಿ, ಕಾಣಾಭಸಂತಿ, ಇತ್ಯಾದಿಗಳಲ್ಲಿ ಹೇಳಿರುವ ಶಿಕ್ಷೆಗೆ ಗುರಿಯಾಗುತ್ತಾನೆಂಬ ಭಾವವು. ಹೀಗೆ ಒಂದುವೇಳೆ ಬುದ್ಧಿಪೂರ್ವೋತ್ತರಾಘರೂಪದಲ್ಲಿ ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನ ತ್ಯಾಗವು ಪ್ರಾಪ್ತವಾದರೆ ಆಜ್ಞಾತಿಲಂಘನಕ್ಕಾಗಿ ಅಲ್ಪದಂಡನೆಯನ್ನು ತಪ್ಪಿಸಿಕೊಳ್ಳಬೇಕೆಂಬ ಇಷ್ಟವಿದ್ದರೆ, ಭಕ್ತ್ಯುಪಾಯನಿಷ್ಠನು ಪ್ರಾಯಶ್ಚಿತ್ತರೂಪದಲ್ಲಿಯೂ ಉಪಾಸನವನ್ನೇ ಅನುಷ್ಠಿಸತಕ್ಕದ್ದು, ಭರನ್ಯಾಸನಿಷ್ಠನಾಗಿದ್ದರೆ ಉತ್ತರಾಘ ನಿವೃತ್ತಿಗಾಗಿ ಶರಣಾಗತಿಯನ್ನು ಅನುಷ್ಠಿಸತಕ್ಕದ್ದು, ಹೀಗೆ ಪ್ರಾಯಶ್ಚಿತ್ತ ಪರಾಙ್ಮುಖನಾದರೆ "ಜಾತೇಽಪಿ ತನ್ನಿಷ್ಕೃತೇಃ ಕೌಟಿಲ್ಯೇ ಸತಿಶಿಕ್ಷಯಾಪ್ಯನಘಯನ್ ಕ್ರೋಡೀಕರೋತಿ ಪ್ರಭುಃ" ಎಂದು ಹೇಳಿರುವಹಾಗೆ ಅಲ್ಪ ಶಿಕ್ಷೆಯನ್ನು ಆಜ್ಞಾತಿಲಂಘನಕ್ಕಾಗಿ ಹೊಂದುವನು, ಇದು ದುರತಿಕ್ರಮವು. ತಪ್ಪಿದ್ದಲ್ಲವೆಂದು ಅಪ್ಪಣೆಕೊಡಿಸಿರುತ್ತಾರೆ. ಹಿಂದಿನ ಪೂರ್ವಪಕ್ಷದಲ್ಲಿ ಪ್ರಯೋಜನವೇನೂ ಇಲ್ಲದಪಕ್ಷದಲ್ಲಿ ಈ ನಿತ್ಯ ನೈಮಿತ್ತಿಕಗಳನ್ನು ಅನುಷ್ಠಿಸಲೇಬೇಕೆಂಬ ನಿರ್ಬಂಧನೇತಕ್ಕೆ ಎಂಬುದಕ್ಕೆ, ಹೀಗೆ ಅನುಷ್ಠಿಸುವದರಿಂದ ಎರಡು ಪ್ರಯೋಜನಗಳುಂಟೆಂದು ಮುಂದಿನ ಕಾರಿಕೆಯಿಂದ ತಿಳಿಸುತ್ತಾರೆ. (೧) ಮೇಲೆ ಹೇಳಿದ ಹಾಗೆ ಪ್ರತ್ಯವಾಯದಿಂದ ತಪ್ಪಿಸಿಕೊಳ್ಳೋಣವೂ, (೨) ತನ್ನ ಸ್ವಾಮಿಗೆ ಸಂತೋಷವನ್ನುಂಟುಮಾಡಿ ಆತನ ಅನುಗ್ರಹದ ಲಾಭವೂ, ಹೀಗೆ ಎರಡು ಪ್ರಯೋಜನಗಳುಂಟು.

### ನಿತ್ಯನೈಮಿತ್ತಿಕ ಕರ್ಮಾನುಷ್ಠಾನದಲ್ಲಿ ಲಾಭದ್ವಯವುಂಟು.

**ಆಜ್ಞಾನುಪಾಲನೇ** - ನಿತ್ಯನೈಮಿತ್ತಿಕರೂಪ ಆಜ್ಞಾಕೈಙ್ಕರ್ಯಗಳು ಭರನ್ಯಾಸಕಾಲದಲ್ಲೂ ತದನಂತರವೂ ಉಪಾಯಕ್ಕೆ ಸಹಕಾರಿಯಾಗಿ ಬೇಡದಿದ್ದರೂ ಭಗವದಾಜ್ಞಾರೂಪ ಕೈಙ್ಕರ್ಯಗಳೆಂದು ಭಾವಿಸಿ ನಡೆಸಿದರೆ, **ತತ್ತತ್ಪ್ರತ್ಯವಾಯನಿವಾರಣಂ** - ಹಾಗೆ ಅಕರಣೇಪ್ರಾಪ್ತವಾಗುವ ಆಯಾ ಕೃತಾಕೃತಕರಣಕ್ಕೆ ಅನು

ರೂಪವಾದ ಶಿಕ್ಷಾರೂಪ ಪ್ರತ್ಯವಾಯದ ನಿವಾರಣೆಯೊಂದು, **ಸ್ವಾಮಿ ಸಂತೋಷತಃ** - ದಾಸನಾದವನು ಸ್ವಾಮಿಯು ಆಜ್ಞೆಯನ್ನು ಶಿರಸಾವಹಿಸಿ ನಡೆಸಿದವನೆಂಬದಾಗಿ ಸ್ವಾಮಿಗೆ ಸಂತೋಷವುಂಟಾಗುವದರ ಮೂಲಕವಾಗಿ, **ಪ್ರೀತಿಃ** - ಭಗವದನುಗ್ರಹ ವೊಂದು, **ಇತಿ** - ಹೀಗೆ, **ಲಾಭದ್ವಯಂ** - ಎರಡು ಪ್ರಯೋಜನಗಳು ಉಂಟೆಂಬುದೂ, **ಸ್ಥಿರವ್** - ಸ್ಥಾಪಿತವಾಯಿತು. ಆಜ್ಞಾಕೈಙ್ಕರ್ಯಾನುಷ್ಠಾನ ಪಾಲನವಲ್ಲಿ ಈ ಎರಡು ಫಲಗಳುಂಟೆಂದು ಹೇಳಲ್ಪಟ್ಟವು. ಅನುಜ್ಞಾಕೈಙ್ಕರ್ಯಗಳವಿಷಯದಲ್ಲಿ ಇಲ್ಲಿ ಏನೂ ಹೇಳಲ್ಪಡಲಿಲ್ಲವು; ಏಕೆಂದರೆ ಅವು ಆಜ್ಞಾಕೈಙ್ಕರ್ಯಗಳಲ್ಲದೆ ಐಚ್ಛಿಕಗಳಾದುದರಿಂದ; ಅನುಜ್ಞಾನುಪಾಲನೇ ಪ್ರಯೋಜನವೇನು ? ಎಂದು ಪ್ರಶ್ನಿಸ ಬಹುದು. ಈ ಎರಡು ಪ್ರಯೋಜನಗಳಲ್ಲಿ, ಮೊದಲನೇಯದು ಉಂಟಾಗುವದಕ್ಕೆ ಕಾರಣವೇ ಇಲ್ಲವಾದುದರಿಂದ ಕಾರ್ಯವಾದ ಫಲವೂ ಇಲ್ಲವು, ಆದುದರಿಂದ ಎರಡನೆಯು ಲಾಭವಾದ ಭಗವತ್ಪ್ರೀತಿಯೊಂದೇ ಉಂಟಾಗುತ್ತದೆಂದು ತಿಳಿಯತಕ್ಕದ್ದು.

ಆಗಲಿ, ಹಾಗೆ ನಿತ್ಯನೈಮಿತ್ತಿಕಗಳನ್ನು ಅನುಷ್ಠಿಸುವದರಿಂದ ಶಿಕ್ಷಾರೂಪ ಪ್ರತ್ಯವಾಯ ನಿವಾರಣೆಯೂ, ಆಜ್ಞಾಪಾಲನದಿಂದ ಭಗವತ್ಪ್ರೀತಿಯೂ ಉಂಟಾಗುತ್ತದೆಂದೇನೋ ಒಪ್ಪಿಕೊಳ್ಳೋಣ. ಆದರೆ ನಿತ್ಯನೈಮಿತ್ತಿಕಾದಿಗಳಿಗೆ ಸ್ವರ್ಗಲೋಕ ಬ್ರಹ್ಮಲೋಕಾದಿ ಫಲಗಳನ್ನುಂಟುಮಾಡುವ ಶಕ್ತಿ ಇದೆಯಲ್ಲಾ, ಅದು ಪ್ರತ್ಯವಾಯವಲ್ಲವೋ ? ಈ ಪ್ರಪನ್ನನಿಗೆ ಅವುಗಳು ಬೇಕಾಗಿಲ್ಲವಲ್ಲಾ ಎಂದರೆ ಅವು ಕಾಮ್ಯವಾಗಿಯೇನೋ ಪರಿಣಮಿಸಬಹುದು. ಅಂತಹ ಕಾಮ್ಯಗಳಲ್ಲಿ ಅಧಿಕಾರ ಉಂಟಾಗಬೇಕಾದರೆ, ಅರ್ಥಿತ್ವವೂ ಸಾಮರ್ಥ್ಯವೂ ಎರಡೂ ಇರಬೇಕೆಂದು ಹೇಳಲ್ಪಟ್ಟಿದೆ. ಈ ಪ್ರಪನ್ನನು ಕಾಮ್ಯಾಧಿಕಾರಿಯಲ್ಲವು, ಏಕೆಂದರೆ ಅರ್ಥಿತ್ವವಿಲ್ಲವು, ಬ್ರಹ್ಮಲೋಕ ಸ್ವರ್ಗಲೋಕಾದಿಗಳನ್ನು ಅಪೇಕ್ಷಿಸುವದಿಲ್ಲವು. ಆದುದರಿಂದ ಯಾವಾಗ ಅಧಿಕಾರವೇ ಇಲ್ಲವೋ ಫಲವೂ ಇಲ್ಲವು. ಈತನು ಅನುಷ್ಠಿಸುವ ನಿತ್ಯ ನೈಮಿತ್ತಿಕಗಳಲ್ಲೂ ಸಾತ್ವಿಕತ್ಯಾಗವನ್ನು ಹೇಳುವದರಿಂದ, ಫಲಾಭಿಸಂಧಿರಹಿತನಾಗಿ ಮಾಡುವದರಿಂದ ಪ್ರತ್ಯವಾಯವಿಲ್ಲವೆಂದು ತಿಳಿಸುತ್ತಾರೆ. ಆಗಲಿ, ಈ ಅಧಿಕಾರಿಗೆ ಇಚ್ಛೆ ಇಲ್ಲದಿದ್ದರೆ ಫಲವಿಲ್ಲವೆಂದು ಹೇಳುವದು ಹೇಗೆ ನ್ಯಾಯವು? ಅಕೃತ್ಯಕರಣ ಕೃತ್ಯಾಕರಣ, ರೂಪಗಳಾದ ಪರದ್ರವ್ಯಾಪಹರಣವೇನು, ತನ್ನ ಶಿಶುವನ್ನು ರಕ್ಷಿಸದೆ ಬಿಡುವದೇನು, ಇಂತಹ ನಿಷಿದ್ಧಕರ್ಮಗಳನ್ನು ಒಬ್ಬನು ಮಾಡಿದರೆ ಆ ನಿಷಿದ್ಧ ಕರ್ಮಗಳಿಗೆ ಫಲವಾದ ಶಿಕ್ಷೆಗಳಲ್ಲಿ ಈತನಿಗೆ ಇಚ್ಛೆ ಇಲ್ಲವೇ ಇಲ್ಲವು. ಆಗ ಅವುಗಳಲ್ಲೂ ಇಚ್ಛೆ ಇಲ್ಲದ ಅಧಿಕಾರಿಯಾದುದರಿಂದ ಫಲ ಉಂಟಾಗದಿರಲಿ, ಮೋಜಸ್ವೈರಟರು

**ಅನಿಚ್ಛಾತೋ ನಿವರ್ತೇತ ಸ್ವರ್ಗಾದ್ಯಂ ಕರ್ಮಣಾಂ ಫಲಮ್ ।**
**ಅಮರ್ಯಾದಸ್ಯ ದುರ್ವಾರಃ ಪ್ರತ್ಯವಾಯೋಽನ್ಯಹೇತುಕಃ ॥೫೧॥**

ಶಿಕ್ಷಿಸದಿರಲಿ ; ಎಂಬ ನ್ಯಾಯವು ಹೇಗೆ ಸರಿಯಲ್ಲವೋ, ಹಾಗೆಯೇ ಈ ನಿತ್ಯ ನೈಮಿತ್ತಿಕಗಳ ಪರಿತ್ಯಾಗದ ಶಿಕ್ಷೆಯ ಅಪೇಕ್ಷೆಯು ಪ್ರಪನ್ನನಿಗೆ ಇಲ್ಲವಾದುದರಿಂದ ಭಗವನ್ನಿಗ್ರಹ ಉಂಟಾಗದೇ ಇರಲಿ ಎಂದು ಪೂರ್ವಪಕ್ಷ ತಂದರೆ, ಇವುಗಳ ತ್ಯಾಗದಲ್ಲಿ ಶಿಕ್ಷೆಯು ತಪ್ಪಿದ್ದಲ್ಲವು ; ಏಕೆಂದರೆ ಬೇರೆ ಕಾರಣಗಳುಂಟು ಎಂದು ಹೇಳುತ್ತಾರೆ.—ಕರ್ಮಣಾಂ ಫಲಮ್ - ತಾನು ಅನುಷ್ಠಿಸುವ ನಿತ್ಯನೈಮಿತ್ತಿಕಾದಿ ಕರ್ಮಗಳೇನು, ಇತರ ಯಜ್ಞದಾನಾದಿ ಕರ್ಮಗಳೇನು, ಇಂತಹ ಕರ್ಮಗಳ ಫಲವಾದ, ಸ್ವರ್ಗಾದ್ಯಂ - ಸ್ವರ್ಗವೇ ಮೊದಲಾದವು, ಇಲ್ಲಿ ಆದಿಶಬ್ದದಿಂದ ಬ್ರಹ್ಮಲೋಕಾದಿಗಳೂ ಇತರ ಐಶ್ವರ್ಯಗಳೂ, ಅನಿಚ್ಛಾತಃ- ಈ ಭರನ್ಯಾಸನಿಷ್ಠನಿಗೆ ಇಚ್ಛೆಯಿಲ್ಲದಿರುವದರಿಂದ, ಅರ್ಥಿತ್ವ ಸಾಮರ್ಥ್ಯಗಳಲ್ಲಿ ಇಚ್ಛೆಯೇ ಇಲ್ಲದಿರುವದರಿಂದ, ಅಧಿಕಾರವೇ ಇಲ್ಲವಾಗಿ, ನಿವರ್ತೇತ-ಹೀಗೆ ಕಾಮನಾಧಿಕಾರಿಯಲ್ಲದೇ ಇರುವದರಿಂದ ನಿವೃತ್ತಿಸಿ ಹೋಗುತ್ತದೆ, ಎಂದರೆ ಅಂತಹ ಕಾಮ್ಯಫಲವು ನಿತ್ಯನೈಮಿತ್ತಿಕಾನುಷ್ಠಾನಮಾಡುವವನಿಗೆ ಉಂಟಾಗುವದಿಲ್ಲವೆಂಬಭಾವವು. ಹಾಗಾದರೆ ನಿಷಿದ್ಧಕರ್ಮವನ್ನು ಮಾಡುವವನಿಗೆ ಅದರ ಫಲದಲ್ಲಿ ಇಚ್ಛೆಯಿಲ್ಲದುದರಿಂದ ಆತನಿಗೆ ಪ್ರತ್ಯವಾಯರೂಪ ಫಲವೂ ಇಲ್ಲದೇ ಹೋಗಲಿ ; ಬೆರಳು ಸುಡುವದು ಇಷ್ಟವಿಲ್ಲವು, ಬೆರಳನ್ನು ಬೆಂಕಿಯಲ್ಲಿಟ್ಟರೂ ಸುಡದೇ ಇರಲಿ ಎಂದರೆ ಸುಡದೆ ಇರುತ್ತದೋ ? ಎಂದರೆ ಹಾಗಲ್ಲವೆಂದು ಹೇಳುತ್ತಾರೆ. ಅಮರ್ಯಾದಸ್ಯ-ಶಾಸ್ತ್ರಮರ್ಯಾದೆಯನ್ನು ಅತಿಕ್ರಮಿಸಿದವನಿಗೆ ಎಂದರೆ ಶಾಸ್ತ್ರದ ವಿಧಿ ನಿಷೇಧವಾಕ್ಯಕ್ಕೆ ವಿರೋಧವಾಗಿ ನಡೆಯುವವನಿಗೆ ಎಂದರೆ ಅಕೃತ್ಯಕರಣ - ಶಾಸ್ತ್ರದಲ್ಲಿ ನಿಷೇಧಿಸಿರುವದರ ಆಚರಣೆ, ಕೃತ್ಯಾಕರಣ - ಮಾಡಬೇಕಾದುದನ್ನು ಮಾಡದೇ ಬಿಡುವದು, ಹೀಗೆ ಮಾಡುವವನಿಗೆ, ಪ್ರತ್ಯವಾಯಃ - ಶಿಕ್ಷಾರ್ಹತೆಯು, ದುರ್ವಾರಃ - ತಪ್ಪಿದ್ದಲ್ಲವು, ಏತಕ್ಕೆಂದರೆ ಅದು ಅನ್ಯಹೇತುಕಃ - ಇಚ್ಛೆಗಿಂತ ಬೇರೆಯಾದ ಕಾರಣವುಳ್ಳದು, ಅದು ಯಾವುದೆಂದರೆ, ಅಕೃತ್ಯಕರಣ ಕೃತ್ಯಾಕರಣರೂಪ ಪಾಪಗಳಾದ ಪೂರ್ವಕರ್ಮಗಳೇ ಹೇತುವಾಗಿ ಉಳ್ಳದು, ಈ ನಿಷಿದ್ಧ ಕರ್ಮಾಚರಣೆಯ ಫಲವು ನಮ್ಮ ಇಚ್ಛೆಗೆ ಅಧೀನವಾದುದಲ್ಲವು. ನಿಷಿದ್ಧ ಕರ್ಮಾಚರಣೆಯಿಂದ ಭಗವನ್ನಿಗ್ರಹವುಂಟಾಗಿ ತನ್ಮೂಲಕ ಪ್ರತ್ಯವಾಯ ಉಂಟಾಗುತ್ತದೆಯಾದುದರಿಂದ ಅದು ತಪ್ಪಿದ್ದಲ್ಲವು. ಇಂತಹ ಪ್ರತ್ಯವಾಯವು ಉಂಟಾದರೆ ಪ್ರಾಯಶ್ಚಿತ್ತವೇನೆಂದರೆ. ಭಕ್ತಿಯೋಗನಿಷ್ಠನಿಗೆ ಪರಮಾತ್ಮೋಪಾಸನೆ

**ಶ್ರೀ ಗೀತಾ ಚರಮಶ್ಲೋಕಸ್ಯ ಶ್ರೀ ಭಾಷ್ಯಕಾರ ಯೋಜನಾದ್ವಯೇ ಸ್ವತಂತ್ರಪ್ರಪತ್ತ್ಯನುವಾದೋಽಪ್ಯಸ್ತ್ಯೇವ.**

**(ಇ)ಪ್ರಪತ್ತಿಯೈ ಭಕ್ತಿಯೋಗಾಙ್ಗಕವಾನ ಅರುಳಿಚ್ಚೆಯ್ದದು, ಪ್ರಪತ್ತಿ ಸಕಲ ಫಲಸಾಧನವಾನಪಡಿಯೈ ಪ್ರಕೃತವಾನ ಭಕ್ತಿಯೋಗ**

---

ಯನ್ನು ಮಾಡುವದೇ ಪ್ರಾಯಶ್ಚಿತ್ತವೆಂದೂ, ಶಕ್ತನಾದ ಪ್ರಪನ್ನನಿಗೆ ಪ್ರತಿಪದ ಪ್ರಾಯಶ್ಚಿತ್ತವೆಂದೂ, ಅಶಕ್ತನಾದ ಪ್ರಪನ್ನನಿಗೆ ಪ್ರಾಯಶ್ಚಿತ್ತ ಪ್ರಪದನವೆಂದೂ ಇತರರಿಗೆ ಕೃಛ್ರ ಚಾಂದ್ರಾಯಣಾದಿ ಪ್ರಾಯಶ್ಚಿತ್ತಗಳೆಂದೂ ಭಾವಿಸತಕ್ಕದ್ದು. ಹೀಗೆ ಪ್ರಾಯಶ್ಚಿತ್ತಗಳನ್ನು ಅನುಷ್ಠಿಸದೇ ಇರುವವರಿಗೆ ಭಗವನ್ನಿಗ್ರಹವು ತಪ್ಪಿದ್ದಲ್ಲವೆಂದು ಹಿಂದಿನ ಶ್ಲೋಕದಲ್ಲೇ ಹೇಳಲ್ಪಟ್ಟಿತು. ಭಕ್ತಿಯೋಗನಿಷ್ಠನಿಗೆ ಅದು ಸಿದ್ಧಿಸದೇ ಇರುವ ಪ್ರತ್ಯವಾಯ ರೂಪಶಿಕ್ಷೆಯು, ಪ್ರಪತ್ತಿ ನಿಷ್ಠನಿಗೆ ಕುರುಡ, ಕುಂಟ ಮೊದಲಾದ ರೂಪದಲ್ಲಿ ಶಿಕ್ಷೆಯು, ಇತರರಿಗೆ ಇನ್ನೂ ಗುರುತರವಾದ ಶಿಕ್ಷೆಗಳು ಎಂದು ತಿಳಿಯತಕ್ಕದ್ದು ||೫೧||

**ಶ್ರೀ ಗೀತಾ ಚರಮಶ್ಲೋಕದ ಶ್ರೀ ಭಾಷ್ಯಕಾರರ ಎರಡು ಯೋಜನೆಗಳಲ್ಲಿ ಸ್ವತಂತ್ರ ಪ್ರಪತ್ತ್ಯನುವಾದವೂ ಇರುತ್ತದೆ.**

---

ಸ್ವತಂತ್ರ ಪ್ರಪತ್ತ್ಯನುಷ್ಠಾನಮಾಡಿದವನಿಗೆ ಪ್ರಪತ್ತ್ಯುಪಾಯಕಾಲದಲ್ಲಿಯಾಗಲಿ ಉತ್ತರಕಾಲದಲ್ಲಿಯಾಗಲಿ ನಿತ್ಯನೈಮಿತ್ತಿಕಗಳ ಅನುಷ್ಠಾನವು ಏನೊಂದೂ ಸಹಕಾರಿಯಲ್ಲದಿದ್ದರೂ ಆಜ್ಞಾಕೈಙ್ಕರ್ಯಗಳಾಗಿ ಅನುಷ್ಠಿಸಲೇ ಬೇಕೆಂದೂ, ಬಿಟ್ಟರೆ ಪ್ರತ್ಯವಾಯವೆಂದೂ, ಅನುಷ್ಠಿಸಿದರೆ ಅಂತಹ ಪ್ರತ್ಯವಾಯದಿಂದ ತಪ್ಪಿಸಿಕೊಳ್ಳುವದಲ್ಲದೆ, ಕಿಂಕರನಾದವನಿಗೆ ಸ್ವಾಮಿಯ ಆಜ್ಞಾನುಸಾರ ನಡೆಸಿ ಆತನ ಅನುಗ್ರಹವನ್ನು ಹೊಂದುವ ಪರಮ ಲಾಭಪ್ರಾಪ್ತಿಯುಂಟೆಂದೂ ಹೇಳಲ್ಪಟ್ಟಿತು. ಆದರೆ ಶ್ರೀ ಯತಿವರ್ಯರು ಶ್ರೀ ಗೀತೆಯಲ್ಲಿ ಹೇಳಿರುವದು ಅಙ್ಗಪ್ರಪತ್ತಿಯೇ ವಿನಾ ಸ್ವತಂತ್ರಪ್ರಪತ್ತಿಯ ವಿಷಯವಾಗಿ ಹೇಳಲೇ ಇಲ್ಲವು, ಆ ಕಾರಣದಿಂದ ಶ್ರೀ ಯತಿವರ್ಯರ ಅಭಿಪ್ರಾಯಾನುಸಾರ ಪ್ರಪತ್ತಿಯು ಉಪಾಯವೇ ಅಲ್ಲವು ಎಂಬ ಶಙ್ಕಾವಿಗೆ ಈಗ ಸಮಾಧಾನವನ್ನು ಹೇಳುತ್ತಾರೆ. ಶ್ರೀ ಯತಿವರ್ಯರ ಎರಡುವಿಧ ಯೋಜನೆಗಳಿಂದಲೂ ಸ್ವತಂತ್ರ ಪ್ರಪತ್ತಿಯ ಅನುವಾದಗಳನ್ನೂ ಸಹ ಗ್ರಹಿಸಬಹುದೆಂದೂ, ಅದು ಹೇಗೆಂಬುದನ್ನೂ, ಮುಂದಿನ ಎರಡು ವಾಕ್ಯಗಳಿಂದ ಉಪಪಾದಿಸುತ್ತಾರೆ.—ಇಪ್ಪ್ರಪತ್ತಿಯೈ - ಈ ಗೀತಾಚರಮಶ್ಲೋಕದಲ್ಲಿ ಹೇಳಿರುವ ಪ್ರಪತ್ತಿಯನ್ನು, ಭಕ್ತಿಯೋಗಕ್ಕೆ ಅಙ್ಗವಾಗಿ, ಅರುಳಿ

**ಮಾಗಿರ ಫಲತ್ತಿಲೇ ಉದಾಹರಿತ್ತಪಡಿ—ಇಜ್ಜ ದ್ವಿತೀಯ ಯೋಜನೈಯಿಲ್**

**ಚ್ಚೆಯ್‌ದದು** - ಭಾಷ್ಯದಲ್ಲಿ ಅನುಗ್ರಹಿಸಿರುವದು, **ಪ್ರಪತ್ತಿ** . ಶರಣಾಗತಿಯು **ಸಕಲ ಫಲ ಸಾಧನಮಾನಪಡಿಯೈ** - ಸಕಲ ಚತುರ್ವಿಧ ಪುರುಷಾರ್ಥಗಳನ್ನೂ ಸಾಧಿಸಿಕೊಡುವದೆಂಬುದನ್ನು, **ಪ್ರಕೃತಮಾನ** - ಈಗ ಪ್ರಸ್ತುತವಾದ, **ಭಕ್ತಿ ಯೋಗಮಾಗಿರ ಫಲತ್ತಿಲೇ** - ಭಕ್ತಿಯೋಗದ ನಿಷ್ಪತ್ತಿರೂಪವಾದ ಫಲವಿಷಯ ದಲ್ಲಿ, **ಉದಾಹರಿತ್ತಪಡಿ** - ಒಂದು ನಿದರ್ಶನರೂಪದಲ್ಲಿ ಉದಾಹರಿಸಲ್ಪಟ್ಟಿತೆಂದು ಭಾವಿಸತಕ್ಕದ್ದು. “**ತಸ್ಯ ಚ ವಶೀಕರಣಾಂ ತಚ್ಛರಣಾಗತಿ ರೇವ**” ಭಗವಂತನನ್ನು ವಶಮಾಡಿಕೊಂಡು ತನಗೆ ಅಭಿಮತವಾದ ಫಲವನ್ನು ಪಡೆಯ ಬೇಕಾದರೆ, ಆತನಲ್ಲಿ ಶರಣಾಗತಿಯನ್ನು ಮಾಡತಕ್ಕದ್ದೆಂದು ಆನರೇ ಕಂಠೋಕ್ತವಾಗಿ ಶ್ರೀ ಭಾಷ್ಯದಲ್ಲಿ ಹೇಳಿರುವದರ ನಿದರ್ಶನರೂಪದಲ್ಲಿ, ಈಗ ಭಕ್ತಿಯೋಗ ನಿಷ್ಪನ್ನಿಗೆ ಆದರ ನಿಷ್ಪತ್ತಿರೂಪ ಭಗವತ್ಸಾಕ್ಷಾತ್ಕಾರಫಲಕ್ಕಾಗಿಯೂ ಶರಣಾಗತಿಯನ್ನು ಅನುಷ್ಠಿಸತಕ್ಕದ್ದೆಂದು ಹೇಳಿದರು ಎಂಬ ಭಾವವು. ಮುಂದೆ ೫೨ನೆಯ ಕಾರಿಕೆಯ ಮೂಲಕ ಈ ಅಭಿಪ್ರಾಯವನ್ನೇ ಸ್ಥಾಪಿಸಿ ಹೇಳುತ್ತಾರೆ. ಚರಮ ಶ್ಲೋಕಾಭಿಪ್ರಾಯವೇನೆಂದರೆ-ಯಾವಯಾವ ಮನೋರಥವನ್ನು ಮನಸ್ಸಿನಲ್ಲಿಟ್ಟು ಭಗವಂತನಲ್ಲಿ ಶರಣಾಗತಿಮಾಡಿದರೆ,ಅದರ ವಿಷಯದಲ್ಲಿ ನಿನಗೆ ಕೊರತೆಯು ಬೇಡ,ನಾನು ನಡೆಸಿಕೊಡುತ್ತೇನೆಂಬುದೇ ಇದರ ಮುಖ್ಯ ತಾತ್ಪರ್ಯವೆಂದು ಹೇಳುತ್ತಾರೆ. ಆದುದರಿಂದ ಆನಾದಿಕಾಲದಿಂದ ಬಂದ ಪಾಪರಾಶಿ ಇರುವದರಿಂದ ಉಪಾಸನವು ಹೇಗೆ ಕೈಗೂಡತ್ತದೆ ಎಂದು ಅರ್ಜುನನು ಶೋಕಿಸಲು, ಅಳಬೇಡಯ್ಯ ನನ್ನಲ್ಲಿ ಶರಣಾಗತಿಯನ್ನು ಮಾಡು, ನಾನು ಉಪಾಸನ ನಿಷ್ಪತ್ತಿಯನ್ನುಂಟುಮಾಡುವೆನು ಎಂದು ಅಜ್ಗವಾಗಿ ಶರಣಾಗತಿಯು ವಿಧಿಸಲ್ಪಟ್ಟಿತು. ಸರ್ವಫಲ ಪ್ರದವಾದುದು ಶರಣಾಗತಿಯು; ಆ ಕಾರಣವಿಂದ ಭಕ್ತಿಯೋಗಕ್ಕೆ ಅಜ್ಗವಾಗಿ ಉಪದೇಶಿಸಲ್ಪಟ್ಟಿತೆಂಬ ಭಾವವು. ಶ್ರೀ ಯತಿವರ್ಯರ ಭಾಷ್ಯದಲ್ಲಿ ಈ ಅಭಿಪ್ರಾಯವು ತೋರಿಬರುತ್ತದೋ? ಎಂದರೆ ತೋರಿಬರುತ್ತದೆ ಎಂದು ಎರಡು ಯೋಜನೆಯಿಂದಲೂ ಸೂಚಿಸಲ್ಪಟ್ಟು, ಅರ್ಥವಾಗಿ ತೋರಿಬರುವ ವಿಷಯಗಳನ್ನು ಉಪದೇಶಿಸುತ್ತಾರೆ. ನೀನು ಭಕ್ತಿಯೋಗದ ಪ್ರಕ್ರಿಯೆಯೆಲ್ಲಾ ಬಹಳ ಕಷ್ಟಸಾಧ್ಯವೇ ಎಂದು ಶೋಕಿಸಿದರೆ, ಆ ಭಕ್ತಿಯೋಗದಸ್ಥಳದಲ್ಲಿ ನಾನೇನಿಂತು ನಿನ್ನ ಇಷ್ಟಾರ್ಥವನ್ನು ಸಾಧಿಸಿಕೊಡುವೆನೆಂಬುದು ದ್ವಿತೀಯ.ಯೋಜನೆಯ ಭಾಷ್ಯದಿಂದ ವೇದ್ಯವೆಂದೂ,ಪ್ರಥಮಯೋಜನೆಯಿಂದ, ಕರ್ತೃತ್ವ ಮಮತಾಫಲಗಳ ಸಂಬಂಧವಿಲ್ಲದೆ, ಅನುಷ್ಠಿಸಲ್ಪಟ್ಟ ಅಂಗಪ್ರಪತ್ತಿಯೂ, ಪ್ರಕೃತವಾದ ಭಕ್ತಿಯೋಗನಿಷ್ಪತ್ತಿಯನ್ನುಂಟುಮಾಡಿದುದರಿಂದ ಸ್ವತಂತ್ರ ಪ್ರಪ

**ದುಷ್ಕರಙ್ಗಳಾನ ಭಕ್ತಿಯೋಗ ಪರ್ಯಂತೋಪಾಯಙ್ಗಳಿನುಡೈಯ ಸ್ಥಾನತ್ತಿಲೇ ನಿರ್ಕಿರ ಉಪಾಯ ವಿಶೇಷಮುಮ್, ಪ್ರಥಮ ಯೋಜನೈಯಿಲ್ ಬುದ್ಧಿ ವಿಶೇಷ ಪೂರ್ವಕಮಾನ ಪ್ರಪತ್ತ್ಯನುಷ್ಠಾನಮುಮ್, ಕೃತೋಪಾಯನುಡೈಯ ಸ್ವಯಂ ಪ್ರಯೋಜನಮಾನ ಕೈಙ್ಕರ್ಯಮುಮ್, ಅನುಸಂಧೇಯಮ್.**

---

ತ್ತಿಯು ಹಾಗೆಯೇ ಅಧಿಕಾರಿಗೆ ಬೇಕಾದ ಫಲವನ್ನುಂಟುಮಾಡತಕ್ಕದ್ದೆಂಬುದಕ್ಕೆ ಒಂದು ನಿದರ್ಶನವಾಯಿತು ಎಂಬ ಭಾವವು. **ಪ್ರಪತ್ತಿಯೂ,** ಸ್ವಯಂಪ್ರಯೋಜನವಾಗಿ ಅದೂ ಕೈಂಕರ್ಯರೂಪವಾಗಿ, ಇಙ್ಗ - ಈ ಚರಮಶ್ಲೋಕದಲ್ಲಿ, ಅಥವಾ ಈ ಚರಮ ಶ್ಲೋಕವೂ ಸ್ವತಂತ್ರಪ್ರಪತ್ತಿಗೂ ಅನ್ವಯಿಸುತ್ತದೆಂದು ನಾವು ಮೇಲೆ ತಿಳಿಸಿದ ಸಂದರ್ಭದಲ್ಲಿ, ಶ್ರೀ ಭಾಷ್ಯಕಾರರು ಅನುಗ್ರಹಿಸಿದ **ಭಾಷ್ಯದ** ದ್ವಿತೀಯ ಯೋಜನೆಯಲ್ಲಿ, **ದುಷ್ಕರಙ್ಗಳಾನ** - ಕರ್ಮಯೋಗಜ್ಞಾನಯೋಗ **ಭಕ್ತಿ ಯೋಗಾದಿ** ಪರಂಪರೆಗಳನ್ನು ಒಳಗೊಂಡು,ಬಹುಕಾಲಾನಂತರ ಸಾಧ್ಯವಾಗಿ, ಹೀಗೆ ತುಂಬಾ ಕಷ್ಟ ಸಾಧ್ಯಗಳಾದ, **ಭಕ್ತಿಯೋಗ ಪರ್ಯಂತವಾದ ಉಪಾಯದ, ಸ್ಥಾನದಲ್ಲಿ, ನಿರ್ಕಿರ ಉಪಾಯವಿಶೇಷಮುಮ್** - ಸರ್ವೇಶ್ವರನು ತಾನೇ ನಿಂತು ಉಪಾಯವಾಗಿ ಸಾಧಿಸಿಕೊಡುವ ವಿಶೇಷ ವಿಷಯವನ್ನೂ, **ಪ್ರಥಮಯೋಜನೆಯಲ್ಲಿ, ಬುದ್ಧಿವಿಶೇಷಪೂರ್ವಕಮಾನ**–ಅಹಂ ಮದ್ರಕ್ಷಣ ಭರೋ ಮದ್ರಕ್ಷಣ ಫಲಂ ತಥಾ। ನಮಮಶ್ರೀಪತೇರೇವೇತ್ಯಾತ್ಮಾನಂ ನಿಕ್ಷಿಪೇತ್ ಬುಧಃ, ನಾನು ಸ್ವಾಮಿಯ ವಸ್ತುವು, ವಸ್ತುವಿನ ಮಾಲೀಕನು ತನ್ನ ವಸ್ತುವನ್ನು ಕಾಪಾಡಿಕೊಳ್ಳುವ ಭಾರವು ಅವನದೇ, ನಾನು ಪರಾಧೀನನು, ರಕ್ಷಿಸಿಕೊಳ್ಳುವ ಯೋಗ್ಯತೆಯು ನನಗೆ ಎಲ್ಲಿಯದು? ಹಾಗೆ ಆತನು ತನ್ನ ವಸ್ತುವನ್ನು ಕಾಪಾಡಿಕೊಂಡರೆ, ಅದರಿಂದುಂಟಾಗುವ ಫಲವೂ ಅವನದೇ ಸರಿ, ನನಗಲ್ಲವು, ಇಂತಹ ವಿವೇಕ ಯುಕ್ತವಾದ ಬುದ್ಧಿ ವಿಶೇಷಪೂರ್ವಕವಾದ, (ಇದರಿಂದ ಪ್ರಪತ್ತಿಯು ಜ್ಞಾನರೂಪವಾದುದೆಂಬುದೂ ಸೂಚಿತವು.) **ಪ್ರಪತ್ತ್ಯನುಷ್ಠಾನಮುಮ್** - ಭರನ್ಯಾಸಾನುಷ್ಠಾನವೂ, **ಕೃತೋಪಾಯನುಡೈಯ** - ಹೀಗೆ ಶರಣಾಗತಿಯನ್ನು ಅನುಷ್ಠಿಸಿದವನ, **ಸ್ವಯಂಪ್ರಯೋಜನವಾದ ಕೈಙ್ಕರ್ಯವೂ ಸಹ, ಅನುಸಂಧೇಯವು.** ತಾನು ಈಗ ಅನುಷ್ಠಿಸಿದ ಶರಣಾಗತಿಯೂ ಸ್ವಯಂ ಪ್ರಯೋಜನವಾಗಿ ಕೈಙ್ಕರ್ಯರೂಪವು ; ಮತ್ತು ಅದರಲ್ಲಿ ಕರ್ತೃತ್ವ ಮಮತೆ ಫಲಾಭಿಸಂಧಿ ಯಾವುದೂ ಇಲ್ಲವೆಂಬ ಸಾತ್ವಿಕತ್ಯಾಗರೂಪ ಜ್ಞಾನವಿಶೇಷವೂ, ಈ ಎರಡೂ ಪ್ರಥಮ ಯೋಜನೆಯಿಂದಲೂ, ಭಕ್ತಿಯೋಗವನ್ನು ಅನುಷ್ಠಿಸಲು ತನಗೆ ಶಕ್ತಿ ಇಲ್ಲವೇ ಎಂದು ಅಶಕ್ತನಾಗಿ ಶೋಕವುಳ್ಳವನಿಗೆ ನೀನು ಅಳಬೇಡ, ಅದಕ್ಕೆ ಬದಲಾಗಿ, ಅದರ ಸ್ಥಳದಲ್ಲಿ, ನಾನೇ ನಿಂತು ನಿನ್ನ ಮನೋ

ರಥವನ್ನು ಪೂರ್ಣಮಾಡುವನೆಂಬ ಭರವಸೆಯೂ ಚರಮಶ್ಲೋಕದ ಎರಡನೆಯ ಯೋಜನೆಯಿಂದಲೂ, ವೇದ್ಯವೆಂದು ಉಪದೇಶಿಸಿರುತ್ತಾರೆ. ಇದರಿಂದ ಸಿದ್ಧೋಪಾಯನು ರಕ್ಷಿಸಲು ಸಿದ್ಧನಾಗಿದ್ದರೂ,ಸಾಧ್ಯೋಪಾಯವಾದ ಪ್ರಪತ್ತ್ಯನುಷ್ಠಾನವೂ ಆವಶ್ಯಕವೆಂದೂ ಹಿಂದೆ ಅನೇಕ ಸಂದರ್ಭಗಳಲ್ಲಿ ಹೇಳಲ್ಪಟ್ಟಿದುದೇ ಇಲ್ಲಿಯೂ ಅನುವಾದ ಮಾಡಲ್ಪಟ್ಟು ಆ ಪ್ರಪತ್ತ್ಯನುಷ್ಠಾನವು ಯದ್ರೂಪವೆಂದರೆ ಜ್ಞಾನರೂಪವಾಗಿ ಮೇಲಿನ ನ್ಯಾಸದಶಕಶ್ಲೋಕದ ಉಪಪಾದನರೀತ್ಯಾಬುದ್ಧಿವಿಶೇಷಪೂರ್ವಕವಾಪುದೆಂದು ಹೇಳಲ್ಪಟ್ಟಿತು. ಹೀಗೆ ಕರ್ಮಜ್ಞಾನಗಳ ಅಜ್ಗಾಜ್ಗಿಭಾವಗಳ ಸಮ್ಮೇಳನವು ಆವಶ್ಯಕವೆಂಬುದೂ ಇಲ್ಲಿಯೂ ಪ್ರದರ್ಶಿಸಲ್ಪಟ್ಟಿತು. "ಕೃತೋಪಾಯನು ಡೈಯಸ್ಸ್ವಯಂ ಪ್ರಯೋಜನಮಾನ ಕೈಙ್ಕರ್ಯಮುಮ್ ಅನುಸಂಧೇಯಮ್" ಎಂಬುದಕ್ಕೆ ಇನ್ನೊಂದು ವಿಧವಾಗಿ ಕೆಲವರು, ಈಗ ಪ್ರಸ್ತುತವಾದ ನಿತ್ಯನೈಮಿತ್ತಿಕಗಳು ಸ್ವಯಂ ಪ್ರಯೋಜನರೂಪ ಕೈಙ್ಕರ್ಯಗಳೆಂಬುದೂ ಅರ್ಥವಾಗಿ ಅನುಸಂಧೇಯವೆಂದು ಅರ್ಥಮಾಡಿರುತ್ತಾರೆ. ಹೇಗೆಂದರೆ ಸರ್ವಧರ್ಮಾನ್ ಪರಿತ್ಯಜ್ಯ ವೆಂಬುದಕ್ಕೆ ಪ್ರಥಮಯೋಜನೆಯಲ್ಲಿ, ತಾನು ಆವಶ್ಯಕವಾಗಿ ಅನುಷ್ಠಿಸಬೇಕಾದ ಭಕ್ತಿಯೋಗದಲ್ಲಿ ಕರ್ತೃತ್ವ ಫಲಾದಿ ಸಂಬಂಧಗಳನ್ನು ತೊರೆದು ಎಂದು ಅರ್ಥವನ್ನು, ಶ್ರೀ ಯತಿವರ್ಯರು ಹೇಳಿರುವದರಿಂದ, ಆವಶ್ಯಕವಾಗಿ ಮಾಡಬೇಕಾದ ನಿತ್ಯನೈಮಿತ್ತಿಕಾದಿಗಳಲ್ಲೂ ಕರ್ತೃತ್ವಫಲಾದಿಗಳನ್ನು ತೊರೆದು ಸ್ವಯಂ ಪ್ರಯೋಜನವಾಗಿ ಕೈಙ್ಕರ್ಯರೂಪದಲ್ಲಿ ಅವುಗಳು ಅನುಷ್ಠಿಸತಕ್ಕದ್ದೆಂಬುದೂ ಅರ್ಥವಾಗಿ ಸೂಚಿಸಲ್ಪಟ್ಟಿತೆಂದೂ ಅರ್ಥಮಾಡಬಹುದು. ಆದರೆ ಮುಂದಿನಕಾರಿಕೆಯಲ್ಲಿ ಸ್ವತಂತ್ರಶಿಷ್ಟ್ಯಾ, ಬೇರೆ ಸ್ವತಂತ್ರಶಾಸನದಿಂದ ಏರ್ಪಡುತ್ತದೆ ಎಂದು ಹೇಳಿ, ಆ ನಿತ್ಯನೈಮಿತ್ತಿಕಗಳ ಆವಶ್ಯಕತೆಯನ್ನು ಸ್ಥಾಪಿಸುವದರಿಂದ ಈ ಎರಡನೆಯ ಅರ್ಥಕ್ಕಿಂತ ಮೊದಲನೆಯ ಅರ್ಥವೇ ಉಚಿತವಾಗಿ ತೋರುತ್ತದೆ. ಈ ಚರಮಶ್ಲೋಕದ ಉಪಪಾದನೆಯಿಂದ ಎರಡು ವಿಷಯಗಳನ್ನು ಮುಖ್ಯವಾಗಿ ಗ್ರಹಿಸತಕ್ಕದ್ದಾಗಿರುತ್ತದೆ. (೧) ಈ ಶ್ಲೋಕದಲ್ಲಿ ಸರ್ವಧರ್ಮಗಳ ಸ್ವರೂಪತಃ ತ್ಯಾಗವು ಹೇಳಲ್ಪಡಲಿಲ್ಲವು, ಸಾತ್ವಿಕ ತ್ಯಾಗವೇ ಹೇಳಲ್ಪಟ್ಟಿರುವದು, ಆದುದರಿಂದ ನಿತ್ಯನೈಮಿತ್ತಿಕಗಳಾದ ಆಜ್ಞಾಕೈಙ್ಕರ್ಯಗಳ ತ್ಯಾಗವು ಹೇಳಲ್ಪಡಲಿಲ್ಲವು. (೨) ಈ ಶ್ಲೋಕವು ಗುರು ಲಘೂಪಾಯಗಳಾದ ಭಕ್ತಿಯೋಗ ಮತ್ತು ಭರನ್ಯಾಸಗಳಾದ ಎರಡು ಉಪಾಯಗಳಿಗೂ ಅನ್ವಯಿಸುತ್ತದೆ. ಅಂಗಶರಣಾಗತಿಯೂ, ಅಂಗಿ ಶರಣಾಗತಿಯೂ ಎರಡೂ ಹೇಳಲ್ಪಟ್ಟಿವೆ. ಗೀತೆಯಲ್ಲಿ ಈ ಎರಡು ಉಪಾಯಗಳೂ ಬೋಧಿತವೆಂಬುದಕ್ಕೆ ಈ ಚರಮಶ್ಲೋಕವೇ ದೃಷ್ಟಾಂತವಾಗಿದೆ ಎಂದು ತಿಳಿಯತಕ್ಕದ್ದು.

**ಸುದುಷ್ಕರೇಣ ಶೋಚೇದ್ಯೋ ಯೇನ ಯೇನೇಷ್ಟ ಹೇತುನಾ ।
ಸ ಸ ತಸ್ಯಾಹ ಮೇವೇತಿ ಚರಮಶ್ಲೋಕ ಸಙ್ಗ್ರಹಃ ॥೨೨॥**

---

ತಾವು ಈಗ ಇಷ್ಟುದೂರ ಸ್ಥಾಪಿಸಿದ ಅರ್ಥಗಳನ್ನು ಗರ್ಭೀಕರಿಸಿ ಕಾರಿಕೆಗಳನ್ನು ಅನುಗ್ರಹಿಸುತ್ತಾರೆ. ಕಿಂಚ – ಈಗ ಸಮರ್ಥಿಸಿ ಹೇಳಿದುದೇ ಸಾಕಾಗಿದ್ದರೂ, ಹೇಳಿದಭಿಪ್ರಾಯುಗಳು ಚನ್ನಾಗಿ ಮನಸ್ಸಿಗೆ ಗ್ರಾಹ್ಯಗಳಾಗುವದಕ್ಕೆ ಮುಖ್ಯವಾಗಿ ತಿಳಿಯತಕ್ಕ ಅಂಶಗಳು ಇಷ್ಟೇ ಎಂದು ತಿಳಿಸತಕ್ಕದ್ದು ಉಳದಿರುವದರಿಂದ, **ಕಿಂಚ** – ಇನ್ನೂ ಸ್ವಲ್ಪ ಹೇಳತಕ್ಕದ್ದಿದೆ ಎಂಬ ಅವತಾರಿಕೆಯು ಮೂಲಕವಾಗಿ ತಿಳಿಸುತ್ತಾರೆ. ಇದರಿಂದ ಮುಂದೆ ತಾವು ಅನುಗ್ರಹಿಸುವದು ತುಂಬಾ ಸಾರಭೂತಾರ್ಥವೆಂಬುದು ಏರ್ಪಡುತ್ತದೆ, **ಯಃ**-ಯಾವ ಉಪಾಯನಿಷ್ಠನು, **ಯೇನ ಯೇನೇಷ್ಟ ಹೇತುನಾ** - ಚತುರ್ವಿಧ ಪುರುಷಾರ್ಥಗಳಲ್ಲಿ ಯಾವುಯಾವುದು ಲಭಿಸಬೇಕೆಂಬದಾಗಿ, **ಸುದುಷ್ಕರೇಣ** - ಅವುಗಳಿಗಾಗಿ ವಿಧಿಸಿರುವ ಅನುಷ್ಠಾನಗಳು ಕಷ್ಟತರವಾಗಿ, ಅಯ್ಯೋ ನಾನು ಅಶಕ್ತನೇ ಎಂಬ ಆಕಿಂಚನ್ಯದಿಂದ, **ಶೋಚೇತ್** - ಶೋಕಿಸಿದುದಾದರೆ, **ತಸ್ಯ** - ಅಂತಹ ಶೋಕಿಸುವ ಅಧಿಕಾರಿಗೆ, **ಸಃ ಸಃ** – ಅಂತಹ ಇಷ್ಟಪ್ರಾಪ್ತಿಗೆ ಬೇಕಾದ ಉಪಾಯವು, **ಅಹಮೇವ** - ನಾನೇ ಸರಿ, ಆದುದರಿಂದ, **ಮಾಮೇಕಂ ಶರಣಂವ್ರಜ** ಎಂದು ಪರಮ ಹಿತೋಪದೇಶವನ್ನು ಶ್ರೀ ಕೃಷ್ಣನು ಅರ್ಜುನನಿಗೆ ಉಪದೇಶ ಮಾಡಿದರೆಂಬುದು, ಚರಮ ಶ್ಲೋಕದ ಸಙ್ಗ್ರಹಾರ್ಥವು. ಇದೇ ಪರಮ ರಹಸ್ಯವಾದ ಪ್ರಧಾನೋಪದೇಶವು ಎಂಬ ತಾತ್ಪರ್ಯವು.

ಚರಮಶ್ಲೋಕಾರ್ಥದಿಂದ ಈಗ ನೀವು ಉಪದೇಶಿಸುವ ಮುಖ್ಯಾರ್ಥವು ಹೇಗೆ ಏರ್ಪಟ್ಟಿತೆಂಬುದು ನ್ಯಾಯವಾದ ಪ್ರಶ್ನೆಯು. ಈ ಶಙ್ಕಾ ಹಿಂದೆಯೇ ಉಂಟಾಗಿ ಈ ಅಭಿಪ್ರಾಯವೇ ಸಾರಭೂತವಾದ ಉಪದೇಶವೆಂದು ಸ್ವಲ್ಪ ಹಿಂದೆಯೇ ಚನ್ನಾಗಿ ಉಪಪಾದಿಸಲ್ಪಟ್ಟಿದೆ. ಆದರೂ ಮುಖ್ಯ ವಿಷಯವಾದುದರಿಂದ ಇನ್ನೊಂದು ಸಲ ಸ್ಥಿರೀ ಕರಣಕ್ಕಾಗಿ ತಿಳಿಸುವೆವು; ಹೇಗೆಂದರೆ— **ಮಾಶುಚಃ** ಎಂದು ಶ್ರೀ ಕೃಷ್ಣನು ನಿಗಮನದಲ್ಲಿ ಹೇಳಬೇಕಾದರೆ ತನ್ನ ಶಿಷ್ಯನಾದ ಅರ್ಜುನನಿಗೆ ಶೋಕವಿತ್ತೆಂಬುದು ವ್ಯಕ್ತವು. ಶ್ರೀ ಕೃಷ್ಣನು ಪರಮ ಕೃಪಯಾ ಭಕ್ತಿಯೋಗ ಪ್ರಕ್ರಿಯೆಯನ್ನೆಲ್ಲಾ ವಿಶದವಾಗಿ ತಿಳಿಸಿದುದನ್ನು ಕೇಳಿ ಸಂತುಷ್ಟನಾದನು. ಆ ಭಕ್ತಿಯೋಗವು ಕೈಗೂಡಬೇಕಾದರೆ ಅನೇಕ ಜನ್ಮಗಳಲ್ಲೂ ಮಾಡಿದ ಪಾಪಗಳ ನಿವೃತ್ತಿಗಾಗಿ ಆವವುಗಳಿಗೆ ವಿಧಿಸಿರುವ ಪ್ರಾಯಶ್ಚಿತ್ತಗಳನ್ನೆಲ್ಲಾ ಅನುಷ್ಠಿಸಲು ಸಾಧ್ಯವೇ ಎಂದು ಸುದುಷ್ಕರೇಣ ಶೋಕಿಸುತ್ತಾನೆ. ಇದು ಹೇಗೆ

ಭಾವಾಭಾವೌ ನಧರ್ಮಾಣಾಂ ಪ್ರಪತ್ತೇ ರಙ್ಗಮಿಷ್ಯತೇ।
ಸ್ವತಂತ್ರಶಿಷ್ಟ್ಯಶಕ್ಯೇಹಾ ಶೇಷಾ ಭಾವೋಧಿಕಾರಗಃ ॥೫೩॥

ವ್ಯಕ್ತವು, ಎಂದು ಕೇಳಿದರೆ "ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ" "ನಿನ್ನನ್ನು ಸಮಸ್ತ ಪಾಪಗಳಿಂದಲೂ ಬಿಡಿಸುವೆನು ಅಳಬೇಡ" ವೆಂದು ಶ್ರೀ ಕೃಷ್ಣನು ಹೇಳಬೇಕಾದರೆ, ತನ್ನ ಶಿಷ್ಯನಾದ ಅರ್ಜುನನಿಗೆ ಭಕ್ತಿಯೋಗ ಕೈಗೂಡಬೇಕಾದರೆ ಸುಕೃತವಿರಬೇಕು, ಹಾಗಲ್ಲದೆ ಅನಾದಿಯಾಗಿ ಬಂದ ಜನ್ಮ ಸಂತತಿಗಳಲ್ಲೂ ಪಾಪಸಂಚಯವು ಬೆಳೆದು ಹೋಗಿದೆ ಎಂಬುದು ಅರ್ಜುನನಿಗೆ ತಿಳಿಯುವದು. ಅದೆಲ್ಲಾ ಪರಿಹಾರವಾಗುವಬಗೆ ಹೇಗೆ ಎಂದು ಶೋಕಿಸುತ್ತಿದ್ದನೆಂಬುದು ಇದರಿಂದ ವ್ಯಕ್ತವು. ಅದರ ಅಶಕ್ತತೆಯಿಂದ ಶೋಕಿಸಬೇಡ, ಅವುಗಳ ಸ್ಥಾನದಲ್ಲಿ ನಾನು ನಿಂತು ನಿನ್ನ ಎಲ್ಲಾ ಪಾಪಗಳಿಂದಲೂ ಬಿಡಿಸುವೆನು ಅಳಬೇಡ ಎಂಬುದು ಯಾವಾಗ ಶ್ಲೋಕಾರ್ಥವೆಂಬುದು ವ್ಯಕ್ತವೋ, ಆಗ ಈ ಕರ್ಮಯೋಗಾದಿಗಳಿಂದ ಕೂಡಿದ ಭಕ್ತಿಯೋಗವನ್ನನುಷ್ಠಿಸಿ ಈ ಪರಮ ನಿಶ್ರೇಯಸ್ಸನ್ನು ಸಂಪಾದಿಸಲು ನಾನು ಅಶಕ್ತನೇ ಎಂಬ ಆಕಿಂಚನ್ಯದಿಂದ ಶೋಕಿಸಿದರೆ, "ಮಾಮೇಕಂ ಶರಣಂವ್ರಜ" ನಾನಲ್ಲದೆ ಇನ್ನು ಯಾರೂ ಸಾಧಿಸಿ ಕೊಡಲಾರರೆಂಬ ದೃಢ ನಂಬಿಕೆಯಿಂದ ನನ್ನನ್ನೇ ಶರಣ ಹೊಂದಿದರೆ ಆ ಕರ್ಮಯೋಗಾದಿ ಉಪಾಯಾನ್ತರಸ್ಥಾನದಲ್ಲಿ ನಾನೇ ನಿಂತು ಆ ಶ್ರೇಯಸ್ಸಿಗೆ ಪ್ರತಿ ಬಂಧಕಗಳಾಗಿರುವ ಪಾಪಗಳಿಂದ ಬಿಡುಗಡೆಯನ್ನು ಹೊಂದಿಸಿ, ನಿನ್ನ ಅಭೀಷ್ಟವನ್ನು ದಯಪಾಲಿಸುವೆನೆಂಬ ಅರ್ಥವೂ ಕೂಡ ಸುವ್ಯಕ್ತವು. ಈಗ ಸಪರಿಕರ ಭಕ್ತಿಯೋಗವು ಕಷ್ಟವೇ ಎಂದು ಶೋಕಿಸಿದರೆ, ಅದರ ಸ್ಥಾನದಲ್ಲಿ ತಾನೇ ನಿಂತು ಅದರ ಫಲವನ್ನು ಸಾಧಿಸಿಕೊಡುವೆನು, ಎಂಬುದು ಅರ್ಥವಾದ ನಂತರ, ಯಾವ ಯಾವುದಕ್ಕಾಗಿ ಅಶಕ್ತತೆಯಿಂದ ಶೋಕಿಸಿದರೂ, ಅದರ ಸ್ಥಾನದಲ್ಲಿ ತಾನೇ ನಿಂತು ಅದರ ಫಲವನ್ನು ಶರಣಾಗತನಿಗೆ ಕೊಡುವೆನೆಂಬುದು ಸಿದ್ಧವು.

"ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂವ್ರಜ" ಎಂದು ವ್ಯಕ್ತವಾಗಿ ಸರ್ವವಿಧ ಧರ್ಮಗಳ ಸ್ವರೂಪತ್ಯಾಗವೇ ಶರಣವನ್ನು ಹೊಂದಲು ಅಙ್ಗವಾಗಿ ಹೇಳಿದೆಯಲ್ಲವೇ? ಈಗ ಆರ್ತಪ್ರಪತ್ತಿ ಮಾಡಿದವನಿಗೆ ಆ ಕಾಲದಲ್ಲೇ ನಿತ್ಯನೈಮಿತ್ತಿಕಗಳನ್ನನುಷ್ಠಿಸಬೇಕೆಂಬ ನಿರ್ಬಂಧ ಹೇಗೆ ಇಲ್ಲವೆಂದು ಹೇಳುವಿರೋ, ಹಾಗೆಯೇ ದೃಪ್ತ ಪ್ರಪನ್ನನಿಗೂ ಆವಶ್ಯಕವಿಲ್ಲವೆಂದು ಏಕೆ ಹೇಳಕೂಡದು? ಎಂಬ ಶಙ್ಕೆಗೆ ಸಮಾಧಾನವನ್ನು ಹೇಳುತ್ತಾರೆ,— ಧರ್ಮಾಣಾಂ - ಧರ್ಮಗಳ, ಇಲ್ಲಿ ಪ್ರಕೃತವಾದ ನಿತ್ಯನೈಮಿತ್ತಿಕಧರ್ಮಗಳ,

**ಭಾವಾಭಾವೌ** - ಆವಶ್ಯಕತೆಯನ್ನಾಗಲಿ ಅನಾವಶ್ಯಕತೆಯನ್ನಾಗಲಿ, **ನ ಪ್ರಪತ್ತೇಃ ರಙ್ಗಮಿಷ್ಯತೇ** - ಈ ಸ್ವತಂತ್ರ ಪ್ರಪತ್ತಿಯು ಅಙ್ಗವನ್ನಾಗಿ ಅಪೇಕ್ಷಿಸುವದಿಲ್ಲವು. ಹಾಗೆ ಯಾವ ಧರ್ಮಗಳ ಅನುಷ್ಠಾನವೂ ಪ್ರಪತ್ತಿಗೆ ಅಙ್ಗವಾಗದಿದ್ದರೆ, ನಿತ್ಯ ನೈಮಿತ್ತಿಕಗಳ ಆವಶ್ಯಕತೆ ಇಲ್ಲವೆಂದೇ ಆಗಲಿಲ್ಲವೇ ? ಎಂದರೆ ನಿತ್ಯನೈಮಿತ್ತಿಕಗಳ ಆವಶ್ಯಕತೆಯಾಗಲಿ ಅಥವಾ ಅನಾವಶ್ಯಕತೆಯಾಗಲಿ ಈ **ಸರ್ವಧರ್ಮಾನ್ ಪರಿತ್ಯಜ್ಯ** ವೆಂಬುದರಿಂದ ಹೇಳಲ್ಪಡಲಿಲ್ಲವೆಂದು ಹೇಳಿ, ಅವುಗಳ ಆವಶ್ಯಕತೆಯಾದರೋ ಸ್ವತಂತ್ರವಾಗಿ ಬೇರೇ ವಿಧಿಗಳಾದ **"ಅಹರಹಸ್ಸಂಧ್ಯಾಮುಪಾಸೀತ"** ಇತ್ಯಾದಿಗಳಿಂದ ಏರ್ಪಡುತ್ತದೆಂದು ಹೇಳುತ್ತಾರೆ,—**ಸ್ವತಂತ್ರ ಶಿಷ್ಟ್ಯಾ** - ಈ ಚರಮ ಶ್ಲೋಕದಲ್ಲಿ ಹೇಳುವ ಪ್ರಪತ್ತಿಗೆ ಸಂಬಂಧಿಸದೇ ಇರುವ ಸ್ವತಂತ್ರವಾದ ಆಜ್ಞೆಯಿಂದ, ಎಂದರೆ **"ಸಂಧ್ಯಾಹೀನೋಽಶುಚಿರ್ನಿತ್ಯಂ ಅನರ್ಹಸ್ಸರ್ವಕರ್ಮಸು"** **"ಅಹರಹಸ್ಸಂಧ್ಯಾ ಮುಪಾಸೀತ"** ಹಾಗೆಯೇ **"ನಿಯತಂ ಕುರುಕರ್ಮತ್ವಂ"** (ಗೀ, ೩.೮) ಮತ್ತು **"ಸ್ವೇಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇನರಃ"** ಇತ್ಯಾದಿ ಬೇರೆ ವಿಧಿಗಳಿಂದ, ಅಥವಾ **ಸ್ವತಂತ್ರಶಿಷ್ಟ್ಯಾ**-ಸ್ವತಂತ್ರನಾದ ಶ್ರಿಯಃಪತಿಯ, **ಶಿಷ್ಟ್ಯಾ**-ಬೇರೆ ಆಜ್ಞೆಯಿಂದ ಎಂದಾಗಲಿ ಅರ್ಥ ಹೇಳಬಹುದು. ಇದು ಹಿಂದೆಯೇ ವ್ಯತಿರೇಕ ದೃಷ್ಟಾಂತದಿಂದ ಉಪಪಾದಿಸಲ್ಪಟ್ಟಿತು. ನಿತ್ಯ ನೈಮಿತ್ತಿಕಗಳು ಉಪಾಸನಕ್ಕೇನೋ ಸಹಕಾರಿಯಾದಹಾಗೆ, ಪ್ರಪತ್ತಿಗೆ ಸಹಕಾರಿಯಲ್ಲವೆಂದು ಹೇಳಲ್ಪಟ್ಟಿತು. ಪರಿತ್ಯಜ್ಯ ಎಂಬುದು ವಿಧಿಯು ; ಈ ವರ್ಣಾಶ್ರಮಧರ್ಮರೂಪವಾದ ನಿತ್ಯನೈಮಿತ್ತಿಕ ಕರ್ಮಾನುಷ್ಠಾನಕ್ಕೆ ಬೇರೇ ವಿಧಿಯೇ ಇರುವಾಗ ಅದರ ತ್ಯಾಗವು ವಿಧಿಸಲ್ಪಟ್ಟಿತೆಂದು ಹೇಳುವದು ಸರಿಯಲ್ಲವೆಂಬ ಭಾವವು. **ಶಕ್ಯೇಹಾ** - ಇಂತಹ ವರ್ಣಾಶ್ರಮಧರ್ಮಗಳಾಗಿ ಶಕ್ಯವಾದುವುಗಳಲ್ಲಿ ಇಷ್ಟವೂ ಅನುಷ್ಠಾನವೂ ಸಹ ಉಂಟಾಗುತ್ತದೆ. **ಶೇಷಾ ಭಾವಃ** - ಮಿಕ್ಕವುಗಳು ಅಶಕ್ಯಗಳಾಗಿ ಇಲ್ಲದಿರೋಣವೂ ಎಂದರೆ ಕರ್ಮಯೋಗಭಕ್ತಿಯೋಗಗಳನ್ನು ಅನುಷ್ಠಿಸಲು ಶಕ್ಯವಿಲ್ಲದಿರೋಣವೇ, **ಅಧಿಕಾರಗಃ** - ಅಧಿಕಾರವನ್ನು ಹೊಂದಿದವು. ಎಂದರೆ ಆಕಿಂಚನ್ಯರೂಪವಾದ ಪ್ರಪತ್ತ್ಯನುಷ್ಠಾನಕ್ಕೆ ಅಧಿಕಾರವನ್ನುಂಟುಮಾಡುತ್ತದೆಂಬ ಭಾವವು. ಶ್ರೀ ಯಾಮುನೇಯರೂ ಈ ಅಭಿಪ್ರಾಯವನ್ನೇ **"ನ ಧರ್ಮನಿಷ್ಠೋಽಸ್ಮಿ ನ ಚಾತ್ಮವೇದಿ ನ ಭಕ್ತಿಮಾಂಸ್ತ್ವಚ್ಚರಣಾರವಿಂದೇ । ಅಕಿಂಚನೋಽನನ್ಯಗತಿಶ್ಶರಣ್ಯ ತ್ವತ್ಪಾದಮೂಲಂ ಶರಣಂ ಪ್ರಪದ್ಯೇ"** (ಆಳ. ೨೨) ಎಂಬ ಶ್ಲೋಕದಲ್ಲಿ ಉಪಪಾದಿಸಿರುತ್ತಾರೆ. ಧರ್ಮನಿಷ್ಠೆ ಎಂದರೆ ಕರ್ಮಯೋಗವನ್ನನುಷ್ಠಿಸಲು ನನಗೆ ಶಕ್ತಿಯಿಲ್ಲವು, ಒಂದುವೇಳೆ ಅದಕ್ಕೆ ಶಕ್ತಿಯನ್ನು ಸಂಪಾದಿಸಿದರೂ, ಜ್ಞಾನಯೋಗಕ್ಕೂ ಶಕ್ತಿಯಿಲ್ಲವು, ಒಂದುವೇಳೆ ಜ್ಞಾನಯೋಗ ಶಕ್ತಿ

ಯನ್ನು ಹೊಂದಿದರೂ, ಭಕ್ತಿಯೋಗಕ್ಕಂತೂ ನಿರಂತರ ತೈಲಾಧಾರಾವದವಚ್ಛಿನ್ನ ವಾದ ಸ್ಮೃತಿ ಸಂತತಿ ಇರುವಹಾಗೆ ನಿನ್ನ ಸಾಕ್ಷಾತ್ಕಾರವನ್ನು ಸಂಪಾದಿಸಲು ಸುತರಾಂ ಅಶಕ್ತನು. ಆದುದರಿಂದ ಸರ್ವಲೋಕ ಶರಣ್ಯನೇ ನಾನು ಭಕ್ತ್ಯುಪಾಯಕ್ಕೆ ಅಶಕ್ತನಾಗಿ ಆಕಿಂಚನ್ಯವನ್ನೂ ಅನನ್ಯ ಗತಿತ್ವವನ್ನೂ ಹೊಂದಿ, ನಿನ್ನ ಪಾದಮೂಲ ದಲ್ಲಿ ಶರಣಾಗತಿಯನ್ನು ಅನುಷ್ಠಿಸಿರುತ್ತೇನೆ, ರಕ್ಷಿಸು ಎಂಬುದು ಶ್ಲೋಕಾರ್ಥವು. ಈ ಶ್ಲೋಕದ ಪೂರ್ವಾರ್ಧದಿಂದ ಅಶಕ್ತ್ಯತೆಯನ್ನುಪಪಾದಿಸಿ, ಆಕಾರಣದಿಂ ದಲೇ ಪ್ರಪತ್ತಿಯಲ್ಲಿ ತನಗೆ ಅಧಿಕಾರ ಉಂಟೆಂದು ತೋರಿಸಿರುವರಾದುದರಿಂದ, ಶೇಷಾಭಾವೋಽಧಿಕಾರಗಃ ಎಂದು ಹೇಳಲ್ಪಟ್ಟಿತು. ಪ್ರಾಸಜ್ಗಿಕವಾಗಿ ಈ "ನಧರ್ಮನಿಷ್ಠೋಽಸ್ಮಿ" ಎಂಬ ಶ್ಲೋಕದಲ್ಲಿ ಕೆಲವರು ಆಕ್ಷೇಪಿಸುವದನ್ನು ಉಪ ಪಾದಿಸಿ ಹೇಳುವೆವು, ಏನೆಂದರೆ ಪೂರ್ವಾರ್ಧದಲ್ಲಿ, ಕರ್ಮಯೋಗ,ಜ್ಞಾನಯೋಗ, ಭಕ್ತಿಯೋಗ, ಮೂರೂ ಹೇಳಲ್ಪಟ್ಟಿರುವದರಿಂದ ಮೂರೂ ಉಪಾಯವೇ ? ಹಾಗ ಲ್ಲದೆ,ಕರ್ಮಯೋಗ ಜ್ಞಾನಯೋಗಗಳು ಅಂಗಗಳೂ, ಭಕ್ತಿಯೋಗವು ಅಂಗಿಯಾ ದರೆ, ಮೊದಲನೆಯ ಮೆಟ್ಟಲು ಹತ್ತಲು ನನಗೆ ಶಕ್ತಿ ಇಲ್ಲವೇ ಎಂದು ಹೇಳಿದರೆ ಸಾಕಾಗಿತ್ತಲ್ಲವೇ ? ಮಿಕ್ಕ ಎರಡುಗಳಾದ ಜ್ಞಾನಯೋಗಕ್ಕೂ ಶಕ್ತಿ ಇಲ್ಲವು, ಭಕ್ತಿ ಯೋಗಕ್ಕೂ ನನಗೆ ಯೋಗ್ಯತೆಯಿಲ್ಲವು ಎಂದು ಏಕೆ ಹೇಳಿದರು ? ಎಂಬಾಕ್ಷೇಪ ಗಳಿಗೆ ಉತ್ತರವೇನೆಂದರೆ, ಕರ್ಮಯೋಗ ಜ್ಞಾನಗಳು ಎರಡೂ ಅಂಗಗಳು; ಭಕ್ತಿ ಯೋಗವೇ ಅಂಗಿಯಾಗಿ ಸಾಕ್ಷಾದುಪಾಯವು. ಇಂತಹ ಅಂಗಾಂಗಿಗಳ ಸಮು ಚ್ಚಯವಿರುವ ಅನುಷ್ಠಾನವು ಕಷ್ಟವೇ ಎಂಬ ಶೋಕದಿಂದುಂಟಾದ ಕಾರ್ಪಣ್ಯ ವನ್ನುಪದೇಶಿಸುವದಕ್ಕಾಗಿ ಮೂರೂ ಹೇಳಲ್ಪಟ್ಟವೆಂಬ ಭಾವವು.

ಹೀಗೆ ಮೂರನ್ನೂ ಹೇಳುವದಕ್ಕೆ ಇನ್ನೊಂದು ಕಾರಣವನ್ನು ಕೆಲವರು ಹೇಳುವರೇನೆಂದರೆ.—ಹಿಂದಿನ ಜನ್ಮದಲ್ಲಿ ಕರ್ಮಯೋಗವು ನಡೆದಿದ್ದರೆ ಅದನ್ನು ತ್ಯಜಿಸಿ,ಜ್ಞಾನಯೋಗವನ್ನಾದರೂ ಅನುಷ್ಠಿಸು ಎಂದರೆ ಅದಕ್ಕೂ ನನಗೆ ಯೋಗ್ಯತೆ ಯಿಲ್ಲವೆಂದು ನಚಾತ್ಮವೇದಿ ಎಂದು ಹೇಳಿಕೊಂಡರೆಂದೂ,ಹಾಗೆಯೇ ಪೂರ್ವಜನ್ಮ ದಲ್ಲಿ ಕರ್ಮಯೋಗ ಜ್ಞಾನಯೋಗಗಳು ನಡೆದಿದ್ದಪಕ್ಷದಲ್ಲಿ ಅವೆರಡನ್ನೂ ತ್ಯಜಿಸಿ ಭಕ್ತಿಯೋಗವನ್ನಾದರೂ ನಡೆಸು ಎಂದರೆ ಆದಕ್ಕೂ ನನಗೆ ಯೋಗ್ಯತೆ ಇಲ್ಲ ವೆಂದೂ, ತಿಳಿಸುವದಕ್ಕಾಗಿ ಮೂರನ್ನೂ ಹೇಳಿದರೆಂಬ ಕಾರಣವನ್ನು ಕೆಲವರು ತಿಳಿಸುವರು.—ಇದು ಶಾಸ್ತ್ರವಿರುದ್ಧವಾದ ವಾದವು. ಏಕೆಂದರೆ ಅನುಷ್ಠಾನವು ಫಲಕಾರಿಯಾಗಲು ಅಂಗಾಂಗಿಗಳ ಸಾಹಚರ್ಯವು ಆವಶ್ಯಕವು. ಯಜ್ಞದ ಅನೇಕ ಅಂಗರೂಪವಿಧಾನಗಳು ನಡೆದು ಅಂಗಿಯಾದ ಪಶುವಿನ ವಪೆಯ ಹೋಮವು ನಡೆಯುವದಕ್ಕೆ ಪೂರ್ವಭಾವಿಯಾಗಿ ವಿಘ್ನವು ಪ್ರಾಪ್ತವಾದರೆ, ಆ ಅಧಿಕಾ

ರಿಗೆ ಯಜ್ಞವು ಸಾಂಗವಾಗಿ ನಡೆಯಲಿಲ್ಲವೇ ಎಂಬ ಪರಿತಾಪದಿಂದ ಯಜ್ಞವನ್ನು ಪೂರೈಸಬೇಕೆಂಬ ಅಪೇಕ್ಷೆಯುಂಟಾದರೆ, ವಿಘ್ನದಿಂದ ಬಿಟ್ಟುಹೋದುದನ್ನು ಮಾತ್ರ ಅನುಷ್ಠಿಸಬಹುದೋ? ಸಂಧ್ಯಾವಂದನದ ಮಧ್ಯದಲ್ಲಿ ವಿಘ್ನ ಬಂದು ನಿಂತುಹೋದರೂ, ಅವುಗಳನ್ನು ಪುನಃ ಪ್ರಾರಂಭಿಸಿ ನಡೆಸಬೇಕೆಂಬ ವಿಧಿ ಇರುತ್ತದೆ. ಆದುದರಿಂದ ಪೂರ್ವಜನ್ಮದ ಅನುಷ್ಠಾನವು ಈಗಿನ ಪ್ರವೃತ್ತಿಗೆ ಅಂಗವಾಗಲಾರದು- ಅಂತಹ ಸುಕೃತವಿದ್ದರೆ ಅದು ವ್ಯರ್ಥವಾಗುವದಿಲ್ಲವು. ಆದರ ಆ ಸಂಸ್ಕಾರಬಲದಿಂದ ಕರ್ಮಯೋಗಾದಿ ಅಂಗಗಳು ಬಹು ಶೀಘ್ರ ಉಪಕಾರಕಗಳಾಗುತ್ತವೆ ಎಂದು ಹೇಳುವದೀಗ ಸಮಂಜಸವಾದ ವಾದವು. ಆದುದರಿಂದ ಈಗಿನ ಭಕ್ತಿಯೋಗಾನುಷ್ಠಾನಕ್ಕೂ ಕರ್ಮಯೋಗದ ಸಹಾಯವು ಅಪೇಕ್ಷಿತವು. ಆ ಕರ್ಮಯೋಗಕ್ಕೇ ಸೇರಿದ ನಿತ್ಯ ನೈಮಿತ್ತಿಕಗಳ ಅನುಷ್ಠಾನವು ದೇಹಾವಸಾನದವರೆಗೂ ಉಪಾಸನೆಗೆ ಅಂಗರೂಪದಲ್ಲಿ ಆವಶ್ಯಕವೆಂಬುದು ಬ್ರಹ್ಮಸೂತ್ರದಲ್ಲೇ ಉಪಪಾದಿತವು. ಈ ಮೇಲಿನ ಅಶಾಸ್ತ್ರೀಯವಾದವನ್ನು ಮನಸ್ಸಿನಲ್ಲಿಟ್ಟು ಶ್ರೀ ವಿದುರರು ಇಂತಹ ವಿಶೇಷಾಧಿಕಾರಿಯಾದುದರಿಂದ ಕರ್ಮಯೋಗ ಜ್ಞಾನಯೋಗಗಳ ಅಪೇಕ್ಷೆ ಇಲ್ಲದೇನೇ ಶೂದ್ರರಾದರೂ ಉಪಾಸನವನ್ನು ಮಾಡಿದರೆಂದು ವಾದಿಸುವರು. ಈ ವಾದವು ಈ ಕೆಳಗಿನ ಕಾರಣಗಳಿಂದ ಅನಾದರಣೀಯವು.

೧. ಶ್ರೀ ವಿದುರರು ಉಪಾಸನೆಯನ್ನು ಮಾಡಿದರೆಂಬುದಕ್ಕೆ ಶ್ರೀಮನ್ಮಹಾಭಾರತ ಭಾಗವತಾದಿ ಪುರಾಣಗಳಲ್ಲೆಲ್ಲೂ ಪ್ರಮಾಣವಿರುವದಿಲ್ಲ. "ಧರ್ಮವ್ಯಾಧಾದಯಃ" ಎಂಬ ವಿಷ್ಣುಧರ್ಮಶ್ಲೋಕವು ಪ್ರಮಾಣವೆನ್ನುವರು. ಇದಕ್ಕೆ ಅವರುಗಳ ಅರ್ಥವು ಅಪಾರ್ಥವೆಂದು ಪ್ರಾಪ್ತಸ್ಥಳದಲ್ಲಿ ತೋರಿಸಿರುತ್ತೇವೆ.

೨. ಇವರು ವಿಶೇಷಾಧಿಕಾರಿಯು ಇವರು ಸಾಮಾನ್ಯಾಧಿಕಾರಿ ಎಂಬ ವಿವೇಚನೆಯುಂಟಾಗುವದು ಕಷ್ಟವಾಗಿ, ಸಾಮಾನ್ಯಾಧಿಕಾರಿಯು ಶೂದ್ರನಾಗಿದ್ದರೂ ಶಾಸ್ತ್ರೋಲ್ಲಂಘನೆಯನ್ನು ಮಾಡಿ ಉಪಾಸನೆಯನ್ನು ಅನುಷ್ಠಿಸಲು ಕಾರಣವಾಗುತ್ತದೆ.

೩. ಅನ್ಯಾಯವಾಗಿ ಶಾಸ್ತ್ರದಲ್ಲಿ ವಿಶೇಷಮಮತೆ ಇರುವ ಪರಮ ಭಾಗವತೋತ್ತಮರಾದ ವಿದುರರನ್ನು ತಾವೇ ಸ್ವತಂತ್ರಿಸಿ ಶಾಸ್ತ್ರೋಲ್ಲಂಘನೆಯನ್ನು ಮಾಡಿದರೆಂಬ ಅಪವಾದಕ್ಕೆ ಗುರಿಮಾಡಿದಂತಾಗುತ್ತದೆ. ಧೃತರಾಷ್ಟ್ರನು ಅವರನ್ನು ಕುರಿತು ನಿನಗೆ ಬ್ರಹ್ಮವಿದ್ಯವೂ ವೇದ್ಯವಾದಂತೆ ತೋರುತ್ತದೆ, ದಯವಿಟ್ಟು ತಿಳಿಸಿ ಎಂದು ಬೇಡಲು. ಅದಕ್ಕೆ ಶ್ರೀ ವಿದುರರು ಹೇಳುತ್ತಾರೇನೆಂದರೆ. "ಶೂದ್ರಯೋನಾವಹಂ ಜಾತೋ ನಾತೋಽನ್ಯದ್ವಕ್ತು ಮುತ್ಸಹೇ" ಎಂದರೆ ಶೂದ್ರ

ಯೋನಿಯಲ್ಲಿ ಜನಿಸಿದವನಾದಪ್ರಯುಕ್ತ ನಾನು ಬ್ರಹ್ಮವಿದ್ಯೆಯನ್ನುಪದೇಶಿಸಲು ಇಷ್ಟವಿಲ್ಲವೆಂದು ಉತ್ತರಹೇಳಿ, ಸನತ್ಸುಜಾತರ ಮೂಲಕ ಉಪದೇಶವನ್ನು ಹೊಂದುವಹಾಗೆ ಮಾಡಿದರು. ಇಲ್ಲಿ ಬ್ರಹ್ಮವಿದ್ಯೆಯೆಂದು ಬಾಯಲ್ಲಿ ಹೇಳಲು ಕೂಡ ತಾನು ಅನರ್ಹನೆಂದು ತೋರಿಸುವದಕ್ಕಾಗಿ, ಅನ್ಯತ್ ಎಂಬ ಪ್ರಯೋಗವು. ನೀತಿಯನ್ನೂ ಧರ್ಮವನ್ನೂ ಹೇಳಿದೆನು; ಇನ್ನೊಂದನ್ನು ಉಪದೇಶಿಸು ಎಂದು ಕೇಳಿದರಲ್ಲಾ ಅದನ್ನು ಹೇಳುವದು ಶಾಸ್ತ್ರವಿರುದ್ಧವಾಗಿ ಅದಕ್ಕೆ ಯೋಗ್ಯನಲ್ಲವು ಎಂದು ಉತ್ತರಕೊಟ್ಟ ಮಹನೀಯರು, ತಾವೇ ಶಾಸ್ತ್ರವಿರುದ್ಧವಾಗಿ ಶೂದ್ರನಿಗೆ ಅಧಿಕಾರವಿಲ್ಲದ ಉಪಾಸನೆಯಾನ್ನು ಅನುಷ್ಠಿಸುವರೋ? ಎಂದಿಗೂ ಇಲ್ಲವು.

೪. ಇದೂ ಅಲ್ಲದೆ ಹೀಗೆ ಭಾವಿಸಿದರೆ ಸರ್ವೇಶ್ವರನಲ್ಲಿ ಪಕ್ಷಪಾತವನ್ನು ಆರೋಪಿಸಬೇಕಾಗುತ್ತದೆ. ಏಕೆಂದರೆ ಶಂಬುಕನೆಂಬ ಶೂದ್ರನು ಉಪಾಸನೆಯನ್ನು ಮಾಡಿದನೆಂದು ಶ್ರೀ ರಾಮಾವತಾರಿಯಾಗಿ ಆತನ ಶಿರಚ್ಛೇದನವನ್ನೂ, ಶ್ರೀ ಕೃಷ್ಣಾವತಾರಿಯಾಗಿ ಶ್ರೀ ವಿದುರರು ಉಪಾಸನೆಯನ್ನು ಮಾಡಿದರೆ, ಆತನ ಮನೆಯಲ್ಲಿ ಊಟಮಾಡಿ ವಿಶೇಷಾನುಗ್ರಹವನ್ನೂ, ಭಗವಂತನು ಮಾಡಿದನೆಂಬ ವೈಷಮ್ಯಾದಿ ದೋಷಗಳಿಗೆ ಗುರಿಯಾದರೆಂದು ಹೇಳಬೇಕಾಗುತ್ತದೆ. ಹೀಗೆ ಅನೇಕ ಕಾರಣಗಳಿಂದ ಈ ವಾದಗಳೆಲ್ಲಾ ನಿರಸ್ತವು. ಆದುದರಿಂದ ಮೇಲೆ ನಾವು ತಿಳಿಸಿರುವ ಕಾರಣವೇ ನಿರ್ವಿವಾದುದೆಂದು ಭಾವಿಸತಕ್ಕದ್ದು. ಈ ಕಾರಣಗಳಿಂದ ಶೇಷಾಭಾವೋಽಧಿಕಾರಿಗಃ ಎಂಬುದಕ್ಕೆ ಅರ್ಥ ಮಾಡುವಾಗ ಕರ್ಮಯೋಗಾದಿ ಪರಿಕರ ಭಕ್ತಿಯೋಗದ ಅಭಾವವೆಂದೇ ಅರ್ಥ ಮಾಡತಕ್ಕದ್ದೇ ನ್ಯಾಯವೇ ವಿನಾ ಬರೀ ಭಕ್ತಿಯೋಗಮಾತ್ರವೇ ಹೇಳಲ್ಪಟ್ಟಿತೆಂದು ಅರ್ಥಮಾಡುವದುನ್ಯಾಯವಲ್ಲವು.

ಆದುದರಿಂದ ವರ್ಣಾಶ್ರಮೋಚಿತ ನಿತ್ಯನೈಮಿತ್ತಿಕಗಳನ್ನು ಅನುಷ್ಠಿಸಬೇಕೆಂಬುದು ಸ್ವತಂತ್ರ ವಿಧಿಮೂಲಕ ಉಂಟಾದುದು. ಅಂತಹ ಆಜ್ಞಾ ಕೈಂಕರ್ಯಗಳನ್ನು ಮಾಡಿಯೇ ತೀರಬೇಕು. ಇಲ್ಲದಿದ್ದರೆ ಭಗವನ್ನಿಗ್ರಹಕ್ಕೆ ಒಳಗಾಗುವದರಿಂದ ಪ್ರತ್ಯವಾಯವು ತಪ್ಪದು. ಜ್ಞಾನಿಗೆ ಆಜ್ಞಾ ಕೈಂಕರ್ಯಗಳು ಆವಶ್ಯಕವಿಲ್ಲವೆಂಬ ಮಾತು ಶಾಸ್ತ್ರವಿರುದ್ಧವಾದುದು. ಇದನ್ನು ಶಾಸ್ತ್ರಜ್ಞಾನ ನಿಧಿಗಳಾದ ಶ್ರೀ ಶಂಕರಾಚಾರ್ಯರು ಹೇಗೆ ಅನುಮೋದಿಸಿದರೋ ತಿಳಿಯದು. ಶ್ರೀ ಶಂಕರಾಚಾರ್ಯರ ಮತ್ತು ಅವರ ಶಿಷ್ಯರುಗಳ ಮಾತು ಹಾಗಿರಲಿ. ನಮ್ಮಲ್ಲೇ ಕೆಲವರೂ ಸಹ ಹೀಗೆ ಅಭಿಪ್ರಾಯಪಡುವದು ಪರಮಾಶ್ಚರ್ಯವಾದ ವಿಷಯವಾಗಿದೆ. ಇದಕ್ಕಾಗಿಯೇ ಪರಿತಾಪದಿಂದ ಸ್ವಾಮಿದೇಶಿಕರವರು ಇಷ್ಟುದೂರ ಬರೆದರೇವಿನಾ ವೈಷಮ್ಯದಿಂದ ಎಂದಿಗೂ ಇಲ್ಲವು. ಪರಮ ಹಿತದಿಂದಲೂ ಪರಿತಾಪದಿಂದಲೂ ಮಾಡಿದ ಉಪದೇಶವೇ ವಿನಾ ಮರ್ಮೋದ್ಘಾಟನೆಗಾಗಿ ಮಾಡಿದ್ದಾ

ಕೃತ್ಸ್ನಾಙ್ಗತಯಾ ಯೇತು ತದಾನೀ ಮನನುಷ್ಠಿತಾಃ ।
ಸ್ವಕಾಲೇ ಸ್ವವಿಧೇರೇವ ಕಾರ್ಯಾಸ್ತೇ ತದ್ವದತ್ರ ನಃ ॥೫೪॥

ರೆಂಬ ಹೇಳಿಕೆಯಲ್ಲಿ ಔದಾರ್ಯವಿಲ್ಲವೆಂದು ಊಹಿಸಬೇಕಾಗುತ್ತದೆ. ಇಷ್ಟು ದೂರ ಹೇಳಿಯೂ ನಿತ್ಯ ನೈಮಿತ್ತಿಕಗಳ ಅನುಷ್ಠಾನವೆಂಬ ಕೆಸರನ್ನು ತುಳಿಯುವದೇಕೆ? ಸಾತ್ವಿಕ ತ್ಯಾಗವನ್ನು ಹೇಳಿ ಕಾಲನ್ನು ತೊಳೆದುಕೊಳ್ಳುವದೇಕೆ? ಎಂದು ವಾದಿಸಿದರೆ ಮೌನವೇ ಅದಕ್ಕೆ ಉತ್ತರವು; ಏಕೆಂದರೆ ನಿತ್ಯನೈಮಿತ್ತಿಕ ಕರ್ಮಾನುಷ್ಠಾನವು ಕೆಸರು ತುಳಿದಹಾಗೆ ಎಂಬುದಕ್ಕೆ ಪ್ರಮಾಣವೆಲ್ಲಿದೆ? ಹಾಗೆ ಪ್ರಾಮಾಣಿಕವಲ್ಲದ ವಾದಕ್ಕೆ ನಿರುತ್ತರವೇ ಉತ್ತರವು.

ಪ್ರಪತ್ತಿಗೆ ನಿತ್ಯನೈಮಿತ್ತಿಕಗಳ ಅನುಷ್ಠಾನವು ಅಙ್ಗವಲ್ಲವೆಂದು ಕಂಠೋಕ್ತವಾಗಿ ಹೇಳುತ್ತೀರಿ; ಆದರೂ ಅವುಗಳನ್ನು ಅನುಷ್ಠಿಸಲೇಬೇಕೆಂದೂ ಹೇಳುತ್ತೀರಿ; ಆಗಲೇ ಬೇಕಾಗದಿರುವದು ಅನಂತರ ಬೇಕೆಂಬುದು ತಾನೇ ಹೇಗೆ? ಎಂಬ ಶಙ್ಕಾ ಮೇಲೆ ಸೂಚಿಸಲ್ಪಟ್ಟಿತ್ತು. ಈಗ ಅದಕ್ಕೆ ಸಮಾಧಾನವನ್ನು ಒಂದು ದೃಷ್ಟಾಂತದಮೂಲಕ ತಿಳಿಸುತ್ತಾರೆ.—**ಕೃತ್ಸ್ನಾಙ್ಗತಯಾ**-ಸಂಧ್ಯಾವಂದನ ಔಪಾಸನಾದಿಗಳು ಜ್ಯೋತಿಷ್ಟೋಮಾದಿಕ್ರತುಗಳಿಗೆ ಅಙ್ಗವಲ್ಲವಾದುದರಿಂದ, **ತದಾನೀಂ** ಆ ಕ್ರತುವನ್ನು ಅನುಷ್ಠಿಸುವ, ದೀಕ್ಷಾಕಾಲದಲ್ಲಿ, **ಯೇತು** - ಯಾವ ಸಂಧ್ಯಾವಂದನ ಔಪಾಸನಾದಿ ನಿತ್ಯ ನೈಮಿತ್ತಿಕಗಳು, **ಅನನುಷ್ಠಿತಾಃ**-ಅನುಷ್ಠಿಸಲ್ಪಡದೇ ಇರುವವುಗಳೋ, **ಸ್ವಕಾಲೇ**-ಅವುಗಳನ್ನು ಅನುಷ್ಠಿಸಬೇಕೆಂದು ವಿಹಿತಕಾಲದಲ್ಲಿ, **ಸ್ವವಿಧೇರೇವ**-ಸ್ವತಂತ್ರವಿಧಿಗಳಿಂದಲೇ, **ತೇ** - ಅವುಗಳು, **ಕಾರ್ಯಾಃ** - ಹೇಗೆ ಮಾಡತಕ್ಕವುಗಳೋ, **ತದ್ವತ್** - ಅದರಹಾಗೆಯೇ, **ಅತ್ರ** - ಈ ಸ್ವತಂತ್ರ ಪ್ರಪತ್ತಿ ವಿಷಯದಲ್ಲೂ, **ನಃ** - ಪ್ರಪನ್ನರಾದ ನಮಗೆ, **ಕಾರ್ಯಾಃ** - ಸ್ವತಂತ್ರ ವಿಧಿಪ್ರಾಪ್ತವಾಗಿ ಅಗತ್ಯವಾಗಿ ಅನುಷ್ಠಿಸತಕ್ಕವುಗಳೇ ಸರಿ; ನಿತ್ಯ ನೈಮಿತ್ತಿಕಗಳು ಪ್ರಪತ್ತಿಗೆ ಅಙ್ಗಗಳಲ್ಲವು, ಆದರೆ ಬೇರೆ ವಿಧಿಗಳಿಂದ ಆಯಾಯಾ ಕಾಲಗಳಲ್ಲಿ ಈ ಸಂಧ್ಯಾದಿ ಕರ್ಮಗಳು ಅಗತ್ಯ ಅನುಷ್ಠಿಸಲೇ ಬೇಕೆಂದಿರುವದರಿಂದ, ಅವುಗಳ ತ್ಯಾಗವು ಶಾಸ್ತ್ರವಿರುದ್ಧವು, ಮತ್ತು ಆ ಕಾರಣದಿಂದ ಭಗವನ್ನಿಗ್ರಹವನ್ನು ಉಂಟುಮಾಡುವಂತಾದ್ದು ಎಂಬ ಭಾವವು.

ಹೀಗೆ ಸರ್ವಧರ್ಮಾನ್ ಎಂಬುದಕ್ಕೆ ಅರ್ಥವನ್ನು ಉಪಪಾದಿಸಿ ಹೇಳಿ, ನಿತ್ಯ ನೈಮಿತ್ತಿಕಗಳು ಸರ್ವಾತ್ಮನಾ ತ್ಯಾಜ್ಯವಲ್ಲವೆಂದು ಸಿದ್ಧಾನ್ತಿಸಿದರೆ, ಶ್ರೀ ವ್ಯಾಸರೇ

(೧) ಭಾರತ. ಶಾಂತಿ. ೩೩೯, ೪೪.

(೧) "ತ್ಯಜಧರ್ಮ ಮಧರ್ಮಂಚ ಎಙ್ಗಿರದುವುಮ್ ಕಾಮ್ಯಙ್ಗಳೈಯುಮ್ ನಿಷಿದ್ಧಙ್ಗಳೈಯುಮ್ ವಿಡಚ್ಚೊನ್ನಪಡಿ; "ತ್ಯಜಸತ್ಯಾನೃತೇ" ಎಙ್ಗಿರುದುವುಮ್ ಆತ್ಮಾನುಭವತ್ತೈಯುಮ್, ಐಶ್ವರ್ಯತ್ತೈಯುಮ್ ಪ್ರಯೋಜನಮಾಗಕ್ಕೊಳ್ಳಾದೇ ಕೊಳ್ಳೈನ್ರಪಡಿ; ವಾಚಿಕಙ್ಗಳೈ ವಿಶೇಷಿತ್ತುಚ್ಚೊಲ್ಲಿತ್ತಾಗ

---

ಭಾರತದಲ್ಲಿ "ತ್ಯಜಧರ್ಮ ಮಧರ್ಮಂಚ" ಎಂದೂ ಎಲ್ಲಾ ಧರ್ಮಗಳ ಸಂಪೂರ್ಣ ತ್ಯಾಗವನ್ನೇ ಬೋಧಿಸುತ್ತಾರಲ್ಲಾ ಎಂದರೆ, ಆ ಸಂದರ್ಭದಲ್ಲಿ ನೀವು ಹೇಳುವಹಾಗೆ ಅರ್ಥವಲ್ಲವು, ಇತರ ಶಾಸ್ತ್ರ ವಿಧಿಗಳಿಗೆ ವಿರೋಧವಿಲ್ಲದಹಾಗೆ ಅರ್ಥವನ್ನು ಹೇಳುವದು ಉಚಿತವಾದುದರಿಂದ ಅದರ ಅರ್ಥವನ್ನು ತಾವೇ ಬೋಧಿಸುತ್ತಾರೆ. "ತ್ಯಜ ಧರ್ಮಮಧರ್ಮಂಚ" ಧರ್ಮಾಧರ್ಮಗಳೆರಡನ್ನೂ ತ್ಯಜಿಸತಕ್ಕದ್ದೆಂದು ಹೇಳಿರುವದು, ಧರ್ಮ ಶಬ್ದದಿಂದ ಕಾಮ್ಯ ಕರ್ಮಗಳನುಷ್ಠಾನವನ್ನೂ, ಅಧರ್ಮಂಚ - ಅಧರ್ಮಾಚರಣೆಯಾದ ನಿಷಿದ್ಧ ಕರ್ಮಾಚರಣೆಯನ್ನೂ, ವಿಡಚ್ಚೊನ್ನಪಡಿ - ತ್ಯಜಿಸತಕ್ಕದ್ದೆಂದು ಉಪದೇಶಿಸಿತೆಂದು ತಿಳಿಯತಕ್ಕದ್ದು. "ತ್ಯಜ ಸತ್ಯಾನೃತೇ" ಸತ್ಯವೆಂದರೆ ಕೈವಲ್ಯಾರ್ಥಿಯಾಗಿ ಆತ್ಮಾನುಭವಕ್ಕಾಗಿ ಉಪಾಸನವು, ಅನೃತವೆಂದರೆ ಅಲ್ಪಾಸ್ಥಿರವಾದ ಐಶ್ವರ್ಯಗಳಿಗಾಗಿ ಉಪಾಸನಾನುಷ್ಠಾನವು, ಇವೆರಡನ್ನೂ ಬಿಡು; ಇದರಿಂದ ಮೋಕ್ಷಕ್ಕಾಗಿಯೇ ಉಪಾಸನವು ಮಾಡತಕ್ಕದ್ದೆಂದು ಸಿದ್ಧವಾಯಿತು; ಎಙ್ಗಿರುವುದುಮ್ - ಹೀಗೆ ಹೇಳಿರುವದೂ, ಆತ್ಮಾನುಭವವನ್ನೂ ಎಂದರೆ, ಕೈವಲ್ಯಾರ್ಥಿಯಾದ ಜಿಜ್ಞಾಸುವಿನ ಉಪಾಸನ ಫಲವನ್ನೂ, ಐಶ್ವರ್ಯತ್ತೈಯುಮ್-ಐಹಿಕ ಪಾರಲೌಕಿಕ ಐಶ್ವರ್ಯಗಳನ್ನೂ, ಆರ್ತನೂ ಅರ್ಥಾರ್ಥಿಯೂ ಮಾಡುವ ಉಪಾಸನಫಲವನ್ನೂ, ಪ್ರಯೋಜನಮಾಗ ಕೊಳ್ಳಾದೇ - ಫಲವಾಗಿ ಅಪೇಕ್ಷಿಸದೇ, ಕೊಳ್ಳೈನ್ರಪಡಿ - ಉಪಾಸನವನ್ನು ಅಙ್ಗೀಕರಿಸತಕ್ಕದ್ದು ಎಂದು ಉಪದೇಶವೆಂಬ ಭಾವವು. ಇದರಿಂದ ನೀನು ಜ್ಞಾನಿಯಾಗಿ ಮೋಕ್ಷಕ್ಕಾಗಿಯೇ ಉಪಾಸಿಸತಕ್ಕದ್ದೆಂಬುದೇ ಉಪದೇಶದ ಸಾರಾಂಶವು. ನಿತ್ಯ ನೈಮಿತ್ತಿಕಗಳನ್ನೂ ಬಿಡು ಎಂದು ಹೇಳಿತೆಂಬರ್ಥವಲ್ಲವು. "ನಿಷಿದ್ಧ ಕಾಮ್ಯ ರಹಿತಂ ಕುರುಮಾಂ ನಿತ್ಯಕಿಂಕರಮ್" (ನ್ಯಾಸದಶಕ. ೫.) ಎಂಬ ಪ್ರಾರ್ಥನೆಯು ಇಲ್ಲಿ ಅಭಿಪ್ರೇತವು. ಈ ಶಾಂತಿ ಪರ್ವ ಶ್ಲೋಕವು, ಶ್ರೀ ನಾರದರು ಶ್ರೀ ಶುಕರಿಗೆ ಮೋಕ್ಷವನ್ನು ಹೊಂದುವ ಉಪಾಯೋಪದೇಶವನ್ನು ಮಾಡುವ ಪ್ರಕರಣದಲ್ಲಿ ಬರುತ್ತದೆ. ಇದು ಪರಮಗುಹ್ಯವಾದುದೆಂದು ಶ್ರೀ ನಾರದರಿಂದ ಹೇಳಲ್ಪಟ್ಟಿರುತ್ತದೆ "ತ್ಯಜಧರ್ಮ ಮಧರ್ಮಂಚ ಉಭೇ ಸತ್ಯಾನೃತೇ ತ್ಯಜ । ಉಭೇ ಸತ್ಯಾನೃತೇ ತ್ಯಕ್ತ್ವಾ ಯೇನತ್ಯಜಸಿ ತತ್ತ್ಯಜ ॥ ಏತತ್ತೇ ಪರಮಂ ಗುಹ್ಯ ಮಾಖ್ಯಾತ ಮೃಷಿಸತ್ತಮ". ಇದರ

ಹಿಂದೆ "ಇದನುನ್ಯತ್ಪರಂ ಪಶ್ಯ ಮಾzತ್ರಮೋಹಂ ಕರಿಷ್ಯಸಿ" ಪರಮ ಹಿತ ರೂಪವಾಗಿ ಅವಲಂಬಿಸತಕ್ಕದ್ದು ಸರ್ವೇಶ್ವರನನ್ನು ಸಾಕ್ಷಾತ್ಕರಿಸುವ ಉಪಾಯವು; ಆ ವಿಷಯದಲ್ಲಿ ಮೋಹ ಬುದ್ಧಿಯು ಬೇಡ; ಅದನ್ನು ಹೇಳಿದನಂತರ ಮೋಕ್ಷೇತರ ಫಲಗಳಲ್ಲಿ ವೈರಾಗ್ಯವು ಮುಖ್ಯವಾಗಿ ಉಪದೇಶಿಸತಕ್ಕದ್ದಾಗಿ] ಹೇಳುತ್ತಾರೆ.— ತ್ಯಜಧರ್ಮಂ- ಪ್ರವೃತ್ತಿ ಧರ್ಮಗಳನ್ನು ಫಲಾಭಿಸಂಧಿಯಿಂದ ಮಾಡಿದರೆ, "ಪ್ರವೃತ್ತಿರ್ಪುನರಾವೃತ್ತಿಃ" ಎಂದು ಹೇಳಿರುವಹಾಗೆ ಪುನಃ ಪುನಃ ಜನ್ಮಗಳಿಗೆ ಕಾರಣವಾಗುವದರಿಂದ, ಅಂತಹ ಕಾಮ್ಯಕರ್ಮಗಳನ್ನು ಮೋಕ್ಷಾರ್ಥಿಯಾದ ನೀನು ತ್ಯಜಿಸು; ಅಧರ್ಮಂಚ - ಶಾಸ್ತ್ರದ ವಿಧಿ ನಿಷೇಧವಾಕ್ಯಗಳಿಗೆ ವಿರುದ್ಧವಾದ ಅಕೃತ್ಯಕರಣಕೃತ್ಯಾಕರಣರೂಪನಿಷಿದ್ಧಕರ್ಮಗಳು ಭಗವನ್ನಿಗ್ರಹವನ್ನುಂಟು ಮಾಡಿ ಅನಿಷ್ಟಫಲದಾಯಕಗಳಾದುದರಿಂದ, ಅವುಗಳನ್ನೂ ಸಹ ಬಿಡು, ಹೀಗೆ ಅವೆರಡನ್ನೂ ಬಿಡು ಎಂದೂ, ಮತ್ತು ಅಪುನರಾವೃತ್ತಿಯುಳ್ಳ ಆತ್ಮಾನುಭವ ಬೇಕೆಂಬಪೇಕ್ಷೆಯಿಂದ ಉಪಾಸನವನ್ನಾಗಲಿ, ನಶ್ವರಗಳಾದ ಐಶ್ವರ್ಯಕಾಮನೆಯಿಂದ ಉಪಾಸನವನ್ನಾಗಲಿ, ಬಿಡು ಎಂದು ಹೇಳಿ, ಮುಂದೆ ಯೇನತ್ಯಜಸಿ ತತ್ತ್ಯಜ ಎಂದು ಹೇಳಿರುವದರಿಂದ, ಯೇನ-ಯಾವ ಈಗ ಪ್ರಾಪ್ತವಾಗಿರುವ ದೇಹಮೂಲಕ ಇವುಗಳನ್ನು ನಾನು ಸ್ವತಂತ್ರಿಸಿ ತ್ಯಜಿಸುತ್ತೇನೆಂಬ ಅಹಂಭಾವವನ್ನು ಅಥವಾ ಪ್ರಾಕೃತ ಶರೀರವನ್ನೂ, ತ್ಯಜ - ತ್ಯಜಿಸು, ಹೀಗೆ ಮಾಡಿದರೆ ನಿರತಿಶಯ ಮೋಕ್ಷ ಸುಖವನ್ನು ಹೊಂದುವಿ ಎಂಬ ತಾತ್ಪರ್ಯವು. ಶ್ರೀ ನಾರದರು ಶ್ರೀ ವ್ಯಾಸರ ಮಕ್ಕಳಾದ ಶುಕರಿಗೆ ಮೋಕ್ಷೋಪಾಯವನ್ನು ಉಪದೇಶಿಸುವ ಪ್ರಕರಣವು. ಇಲ್ಲಿರುವ ಅನೃತ ಶಬ್ದವು ಛಾಂದೋಗ್ಯದಲ್ಲಿ (೮. ೩. ೨) ರಲ್ಲಿ ಏವಮೇವೇ ಮಾಸ್ಸರ್ವಾಃ ಪ್ರಜಾ ಅಹರಹರ್ಗಚ್ಛನ್ತ್ಯ ಏತಂ ಬ್ರಹ್ಮಲೋಕಂ ನವಿಂದನ್ತ್ಯನೃತೇನಹಿ ಪ್ರತ್ಯೂಢಾಃ" "ಹಿರಣ್ಯ ನಿಧಿಯಮೇಲೆ ನಡೆಯುತ್ತಾ ಇದ್ದರೂ, ವಿಜ್ಞಾನಹೀನರು ಹಿರಣ್ಯ ನಿಧಿ ಇದೆ ಎಂದು ಹೇಗೆ ತಿಳಿಯಲಾರರೋ ಹಾಗೆಯೇ ಈ ಸಮಸ್ತ ಪ್ರಜೆಗಳು ಪ್ರತಿದಿನವೂ ಸುಷುಪ್ತಿಕಾಲದಲ್ಲಿ ಪರಮಾತ್ಮನೊಂದಿಗೆ ಸಂಪತ್ತಿ ಇದ್ದರೂ ಪರಮಾತ್ಮನನ್ನು ತಿಳಿಯಲಾರರು, ಏಕೆಂದರೆ ಅನೃತೇನಹಿ ಪ್ರತ್ಯೂಢಾಃ - ಪುನಃ ಪುನಃ ಸಂಸಾರಫಲವನ್ನುಂಟುಮಾಡುವ ಕರ್ಮ ಸಮೂಹದಿಂದ ಆವರಿಸಲ್ಪಟ್ಟರುತ್ತಾರೆ, ಎಂದು ಕಾರಣವನ್ನು ಶ್ರುತಿಯು ಹೇಳುತ್ತದೆ. ಶ್ರೀ ಭಾಷ್ಯಕಾರರು ಅನೃತ ಶಬ್ದಕ್ಕೆ "ಸಾಂಸಾರಿಕ ಫಲಂ ಕರ್ಮಾನೃತಂ ಬ್ರಹ್ಮಪ್ರಾಪ್ತಿವಿರೋಧಿ" ಪರಬ್ರಹ್ಮಪ್ರಾಪ್ತಿಗೆ ವಿರೋಧವಾಗಿ, ಸಾಂಸಾರಿಕ ಫಲವನ್ನು ಕೊಡುವ ಕರ್ಮವು ಅನೃತವೆನಿಸುತ್ತದೆಂದು ವ್ಯಾಖ್ಯಾನಮಾಡಿರುತ್ತಾರೆ, ಅನೃತವಲ್ಲದುದು ಋತಂ; ಇದು "ಕರ್ಮಫಲಾಭಿ ಸಂಧಿರಹಿತಂ

**ಪರಮಪುರುಷಾರಾಧನವೇಷಂ ತತ್ಪ್ರಾಪ್ತಿ ಫಲನ್"** ಎಂದು ಯತಿವರ್ಯರ ವ್ಯಾಖ್ಯಾನವು, ಕರ್ಮದಲ್ಲಿ ಫಲವನ್ನು ತ್ಯಾಗಮಾಡಿ ಪರಮ ಪುರುಷನ ಆರಾಧನೆಯು ಎಂಬ ಅಭಿಸಂಧಿಯಿಂದ ಮಾಡಿದ ಕರ್ಮವು ಬ್ರಹ್ಮ ಪ್ರಾಪ್ತಿಯೇ ಪರ್ಯವಸಾನವಾಗಿ ಉಳ್ಳದು, ಆದುದರಿಂದ ಇವುಗಳನ್ನು ಅನುಸರಿಸಿಯೇ ಸತ್ಯ ಶಬ್ದವು ಋತ ವೆಂಬ ಶಬ್ದದ ಪರ್ಯಾಯ ಪದವಾಗಿರುವದರಿಂದ ಈ ಆತ್ಮಾನುಭವವೂ ಪರ ಬ್ರಹ್ಮಪ್ರಾಪ್ತಿಯೇ ಪರ್ಯವಸಾನವಾಗಿ ಉಳ್ಳದಾದರೂ, ಈ ಸತ್ಯವನ್ನೂ ತ್ಯಜಿಸು. ಹೀಗೆ ಹೇಳಿರುವದರಿಂದ ಮೋಕ್ಷಕ್ಕೆ ಆತ್ಮಾನುಭವವನ್ನು ಹೋಲಿಸಿದರೆ, ಆತ್ಮಾನು ಭವವೂ ನಿಕೃಷ್ಟವಾದುದರಿಂದಲೂ ಶ್ರೀ ನಿಗಮಾಂತದೇಶಿಕರು ಆತ್ಮಾನುಭವವೆಂದು ಅರ್ಥಮಾಡಿರುತ್ತಾರೆ. **ಯೇನತ್ಯಜಸಿ ತತ್ತ್ಯಜ** ಎಂಬಲ್ಲಿ ಈ ಜೀವಾತ್ಮನು ಅಣುವಾಗಿ ಸ್ವತಂತ್ರಿಸಿ ಏನೊಂದೂ ಮಾಡಲು ಸಾಧ್ಯವಿಲ್ಲದೆ **"ಅಧಿಷ್ಠಾನಂ ತಥಾಕರ್ತಾ"** ಎಂಬ ಗೀತಾ ಶ್ಲೋಕದಲ್ಲಿ ಹೇಳಿರುವಹಾಗೆ ಸರ್ವೇಶ್ವರ ಕೃಪೆಯಿಂದ ಈತನಿಗೆ ಉಂಟಾದ ಕರಣಗಳೇನು, ಕಳೇಬರವೇನು, ಚೇಷ್ಟೆಗೆ ಬೇಕಾದ ಇಚ್ಛಾ ರೂಪ ಸಙ್ಕಲ್ಪವೇನು, **ದೈವಂ ಚೈವಾತ್ರಪಂಚಮಂ** ಎಂದು ಹೇಳಿರುವ ದೈವಾನು ಮತಿ, ಇಷ್ಟು ಕೂಡಿದರೆ ತಾನೇ, ಆತನು ತ್ಯಜ ಎಂದು ಹೇಳಿದುದನ್ನು ತ್ಯಾಗ ಮಾಡಬಹುದು. ಹೀಗೆ ತಾನು ಅಸ್ವತಂತ್ರನೆಂಬ ಅನುಸಂಧಾನಯುಕ್ತತ್ಯಾಗವು ಆವಶ್ಯಕವೆಂದು **ಯೇನತ್ಯಜಿಸಿ ತತ್ತ್ಯಜ** - ಯಾವದೇಕೇಂದ್ರಿಯಗಳ ಮೂಲಕ ನೀನು ತ್ಯಜಿಸುತ್ತೀಯೋ ಅಂತಹ ಅಹಂಭಾವವನ್ನು ತ್ಯಜಿಸು ಎಂಬರ್ಥವನ್ನು ಹೇಳಿರುತ್ತಾರೆ. ಇವರಿಂದ ಶ್ರೀ ಭಾಷ್ಯಕಾರರ ಮತ್ತು ಶ್ರೀ ದೇಶಿಕರವರ ಅಭಿ ಪ್ರಾಯಗಳಿಗೆ ಏಕಕಂಠ್ಯವು ಏರ್ಪಟ್ಟಿತು. ಸರ್ವ ಕರ್ಮಗಳ ಸಂಪೂರ್ಣ ಪರಿತ್ಯಾಗ ವೆಂದು ಅರ್ಥಮಾಡಿ ನಿತ್ಯನೈಮಿತ್ತಿಕಗಳನ್ನೂ ತ್ಯಾಗಮಾಡಬಹುದೆಂದು ಹೇಳುವ ಅಭಿಪ್ರಾಯವು ಶಾಸ್ತ್ರವಿರುದ್ಧಾಭಿಪ್ರಾಯವೆಂಬುದು ಇವರಿಂದ ವ್ಯಕ್ತವು

ಆದರೆ ಹೀಗೆ, ಮೋಕ್ಷೋಪಾಯ ಪ್ರಕರಣದಲ್ಲಿ ಶ್ರೀ ನಾರದರು ತಮ್ಮ ಪ್ರಿಯಶಿಷ್ಯರಾದ ಶುಕರಿಗೆ ಮಾಡಿದ ಈ ಸಂದರ್ಭದಲ್ಲೂ, ಉಪದೇಶಾನುಗುಣವಾಗಿ ಅರ್ಥಮಾಡಿರಬಹುದು; ಶ್ರೀ ಭಾಷ್ಯಕಾರರೂ **"ಋತಾನೃತೇ"** ಎಂದರೆ **"ಸತ್ಯಾನೃತೇ"** ಎಂಬುವಕ್ಕೆ ಯಾವ ಪ್ರಕರಣದಲ್ಲೋ ಹಾಗೆ ವ್ಯಾಖ್ಯಾನ ಮಾಡಿರಬಹುದು; ಸತ್ಯವೆಂದರೆ ಸಾಧಾರಣವಾಗಿ ಯಥಾರ್ಥವಾದ ವಾಕ್ಯ, ಅನೃತವೆಂದರೆ ಅಯಥಾರ್ಥವಾದ ವಾಕ್ಯ, ಇದೀಗ ರೂಢಿಯಲ್ಲಿರುವದು, ಇಂತಹ ಪ್ರಯೋಗಗಳನ್ನು ಬಿಟ್ಟು ಬೇರೆ ವಿಧವಾಗಿ ಅರ್ಥಹೇಳಬಹುದೇ ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ಹೇಳುತ್ತಾರೆ. ಹಾಗೆಯೂ ಇಟ್ಟುಕೊಳ್ಳಬಹುದು, ಪ್ರತ್ಯವಾಯವಿಲ್ಲವು; ಆದರೆ ಪ್ರಕರಣಾನುಗುಣವಾಗಿ ಸ್ವಾರಸ್ಯವಿಲ್ಲವು, ಎಂದು ಮುಂದೆ

ವುಪನಾನ್. ಇದಿಕ್ಕ ಅರಿವ್ಯೈ ತೋತ್ತ್ರುಗೈಕ್ಕಾಗ "ಉಭೇ ಸತ್ಯಾನೃತೇ ತ್ಯಕ್ತ್ವಾ" ಎನ್ರು ಅನುವದಿಕ್ಕಿರವು; ತ್ಯಾಗತ್ತಿಲ್ ಕರ್ತೃತ್ವಮುಮ್ ಪರಾಧೀನನೆನ್ರು ಅನುಸಂಧಿಕ್ಕೈಕ್ಕಾಗ "ಯೇನ ತ್ಯಜಸಿ ತತ್ತ್ಯಜ" ಎಂಗಿರದು.

ಹೇಳುತ್ತಾರೆ. ವಾಚಿಕೆಬ್ಗಳ್ಳೆ ವಿಶೇಷಿತ್ತು - ಈತನು ವಾಕ್ಕಿನಮೂಲಕ ಹೇಳಬೇಕಾದುದನ್ನು ವಿಶೇಷಿಸಿ, ಚೊಲ್ಲಿತ್ತಾಗವುಮಾನ್ - ಹೇಳಿದರೂ ಆಗಬಹುದು; ಹೀಗೆ ಹೇಳಿದುದರಿಂದ ಅರ್ಥಾಂಗೀಕಾರವು ದ್ಯೋತಿತವು, ಅಂತೂ ಶಾಸ್ತ್ರವಿರುದ್ಧವಿಲ್ಲದಿದ್ದರೆ ಸಾಕು ಎಂದು ಒಪ್ಪಿಕೊಳ್ಳುವ ವಿಷಯವು. ಆದರೆ ಅನೃತ ತ್ಯಾಗವು ನ್ಯಾಯವು. ಸತ್ಯದ ತ್ಯಾಗ ಹೇಗೆ ? ಎಂದರೆ ಭೂತ ಹಿತಕ್ಕಾಗಿಯೇ ಸತ್ಯವು ಏರ್ಪಟ್ಟಿರುವದರಿಂದ ಭೂತಹಿಂಸಾರೂಪ ಸತ್ಯವನ್ನು ತ್ಯಾಗವಾಡತಕ್ಕದ್ದೆಂಬಭಾವವು. ನಬ್ರೂಯಾತ್ಸತ್ಯಮಪ್ರಿಯಂ ಎಂಬ ಧರ್ಮಶಾಸ್ತ್ರ ಪ್ರಕಾರ, ಅಂತಹ ಸತ್ಯವನ್ನೂ ಬಿಡತಕ್ಕದ್ದು. ಒಬ್ಬನ ಹೆಂಡತಿಯು ವ್ಯಭಿಚಾರಮಾಡಿದಳೆಂಬುದು ಸತ್ಯವಾದರೂ, ಗಂಡನಿಗೆ ಅದನ್ನು ತಿಳಿಸತಕ್ಕದ್ದಲ್ಲವು. ಒಬ್ಬ ಋಷಿಕನ್ನಿಕೆಯು ಯಾರಿಗೆ ವಿವಾಹಿತಳಾದಳು ತಿಳಿಸು ಎಂದು ಇದು ಅಗ್ನಿಗೆ ವಿದಿತವಾದ ಅಂಶವಾದುದರಿಂದ ಅಗ್ನಿಯನ್ನು ಒಬ್ಬ ರಾಕ್ಷಸನು ಕೇಳಲು, ಯಥಾರ್ಥವನ್ನು ಇಲ್ಲಿ ಆವಶ್ಯಕವಾಗಿ ತ್ಯಜಿಸುವವನ್ನು ಬಿಟ್ಟು, ಸತ್ಯವನ್ನು ಹೇಳಿದುದರಿಂದ ಅಗ್ನಿಗೆ ಕನ್ನಿಕೆಯ ತಂದೆಯಾದ ಋಷಿಯ ಶಾಪವು ಪ್ರಾಪ್ತವಾಯಿತು. ಇದು ಆದಿಪರ್ವದಲ್ಲಿ ಉಪಪಾದಿತವು. ಅಪರಾಧಪರಿಹಾರಾಧಿಕಾರದ ಕೊನೆಯ ಶ್ಲೋಕದಲ್ಲಿ ಇವೆಲ್ಲಾ ಉಪಪಾದಿತವು. ಈ ಅರ್ಥವು ಯುಕ್ತವಾದರೂ ಪ್ರಕರಣಾನುಗುಣವಾಗಿ ಸ್ವಾರಸ್ಯವಿಲ್ಲದುದು.

ಹಿಂದಿನ ಪಾದದಲ್ಲಿ "ಉಭೇಸತ್ಯಾನೃತೇತ್ಯಜ" ಎಂದು ಹೇಳಿ ಮುಂದೆ ಪುನಃ "ಉಭೇಸತ್ಯಾನೃತೇ ತ್ಯಕ್ತ್ವಾ"ಎಂದು ಹೇಳಿದರೆ, ಪುನರುಕ್ತಿದೋಷವು ಬರಲಿಲ್ಲವೇ ? ಎಂದರೆ ಪುನರುಕ್ತಿಯಲ್ಲವು, ಅನುವಾದವೆಂದು ಉಪದೇಶಿಸುತ್ತಾರೆ. ಹೇಗೆ ಅನುವಾದವೆಂದರೆ ತಿಳಿಸುತ್ತಾರೆ.—ಇದಿಕ್ಕ-ಈ ಮೇಲೆ ತ್ಯಜಧರ್ಮ ಮಧರ್ಮಂಚ ಎಂದಾರಂಭಿಸಿ ಹೇಳಿರುವ ಉಪದೇಶದ, ಅರುವ್ಯೈ - ಪ್ರಾಧಾನ್ಯವಾದ ತಿಳುವಳಿಕೆಯನ್ನು,ತೋತ್ತ್ರುಗೈಕ್ಕಾಗ-ಸೂಚಿಸುವದಕ್ಕಾಗಿ"ಉಭೇ ಸತ್ಯಾ ನೃತೇ ತ್ಯಕ್ತ್ವಾ" ಎಂದರೆ ಜಿಜ್ಞಾಸುವಾಗಿ ಆತ್ಮಾನುಭವಕ್ಕಾಗಿಯಾಗಲಿ,ಆರ್ತನಾಗಿ ಅಥವಾ ಅರ್ಥಾರ್ಥಿಯಾಗಿ,ಭ್ರಷ್ಟೈಶ್ವರ್ಯಪ್ರಾಪ್ತಿಗಾಗಿಯಾಗಲಿ ಅಥವಾ ನೂತನೈಶ್ವರ್ಯ ಪ್ರಾಪ್ತಿಗಾಗಲಿ ಉಪಾಸನರೂಪ ಕರ್ಮವನ್ನು ಬಿಟ್ಟು, ಯೇನ ತ್ಯಜಸಿ ತತ್ತ್ಯಜ - ಕರಣ ಕಳೇಬರ ಯೋಗದಿಂದುಂಟಾಗುವ ಸ್ವತಂತ್ರ ಕರ್ತೃತ್ವವನ್ನೂ ತ್ಯಜಿಸು ಎಂದರೆ ಪ್ರಕೃತಿ ಸಂಬಂಧದ ತ್ಯಾಗಮೂಲಕ ಪರಮ ನಿಶ್ರೇಯಸ್ಸನ್ನು ನೀನು ಹೊಂದುವಿ ಎಂಬ ಭಾವವು. ಇದನ್ನೇ ಮುಂದೆ ಉಪದೇಶಿಸುತ್ತಾರೆ.—

**ತ್ಯಾಗತ್ತಿಲ್ ಕರ್ತೃತ್ವನುಮ್** - ಹೀಗೆ ಕಾಮ್ಯ ನಿಷಿದ್ಧಗಳಾದ ಧರ್ಮಾಧರ್ಮಗಳೇನು, ಕೈವಲ್ಯ ಮತ್ತು ಐಶ್ವರ್ಯಭೋಗಗಳಾದ ಸತ್ಯಾನೃತಗಳೇನು, ಇವುಗಳ ತ್ಯಾಗದಲ್ಲಿ ಹೇಳಲ್ಪಟ್ಟ ಕರ್ತೃತ್ವ ಭೋಕ್ತೃತ್ವವನ್ನೂ, **ಕರ್ತಾಶಾಸ್ತ್ರಾರ್ಥವತ್ತ್ವಾತ್** ಎಂಬ ಶಾರೀರಕ ಸೂತ್ರದಲ್ಲಿ ಹೇಳಿರುವ ಕರ್ತೃತ್ವವನ್ನೂ, **ಪರಾಧೀನನೆನ್ರು**- "**ಪರಾತ್ತು ತಚ್ಛ್ರುತೇಃ** ಎಂಬ ಸೂತ್ರದಲ್ಲೂ "**ದೈವಂ ಚೈವಾತ್ರ ಪಂಚಮಂ** ಎಂಬ ಗೀತಾ ಶ್ಲೋಕದಲ್ಲೂ ಹೇಳಿರುವಹಾಗೂ, ಭಗವಂತನಿಗೆ ಅಧೀನನೆಂದು, **ಅನುಸಂಧಿಕ್ಕಾಗ** - ಅನುಸಂಧಾನ ಮಾಡುವದಕ್ಕಾಗಿ, "**ಯೇನತ್ಯಜಸಿ ತತ್ತ್ಯಜ**" ಎನ್ಗಿರದು - ಎಂದು ಹೇಳಿರುವದು, ಯಾವ ಸ್ವಾತಂತ್ರ್ಯಾಭಿಮಾನದಿಂದ ತ್ಯಜಿಸುತ್ತೀಯೋ ಅಂತಹ ಸ್ವಾತಂತ್ರ್ಯಾಭಿಮಾನವನ್ನೂ ತ್ಯಜಿಸು ಎಂಬರ್ಥವು. ಇಲ್ಲಿ **ಯೇನ** ಎಂದು ಕರಣ ತೃತೀಯೆ ಎಂದು ಭಾವಿಸಿ, **ತತ್** ಎಂದು ನಪುಂಸಕ ಲಿಙ್ಗವೂ ಇರುವದರಿಂದಲೂ, "**ಮನ ಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ। ಬಂಧಾಯ ವಿಷಯಾಸಙ್ಗಿ ಮುಕ್ತ್ಯೈ ನಿರ್ವಿಷಯಂ ಮನಃ**" ಎಂದು (ವಿ. ಪು. ೬.೭-೨೮) ಹೇಳಿರುವದರಿಂದಲೂ, ನಿರ್ವಿಷಯ ಮನಸ್ಸಿನಿಂದ ನಾನು ತ್ಯಾಗಮಾಡುತ್ತೇನೆಂಬ ಅಹಂಭಾವದ ತ್ಯಾಗ ಬೇಕಾದುದರಿಂದ, ಹೀಗೆ ಮನಸ್ಸಿನ ಮೂಲಕ ನಾನು ತ್ಯಾಗಮಾಡುತ್ತೇನೆಂಬುದು ಯಾವುದುಂಟೋ **ತತ್ತ್ಯಜ** - ಅದನ್ನೂ ಬಿಡು ಎಂದೂ ಅರ್ಥಮಾಡಬಹುದು, ಅಥವಾ ಮೇಲೆಹೇಳಿದುದನ್ನೇ ತ್ಯಾಗಮಾಡಿ, **ಇದಮನ್ಯತ್ ಪರಂಪಶ್ಯ** ವೆಂದು ಪರಬ್ರಹ್ಮ ಸಾಕ್ಷಾತ್ಕಾರಕ್ಕಾಗಿ ಉಪಾಸನೆಯು ವಿಧಿಸಲ್ಪಟ್ಟಿರುವದರಿಂದ **ಯೇನ ತ್ಯಜಸಿ** - ಯಾವ ಮನಸ್ಸಂಯೋಗದಿಂದ ಇವೆಲ್ಲವನ್ನೂ ದೇಹಮೂಲಕ ತ್ಯಾಗಮಾಡುತ್ತೀಯೋ ಅಂತಹ ಮನಸ್ಸನ್ನು (ಇದು ದೇಹೇಂದ್ರಿಯಗಳಿಗೆಲ್ಲಾ ಉಪಲಕ್ಷಣವು.) ಅಥವಾ ಅರ್ಚಿರಾದಿ ಗತಿಪ್ರಾಪ್ತಿ ವಿರಜಾತರಣಾದಿಗಳ ಮೂಲಕ, **ತತ್ತ್ಯಜ** - ಅದನ್ನು ಪ್ರಾಕೃತ ಶರೀರವನ್ನು ತ್ಯಜಿಸು ಎಂದರೆ ತ್ಯಜಿಸುತ್ತೀಯೇ. ಮೇಲಿನ ತ್ಯಾಗಾದಿ ಮೂಲಕ ಉಪಾಸನೆಗೆ ಇದೇ ಫಲವೆಂಬ ಭಾವವು. ಆದುದರಿಂದ **ಸರ್ವಧರ್ಮಾನ್ ಪರಿತ್ಯಜ್ಯ** ಎಂಬುದಕ್ಕೆ ಸರ್ವ ಕರ್ಮಗಳ ಸ್ವರೂಪತ್ಯಾಗವೆಂದು ಅರ್ಥಮಾಡಿ, ನಿತ್ಯನೈಮಿತ್ತಿಕಗಳನ್ನೂ ಕೃತಕೃತ್ಯನು ತ್ಯಜಿಸಬಹುದೆಂಬ ವಾದವು ಅಪಸಿದ್ಧಾಂತವು ಎಂದು ಸ್ಥಾಪಿಸಿದರು. ಮುಂದೆ ಪ್ರಾಸಂಗಿಕವಾಗಿ ಒಂದು ಅಪಸಿದ್ಧಾನ್ತವು, ಮತ್ತೊಂದು ಅಪಸಿದ್ಧಾನ್ತಕ್ಕೂ ಕಾರಣವಾಗುತ್ತದೆಂದು ತಿಳಿಸಲು ಹೊರಟು, ಹೀಗೆ ನಿತ್ಯ ನೈಮಿತ್ತಿಕಗಳನ್ನು ಬಿಡಬಹುದೆಂಬ ಭ್ರಮೆಯಿಂದ ಪ್ರಪನ್ನನು ಬುದ್ಧಿಪೂರ್ವಾಘಗಳನ್ನೆಸಗಿದರೂ ಲೇಪಿಸುವದಿಲ್ಲವೆಂಬ ಭ್ರಮರೂಪಾಭಿಪ್ರಾಯವನ್ನೂ ಸಾಧಿಸುವರು, ಅದೂ ಅಪಸಿದ್ಧಾನ್ತವೆಂದು ಮುಂದಿನ ವಾಕ್ಯಗಳಿಂದ ತಿಳಿಸುತ್ತಾರೆ.

ಚರಮಶ್ಲೋಕೇ ಬುದ್ಧಿಪೂರ್ವೋತ್ತರಾಘಾಶ್ಲೇಷೋಪ್ಯುಕ್ತ
ಇತಿವಾದಃ, ತನ್ನಿರಾಸಶ್ಚ.

ಇಪ್ಪಡಿಯಾನಾಲ್, ಆಜ್ಞಾತಿಲಂಘನುತ್ತುಕ್ಕು ಒರುವಿರಗನ್ರಿಕ್ಕೇ ಯಿರುಕ್ಕೈ,

ಚರಮ ಶ್ಲೋಕದಲ್ಲಿ ಬುದ್ಧಿಪೂರ್ವೋತ್ತರಾಘದ ಆಶ್ಲೇಷವೂ
ಹೇಳಲ್ಪಟ್ಟಿತೆಂಬ ವಾದವೂ, ಅದರ ನಿರಾಸವೂ.

**ಇಪ್ಪಡಿಯಾನಾಲ್** - ನಿತ್ಯ ನೈಮಿತ್ತಿಕಾದಿಗಳು ಆವಶ್ಯಕವಾಗಿ ಅನುಷ್ಠಿಸಲೇಬೇಕೆಂದು ಸ್ಥಾಪಿತವಾಗಲಾಗಿ, ಅದನ್ನೇ ವಿಸ್ತರಿಸಿ ಹೇಳುತ್ತಾರೆ.—**ಆಜ್ಞಾತಿಲಂಘನತ್ತುಕ್ಕು** - ನಿತ್ಯ ನೈಮಿತ್ತಿಕಗಳಾದ ಆಜ್ಞಾ ಕೈಙ್ಕರ್ಯಗಳನ್ನು ಪರಿತ್ಯಾಗ ಮಾಡಕೂಡದೆಂಬ ವಿಧಿಯನ್ನು ಅತಿಕ್ರಮಿಸಿ ನಡೆಯುವದಕ್ಕೆ, **ಒರುವಿರುಗನ್ರಿಕ್ಕೇಯಿರುಕ್ಕೈ**-ಒಂದು ಮಾರ್ಗವೂ ಒಂದು ಪ್ರಮಾಣವೂ ಅಥವಾ ಸಾಧಕವೂ, ಇಲ್ಲದೇ ಇದ್ದರೂ, ಶ್ರುತಿ ಸ್ಮೃತಿ ಪ್ರಮಾಣವೇ ಆಗಲಿ ಲಿಙ್ಗದರ್ಶನ ಅರ್ಥಾಪತ್ತಿಪ್ರಮಾಣ ಬಲವೇ ಆಗಲಿ, ಶಿಷ್ಟಾಚಾರರೂಪ ಸಂಪ್ರದಾಯವೇಯಾಗಲಿ ಯಾವುದೊಂದು ಬಲವೂ ಇಲ್ಲದಿದ್ದರೂ (ಪೂರ್ವಪಕ್ಷಿಗಳು ಏಕಾದಶಸ್ಕಂಧಭಾಗವತದಲ್ಲಿ ಶ್ರೀಕೃಷ್ಣಭಗವಾನರವರು ಮಹಾಭಾಗವತೋತ್ತಮರಾದ ಉದ್ಧವರಿಗೆ ಮಾಡಿರುವ ಉಪದೇಶವನ್ನು ಮೂಲ ಮಾಡಿಕೊಂಡು ಅವರುಗಳು ಹೇಳುವ ಪೂರ್ವಪಕ್ಷವನ್ನು ಮೊದಲು ಅನುವಾದ ಮಾಡಿ ಖಂಡಿಸುತ್ತಾರೆ.—ಇತಿಹಾಸಗಳಲ್ಲಿ ಅನೇಕ ಕಡೆಗಳಲ್ಲಿ ಆಜ್ಞಾತಿಲಂಘನ ಮಾಡಿದಹಾಗೆ ತೋರಿಬರುತ್ತದಲ್ಲಾ ಎಂದರೆ ಅವುಗಳನ್ನೆಲ್ಲಾ ಚನ್ನಾಗಿ ಪರಿಶೀಲಿಸಿ ನೋಡಿದರೆ ಆಜ್ಞಾತಿಕ್ರಮ ಮಾಡಿದ ಅಧರ್ಮ ಪ್ರವರ್ತನೆಯಾಗುವದಿಲ್ಲವು. ಜಡ ಭರತರು ಬಹು ಉದಾಸೀನಭಾವದಿಂದಿದ್ದರು, **ನ ದದರ್ಶ ಚ ಕರ್ಮಾಣಿ** ಎಂದು ಹೇಳಿರುವದು ಯಜ್ಞಾದಿ ಕರ್ಮಗಳು ಅಂತಹ ಯೋಗಸಿದ್ಧರಿಗೆ ಅನಾವಶ್ಯಕವೆಂಬ ಭಾವವು. ಮುಂದೆ **"ಸತಾಂ ಧರ್ಮಮದೂಷಯನ್"** ಎಂದಿರುವದರಿಂದ ನಿತ್ಯ ನೈಮಿತ್ತಿಕಗಳನ್ನು ತ್ಯಾಗಮಾಡಿದರೆಂಬುದಕ್ಕೆ ಪ್ರಮಾಣವಿಲ್ಲವು. ಋಭು ಶುಕ ಸಂವರ್ತಕರೇ ಮೊದಲಾದವರುಗಳ ನಗ್ನಚರ್ಯವು ವ್ರತರೂಪವೆಂದುಭಾವಿಸತಕ್ಕದ್ದು. ಶುಕರು ವಾರಸ್ತ್ರೀಯ ಮನೆಯಲ್ಲಿ ಭೋಜನವು ಮಾಡಿದುದೂ ಬ್ರಾಹ್ಮಣಪಕ್ವವಾದುದೆಂದುಹೇಳಲ್ಪಟ್ಟಿರುತ್ತದೆ. ಅಜಗರೋಪಾಖ್ಯಾನದಲ್ಲಿ **ಜ್ಞಾನನಿಷ್ಠೋವಿರಕ್ತೋವಾ ಮದ್ಭಕ್ತೋವಾ ನ ಪೇಕ್ಷಕಃ। ಸಲಿಂಗಾನಾಶ್ರಮಾಂ ಸ್ತ್ಯಕ್ತ್ವಾ ಚರೇದ ವಿಧಿಗೋಚರಃ"** ಎಂದರೆ ನಾನು ಬ್ರಹ್ಮಚರ್ಯ ವ್ರತದಲ್ಲಿರುವವನು, ನಾನು ಸನ್ಯಾಸಿಯು

**ಶಿಲರ್,(೧)"ತಸ್ಮಾತ್ತ್ವಮುದ್ಧವೋತ್ಸೃಜ್ಯ ಚೋದನಾಂ ಪ್ರತಿಚೋದನಾಮ್।**

ಎಂಬ ಆಶ್ರಮ ವಿಷಯವಾದ ದುರಭಿಮಾನವನ್ನು ಬಿಟ್ಟು ಎಂಬರ್ಥವು, **ಚರೇದ ವಿಧಿಗೋಚರಃ** ಎಂದರೆ ಶಾಸ್ತ್ರೋಲ್ಲಂಘನಮಾಡಿ ನಡೆಯತಕ್ಕದ್ದೆಂಬರ್ಥವಲ್ಲವು, ಶಾಸ್ತ್ರಕ್ಕೆ ಮಾತ್ರವೇ ಗೋಚರನಲ್ಲದೆ ಅನುಷ್ಠಾನದಲ್ಲೂ ಇಟ್ಟುಕೊಂಡವನಾಗಿ ಎಂಬರ್ಥವು. ಸನತ್ಕುಮಾರರು ನಗ್ನರಾಗಿದ್ದರಲ್ಲಾ ಎಂದರೆ ನಿತ್ಯ ಬಾಲ್ಯಾವಸ್ಥೆಯಾದುದರಿಂದ ಹಾಗೆ ಪ್ರವೃತ್ತಿಯು. ಸಂಪೂರ್ಣ ಬ್ರಹ್ಮಭಾವನೆಯಲ್ಲಿ ನಗ್ನವಾಗಿರುವದು ದೋಷವಲ್ಲವು. ಪಶುಪತಿಯು ನಗ್ನನಾಗಿರುವದು ಪಾಶುಪತ ವ್ರತಧರ್ಮವು. ಹೀಗೆ ಹಿಂದಿನವರ ಶಿಷ್ಟಾಚಾರಗಳು ಧರ್ಮವಿರುದ್ಧವಲ್ಲವು. ಆದುದರಿಂದ ಒರು ವಿರುಗನಿಕ್ಕೇ ಎಂದು ಹೇಳಿರುತ್ತಾರೆಂದು ಸಾರಸಂಗ್ರಹ ವ್ಯಾಖ್ಯಾತೃವು ಅಭಿಪ್ರಾಯಪಡುವರು.) ಆ ಶ್ಲೋಕಗಳ ಅರ್ಥವೇನೆಂದರೆ. (೧) **ತಸ್ಮಾತ್** - ಆ ಕಾರಣದಿಂದ, ಯಾವಕಾರಣದಿಂದ ಮೊದಲು ಬಹ್ವಂಗವುಳ್ಳದುದಾಗಿ, ಬಹು ಕಾಲದಮೇಲೆ ಸಾಧ್ಯವಾದ, ದುಷ್ಕರವಾದ ಭಕ್ತಿಯೋಗವನ್ನು ಉಪದೇಶಿಸಲಾಗಿ, ಅಶಕ್ತನೇ, ಹೇಗೆ ಇದನ್ನು ಸಾಧಿಸಲಿ, ಎಂದು ಶೋಕಾವಿಷ್ಟನಾಗಿರುವಾಗ, ಶ್ರೀಕೃಷ್ಣನು ಪರಮ ಕೃಪಯಾ ಸುಕರೋಪಾಯವಾದ ಆತ್ಮನಿಕ್ಷೇಪರೂಪ ಶರಣಾಗತಿಯು ಲಘೂಪಾಯವಾಗಿರುವದರಿಂದ, ಸತ್ಸಂಗಮಾತ್ರದಿಂದಲೇ ಇದನ್ನು ಅನುಷ್ಠಿಸಿ ಪರಮಾತ್ಮನಲ್ಲೇ ಸಕ್ತವಾಗಿರುವ ಮನಸ್ಸುಳ್ಳವರಾದ **"ಬಹವೋ ಮತ್ಪದಂ ಪ್ರಾಪ್ತಾಸ್ತ್ವಾಷ್ಟ್ರಕಾಯಾಧವಾದಯಃ। "ವೃಷಪರ್ವಾ ಬಲಿರ್ಬಾಣೋ ಮಯಶ್ಚಾಥ ವಿಭೀಷಣಃ। ಸುಗ್ರೀವೋ ಹನುಮಾನ್ ಋಕ್ಷೋ ಗಜೋ ಗೃಧ್ರೋ ವಣಿಕ್ಪಥಃ। ವ್ಯಾಧಃ ಕುಬ್ಜಾ ವ್ರಜೇ ಗೋಪ್ಯೋ ಯಜ್ಞಪತ್ನ್ಯಸ್ತಥಾಪರೇ"** (ಭಾ. ೧೧. ೧೨. ೫-೬-೭) ಇವೇ ಮೊದಲಾದವರೇಯಾಗಲಿ ಇನ್ನು ಇತರ ಅಶಕ್ತರೇಯಾಗಲಿ, ವೇದಾಧ್ಯಯನವಿಲ್ಲವೇ ಇರುವವರು, ಉಪಾಸನೆ, ವ್ರತ, ತಪಸ್ಸು, ಯಾವುಗಳನ್ನೂ ಅನುಷ್ಠಿಸದೇ ಇರುವ **ವೈಶ್ಯಾಶ್ಶೂದ್ರಾಸ್ಸ್ತ್ರಿಯೋಽನ್ತ್ಯಜಾಃ"** ಇವರುಗಳೆಲ್ಲಾ ಹೀಗೆ ಲಘೂಪಾಯಾನುಷ್ಠಾನದಿಂದ ನನ್ನನ್ನು ಹೊಂದಿರುತ್ತಾರೆ; ಇಲ್ಲಿ ರಾಕ್ಷಸರಲ್ಲಿ ತ್ವಾಷ್ಟ್ರನು, ವೃತ್ರಾಸುರನು, **ಕಾಯಾಧವಃ** - ಪ್ರಹ್ಲಾದನು, ಹೇಳಲ್ಪಟ್ಟರು. ಮೃಗ ಜನ್ಮಗಳಲ್ಲಿ ಸುಗ್ರೀವನು, ಹನುಮಂತನು, ಋಕ್ಷನೆಂದರೆ ಜಾಂಬವಾನನು, ಪಶುಗಳಲ್ಲಿ ಗಜೇಂದ್ರನು, ಪಕ್ಷಿಗಳಲ್ಲಿ ಗೃಧ್ರನೆಂದರೆ ಜಟಾಯುವೂ, ಹೇಳಲ್ಪಟ್ಟರು. ವಣಿಕ್ಪಥನು ತುಲಾಧಾರನು; ವ್ಯಾಧನು ಧರ್ಮವ್ಯಾಧನು; ವ್ರಜದಲ್ಲಿ ಗೋಪಸ್ತ್ರೀಯರೂ, ಮತ್ತು

(೧) ಭಾಗ. ೧೧. ೧೨. ೧೪. ೧೫.

**ಪ್ರವೃತ್ತಿಂಚ ನಿವೃತ್ತಿಂಚ ಶ್ರೋತವ್ಯಂ ಶ್ರುತಮೇವ ಚ। ಮಾಮೇಕ ಮೇವ ಶರಣ ಮಾತ್ಮಾನಂ ಸರ್ವದೇಹಿನಾಂ । ಯಾಹಿ ಸರ್ವಾತ್ಮಭಾವೇನ**

---

ಆಂಗಿರಸ ಸತ್ರಮಾಡುತ್ತಿದ್ದ ಬ್ರಾಹ್ಮಣರ ಪತ್ನಿಯರೂ ಕೃಷ್ಣನಿಗೂ ಗೋಪಾಲರಿಗೂ ಅನ್ನ, ಭಕ್ಷ್ಯ ಮೊದಲಾದವುಗಳನ್ನು ಕೊಟ್ಟವರು. ಇವರೆಲ್ಲರೂ ಶರಣಾಗತರಾದುದರಿಂದ ಮುಕ್ತಿಯನ್ನು ಹೊಂದಿದರೆಂಬ ಭಾವವು. ಆದುದರಿಂದ **ಹೇ ಉದ್ಧವ**-ಓ ಉದ್ಧವರೇ, **ತ್ವಂ**-ನೀನೂ ಸಹ, ಹಾಗೆ ಶರಣಾಗತಿಯನ್ನನುಷ್ಠಿಸು,ಎಂದು ಹೇಳುತ್ತಾರೆ. **ಚೋದನಾಂ**-ಶ್ರುತಿಯಲ್ಲಿ ವಿಧಿವಾಕ್ಯದಿಂದ ಹೇಳಿರುವ ಕಾಮ್ಯಧರ್ಮಗಳನ್ನೂ, **ಪ್ರತಿಚೋದನಾಂ**-ನಿಷೇಧವಾಕ್ಯಗಳಿಂದ ಹೇಳಿರುವವುಗಳನ್ನೂ,**ಉತ್ಸೃಜ್ಯ**-ಬಿಟ್ಟು, ಎಂದರೆ ವಿಧಿವಾಕ್ಯದ ಮೂಲಕ ಹೇಳಿರುವ ಯಜ್ಞ,ದಾನ,ತಪಸ್ಸುಗಳ ಅನುಷ್ಠಾನವಲ್ಲಿ ಉಪಾಯಬುದ್ಧಿಯನ್ನು ತ್ಯಾಗಮಾಡಿ ಎಂಬರ್ಥವೂ, ಪ್ರತಿಚೋದನದಿಂದ ನಿಷೇಧವಾಕ್ಯಾನುಸಾರ ನಡೆಯುವದರಲ್ಲೂ ಉಪಾಯಬುದ್ಧಿಯನ್ನು ತ್ಯಾಗಮಾಡಿ ಎಂಬರ್ಥವೂ ತೋರಿಬರುತ್ತವೆ ; ಅಥವಾ **ಪ್ರತಿಚೋದನಾಂ** ಎಂದರೆ ಪಾಪಾಚರಣೆಗೆ ಪ್ರಾಯಶ್ಚಿತ್ತರೂಪ ಪ್ರತಿಕ್ರಿಯೆಗಳನ್ನು ತ್ಯಾಗಮಾಡಿ ಎಂಬರ್ಥವನ್ನಾದರೂ ಮಾಡಬಹುದು, ಹಾಗೆಯೇ **ಪ್ರವೃತ್ತಿಂ** - ಯಜ್ಞ ಯಾಗಾದಿ ಪ್ರವೃತ್ತಿಧರ್ಮವನ್ನೂ, **ನಿವೃತ್ತಿಂ**-ಉಪಾಸನಾದಿ ಸನ್ಯಾಸಾಶ್ರಮಾದಿ ನಿವೃತ್ತಿ ಧರ್ಮವನ್ನೂ, **ಶ್ರೋತವ್ಯಂ**-ಈ ಲಘೂಪಾಯವಲ್ಲದೆ ಇತರ ಉಪಾಯ ಉಂಟೆಂದು ಕೇಳತಕ್ಕದ್ದನ್ನೂ,**ಶ್ರುತಂಚ**-ಅದಕ್ಕೆ ಅಙ್ಗವಾಗಿ ಹಿಂದೆ ಹೇಳಿದ ಕರ್ಮಯೋಗಾದಿ ಸಹಕಾರಿಗಳನ್ನೂ,ಹೀಗೆ ಎಲ್ಲವನ್ನೂ, **ಉತ್ಸೃಜ್ಯ** - ತನ್ನ ಸ್ವಂತ ಐದು ಅಙ್ಗಗಳಾದ ಅನುಕೂಲ್ಯಾದಿಗಳಲ್ಲದೆ ಇವು ಯಾವುವೂ ಅಙ್ಗವಲ್ಲದುದರಿಂದ, ಅಙ್ಗತ್ವೇನ ಅವುಗಳನ್ನೆಲ್ಲಾ ಪರಿತ್ಯಾಗಮಾಡಿ, **ಮಾಮೇಕಮೇವ** - ಸರ್ವಜ್ಞನಾಗಿ, ಸರ್ವಶಕ್ತನಾಗಿ, ಆಶ್ರಯಣ ಸೌಕರ್ಯವನ್ನುಂಟುಮಾಡುವ, ಆಶ್ರಿತನ ಅಭೀಷ್ಟವನ್ನು ಸಾಧಿಸಿಕೊಡುವ ಸೌಲಭ್ಯ, ಸೌಶೀಲ್ಯ ಸ್ವಾಮಿತ್ವ ಜ್ಞಾನಶಕ್ತಿ ಪೂರ್ತಿ ಇವೇ ಮೊದಲಾದಕಲ್ಯಾಣ, ಗುಣ ಮಹೋದಧಿಯಾದ ನನ್ನೊಬ್ಬನನ್ನೇ, ಎಂದು ಪ್ರಾಪ್ಯನೂ ಪ್ರಾಪಕನೂ ಉಪೇಯೋಪಾಯವೆರಡೂ ಒಬ್ಬನೇಯಾಗಿರುವ ನನ್ನನ್ನೇ, ನನ್ನನ್ನೇ ಎಂದು ಏವಕಾರದಿಂದ ನೀನು ಕರ್ತೃತ್ವದಲ್ಲೂ ಫಲದಲ್ಲೂ ಏನೊಂದೂ ಅನ್ವಯವಿಟ್ಟುಕೊಳ್ಳದೇ ಆತ್ಮನಿಕ್ಷೇಪವನ್ನೂ ನಾನೇ ಮಾಡಿಸಿವೆನೆಂಬ ಅಭಿಸಂಧಿಯಿಂದ ಎಂಬ ಭಾವವು; ಇದು ಸಾಧ್ಯೋಪಾಯವಾಗಿ ನಾನು ಅನುಷ್ಠಿಸಿ ನಿರ್ವಹಿಸುತ್ತೇನೆ ಎಂಬ ಅಹಂಭಾವವೂ ಇಲ್ಲದೆ ನನ್ನೊಬ್ಬನನ್ನೇ ಎಂಬರ್ಥವು, ಈ ಭಾವವನ್ನೇ ಮುಂದೆ ಉಪಪಾದಿಸಿ ಹೇಳುತ್ತಾರೆ. **ಶರಣಂ ಯಾಹಿ** - ಉಪಾಯವಾಗಿ ಹೊಂದು ಎಂಬ

**ಯಾಸ್ಯಸಿ ಹ್ಯಕುತೋಭಯಮ್" ಎನ್ನು ನಿವೃತ್ತಿಯುಮ್ ಕೊಡ ವಿಡ**

ಭಾವವು; ಇದಕ್ಕಾಗಿ ಆತ್ಮನಿಕ್ಷೇಪವನ್ನು ಮಾಡತಕ್ಕದ್ದೆಂದು ಹೇಳಲ್ಪಟ್ಟಿತು. ಚರಮಶ್ಲೋಕದ **ಶರಣಂ ವ್ರಜ** ಎಂಬುದರ ಉಪದೇಶವು. **ಉತ್ಸೃಜ್ಯ** ಎಂದರೆ ಪರಿತ್ಯಾಗಮಾಡಿ, ಅಜ್ಞತ್ವೇನ ಪರಿತ್ಯಾಗಮಾಡಿ ಎಂದು ಅರ್ಥಮಾಡುವದು ಕಲ್ಪನೆಯಲ್ಲವೋ? ಎಂದು ಆಕ್ಷೇಪಿಸಿದರೆ, ವಿಧಿ ನಿಷೇಧರೂಪದಲ್ಲಿರುವ ಶ್ರುತಿವಾಕ್ಯಗಳೆಲ್ಲಾ ಭಗವಂತನ ಆಜ್ಞೆಗಳು; ತಾನೇ ಶಾಸ್ತ್ರವಾಗಿ ತನ್ನ ಆಜ್ಞೆಯಾಗಿ **"ಸತ್ಯಂ ವದ" ಇತ್ಯೈ. "ಅಹರಹಸ್ಸಂಧ್ಯಾಮುಪಾಸೀತ" "ಅಶ್ರದ್ಧಯಾऽದೇಯಂ"** ಇತ್ಯೈ. **"ಮಾಗೃಧಃ ಕಸ್ಯಸ್ವಿದ್ಧನಮ್"** (ಈಶಾ.) ಇತ್ಯಾದಿ ವಿಧಿ ನಿಷೇಧಗಳನ್ನು ಸ್ವರೂಪತಃ ಪರಿತ್ಯಾಗಮಾಡು ಎಂದು ತನ್ನ ಆಜ್ಞೆಗೆ ವಿರೋಧವಾಗಿ ತಾನೇ ಉಪದೇಶಿಸುವನೋ? ಆದುದರಿಂದ ಪ್ರಪದನಕ್ಕೆ ಅವು ಅಜ್ಞವಲ್ಲದುದರಿಂದಅಜ್ಞತ್ವೇನ ತ್ಯಾಗಮಾಡು ಎಂಬ ಭಾವವು. ಈ ಶ್ಲೋಕಗಳು ಗೀತಾ ಚರಮಶ್ಲೋಕದ ಉಪಪಾದನೆಗಳೇವಿನಾ ಅನ್ಯಥಾ ಅಲ್ಲವು, ಯಾವ ಅನುಸಂಧಾನದಿಂದ ಮಾಡತಕದ್ದೆಂದರೆ ಉಪದೇಶಿಸುತ್ತಾರೆ.—**"ಸರ್ವದೇಹಿನಾಂ ಆತ್ಮಾನಂ" "ಸರ್ವಸ್ಯ ಶರಣಂ ಸುಹೃತ್" "ಸರ್ವಲೋಕ ಶರಣ್ಯಾಯ"** ಯಾವವಿಧವಾದ ಉತ್ಕೃಷ್ಟಾಪಕೃಷ್ಟಗಳನ್ನೂ ಎಣಿಸದೆ ಎಲ್ಲಾ ಪ್ರಾಣಿಗಳು ನನ್ನನ್ನು ಆಶ್ರಯಿಸಿದರೆ ಸಾಕೆಂದು ಅವಸರ ಪ್ರತೀಕ್ಷೆಯನ್ನು ಮಾಡುತ್ತಾ ಇರುವವಕ್ಕಾಗಿಯೇ ಸಮಸ್ತ ಪ್ರಾಣಿಗಳಿಗೂ ಆತ್ಮವಾಗಿ ಅವರುಗಳ ಹೃದಯದಲ್ಲೇ ವಸಿಸುವನಾಗಿರುವ ನನ್ನನ್ನು, **ಸರ್ವಾತ್ಮಭಾವೇನ** ಸರ್ವ ಪ್ರಾಣಿಗಳ ಮನಸ್ಸು ಮೊದಲಾದವುಗಳಿಗೆ ಪ್ರೇರಕನಾಗಿರುವದರಿಂದ, **ಪರಾತ್ತು ತಚ್ಛ್ರುತೇಃ** ಎಂದು ವ್ಯಾಸಸೂತ್ರದಲ್ಲಿರುವಹಾಗೆ, ಭಗವಂತನಿಗೆ ತಾನು ಪರತಂತ್ರನೆಂದು ಅನುಸಂಧಾನ ಮಾಡುತ್ತಾ, ಸ್ವತಂತ್ರ ಕರ್ತೃತ್ವಬುದ್ಧಿಯಿಲ್ಲದೆ, ಅಥವಾ ಸರ್ವನಾದ ಪರಮಾತ್ಮನೇ, **ಆತ್ಮ** – ತನಗೂ ಆತ್ಮಾ ಎಂಬ **ಭಾವೇನ**-ಜ್ಞಾನದಿಂದ ಅದು ಹೇಗೆಂದರೆ ಪರಮಾತ್ಮನಿಗೂ ತನಗೂ ನವ ವಿಧ ಪರಸ್ಪರ ಸಂಬಂಧ ಉಂಟೆಂಬ ಜ್ಞಾನದಿಂದ **"ಶರಣಂ ಯಾಹಿ"** ಎಂದು ಪರಮ ಹಿತೋಪದೇಶವನ್ನು ಮಾಡಿದರು; ಇಲ್ಲಿ **ಯಾಹಿ** - ಎಂಬುದು ಗತ್ಯರ್ಥವಾಗಿ ಬುದ್ಧ್ಯರ್ಥದಲ್ಲಿ ಉಪಯೋಗಿಸಿರುವದರಿಂದ ಉಪಾಯವನ್ನಾಗಿ ತಿಳಿ ಎಂಬರ್ಥವೇ ಸ್ವಾರಸ್ಯವು. ಹೀಗೆ ಭರನ್ಯಾಸ ಮಾಡಿದರೆ ಫಲವೇನೆಂಬುದನ್ನು ತಿಳಿಸುತ್ತಾರೆ—**ಯಾಸ್ಯಸಿ ಹ್ಯಕುತೋಭಯಮ್** - ಹೀಗೆ ನೀನು ಸದ್ಗುರು ಮೂಲಕ ನನ್ನನ್ನು ಶರಣು ಹೊಂದಿದರೆ, **ಅಕುತೋಭಯಮ್** - ಯಾರಿಂದಲೇಯಾಗಲಿ, ಯಾವ ಕಡೆಯಿಂದಲಾಗಲಿ, ಯಾವ ಕಾರಣದಿಂದಲಾಗಲಿ ಭಯವಿಲ್ಲದ

**ಚೊನ್ನಪಡಿಯಾಲುಮ್, "ಸರ್ವಧರ್ಮಾನ್ ಪರಿತ್ಯಜ್ಯ" ಎಂಗಿರವಿಡತ್ತಿಲ್ "ಸರ್ವ" ಶಬ್ದತ್ತುಕ್ಕು ಸಙ್ಕೋಚಿಯಾಮೈಕ್ಕಾಗವುಮ್, ನಿವೃತ್ತಿರೂಪ ಧರ್ಮಙ್ಗಳೈಯುಮ್ ಕೂಡ ವಿಡವೇಣ್ಡುಗೈಯಾಲ್, ಅವತ್ತೈ ವಿಡುಗೈಯಾವದು-ನಿಷೇಧಿತ್ತವೈ ಯೆಲ್ಲಾತ್ತಿಲುಮ್ ಯಥಾಶಕ್ತ್ಯನುಷ್ಠಾನಮಾಗೈಯಾಲ್, ಇನ್ದ ನಿಷಿದ್ಧಾನುಷ್ಠಾನಮ್ ವಿಧಿಬಲಪ್ರಾಪ್ತಮಾಗೈಯಾಲೇಪ್ರಪನ್ನನುಕ್ಕು ಬುದ್ಧಿಪೂರ್ವೋತ್ತರಾಘಮುಮ್ ಲೇಪಿಯಾದೆನ್ರು ಭ್ರಮಿಪ್ಪಾರ್‌ಗಳ್.**

---

ಎಂದರೆ ಪುನಸ್ಸಂಸಾರಭಯವು, ಯಾವನಿಂದ ಉಂಟಾಗುವದಿಲ್ಲವೋ ಅಂತಹನನ್ನು, **ಯಾಕ್ಕಿ** - ಹೊಂದುವಿ, ಹಿ - ಸತ್ಯವು, ಸಂದೇಹವು ಈಷದಪಿ ಇಲ್ಲವು. ನಾನೇ ಮುಕ್ತಿಯನ್ನು ಹೊಂದಿಸುವವನು, ನಾನೇ ಮುಕ್ತ ಭೋಗ್ಯನು ಎಂದು ಉಪದೇಶಿಸಲ್ಪಟ್ಟಿತು. ಈ ಎಂಡು ಶ್ಲೋಕಗಳು **"ಸರ್ವಧರ್ಮಾನ್ ಪರಿತ್ಯಜ್ಯ"** ಎಂಬ ಚರಮಶ್ಲೋಕದ ಉಪಪಾದನೆಗಳು ಎಂದು ಭಾವಿಸತಕ್ಕದ್ದು. ಸ್ವಾಮಿ ಶ್ರೀ ಕೃಷ್ಣರೇ ತಮ್ಮ ಗೀತಾ ಶ್ಲೋಕದ **ಸರಿಯಾದ** ಅಭಿಪ್ರಾಯವನ್ನೇ ತಾವೇ ತಿಳಿಸಿರುತ್ತಾರೆ. ಈ ಶ್ಲೋಕಗಳಲ್ಲಿ ಪೂರ್ವಪಕ್ಷವನ್ನು ಹೇಗೆ ತರುವರೆಂಬುದನ್ನು ಪ್ರದರ್ಶಿಸುತ್ತಾರೆ.—**ಎನ್ರು ನಿವೃತ್ತಿಯೈಯುಮ್ ವಿಡಚ್ಚೊನ್ನಪಡಿಯಾಲುಮ್** - ವಿಧಿವಿಹಿತವಾಗಿ ಚೋದನಾ ರೂಪವಾದುದು ಪ್ರವೃತ್ತಿಯಾಯಿತು, ವಿಧಿವಿಹಿತವಲ್ಲದ ಅಧರ್ಮವೇಗ ಪ್ರತಿಚೋದನಾಶಬ್ದದಿಂದ ಹೇಳಲ್ಪಟ್ಟುದುದು, ಅದರ ನಿವೃತ್ತಿ ಎಂದು ಅರ್ಥಮಾಡಿ, ಅಂತಹ ಅಧರ್ಮ ತ್ಯಾಗರೂಪ ನಿವೃತ್ತಿಯನ್ನೂ ಬಿಡು ಎಂದು ಹೇಳಿರುವದರಿಂದ, ಪ್ರಪನ್ನನು ಬುದ್ಧಿ ಪೂರ್ವಕವಾಗಿ ಅಧರ್ಮಮಾಡಿದರೂ ಬಾಧಕವಿಲ್ಲವೆಂಬಭಿಪ್ರಾಯದಿಂದ ಅಧರ್ಮತ್ಯಾಗದಿಂದ ನಿವೃತ್ತಿಯನ್ನು ಉಪದೇಶಿಸಿರುವದರಿಂದ **"ಸರ್ವ ಧರ್ಮಾನ್ ಪರಿತ್ಯಜ್ಯ"ಎಙ್ಗಿರವಿಡತ್ತಿಲ್** ಎಂದುಪದೇಶಿಸುವ ಸ್ಥಳದಲ್ಲಿ **ಸರ್ವಶಬ್ದ ಸಙ್ಕೋಚಿಕ್ಕಾಮೈಯುಮ್** - ಸರ್ವ ಧರ್ಮವೆಂದರೆ ಎಲ್ಲಾ ಧರ್ಮಗಳೂ ಎಲ್ಲಾ ಪ್ರವೃತ್ತಿನಿವೃತ್ತಿ ರೂಪಧರ್ಮಗಳು ಎಂದು ಅರ್ಥಮಾಡುವದೇ ನ್ಯಾಯವೆಂಬ ಭಾವದಿಂದ, ಸರ್ವ ಶಬ್ದಕ್ಕೆ ಸಂಕೋಚವನ್ನು ಹೇಳದೇ ಇರುವದಕ್ಕಾಗಿಯೂ, **ನಿವೃತ್ತಿರೂಪ ಅಧರ್ಮಙ್ಗಳೈಯುಮ್ ಕೂಡ, ವಿಡುವೇಣ್ಡುಗೈಯಾಲೇ** - ಹೀಗೆ ನಿವೃತ್ತಿಧರ್ಮಗಳನ್ನೂ ಕೂಡ ಬಿಡತಕ್ಕದ್ದಾಗಿರುವದರಿಂದ, **ಅತ್ತೈವಿಡುಗೈಯಾವದು**-ಅಂತಹ ನಿವೃತ್ತಿಧರ್ಮವನ್ನು ಬಿಡುವದು ಎಂದರೇನೆಂದು ಪ್ರಶ್ನಿಸಿದರೆ, **ನಿಷೇಧಿತ್ತವೈ ಎಲ್ಲಾತ್ತಿಲುಮ್ ಯಥಾಶಕ್ತ್ಯನುಷ್ಠಾನಮಾಗೈಯಾಲೇ** - ನಿಷೇಧಿಸಲ್ಪಟ್ಟವು ಯಾವುವೆಂದರೆ ಆಜ್ಞೋಲ್ಲಂಘನ ರೂಪವಾದ ಅಧರ್ಮಗಳು

ಪ್ರಪನ್ನಾನಾಂ ಬುದ್ಧಿಪೂರ್ವೋತ್ತರಾಘಾಽಶ್ಲೇಷ ಇತಿ ವಾದಂ ನಿರಸ್ಯತಿ.

ಇದು ಮಿಗುವುಮ್ ಪರಿಹಸನೀಯಮ್ (ಪರಿಹರಣೀಯಮ್);

ಇಂತಹ ಅಧರ್ಮಗಳನ್ನೆಲ್ಲಾ ಯಥಾಶಕ್ತಿ ಪ್ರಪನ್ನನು ಅನುಷ್ಠಿಸಬಹುದಾದುದ ರಿಂದ, ಇಂದ ನಿಷಿದ್ಧಾನುಷ್ಠಾನಮ್ - ಇಂತಹ ಅಧರ್ಮಾನುಷ್ಠಾನವು,ವಿಧಿಬಲ ಪ್ರಾಪ್ತಮಾಗೈಯಾಲೇ-"ಸರ್ವಧರ್ಮಾನ್ ಪರಿತ್ಯಜ್ಯ"ಎಂಬ ವಿಧಿಬಲದಿಂದುಂಟಾದು ದರಿಂದ, ಪ್ರಪನ್ನನುಕ್ಕು - ಪ್ರಪನ್ನನಿಗೆ, ಬುದ್ಧಿಪೂರ್ವೋತ್ತರಾಘವೂಕೂಡ, ಲೇಪಿಯಾದೆನ್ರು ಭ್ರಮಿಪ್ಪಾರ್ಗಳ್ - ಅಂಟುವದಿಲ್ಲವೆಂದು ಶಾಸ್ತ್ರವನ್ನು ಚೆನ್ನಾಗಿ ವಿಮರ್ಶಿಸಿ ತಿಳಿಯದೆ ಇರುವ ನಮ್ಮಲ್ಲೀ ಕೆಲವರು ಭ್ರಮಿಸುವರು.

ಪ್ರಪನ್ನರಿಗೆ ಬುದ್ಧಿಪೂರ್ವೋತ್ತರಾಘದ ಲೇಪನೆ ಇಲ್ಲವೆಂಬ ವಾದದನಿರಸನವು.

ಇದು - ಈ ವಾದವು, ಮಿಗವುಮ್ - ಹೆಚ್ಚಾಗಿ, ಪರಿಹಸನೀಯಮ್– ಹಾಸ್ಯಾಸ್ಪದವಾದುದು ; ಪರಿಹರಣೀಯಮ್ ಎಂಬುದು ಪಾಠಾಂತರವು, ಪರಿ ಹರಿಸಲು ಯೋಗ್ಯವಾದುದು, ಏಕೆಂದರೆ ಇಂತಹ ಅನುಷ್ಠಾನವು ತುಂಬಾ ಅನರ್ಥ ವನ್ನುಂಟುಮಾಡುವದರಿಂದ, ಅಂತವರ ಭ್ರಮರೂಪ ಜ್ಞಾನವನ್ನು ನಿರಸನ ಮಾಡುವದು ಪರಮಹಿತವನ್ನುಂಟುಮಾಡಿದಹಾಗೆ ಎಂಬ ತಾತ್ಪರ್ಯವು. ಏಕೆಂದರೆ ಇಂತಹ ಅಭಿಸಂಧಿಯುಂಟಾಗಬೇಕಾದರೆ ಏನೋ ಕಾರಣದಿಂದ ಶರಣಾ ಗತಿಯು ಫಲಿಸದೆ ಸಂಸಾರದಲ್ಲೇ ಪುನಃ ಮುಳುಗಿಸಲು ಸಹಕಾರಿಯಾಗಬಹುದು. ಸ್ವಾಮಿ ದೇಶಿಕರವರು ಅಪರಾಧಪರಿಹಾರಾಧಿಕಾರದಲ್ಲಿ "ಧೀಪೂರ್ವೋ ತ್ತರಪಾಪ್ಮನಾ ಮಜನನಾತ್" ಭರನ್ಯಾಸ ನಿಷ್ಪತ್ತಿಯಾಗಿರುವವನಿಗೆ ಕರುಣಾ ಸಾಗರನ ಕೃಪೆಯಿಂದ ಬುದ್ಧಿ ಪೂರ್ವೋತ್ತರಾಘದಲ್ಲಿ ಮನಸ್ಸೇ ಉಂಟಾಗುವದಿಲ್ಲ ವೆಂದು ಹೇಳಿರುತ್ತಾರೆ. ಆದುದರಿಂದ ಪುನಃ ಸಂಸಾರ ಬೇಡವೆಂದು ಪ್ರಾರ್ಥಿಸು ತ್ತಿರುವ ಮುಮುಕ್ಷುವು ಸಂಸಾರ ಬಂಧಕ್ಕೆ ಏನುಬೇಕೋ ಅದನ್ನು ತಾನೇ ಮಾಡಿ ಕೊಳ್ಳುವದರಿಂದ, ಉರಿಯುವ ಕೊಳ್ಳಿಯಿಂದ ತಲೆಯನ್ನು ಕೆರೆದುಕೊಂಡಹಾಗೆ ತುಂಬಾ ಪರಿಹರಣೀಯಂ ಎಂದು ಹೇಳಿರುತ್ತಾರೆ. ಈಗ ಪೂರ್ವಪಕ್ಷಿಗಳವಾದವು ಶಾಸ್ತ್ರ ಮರ್ಯಾದೆಯನ್ನು ಅತಿಕ್ರಮಿಸಿ, ಲೋಕವಿರುದ್ಧವಾದ ವಿಷಯವನ್ನು ಒಳ ಗೊಂಡಿರುವದರಿಂದ ಹಾಸ್ಯಕ್ಕೆ ಗುರಿಯಾದ ವಿಷಯವೆಂಬ ಭಾವನೆಯಿಂದ ಪರಿ ಹಸನೀಯಮ್ ಎಂಬ ಪ್ರಯೋಗವಾದರೂ ಆಗಬಹುದು. ಪ್ರಪನ್ನನ ಅಧ ರ್ಮವು ಅಧರ್ಮವಲ್ಲವು, ಮಿಕ್ಕವರದುಮಾತ್ರ ಅಧರ್ಮವೆಂದರೆ, ಯಾರೊಬ್ಬರೂ ಒಪ್ಪತಕ್ಕಮಾತಲ್ಲವು. ಆತನು ಆಗತ್ಯ ಬುದ್ಧಿಪೂರ್ವಕವಾಗಿ ಅಧರ್ಮವನ್ನು

**ಎಙ್ಗನೇ ಯೆನ್ನಿಲ್ - ಅಲೇಪಕರ್ ಪಾಪಂ ಪಣ್ಣಿನಾಲ್ ಲೇಪಿಯಾದೆನ್ಬರ್ಗಳ್; ಇವರ್ಗಳ್ ಪಾಪಮವಶ್ಯಮ್ ಅನುಷ್ಠಿಕ್ಕವೇಣುಮೆನ್ನಾರ್ಗಳಾ**

ಮಾಡಬಹುದು ಎಂದರೆ ಪರಿಹಸನೀಯವೇ ಸರಿ ಎಂದು ಹೇಳಬೇಕಾಗುತದೆಂಬ ಭಾವವು. ಆದೂ ಅಲ್ಲದೆ ಲೀಲಾ ಸಾರಥಿಯ ಪರಮಾದ್ಭುತವಾಕ್ಯವಾದ ಚರಮ ಶ್ಲೋಕದಿಂದ ಇಂತಹ ಅಪಾರ್ಥವನ್ನು ತರ್ಕದಿಂದ ಸಾಧಿಸಿರುವದ ಹಾಸ್ಯಾಸ್ಪದವಲ್ಲದೆ ಬೇರೆ ಯಲ್ಲವೆಂಬುದೂ ತೋರಿಬರುತ್ತದೆ. ಅದು ಹೇಗೆ ಪರಿಹಸನೀಯ ವೆಂದರೆ, ಎಙ್ಗನೇ ಯೆನ್ನಿಲ್ ಎಂದಾರಂಭಿಸಿ ಹೇಳುತ್ತಾರೆ. ಅಲೇಪಕರ್ - ಬುದ್ಧಿಪೂರ್ವೋತ್ತರಾಘಗಳು ಲೇಪಿಸುವದಿಲ್ಲವೆಂದು ಹೇಳುವವರು, ಇವರು ಚಾರ್ವಾಕರಾಗಲಿ, ಅಥವಾ ಅದ್ವೈತ ಸಿದ್ಧಾನ್ತರೀತ್ಯಾ ತತ್ವಮಸ್ಯಾದಿ ವಾಕ್ಯಾರ್ಥಜ್ಞಾನ ಉಂಟಾಗಿ ಜೀವನ್ಮುಕ್ತರಾಗುತ್ತಾರೆಂದು ಹೇಳುವವರು, ಚಾರ್ವಾಕರಿಗೆ ಪಾಪವೆಂಬುದೇ ಇಲ್ಲವು, ಅದ್ವೈತಿಗಳಿಗೆ ಯಾವಾಗ, ತಾನೇ ಪರಮಾತ್ಮನೆಂಬ ಜ್ಞಾನ ಉಂಟಾಯಿತೋ, ಆಗ ಪಾಪಲೇಪನೆಯೇ ಇಲ್ಲವೆಂದು ಹೇಳುವರು, ಇವರುಗಳು, ಪಾಪಂಪಣ್ಣಿನಾಲ್ - ಪಾಪವನ್ನು ಮಾಡಿದರೆ, ಲೇಪಿಯಾದೆನ್ಬರ್ಗಳ್-ಲೇಪಿಸುವದಿಲ್ಲವೆಂದು ಹೇಳುವರು, ಇವರ್ಗಳ್-ಈ ತಮ್ಮ ಪೂರ್ವಪಕ್ಷಿಗಳಾದರೋ, ಪಾಪಮವಶ್ಯಮ್ ಅನುಷ್ಠಿಕ್ಕವೇಣುಮೆನ್ನಾರ್ಗಳಾಯಿತ್ತು-ಪ್ರಪನ್ನನು ಅವಶ್ಯಕವಾಗಿ ಪಾಪಗಳನ್ನು ಅನಿಷ್ಟಿಸತಕ್ಕದ್ದೆಂದು ಹೇಳಿದಂತಾಯಿತು. ಆ ಕಾರಣದಿಂದಲೇ ಪರಿಹಸನೀಯವೆಂಬ ಭಾವವು. ಚಾರ್ವಾಕರಿಗೆ ನಿಷಿದ್ಧವಾದ ಅಧರ್ಮವೇ ಇಲ್ಲವಾದುದರಿಂದ ತನ್ನ ಸುಖಕ್ಕಾಗಿ ಅಧರ್ಮವಾದುದನ್ನು ಅನುಷ್ಠಿಸಬಹುದೆಂದು ಹೇಳಿದರು. ಅದ್ವೈತಿಗಳಿಗಾದರೋ ವಾಕ್ಯಜನ್ಯಜ್ಞಾನ ಉಂಟಾದ ನಂತರ ಪ್ರಪನ್ನನಾಗುವದರಿಂದ ಬುದ್ಧಿ ಪೂರ್ವೋತ್ತರಾಘವು ಲೇಪಿಸುವದಿಲ್ಲವು ಎಂದು ಹೇಳುತ್ತಾರೆ. ನಮ್ಮಲ್ಲಿ ಕೆಲವರಾದರೋ ಶ್ರೀ ಯತಿವರ್ಯರ ಸಿದ್ಧಾಂತಕ್ಕೆ ಒಳಪಟ್ಟವರಾಗಿ, ಅವರೇ ಕಂಠೋಕ್ತವಾಗಿ, "ತದಧಿಗಮ ಉತ್ತರ ಪೂರ್ವಾಘಯೋರಶ್ಲೇಷ ವಿನಾಶಾತ್" ಎಂಬ ಬ್ರಹ್ಮಸೂತ್ರದ (೪. ೧. ೧೩.) ಭಾಷ್ಯದಲ್ಲಿ ಬ್ರಹ್ಮವಿದ್ಯೆಯ ಉಪಾಸನಾರಂಭವು ಲಭಿಸಿದ ಪ್ರಪನ್ನನಿಗೆ ಹಿಂದಿನ ಪಾಪಗಳು ನಾಶವಾಗುತ್ತವೆ, ಮುಂದಿನ ಪಾಪಗಳು ಲೇಪಿಸಿದಲ್ಲವು ಎಂಬುದರ ವ್ಯಾಖ್ಯಾನದಲ್ಲಿ, ಮುಂದಿನ ಪಾಪಗಳು ಲೇಪಿಸುವದಿಲ್ಲವೆಂದು ಹೇಳಿರುವದು ಪ್ರಾಮಾದಿಕವಾಗಿ ಪ್ರಾಪ್ತವಾದ ಪಾಪಗಳ ವಿಷಯವೇ ವಿನಾ ಬುದ್ಧಿಪೂರ್ವಕವಾಗಿ ಮಾಡಿದ ಪಾಪಗಳ ವಿಷಯವಲ್ಲವೆಂದು "ತದಿದ ಮಶ್ಲೇಷ ವಚನಂ ಪ್ರಾಮಾದಿಕ ವಿಷಯಂ ಮನ್ತವ್ಯಮ್" ಎಂದು ಸುವ್ಯಕ್ತವಾಗಿ ತಿಳಿಸಿದ್ದರೂ, ಪ್ರಪ

ಯಿನ್ನು ಇದು (೧)ಭಕ್ಷ್ಯೋತ್ತಮ ಪ್ರತಿಚ್ಛನ್ನಂ ಮತ್ಸ್ಯೋಬಡಿಶಮಾಯಸಂ। ಅನ್ನಾಭಿಲಾಷೀಗ್ರಸತೇ ನಾನುಬಂಧ ಮವೇಕ್ಷತೇ" ॥ ಎಚ್ಚ್ಗರ ಕಣಕ್ಕಾವ್.

ನ್ನನು ಬುದ್ಧಿ ಪೂರ್ವಕವಾಗಿ ಮಾಡಿದ ಪಾಪವು ಲೇಪಿಸುವದಿಲ್ಲವೆಂದು ಶ್ರೀ ಋಷಿ ವರ್ಯರ ವಾಕ್ಯಕ್ಕೆ ವಿರುದ್ಧವಾಗಿ ಹೇಳುವದು "ಪರಿಹಸನೀಯವೆಂಬ ಭಾವವು. ಇಷ್ಟೇ ಅಲ್ಲವು. ಸರ್ವಧರ್ಮಾ ಪರಿತ್ಯಜ್ಯ ಎಂಬುದು ವಿಧಿಯಾಗಿ ಭಾವಿಸಿದರೆ ನಿಷಿದ್ಧ ಧರ್ಮವನ್ನು ಮಾಡದಿರೋಣದರ ಪರಿತ್ಯಾಗವು ವಿಧಿಯಾದರೆ ಅವಶ್ಯಕ ವಾಗಿ ಪ್ರಪನ್ನನು ನಿಷಿದ್ಧ ಧರ್ಮವನ್ನು ಮಾಡಬೇಕೆಂದು ಏರ್ಪಡುತ್ತದೆ. ಇದು ಇನ್ನೂ ಪರಿಹಸನೀಯವು. ಮತ್ತು ಅಂತಹ ಬುದ್ಧಿ ಪೂರ್ವಾಘಗಳಿಗೆ ಭಕ್ತಿ ಯೋಗಿಗೆ ಉಪಾಸನವನ್ನೇ ಪ್ರಾಯಶ್ಚಿತ್ತವಾಗಿಯೂ ಪ್ರಪನ್ನನಿಗೆ ಪಾಪನಿವಾರಣ ಕ್ಕಾಗಿ ಶರಣಾಗತಿಯನ್ನು ಪ್ರಾಯಶ್ಚಿತ್ತವಾಗಿಯೂ ವಿಧಿಸುವ ಪ್ರಮಾಣಗ ಳಿಗೆ ಸಾರ್ಥಕ್ಯವಿಲ್ಲವಾಗಿಯೂ ಪರಿಹಸನೀಯವು. ಈ ಪೂರ್ವಪಕ್ಷವಾದವು ಹೇಗಾಯಿತು ಎಂದರೆ ಒಂದು ದೃಷ್ಟಾಂತ ಮೂಲಕ ತಿಳಿಸುತ್ತಾರೆ.—ಪೂರ್ವ ಪಕ್ಷಿಯು ಬುದ್ಧಿಪೂರ್ವೋತ್ತರಾಘವನ್ನು ಮಾಡುವದರಿಂದ ಪ್ರತ್ಯವಾಯವಿಲ್ಲ ವೆಂದು ಭಾವಿಸುವನು. ಆದರೆ ಅದು ಅನರ್ಥಾವಹವಾದುದೇ ಎಂಬುದನ್ನು ಮಹರ್ಷಿವಾಕ್ಯದಿಂದ ಪ್ರದರ್ಶಿಸುತ್ತಾರೆ. (೧) "ಭಕ್ಷ್ಯೋತ್ತಮ ಪ್ರತಿಚ್ಛನ್ನಂ- ಮತ್ಸ್ಯಕ್ಕೆ ಪ್ರಿಯವಾದ ಉತ್ತಮ ಆಹಾರವಾದ ಮಾಂಸಾದಿಗಳಿಂದ ಮರೆಸಲ್ಪಟ್ಟ ಆಯಸಮ್ - ಕಬ್ಬಿಣದ, ಬಡಿಶಮ್ - ಮತ್ಸ್ಯ ಬಂಧನವನ್ನು ಇದಕ್ಕೆ ಗಾಣ ವೆಂದು ಹೇಳುತ್ತಾರೆ; ಬೆಸ್ತರವನು ನೀರಿನಲ್ಲಿ ಹಾಕಿರುವ ಈ ಮಾಂಸದಿಂದ ಮುಚ್ಚ ಲ್ಪಟ್ಟ ಗಾಣವನ್ನು, ಅನ್ನಾಭಿಲಾಷೀ - ಆಹಾರಾರ್ಥಿಯಾದ ಮತ್ಸ್ಯಃ - ಮೀನು, ಗ್ರಸತೇ - ವೇಗದಿಂದ ಬಂದು ಬಾಯಿಂದ ಹಿಡಿದುಕೊಳ್ಳುತ್ತದೆ, ಆದರೆ ಅನು ಬಂಧಂ – ಅದರಿಂದ ಪ್ರಾಪ್ತವಾಗುವ ಅನರ್ಥವನ್ನು, ನಾವೇಕ್ಷತೇ - ನೋಡು ವದಿಲ್ಲವು, ಎಚ್ಚ್ಗರಕಣಕ್ಕಾವ್ - ಎಂಬುವ ಲೆಖ್ಖಕ್ಕೆ ಸರಿಹೋಗುತ್ತದೆ. ಎಂದರೆ ಹಾಗೆ ದೃಷ್ಟಾಂತವನ್ನು ಧಾರಾಳವಾಗಿ ಹೇಳಬಹುದೆಂಬ ಭಾವವು. ಅದು ಹೇಗೆಂದರೆ ಪ್ರಪನ್ನನೆಂದು ತೋರುವವನು ಅವಶ್ಯಕವಾಗಿ ಬುದ್ಧಿ ಪೂರ್ವಾ ಘವನ್ನು ಅನುಷ್ಠಿಸಬೇಕೆಂದರೆ, ಐಹಿಕ ಕಾಮನೆಗಳಿಂದ ಅಂತಹ ಅಧರ್ಮಗ ಳನ್ನು, ಅದರಿಂದ ತನಗೇನು ಕೇಡು ಸಂಭವಿಸುವದಿಲ್ಲವೆಂಬ ನಂಬಿಕೆಯಿಂದ ಮಾಡುತ್ತಾನೆ. ಮತ್ಸ್ಯವೂ ಕೂಡ ಕಬ್ಬಿಣದ ಮತ್ಸ್ಯವೇಧನಕ್ಕೆ ಸಿಕ್ಕಿಸಿರುವಭಕ್ಷ್ಯ ದಿಂದ ತನಗೆ ಪ್ರತ್ಯವಾಯ ಉಂಟಾಗುವದಿಲ್ಲವೆಂದು ನಂಬಿಯೇ ಹೇಗೆ ಗಾಣಕ್ಕೆ

(೧) ಭಾರ. ಉದ್ಯೋಗ. ೩೪. ೧೩.

**ಇನ್ಯೆ ಎಲ್ಲಾತ್ತಿಯುಮ್ ನಿನ್ಯೆತ್ತು (೨) "ಅಹೋಬತ ಮಹತ್ಕಷ್ಟಂ ವಿಪರೀತ ಮಿದಂ ಜಗತ್ । ಯೇನಾಪತ್ರಪತೇ ಸಾಧು ರಸಾಧು ಸ್ತೇನ ತುಷ್ಯತಿ"ಎನ್ರು ಮಹರ್ಷಿ ನಿರ್ವಿಣ್ಣನಾನಾರ್.**

ಬಂದು ಬಿದ್ದು ಮರಣರೂಪ ಅನರ್ಥವನ್ನು ಹೊಂದುತ್ತದೋ, ಹಾಗೆಯೇ ಈತನೂ ಸಹ ಬುದ್ಧಿಪೂರ್ವಕವಾಗಿ ಪಾಪಾನುಷ್ಠಾನದಿಂದ ಪ್ರತ್ಯವಾಯವಿಲ್ಲವೆಂದು ತಿಳಿದು ಅನರ್ಥಗಳಿಗೆ ಗುರಿಯಾಗುವನೆಂಬ ಭಾವವು. ಆದುದರಿಂದ ಅದರಂತೆಯೇ ಇದೂ ಎಂದು ಹೇಳುವದಕ್ಕಾಗಿ ಎಜ್ಗಿರಕಣಕ್ಕಾಕುಮ್ ಎಂಬ ಪ್ರಯೋಗವು. ಇದು ಯಾವ ಪ್ರಕರಣದಲ್ಲಿ ಹೇಳಲ್ಪಟ್ಟಿದೆ ಎಂದರೆ.—ಧೃತರಾಷ್ಟ್ರನು ತನ್ನ ಮಕ್ಕಳಿಗೆ ಶ್ರೇಯಸ್ಸಿನ ಸಾಧನವು ಹೇಗೆ ಉಂಟಾದೀತೆಂದು ಮಹಾಭಾಗವತರಾದ ವಿದುರರನ್ನು ಕುರಿತು ಪ್ರಶ್ನಿಸಿದಾಗ, ವಿದುರರು ಯುಧಿಷ್ಠಿರಾದಿಗಳಿಗೆ ರಾಜ್ಯದಾನವೇ ಶ್ರೇಯಸ್ಸಿನ ಸಾಧಕವೆಂದು ಹೇಳುವಸಂದರ್ಭದಲ್ಲಿ ವಿದುರರ ನೀತಿಬೋಧನೆಯು. 'ಇನ್ಯೆ ಎಲ್ಲಾತ್ತಿಯುಮ್ ನಿನ್ಯೆತ್ತು - ಇಂತಹ ಶಾಸ್ತ್ರವಿರುದ್ಧವಾದಗಳನ್ನೆಲ್ಲಾ ಮನಸ್ಸಿನಲ್ಲಿಟ್ಟೇ (೨) "ಯೇನ - ಯಾವ ಅಧರ್ಮಾನುಷ್ಠಾನದಿಂದ, **ಸಾಧುಃ** - ಶಾಸ್ತ್ರಮರ್ಯಾದಾನುಗುಣವಾಗಿ, ವಿಧಿ ನಿಷೇಧವಾಕ್ಯಾನುಸಾರವಾಗಿ, ನಡೆಯುವ ಸತ್ಪುರುಷನು, **ಅಪತ್ರಪತೇ** - ಲಜ್ಜಿಸುತ್ತಾನೋ, ಬರೀ ಲಜ್ಜೆ ಮಾತ್ರವೇ ಅಲ್ಲವು, ಇಂತಹ ನಾಚಿಕ್ಕೇಡಾದ ಕೆಲಸ ನನ್ನಂತಹ ಶಾಸ್ತ್ರಜ್ಞಾನವಿರುವನನು ಮಾಡಬಹುದೇ ಎಂದು ಹೇಳಿ ನಿವೃತ್ತನಾಗುತ್ತಾನೋ, **ತೇನ** - ಅಂತಹ ಲಜ್ಜಾವಹ ಅನುಷ್ಠಾನದಿಂದಲೇ, **ಅಸಾಧುಃ** - ಸತ್ಪುರುಷನಲ್ಲದವನು **ತುಷ್ಯತಿ** - ಲಜ್ಜಿಸುವದಕ್ಕೆ ಬದಲಾಗಿ ಸಂತೋಷಿಸುವನು, ಆದುದರಿಂದಲ್ಲವೇ **ಇದಂಜಗತ್** - ಈ ಪಾಪ ಭೂಯಿಷ್ಠವಾದ ಜಗತ್ತು, **ವಿಪರೀತಂ** - ಅಧರ್ಮವನ್ನು ಧರ್ಮವೆಂದು ಭಾವಿಸುವಂಥಾದ್ದು, **ಅಹೋಬತ ಮಹತ್ಕಷ್ಟಮ್** - ಅಯ್ಯೋ ಇದೀಗ ತುಂಬಾ ಶೋಚನೀಯವಾದುದು," **ಎನ್ರು** - ಎಂಬದಾಗಿ, **ಮಹರ್ಷಿನಿರ್ವಿಣ್ಣ ನಾನಾನ್** - ಶೌನಕಮಹರ್ಷಿಯು ತುಂಬಾ ದುಃಖಾಕ್ರಾಂತರಾದರು, ಶೋಕಕ್ಕೆ ಕಾರಣ ಹೇಗೆ ಎಂದರೆ ವಾಲ್ಮೀಕಿ ಮಹರ್ಷಿಯು ಹೇಳಿರುವ ಹಾಗೆ **"ಧರ್ಮಾದರ್ಥಃ ಪ್ರಭವತಿ, ಧರ್ಮಾತ್ಪ್ರಭವತೇ ಸುಖಂ । ಧರ್ಮೇಣ ಲಭತೇ ಸರ್ವಂ ಧರ್ಮಸಾರ ಮಿದಂ ಜಗತ್"** (ರಾಮಾ. ಬಾಲ.) ಎಂದರೆ ಶಾಸ್ತ್ರದ ವಿಧಿ ನಿಷೇಧವಾಕ್ಯಗಳಿಗನುಸಾರವಾಗಿ ನಡೆಯುವದೇ ಧರ್ಮವು, ಹಾಗೆ ನಡೆದರೆ

(೨) ಭಾರ. ಆರಣ್ಯ. ೨. ೬೪

ಅದರಿಂದ ದ್ರವ್ಯವೂ ಇತರ ಅನುಕೂಲಗಳೂ ಸದಾಚಾರಗಳೂ ಕೊನೆಗೆ ಉಪಾಯಾನುಷ್ಠಾನ ಮೂಲಕ ಪರಮ ಪದ ಪ್ರಾಪ್ತಿಯೂ ಎಲ್ಲವೂ ಲಭಿಸುವದರಿಂದ ಈ ಜಗತ್ತು ಧರ್ಮಸಾರವಾದುದು; ಹಾಗಿರಬೇಕಾದುದು ಅಧರ್ಮ ಭೂಯಿಷ್ಠವಾದುದಾದರೆ ಮಹರ್ಷಿಗಳಿಗೆ ಅದನ್ನು ನೋಡಿ ಶೋಕ ಉಂಟಾಗತಕ್ಕದ್ದು ನ್ಯಾಯವೇ. ವಿಪರೀತಾನುಷ್ಠಾನಕ್ಕೆ ಮನುಷ್ಯನು ಅಸಾಧುವಾಗಿರುವದೇ ಕಾರಣವು. ಹಾಗಲ್ಲದೆ ಸಾಧುಸಮಾಗಮವುಂಟಾದರೆ ಸದಾಚಾರಗಳೂ ಸದ್ಧರ್ಮಗಳೂ ತಲೆದೋರುತ್ತವೆ. ಈ ಸಂದರ್ಭದಲ್ಲಿ ದುಷ್ಟರಾವಣನಿಗೆ ಮಾಡಿದ ಸೀತೆಯ ಹಿತೋಪದೇಶವು ಅನುಸಂಧೇಯವು - "ಇಹಸಂತೋ ನ ವಾ ಸಂತಿ ಸತೋವಾ ನಾನುವರ್ತಸೇ| ತಥಾಹಿ ವಿಪರೀತಾ ತೇ ಬುದ್ಧಿ ರಾಚಾರವರ್ಜಿತಾ" "ನಿನ್ನ ಈ ಲಂಕಾರಾಜ್ಯದಲ್ಲಿ ಸತ್ಪುರುಷರಿಲ್ಲವೆಂದು ನಾನು ಭಾವಿಸುವೆನು, ಅನಂತರ "ಮಹಾ ಪ್ರಾಜ್ಞ"ನಾದ ವಿಭೀಷಣನನ್ನು ಮನಸ್ಸಿನಲ್ಲಿಟ್ಟು ಹೇಳುತ್ತಾಳೆ.—ಸತೋವಾನಾನುವರ್ತಸೇ ಅಥವಾ ವಿರಳರಾಗಿ ಒಬ್ಬರಿಬ್ಬರು ಇರಬಹುದು, ಇದ್ದರೂ ಅವರನ್ನನುಸರಿಸಿ ನೀನು ನಡೆಯುವದಿಲ್ಲವು. ಅದರಿಂದಲೇ ನಿನ್ನ ಬುದ್ಧಿಯು ವಿಪರೀತವಾದುದಾಗಿ ಸದಾಚಾರ ಶೂನ್ಯವಾದುದಾಗಿರುತ್ತದೆ" ಎಂದು ಹೇಳಿರುತ್ತಾಳೆ. ಈ "ಅಹೋಬತ ಮಹತ್ಕಷ್ಟಂ"ಎಂದು ಹೇಳಿರುವ ಪ್ರಕರಣವು ಯಾವುದೆಂದರೆ ಯುಧಿಷ್ಠಿರಾದಿಗಳು ವನಪ್ರವೇಶಮಾಡಿದ ಕಾಲದಲ್ಲಿ ಕೆಲವು ಬ್ರಾಹ್ಮಣರು ಅವರುಗಳನ್ನು ಅನುಸರಿಸಿ ಬಂದರು. ಆಗ ಯುಧಿಷ್ಠಿರನು ಅವರನ್ನು ಕುರಿತು ಪಾಪಿಷ್ಠರಾದ ದುರ್ಯೋಧನಾದಿಗಳು ತನ್ನ ಸರ್ವಸ್ವವನ್ನೂ ಅಪಹರಿಸಿರುವದರಿಂದ ತನಗೆ ನಿಮ್ಮನ್ನು ಭರಿಸುವ ಶಕ್ತಿಯಿಲ್ಲದುದರಿಂದ ನೀವು ಹಿಂತಿರುಗಬೇಕಾಗಿದೆ ಎಂದು ಶೋಕಾಕುಲನಾಗಿ ಅರಿಕೆಮಾಡಿಕೊಳ್ಳಲು. ಆಗ ಅವರು ಯುಧಿಷ್ಠಿರಾದಿಗಳನ್ನು ಕುರಿತು ನಾವು ವನದಲ್ಲಿರುವ ಹಣ್ಣು ಹಂಪಲುಗಳನ್ನು ತಿಂದು ಉದರಭರಣವನ್ನು ಮಾಡಿಕೊಳ್ಳುವೆವು, ನಿಮ್ಮೊಂದಿಗೆ ಇರಲು ಸಮ್ಮತಿಸಿದರೆ ನಮಗೆ ಮನೋನೆಮ್ಮದಿಯುಂಟೆನ್ನಲು; ಆಗಲೂ ಯುಧಿಷ್ಠಿರನು ಬ್ರಾಹ್ಮಣ ಭೋಜನಾದಿಗಳನ್ನು ಮಾಡಿಸದೆ ಸುಮ್ಮನಿದ್ದರೆ ಸರಿಹೋಗುವದಿಲ್ಲವೇ ಎನ್ನಲು. ಆಗ ಅವರುಗಳಲ್ಲಿ ಒಬ್ಬರಾದ ಶೌನಕರೆಂಬವರು ಪರಿತಾಪದಿಂದ ಹೇಳುತ್ತಾರೇನೆಂದರೆ-ಯಾವ ದುಷ್ಕರ್ಮವನ್ನು ಮಾಡಲು ಸಾಧುವಾದವನು ಲಜ್ಜೆಯಿಂದ ಹಿಂತೆಗೆಯುವನೋ ಅಂತಹ ನೀಚಕರ್ಮವನ್ನು ಅಸಾಧುವಾದವನು ಮಾಡಿಬಿಟ್ಟು ಅದರಿಂದ ಸಂತೋಷಿಸುವನು ಎಂದು ದುಷ್ಕರ್ಮಿಗಳಾದ ದುರ್ಯೋಧನಾದಿಗಳನ್ನು ನಿಂದಿಸುವ ಪ್ರಕರಣವು. ಆದುದರಿಂದ ನಮ್ಮಂತಹ ಬ್ರಾಹ್ಮಣ ಭರಣಕ್ಕಾಗಿ, ನೀನು ತಪಸ್ಸನ್ನಾಚರಿಸಿ ಸಿದ್ಧಿಯನ್ನು ಹೊಂದಬೇಕೆಂದು ಆ ಬ್ರಾಹ್ಮಣರು ಪ್ರೇರಿಸುವ ಸಂದರ್ಭವು.

**ಇವರ್‌ಗಳ್ ಶೊಲ್ಲುಗಿರಪಡಿ ಅರ್ಥಮಾನಾಲ್, ಯಾವಜ್ಜೀವ ಮಿರುನ್ದು ಅನುಷ್ಠಿಕ್ಕುಮ್ ನಿಷಿದ್ಧಾನುಷ್ಠಾನ ಮೆಲ್ಲಾಮ್ ಪ್ರಪತ್ತಿಕ್ಕು ಅಙ್ಗಮಾಗೈಯಾಲ್ ಸಾಙ್ಗಪ್ರಪದನಂ ಸಕೃತ್ಕರ್ತವ್ಯಮೆನ್ರುಮಿಡಮುಮ್ ಕಳಿಯುಮ್.**

---

ಹೀಗೆ ಈ ವಾದವು ಲಜ್ಜಾಸ್ಪದವಾದುದೆಂದು ತೋರಿಸಿದರು. ಮುಂದೆ ಸಕೃತ್ಕರ್ತವ್ಯವು ಪ್ರಪದನವು ಎಂಬ ಶಾಸ್ತ್ರಕ್ಕೆ ಈ ವಾದವು ವಿರೋಧವಾಗುತ್ತದೆಂದೂ ಹೇಳುತ್ತಾರೆ.—**ಇವರ್‌ಗಳ್ ಶೊಲ್ಲುಗಿರಪಡಿ** - ಈ ಪೂರ್ವಪಕ್ಷಿಗಳು ಮಾಡಿರುವ ವಾದದಪ್ರಕಾರ, **ಯಾವಜ್ಜೀವವೂ ಇರುನ್ದು ಅನುಷ್ಠಿಕ್ಕುಮ್** - ಇದ್ದು ಅನುಷ್ಠಿಸುವ, **ನಿಷಿದ್ಧಾನುಷ್ಠಾನಮೆಲ್ಲಾಮ್** - ಅಕೃತ್ಯಕರಣ, ಕೃತ್ಯಾಕರಣರೂಪ ಎಲ್ಲಾ ಶಾಸ್ತ್ರವಿರುದ್ಧಗಳಾದ ಅನುಷ್ಠಾನವೆಲ್ಲ, ಪ್ರಪತ್ತಿಗೆ ಅಙ್ಗವಾಗುವದರಿಂದ, **ಸಾಙ್ಗಪ್ರಪದನವು** ಸಕೃತ್ಕರ್ತವ್ಯವೆನ್ನುವ ಪ್ರಮಾಣವೂ ಕೂಡ **ಕಳಿಯುಮ್** - ದೂರೀಕೃತವಾಗುತ್ತದೆ. ಪ್ರಪನ್ನನು ಸಾಯುವವರೆಗೂ ಬುದ್ಧಿಪೂರ್ವೋತ್ತರಾಘವನ್ನು ಮಾಡುತ್ತಲೇ ಇರುವನಾದುದರಿಂದ, ಸಾಯುವ ಕಾಲದಲ್ಲಿ ಅಙ್ಗಪೂರ್ತಿಯಾಗುವದರಿಂದ ಬ್ರಹ್ಮವಿದ್ಯಾ ಉಪಾಸನದಹಾಗೆ, "**ಯಾವಜ್ಜೀವಂತು ತತ್ಕುರ್ಯಾತ್ ಯೇನಪ್ರೇತ್ಯ ಸುಖಂ ವಸೇತ್**" ಎಂದು ಶ್ರೀ ವಿದುರರು ಉಪಾಸನದ ವಿಷಯದಲ್ಲಿ ಹೇಳಿರುವಹಾಗೆ, ಯಾವಜ್ಜೀವವೂ ಮಾಡಬೇಕಾಗುವದರಿಂದ, ಸಕೃತ್ಕರ್ತವ್ಯವಲ್ಲವೆಂದು ಹೇಳಿದಂತಾಗುತ್ತದೆ, ಆಗ ಅದು ಸಕೃತ್ಕರ್ತವ್ಯವೆಂದು ಹೇಳುವ ಶಾಸ್ತ್ರಕ್ಕೆ ವಿರುದ್ಧವಾಗುತ್ತದೆಂಬ ಭಾವವು.

**ಸರ್ವಧರ್ಮಾನ್ ಪರಿತ್ಯಜ್ಯ** ಎಂದಿರುವದರಿಂದ ನಿಷಿದ್ಧ ಕರ್ಮವನ್ನು ಮಾಡದಿರೋಣವರ ಪರಿತ್ಯಾಗವೂ ಆವಶ್ಯಕವೆಂದು ಹೇಳಿದುದರಿಂದ, ಪ್ರಪನ್ನನು ನಿಷಿದ್ಧಕರ್ಮಾನುಷ್ಠಾನವನ್ನು ಮಾಡಬಹುದು ಎಂದು ಅರ್ಥಮಾಡಿದರು. ಹೀಗೆ ಅರ್ಥಮಾಡುವದರಲ್ಲಿ ಪರಿಹಸನೀಯವಾದುದುಂಟೆಂದು ತೋರಿಸಿದರು. ಈ ಅಭಿಪ್ರಾಯವನ್ನು ಖಂಡಿಸುವದಕ್ಕಾಗಿ ವಿಕಲ್ಪಿಸಿ ಕೇಳುತ್ತಾರೆ. ಈ ಪ್ರಪನ್ನರು ಮಾಡುವ ನಿಷಿದ್ಧಾನುಷ್ಠಾನವೆಲ್ಲಾ ನೀವು ಹೇಳುವಹಾಗೆ ಪ್ರಪತ್ತಿಗೆ ಅಙ್ಗವಾಗಿ ಪರ್ಯವಸಾನವನ್ನು ಹೊಂದುವದರಿಂದ, (೧) ಈ ನಿಷಿದ್ಧಾನುಷ್ಠಾನಂ ಯಾವಜ್ಜೀವವೂ ಅನುಷ್ಠಿಸುವದೆಲ್ಲಾ ಪ್ರಪತ್ತಿಗೆ ಅಙ್ಗವೇ? ಎಂದು ಪ್ರಥಮ ವಿಕಲ್ಪವನ್ನು ಮಾಡಿ, ಹಾಗೆ ಭಾವಿಸಿದರೆ ಪ್ರಪದನವು ಸಕೃತ್ಕರ್ತವ್ಯವೆಂಬ ಅನೇಕ ಪ್ರಮಾಣಗಳಿಗೆ ವಿರೋಧವಾಗುತ್ತದೆ ಎಂದು ಹೇಳಿ ಅದನ್ನು ಖಂಡಿಸಿದರು.(೨) ಈ ನಿಷಿದ್ಧಾನುಷ್ಠಾನವನ್ನೆಲ್ಲಾ ಪ್ರಪತ್ತಿಯ ಕ್ಷಣದಲ್ಲೇ ಅನುಷ್ಠಿಸಬೇಕಾಗಿ ಅಙ್ಗವೇ? ಎಂದು ಎರಡನೆಯ ವಿಕಲ್ಪ

ಪ್ರಪತ್ತಿಕ್ಷಣತ್ತಿಲ್ ಎಲ್ಲಾ ನಿಷಿದ್ಧಙ್ಗಳುಮ್ ಅನುಷ್ಠಿಕ್ಕೈ ಅಶಕ್ಯಮ್; ಅಪ್ಪೋದು ಯಥಾಶಕ್ತಿ ನಿಷಿದ್ಧಾನುಷ್ಠಾನಂ ಪಣ್ಣಿಕ್ಕೊಂಡು ಪ್ರಪತ್ತಿ ಪಣ್ಣಿನವರ್ ಕಂಡರಿಯೋಮ್; ಇಪ್ಪಕ್ಷತ್ತಿಲ್ ಪಾಪಙ್ಗಳ್ ಅಗ್ನೀಷೋಮೀಯ ಹಿಂಸೈಪೋಲೆ ಪಾಪಶಬ್ದ ವಾಚ್ಯಙ್ಗಳನ್ರಾಲೇ, ಬುದ್ಧಿಪೂರ್ವೋತ್ತರಾಘತ್ತೈಯುಮ್ ಕೊಟ್ಟಿ "ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ" ಎನ್ಗಿರ ವಿಡತ್ತುಕ್ಕು ತಾಙ್ಗಳ್ ವ್ಯಾಖ್ಯಾನಂ ಪಣ್ಣಿನ ಪ್ರಕಾರಮುಂ ವಿರುದ್ಧಮಾಮ್.

---

ವನ್ನು ಹೇಳಿ ಖಂಡಿಸುತ್ತಾರೆ. ಪ್ರಪತ್ತಿ ಕ್ಷಣತ್ತಿಲ್ - ಪ್ರಪತ್ತಿಯನ್ನನುಷ್ಠಿಸುವ ಕ್ಷಣದಲ್ಲೇ, ಎಲ್ಲಾ ನಿಷಿದ್ಧಕರ್ಮಗಳನ್ನೂ ಅನುಷ್ಠಿಕ್ಕೈ ಅಶಕ್ಯಮ್ - ಅನುಷ್ಠಿಸುವದು ಸಾಧ್ಯವಲ್ಲವು, (೩) ಅಥವಾ ಪ್ರಪತ್ತಿಯ ಕ್ಷಣದಲ್ಲಿ ಎಲ್ಲಾ ನಿಷಿದ್ಧ ಕರ್ಮವನ್ನು ಅನುಷ್ಠಿಸುವದು ಸಾಧ್ಯವಿಲ್ಲವಾದರಿಂದ ಯಥಾಶಕ್ತಿ ಅನುಷ್ಠಿಸತಕ್ಕದ್ದೆಂದು ಆಗಿ, ಹಾಗೆ ಅಲ್ಲವೋ? ಎಂದು ಮೂರನೆಯ ವಿಕಲ್ಪವನ್ನು ಉಪಪಾದಿಸಿ, ಖಂಡಿಸುತ್ತಾರೆ. ಮತ್ತು ಅಪ್ಪೋದು - ಆ ಪ್ರಪತ್ತ್ಯನುಷ್ಠಾನಕಾಲದಲ್ಲಿ, ಎಲ್ಲಾ ನಿಷಿದ್ಧ ಕರ್ಮಗಳನ್ನು ಮಾಡಲು ಸಾಧ್ಯವಿಲ್ಲವೇ? ಇದ್ದರೂ, ಯಥಾಶಕ್ತಿ ನಿಷಿದ್ಧಾನುಷ್ಠಾನಂ - ಎಷ್ಟು ಸಾಧ್ಯವೋ ಅಷ್ಟು ಮಾತ್ರವಾಗಲಿ ನಿಷಿದ್ಧ ಕರ್ಮಗಳ ಅನುಷ್ಠಾನವನ್ನು, ಪಣ್ಣಿಕ್ಕೊಂಡು - ಮಾಡಿಕೊಂಡು, ಪ್ರಪತ್ತಿ ಪಣ್ಣಿನವರ್ ಕಂಡರಿಯೋಮ್ - ಪ್ರಪತ್ತಿ ಮಾಡಿರುವವನು, ಕಂಡರಿಯೋಮ್ - ನಾವು ಎಲ್ಲಿಯೂ ಕಂಡಿಲ್ಲವು. ಹೀಗೆ ಮೂರು ವಿಕಲ್ಪಗಳಲ್ಲೂ ದೋಷ ಉಂಟಾಗುವದರಿಂದ ಅಭಿಪ್ರಾಯವು ಸರಿಯಿಲ್ಲವೆಂದು ಹೇಳಿದಂತಾಯಿತು.

ಮುಂದೆ ಪೂರ್ವಪಕ್ಷಿಯು ನೀವು ಪ್ರಪನ್ನನ ಉತ್ತರಾಘಗಳನ್ನು ನಿಷಿದ್ಧಕರ್ಮಾನುಷ್ಠಾನವೆಂದು ಭಾವಿಸಿರುವದೇ ಸರಿಯಲ್ಲವು, ಅಗ್ನೀಷೋಮೀಯವನ್ನು ಅನುಷ್ಠಿಸುವನಿಗೆ ಪಶು ಹಿಂಸೆಯು ಹೇಗೆ ಹಿಂಸೆಯೇ ಆಗುವದಿಲ್ಲವೋ, ಹಾಗೆ ಪ್ರಪನ್ನನಿಗೆ ಈ ನಿಷಿದ್ಧಕರ್ಮಗಳು, ನಿಷಿದ್ಧವಾದುವೇ ಅಲ್ಲವು." ಎಂಬ ವಾದವನ್ನು ತರಬಹುದೆಂದು ಯೋಚಿಸಿ, ಆಗಲೂ ಪೂರ್ವಪಕ್ಷಿಯ ಅಭಿಪ್ರಾಯವು ಸರಿಯಲ್ಲವೆಂದು ತೋರಿಸುತ್ತಾರೆ. ಇಪ್ಪಕ್ಷತ್ತಿಲ್ - ಈ ಸಂದರ್ಭದಲ್ಲಿ, ಪಾಪಙ್ಗಳ್ - ಪ್ರಪನ್ನನು ಮಾಡುವ ಬುದ್ಧಿಪೂರ್ವಕವಾದ ಪಾಪಗಳು, ಅಗ್ನೀಷೋಮೀಯ ಹಿಂಸೈಪೋಲೆ - ಅಗ್ನೀಷೋಮೀಯ ಯಾಗದಲ್ಲಿ, ಪಶುಮಾಲಭೇತ ಎಂಬ ವಿಧಿವಾಕ್ಯವನ್ನನುಸರಿಸಿ ಪಶು ಹಿಂಸೆಯು ಹಿಂಸೆಯೇ ಅಲ್ಲವಾದುದರಿಂದ, ಈ ಪಾಪಗಳೂ ಕೂಡ, ಪಾಪಶಬ್ದವಾಚ್ಯ ಮಲ್ಲನ್ರೈಯಾಲೇ - ಪಾಪಶಬ್ದದಿಂದ ಹೇಳಿಸಿಕೊಳ್ಳುವದಿಲ್ಲವಾದರಿಂದ, ಬುದ್ಧಿಪೂರ್ವೋತ್ತರಾಘತ್ತೈಯುಮ್

**ಯಥಾಶಕ್ತಿತ್ರಿವಿಧಾಪಚಾರಙ್ಗಳ್ ಕರ್ತವ್ಯಙ್ಗಳಾಗವುಮ್ ಪ್ರಸಙ್ಗಿಕ್ಕುಮ್.**

---

**ಕೊಟ್ಟು** - ಬುದ್ಧಿ ಪೂರ್ವೋತ್ತರಾಘಗಳನ್ನೂ ಸೇರಿಸಿ, **ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ, ಎಙ್ಗರವಿಡತ್ತುಕ್ಕು**-ಎಂದಿರುವ ಸ್ಥಳದಲ್ಲಿ, **ತಾಙ್ಗಳ್ ವ್ಯಾಖ್ಯಾನಂ ಪಣ್ಣಿನ ಪ್ರಕಾರಂ** - ಈ ಪೂರ್ವ ಪಕ್ಷಿಗಳಾದ ತಾವೇ ವ್ಯಾಖ್ಯಾನವನ್ನು ಮಾಡಿದ ಕ್ರಮವು. **ವಿರುದ್ಧಮಾಮ್** - ವಿರುದ್ಧವಾಗುತ್ತದೆ. **ಪೂರ್ವಪಕ್ಷಿಗಳು, ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ** ಎಂದು ಹೇಳಿರುವದರಿಂದಲೇ, ಬುದ್ಧಿ ಪೂರ್ವವಾಗಿ ಮಾಡಿದ ಪಾಪಗಳೂ, ಈ **ಸರ್ವಪಾಪೇಭ್ಯಃ** ಎಂದು ಹೇಳಿರುವ ಸರ್ವ ಶಬ್ದದಲ್ಲೇ ಅಂತರ್ಗತಗಳು, ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಈಗ ಈ ಬುದ್ಧಿಪೂರ್ವೋತ್ತರ ಪಾಪಗಳು, ಯಾಗದಲ್ಲಿ ಪಶು ಹಿಂಸೆಯು ಹೇಗೆ ಹಿಂಸೆಯಲ್ಲವೋ, ಹಾಗೆಯೇ ಪ್ರಪನ್ನನ ವಿಷಯದಲ್ಲಿ ಪಾಪಗಳೇ ಅಲ್ಲವೆಂದರೆ, ಮೊದಲಿನ ನಿಮ್ಮ ಅಭಿಪ್ರಾಯಕ್ಕೆ ವಿರೋಧವು. ಮೊದಲು ಇವು ಪಾಪಗಳೆಂದು ಹೇಳಿ **ಸರ್ವಪಾಪೇಭ್ಯಃ** ಎಂಬುದರಲ್ಲಿ ಸೇರಿಸಿದಿರಿ. ಈಗ ಪಾಪಗಳೇ ಅಲ್ಲವೆನ್ನುತ್ತೀರಿ, ಹಾಗಾದರೆ **ಸರ್ವಪಾಪೇಭ್ಯಃ** ಎಂಬುದರಲ್ಲಿ ಸೇರಲೇಇಲ್ಲವಾಗುವದರಿಂದ ನಮ್ಮ ಅಭಿಪ್ರಾಯವನ್ನೇ ಅನುಮೋದಿಸ ಬೇಕಾಗುತ್ತದೆಂಬ ಭಾವವು ಆದೂ ಅಲ್ಲದೆ ಇತರರು ಪಾಪವೆಂದು ವ್ಯವಹರಿಸಿದುದು ಪ್ರಪನ್ನನಿಗೆ ಪಾಪವಲ್ಲವೆಂದು ಹೇಳುವದರಿಂದ ಒಂದೇ ವ್ಯಾಪಾರವು ಪಾಪವೂ ಹೌದು, ಪಾಪವೂ ಅಲ್ಲವೆಂದು ಹೇಳಿದಂತಾಗುತ್ತದೆಂಬಭಾವವು. ಹೀಗೆ ಪೂರ್ವಪಕ್ಷಿಗಳ ಸ್ವೋಕ್ತಿಗೇನೇ ವ್ಯಾಘಾತವನ್ನು ತೋರಿಸಿರುತ್ತಾರೆ. ಹೀಗೆ **ಸರ್ವಪಾಪ** ಶಬ್ದದಲ್ಲಿ ಪ್ರಪನ್ನನ ಬುದ್ಧಿ ಪೂರ್ವೋತ್ತರಾಘವು ಸೇರಿದೆ ಎಂದು ಅರ್ಥಮಾಡುವದಕ್ಕೆ ಇನ್ನೂ ಒಂದು ಅತ್ಯಂತ ಪ್ರಬಲವಿರೋಧವು ಉಂಟು, ಅದನ್ನೂ ಕೂಡ ಪರಿಗಣಿಸದೇ ಹೀಗೆ ಅಭಿಪ್ರಾಯಪಟ್ಟರಲ್ಲಾ ಎಂಬುದೂ ತೋರುತ್ತದೆ.

ಬುದ್ಧಿ ಪೂರ್ವಕವಾದ ಉತ್ತರಾಘದ ಆಶ್ಲೇಷವನ್ನು ಒಪ್ಪಿಕೊಂಡರೆ ಪ್ರಾಪ್ತವಾಗುವ ಇನ್ನೂ ಕೆಲವು ಬಾಧಕಗಳನ್ನು ತಿಳಿಸುತ್ತಾರೆ. (೧) **ಯಥಾಶಕ್ತಿ**- ತನ್ನ ಕೈಲಾದಷ್ಟು, **ತ್ರಿವಿಧಾಪಚಾರಙ್ಗಳ್** - ಮಾನಸ, ವಾಚಿಕ, ಕಾಯಿಕಗಳಾದ ಮೂರುವಿಧ ಅಪಚಾರಗಳು, **ಕರ್ತವ್ಯಙ್ಗಳಾಗವುಂ ಪ್ರಸಙ್ಗಿಕ್ಕುಮ್** - **ಪರಿತ್ಯಜ್ಯ** ಎಂಬುದು ವಿಧಿಯಾದುದರಿಂದ ಅವಶ್ಯ ಮಾಡತಕ್ಕವುಗಳಾಗಿ ಉಪದೇಶಿಸಿದಂತಾಗುವವು. ಇವುಗಳೆಲ್ಲಾ ಸರ್ವಾತ್ಮನಾ ಕೂಡದೆಂದು ಗೀತಾದಿ ಶಾಸ್ತ್ರಗಳಲ್ಲಿ ಉಪದೇಶಿಸಿರುವದಕ್ಕೆ ವಿರುದ್ಧವಾಗುತ್ತದೆಂಬ ಭಾವವು, ಹೀಗೆ ಸರ್ವಶಾಸ್ತ್ರವಿರುದ್ಧಾಚರಣೆಗೆ ಹೇತುವಾಗುತ್ತದೆಂಬುದು ಮುಖ್ಯತಾತ್ಪರ್ಯವು; ವಾರಾಹ

ಇದು ಪೂರ್ವಾನುಷ್ಠಾನತ್ತುಕ್ಕುಮ್, ಪೂರ್ವಸಂಪ್ರದಾಯತ್ತುಕ್ಕುಮ್, ಸ್ವಾನುಷ್ಠಾನತ್ತುಕ್ಕುಮ್, ಮತ್ತು ಮಿಪ್ಪೋದು ಕಾಣ್ಗಿರ ಮುಮುಕ್ಷುಕ್ಕಳ್ ಅನುಷ್ಠಾನತ್ತುಕ್ಕುಮ್, ವಿರುದ್ಧಮ್. ಇಪ್ಪಡಿ ಶೊಲ್ಲುವರ್‌ಗಳ್ ತಮ್ಮು

---

ಪುರಾಣದಲ್ಲಿ ಮಾನಸ, ವಾಚಿಕ, ಕಾಯಿಕ, ಅಪಚಾರಗಳು ಯಾವುವೆಂಬುದನ್ನು ನಿರೂಪಿಸಿರುತ್ತಾರೆ,—

"ಪರದ್ರವ್ಯೇಷ್ವಭಿಧ್ಯಾನಂ ಮನಸಾ ನಿಷ್ಟಚಿಂತನಂ । ವಿತಥಾಭಿನಿವೇಶಶ್ಚ ಮಾನಸಂ ತ್ರಿವಿಧಂ ಸ್ಮೃತಂ ॥ ಪಾರುಷ್ಯ ಮನೃತಂಚೈವ ಪೈಶುನ್ಯಮಪಿ ಸರ್ವಶಃ । ಅನಿಬದ್ಧಪ್ರಲಾಪಶ್ಚ ವಾಚಿಕಂ ಸ್ಯಾಚ್ಚತುರ್ವಿಧಮ್ ॥ ಅದತ್ತಾನಾ ಮುಪಾದಾನಂ ಹಿಂಸಾಚೈವಾ ವಿಧಾನತಃ । ಪರದಾರೋಪಸೇವಾಚ ಕಾಯಿಕಂ ತ್ರಿವಿಧಂ ಸ್ಮೃತಮ್ ॥"
ಈ ಅಪಚಾರಗಳು ಭಾಗವತನ ವಿಷಯದಲ್ಲಾದರೋ ಮಹತ್ತಾದ ಅಪರಾಧಗಳಾಗುತ್ತವೆಂಬ ಭಾವವು ತೋರಿಬರುತ್ತದೆ,

**ಇದು** - ಈ ಪ್ರಪನ್ನನ ಉತ್ತರಕಾಲೀನ ಬುದ್ಧಿ ಪೂರ್ವಾಘವೂ ಲೇಪಿಸುವದಿಲ್ಲವೆಂಬ ಅಭಿಪ್ರಾಯವು, **ಪೂರ್ವಾನುಷ್ಠಾನತ್ತುಕ್ಕುಮ್** - ಪೂರ್ವಕಾಲೀನರಾದ ಋಷಿಗಳೂ ಧರ್ಮಜ್ಞರೂ ಮೊದಲಾದ ಹಿಂದಿನವರುಗಳ ಆಚರಣೆಗೂ, ಇದಕ್ಕೆ ಉದಾಹರಣೆಯಾಗಿ, ಅಂಬರೀಷ, ಹರಿಶ್ಚಂದ್ರ, ವಿದುರ, ಉದ್ಧವಾದಿಗಳ ಅನುಷ್ಠಾನವನ್ನು ಹೇಳಬಹುದು, **ಪೂರ್ವಸಂಪ್ರದಾಯತ್ತುಕ್ಕೂ** - ಅಕೃತ್ಯಕರಣ ಕೃತ್ಯಾಕರಣ ಕೂಡದೆಂಬ ಪೂರ್ವಾಚಾರ್ಯರುಗಳ ಉಪದೇಶಕ್ಕೂ ಅನುಷ್ಠಾನಕ್ಕೂ ಸಹ,ಇದಕ್ಕೆ ಉದಾಹರಣವಾಗಿ ಶ್ರೀ ಯತಿವರ್ಯರು "**ಭಗವದಪಚಾರ ಭಾಗವತಾಪಚಾರಾಸಹ್ಯಾಪಚಾರ ರೂಪನಾನಾವಿಧಾನಂತಾಪಚಾರಾನ್ ಸರ್ವಾನ ಶೇಷತಃ ಕ್ಷಮಸ್ವ**" ಎಂದು ಪ್ರಾರ್ಥಿಸಿರುವ ಅನುಷ್ಠಾನಕ್ಕೂ ವಿರೋಧವಾಗುತ್ತದೆ, ಹಾಗೆಯೇ ಶ್ರೀ ಯಾಮುನೇಯರೂ "**ಅಪರಾಧ ಸಹಸ್ರ ಭಾಜನಮ್**" ಎಂಬ ಶ್ಲೋಕದಲ್ಲಿ ಅಪಚಾರಭೀರುತ್ವವನ್ನು ಪ್ರದರ್ಶಿಸಿರುತ್ತಾರೆ. ಪ್ರಪನ್ನನ ವಿಷಯದಲ್ಲಿ ಅಪರಾಧಗಳು ಲೇಪಿಸದ ಪಕ್ಷದಲ್ಲಿ ಈ ಪ್ರಾರ್ಥನೆಯು ಅನಾವಶ್ಯಕವು, **ಸ್ವಾನುಷ್ಠಾನತ್ತುಕ್ಕುಮ್** - ಹೀಗೆ ಅಭಿಪ್ರಾಯವೆಂದು ಹೇಳುವವರು ತಾವೇ ಇಂತಹ ಅಪಚಾರಗಳಿಗೆ ಗುರಿಯಾಗಲಾರರೆಂದು ಸಂಪೂರ್ಣವಾಗಿ ನಂಬಿ, ಸ್ವಾನುಷ್ಠಾನತ್ತುಕ್ಕುಮ್ ಎಂದು ಪ್ರಯೋಗಿಸಿರುತ್ತಾರೆ. ತಾವೇ,ತಮ್ಮ ಶಿಷ್ಯರುಗಳಾದ ಪ್ರಪನ್ನರಿಗೆ ಹೀಗೆ ತ್ರಿವಿಧಗಳಾದ ಅಪಚಾರಗಳನ್ನು ಮಾಡು ಎಂದು ಎಂದಿಗೂ ಉಪದೇಶಿ

ಯೊರು ಪ್ರಪನ್ನರ್ ಅರ್ಥಕಾಮಙ್ಗಳಡಿಯಾಗ ನಲಿಯಪ್ಪುಕ್ಕಾಲ್ ಇದು

ಸಿರಲಾರರೆಂಬ ಭಾವದಿಂದಲೂ ಸ್ವಾನುಷ್ಠಾನತ್ತುಕ್ಕುಮ್ ಎಂಬ ಪ್ರಯೋಗವೆಂದೂ ಭಾವಿಸಬಹುದು. ಮತ್ತು ಮಿಪ್ಪೋದು ಕಾಣ್ಗಿರಮುಮುಕ್ಷುಕ್ಕಳ್ - ಇದಲ್ಲದೆ ನಾವು ಈಗ ನೋಡುತ್ತಿರುವ ಮೋಕ್ಷಾರ್ಥಿಗಳ, ಇಲ್ಲಿ ಮೋಕ್ಷಾರ್ಥಿಗಳ ಅನುಷ್ಠಾನವೇ ಅಪಚಾರಭಯ ವಿಶಿಷ್ಟವಾಗಿಯೇ ಇರುವಾಗ, ಇನ್ನು ಪ್ರಪನ್ನರ ವಿಷಯವಲ್ಲಿ ಹೇಳತಕ್ಕದ್ದೇನು, ಅಂತವರುಗಳಿಗೆ ಅಂತಹ ಅಪಚಾರಗಳ ವಿಷಯದಲ್ಲಿ ಮನಸ್ಸೇ ಶ್ರೀಶನ ಕೃಪೆಯಿಂದ ಪ್ರವರ್ತಿಸುವದಿಲ್ಲವೆಂದು ಹಿಂದೆಯೇ ಅಪರಾಧಪರಿಹಾರಾಧಿಕಾರಾಂತ್ಯದಲ್ಲಿ, "ಧೀಪೂರ್ವೋತ್ತರ ಪಾಪ್ಮಾನಾ ಮಜನನಾಶ" ಎಂದು (೧೭೦೬ನೆಯ ಪುಟ) ಹೇಳಿರುತ್ತಾರೆ, ಆದುದರಿಂದ ಮುಮುಕ್ಷುಕ್ಕಳನುಷ್ಠಾನತ್ತುಕ್ಕುಮ್ ವಿರುದ್ಧಮ್ - ವಿರುದ್ಧವಾದುದೆಂದು ಹೇಳಲ್ಪಟ್ಟಿತು. ಪೂರ್ವದ ಋಷಿಗಳೇ ಮೊದಲಾದ ಧರ್ಮನಿಷ್ಠೆಯುಳ್ಳ ರಾಜರುಗಳ ಅನುಷ್ಠಾನಕ್ಕೂ, ಪೂರ್ವಾಚಾರ್ಯರುಗಳಾದ ನಾಥಮುನಿ ಆಳವಂದಾರ್ ಭಾಷ್ಯಕಾರರುಗಳ ಅನುಷ್ಠಾನಗಳಿಗೂ, ಹೀಗೆ ಅಭಿಪ್ರಾಯ ಪಡುವವರ ಸ್ವಾನುಷ್ಠಾನಕ್ಕೂ, ಪ್ರಪನ್ನರುಗಳ ಅನುಷ್ಠಾನಕ್ಕೂ ವಿರುದ್ಧವು ಈ ಅಭಿಪ್ರಾಯವೆಂದು ಹೇಳಿದರು.

ಹೀಗೆ ಅನೇಕರ ಅನುಷ್ಠಾನಕ್ಕೆ ವಿರುದ್ಧವೆಂದುಹೇಳಿ ಮುಂದೆ ಒಂದುವಾದದ ಮೂಲಕವಾಗಿಯೂ ಈ ಅಭಿಪ್ರಾಯವು ಸರ್ವಾತ್ಮನಾ ಒಪ್ಪತಕ್ಕದ್ದಲ್ಲವೆಂದು ತಿಳಿಸುತ್ತಾರೆ. ಇಪ್ಪಡಿ ಶೊಲ್ಲುಮವರ್‌ಗಳ್ - ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಎಂಬಲ್ಲಿ ಸರ್ವಪಾಪಗಳಲ್ಲೇ ಪ್ರಪನ್ನನ ಬುದ್ಧಿಪೂರ್ವಕಗಳಾದ ಉತ್ತರಾಘಗಳು ಸೇರಿದವು ಎಂದು ಹೇಳುವವರು, ತನ್ನೈ - ತಮ್ಮನ್ನು, ಒರುಪ್ರಪನ್ನರ್ ಒಬ್ಬ ಪ್ರಪನ್ನರು, ಅರ್ಥಕಾಮಙ್ಗಳ್ ಅಡಿಯಾಗ - ಅರ್ಥ ಮತ್ತು ಕಾಮ, ಇವುಗಳ ಮೂಲಕವಾಗಿ, ನಲಿಯಪುಕ್ಕಾಲ್ - ಹಿಂಸಿಸಲು ಉದ್ಯುಕ್ತರಾದರೆ, ಇದು ಪ್ರಪನ್ನ ಧರ್ಮವೆಂದು, ಅವರೈ - ಅವರನ್ನು, ಉಗನ್ದಿರುಕ್ಕಪ್ಪಾರ್ಪ್ಪ ಮಾನ್ - ಪ್ರೀತಿಸಬೇಕಾಗಿ ಬರುತ್ತದೆ. ಹೀಗೆ ಎಲ್ಲಾದರು ಉಂಟೋ? ಅಂತವನು ಒಂದುವೇಳೆ ಹಿಂಸಿಸಿದರೂ ಪ್ರಪನ್ನನಾದವನು ಅವನ್ನು ತಡಕೊಂಡು ಅವನ ಅಪರಾಧವನ್ನು ಕ್ಷಮಿಸುವದು ಈತನಿಗೆಯೋಗ್ಯವಾದರೂ, ಹಿಂಸೆಯು ಪ್ರಪನ್ನ ಧರ್ಮವಾದೀತೇ? ಅಂತವನು ಪ್ರಪನ್ನನಾಗುವನೇ? ಅಂತವನು ಸಂಭಾಷಣಾರ್ಹನೇ? ಎಂಬುದೀಗ ಭಾವವು. ಅಂತವನು ಮಾನಾರ್ಹನಲ್ಲವೆಂದೂ "ಕಳಂಕೆರ್ಯ ನಿಜತನುಂ ಪ್ರಾಜ್ಞೈರ್ನಸಂಶ್ಲಿಷ್ಯತೇ" ಪ್ರಾಜ್ಞರೊಂದಿಗೆ ಸೇರಿರಲು ಅಯೋಗ್ಯನೆಂದು ಹಿಂದೆ ಹೇಳಲ್ಪಟ್ಟಿರುತ್ತದೆ. (ಅಪರಾಧ ಪರಿಹಾರಾಧಿಕಾರದ

ಪ್ರಪನ್ನ ಧರ್ಮಮೆನ್ನವರ್ಶೈ ಉಗನ್ದಿರುಕ್ಕೈ ಪ್ರಾಪ್ತಮ್. ಇದು ಅನಂತ ಪ್ರಮಾಣಙ್ಗಳುಕ್ಕು ವಿರುದ್ಧಮಾನ ವಳಿಯೇ ಯನ್ರಿಕ್ಕೇ ಇಙ್ಗಿಡುತ್ತ ವಚನಙ್ಗಳುಕ್ಕುಮ್ ವಿವಕ್ಷಿತಮನ್ರು.

---

೧೪೯೦ನೆಯ ಪುಟ) ಇದು-ಈ ಅಭಿಪ್ರಾಯವು, ಪ್ರಪನ್ನನ ಬುದ್ಧಿಪೂರ್ವಕಾಘಗಳನ್ನೂ ಕ್ಷಮಿಸಿಬಿಡುವನೆಂದು ಚರಮಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆಂಬ ಅಭಿಪ್ರಾಯವು, ಅನನ್ತ ಪ್ರಮಾಣಙ್ಗಳುಕ್ಕು - ಅನೇಕ ಶಾಸ್ತ್ರಪ್ರಮಾಣಗಳಿಗೂ, ವಿರುದ್ಧಮಾಮುಳವೇ ಅನ್ರಿಕ್ಕೇ-ವಿರುದ್ಧವಾಗುವುದು ಮಾತ್ರವೇ ಅಲ್ಲದೆ, ಇಙ್ಗಿಡುತ್ತ ವಚನಙ್ಗಳುಕ್ಕುಮ್-ಈ ಸಂದರ್ಭದಲ್ಲಿ ಉದಾಹರಿಸಿದ ವಚನಗಳಿಗೂ, "ತಸ್ಮಾತ್ತ್ವಮುದ್ಧವೋತ್ಸೃಜ್ಯ" ಎಂದು ಉದಾಹರಿಸಿದ ಪ್ರಮಾಣಕ್ಕೂ, ವಿವಕ್ಷಿತಮನ್ರು - ಉದ್ದೇಶ್ಯವಾದುದೂ ಅಲ್ಲವು, ಅನಂತ ಪ್ರಮಾಣಗಳಿಗೆ ವಿರುದ್ಧವಾದುದೆಂದು ಹೇಳಿದರು. ಆಪ್ರಮಾಣಗಳು ಯಾವುವೆಂದರೆ.

೧. ಕೃತಾಪರಾಧಸ್ಯ ಹಿ ತೇ ನಾನ್ಯಂ ಪಶ್ಯಾಮ್ಯಹಂ ಕ್ಷಮಮ್ । ಅನ್ತರೇಣಾಂಜಲಿಂ ಬಧ್ವಾ ಲಕ್ಷ್ಮಣಸ್ಯ ಪ್ರಸಾದನಾತ್ ॥ ೨. ಯದಿ ಕಿಂಚದತಿಕ್ರಾನ್ತಂ ವಿಶ್ವಾಸಾತ್ಪ್ರಣಯೇನ ವಾ । ಪ್ರೇಷ್ಯಸ್ಯ ಕ್ಷಮಿತವ್ಯಂ ಮೇ ನ ಕಶ್ಚಿನ್ನಾಪರಾಧ್ಯತಿ ॥ ೩. ಯಚ್ಚ ಶೋಕಾಭಿಭೂತಸ್ಯ ಶ್ರುತ್ವಾ ರಾಮಸ್ಯ ಭಾಷಿತಮ್ । ಮಯಾ ತ್ವಂ ಪರುಷಾಣ್ಯುಕ್ತಸ್ತಚ್ಚ ತ್ವಂ ಕ್ಷನ್ತುಮರ್ಹಸಿ ॥ ೪. ತಮೇವ ಶರಣಂ ಗಚ್ಛ ನಾಭಾಗತನಯಂ ದ್ವಿಜ । ೫. ಅಪಾಯಸಂಪ್ಲವೇ ಸದ್ಯಃ ಪ್ರಾಯಶ್ಚಿತ್ತಂ ಸಮಾಚರೇತ್ । ಪ್ರಾಯಶ್ಚಿತ್ತಿರಿಯಂ ಸಾತ್ರ ಯತ್ಪುನಶ್ಶರಣಂ ವ್ರಜೇತ್ ॥ ೬. ಅಪಾಯಾವಿರತಶ್ಚಾಪಿ ಸ್ವಾಂ ಚೈವ ಶರಣಂಗತಃ । ತನೂಕೃತ್ವಾಖಿಲಂ ಪಾಪಂ ಮಾಮಾಪ್ನೋತಿ ನರಶ್ಶನೈಃ ॥ ಇತ್ಯಾದಿಗಳು. ಇವುಗಳ ಅರ್ಥಕ್ಕೆ ಅಪರಾಧ ಪರಿಹಾರಾಧಿಕಾರ ೧೫೩೦-೧ ಪುಟಗಳನ್ನು ನೋಡಿ, ಈ ಸಂದರ್ಭದಲ್ಲಿ ಉದಾಹರಿಸಿವ ವಚನಗಳು ಯವುವೆಂದರೆ.— "ತಸ್ಮಾತ್ತ್ವಮುದ್ಧವೋತ್ಸೃಜ್ಯ ಚೋದನಾಂ ಪ್ರತಿಚೋದನಾಂ । ಪ್ರವೃತ್ತಿಂ ಚನಿವೃತ್ತಿಂಚ ಶ್ರೋತವ್ಯಂ ಶ್ರುತಮೇವಚ" "ಅಹೋಬತಮಹತ್ಕಷ್ಟಂ ವಿಪರೀತಮಿದಂ ಜಗತ್ ? ಯೇನಾಪತ್ರಪತೇ ಸಾಧುರಸಾಧುಸ್ತೇನತುಷ್ಯತಿ" ಎಂಬ ಪ್ರಮಾಣದೊಂದಿಗೆ ಪರಿಶೀಲಿಸಿದರೆ, ಪೂರ್ವಪಕ್ಷಿಗಳ ಅಭಿಪ್ರಾಯವು ಸರಿಯಲ್ಲವೆಂಬುದು ವ್ಯಕ್ತವೆಂಬಭಿಪ್ರಾಯವು. ವಿವಕ್ಷಿತವಾದ ಅರ್ಥವೇನೆಂಬುದಕ್ಕೆ ಹಿಂದೆ ೨೬೯೫, ೨೭೦೦ನೆಯ ಪುಟಗಳನ್ನು ನೋಡಿ. ಮುಂದೆಯೂ ಶ್ರೀದೇಶಿಕರವರೇ ಚೋದನಾಂ ಪ್ರತಿಚೋದನಾಂ ಪ್ರವೃತ್ತಿಂಚ ನಿವೃತ್ತಿಂಚ ಎಂಬುವರ ಅರ್ಥ

ನಿಷಿದ್ಧ ನಿವೃತ್ತಿ ರೂಪಙ್ಗಳೆಲ್ಲಾವಮ್ ಸರ್ವಧರ್ಮಶಬ್ದತ್ತಾಲೇ ಸಙ್ಗ್ರಹೀತಙ್ಗಳೆನ್ನುಮಿಡವಮ್ ಧರ್ಮಶಬ್ದಾರ್ಥಮರಿಯಾಮಲ್ ಶೊನ್ನಪಡಿಯೆನ್ರು

---

ವನ್ನು ನಿರಾಕರಿಸುತ್ತಾರೆ. ಇಲ್ಲಿನ ಪೂರ್ವಪಕ್ಷಿಗಳ ಅಭಿಪ್ರಾಯವು ಸರಿಯಲ್ಲವೆಂದೂ ಅದು ವಿವಕ್ಷಿತವಲ್ಲವೆಂದೂ ಕೆಲವು ಆಚಾರ್ಯರುಗಳು ಉಪಪಾದಿಸಿರುತ್ತಾರೆಂದು ಹೇಳುತ್ತಾರೆ.—**ನಿಷಿದ್ಧನಿವೃತ್ತಿರೂಪಙ್ಗಳೆಲ್ಲಾಮ್** - ಶಾಸ್ತ್ರನಿಷಿದ್ಧವಾದವುಗಳಾದುದರಿಂದ ನಿವೃತ್ತಿರೂಪವಾದವುಗಳೆಲ್ಲವೂ, ಶಾಸ್ತ್ರದಲ್ಲಿ ನಿಷೇಧವಾಕ್ಯಗಳಲ್ಲಿ ನಿಷೇಧಿಸಲ್ಪಟ್ಟ ಕರ್ಮಗಳಿಂದ ನಿವೃತ್ತಿಯೂ ಎಂಬ ಭಾವವು, **ಸರ್ವಧರ್ಮಶಬ್ದತ್ತಾಲೆ** - ಸರ್ವವೆಂಬ ವಿಶೇಷಣದಿಂದ ಕೂಡಿದ ಧರ್ಮಶಬ್ದದಿಂದ, ಇಂತಹ ಸಮಸ್ತ ಧರ್ಮಗಳ ಪರಿತ್ಯಾಗ ಸಂದರ್ಭದಲ್ಲಿ, **ಸಙ್ಗ್ರಹೀತ ಮೆನ್ನುಮಿಡಂ** ಸಙ್ಗ್ರಹಿಸಲ್ಪಟ್ಟವೆಂದು ಹೇಳುವ ಸಂದರ್ಭವು, **ಧರ್ಮಶಬ್ದಾರ್ಥಮರಿಯಾಮಲ್**- ಧರ್ಮಶಬ್ದದ ಅರ್ಥವು ತಿಳಿಯದೆ, **ಶೊನ್ನಪಡಿ ಎನ್ರು** - ಹೇಳಿದುದು ಎಂದು, **ಶಿಲ ಆಚಾರ್ಯರುಗಳು** - ಕೆಲವು ಆಚಾರ್ಯರುಗಳು, **ನಿರ್ವಹಿಪ್ಪಾರಗಳ್** - ಸಮಾಧಾನ ಹೇಳಿ ಸರಿಯಾದರ್ಥವನ್ನು ಉಪಪಾದಿಸಿರುತ್ತಾರೆ. ನಿಷಿದ್ಧಧರ್ಮಗಳ ದಶೆಯಿಂದ ನಿವೃತ್ತಿಯೂ ಧರ್ಮಶಬ್ದದಲ್ಲೇ ಸೇರಿ, ಅದರ ಪರಿತ್ಯಾಗವು ಹೇಳಲ್ಪಟ್ಟಿತು, ಎಂಪರೆ ನಿಷಿದ್ಧಧರ್ಮಗಳೂ ಸಹ ಪ್ರಪನ್ನನಿಗೆ ಗ್ರಾಹ್ಯಗಳೇ, ಅವುಗಳ ಆಚರಣೆಯು ಪ್ರಪನ್ನನಿಗೆ ಪ್ರತ್ಯವಾಯ ಹೇತುವಲ್ಲವೆಂಬುದು ಪೂರ್ವಪಕ್ಷಿಗಳ ಅಭಿಪ್ರಾಯವು.

ಮುಂದೆ ಇವಕ್ಕೆ ಸಮಾಧಾನವನ್ನು ಹೇಳುತ್ತಾರೆ.—ಶ್ರೀ ಯತಿವರ್ಯರು **ಸರ್ವಧರ್ಮಾನ್ ಪರಿತ್ಯಜ್ಯ** ಎಂಬುವಕ್ಕೆ ಎರಡು ವಿಧ ಯೋಜನೆಯನ್ನು ಉಪಪಾದಿಸಿರುತ್ತಾರೆ. ಪ್ರಥಮ ಯೋಜನೆಯಲ್ಲಿ ತ್ಯಾಗಶಬ್ದಾರ್ಥವನ್ನು ಮನಸ್ಸಿನಲ್ಲಿಟ್ಟು, ಹಿಂದೆ ಹೇಳಿದ ಕರ್ಮಯೋಗ ಜ್ಞಾನಯೋಗಾಙ್ಗಗಳುಳ್ಳ ಭಕ್ತಿಯೋಗದ ಕರ್ತೃತ್ವ ಫಲಾದಿಗಳನ್ನು ಪರಿತ್ಯಜಿಸಿ ಎಂದರ್ಥಮಾಡಿದರು. ಎರಡನೆಯ ಯೋಜನೆಯಲ್ಲಿ ಲೆಖ್ಖವಿಲ್ಲದೆ ತಾನು ಇದುವರೆಗೆ ಎತ್ತಿರುವ ಜನ್ಮಗಳಲ್ಲೆಲ್ಲಾ ಮಾಡಿರುವ ಲಕ್ಷಾಂತರ ಪಾಪಗಳಿಗೆ ಪ್ರಾಯಶ್ಚಿತ್ತವನ್ನು ಮಾಡುವದು ಸಾಧ್ಯವಿಲ್ಲವೇ ಎಂದು ಶೋಕಿಸುತ್ತಿದ್ದ ಅರ್ಜುನನಿಗೆ ಆ ಎಲ್ಲಾ ಪ್ರಾಯಶ್ಚಿತ್ತ ಧರ್ಮಗಳನ್ನು ತ್ಯಜಿಸಿ ಇವೆಲ್ಲಕ್ಕೂ ಸರ್ವಪ್ರಾಯಶ್ಚಿತ್ತರೂಪವಾಗಿರುವ ಶರಣಾಗತಿಯನ್ನನುಷ್ಠಿಸಿದರೆ ಪಾಪಗಳೆಲ್ಲಾ ತೊಲಗುತ್ತವೆಂದು ಹೇಳಿದುದರಿಂದ, ಫಲಾದಿಗಳು ಮಾತ್ರವೇ ಅಲ್ಲದೆ ಅಧರ್ಮಗಳ ಸ್ವರೂಪತಃ ತ್ಯಾಗಮಾಡಿ ಎಂದು ಅರ್ಥಮಾಡಿದುದರಿಂದ, ಪೂರ್ವಪಕ್ಷಿಗಳು ಮುಂದೆ ಹೇಳುವ ಎರಡನ್ನೂ ಊಹಿಸಿದರು ಹೇಗೆಂದರೆ. (೧) ಸಂಧ್ಯಾವಂದನಾದಿ ಕರ್ಮಗಳೂ, "ಪಾಪೇಭ್ಯೋ ರಕ್ಷಂತಾಂ" ಎಂದಿ

**ಶಿಲ ಆಚಾರ್ಯರ್‌ಗಳ್ ನಿರ್ವಹಿಪ್ಪರ್‌ಗಳ್. ಎಙ್ಙನೇ ಯೆನ್ನಿಲ್?-ನಿವೃತ್ತಿಗಳಿಲೇ ಯೊರು ಫಲತ್ತುಕ್ಕು ಸಾಧನನಾಗ ನಿಯಮ ವಿಶೇಷಙ್ಙಳೊಡನೇ ಶೆಯ್‌ದವೈ**

---

ರುವದರಿಂದ, ಪ್ರಾಯಶ್ಚಿತ್ತರೂಪವಾದ ಕರ್ಮಗಳೇ ಆದುದರಿಂದ, ಅವುಗಳನ್ನೂ ಪರಿತ್ಯಜಿಸಿ ಶರಣಾಗತಿಯನ್ನು ಅನುಷ್ಠಿಸು ಎಂದರ್ಥವಾಗಿರುವದರಿಂದ ಪ್ರಪನ್ನನಿಗೆ ನಿತ್ಯನೈಮಿತ್ತಿಕಗಳು ಅನಾವಶ್ಯಕವು; ಐಚ್ಛಿಕವಾಗಿ ಬೇಕಾದರೆ ಅನುಷ್ಠಿಸಬಹುದು. ತ್ಯಾಗಮಾಡಿದರೂ ಪ್ರತ್ಯವಾಯವಿಲ್ಲವು ಎಂದು ಪೂರ್ವಪಕ್ಷಿಗಳು ಊಹಿಸಿದರು. (೨) ನಿಷಿದ್ಧ ನಿವೃತ್ತಿಗಳೂ ಧರ್ಮವೆಂದಾಗುವದರಿಂದ ಅಂತಹ ನಿಷಿದ್ಧ ನಿವೃತ್ತಿರೂಪ ಧರ್ಮಗಳ ಪರಿತ್ಯಾಗವು ಪ್ರಪನ್ನನಿಗೆ ಈ ಚರಮ ಶ್ಲೋಕದಲ್ಲಿವಿಹಿತ ವಾಗಿರುವದರಿಂದ, ನಿಷಿದ್ಧ ಕರ್ಮಗಳ ಅನುಷ್ಠಾನವೂ ಸಹ ಯುಕ್ತವಾಗ ಪ್ರಪದ ನಕ್ಕೆ ಮೊದಲೇ ಅನುಷ್ಠಿಸಬಹುದೆಂದು ಅವರು ಅರ್ಥಮಾಡಿದರು. ಈ ಪೂರ್ವಪಕ್ಷದ ಮೊದಲನೆಯ ವಿಚಾರದಲ್ಲಿ ಸಂಧ್ಯಾವಂದನಾದಿ ನಿತ್ಯನೈಮಿತ್ತಿಕಗಳ ಪರಿತ್ಯಾಗ ವನ್ನು ಊಹಿಸುವದು ಸರಿಯಲ್ಲವು, ಏಕೆಂದರೆ ಅಹರಹಸ್ಸಂಧ್ಯಾಮುಪಾಸೀತ ಇತ್ಯಾದಿ ವಿಶೇಷ ವಿಧಿಗೆ ವಿರೋಧವಾಗುವದರಿಂದ ಅದು ಅಪಾರ್ಥವು. ಈ ಪೂರ್ವ ಪಕ್ಷದ ಎರಡನೆಯ ವಿಚಾರದಲ್ಲಿ ನಿಷೇಧಿಸಿರುವದರ ದೆಶೆಯಿಂದ ನಿವೃತ್ತಿಯು ಧರ್ಮ ವಾಗುತ್ತದೆಯೇ ಇಲ್ಲವೇ ಎಂಬುದನ್ನು ವಿಚಾರಮಾಡುತ್ತಾರೆ.—ತಾವು ಈ ಅಭಿ ಪ್ರಾಯವನ್ನು ಖಂಡಿಸುವದು ಹಾಗಿರಲಿ, ಇತರ ಆಚಾರ್ಯರುಗಳಲ್ಲಿ ಕೆಲವರೇ ಆ ಅಭಿಪ್ರಾಯವನ್ನು ಖಂಡಿಸಿರುತ್ತಾರೆಂದು ಹೇಳುತ್ತಾರೆ.—ಖಂಡನ ಹೇಗೆ ಎಂದರೆ ಉಪಪಾದಿಸಿ ಹೇಳುತ್ತಾರೆ. ಎಙ್ಙನೇ ಎನ್ನಿಲ್ - ಅದು ಹೇಗೆಂದರೆ **ನಿವೃತ್ತಿಗ ಳಿಲ್** - ಶಾಸ್ತ್ರದಲ್ಲಿ ನಿಷೇಧಿಸಿ ಹೇಳಲ್ಪಟ್ಟವುಗಳಲ್ಲಿ, **ಒರು ಫಲತ್ತುಕ್ಕು ಸಾಧನ ನಾಗ** - ಒಂದು ಫಲಕ್ಕೆ ಸಾಧನವಾಗಿ, **ನಿಯಮ ವಿಶೇಷಙ್ಙಳುಡನ್** - ಶಾಸ್ತ್ರ ನಿಯಮ ವಿಶೇಷಗಳೊಂದಿಗೆ, **ಶೆಯ್‌ದವೈ** - ಮಾಡಲ್ಪಟ್ಟವು, **ಧರ್ಮಶಬ್ದಾರ್ಥ ಮಾಮ್** - ಧರ್ಮ ಶಬ್ದಾರ್ಥ ವುಳ್ಳವುಗಳಾಗುವುವು. ಶ್ರೀ ರುಕ್ಮಾಂಗದರು ಅನು ಷ್ಠಿಸಿದ ಏಕಾದಶೀ ವ್ರತದಲ್ಲಿ ಭುಕ್ತ ಚತುಷ್ಟಯ ತ್ಯಾಗ ಉಂಟು, ಅದು ಧರ್ಮ ವಲ್ಲವೋ ? ಎಂದರೆ ಅದು ಧರ್ಮವೇ ಸರಿ; ಏಕಾದಶೀ ಉಪವಾಸಸಿದ್ಧಿಸಿ ಫಲದಾ ಯಕವಾಗಬೇಕಾದರೆ ನಾಲ್ಕು ಹೊತ್ತಿನಲ್ಲಿ ಆಹಾರವನ್ನು,ಭುಕ್ತ ಚತುಷ್ಟಯವನ್ನು, ಬಿಡಬೇಕೆಂಬ ನಿಯಮ ಉಂಟು. ಇಂತಹ ನಿಯಮವಿರುವದರಿಂದ ಇದು ಧರ್ಮ ವಾಗುತ್ತದೆ. ಇಂತಹ ಧರ್ಮವನ್ನು **ಪರಿತ್ಯಜ್ಯ** ಎಂದರೆ ಫಲ ಕರ್ತೃತ್ವಾದಿಗಳ ತ್ಯಾಗವೆಂದೇ ಹೇಳಬೇಕು. ಹಾಗಲ್ಲವೆ ನಿಷೇಧಿಸಲ್ಪಟ್ಟ ಭುಕ್ತಚತುಷ್ಟಯ ವನ್ನು ಬಿಡುವದರ ತ್ಯಾಗವೆಂದು ಅರ್ಥಮಾಡಿ, ಪ್ರಪನ್ನನು ಊಟಮಾಡಿದರೆ,

**ಧರ್ಮಶಬ್ದಾರ್ಥವಮಾನ್. ಸಾಮಾನ್ಯಮಾನ ಅಹಿಂಸಾದಿಮಾತ್ರಂ ಪಾಪಾ ಭಾವಮಾ ಮಿತ್ತನ್ಯೈಪ್ರೋಕ್ಕಿ ಧರ್ಮ ಶಬ್ದತ್ತುಕ್ಕು ಮುಖ್ಯಾರ್ಥಮನ್ರು. ಆಗ್ಯೆ**

---

ವಿಶೇಷಣಗಳೇ ಇಲ್ಲದೆ ವಿಶೇಷ್ಯವಾದ ಏಕಾದಶೀ ಧರ್ಮವೇ ಸಿದ್ಧಿಸುವದಿಲ್ಲವು. ಆಗ ಅದು ಧರ್ಮವೇ ಆಗುವದಿಲ್ಲವೆಂಬ ಭಾವವು. ಇಲ್ಲಿ ವಿವಕ್ಷಿತ ಪ್ರಮಾಣವು.— **ಸಾಯ ಮಾದ್ಯಂ ತಯೋರಹ್ನೋ ಸ್ಸಾಯಂಪ್ರಾತಶ್ಚ ಮಧ್ಯಮೇ। ಉಪವಾಸ ಫಲಂ ಪ್ರೇಪ್ಸು ರ್ಜಹ್ಯಾದ್ಭುಕ್ತಚತುಷ್ಟಯಮ್। ಐಶ್ವರ್ಯಂ ಸಂತತಂ ಸ್ವರ್ಗಂ ಮುಕ್ತಿಂ ವಾ ಯದ್ಯದಿಚ್ಛತಿ।ಏಕಾದಶ್ಯುಪವಾಸೇನ ತತ್ಸರ್ವಂಲಭತೇ ನರಃ"** ಎಂಬುದು. ಶಾಸ್ತ್ರದಲ್ಲಿ ನಿಷೇಧಿಸಿರುವದರ ನಿವೃತ್ತಿಯು ಧರ್ಮವಾಗುವ ದಿಲ್ಲವೆಂದು ಹೇಳಿದರು. ಧರ್ಮ ಶಬ್ದಾರ್ಥದಲ್ಲಿ ಸೇರಬೇಕಾದರೆ ನಿವೃತ್ತಿಯು ಶಾಸ್ತ್ರದಲ್ಲಿ ನಿಷೇಧಿಸಿ ಹೇಳಲ್ಪಟ್ಟಿದುದಾಗಿರಬೇಕು, ಅದು ಒಂದು ಫಲಕ್ಕೆ ಸಾಧನ ವಾಗಿರಬೇಕು, ಶಾಸ್ತ್ರ ನಿಯಮದಿಂದ ಮಾಡಲ್ಪಡತಕ್ಕದ್ದಾಗಿರಬೇಕು. **"ನಾಹಿಂಸ್ಯಾತ್" "ನಕಳಂಜಂ ಭಕ್ಷಯೇತ್" "ನಾನೃತಂವದೇತ್" "ನಸುರಾಂಪಿಬೇತ್"** ಇತ್ಯಾದಿಗಳಲ್ಲಿ ಶಾಸ್ತ್ರನಿಯಮಪೂರ್ವಕವಾದ ತ್ಯಾಗ ಯಾವದೂ ಇಲ್ಲದುದರಿಂದ ಧರ್ಮಶಬ್ದದಲ್ಲಿ ಇವುಗಳು ಸೇರಲೇ ಇಲ್ಲವಾದುದರಿಂದ, ಅವುಗಳ ಪರಿತ್ಯಾಗವು ಹೇಳಲ್ಪಡಲಿಲ್ಲವು. ಆಯಾ ಸ್ವತಂತ್ರ ವಿಧಿಗಳಿಂದಲೇ ಅಂತಹ ನಿಷಿದ್ಧ ನಿವೃತ್ತಿ ಗಳ ಪರಿತ್ಯಾಗವು ಸರ್ವಾತ್ಮನಾ ಕೂಡದು- ಹೀಗೆ ಅರ್ಥ ಮಾಡದೆ, ನಿಷಿದ್ಧ ನಿವೃತ್ತಿ ಗಳೂ ಧರ್ಮಗಳೇ, ಅವುಗಳ ಪರಿತ್ಯಾಗವೂ ಈ ಚರಮ ಶ್ಲೋಕದಲ್ಲಿ ಹೇಳಲ್ಪಟ್ಟ ವೆಂದು ಅರ್ಥಮಾಡಿದರೆ, ಸುಳ್ಳುಹೇಳಿ, ಕಳಂಜ ಭಕ್ಷಣಮಾಡಿ, ಇತರರನ್ನು ಹಿಂಸಿಸಿ, ಅನಂತರ ಶರಣವನ್ನು ಹೊಂದತಕ್ಕದ್ದೆಂಬ ಅರ್ಥ ಉಂಟಾಗುತ್ತದೆ. ಆದುದರಿಂದ ಹಾಗೆ ಅರ್ಥಮಾಡುವದು ಅಪಾರ್ಥವು ಎಂದು ಹೇಳಿದರು. ಇದನ್ನೇ ಮುಂದಿನ ವಾಕ್ಯದಿಂದ ಉಪಪಾದಿಸಿ ಹೇಳುತ್ತಾರೆ.—

**ಸಾಮಾನ್ಯಮಾನ** - ಫಲ ಮತ್ತು ಶಾಸ್ತ್ರ ನಿಯಮಗಳಿಲ್ಲದ ಬರೀ, **ಅಹಿಂಸಾದಿ ಮಾತ್ರಂ**–ಯಾಗೀಯ ಪಶುಹಿಂಸಾವ್ಯತಿರಿಕ್ತವಾದ ಅಹಿಂಸವೇ ಮೊದಲಾ ದವುಗಳು ಮಾತ್ರ, **ಪಾಪಾಭಾವಮಾತ್ರಮಾಂ** - ಪಾಪಗಳಿಲ್ಲದೇ ಇರುವ ಭಾವ ಮಾತ್ರವುಳ್ಳವುಗಳಾಗುವವು, **ಇತ್ತನ್ಯೈಪ್ರೋಕ್ಕಿ** – ಇಷ್ಟುಮಾತ್ರವಲ್ಲದೆ, **ಧರ್ಮ ಶಬ್ದತ್ತುಕ್ಕು** - ಧರ್ಮಶಬ್ದಕ್ಕೆ, **ಮುಖ್ಯಾರ್ಥಮನ್ರು** – ಮುಖ್ಯಾರ್ಥದಲ್ಲಿ ಸೇರಿದ ವಲ್ಲವು. ಅಹಿಂಸೆಯು ಧರ್ಮವಾಗಲು, ಏಕಾದಶೀ ಉಪವಾಸದಲ್ಲಿ ಭೋಜನತ್ಯಾಗದ ಹಾಗೆ ಒಂದು ಶಾಸ್ತ್ರ ನಿಯಮವಾಗಲಿ, ಒಂದು ಗೊತ್ತಾದ ಫಲವಾಗಲಿ ಇಲ್ಲವು. ಹಿಂಸೆ ಮಾಡಿದರೆ ಪಾಪ ಪ್ರಾಪ್ತವಾಗುತ್ತದೆ. ಅದು ಅಹಿಂಸೆಯಿಂದ ಇಲ್ಲವಾಯಿತು.

**ಯಾಲ್ ಫಲವಿಶೇಷ ನಿಯಮ ವಿಶೇಷಙ್ಗಳೋಡೇ ಕೂಡಿನ ಅಹಿಂಸಾದಿಗಳ್ಳೈ ವಿಡುಗ್ಯೈಯಾವದು ? ಫಲಙ್ಗಳ್ಳೈಯುಮ್ ನಿಯಮಙ್ಗಳ್ಳೈಯುಮ್ ವಿಡುಗ್ಯೈ ; ಮತ್ತುಮ್, ನಿವೃತ್ತಿ ಶಾಸ್ತ್ರತ್ತಿಲ್ ಶೊನ್ನ ನಿವೃತ್ತಿಗಳ್ಳೈ ವಿಡುಗ್ಯೈಕ್ಕು ವಿರಗಿಲ್ಲೈ. ನಿಯಮವಿಶೇಷಾದಿಗಳೋಡೆ ಕೂಡಾದ ಅಹಿಂಸಾದಿ ಮಾತ್ರಮುಮ್ ಧರ್ಮ ಶಬ್ದಾರ್ಥಮೆನ್ನುಮ್ ಪಕ್ಷತ್ತಿಲುಮ್ ಶೊಲ್ಲುಗಿರೋಮ್.—**

---

ಆದುದರಿಂದ ಧರ್ಮಶಬ್ದದಲ್ಲಿ ಅದು ಸೇರಿದುದೇ ಅಲ್ಲವು ಎಂದು ಹೇಳಿದರು. **ಹಾಗಲ್ಲವು** ; ಅಹಿಂಸಾದಿಗಳೂ ಧರ್ಮಗಳೇ ಎಂಬ ವಾದವು ಸರಿಯೇ **ಅಲ್ಲವು** ; ಒಂದುವೇಳೆ ಅವುಗಳೂ ಧರ್ಮಗಳೂ, ನಿವೃತ್ತಿರೂಪ ಧರ್ಮಗಳೂ ಎಂದು ಹೇಳುವೆವು ಎಂದರೆ, ಆ ಸಂದರ್ಭಗಳಲ್ಲಿ ಅವುಗಳನ್ನು **ಪರಿತ್ಯಜ್ಯ** ಎಂದರೆ, ಅವುಗಳಿಂದುಂಟಾಗುವ ಫಲಗಳನ್ನೂ, ಅವುಗಳನ್ನನುಷ್ಠಿಸುವ ಶಾಸ್ತ್ರನಿಯಮಗಳಲ್ಲಿ ಕರ್ತೃತ್ವವನ್ನು **ಬಿಟ್ಟುಬಿಟ್ಟು** ಎಂದರ್ಥ ಮಾಡಬೇಕೇ ವಿನಾ, ಬೇರೆ ಮಾರ್ಗವೇ ಇಲ್ಲವೆಂದು ತಿಳಿಸುತ್ತಾರೆ.—ಆದುದರಿಂದ ವಿರೋಧವಿಲ್ಲದಹಾಗೆ ನಿಷಿದ್ಧ ನಿವೃತ್ತಿರೂಪ ಧರ್ಮತ್ಯಾಗವೆಂದರೇನೆಂಬುದನ್ನು ತಿಳಿಸುತ್ತಾರೆ— **ಆಗ್ಯೈಯಾಲ್**-ಆ ಕಾರಣದಿಂದ **ಫಲವಿಶೇಷ ನಿಯಮವಿಶೇಷಙ್ಗಳೋಡೇ ಕೂಡಿನ** - ಫಲವಿಶೇಷ ನಿಯಮವಿಶೇಷಗಳಿಂದ ಸೇರಿದ, ಅಹಿಂಸಾದಿಗಳನ್ನು, **ವಿಡುಗ್ಯೈಯಾವತು ?—ಪರಿತ್ಯಜ್ಯ** ಎಂದು ಹೇಳಿರುವ ಸಂದರ್ಭದಲ್ಲಿ ಬಿಡೋಣವೆಂಬುದು ಯಾವುದು ಎಂದರೆ—**ಫಲಙ್ಗಳ್ಳೈಯುಂ ನಿಯಮಙ್ಗಳ್ಳೈಯುಮ್ ವಿಡುಗ್ಯೈ**-ಇವೆರಡನ್ನೂ ಬಿಡೋಣವೇ, ಫಲಕರ್ತೃತ್ವತ್ಯಾಗಗಳೇ ಇಲ್ಲಿ ತ್ಯಾಗಗಳು ಎಂಬ ಭಾವವು. **ಮತ್ತು**-ಇನ್ನೇನೆಂದರೆ, **ನಿವೃತ್ತಿ ಶಾಸ್ತ್ರತ್ತಿಲ್** ಶಾಸ್ತ್ರದ ನಿಷೇಧವಾಕ್ಯಗಳಲ್ಲಿ, **ಶೊನ್ನ**-ಹೇಳಲ್ಪಟ್ಟ, **ನಿವೃತ್ತಿಗಳ್ಳೈ** - ನಿಷೇಧ ನಿಯಮಗಳನ್ನು, **ವಿಡುಗ್ಯೈಕ್ಕುವಿರಗಿಲ್ಲೈ** - **ಬಿಡುವದಕ್ಕೆ** ಮಾರ್ಗವಿಲ್ಲ. ಪರಸ್ತ್ರೀ ಸಂಬಂಧ ಬೇಡ, ಅನೃತ ಹೇಳಬೇಡ, ಹಿಂಸೆ ಮಾಡಬೇಡ, ಹೀಗೆಲ್ಲಾ ನಿಷೇಧಿಸಿ ಹೇಳಿರುವ **ಶಾಸ್ತ್ರ** ವಾಕ್ಯಗಳು ಸ್ವತಂತ್ರ ಶಾಸ್ತ್ರಪ್ರಮಾಣಗಳಾದುದರಿಂದ ಅವುಗಳಿಗೆ ವಿರೋಧವಾಗಿ ನಡೆದು ಅವುಗಳನ್ನು **ತ್ಯಾಗಮಾಡಲು ಮಾರ್ಗವಿಲ್ಲವು. ಸರ್ವೇಶ್ವರನ** ಸ್ವತಂತ್ರಗಳಾದ ಆಜ್ಞೆಗಳು ಅಕೃತ್ಯಗಳನ್ನು ಮಾಡಬೇಡವೆಂದು ಶಾಸನಮಾಡಿರುತ್ತದೆ. ಅದನ್ನುಲ್ಲಂಘಿಸಿ ಈತನು ಆ ನಿಷೇಧಿಸಿರುವುವುಗಳನ್ನು ಅನುಷ್ಠಿಸಿದನಾದರೆ **ಅಕೃತ್ಯಕರಣ** ದೋಷಕ್ಕೆ ಗುರಿಯಾಗಿ **ಪಾಪಫಲವನ್ನು ಹೊಂದುವನು.** ಅಂತವನು **ಆಜ್ಞಾಭೇದಿಯು,** ಅಂತವನನ್ನು **ಮಮದ್ರೋಹೀ** ಎಂದು ಸರ್ವೇಶ್ವರನೇ ಹೇಳಿರುತ್ತಾನೆಯಾದುದರಿಂದ ಭಗವನ್ನಿಗ್ರಹಕ್ಕೆ ಒಳಗಾಗುವನು.

ಹಿಂದೆ ಅಹಿಂಸಾದಿಗಳು ಧರ್ಮಶಬ್ದವಲ್ಲೇ ಸೇರಲಿಲ್ಲವು. ಏಕೆಕ್ಕೆಂದರೆ ಫಲ

**ಅಧರ್ಮ ಪರಿಹಾರೇಪಿ ಧರ್ಮತ್ವೇನ ವಿವಕ್ಷಿತೇ । ಸ್ಯಾತ್ಸ್ವತಂತ್ರ ವಿಧೇ ರೇವ ನಿತ್ಯಂ ತಸ್ಯ ಪರಿಗ್ರಹಃ ॥೫೫॥**

---

ನಿಯಮಾದಿಗಳೊಂದಿಗೆ ಅನುಷ್ಠಾನವಿಲ್ಲವಾದುದರಿಂದ ಎಂದು ಹೇಳಿದರು ; . ಆದರೆ ಅಹಿಂಸಾದಿಗಳೂ ಕೂಡ ಧರ್ಮಶಬ್ದದಲ್ಲೇ ಸೇರಿದವು ಎಂದು ಬಲಾತ್ಕರಿಸಿ ಹೇಳಿದರೂ, ಆಗಲೂ ಸಮಾಧಾನವನ್ನು ಹೇಳುವೆವು ಎಂದು ಮುಂದಿನ ವಾಕ್ಯದಿಂದ ಹೇಳುತ್ತಾರೆ.—**ನಿಯಮವಿಶೇಷಾದಿಗಳೋಡೆಕೂಡಾದ** – ಶಾಸ್ತ್ರದಲ್ಲಿ ಹೇಳಿರುವ ನಿಯಮಗಳ ಸಂಬಂಧವ್ಯಾವುದೂ ಇಲ್ಲದ, **ಅಹಿಂಸಾದಿಮಾತ್ರಮುಮ್** – ಅಹಿಂಸಾ ಮೊದಲಾದವು ಕೂಡ, **ಧರ್ಮಶಬ್ದಾರ್ಥಂ** - ಧರ್ಮಶಬ್ದಾರ್ಥವುಳ್ಳದೆಂದು, **ಎನ್ರುಮ್ ಪಕ್ಷತ್ತಿಲುಮ್** - ಎಂದು ಹೇಳುವ ಸಂದರ್ಭದಲ್ಲೂ, **ಶೊಲ್ಲುಗಿರೋಮ್**- ಸಮಾಧಾನವನ್ನು ಹೇಳುವೆವು. ಸಮಾಧಾನವು ಆವಶ್ಯಕವೆಂದು ಭಾವಿಸಿ ಒಂದು ಕಾರಿಕೆಯ ಮೂಲಕವಾಗಿ ಹೇಳುತ್ತಾರೆ.—

**ಅಧರ್ಮ ಪರಿಹಾರೇಪಿ**-ಅಧರ್ಮವನ್ನು ಮಾಡಬಾರದೆಂಬ ನಿಷೇಧವೂ ಕೂಡ, **ಧರ್ಮತ್ವೇನವಿವಕ್ಷಿತೇ**-ಧರ್ಮವೆಂದು ಒಂದುವೇಳೆ ಹೇಳಲುದ್ಯುಕ್ತರಾದರೆ, ಅಂತಹ ಅಧರ್ಮ ಪರಿಹಾರಗಳು ಧರ್ಮವೆಂದು ಹೇಳುವದೇ ಕಷ್ಟವು, ಹಾಗಲ್ಲದೆ ಧರ್ಮವೆಂದು ಒಂದುವೇಳೆ ಅಙ್ಗೀಕರಿಸುತ್ತೇವೆ ಎಂದರೆ, **ತಸ್ಯಪರಿಗ್ರಹಃ** - ಆ ಅಧರ್ಮ ಪರಿಹಾರವನ್ನು ಅಙ್ಗೀಕರಿಸೋಣವು, **ಸ್ವತಂತ್ರವಿಧೇಃ** - ಹಿಂಸಾದಿಗಳನ್ನು ಮಾಡತಕ್ಕದ್ದಲ್ಲವೆಂದು, ಯಾವುದೊಂದೂ ಫಲಕಾಮನೆಗೆ ಅಧೀನವಾಗದೇನೆ ಸ್ವತಂತ್ರವಾಗಿರುವ ವಿಧಿಬಲದಿಂದ, ಅಥವಾ ಪ್ರಪತ್ತಿಗೆ ಅಙ್ಗವಾಗದಿರುವ **ಸ್ವತಂತ್ರ** ವಿಧಿಬಲದಿಂದ, **ನಿತ್ಯಂಸ್ಯಾತ್** - ಯಾವಾಗಲೂ ಅನುಷ್ಠಿಸತಕ್ಕದ್ದಾಗಿರುತ್ತದೆ. ಅಥವಾ, **ಸ್ವತಂತ್ರ ವಿಧೇಃ** - ಸ್ವತಂತ್ರನಾದ ಭಗವಂತನ ಆಜ್ಞೆಯ ಮೂಲಕ, **ನಿತ್ಯಂ ಸ್ಯಾತ್** - ಯಾವಾಗಲೂ ಅನುಷ್ಠಿಸತಕ್ಕದ್ದಾಗಿರುತ್ತದೆ. ಇಲ್ಲಿ **ನಿತ್ಯಂ** ಎಂದು ಇರುವದರಿಂದ ಪ್ರಪನ್ನನಾಗುವದಕ್ಕೆ ಮುಂದೆಯೂ, ಭರನ್ಯಾಸಾನುಷ್ಠಾನಂತರವೂ ದೇಹಾವಸಾನದವರೆಗೂ ಅಧರ್ಮಪರಿಹಾರವು ಆವಶ್ಯಕವೆಂಬ ಭಾವವು, ಇದೂ ಅಲ್ಲದೆ ಅಧರ್ಮವು ಯಾವಾಗಲೂ ಕೂಡದು, ಒಂದುವೇಳೆ ಅಧರ್ಮವು ಪ್ರಾಪ್ತವಾದರೆ, ಅದು ಬುದ್ಧಿಪೂರ್ವಕವಾಗಿದ್ದ ಪಕ್ಷದಲ್ಲಿ, "**ಅಪಾಯಸಂಪ್ಲವೇ ಸದ್ಯಃ ಪ್ರಾಯಶ್ಚಿತ್ತಂ ಸಮಾಚರೇತ್**" ಎಂದು ವಿಧಿಯೇ ಇರುವದರಿಂದ, ಅಧರ್ಮವು ಮುಮುಕ್ಷುವಿಗೆ, ಅದರಲ್ಲೂ ಪ್ರಪನ್ನನಿಗೆ, ಸರ್ವಾತ್ಮನಾ ಕೂಡದು. ಆದುದರಿಂದಲೇ ಪ್ರಾಚೀನರು ಸ್ವತಂತ್ರನಾದ ಭಗವಂತನ ಪ್ರೇರಿವಿಧಿಯಿಂದಲೇ ಅಧರ್ಮ ಪರಿಹಾರವು ಆವಶ್ಯಕವಾಗಿ ಸದಾ ಅಙ್ಗೀಕರಿಸತಕ್ಕದ್ದೆಂಬ ವ್ಯಾಖ್ಯಾನವು ಯುಕ್ತವಾದುದೇ.

**ಏವಂ ಸರ್ವಧರ್ಮತ್ಯಾಗಾರ್ಥೇ ನಿಶ್ಚಿತೇ ಸತಿ, "ಚೋದನಾಂ ಪ್ರತಿಚೋದನಾಂ ಇತಿ ವಾಕ್ಯಸ್ಯ ತಾತ್ಪರ್ಯಮಾಹ.**

---

**ಇಪ್ಪಡಿ (ಯತ್ತ) ಯೂನ ಪಿನ್ಬು "ಚೋದನಾಂ ಪ್ರತಿಚೋದನಾಂ"**

---

**ಸ್ವತಂತ್ರವಿಧೇಃ** ಎಂದರೆ ಪ್ರಪತ್ತಿಗೆ ಅಙ್ಗಗಳಿಲ್ಲದಿರುವ ಬೇರೆ ಸ್ವತಂತ್ರವಿಧಿಯಾದ "**ನ ಹಿಂಸ್ಯಾತ್ ಸರ್ವಭೂತಾನಿ**" ಎಂದಿರುವದರಿಂದ, ಅಙ್ಗೀಕಾರ್ಯವೆಂದು ಅರ್ಥಮಾಡುವದೂ ಸಹ ಸಮಂಜಸವೇ. ಏಕೆಂದರೆ, ಸ್ವತಂತ್ರವಿಧಿಗಳಿಂದ ಏರ್ಪಟ್ಟವುಗಳನ್ನು "**ಸರ್ವಧರ್ಮಾನ್ ಪರಿತ್ಯಜ್ಯ**" ಎಂಬ ವಾಕ್ಯದ ಮೂಲಕ ತ್ಯಾಗಮಾಡಲು ಸಾಧ್ಯವಿಲ್ಲವೆಂದು ತೋರಿಬರುವದರಿಂದ, **ಅಹರಹಸ್ಸಂಧ್ಯಾಮುಪಾಸೀತ**" ಎಂಬ ಸ್ವತಂತ್ರ ವಿಧಿಬಲದಿಂದ ನಿತ್ಯ ನೈಮಿತ್ತಿಕಾನುಷ್ಠಾನಗಳ ತ್ಯಾಗವೂ ಸರಿಯಲ್ಲವೆಂಬ ಭಾವವೂ ಉಂಟಾಗುವದರಿಂದ ಹಾಗೆ ವ್ಯಾಖ್ಯಾನವೂ ಯುಕ್ತವೇ.

ಚರಮ ಶ್ಲೋಕದಲ್ಲಿ ಹೇಳಲ್ಪಟ್ಟಿರುವ ಸರ್ವಧರ್ಮತ್ಯಾಗವು ಅಧರ್ಮ ಪರಿಹಾರದ ತ್ಯಾಗವನ್ನು ಬೋಧಿಸಲಿಲ್ಲವು. ಅಧರ್ಮ ಪರಿಹಾರವು ಸ್ವತಂತ್ರ ವಿಧಿ ಬಲದಿಂದ ಸಿದ್ಧವಾದುದರಿಂದ ಅದರ ತ್ಯಾಗವು ಮೋಕ್ಷಾರ್ಥಿಗೂ ಪ್ರಪನ್ನನಿಗೂ ಸರ್ವಾತ್ಮನಾ ಯುಕ್ತವಲ್ಲವು. ಅಂತಹ ತ್ಯಾಗವು ಭಗವನ್ನಿಗ್ರಹವನ್ನುಂಟುಮಾಡುತ್ತದೆಯಾದುದರಿಂದ, **ಸರ್ವಧರ್ಮಾನ್** ಎಂಬುವಕ್ಕೆ ಸಮಸ್ತ ಧರ್ಮಗಳನ್ನೂ ಎಂದು ಅರ್ಥಮಾಡಲು ಸಾಧ್ಯವಿಲ್ಲವು; ಸಙ್ಕೋಚಮಾಡಿ ಅರ್ಥಹೇಳಬೇಕಾಗಿದೆ ಎಂದು ಹೇಳಿದರು. ಹಾಗಾದರೆ ಶ್ರೀಕೃಷ್ಣ ಭಗವಾನರವರು ಪರಮ ಭಾಗವತರಾದ ಉದ್ಧವರಿಗೆ ಮಾಡಿದ"**ತಸ್ಮಾತ್ತ್ವಮುದ್ಧವೋತ್ಸೃಜ್ಯ ಚೋದನಾಂ ಪ್ರತಿಚೋದನಾಂ**" ಎಂಬ ಉಪದೇಶದ ಅರ್ಥವೇನು? ಎಂದರೆ ಅದಕ್ಕೆ ಪೂರ್ವ ಪಕ್ಷಿಗಳು "ಅನುಕೂಲ್ಯ ಪರಿತ್ಯಾಗವನ್ನೂ ಮತ್ತು ಪ್ರಾತಿಕೂಲ್ಯ ಪರಿಹಾರದ ಪರಿತ್ಯಾಗವನ್ನೂ" ಎಂದು ಮಾಡಿರುವ ಅರ್ಥವು ಸುತರಾಂ ಪ್ರಾಜ್ಞರು ಅನುಮೋದಿಸದ ತಾತ್ಪರ್ಯವೆಂದೂ ಹಾಗೆ ಅನುಮೋದಿಸದೇ ಇರುವದಕ್ಕೆ ಕಾರಣವನ್ನೂ ಪ್ರಥಮತಃ ಎರಡು ಕಾರಿಕೆಗಳಿಂದ ತಿಳಿಸಿ, ಅನಂತರ ಆ ಶ್ಲೋಕಗಳ ಸರಿಯಾದ ತಾತ್ಪರ್ಯವನ್ನು ಉಪದೇಶಿಸುತ್ತಾರೆ.

**ಹೀಗೆ ಸರ್ವಧರ್ಮತ್ಯಾಗಾರ್ಥವು ಸ್ಥಾಪಿತವಾದರೆ "ಚೋದನಾಂ ಪ್ರತಿಚೋದನಾಂ" ಎಂಬ ವಾಕ್ಯತಾತ್ಪರ್ಯವನ್ನು ತಿಳಿಸುತ್ತಾರೆ.**

---

ಇಪ್ಪಡಿಯೂನ ಪಿನ್ಬು - ಸರ್ವ ಧರ್ಮತ್ಯಾಗ ವಿಷಯದಲ್ಲಿ ಅಭಿಪ್ರಾಯವು

**ಎಂಗಿರನಿಡತ್ತಿಲ್, "ಆನುಕೂಲ್ಯ ಪರಿತ್ಯಾಗಂ ಪ್ರಾತಿಕೂಲ್ಯ ಪರಿಗ್ರಹಮ್ । ಪ್ರಪತ್ತ್ಯಙ್ಗಂ ಪ್ರತಿಜ್ಞಾತುಂ ನಶಕ್ಯಂ ಸಾಧು ಸಂಸದಿ । ಪ್ರಪನ್ನ ಮಧಿಕೃತ್ಯೈವ ಸದಾಚಾರಾನತಿ ಕ್ರಮಃ । ಪ್ರಪತ್ತ್ಯಧ್ಯಾಯ ಪಠಿತಃ ಪ್ರತಿ ಸಂಧೀಯತಾ ಮಿಹ ||೫೬, ೫೭||**

ಮೇಲೆ, ಉಪಪಾದಿಸಿದ ರೀತಿಯಲ್ಲಿ ನಿರ್ಣೀತವಾದ ನಂತರ, "**ಚೋದನಾಂ ಪ್ರತಿಚೋದನಾಂ" ಎಙ್ಗಿರ ನಿಡತ್ತಿಲ್** - ಎಂದು ಹೇಳಿದ ಸ್ಥಳದಲ್ಲಿ ಅಥವಾ ಶ್ಲೋಕದಲ್ಲಿ, "**ಆನುಕೂಲ್ಯ ಪರಿತ್ಯಾಗಂ** - ಅನುಕೂಲವಾದವುಗಳ ಪರಿತ್ಯಾಗವು, ಶಾಸ್ತ್ರದಲ್ಲಿ ವಿಧಿವಾಕ್ಯಗಳ ಮೂಲಕ ಹೇಳಲ್ಪಟ್ಟವುಗಳ ಪರಿತ್ಯಾಗವೂ, **ಪ್ರಾತಿಕೂಲ್ಯ ಪರಿಗ್ರಹಮ್** - ಅಥವಾ ಪರಿಹಾರವು ಆವಶ್ಯಕವೆಂದು ಹೇಳಿದ ನಿಷೇಧವಾಕ್ಯಗಳ ತ್ಯಾಗರೂಪವಾದ ಪ್ರಾತಿಕೂಲ್ಯಪರಿಗ್ರಹವೂ ಸಹ, **ಪ್ರಪತ್ತ್ಯಙ್ಗಮಿತಿ ಪ್ರತಿಜ್ಞಾತುಂ** - ಪ್ರಪತ್ತಿಗೆ ಅಙ್ಗಗಳೆಂದು ಪ್ರತಿಜ್ಞಾ ವಾಕ್ಯವನ್ನು ಪೂರ್ವಪಕ್ಷಿಗಳು ಹೇಳುವದಕ್ಕೆ, **ಸಾಧುಸಂಸದಿ** - ತುಂಬಾ ಪ್ರಾಜ್ಞರಾದವರುಗಳ ಗುಂಪಿನಲ್ಲಿ, **ನಶಕ್ಯಂ**-ಸಾಧ್ಯವೇ ಇಲ್ಲವು; ಪ್ರಾಜ್ಞರಾದವರ ಮುಂದೆ ಅಂತಹ ತಾತ್ಪರ್ಯವನ್ನು ಹೇಳುವದು ಅವರುಗಳ ಮರ್ಯಾದೆಗೆ ಕುಂದಕವೆಂಬ ಭಾವವು. ಅದೇತಕ್ಕೆಂದರೆ ಅಂತಹ ವಿಪರೀತಾರ್ಥವನ್ನು ಅವರುಗಳು ಎಂದಿಗೂ ಪುರಸ್ಕರಿಸಲಾರರೆಂದು ಹೇಳಿದಂತಾಯಿತು. ಇಂತಹ ವಿಪರೀತಾರ್ಥದಿಂದ ಸದಾಚಾರಾತಿಕ್ರಮವು ಕೂಡದೆಂದು ಪ್ರಪತ್ತ್ಯಧ್ಯಾಯದಲ್ಲಿ ಪಠಿತವಾಗಿದೆ ;ಅದನ್ನು ಅನುಸಂಧಾನಮಾಡಿ; ಎಂದು ಹೇಳುತ್ತಾರೆ.—"**ಪ್ರಪನ್ನಮಧಿಕೃತ್ಯೈವ** - ಪ್ರಪನ್ನಾಧಿಕಾರಿಯನ್ನುದ್ದೇಶಿಸಿಯೇ, **ಸದಾಚಾರಾನತಿಕ್ರಮಃ**-ಶಿಷ್ಟಾಚಾರದ ಉಲ್ಲಂಘನೆಯು ಕೂಡದೆಂದೂ, ಇದರಿಂದ ವರ್ಣಾಶ್ರಮಾಚಾರತ್ಯಾಗವೂ ಕೂಡ ಸರಿಯಲ್ಲವೆಂದೂ, ಸೂಚಿಸಲ್ಪಟ್ಟಿತು. **ಪ್ರಪತ್ತ್ಯಧ್ಯಾಯಪಠಿತಃ**-ಪ್ರಪತ್ತಿಯನ್ನು ಕುರಿತು ಹೇಳುವ ಅಧಿಕಾರದಲ್ಲಿ ಹೇಳಲ್ಪಟ್ಟಿದುದು, **ಇಹ** - ಈ ಸಂದರ್ಭದಲ್ಲಿ, **ಪ್ರತಿ ಸಂಧೀಯತಾಂ** - ಅನುಸಂಧಾನಮಾಡಲ್ಪಡಲಿ, ಅದು ಯಾವುದೆಂದರೆ "**ಏವಂ ವಿಲಂಘಯನ್ ಮರ್ತ್ಯೋ ಮರ್ಯಾದಾಂ ವೇದ ನಿರ್ಮಿತಾಂ । ಪ್ರಿಯೋಽಪಿ ನ ಪ್ರಿಯೋ ಸೌ ಮೇ ಮದಾಜ್ಞಾವ್ಯತಿವರ್ತನಾತ್"** ಇದರರ್ಥವು,—**ವೇದ ನಿರ್ಮಿತಾಂ** - ವೇದಶಾಸ್ತ್ರದಲ್ಲಿ ಹೇಳಲ್ಪಟ್ಟ, **ಮರ್ಯಾದಾಂ** - ವಿಧಿ ನಿಷೇಧರೂಪದಲ್ಲಿ ಹೇಳಲ್ಪಟ್ಟ ಎಲ್ಲೆಯನ್ನು, **ಏವಂ ವಿಲಂಘಯನ್**-ಈ ಪರಿಯಲ್ಲಿ ಉಲ್ಲಂಘಿಸುವ, **ಮರ್ತ್ಯಃ** - ಮನುಷ್ಯನು, ಎಂದರೆ ಕೃತ್ಯಾಕರಣ ಅಕೃತ್ಯಕರಣಾದಿ ದೋಷಗಳುಳ್ಳವನು, **ಪ್ರಿಯೋಽಪಿ** - ಪ್ರಪನ್ನನಾದುದರಿಂದ ಪ್ರಿಯನಾಗಿದ್ದರೂ, **ಮದಾಜ್ಞಾ ವ್ಯತಿವರ್ತನಾತ್** - ಅಂತಹ ವಿಧಿನಿಷೇಧ

"ಪ್ರವೃತ್ತಿಂಚ" ನಿವೃತ್ತಿಂಚ" ಎಂಗಿರವಿಡತ್ತಿಲುಮ್ ಪ್ರಪತ್ತಿಕ್ಕಙ್ಗ ಮಾಗ ವೊನ್ರುಮ್ ಸ್ವೀಕರಿಕ್ಕವೇಣ್ಡಾ ವೆಂಗಿರದಾಮಿತ್ತನ್ನೈ.

---

ರೂಪ ಶಾಸನಗಳು ನನ್ನ ಆಜ್ಞೆಗಳಾಗಿ, ಅಂತವುಗಳನ್ನು ಅತಿಕ್ರಮಿಸುವದರಿಂದ, ಆಜ್ಞಾಛೇದೀ ಮಮದ್ರೋಹೀ ಎಂದು ಹೇಳಿರುವ ಹಾಗೆ, ಅಸೌ- ಈತನು, ಮೇ- ನನಗೆ, ನಪ್ರಿಯಃ- ಈಗ ಪ್ರಿಯನಲ್ಲವು," ಎಂಬುದು ಅನುಸಂಧಾನಮಾಡತಕ್ಕದ್ದಾಗಿದೆ ಎಂಬ ಭಾವವು. "ಪ್ರವೃತ್ತಿಂಚ ನಿವೃತ್ತಿಂಚ ಎಙ್ಗಿರವಿಡತ್ತಿಲುಮ್- ಪ್ರವೃತ್ತಿಂಚ ನಿವೃತ್ತಿಂಚ ಎಂದು ಹೇಳಿರುವ ಸ್ಥಳದಲ್ಲೂ, ಪ್ರಪತ್ತಿಕ್ಕು ಅಙ್ಗಮಾಗ- ಪ್ರಪತ್ತಿಗೆ ಅಙ್ಗವಾಗಿ, ವೊನ್ರುಂ ಸ್ವೀಕರಿಕ್ಕವೇಣ್ಡಾ- ಅದಕ್ಕೆ ಹೇಳಲ್ಪಟ್ಟ ಐದು ಅಂಗಗಳಲ್ಲದೆ, ಇನ್ನು ಯಾವುದನ್ನೂ ಅಂಗವಾಗಿ ಅಙ್ಗೀಕರಿಸಬೇಡ, ಎಙ್ಗಿರದಾಮಿತ್ತನ್ನೈ- ಎಂದು ಹೇಳಿದ ಹಾಗೆ ಆಗುವದು, ಅಷ್ಟುಮಾತ್ರವೇ ಸರಿ ಎಂಬ ಭಾವವು. ಈ ಎಲ್ಲಾ ಅಭಿಪ್ರಾಯಗಳನ್ನೂ ಒಳಗೊಂಡಿರುವ ಹಾಗೆ "ತಸ್ಮಾತ್ತ್ವಮುದ್ಧವೋತ್ಸೃಜ್ಯ ಚೋದನಾಂ ಪ್ರತಿಚೋದನಾಂ" ಎಂಬುದಕ್ಕೆ ಸವಿಸ್ತರವಾಗಿ ಸರಿಯಾದ ಅರ್ಥವು ಹಿಂದೆಯೇ ಬರೆಯಲ್ಪಟ್ಟಿರುತ್ತದೆ. ೨೬೯ನೆಯ ಪುಟವನ್ನು ಪರಾಂಬರಿಸಿ. ಚೋದನ ಶಬ್ದದಿಂದ ಯಜ್ಞ ಯಾಗಾದಿ ಕರ್ಮಗಳೂ, ಪ್ರತಿಚೋದನಾ ಶಬ್ದದಿಂದ ಪಾಪಗಳಿಗೆ ಪ್ರತಿಯಾದ ಚೋದನಾ ಎಂದರೆ ಪ್ರಾಯಶ್ಚಿತ್ತ ಕರ್ಮಗಳೂ, ಪ್ರವೃತ್ತಿ ಎಂಬುದರಿಂದ ತೀರ್ಥಯಾತ್ರೆ, ಪುಣ್ಯಕ್ಷೇತ್ರ ಯಾತ್ರೆ, ದಾನ, ತಪಸ್ಸೇ ಮೊದಲಾದವುಗಳೂ, ನಿವೃತ್ತಿ ಎಂಬುದರಿಂದ ಸನ್ಯಾಸಾಶ್ರಮ ಮೊದಲಾದವು ಹೇಳಲ್ಪಟ್ಟವೆಂದು ಭಾವಿಸಿ, ಇವು ಯಾವುವೂ ಈ ಪರಮ ಶ್ರೇಷ್ಠವಾದ ಉಪಾಯಕ್ಕೆ ಅಙ್ಗವಾಗುವದಿಲ್ಲವೆಂದು ಶ್ರೀಕೃಷ್ಣನು ಉಪದೇಶಿಸಿದನೆಂದು ಭಾವಿಸತಕ್ಕದ್ದು. ಸರ್ವೇಶ್ವರನು ವಿಧಿನಿಷೇಧ ವಾಕ್ಯಗಳ ಮೂಲಕ ತನ್ನ ಆಜ್ಞೆಗಳನ್ನು ತಿಳಿಸಿ ಅವುಗಳನ್ನೇ ಉಲ್ಲಂಘಿಸು ಎಂದು ಎಲ್ಲಿಯಾದರೂ ಹೇಳಿಯಾನೇ? ಆದುದರಿಂದ ಇಲ್ಲಿ ಕೆಲವು ಧರ್ಮಗಳನ್ನು ಬಿಟ್ಟುಬಿಡು ಎಂದರೆ ಯಾವ ಶಾಸ್ತ್ರ ಮರ್ಯಾದೆಗೂ ವಿರೋಧವಿಲ್ಲದಹಾಗೆ ಅದನ್ನು ಅನ್ವಯಿಸಬೇಕಾದರೆ, ಅವುಗಳನ್ನು ಪ್ರಪತ್ತಿಗೆ ಅಙ್ಗವಾಗಿ ಸಾಧನವಾಗಿ ಅಙ್ಗೀಕರಿಸಬೇಡ ಎಂಬರ್ಥವಾಗಲಿ, ಅಥವಾ ಪಾಪನಿವಾರಣೆಗಾಗಿ ಪ್ರಾಯಶ್ಚಿತ್ತರೂಪ ಧರ್ಮಗಳು ಆವಶ್ಯಕವೆಂದು ಭಾವಿಸದೆ ಎಂಬರ್ಥವಾಗಲಿ, ಅಥವಾ ಸ್ವತಂತ್ರ ವಿಧಿಗಳ ಮೂಲಕ ಅನುಷ್ಠಿಸತಕ್ಕ ಧರ್ಮಗಳಾಗಿದ್ದಪಕ್ಷದಲ್ಲಿ ಅವುಗಳಲ್ಲಿ ಕರ್ತೃತ್ವ ಫಲಾದಿಗಳನ್ನು ತ್ಯಾಗಮಾಡಿ ಎಂದು ಹೀಗೆ ಅರ್ಥಮಾಡಬೇಕೇವಿನಾ, ವಿಶುದ್ಧ ಧರ್ಮಾಚರಣೆಯಿಂದ ನಿವೃತ್ತಿಯು ತ್ಯಾಗವೂ ಹೇಳಲ್ಪಟ್ಟಿತೆಂದು ಭಾವಿಸಿದರೆ, ಅಂತಹ ಅಭಿಪ್ರಾಯವುಳ್ಳವರು ಸತ್ಪುರು

**ಚೋದನಾ ಪ್ರತಿಚೋದನಯೋಃ ಪ್ರವೃತ್ತಿ ನಿವೃತ್ತ್ಯೋಃ ಪರಿತ್ಯಾಗಸ್ಯ ನಿರ್ವಾಹಾನ್ತರಂ ಪ್ರದರ್ಶಯತಿ.**

**ಮುಮುಕ್ಷು ಮಾತ್ರತ್ತೈಪ್ಪತ್ತ (೧)"ತ್ರೈವರ್ಗಿಕಾಂ ಸ್ತ್ಯಜೇದ್ಧರ್ಮಾ" ಎಂಗಿರಕಟ್ಟಳೈಯಿಲೇ ಫಲಾನ್ತರ ಸಾಧನಮಾಗ ಚೋದಿತ್ತೈಗಳಾನ ಪ್ರವೃತ್ತಿ ನಿವೃತ್ತಿಗಳೈಯುಮ್, ಅವತ್ತುಕ್ಕುರುಪ್ಪಾನ ಶಾಸ್ತ್ರಙ್ಗಳೈಯುಮ್ ವಿಡಚ್ಚೊನ್ನದಾಗವುಮಾಮ್.**

---

ಪರ ಗೋಷ್ಠಿಗೇ ಅರ್ಹರಲ್ಲವು. ಏಕೆಂದರೆ ವೇದ ಮರ್ಯಾದೆಗಳನ್ನು ಅವರು ಉಲ್ಲಂಘಿಸಿ ನಡೆಯಬಹುದೆಂದು ಅಭಿಪ್ರಾಯಪಟ್ಟವನಾದುದರಿಂದ ಅರ್ಹರಾಗುವದಿಲ್ಲವು. ಈ ಶ್ಲೋಕಗಳ ಹಿಂದೆಯೇ, ಉದ್ಧವರಿಗೆ ಶ್ರೀ ಕೃಷ್ಣನು ಶರಣಾಗತ್ಯನುಷ್ಠಾನಕ್ಕೆ ಈ ಭರನ್ಯಾಸ ನಿಷ್ಠರ ಸತ್ಸಙ್ಗವೇ ಸಾಧ್ಯವೂ ಸಾಧನವೂ ಎಂದು ಹೇಳಿರುತ್ತಾರೆ.

**"ಚೋದನ ಪ್ರತಿಚೋದನ" ಗಳ ಮತ್ತು "ಪ್ರವೃತ್ತಿ ನಿವೃತ್ತಿಗಳ" ಪರಿತ್ಯಾಗಕ್ಕೆ ಇನ್ನೊಂದು ವಿಧವಾಗಿಯೂ ನಿರ್ವಾಹವು.**

ಗೀತಾಚರಮಶ್ಲೋಕಕ್ಕೂ ಈ ಎರಡು ಶ್ಲೋಕಗಳಿಗೂ, ಏಕ ಕಂಠ್ಯದಿಂದ ಅರ್ಥಹೇಳುವದು ಯುಕ್ತವಾದುದರಿಂದ, ವಿಹಿತವಾದುದರ ಪ್ರವೃತ್ತಿಯೂ, ನಿಷಿದ್ಧವಾದವುಗಳಿಂದ ನಿವೃತ್ತಿಯೂ ಭರನ್ಯಾಸಕ್ಕೆ ಅಙ್ಗವಾಗಿ ಭಾವಿಸತಕ್ಕದ್ದಲ್ಲವೆಂದು ಒಂದು ವಿಧವಾದ ನಿರ್ವಾಹವನ್ನು ದಯಪಾಲಿಸಿದರು. ಈಗ ಇನ್ನೊಂದು ವಿಧವಾಗಿಯೂ ಅನ್ವಯಿಸಬಹುದೆಂದು ಹೇಳುತ್ತಾರೆ ಹೇಗೆಂದರೆ,—**ಮುಮುಕ್ಷು ಮಾತ್ರತ್ತೈಪ್ಪತ್ತ** - ಮೋಕ್ಷಾರ್ಥಿಮಾತ್ರವಾಗಿರುವ ಅಧಿಕಾರಿಯನ್ನು ಕುರಿತು, ಎಂದರೆ ಧರ್ಮಾರ್ಥಕಾಮ ಫಲಾಪೇಕ್ಷೆಯಿಲ್ಲದೆ ಮೋಕ್ಷದಲ್ಲಿ ಮಾತ್ರವೇ ಅಪೇಕ್ಷೆ ಇರುವ ಅಧಿಕಾರಿಯನ್ನು ಕುರಿತು, **"ತ್ರೈವರ್ಗಿಕಾನ್** - ಧರ್ಮಾರ್ಥಕಾಮರೂಪಗಳಾದ ಕಾಮ್ಯ ಫಲಗಳನ್ನುಂಟುಮಾಡುವ, **ಧರ್ಮಾ** - ಧರ್ಮಗಳನ್ನು, **ತ್ಯಜೇತ್** - ತ್ಯಜಿಸತಕ್ಕದ್ದು" **ತ್ರೈವರ್ಗಿಕವು** ಯಾವುದೆಂದರೆ ನಾಲ್ಕು ಪುರುಷಾರ್ಥಗಳಲ್ಲಿ ಮೋಕ್ಷೇತರಗಳಾದ ಧರ್ಮಾರ್ಥಕಾಮಗಳು, **ಎಂಗಿರಕಟ್ಟಳೈಯಿಲೇ** - ಎಂಬ ಶಾಸ್ತ್ರಮರ್ಯಾದೆಗೆ ಅನುಗುಣವಾಗಿ, **ಫಲಾನ್ತರ ಸಾಧನ ಮಾಹ** - ಮೋಕ್ಷವಲ್ಲದೆ ನಶ್ವರಗಳಾದ ಕಾಮ್ಯ ಫಲಗಳಿಗೆ ಸಾಧನವೆಂದು, **ಚೋದಿತ್ತೈಗಳಾನ** - ಶಾಸ್ತ್ರದಲ್ಲಿ ವಿಧಿಸಲ್ಪ

---

(೧) ವಿ. ಪು.

## ಅನ್ಯಥಾ ಬಾಧಕವಾದ

**ಇಜ್ಜನನ್ರಿಕ್ಕೇ ನಿತ್ಯನೈಮಿತ್ತಿಕಾದಿಗಳುಡೈಯ ಸ್ವರೂಪತ್ಯಾಗಮ್ ವಿವಕ್ಷಿತಮೆನ್ನಿಲ್, ಮುರ್ಚೊನ್ನ ಸರ್ವವಿರೋಧಮುಮ್ ಪ್ರಸಂಗಿಕ್ಕುಮ್.**

---

ಟ್ಟಿರುವ, ಪ್ರವೃತ್ತಿ ನಿವೃತ್ತಿರೂಪಧರ್ಮಗಳನ್ನೂ, **ಅವತ್ತುಕ್ಕುರಿಪ್ಪಾನ**- ಅವುಗಳಿಗೆ ಸಂಬಂಧಿಸಿದ, ಶಾಸ್ತ್ರಗಳನ್ನೂ ಎಂದರೆ ಶಾಸ್ತ್ರಪ್ರಕ್ರಿಯೆಗಳನ್ನೂ, **ವಿಡಚೊನ್ನದಾಗವುಮಾಮ್** - ಪರಿತ್ಯಾಗಮಾಡು ಎಂಬ ಉಪದೇಶವಾಗಿಯೂ ಭಾವಿಸಬಹುದು. ನಶ್ವರಗಳಾದ ಫಲಾಂತರಗಳನ್ನು ಸಾಧಿಸಿಕೊಡುವ ಕಾಮ್ಯರೂಪ ಧರ್ಮಗಳನ್ನೂ ತ್ಯಜಿಸತಕ್ಕದ್ದೆಂದೂ ಅರ್ಥ ಮಾಡಿದರೂ ಮಾಡಬಹುದು ಎಂದು ಹೇಳಲ್ಪಟ್ಟಿತು.

ಹೀಗೆ ಅಭಿಪ್ರಾಯವಲ್ಲವೆನ್ನಲು ಬಾಧಕಗಳನ್ನು ತೋರ್ಪಡಿಸುತ್ತಾರೆ.

---

**ಇಜ್ಜನನ್ರಿಕ್ಕೇ** ಶ್ರೀ ಕೃಷ್ಣ ಭಗವಾನರವರ ಈ ಅಮೋಘೋಪದೇಶವಾದ ಚೋದನಾ ಪ್ರತಿಚೋದನ ಪರಿತ್ಯಾಗವಿಷಯದಲ್ಲಿ ನಾವು ಮೇಲೆ ಹೇಳಿದ ರೀತಿಯಲ್ಲಿ ಅನ್ವಯಿಸದೆ ನಿತ್ಯನೈಮಿತ್ತಿಕಾದಿಗಳ ಸ್ವರೂಪತಃ ತ್ಯಾಗವೇ ಇಲ್ಲಿ ಹೇಳಲ್ಪಟ್ಟಿತೆಂದು ಪೂರ್ವಪಕ್ಷಿಗಳು ಹೇಳಿದರೆ ಅದಕ್ಕೆ ಸಮಾಧಾನವನ್ನು ಹೇಳುತ್ತಾರೆ. **ನಿತ್ಯ ನೈಮಿತ್ತಿಗಳುಡೈಯ** - ನಿತ್ಯ ನೈಮಿತ್ತಿಕ ಕರ್ಮಗಳ, **ಸ್ವರೂಪತ್ಯಾಗಮ್**- ಬಿಡೋಣವೂ ಸಹ, **ವಿವಕ್ಷಿತ ಮೆನ್ನಿಲ್** - ಚರಮಶ್ಲೋಕದ, **ಸರ್ವಧರ್ಮಾನ್ ಪರಿತ್ಯಜ್ಯ** ಎಂಬಲ್ಲಿ ಹೇಳಲ್ಪಟ್ಟಿರುತ್ತದೆಂದರೆ, **ಮುರ್ಚೊನ್ನ** - ಹಿಂದೆ ಹೇಳಿದ, **ಸರ್ವ ವಿರೋಧಮುಂ ಪ್ರಸಂಗಿಕ್ಕುಮ್** - ಸಮಸ್ತವಿರೋಧವೂ ಉಂಟಾಗುತ್ತದೆ. ಪೂರ್ವಾನುಷ್ಠಾನಕ್ಕೂ ಪೂರ್ವಸಂಪ್ರದಾಯಕ್ಕು ಸ್ವಾನುಷ್ಠಾನಕ್ಕೂ ಈಗಿನ ಪ್ರಪನ್ನರ ಅನುಷ್ಠಾನಕ್ಕೂ, ವಿರುದ್ಧವಾದುದಾಗುವದಲ್ಲದೆ, ಪ್ರಬಲ ಸ್ವತಂತ್ರ ಶಾಸ್ತ್ರ ವಿಧಿಗಳಿಗೂ ಇತಿಹಾಸ ಪುರಾಣಗಳಲ್ಲಿನ ಉಪಬ್ರಹ್ಮಣಗಳಿಗೂ ವಿರುದ್ಧವಾದುದಾಗುತ್ತದೆ. ಸ್ವತಂತ್ರ ಶಾಸ್ತ್ರವಿಧಿಗಳನ್ನು ಪರಿತ್ಯಾಗಮಾಡಿ, **"ಯಶ್ಶಾಸ್ತ್ರ ವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ । ನಸ ಸಿದ್ಧಿಮವಾಪ್ನೋತಿ ನ ಸುಖಂ ನಪರಾಂಗತಿಮ್ । ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ ಕಾರ್ಯಾಕಾರ್ಯವ್ಯವಸ್ಥಿತೌ"** (ಗೀ. ೧೬-೨೩. ೨೪.) ಎಂದು ಹೇಳಿರುವಹಾಗೆ ಮಹಾರ್ಗಳ ಸಂಪ್ರದಾಯಗಳನ್ನು ಪುರಸ್ಕರಿಸದೆ ತನ್ನ ಸ್ವೇಚ್ಛಾನುಸಾರ ನಡೆಯುವವನಿಗೆ ಇಲ್ಲಿಯೇ ಸುಖವಿಲ್ಲವು. ಹೀಗಿರುವಾಗ ಮುಂದೆ ಶ್ರೇಷ್ಠವಾದ ಗತಿ ಯೆಲ್ಲಿಯದು, ಆದುದರಿಂದ ವೇದಪ್ರಮಾ

**ಏವಂ ಸ್ವಾಭಿಪ್ರಾಯೇ ದಿವ್ಯಸೂರಿ ಸೂಕ್ತಯೋಽಪಿ ಸಂತಿ.**

**ಇನ್ದ ನಿಷ್ಕರ್ಷಮ್ ಸತ್ವನಿಷ್ಠರಾಯ್ ವಿವೇಕಿಗಳಾಯಿರುಪ್ಪಾರ್ ತೆಳಿನ್ದು ಅಂಗೀಕರಿಪ್ಪಾರ್ಗಳ್. ಇವ್ವರ್ಥತ್ತೈ (೧) "ಶೆಯ್ಯಾದನ ಶೆಯ್ಯೋಮ್ ತೀಕ್ಕುರುಳೈ ಚ್ಚೆನ್ನೋದೋಮ್" ಎನ್ರುಮ್, (೨) "ಶೆಯ್ಯೇಲ್ ತೀವಿನೈ ಎನ್ರರುಳ್ ಶೆಯ್ಯುಮ್" ಎನ್ರು ಅರುಳಿಚ್ಚೆಯ್ದಾರ್ಗಳ್.**

---

ಣಗಳನ್ನನುಸರಿಸಿದ **ಅಹರಹಸ್ಸಂಧ್ಯಾ ಮುಪಾಸೀತ,** ಇತ್ಯಾದಿ ವಾಕ್ಯಗಳಿಗನುಸಾರವಾಗಿ ನಡೆಯಬೇಕು. **ಇಲ್ಲದಿದ್ದರೆ ಆಜ್ಞಾಛೇದೀ ಮಮದ್ರೋಹೀ** ಎಂದು ಹೇಳಿರುವಹಾಗೆ ಭಗವನ್ನಿಗ್ರಹಕ್ಕೆ ಪಾತ್ರನಾಗುವವರಿಂದ ಅಂತವನಿಗೆಸಿದ್ಧಿ ಇಲ್ಲವು.

**ಹೀಗೆ ತನ್ನ ನಿಷ್ಕರ್ಷಾಭಿಪ್ರಾಯದಲ್ಲೂ ಆಳ್ವಾರಾದಿಗಳ ದಿವ್ಯಸೂಕ್ತಿಗಳುಂಟು.**

**ಇನ್ದ ನಿಷ್ಕರ್ಷಮ್** - ಈಗನಾವು ಹೇಳಿದ ಸಿದ್ಧಾನ್ತಾಭಿಪ್ರಾಯವನ್ನು **ಸತ್ವನಿಷ್ಠರಾಯ್** - ಸಾತ್ವಿಕವೃತ್ತಿಯಲ್ಲಿ ನಿಷ್ಠೆಯುಳ್ಳವರಾಗಿ, ಇವರಿಂದ ಶಾಸ್ತ್ರ ಮರ್ಯಾದೆಯಿಂದ ನಡೆಯುವ ಸದಾಚಾರ ನಿಷ್ಠರು ಹೇಳಲ್ಪಟ್ಟರು, **ವಿವೇಕಿಗಳಾಯ್** - ಆಗಮೋತ್ಥ ಜ್ಞಾನಮಾತ್ರವೇ ಅಲ್ಲದೆ ವಿವೇಕೋತ್ಥಜ್ಞಾನವನ್ನು ಹೊಂದಿರುವವರು, **ತೆಳಿನ್ದು** - ಪರಿತ್ಯಾಗ ಮಾಡಬಹುದೇ ಮಾಡಕೂಡದೇ ಎಂಬ ವಿವೇಚನೆಯನ್ನು ಹೊಂದಿದವರಾಗಿ, **ಅಂಗೀಕರಿಪ್ಪಾರ್ಗಳ್** - ನಮ್ಮ ಈ ಶಾಸ್ತ್ರ ಮರ್ಯಾದೆಗೂ ಸಂಪ್ರದಾಯಕ್ಕೂ ಅವಿರುದ್ಧವಾಗಿರುವ ಈ ನಿಷ್ಕರ್ಷಾಭಿಪ್ರಾಯವನ್ನು ಎಂಬು ವಾಕ್ಯ ಪ್ರಥಮದಲ್ಲಿದೆ, ಅದನ್ನು ಅಂಗೀಕರಿಸುವರು. ಇದರಿಂದಶಾಸ್ತ್ರಜ್ಞಾನ ವಿವೇಕಜ್ಞಾನಗಳಿಲ್ಲದೆಯೂ, ಸಂಪ್ರದಾಯಾನುಷ್ಠಾನದಲ್ಲಿ ಅಭಿಮಾನವಿಲ್ಲದವರಾದರೋ ಅಙ್ಗೀಕರಿಸದೆ ಹೋಗುವರೇ ವಿನಾ, ಶಾಸ್ತ್ರ ಜನ್ಯಜ್ಞಾನ, ಸಂಪ್ರದಾಯಾನುಷ್ಠಾನದಲ್ಲಿ ವಿಶೇಷ ಮಮತೆ, ಇವುಗಳನ್ನು ಹೊಂದಿದವರು ನಮ್ಮ ಅಭಿಪ್ರಾಯವನ್ನು ಸ್ವೀಕರಿಸುವರೆಂಬುದರಲ್ಲಿ ಸಂದೇಹವಿಲ್ಲವೆಂಬಭಾವವು. ಹಾಗಾದರೆ ಸಂಪ್ರದಾಯದ ಬಲವಿದ್ದ ಪಕ್ಷದಲ್ಲಿ ಆಳ್ವಾರಾದಿಗಳ ದಿವ್ಯಸೂಕ್ತಿಯುಂಟೋ? ಎಂದರೆ ಉಂಟು ಎಂದು ಉದಾಹರಿಸುತ್ತಾರೆ.—**ಇವ್ವರ್ಥತ್ತೈ** - ಈ ತಮ್ಮ ಅಭಿಪ್ರಾಯವನ್ನೇ ಶ್ರೀ ಆಂಡಾಳ್‌ರವರು **"ಶೆಯ್ಯಾದನಶೆಯ್ಯೋಂ"** ತಮ್ಮ ವ್ರತವು ಈಡೇರುವದಕ್ಕಾಗಿ ಶಾಸ್ತ್ರದಲ್ಲಿ ನಿಷೇಧವಾಕ್ಯದಿಂದ ಹೇಳಲ್ಪಟ್ಟ ಆಕಾರಣದಿಂದ

---

(೧) ತಿರುಪ್ಪಾವೈ. ೨. (೨) ತಿರುವಾಯ್ಮೊಳಿ.

ಆಚಾರನಿಷ್ಠರು ಮಾಡದೇಇರುವ ಅಕೃತ್ಯಗಳನ್ನು ನಾವು ಮಾಡೆವು ಎಂದೂ, "ತೀವಿನೈ ಶೆಯ್ಯೋಲ್‌ಎನ್ರು - ಅಕೃತ್ಯ ಕರಣಾದಿ ಅಪರಾಧಗಳನ್ನು ಮಾಡಕೂಡದು ಎಂದು, ಅರುಳಿ ಶೆಯ್ಯುಮ್ - ನನ್ನ ವಿಷಯದಲ್ಲಿ ಕೃಪೆಮಾಡುವದಕ್ಕೋಸ್ಕರ" ಎನ್ರುಂ - ಎಂದೂ, ಗೋದಾ ತಿರುಪ್ಪಾವೈಯಲ್ಲೂ, ನಮ್ಮಾಳ್ವಾರ್ರವರು ತಮ್ಮ ಪಾಶುರದಲ್ಲೂ, ಅರುಳಿಚ್ಚೆಯ್‌ದಾರಗಳ್ - ಕೃಪೆಗೈದು ಅಪ್ಪಣೆ ಕೊಡಿಸಿರುತ್ತಾರೆ. ಈ ಪೂರಾ ಪಾಶುರಗಳು ಯಾವುವೆಂದರೆ

"ವೈಯತ್ತುವಾಳ್ವೀರ್‌ಗಾಳನಾಮುನ್ನಂ ಪಾವೈಕ್ಕುಚ್ಚೆಯ್ಯುಂ ಕಿರಿಶೈಗಳ್ಕೇಳಿರೋ ಪಾರ್ಕಡಲುಳ್ | ಪೈಯತ್ತುಯಿನ್ರ ಪರಮನಡಿಪಾಡಿ ನೈಯುಣ್ಣೋಂ ಪಾಲುಣ್ಣೋಂನಾಟ್ಕಾಲೇ ನೀರಾಡಿ | ಮೈಯಿಟ್ಟೆ ಎಳುದೋ ಮಲರಿಟ್ಟುನಾಮುಡಿಯೋಂ ಶೆಯ್ಯಾದನ ಶೆಯ್ಯೋಂತೀಕ್ಕುರಳೈಚ್ಚೆನ್ರೋದೋಂ ಐಯ್ಯುಮುಂ ಪಿಚ್ಚೆಯುಂ ಆನ್ದನೈಯುಂಕೈಕಾಟ್ಟಿಯುಯ್ಯುಮಾರೆಣ್ಣಿಯುಗನ್ದೇಲೋರೆಂಬಾವೈ || ವೈಯತ್ತು ವಾಳ್ವೀರ್‌ಗಾಳ್ ಈ ಲೋಕದಲ್ಲಿ ಬಾಳಬೇಕೆಂತ ಬಂದವರೇ, ನಾವುಂ - ನಾವೆಲ್ಲರೂ ಸೇರಿ, ನಮ್ ಪಾವೈಕ್ಕು - ನಮ್ಮ ಈ ವ್ರತಕ್ಕೆ, ಶೈಯ್ಯುಮ್ ಕಿರಿಶೈಗಳ್-ಮಾಡತಕ್ಕ ವಿಸರ್ಗಡುಗಳನ್ನು, ಕೇಳಿರೋ-ಸಾವಧಾನದಿಂದ ಕೇಳಿರಿ.—ಪಾರ್ಕಡಲುಳ್ - ಕ್ಷೀರಸಮುದ್ರದಲ್ಲಿ, ಪೈಯತ್ತುಯಿನ್ರ - ಯೋಗನಿದ್ರೆಯಲ್ಲಿರುವ, ಪರಮನಡಿಪಾಡಿ - ಸರ್ವಸ್ಮಾತ್ ಪರನಾದ ಶ್ರೀ ಕೃಷ್ಣನ ದಿವ್ಯ ಪಾದಾರವಿಂದವನ್ನು ಸ್ತುತಿಸಿ, ನೈಯ್ಯುಣ್ಣೋಂ - ತುಪ್ಪವನ್ನು ಸೇವಿಸುವದಿಲ್ಲವು; ಪಾಲುಣ್ಣೋಂ - ಹಾಲನ್ನು ಸೇವಿಸುವದಿಲ್ಲವು; ನಾಟ್ಕಾಲೇನೀರಾಡಿ - ಬೆಳಗಿನಝಾವದಲ್ಲೇ ಸ್ನಾನಮಾಡಿ, ಮೈಯಿಟ್ಟೆ ಎಳುದೋಮ್ - ತನ್ನ ಜೊತೆಗಾರರಾದ ತರುಣಿಯರನ್ನು ಕುರಿತು ಹೇಳುವ ಪ್ರಕರಣವಾದುದರಿಂದ, ಕಣ್ಣಿಗೆ ಕಾಡಿಗೆಯನ್ನು ಹಚ್ಚುವದಿಲ್ಲವು; ಮಲರಿಟ್ಟು ನಾಮುಡಿಯೋಮ್ - ತಲೆಗೆ ಹೂವುಗಳನ್ನು ನಾವು ಮುಡಿಯುವದಿಲ್ಲವು; ಶೆಯ್ಯಾದನ ಶೆಯ್ಯೋಮ್ ದುಷ್ಕೃತ್ಯಗಳನ್ನು ಮಾಡುವದಿಲ್ಲವು; ತೀಕ್ಕುರಳೈಶೆನ್ರೋದೋಂ. ಕ್ರೂರವಾದ ದೂಷಣೆಗಳನ್ನು ಇತರರೊಂದಿಗೆ ಸೇರಿ ಹೇಳುವದಿಲ್ಲವು ; ಸಾರಾಸ್ವಾದಿನಿ ವ್ಯಾಖ್ಯಾಕೃನ್ತು, ತೀಕ್ಕುರಳ್ - ಕ್ರೂರವಾದ ಸೂಕ್ತಿಗಳು ಎಂದರೆ ಅಸಚ್ಛಾಸ್ತ್ರಗಳನ್ನು, ಶೆನ್ರು - ಅದನ್ನು ಹೇಳುವವರ ಹತ್ತಿರಹೋಗಿ, ಓದೋಮ್ - ಪಠಿಸುವದಿಲ್ಲವು. ಎಂದರೆ ಪಠಿಸಕೂಡದು ಎಂದು ಅರ್ಥಮಾಡಿರುತ್ತಾರೆ, ಐಯುಮುಮ್ ಪಿಚ್ಚೆಯುಂ ಅನ್ದನೆಯುಂ ಕೈಗಾಟ್ಟಿ - ದಾನವನ್ನೂ ಭಿಕ್ಷೆಯನ್ನೂ ಯಥಾಶಕ್ತಿ ಕೊಟ್ಟು, ಉಯ್ಯುಮಾರು ಎಣ್ಣಿ - ಹೀಗೆ ಆತ್ಮೋಜ್ಜೀವನವನ್ನು ಮಾಡುವ ಉಪಾಯವನ್ನಾಲೋಚಿಸಿ, ಉಗನ್ದು - ಸಂತೋಷದಿಂದ, ಏವ - ವರ್ತಿಸಿದು

ದಾದರೆ, ಓರ್-ಅದ್ವಿತೀಯವಾದ, ಎಂ ಪಾವಾಯ್ - ಈ ನಮ್ಮ ವ್ರತವಾಗು ತ್ತದೆ. ಈ ನಮ್ಮ ಅಮೋಘವಾದ ವ್ರತವು ಸಿದ್ಧಿಸುವದಕ್ಕಾಗಿ ನಾವು ಹೀಗೆಲ್ಲಾ ವರ್ತಿಸತಕ್ಕದ್ದು ಎಂದು ಗೋದಾ ತನ್ನ ಸ್ನೇಹಿತರಾದ ಯುವತಿಯರಿಗೆ ಉಪದೇ ಶಿಸುತ್ತಾರೆ. ಪ್ರಾತಃಕಾಲದಲ್ಲಿ ಮಿಂದು ಕ್ಷೀರಾಬ್ಧಿಶಾಯಿಯ ಪದಗಳಿಗೆರಗಿ ಸ್ತುತಿಸಿ ತುಂಬಾ ಭೋಗ್ಯವಸ್ತುಗಳನ್ನು ಅಪೇಕ್ಷಿಸದೆ, ವಿರಕ್ತಿಭಾವದಿಂದ ಹೂವುಮೊದಲಾದ ಅಲಂಕಾರಗಳನ್ನು ಪರಿಗ್ರಹಿಸದೆ, ದುಷ್ಕೃತ್ಯಗಳಿಗೂ, ಕ್ರೂರವಾಕ್ಯ, ಇತರರ ದೂಷಣೆ ಮುಂತಾದವುಗಳಿಗೆ ಮನಗೊಡದೆ, ದಾನ ಧರ್ಮಾದಿಗಳನ್ನು ಮಾಡುತ್ತಾ ಹೀಗೆ ಈ ತಿಂಗಳೆಲ್ಲಾ ನಾವು ವರ್ತಿಸಿದರೆ, ಈ ನಮ್ಮ ವ್ರತವು ಸಿದ್ಧಿಸಿ, ನಮಗೆ ಸರ್ವ ಶ್ರೇಯಸ್ಸೂ ಲಭಿಸುವದು ಎಂಬುದು ತಾತ್ಪರ್ಯವು.

ನಮ್ಮಾಳ್ವಾರ್ರವರ ಪಾಶುರವು ಯಾವುದೆಂದರೆ.—

ಶೆಯ್ಯೇ(ಱ್ಱ)ವಿನ್ಯೆ ಯೆನ್ರರುಳ್ ಶೆಯ್ಯುಮ್, ಎ॥ ಕೈಯ್ಯಾರ್ ಶಕ್ಕರ ಕ್ಕಣ್ಣ ಪಿರಾನೇ। ಐಯ್ಯಾರ್ ಕಂಟಮಡೈಕ್ಕಿಲುಮ್, ನಿನ್ಗಳ। ಲೆಯ್ಯಾ ದೇತ್ತವರಳ್ ಶೆಯ್ಯೇನಕ್ಕೇ ॥೩॥

**ಅರ್ಥವು**:—ಶೆಯ್ಯೇ(ಱ್ಱ)ವಿನ್ಯೆ ಯೆನ್ರು-ಅಕೃತ್ಯ ಕರಣಾದಿ ಅಪರಾಧಗ ಳನ್ನು ಮಾಡದೇ ಇರು ಎಂದು, ಎ್ ಅರುಳ್ ಶೆಯ್ಯುಮ್-ನನಗೆ ಕೃಪಾಪೂರ್ವ ಕವಾದ ಅನುಗ್ರಹವನ್ನು ಮಾಡುವದಕ್ಕಾಗಿ, ಕೈಯಾರ್ ಶಕ್ಕರಂ - ತನ್ನ ದಿವ್ಯ ಹಸ್ತದಲ್ಲಿ ಚಕ್ರಾಯುಧವನ್ನು ಧರಿಸಿರುವ, ಕಣ್ಣ ಪಿರಾನೇ - ಶ್ರೀಕೃಷ್ಣನಾಗಿ ಅವತರಿಸಿ ಸೌಲಭ್ಯಾತಿಶಯದಿಂದ ಉಪಕರಿಸಿದವನೇ, ಐಯ್ಯಾರ್ ಕಂಟಂ- ಶ್ಲೇಷ್ಮದಿಂದ ತುಂಬಿರುವ ನನ್ನ ಕಂಠವು, ಅಡೈಕ್ಕಿಲುಮ್ - ದೇಹಾವಸಾನ ಸಮಯದಲ್ಲಿ ಮುಚ್ಚಿ ಹೋದಹಾಗೆ, ನಿನ್ ಕಳಲ್ - ನಿನ್ನ ಪಾದಾರವಿಂದವನ್ನು ಎಯ್ಯಾದ ಏತ್ತ - ಶ್ರಮವಿಲ್ಲದ ಹಾಗೆ ಸ್ತುತಿಸುವ ಹಾಗೆ, ಎನಕ್ಕರುಳ್ ಶೆಯ್- ನನಗೆ ಕೃಪೆ ಮಾಡು ಎಂದು ಪ್ರಾರ್ಥಿಸುತ್ತಾರೆ. ಓ ಕೃಷ್ಣಾವತಾರಿಯಾಗಿ ಪರಮ ಸೌಲಭ್ಯದಿಂದ ಅನೇಕ ಗೋಪ ಗೋಪೀಯರಿಗೆ ಕೃಪೆಗೈದ ಸರ್ವೇಶ್ವರನೇ, ನೀನು ದಿವ್ಯ ಹಸ್ತದಲ್ಲಿ ಚಕ್ರಾಯುಧವನ್ನು ಧರಿಸಿರುವದು ನನ್ನ ಅನುಗ್ರಹಕ್ಕಾಗಿ ಎಂದು ಭಾವಿಸುವೆನು, ಹಿಂದಿನ ದುಷ್ಕರ್ಮಗಳೂ ಅದರ ಭಯದಿಂದ ತೊಲಗಿ ಹೋಗಿ ಮುಂದಕ್ಕೂ ಅದರ ಭಯದಿಂದ ನಾನು ದುಷ್ಕರ್ಮಗಳನ್ನು ಮಾಡದಹಾಗೆ ನನಗೆ ಅನುಗ್ರಹಿಸು ; ದೇಹಾವಸಾನಕಾಲದಲ್ಲಿ ಶ್ಲೇಷ್ಮವೆಂಬುವ ದುಷ್ಟನು ಪ್ರವೃದ್ಧ ಮಾನನಾಗಿ, ನನ್ನ ಕಂಠವನ್ನು ಹಿಸಿಕಿ ನನ್ನನ್ನು ಸ್ತುತಿಸಿದಹಾಗೆ ಮಾಡಬಹುದು; ನಿನ್ನ ಚಕ್ರದ ಬಲದಿಂದ ಅದಕ್ಕವಕಾಶಕೊಡದಹಾಗೆ ಮಾಡಿ ನಿನ್ನ ಪಾದಾರವಿಂದ ವನ್ನು ಸ್ತುತಿಸುವಹಾಗೆ ಮಾಡು ಎಂದು ಅತಿದೈನ್ಯದಿಂದ ಬೇಡುತ್ತಾರೆ. ಶ್ರೀ ನಮ್ಮಾ

ಳ್ವಾರವರು ಪ್ರಪನ್ನ ಜನಕೂಟಸ್ಥರೆಂದು ಪ್ರತೀತಿಯು ; ಅಂತವರೇ ಅಕೃತ್ಯಕರ ಣಾದಿ ಅಪರಾಧಗಳ ವಿಷಯದಲ್ಲಿ ಮಹಾ ಭೀತರಾಗಿ, ಅಂತವುಗಳಲ್ಲಿ ಮನಸ್ಸು ಪ್ರವರ್ತಿಸದಹಾಗೆ ಕೃಪೆಮಾಡು ಎಂದು ಪ್ರಾರ್ಥಿಸಿದನಂತರ, "ಸರ್ವ ಧರ್ಮಾ ಪರಿತ್ಯಜ್ಯ" ಎಂಬುದರಿಂದ ಪ್ರಪನ್ನನಿಗೆ ದುಷ್ಕೃತಗಳನ್ನೆಸಗುವದರಲ್ಲಿ ಸರ್ವೇ ಶ್ವರಾನುಮತಿ ಉಂಟೆಂದೂ, ಬುದ್ಧಿ ಪೂರ್ವಕವಾಗಿ ಅಂತಹ ದುಷ್ಕೃತ್ಯಗಳನ್ನು ಮಾಡಿದರೂ ಕ್ಷಮಾಗುಣಪೂರ್ಣನಾಗಿ ರಕ್ಷಿಸಿ ಬಿಡುವನೆಂಬುದೂ, ಆಳ್ವಾರ್ಯಾಚಾ ರ್ಯರುಗಳ ಅನುಷ್ಠಾನಕ್ಕೆ ವಿರುದ್ಧವಾದ ವಿಷಯವೆಂದು ಉಪದೇಶಿಸಿರುತ್ತಾರೆ.

ಆಗಲಿ ಶ್ರೀ ತಿರುಮಳಿ ಶೈಯ್ಯಾಳ್ವಾರ್ರವರ ತಿರುಚ್ಛಂದವಿರುತ್ತದಲ್ಲಿ "ನಾ ಯಿನೇ೯" ಎಂಬ ಪಾಶುರದಲ್ಲಿ, ತಾವು ಮಾಡಿದ ಅಪರಾಧವನ್ನು ಗುಣವಾಗಿ ಅಂಗೀಕರಿಸು, ನಾನು ಮಾಡಿದ ಅಪಚಾರಗಳನ್ನು ಉಪಚಾರವಾಗಿ ಭಾವಿಸು. ಎಂಬ ಪ್ರಾರ್ಥನೆ ಇರುವದರಿಂದ ಪ್ರಪನ್ನನ ದುಷ್ಕೃತ್ಯಗಳನ್ನೂ ಸುಕೃತವಾ ಗಿಯೇ ಭಾವಿಸುವನೆಂದು ತೋರಿಬರುತ್ತದಲ್ಲಾ? ಎಂದಾಕ್ಷೇಪತಂದರೆ, ಅದರರ್ಥವು ಹಾಗಲ್ಲವು, ಪ್ರಾಯಶ್ಚಿತ್ತರೂಪದಲ್ಲಿ ಕ್ಷಮಿಸ್ಯೆಯ್ಯಾ ಎಂಬ ಪ್ರಾರ್ಥನಾರೂಪ ಶರ ಣಾಗತಿಯು ತೋರಿಬರುತ್ತದೆಂದೂ ಅದು ಬುದ್ಧಿಪೂರ್ವಕವಾದ ಉತ್ತರಾಘದ ವಿಷಯವಲ್ಲವೆಂದೂ, ಅಬುದ್ಧಿಪೂರ್ವಕವಾಗಿ ಮಾಡಿದ ಉತ್ತರಾಘದ ವಿಷಯ ವೆಂದೇ ವ್ಯಾಖ್ಯಾತೃಗಳೆಲ್ಲಾ ಅನ್ವಯಿಸಿರುತ್ತಾರೆಂದು ಹೇಳುತ್ತಾರೆ. ಆ ಪೂರಾ ಪಾಶುರವು ಯಾವುದೆಂದರೆ.—ನೈತ್ತುನಿನ್ನೈ ವಲ್ಲವಾ ಪಳಿತ್ತವರ್‌ಕ್ಕುಮಾ ರಿಲ್ ಪೋರ್ । ಚೆಯ್‌ದು ನಿನ್ನ ಚೆತ್ತ್ರತ್ತೀಯಿನ್ ವೆನ್ದವರ್‌ಕ್ಕುಂ ವನ್ದುನೈ । ಯಿಯ್‌ದಲಾಗು ಮೆನ್ಬರಾಂದಲಾಲೆನ್ಮಾಯನಾಯಿನೇ೯ । ಚೆಯ್‌ದಕು ಱ್ಱ ಮ್‌ನ ಱ್ಱ ಮಾಗವೇಕೊಳ್ ಞಾಲನಾಥನೇ ॥ ೧೧೧ ॥ ಇದರರ್ಥವು.— ನಿನ್ನೈವೆಯ್‌ತ್ತು - ಮಂದ ಮತಿಗಳಾದ ನಮ್ಮಿಂದ ಸ್ತೋತ್ರಮಾಡಲು ಅಸಾಧ್ಯ ವಾದ ಕಲ್ಯಾಣ ಗುಣಗಳೇನು, ವಿಚಿತ್ರಾದ್ಭುತ ಚೇಷ್ಟೆಗಳೇನು, ಇವುಗಳುಳ್ಳನಿನ್ನನ್ನು ಮನಸ್ವಿಯಾಗಿ ನಿಂದಿಸಿ, ವಲ್ಲವಾಪಳಿತ್ತವರುಕ್ಕುಮ್ - ತನ್ನಲ್ಲಿರುವ ಶಕ್ತಿ ಯಿಂದೆಲ್ಲಾ ಪರುಷವಾಕ್ಕಿನಿಂದ ದೂಷಿಸಿದ ಶಿಶುಪಾಲಾದಿಗಳಿಗೂ, ಮಾರು ಇಲ್ ಪೋರೆ ಶೆಯ್‌ದು - ಎದಿರಿಲ್ಲಾದ ಯುದ್ಧವನ್ನು ಮಾಡಿ, ನಿನ್ನ ಚೆಱ್ಱಮ್ ತೀ ಯಿಲ್ - ನಿನ್ನ ಕೋಪಾಗ್ನಿಯಿಂದ, ವೆನ್ದವರ್‌ಕ್ಕುಮ್ - ದಗ್ಧರಾದ ವಾಲಿ ಮೊದಲಾದವರಿಗೂ, ಉನ್ನೈ - ಸರ್ವಾಧಿಕನಾದ ನಿನ್ನನ್ನು, ವನ್ದುಯಿಯ್‌ದಲ್ ಆಗುಮ್ ಎನ್ಬರ್ - ಬಂದು ಆಶ್ರಯಿಸಬಹುದಾಗಿತ್ತು ಎಂದು ಋಷಿಗಳು ಹೇಳು ತ್ತಿರುವರು, ಆದಲಾಲ್ - ಆದುದರಿಂದ, ಎಮ್ ಮಾಯ - ದಯೆ ಮೊದಲಾದ ಆಶ್ಚರ್ಯ ಗುಣಗಳನ್ನು ನನಗೂ ಪ್ರಕಾಶಿಸುವನಾಗಿ, ಞಾಲನಾಥನೇ - ಐಹಿಕ

(೩) "ನಾಯಿನೇ೯ ಶೆಯ್‌ದ ಕುತ್ತಮ್ ನತ್ತ್ರಮಾಗವೇ ಕೊಳ್ ಞಾಲ ನಾಥನೇ" ಎನ್ರುದುಕ್ಕುಮ್. ತಾತ್ಪರ್ಯತ್ತೈ ಪಾರ್‌ತಾಲ್ ಕ್ಷಮಿಕ್ಕವೇಣುಮೆನ

ಕ್ಕೆಲ್ಲಾ ನಿರುಪಾಧಿಕ ಶೇಷಿಯಾದವನೇ, ನಾಯಿನೇ೯ - ಅನನ್ಯ ಗತಿಕನಾಗಿ ನಿನ್ನನ್ನೇ ಶರಣವಾಗಿ ಆಶ್ರಯಿಸಿದ ಅಥವಾ ನಾಯ್ ಎಂದರೆ ನಾಲಿಗೆ ಆದರಿಂದ ನಾನು ಮಾಡಿದ ಅಪರಾಧವನ್ನು ಎಂದು ಸಾರವಿವರಣೆಯವರು ಅರ್ಥ ಮಾಡಿರುತ್ತಾರೆ. ಶೆಯ್‌ದಕುಱ್ಱಮ್ - ಪ್ರಾಮಾದಿಕದಿಂದ ಮಾಡಿದ ಅಪರಾಧವನ್ನು ನಱ್ಱಮಾಗವೇಕೊಳ್ - ಗುಣವಾಗಿಯೇ ಭಾವಿಸು ಎಂದು ಪ್ರಾರ್ಥಿಸುತ್ತಾರೆ. ಶಿಶುಪಾಲನು ಯುಧಿಷ್ಠಿರನ ಸಭೆಯುಲ್ಲಿ ಶ್ರೀಕೃಷ್ಣನಾಗಿ ಅವತರಿಸಿ ಮಾಡಿದ ದಿವ್ಯಾದ್ಭುತ ಚೇಷ್ಟೆಗಳನ್ನೆಲ್ಲಾ ಜರೆದು ಪರುಷ ವಾಕ್ಕುಗಳಿಂದ, **ಸದಸಸ್ಪತೀ ನತಿಕ್ರವ್ಯ ಗೋಪೋಯಂ ಕುಲಪಾಂಸನಃ ಸಪರ್ಯಾಂಕಥಮರ್ಹತಿ? ವರ್ಣಾಶ್ರಮ ಕುಲಾಪೇತಸ್ಸರ್ವಧರ್ಮಬಹಿಷ್ಕೃತಃ। ಸ್ವೈರವರ್ತೀ ಗುಣೈರ್ಹೀನ ಸ್ಸಪರ್ಯಾಂಕಥಮರ್ಹತಿ?।** " ಹೀಗೆಲ್ಲಾ ನಿಂದಿಸಿದ ಶಿಶುಪಾಲನಿಗೆ ನಿನ್ನ ದಯೆಯು ಏನನ್ನು ಮಾಡಿತು ಎಂದರೆ "**ಚೈದ್ಯದೇಹೋತ್ಥಿತಂ ಜ್ಯೋತಿರ್ವಾಸುದೇವ ಮುಪಾವಿಶತ್**" ಎಂದು (ಭಾಗ ೧೦. ೭೪) ಹೇಳಿರುವದರಿಂದ ವಿಷ್ಣುಸಾಯುಜ್ಯವನ್ನು ಶಿಶುಪಾಲನ ಆತ್ಮಾ ಹೊಂದಿತು. ಹಾಗೆಯೇ ತನ್ನ ಭಕ್ತನಾದ ಸುಗ್ರೀವನ ರಾಜ್ಯದಾರಾಪಹಾರಗಳನ್ನು ಮಾಡಿದನೆಂಬ ಕೋಪದಿಂದ ಹತನಾದ ವಾಲಿಯಿಂದಲೂ ಮರೆಯಲ್ಲಿ ನಿಂತು ಬಾಣಪ್ರಯೋಗವನ್ನು ಹೇಗೆ ಮಾಡಿದೆ ಆಕ್ಷೇಪಿಸಲ್ಪಟ್ಟಿದ್ದರೂ, "**ಸ್ವಧರ್ಮಸ್ಯಚ ಸಂಯೋಗಾಜ್ಜಿತಸ್ತೇನ ಮಹಾತ್ಮನಾ। ಸ್ವರ್ಗಃ ಪರಿಗೃಹೀತಶ್ಚ ಪ್ರಾಣಾನಪರಿರಕ್ಷತಾ**" ಆ ವಾಲಿಗೆ ನೀನು ವೀರಸ್ವರ್ಗವನ್ನು ದಯಪಾಲಿಸಿರುತ್ತೀಯೇ. ನಾನಾದರೋ ನಿನ್ನನ್ನು ಆಶ್ರಯಿಸಿದವನು, ಅಂತವನೇನಾದರೂ ಪ್ರಾಮಾದಿಕಾಪರಾಧಗಳನ್ನು ಮಾಡಿದ್ದರೆ, ವಾಲಿಯು "**ಯದಯುಕ್ತಂ ಮಯಾ ಪೂರ್ವಂ ಪ್ರಮಾದಾದುಕ್ತ ಮಪ್ರಿಯಂ। ತತ್ರಾಪಿ ಖಲು ಮೇ ದೋಷಂ ಕರ್ತುಂ ನಾರ್ಹಸಿ ರಾಘುವ**" (ರಾಮಾ. ಕಿಷ್ಕಿಂಧಾ. ೧೮. ೪೮.) ಪ್ರಮಾದದಿಂದ ಜ್ಞಾನವಿಲ್ಲದೆ ಅಯುಕ್ತವಾದ ಪರುಷೋಕ್ತಿಯನ್ನು ಕ್ಷಮಿಸಿ, ಆ ದೋಷಕ್ಕಾಗಿ ನನ್ನನ್ನು ಶಿಕ್ಷಿಸಬೇಡ,ಕ್ಷಮಿಸು ಎಂದು ಪ್ರಾರ್ಥಿಸಿದರೀತ್ಯಾ, ನಾನೂ ಸಹ ಪ್ರಮಾದದಿಂದ ಮಾಡಿದ ಅಪರಾಧಗಳನ್ನು ಎಣಿಸಬೇಡ, ಪ್ರಪನ್ನನು ತಿಳಿಯದೆ ಮಾಡಿದನೆಂದು ಕ್ಷಮಿಸು ಎಂದು ಪ್ರಾರ್ಥಿಸುತ್ತಾರೆ." ಎನ್ರುದುಕ್ಕುಮ್- ಎಂದು ಪೂರ್ವ ಪಕ್ಷಿಗಳು ಉದಾಹರಿಸಬಹುದಾದ ಪಾಶುರೆಕ್ಕೂ ಕೂಡ, ತಾತ್ಪರ್ಯ

(೩) ತಿರುಚ್ಛಂದ ವಿರುತ್ತಂ.

**ಪೇಕ್ಷಿತ್ತಪಡಿಯಾಲೇ, ಪ್ರಪನ್ನನುಕ್ಕು ಮಪರಾಧಂ ಪುಗುನ್ದಾಲ್, (೪) "ಅಜ್ಞಾನಾದ ಥವಾ ಜ್ಞಾನಾದಪರಾಧೇಷು ಸತ್ಸ್ವಪಿ। ಪ್ರಾಯಶ್ಚಿತ್ತಂ ಕ್ಷಮಸ್ವೇತಿ ಪ್ರಾರ್ಥನೈಕೈವ ಕೇವಲಮ್"। ಎಂಗಿರಪಡಿಯೇ ಕ್ಷಮೈಕೊಳ್ಳ ಪ್ರಾಪ್ತಮ್.**

**ತ್ತೈಪಾರ್ತ್ತಾಲ್** - ಸರಿಯಾದ ಅಭಿಪ್ರಾಯವೇನೆಂಬುದನ್ನು ಪರಿಶೀಲಿಸಿ ನೋಡಿದರೆ, **ಕ್ಷಮಿಕ್ಕವೇಣುಮೆನ್ರಪೇಕ್ಷಿತ್ತ ಪಡಿಯಾಲೇ – ಚೆಯ್‌ದಕುಱ್ಱಮ್ ನಱ್ಱಮಾಗಕ್ಕೊಳ್ಳು** ಎಂದು ಅಪರಾಧ ಮಾಡಿದ್ದೇನೆಂದು ನಂಬಿ ಅದನ್ನು ದೋಷವಾಗಿ ಎಣಿಸಿ ಶಿಕ್ಷಿಸಬೇಡ, ಗುಣವಾಗಿ ಭಾವಿಸು; ಎಂಬ ವಾಕ್ಯದಿಂದ ಕ್ಷಮಿಸು ಎಂಬುದು ವ್ಯಕ್ತವು, ತಾನು **ಶೆಯ್‌ದಕುಱ್ಱಮ್** ಎಂದು ಅಪರಾಧ ಮಾಡಿದನೆಂದು ಯಾವಾಗ ಹೇಳಿದರೋ, ಆಗ ಅದಕ್ಕನುಗುಣವಾದ ಭಗವನ್ನಿಗ್ರಹವುಂಟೆಂಬುದು ವ್ಯಕ್ತವು, ಹಾಗೆ ನಿಗ್ರಹಿಸದೆ **ನಱ್ಱಮಾಗಕ್ಕೊಳ್ಳು** ಎಂದರೆ ಅಪರಾಧಗಳನ್ನು ಕ್ಷಮಿಸು ಎಂದು ಪ್ರಾರ್ಥನೆಯೇ ವಿನಾ ಅನ್ಯಥಾ ಅಲ್ಲವು. ಆದುದರಿಂದ ಕ್ಷಮಿಸಬೇಕೆಂದು ಅಪೇಕ್ಷಿಸಿದುದರಿಂದ, **ಪ್ರಪನ್ನನುಕ್ಕು ಅಪರಾಧಮ್ ಪುಗುನ್ದಾಲ್**- ಭರಸಮರ್ಪಣವನ್ನನುಷ್ಠಿಸಿದ ಪ್ರಪನ್ನನಿಗೆ ಅಪರಾಧವು ಪ್ರಾಪ್ತವಾದರೆ (೪) **"ಅಜ್ಞಾನಾದಥವಾಜ್ಞಾನಾತ್** - ಜ್ಞಾನವಿಲ್ಲದೆ ಪ್ರಾಮಾದಿಕವಾಗಿಯೇ ಆಗಲಿ, ಅಥವಾ ಬುದ್ಧಿಪೂರ್ವಕವಾಗಿಯೇ ಆಗಲಿ, **ಅಪರಾಧೇಷು ಸತ್ಸ್ವಪಿ** - ಅಪರಾಧಗಳು ಒಂದುವೇಳೆ ಪ್ರಾಪ್ತವಾದರೂ, ಇಲ್ಲಿ ಅಪಿ ಶಬ್ದದಿಂದ ಸಾಮಾನ್ಯವಾಗಿ ಪ್ರಪನ್ನನಿಗೆ ಇಂತಹ ಅಪರಾಧಗಳು ಯಾವುವೂ ಉಂಟಾಗುವದಿಲ್ಲವೆಂದು **"ಧೀಪೂರ್ವೋತ್ತರ ಪಾಪ್ಮನಾಮಜನನಾತ್"**(೧೬೦ನೆಯ ಪುಟ) ಹಿಂದೆ ಹೇಳಿದುದು ಸೂಚಿಸಲ್ಪಟ್ಟಿತು, **ಕ್ಷಮಸ್ವೇತಿ**-ಕ್ಷಮಿಸೈಯ್ಯಾ ಎಂಬದಾಗಿ, **ಪ್ರಾರ್ಥನೈಕಾ** - ಶರಣಾಗತಿರೂಪವಾದ ದಂಡಪ್ರಣಾಮದೊಂದಿಗೆಯೂ, ಅಯ್ಯೋ ಮಾಡಿಬಿಟ್ಟೆನೇ ಎಂಬ ಪರಿತಾಪದಿಂದಲೂ ಮಾಡಿದ ಪ್ರಾರ್ಥನೆಯೊಂದೇ, **ಕೇವಲಂ ಪ್ರಾಯಶ್ಚಿತ್ತಂ**-ಸಾಕಾದಪ್ರಾಯಶ್ಚಿತ್ತವು," **ಎಙ್ಗಿರಪಡಿಯೇ**-ಎಂದು ಹೇಳಿರುವಹಾಗೆ, **ಕ್ಷಮೈಕೊಳ್ಳಪ್ರಾಪ್ತಮ್**-ಕ್ಷಮಿಸು ಎಂದು ಪ್ರಾರ್ಥಿಸುವದು ಉಚಿತವು. ತಿರುಮಳಿಶೈಯಾಳ್ವಾರ್ರವರ ಪಾಶುರದ ವ್ಯಾಖ್ಯಾತೃಗಳೆಲ್ಲಾ ಪ್ರಾಮಾದಿಕಗಳಾದ ಉತ್ತರಾಘಗಳ ವಿಷಯವೆಂದು ಅಭಿಪ್ರಾಯಪಟ್ಟಿರುತ್ತಾರೆ. ಅಬುದ್ಧಿಪೂರ್ವಗಳ ಅಪರಾಧಗಳಿಗೆ ಕ್ಷಮಸ್ವ ಎಂಬ ಪ್ರಾರ್ಥನಾರೂಪ ಪ್ರಾಯಶ್ಚಿತ್ತವು ಹೇಳಲ್ಪಟ್ಟಿದೆ, ಬುದ್ಧಿಪೂರ್ವಗಳಾದ ಅಪರಾಧಗಳಿಗಾದರೋ ಕ್ಷಮಸ್ವವೆಂಬುದು ಕೈಮುತಿಕ ನ್ಯಾಯ

(೪) ಜಿತನ್ತಾ ಸ್ತೋತ್ರಮ್.

## ಪ್ರಪನ್ನಸ್ಯ ಬುದ್ಧಿಪೂರ್ವೋತ್ತರಾಘಾಶ್ಲೇಷವಾದಸ್ಯ ಖಂಡನಮ್.

ಪ್ರಾಯಶ್ಚಿತ್ತಾನ್ತರಾಶಕ್ತಃ ಕಾಲಕ್ಷೇಪಾಕ್ಷಮೋಽಪಿ ವಾ ।
ಪುನಃ ಪ್ರಪದ್ಯತೇ ನಾಥ ಮಭಿಂದರ್ನ ಲೋಕಸಙ್ಗ್ರಹಮ್ ॥೫೪॥

ಸಿದ್ಧವು. ಇದನ್ನೇ ಮುಂದೆ ಉಪಪಾದಿಸಿರುತ್ತಾರೆ. ಶ್ರೀ ಭಾಷ್ಯಕಾರರೂ ತಾವು ಮಾಡಿದ ಶರಣಾಗತಿಯ ಅನುಸಂಧಾನರೂಪವಾದ ಗದ್ಯದಲ್ಲೂ ನಾನಾವಿಧಗಳಾದ ಅಪರಾಧಗಳನ್ನೆಲ್ಲಾ ನಿರೂಪಿಸಿ "**ಸರ್ವಾನ್ ಅಶೇಷತಃ ಕ್ಷಮಸ್ವ**" ಎಂದುಪ್ರಾರ್ಥಿಸಿರುತ್ತಾರೆ.

### ಪ್ರಪನ್ನನಿಗೆ ಬುದ್ಧಿಪೂರ್ವಕವಾದ ಪಾಪಗಳ ಅಲೇಪವುಂಟೆಂಬ ವಾದದ ಖಂಡನವು.

ಹೀಗೆ ಕ್ಷಮಸ್ವ ಎಂಬ ಪ್ರಾರ್ಥನೆಯಿಂದಲೇ ಬುದ್ಧಿಪೂರ್ವೋತ್ತರಾಘಗಳೆಲ್ಲಾ ನಾಶವಾದರೆ, ಪ್ರಾಯಶ್ಚಿತ್ತ ಶಾಸ್ತ್ರವು ಪ್ರಪನ್ನನಿಗೆ ಹಾಗಾದರೆ ಬೇಕಿಲ್ಲವೋ ಎಂಬ ಆಕ್ಷೇಪವು ಉಂಟಾಗುತ್ತದೆ. ಈ ಸಂದೇಹಕ್ಕೆ ಸಮಾಧಾನವು ಅತ್ಯಾವಶ್ಯಕವಾದುದರಿಂದ ಸಿದ್ಧಾಂತಾರ್ಥವನ್ನು ಒಂದು ಕಾರಿಕೆಯ ಮೂಲಕ ಉಪದೇಶಿಸುತ್ತಾರೆ. **ಪ್ರಾಯಶ್ಚಿತ್ತಾನ್ತರಾಶಕ್ತಃ** - ಪ್ರಪನ್ನನಾಗಿ ಬುದ್ಧಿಪೂರ್ವಕವಾದ ಉತ್ತರಾಘಗಳು ಪ್ರಾಪ್ತವಾಗಿ, ಅವುಗಳ ನಿವಾರಣೆಗಾಗಿ ಅವುಗಳಿಗೆ ಹೇಳಿರುವ ಕೃಛ್ರಚಾಂದ್ರಾಯಣಾದಿ ಬೇರೆಬೇರೆ ಪ್ರಾಯಶ್ಚಿತ್ತಗಳನ್ನು ಅನುಷ್ಠಿಸಲು ಅಶಕ್ತನಾದ, **ಕಾಲಕ್ಷೇಪಾಕ್ಷಮೋಽಪಿವಾ** - ಮತ್ತೂ ಅನುತಾಪಾತಿಶಯದಿಂದ ಆ ಪ್ರಾಯಶ್ಚಿತ್ತಗಳನ್ನೆಲ್ಲಾ ಅನುಷ್ಠಿಸಲು ಬೇಕಾದ ಕಾಲವಿಳಂಬವನ್ನು ಸಹಿಸಲಾರದವನಾಗಿ, ಎಲ್ಲಿ ಶರೀರಪಾತ ಉಂಟಾಗುತ್ತದೋ ಎಂಬ ಭೀತಿಯಿಂದಿರುವನಾದ, ಪ್ರಪನ್ನನು, **ಲೋಕಸಙ್ಗ್ರಹಮಭಿಂದರ್ನ** - ತಾನು ತುಂಬಾ ಭಗವಂತನಿಗೆ ಪ್ರಿಯನಾಗಿದ್ದರೂ, "**ಸಙ್ಗ್ರಹಾಯ ಚ ಲೋಕಸ್ಯ ಮರ್ಯಾದಾ ಸ್ಥಾಪನಾಯ ಚ**" ಶಾಸ್ತ್ರಮರ್ಯಾದೆಯನ್ನು ಲೋಕದ ಜನರು ವ್ಯತಿಕ್ರಮ ಮಾಡದಿರುವದಕ್ಕಾಗಿ ಲೋಕ ಸಙ್ಗ್ರಹವನ್ನು ಮೀರದವನಾಗಿ, "**ಪ್ರಾಯಶ್ಚಿತ್ತಿರಿಯಂ ಸಾತ್ರ ಯತ್ಪುನಶ್ಶರಣಂವ್ರಜೇತ್**" ಪ್ರಾಯಶ್ಚಿತ್ತರೂಪದಲ್ಲಿ ಉತ್ತರಾಘ ಪರಿಹಾರಕ್ಕಾಗಿ ಪುನಶ್ಶರಣಾಗತಿಯನ್ನನುಷ್ಠಿಸತಕ್ಕದ್ದೆಂದು" ಹೇಳಿರುವಮೇರಿಗೆ, **ನಾಥಂ** - ತನ್ನ ಸ್ವಾಮಿಯಾದ ಸರ್ವೇಶ್ವರನನ್ನು, **ಪುನಃಪ್ರಪದ್ಯತೇ** - ಪುನಃ ಶರಣಾಗತಿಯನ್ನು ಅನುಷ್ಠಿಸುವವನು. ಪ್ರಪನ್ನನು ಶಕ್ತನಾಗಿದ್ದರೆ, ಕಾಲವಿಳಂಬವನ್ನು ಸಹಿಸಲು ಮನಸ್ಸಿದ್ದರೆ ತಾನು ಮಾಡಿದ ಬುದ್ಧಿಪೂರ್ವಕಗಳಾದ

ಉತ್ತರಾಘಗಳಿಗೆ ವಿಧಿಸಲ್ಪಟ್ಟಿರುವ ಪ್ರಾಯಶ್ಚಿತ್ತಗಳನ್ನೇ ಲೋಕ ಸಙ್ಗ್ರಹಾರ್ಥವಾಗಿಯಾದರೂ ಅನುಷ್ಠಿಸಲೇ ಬೇಕು. ಆದರೆ ಆ ವಿಧಿಸಲ್ಪಟ್ಟ ಪ್ರಾಯಶ್ಚಿತ್ತಗಳನ್ನು ಅನುಷ್ಠಿಸಲು ಶಕ್ತಿಯಿಲ್ಲದಿದ್ದರೂ, ಅಥವಾ ಹಾಗೆ ಅನುಷ್ಠಿಸಲು ಬೇಕಾದ ಕಾಲವಿಳಂಬ ಸಹಿಸದೆ ಎಲ್ಲಿ ಕ್ಷಿಪ್ರದಲ್ಲೇ ದೇಹಾವಸಾನ ಉಂಟಾಗುತ್ತದೋ ಎಂಬ ಭೀತನಾಗಿದ್ದರೂ, ಆಗಲೂ ಸಹ ಆಯಾ ನಿಯತ ಪ್ರಾಯಶ್ಚಿತ್ತಗಳಿಗೆ ಬದಲಾಗಿ ಪುನಶ್ಶರಣಾಗತಿಯನ್ನೇ ಲೋಕ ಸಙ್ಗ್ರಹಾರ್ಥವಾಗಿ ಅನುಷ್ಠಿಸಲೇಬೇಕು ಎಂಬ ಸಿದ್ಧಾನ್ತಾರ್ಥವನ್ನು ಇಲ್ಲಿ ಅನುಗ್ರಹಿಸಿರುತ್ತಾರೆ. ಪ್ರಾವಾದಿಕವಾಗಿ ಅಬುದ್ಧಿ ಪೂರ್ವಕಗಳಾದ ಉತ್ತರಾಘಗಳೇನೋ ಲೇಪಿಸುವದಿಲ್ಲವೆಂಬ ಶಾಸ್ತ್ರಾರ್ಥವುಂಟು. ಅದರಹಾಗೆ ಬುದ್ಧಿಪೂರ್ವಕಗಳಾದ ಉತ್ತರಾಘಗಳೂ ಲೇಪಿಸುವದಿಲ್ಲವೆಂದು ಅಭಿಪ್ರಾಯಪಟ್ಟು ಹಾಗೆ ನಡೆಯುವವರಿಗೆ ಭಗವನ್ನಿಗ್ರಹವೂ ಶಿಕ್ಷೆಯೂ ತಪ್ಪದು ಎಂಬ ಭಾವವು. ಪ್ರಪದನವು ಸಕೃದನುಷ್ಠೇಯವು, ಹೀಗಿರುವಾಗ, ಪುನಃಪ್ರಪದ್ಯತೇ ಎಂಬ ಪ್ರಯೋಗವು ಹೇಗೆ ಶಾಸ್ತ್ರಸಮ್ಮತವು? ಎಂದರೆ ಮೊದಲಿನ ಪ್ರಪದನವು ತನ್ನ ಆತ್ಮೋಜ್ಜೀವನಕ್ಕಾಗಿಯಾದುದರಿಂದ, ಆ ವಿಷಯದಲ್ಲಿ ಈ ಪುನಶ್ಶರಣಾಗತಿಯಲ್ಲವು. ಉತ್ತರಾಘನಿವಾರಣೆಗಾಗಿ ಈ ಪುನಃ ಪ್ರಪದನವಾದುದರಿಂದ ಶಾಸ್ತ್ರಸಮ್ಮತವೇವಿನಾ ಶಾಸ್ತ್ರವಿರುದ್ಧವಲ್ಲವು. ಅನೇಕ ಮಹನೀಯರು ಇಂತಹ ಬುದ್ಧಿಪೂರ್ವಾಘಗಳು ಪ್ರಾಪ್ತವಾದುದರಿಂದ ಅನುತಾಪೋಪರತಿಗಳ ಮೂಲಕ ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡ ನಿದರ್ಶನಗಳುಂಟು. ರುದ್ರನು ತನ್ನ ತಂದೆಯ ಐದನೆಯ ತಲೆಯನ್ನು ತೆಗೆದುಹಾಕಿದ ಗುರುಪಾತಕಕ್ಕಾಗಿಯೂ, ಪರಶುರಾಮನು ದ್ವಿಜರಾದ ಕ್ಷತ್ರಿಯರನ್ನು ವೀರಾವೇಶದಿಂದ ಕೊಂದಿದುದಕ್ಕಾಗಿಯೂ, ದೂರ್ವಾಸ ಋಷಿಯು ಮಹಾ ಭಾಗವತೋತ್ತಮನಾದ ಅಂಬರೀಷನಿಗೆ ಮಾಡಿದ ಅಪರಾಧಕ್ಕಾಗಿಯೂ, ಲಕ್ಷ್ಮಣನು ಮಹಾ ಭಾಗವತನಾದ ಸುಗ್ರೀವನಲ್ಲಿ ಆಡಿದ ಪರುಷೋಕ್ತಿಗಳಿಗಾಗಿಯೂ, ಹೀಗೆ ಅನೇಕ ಮಹನೀಯರು ತಮ್ಮ ಅಪರಾಧಗಳಿಗಾಗಿ ಪ್ರಾಯಶ್ಚಿತ್ತವನ್ನನುಷ್ಠಿಸಿರುತ್ತಾರೆ.

ಆಗಲಿ, ಈಗ ಸಿದ್ಧಾನ್ತಿಸಿ ಹೇಳಿದವಾಕ್ಯವು ಉಪಾದೇಯವೆಂದೇ ಭಾವಿಸೋಣ. ಆದರೆ ಪೂರ್ವಾಚಾರ್ಯರುಗಳು, ಬುದ್ಧಿ ಪೂರ್ವಕವಾದ ನಿಷಿದ್ಧಾನುಷ್ಠಾನವೂ ಪ್ರಪನ್ನನನ್ನು ಬಾಧಿಸುವದಿಲ್ಲವೆಂದು ಹೇಗೆ ಹೇಳಿದರು ಎಂದಾಕ್ಷೇಪಿಸಿದರೆ, ಪ್ರಪನ್ನನ ಮಾಹಾತ್ಮ್ಯೆಯನ್ನು ಮನಸ್ಸಿನಲ್ಲಿಟ್ಟು ಹಾಗೆ ಹೇಳಿದರೇ ವಿನಾ, ಶಾಸ್ತ್ರಮರ್ಯಾದೆಗಳನ್ನು ಮರೆತು ಹೇಳಿದ ಅಭಿಪ್ರಾಯವಲ್ಲವೆಂದು "ಮುಮುಕ್ಷುತ್ವಮೇ" ಎಂದಾರಂಭಿಸಿದ ವಾಕ್ಯದಿಂದ ತಿಳಿಸುತ್ತಾರೆ. ಮುಮುಕ್ಷುತ್ವ ಮೇ ಅಡಿಯಾಗ-ಮೋಕ್ಷಾರ್ಥಿಯಾಗಿ ಉಪಾಯಾನುಷ್ಠಾನವನ್ನು ಮಾಡಿದ ಪ್ರಪನ್ನತೆಯು

**ಮುಮುಕ್ಷುತ್ವಮೇ ಅಡಿಯಾಗ ಬುದ್ಧಿಪೂರ್ವ ನಿಷಿದ್ಧಙ್ಗಳ್ ಪುಕುರಾವೆನ್ನುಮ್ ಪಾರ್ತ್ತೈಯುಮ್ (೧) "ವಿದ್ಯತೇ ಬ್ರಾಹ್ಮಣೇದಮಃ" ಎನ್ನುಮಾಪ್ಪೋಲೇ ಔಚಿತ್ಯತ್ತಾಲೇ ಚೊನ್ನಪಡಿ ಯತ್ತನೈ.**

ಮೂಲಕವಾಗಿ, **ಬುದ್ಧಿಪೂರ್ವ ನಿಷಿದ್ಧಂಗಳ್** - ಬುದ್ಧಿಪೂರ್ವಕವಾಗಿ ಮಾಡಿದ ಶಾಸ್ತ್ರಗಳಲ್ಲಿ ನಿಷಿದ್ಧಕರ್ಮಗಳೆಂದು ಹೇಳಲ್ಪಟ್ಟ ಅಪರಾಧಗಳು, **ಪುಕುರಾವೆನ್ನುಮ್ ಪಾರ್ತ್ತೈಯುಮ್**-ಸಂಬಂಧಿಸಿ ಈತನಿಗೆ ಬಾಧಕಗಳಾಗಲಾರವೆಂಬ **ಪೂರ್ವಾಚಾರ್ಯ**ರುಗಳ ಅಭಿಪ್ರಾಯವೂ (೧) **"ವಿದ್ಯತೇ ಬ್ರಾಹ್ಮಣೇ ದಮಃ"** ಯಾವಾಗ ಬ್ರಾಹ್ಮಣನು ಎಂದು ಹೇಳಲ್ಪಟ್ಟನೋ ಆಗ ಆತನಲ್ಲಿ ಸ್ವಲ್ಪಮಟ್ಟಿಗೆ ಇಂದ್ರಿಯನಿಗ್ರಹತ್ವ ಉಂಟೆಂದು, **ಎನ್ನುಮಾಪ್ಪೋಲೇ** ಎಂದು ವಾಲ್ಮೀಕಿ ಮಹರ್ಷಿಯ ವಾಕ್ಯನಹಾಗೆ, **ಔಚಿತ್ತ್ಯತ್ತಾಲೆ** - ಅಲ್ಲಿ ಬ್ರಾಹ್ಮಣನೆಂಬ **ಔಚಿತ್ಯ**ದಿಂದ ಹೇಗೆ ಹೇಳಿದರೋ, ಹಾಗೆ ಇಲ್ಲಿಯೂ ಪ್ರಪನ್ನನೆಂಬ ಔಚಿತ್ಯದಿಂದ, **ಶೊನ್ನಪಡಿಯತ್ತನೈ** - ಹೇಳಿದಹಾಗೆ ಭಾವಿಸತಕ್ಕದ್ದು, ಅಷ್ಟುಮಾತ್ರವೇ ಸರಿ. ಬ್ರಾಹ್ಮಣನಾದವನು ಎಂದರೆ ಬ್ರಾಹ್ಮಣಯೋನಿಯಲ್ಲಿ ಹುಟ್ಟಿದವನಿಗೆಲ್ಲಾ ದಮ ಉಂಟು ಎಂಬ ಹೇಳಿಕೆಯು ಔಚಿತ್ಯಮಾತ್ರವೇ. ಏಕೆಂದರೆ ಇಂದ್ರಿಯ ನಿಗ್ರಹ ವಿಲ್ಲದ ಎಷ್ಟು ಬ್ರಾಹ್ಮಣರಿಲ್ಲವು. ಅದರಹಾಗೆ ಎಂಬ-ಭಾವವು. ಇಲ್ಲಿ **ಅತ್ತನೈ** ಎಂದು ಹೇಳಿದುದರಿಂದ ಔಚಿತ್ಯಮಾತ್ರವೇ ವಿನಾ ಶಾಸ್ತ್ರಮರ್ಯಾದೆಯಲ್ಲವೆಂದು ಹೇಳಿದಂತಾಯಿತು. ಪ್ರಪನ್ನನಾದುದರಿಂದ ಬುದ್ಧಿಪೂರ್ವಕವಾಗಿ ಉತ್ತರಾಘಗಳನ್ನು, ಎನ್ನಡಿಯಾರ್ ಅದುಶೆಯ್ಯಾರ್" ಎಂದು ಹೇಳಿರುವಹಾಗೆ ಎಂದಿಗೂ ಮಾಡಲಾರರೆಂಬ ಅಭಿಸಂಧಿಯು ಮಹಾನುಭಾವರುಗಳಿಗೆ ಇರುವದರಿಂದ ಪ್ರಪನ್ನನಲ್ಲಿ ಗೌರವವಿಟ್ಟು ಶರಣಾಗತ ರಕ್ಷಕನು ತನ್ನ ಅಭಯ ಪ್ರದಾನಾನುಸಾರವಾಗಿ ಹೇಗೋ ರಕ್ಷಿಸಿ ಬಿಡುವನೆಂಬ ಆಶಯದಿಂದ ಹೇಳಿದ ಮಾತೆಂದು ಭಾವಿಸತಕ್ಕದ್ದೇವಿನಾ ಶಾಸ್ತ್ರಮರ್ಯಾದೆಯನ್ನು ಮನಸ್ಸಿನಲ್ಲಿಟ್ಟು ಹೇಳಿದಮಾತಲ್ಲವೆಂಬ ಭಾವವು. ಶ್ರೀಮದ್ರಾಮಾಯಣದ ಪೂರಾ ಶ್ಲೋಕವು ಯಾವುದೆಂದರೆ. **"ವಿದ್ಯತೇ ಗೋಷು ಸಂಪನ್ನಂ ವಿದ್ಯತೇ ಬ್ರಾಹ್ಮಣೇದಮಃ। ವಿದ್ಯತೇಸ್ತ್ರೀಷು ಚಾಪಲ್ಯಂ ವಿದ್ಯತೇ ಜ್ಞಾತಿತೋಭಯಮ್"** "ಯಾವಾಗ ಗೋವುಗಳಿವೆಯೋ ತನ್ಮೂಲಕವಾಗಿ ಸಮೃದ್ಧಿಯು ಸ್ವಲ್ಪಮಟ್ಟಿಗೆ ಉಂಟೆಂದೇ ಹೇಳಬಹುದು, ಹಾಗೆಯೇ ಬ್ರಾಹ್ಮಣಕುಲದಲ್ಲಿ ಹುಟ್ಟಿದವನು ಎಂದನಂತರ ಆಹಾರ ಪಾರಿಶುದ್ಧ್ಯದಿಂದ ಸ್ವಲ್ಪಮಟ್ಟಿಗೆ ಇಂದ್ರಿಯನಿಗ್ರಹ ಇದ್ದೇ ಇರುತ್ತದೆ. ಸ್ತ್ರೀಗಳು ಎಷ್ಟು

(೧) ರಾಮಾ. ಯುದ್ಧ. ೧೬. ೯.

ಮುಮುಕ್ಷುವುಕ್ಕೇ ಬುದ್ಧಿಪೂರ್ವ ನಿಷಿದ್ಧಙ್ಗಳ್ ಪುಗುನ್ದ್ ಪರಿಹಾರಙ್ಗಳ್ ಪಣ್ಣುಗೈ ಮಹರ್ಷಿಗಳ್ ಪಕ್ಕಲಿಲುಮ್ ಋಷಿಪ್ರಾಯರ್ ಪಕ್ಕಲಿಲು ಮುಳ್ಪ ಡಕ್ಕಣ್ಡು ಪೋರಾನಿನ್ರದಿರ್ರೈ.

ಮುಮುಕ್ಷೂಣಾಂಬುದ್ಧಿಪೂರ್ವೋತ್ತರಾಘಾನುದಯೋಕ್ತಿಸ್ಸಿದ್ಧಾನ್ತವಿರುದ್ಧಾ.

---

೩ (ಅ) ಙ್ಗನನ್ರಾಗಿಲ್ ಉಪಾಸಕರ್ಗಳುಮ್ ಮುಮುಕ್ಷುಕ್ಕಳಾಗೈ

---

ಉತ್ತಮರಾಗಿದ್ದರೂ ಸ್ವಲ್ಪ ಮಟ್ಟಿಗೆ ಚಾಪಲ್ಯವು ಇದ್ದೇಇರುತ್ತದೆ. ಹಾಗೆಯೇ ಜ್ಞಾತಿ ಎಂದನಂತರ ತನ್ಮೂಲಕವಾಗಿ ಭಯವು ಇದ್ದೇ ಇರುತ್ತದೆ." ಎಂಬುದು. ಶ್ಲೋಕಾರ್ಥವು.

ಬುದ್ಧಿಪೂರ್ವೋತ್ತರಾಘವ ಸಂಘಟನೆಯಲ್ಲಿ ಪ್ರಾಯಶ್ಚಿತ್ತವು ಆವಶ್ಯಕ ವೆಂದರೆ ಹಿಂದೆ ಹಾಗೆ ನಡೆದಿರುವವಕ್ಕೇನಾದರೂ ನಿದರ್ಶನಗಳುಂಟೋ ? ಎಂಗರೆ ಮಹರ್ಷಿಗಳೂ, ಮಹರ್ಷಿಗಳಿಗೆ ಸಮಾನವಾದ ಪ್ರವೃತ್ತಿಗಳುಳ್ಳ ಮಹನೀ ಯರೂ ಸಹ, ಅಂತಹ ಸಂದರ್ಭದಲ್ಲಿ ಪ್ರಾಯಶ್ಚಿತ್ತವನ್ನು ಮಾಡಿಕೊಂಡಿರುತ್ತಾ ರೆಂದು ತಿಳಿಸುತ್ತಾರೆ. **ಮುಮುಕ್ಷುವುಕ್ಕೇ** - ಮೋಕ್ಷಾರ್ಥಿಯಾದ ಪ್ರಪನ್ನನಿಗೇ **ಬುದ್ಧಿಪೂರ್ವನಿಷಿದ್ಧಙ್ಗಳ್**-ಬುದ್ಧಿಪೂರ್ವಕವಾಗಿ ನಿಷಿದ್ಧಾಚರಣೆಗಳು, **ಪುಗನ್ದ್**- ಪ್ರಾಪ್ತವಾಗಿ, **ಪರಿಹಾರಙ್ಗಳ್ ಪಣ್ಣುಗೈ** - ಪ್ರಾಯಶ್ಚಿತ್ತಗಳನ್ನು ಅನುಷ್ಠಿಸಿರು ವದು, **ಮಹರ್ಷಿಗಳ್ ಪಕ್ಕಲಿಲುಮ್** - ಮಹರ್ಷಿಗಳಲ್ಲಿಯೂ, **ಋಷಿಪ್ರಾಯರ್ ಪಕ್ಕಲಿಲುಮ್** - ಋಷಿಗಳಿಗೆ ಸಮಾನವಾದ ವೃತ್ತಿಗಳುಳ್ಳವರಲ್ಲೂ, **ಉಳ್ ಪಡ ಕಣ್ಡುಪೋರಾನಿನ್ರದಿರೇ** - ಶಾಸ್ತ್ರಗಳಲ್ಲೂ ಲೋಕದಲ್ಲೂ ಸಹ ಕಂಡಿರುವೆ ವಷ್ಟೇ. ವಸಿಷ್ಠ ಮಹರ್ಷಿಗೆ ಚಂಡಾಳಾನ್ನ ಭಕ್ಷಣಪ್ರಾಪ್ತವಾದುದರಿಂದ ಪ್ರಾಯ ಶ್ಚಿತ್ತವನ್ನು ಮಾಡಿಕೊಂಡನೆಂಬ, ಲೋಕ ಸಾರಂಗಮುನಿಯು ಮುನಿವಾಹನರ ವಿಷಯದಲ್ಲಿ ಶಿಲಾಪ್ರಹಾರಕ್ಕಾಗಿ ಪ್ರಾಯಶ್ಚಿತ್ತಮಾಡಿಕೊಂಡನೆಂಬ, ವೃತ್ತಾಂತಗ ಳುಂಟು. ದೂರ್ವಾಸರು ಅಂಬರೀಷನಿಗೆ ನಮಸ್ಕರಿಸಿ ಅಪರಾಧಪರಿಹಾರವನ್ನು ಮಾಡಿಕೊಂಡರು. ಸುಗ್ರೀವ ಲಕ್ಷ್ಮಣರು ಪ್ರಾಯಶ್ಚಿತ್ತರೂಪವಲ್ಲಿ ಪರಸ್ಪರ ಕ್ಷಾಮಣೆ ಯನ್ನು ಪ್ರಾರ್ಥಿಸಿದರು.

**ಮೋಕ್ಷಾರ್ಥಿಯಾದ ಪ್ರಪನ್ನನಿಗೆ ಬುದ್ಧಿಪೂರ್ವೋತ್ತರಾಘವೇ ಉಂಟಾಗುವದಿಲ್ಲವೆಂಬ ವಾದವು ಸಿದ್ಧಾನ್ತ ವಿರುದ್ಧವಾದುದು.**

---

**ಇಙ್ಗನನ್ರಾಗಿಲ್** - ಈಗ ನಾವು ಸ್ಥಾಪಿಸಿದಹಾಗಾಗದಿದ್ದರೆ, ಉಂಟಾಗುವ ಬಾಧಕಗಳನ್ನು ಹೇಳುತ್ತಾರೆ. **ಉಪಾಸರ್ಗಳುಮ್** - ಭಕ್ತಿಮಾರ್ಗವನ್ನವ

**ಯಾಲೇ ಅವರ್ಗಳುಕ್ಕುಂ ಬುದ್ಧಿ ಪೂರ್ವೋತ್ತರಾಘಂ ಘಟಿಯಾನ್ಮೈಯಾಲೇ ಉತ್ತರಾಘಾಶ್ಲೇಷಮ್ ಪ್ರಾಮಾದಿಕವಿಷಯಮ್. ಬುದ್ಧಿ ಪೂರ್ವೋತ್ತರಾಘತ್ತುಕ್ಕು ಕ್ಷಂತವ್ಯತ್ವಮಿಲ್ಲೈ ಯೆನ್ರು ವ್ಯವಸ್ಥೈ ಪಣ್ಣವೊಣ್ಣಾದೊಳಿಯುಮ್.**

---

ಲಂಬಿಸಿ ಉಪಾಸನೆಯನ್ನು, ಮಾಡುವವರೂ ಸಹ **ಮುಮುಕ್ಷುಕ್ಕಳ್ ಆಗೈಯಾಲೇ**-ಮೋಕ್ಷಾರ್ಥಿಗಳಾದ ಪ್ರಪನ್ನರಾದುದರಿಂದ ಅವರಿಗೂ ಕೂಡ, **ಬುದ್ಧಿ ಪೂರ್ವೋತ್ತರಾಘಂ** - ಬುದ್ಧಿ ಪೂರ್ವಕವಾಗಿ ಮಾಡಿದ ಉತ್ತರಾಘವು, **ಘಟಿಯಾನ್ಮೈಯಾಲೇ** - ಉಂಟಾಗದೇ ಇರುವದರಿಂದ, **ಉತ್ತರಾಘಾಶ್ಲೇಷಮ್** - ಬ್ರಹ್ಮವಿದ್ಯಾರಂಭಾನಂತರ ಉಂಟಾಗುವ ಪಾಪಗಳು ಅಂಟದಿರೋಣವು, **ಪ್ರಾಮಾದಿಕವಿಷಯಮ್** - ಅಬುದ್ಧಿ ಪೂರ್ವಕವಾಗಿ ಸಂಘಟಿಸಿದ ವಿಷಯವು. **ಬುದ್ಧಿ ಪೂರ್ವೋತ್ತರಾಘತ್ತುಕ್ಕು** - ವಿದ್ಯಾರಂಭೋತ್ತರಕಾಲದಲ್ಲಿಯಾಗಲಿ, ಅಥವಾ ಪ್ರಪದನಾನಂತರವಾಗಲಿ, ಬುದ್ಧಿಪೂರ್ವಕವಾಗಿ ಮಾಡಿದ ಪಾಪಗಳಿಗೆ, **ಕ್ಷಂತವ್ಯತ್ವಮಿಲ್ಲೈ** - ಭಗವಂತನು ಕ್ಷಮಿಸಿಬಿಡುವನೆಂಬುದು ಇಲ್ಲವು, **ಎನ್ರು** - ಎಂಬದಾಗಿ, **ವ್ಯವಸ್ಥೈ ಪಣ್ಣಾದೊಳಿಯುಮ್** - ಶ್ರೀ ಭಾಷ್ಯಕಾರರಿಂದ ವ್ಯವಸ್ಥೆ ಮಾಡದೇ ಹೋಗುತ್ತಿತ್ತು. ಶ್ರುತಿಯಲ್ಲಿ ಹೇಳಿರುವದು, **"ಏವಮೇವ ವಿದಿ ಪಾಪಂ ಕರ್ಮ ನ ಶ್ಲಿಷ್ಯತೇ" "ಏವಂ ಹಾಸ್ಯ ಸರ್ವೇ ಪಾಪ್ಮಾನಃ ಪ್ರದೂಯನ್ತೇ"** (ಛಾಂ. ೪. ೧೪. ೩. ೫. ೨೪, ೩.) ಎಂಬದಾಗಿ. ಇದರ ತಾತ್ಪರ್ಯವೇನೆಂಬುದನ್ನು ಶ್ರೀ ವ್ಯಾಸ ಮಹರ್ಷಿಯು **"ತದಧಿಗಮ ಉತ್ತರಪೂರ್ವಾಘಯೋ ರಶ್ಲೇಷವಿನಾಶೌ, ತದ್ವ್ಯಪದೇಶಾತ್"** ಎಂಬ ಬ್ರಹ್ಮಸೂತ್ರದಲ್ಲಿ (೪. ೧. ೧೩) ವ್ಯವಸ್ಥೆ ಮಾಡಿರುತ್ತಾರೆ. **"ತದಧಿಗಮೇ** - ಆ ಬ್ರಹ್ಮ ವಿದ್ಯೆಯ ಅನುಷ್ಠಾನವು ಆರಂಭವಾದ ಒಡನೆಯೇ, **ಉತ್ತರಪೂರ್ವಾಘಯೋಃ** – ಪಶ್ಚಾತ್ತಾಗಿ ಉಂಟಾಗುವ ಮತ್ತು ಪೂರ್ವಭಾವಿಯಾಗಿ ಉಂಟಾದ, ಪುಣ್ಯಪಾಪರೂಪಗಳಾದ ಅಘಗಳಿಗೆ, **ಅಶ್ಲೇಷವಿನಾಶೌ** - ಉತ್ತರಾಘಕ್ಕೆ ಅಶ್ಲೇಷವೂ, ಪೂರ್ವಾಘಕ್ಕೆ ವಿನಾಶವೂ ಉಂಟಾಗುತ್ತದೆ; ಏಕೆಂದರೆ, **ತದ್ವ್ಯಪದೇಶಾತ್**- ಹಾಗೆ ಮೇಲೆ ಹೇಳಿದ ಶ್ರುತಿಗಳಲ್ಲಿ ಹೇಳಲ್ಪಟ್ಟಿರುವದರಿಂದ" ಎಂಬುದು ಸೂತ್ರಾರ್ಥವು. ಉತ್ತರಾಘವು ಅಂಟುವದಿಲ್ಲವೆಂದರೆ, ಉತ್ತರಾಘವು (೧) ಬುದ್ಧಿ ಪೂರ್ವಕವೆಂದೂ. (೨) ಅಬುದ್ಧಿ ಪೂರ್ವಕ ಅಥವಾ ಪ್ರಾಮಾದಿಕವೆಂದೂ, ಎರಡು ವಿಧವು, ಇವುಗಳಲ್ಲಿ ಎರಡರ ಅಶ್ಲೇಷವೇ ಅಥವಾ ಒಂದರ ಅಶ್ಲೇಷವೇ ಎಂಬ ವ್ಯವಸ್ಥೆಯಲ್ಲಿ, ಶ್ರೀ ಭಾಷ್ಯಕಾರರು **"ತದಿದ ಮಶ್ಲೇಷ ವಚನಂ ಪ್ರಮಾದಿಕೆ ವಿಷಯಮ್ ಮನ್ತವ್ಯಂ"**-ಶ್ರುತಿಯಲ್ಲೂ, ಈ ಸೂತ್ರದಲ್ಲೂ ಸಹ ಉತ್ತರಾಘವು ಅಂಟುವದಿಲ್ಲವೆಂದು ಹೇಳಿದ ಅಶ್ಲೇಷವಾಕ್ಯವು,

**ಉಪಾಸಕನುಕ್ಕುಮ್ ಪ್ರಪನ್ನನುಕ್ಕುಮ್ ವರ್ಣಾಶ್ರಮ ಜಾತಿಗೋತ್ರ ಪ್ರವರ ಚರಣ ಕುಲ ದೇಶ ಕಾಲಾವಸ್ಥಾ ಗುಣ ಸಮಯಾದಿಗಳೈ ಉಪಾಧಿಯಾಗಕ್ಕೊಣ್ಡು ಶೊನ್ನ ನಿಷಿದ್ಧಙ್ಗಳ್ ತವಿರು ಮಿಡತ್ತಿಲ್ ವಿಶೇಷಮಿಲ್ಲೈ.**

ಪ್ರಾಮಾದಿಕಗಳಾದ ಉತ್ತರಾಘಗಳನ್ನು ಕುರಿತೇ ಎಂದು ತಿಳಿಯತಕ್ಕದ್ದು" ಎಂಬುದು ತಾತ್ಪರ್ಯವು. ಬುದ್ಧಿ ಪೂರ್ವಕವಾದ ಉತ್ತರಾಘದ ಅಶ್ಲೇಷವು ಶ್ರುತಿಯಲ್ಲಿ ಹೇಳಲ್ಪಡಲಿಲ್ಲವು. ಇದಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಿಯೇ ತೀರಬೇಕೆಂಬುದು ಶ್ರೀಯತಿವರ್ಯರ ವ್ಯವಸ್ಥೆಯು. ಎಲ್ಲಾ ಉತ್ತರಾಘಗಳೂ ಅಂಟುವದಿಲ್ಲವೆಂದು ಅರ್ಥಮಾಡಿಬಿಟ್ಟರೆ,ಶ್ರೀ ಯತಿರಾಜರು ಹೀಗೆ ಈ ವ್ಯವಸ್ಥೆಮಾಡಿರುವದು ಅಯುಕ್ತವೆಂದು ಹೇಳಿದಂತಾಗುತ್ತದೆಂಬುದು ಶ್ರೀ ದೇಶಿಕರವರ ಅಭಿಪ್ರಾಯವು.

ಬ್ರಹ್ಮವಿದ್ಯೆಯೇ ಒಂದು ಸರ್ವಪ್ರಾಯಶ್ಚಿತ್ತರೂಪಾನುಷ್ಠಾನವು; ಹೀಗಿರುವಾಗ ಬೇರೆ ಪ್ರಾಯಶ್ಚಿತ್ತ ಏಕೆ ಎಂದು ಪೂರ್ವಪಕ್ಷತಂದರೆ, ಪಾಪನಿವಾರಣೆಗಾಗಿ ಪ್ರಾಯಶ್ಚಿತ್ತರೂಪದಲ್ಲೂ ಉಪಾಸನೆಯನ್ನೇ ಮಾಡಬೇಕೆಂದು "**ಅಪಿಚೇತ್ಪಾತಕಂ ಕಿಂಚಿದ್ಯೋಗೀಕುರ್ಯಾತ್ಪ್ರಮಾದತಃ । ಯೋಗಮೇವ ನಿಷೇವೇತ ನಾನ್ಯಂ ಯಜ್ಞಂ ಸಮಾಚರೇತ್** ಎಂಬ ಪ್ರಮಾಣವಿರುತ್ತದೆ. ಇದು ಹಿಂದೆಯೇ ಉದಾಹರಿಸಲ್ಪಟ್ಟಿರುತ್ತದೆ. ಆಗಲಿ ಬುದ್ಧಿಪೂರ್ವಕವಾದ ಉತ್ತರಾಘವು ಉಪಾಸಕನಿಗೆಲೇಪಿಸಬಹುದು ಆದರೆ "**ಸತ್ಕರ್ಮನಿರತಾ ಶ್ಶುದ್ಧಾ ಸಾಂಖ್ಯಯೋಗವಿದ ಸ್ತಥಾ। ನಾರ್ಹಂತಿ ಶರಣಸ್ಥಸ್ಯ ಕಲಾಂ ಕೋಟಿತಮಾ ಮಪಿ**" ಎಂದೂ "**ತಸ್ಮಾ ನ್ನ್ಯಾಸ ಮೇಷಾಂ ತಪಸಾ ಮತಿರಿಕ್ತ ಮಾಹುಃ**" (ತೈ.ನಾ.) ಎಂದೂ, ಪ್ರಪತ್ತಿಗೆ ಉಪಾಸನಕ್ಕಿಂತ ವಿಶೇಷ ಮಾಹಾತ್ಮೆಯು ಹೇಳಲ್ಪಟ್ಟಿರುವದರಿಂದ, ಭರನ್ಯಾಸವನ್ನನುಷ್ಠಿಸಿದವನಿಗೆ ಲೇಪಿಸದೇ ಇರಬಹುದು, ಎಂದು ಪೂರ್ವಪಕ್ಷತಂದರೆ, ಅದಕ್ಕೆ ಪ್ರತಿ ದ್ವಂದಿಯಾಗಿ ವರ್ಣಾಶ್ರಮ ಜಾತಿ ಗೋತ್ರ ಪ್ರವರ ವಿಷಯಗಳಲ್ಲಿ ನಿಷೇಧಿಸಿ ಹೇಳಿದವು ಕೂಡ ಪ್ರಪನ್ನನಿಗೆ ಸಂಬಂಧಿಸುವದಿಲ್ಲವೆಂದೂ, ಅವುಗಳನ್ನು ಬಿಡಬಹುದೆಂದೂ ಆಗುತ್ತದೆ, ಹಾಗೆ ಬಿಡುವದು ನಿಮಗೆ ಸಮ್ಮತವಲ್ಲವು ; ಆದುದರಿಂದ ಬುದ್ಧಿ ಪೂರ್ವಕಗಳಾದ ಉತ್ತರಾಘಗಳೂ ಸಂಬಂಧಿಸುತ್ತವೆ, ಅವುಗಳಿಗೆ ಪ್ರಾಯಶ್ಚಿತ್ತವು ಆವಶ್ಯಕವೆಂದೇ ಒಪ್ಪತಕ್ಕದ್ದೆಂದು ಹೇಳುತ್ತಾರೆ— **ಉಪಾಸಕನಕ್ಕುಮ್**-ಉಪಾಸಕನಿಗೂ ಎಂದರೆ ಭಕ್ತಿಯೋಗನಿಷ್ಠನಿಗೂ, **ಪ್ರಪನ್ನನುಕ್ಕುಮ್** - ಭರನ್ಯಾಸನಿಷ್ಠನಿಗೂ ಸಹ, ವರ್ಣಾಶ್ರಮವೇನು, ಜಾತಿಯೇನು, ಗೋತ್ರವೇನು, ಪ್ರವರವೇನು, ಚರಣವೇನು, ಕುಲವೇನು, ದೇಶವೇನು, ಕಾಲವೇನು, ಅವಸ್ಥೆಯೇನು, ಸಮಯಾದಿಗಳೇನು, ಇವುಗಳನ್ನು ಉಪಾಧಿಗಳೆಂದು ಭಾವಿಸಿ, **ಶೊನ್ನ** - ಶಾಸ್ತ್ರಗಳಲ್ಲಿ ಹೇಳಿರುವ, **ನಿಷಿದ್ಧಙ್ಗಳ್**-

ಕೂಡದೆಂದು ಹೇಳಿರುವವುಗಳನ್ನೆಲ್ಲಾ,ತನರುನಿುಡತ್ತಿಲ್-ಬಿಟ್ಟುಬಿಡುವ ಸಂದರ್ಭ ದಲ್ಲಿ, ಅತಿಕ್ರಮಿಸಿ ನಡೆಯುವ ಸಂದರ್ಭದಲ್ಲಿ ಎಂಬ ಭಾವವು, ವಿಶೇಷವಿಲ್ಲೈ - ಏನೊಂದೂ ವ್ಯತ್ಯಾಸವಿಲ್ಲವು, ಎಂದರೆ ತುಲ್ಯನ್ಯಾಯವಾಯಿತು ಎಂಬ ಭಾವವು. ಪ್ರಪನ್ನನು ಬುದ್ಧಿ ಪೂರ್ವಕವಾಗಿ ಅಪರಾಧವಮಾಡಕೂಡದೆಂದಿರುವದನ್ನು ಮಾಡ ಬಹುದು ಎಂದು ಹೇಳುವದಾದರೆ, ಬ್ರಾಹ್ಮಣೋ ನ ಸುರಾಂ ಪಿಬೇತ್ - ಬ್ರಾಹ್ಮ ಣನು ಹೆಂಡವನ್ನು ಕುಡಿಯಕೂಡದೆಂದಿದೆ, ಹಾಗಾದರೆ ಪ್ರಪನ್ನ ಬ್ರಾಹ್ಮಣನು ಕುಡಿಯ ಬಹುದು ಎಂದು ತುಲ್ಯನ್ಯಾಯದ ಪ್ರಕಾರ ಹೇಳಬೇಕಾಗುತ್ತದೆ. ಬ್ರಾಹ್ಮ ಣನು ಹೆಂಡ ಕುಡಿಯಬಹುದೆಂಬುದು ಇಷ್ಟವಿಲ್ಲದ ವಿಷಯವು, ಆದುದರಿಂದ ಈ ನಿಷಿದ್ಧಾಚರಣೆ ಕೂಡದಾದರೆ, ಉತ್ತರಾಘಗಳೂ ನಿಷಿದ್ಧಾಚರಣೆಗಳಾದುದರಿಂದ ಅವೂ ಕೂಡದೆಂದೇ ಹೇಳತಕ್ಕದ್ದೆಂಬ ಭಾವವು.

ವರ್ಣ ವಿಷಯವಾದ ನಿಷಿದ್ಧವಾಕ್ಯವು—“ಬ್ರಾಹ್ಮಣೋನಸುರಾಂಪಿಬೇತ್”, “ಪರೀಕ್ಷಾರ್ಥಮಪಿ ಬ್ರಾಹ್ಮಣ ಆಯುಧಂ ನಾದದೀತ”

ಆಶ್ರಮ ವಿಷಯವಾದುದು—“ತಾಂಬೂಲೇಽಭರ್ತೃಕೆ ಸ್ತ್ರೀಣಾಂ ಯತೀ ನಾಂ ಬ್ರಹ್ಮಚಾರಿಣಾಮ್। ಏಕೈಕಂ ಮಾಂಸ ತುಲ್ಯಂ ಸ್ಯಾತ್ಸಂಭೂಯ ಮದಿರಾ ಸಮಮ್॥ಗಂಡನಿಲ್ಲದ ಸ್ತ್ರೀಗಳೂ,ಯತಿಗಳೂ ಬ್ರಹ್ಮಚಾರಿಗಳೂ ತಾಂಬೂಲವನ್ನು ಸ್ವೀಕರಿಸತಕ್ಕದ್ದಲ್ಲವು, ಎಲೆ,ಅಡಿಕೆ, ಸುಣ್ಣ ಇವುಗಳಲ್ಲಿ ಒಂದೊಂದನ್ನೇ ಸ್ವೀಕರಿಸಿ ದರೆ ಮಾಂಸವನ್ನು ತಿಂದಹಾಗೆಆಗುತ್ತದೆ;ಮೂರನ್ನೂ ಸೇರಿಸಿ ಸೇವಿಸಿದರೆ,ಹೆಂಡವನ್ನು ಕುಡಿದಹಾಗೆ ಆಗುತ್ತದೆ, ಹೀಗೆ ತಾಂಬೂಲವು ಕೆಲವುಆಶ್ರಮಿಗಳಿಗೆ ನಿಷೇಧಿಸಲ್ಪಟ್ಟಿ ರುತ್ತದೆ. “ಬ್ರಹ್ಮಸೂತ್ರಪರಿತ್ಯಾಗಾತ್ ಬ್ರಹ್ಮಚಾರೀ ಗೃಹೀ ವನೀ। ಪರಿವ್ರಾಟ್ಚಾ ಪಿ ಪತತಿ” ಯಜ್ಞೋಪವೀತವನ್ನು ಪರಿತ್ಯಾಗಮಾಡುವದರಿಂದ, ಬ್ರಹ್ಮಚಾರಿಯೂ, ಗೃಹಸ್ಥಾಶ್ರಮಿಯೂ,ವಾನಪ್ರಸ್ಥನೂ, ಯತಿಯಾದರೂ ಸಹ ಆತ್ಮನಾಶವನ್ನು ಮಾಡಿ ಕೊಳ್ಳುವನು” ; ಇಲ್ಲಿ ಜನಿವಾರವನ್ನು ತೆಗದುಹಾಕಕೂಡದೆಂದು ನಾಲ್ಕು ಆಶ್ರಮಿಗಳ ವಿಷಯದಲ್ಲೂ ಹೇಳಲ್ಪಟ್ಟಿರುತ್ತದೆ. ಜಾತಿವಿಷಯದಲ್ಲಿ “ಸ್ತ್ರೀಣಾಂ ಪ್ರತ್ಯಾಚ ಕ್ಷಾಣಾನಾಂ ಸಮಾಹಿತೋ ಬ್ರಹ್ಮಚಾರಿ ಇಷ್ಟಂ ದತ್ತಂ ಹುತಂ ಪ್ರಜಾಂ ಪಶೂಂ ಬ್ರಹ್ಮವರ್ಚಸ ಮನ್ನಾದ್ಯಂ ವೃಙ್ಕ್ತೇ ; ತಸ್ಮಾದುಹವೈ ಬ್ರಹ್ಮಚಾರಿ ಸಂಘಂ ಚರಂತಂ ನಪ್ರತ್ಯಾಚಕ್ಷೀತ” ಎಂಬುದೂ ಮತ್ತು “ನ ಸ್ವರಃ ಪ್ರಣ ವೋಽಜ್ಞಾನಿ ಸ್ತ್ರೀ ಶೂದ್ರಾಣಾಂ” ಸ್ತ್ರೀ ಶೂದ್ರರಿಗೆ ಮೂಲ ಮಂತ್ರೋಪದೇಶ ದಲ್ಲಿ ಸ್ವರ ಪ್ರಣವ, ಅಙ್ಗನ್ಯಾಸಗಳು ನಿಷೇಧಿಸಲ್ಪಟ್ಟವೆ. ಗೋತ್ರ ವಿಷಯದಲ್ಲಿ ನಿಷೇಧೋಕ್ತಿಗಳು:—“ಸಗೋತ್ರಂನ ನಿಮಂತ್ರಯೀತ”-“ಶ್ರಾದ್ಧದಲ್ಲಿ ಸಗೋತ್ರ ನನ್ನು ನಿಮಂತ್ರಣಕ್ಕೆ ಹೇಳಕೂಡದು” ಮತ್ತು “ದಾನಂ ದದ್ಯಾತ್ಸಗೋತ್ರಾಯ

**ಕನ್ಯಾದಾನಂತು ವರ್ಜಯೇತ್**" "ಸಗೋತ್ರನಿಗೆ ಇತರ ದಾನಗಳನ್ನು ಮಾಡ ಬಹುದು, ಕನ್ಯಾದಾನವು ಕೂಡದು" **ಪ್ರವರ** ವಿಷಯದಲ್ಲಿ ನಿಷೇಧೋಕ್ತಿಯು.- **"ಸಮಪ್ರವರಗೋತ್ರಂಚ ವಿಧುರಂ ಬ್ರಹ್ಮಚಾರಿಣಂ । ದೇವಾರ್ಥೇ ವರಯೇ ದ್ವಿದ್ವಾನ್ಪಿತ್ರರ್ಥೇ ವರಣಂ ತ್ಯಜೇತ್**" "ಒಂದೇ ಪ್ರವರ ಗೋತ್ರವುಳ್ಳವನನ್ನೂ, ವಿಧುರಂ ಎಂದರೆ ಹೆಂಡತಿ ಯಿಲ್ಲದವನನ್ನೂ, ಬ್ರಹ್ಮಚಾರಿಯನ್ನೂ, ದೇವಕಾರ್ಯ ಗಳಲ್ಲಿ ಕರೆಸಬಹುದು, ಆದರೆ ಪಿತೃಕಾರ್ಯಗಳಲ್ಲಿ ಕೂಡದು." ಹಾಗೆಯೇ **"ಸಮಾನ ಪ್ರವರಾನ್ನೋದಹೇತ್**" ಎಂದಿದೆ.

ಚರಣನಿಮಿತ್ತಕವಾದ ನಿಷೇಧವು.—**ಬಹ್ವೃಚಾಶ್ಶ್ರವಣೇಕುರ್ಯು ಶ್ಶ್ರಾವಣಂ ನತುಪರ್ವಣಿ**" ಚರಣವೆಂದರೆ ಶಾಖೆಯು, ಬಹ್ವೃಚರು ಶ್ರವಣನಕ್ಷತ್ರದಲ್ಲಿ ಉಪಾಕರ್ಮವನ್ನು ಮಾಡಬೇಕೆವಿನಾ ಪೂರ್ಣಿಮೆಯಲ್ಲಿ ಕೂಡದು. **ಕುಲ** ವಿಷಯ ವಾದ ನಿಷೇಧವು. **"ಮೃತಬಂಧೋರ್ದಶಾಹಾನಿ ಕುಲಸ್ಯಾನ್ನಂ ನಿಷಿಧ್ಯತೇ"** "ಬಂಧುವು ಮೃತನಾಗಿರುವವನ ಕುಲದವರ ಅನ್ನವು ಹತ್ತು ದಿನಗಳವರೆಗೂ ನಿಷೇ ಧಿಸಲ್ಪಟ್ಟಿರುತ್ತದೆ." **ದೇಶ** ವಿಷಯವಾದ ನಿಷೇಧವು.—"**ನಾಪ್ಸುನೈವಾಂಭಸ ಸ್ತೀರೇ ನಶ್ಮಶಾನೇ ಸಮಾಚರೇತ್ । ಉತ್ಸರ್ಗಂ ವೈಪುರೀಷಸ್ಯ ಮೂತ್ರಸ್ಯಚ ವಿಸರ್ಜನಂ**" "ನೀರಿನಲ್ಲೂ, ಉದಕದ ತೀರದಲ್ಲೂ, ಸ್ಮಶಾನದಲ್ಲೂ ಮಲಮೂತ್ರೋ ತ್ಸರ್ಜನವನ್ನು ಮಾಡಕೂಡದು. **ಕಾಲವಿಷಯವಾದ** ನಿಷೇಧವು.—" **ನಭೋಕ್ತವ್ಯಂ ನಭೋಕ್ತವ್ಯಂ ಸಂಪ್ರಾಪ್ತೇ ಹರಿವಾಸರೇ,**" ಹರಿವಾಸರ ಬಂದಾಗೆಲ್ಲಾ ಊಟಮಾಡಬಾರದು. **ಅವಸ್ಥಾವಿಷಯವಾದ** ನಿಷೇಧವು.—" **ಏಕಾದಶ್ಯಾಂ ನಭುಂಜೀತ ಶಕ್ತಸ್ಸನ್ನಿರುಪದ್ರವಃ**" "ಆಧಿವ್ಯಾಧಿಗಳೇನೂ ಇಲ್ಲದೆ ಶಕ್ತನಾ ಗಿದ್ದರೆ ಏಕಾದಶಿಯಲ್ಲಿ ಊಟಮಾಡಬಾರದು. " **ನಾತುರುಸ್ಸ್ನಾಯಾತ್**" ರೋಗಿಷ್ಠನು ಸ್ನಾನಮಾಡಕೂಡದು. **ಗುಣವಿಷಯ** ವಾದ ನಿಷೇಧವು— **"ನಾತಿಕೇಶಾಮ ಕೇಶಾಂವಾ ನಾತಿ ಕೃಷ್ಣಾಂ ನ ಪಿಙ್ಗಳಾಮ್ । ನಿಸರ್ಗತೋಧಿಕಾಙ್ಗಾಂವಾ ನ್ಯೂನಾಙ್ಗಾಂ ವಾಪಿನೋದ್ವಹೇತ್**" "ತುಂಬಾ ಕೂದಲುಳ್ಳ ಅಥವಾ ಕೂದಲೇ ಇಲ್ಲದಿರುವ, ತುಂಬಾ ಕಪ್ಪಾಗಿರುವ, ಮತ್ತು, ತುಂಬಾ ಅರಶಿನ ಬಣ್ಣದ ಹೆಚ್ಚು ಕಮ್ಮಿ ಬೆರಳುಗಳೇ ಮೊದಲಾದವುಳ್ಳ ಕನ್ಯೆಯನ್ನೂ ಮದುವೆ ಮಾಡಿಕೊಳ್ಳಕೂಡದು. ಅಥವಾ **"ಆರನಾಳಂ ನ ಸೇವೇತ ಕದಾಚಿದ್ಭಗವತ್ಪರಃ**" "ಭಗವತ್ಪರನಾದವನು ಎಂದಿಗೂ ಆರನಾಳವನ್ನು ಎಂದರೆ ನೀರಿ ನಲ್ಲಿ ಹಾಕಿದ ಹಿಂದಿನ ರಾತ್ರಿಯ ಅನ್ನವನ್ನು ಸೇವಿಸಕೂಡದು." **ಸಮಯ ನಿಮಿತ್ತಿಕವಾದ** ನಿಷೇಧವು.—"**ಅಸ್ವರ್ಗ್ಯಂ ಲೋಕವಿದ್ವಿಷ್ಟಂ ಧರ್ಮ ಮಪ್ಯಾಚರೇನ್ನತು**" ಅದು ಒಂದುವೇಳೇ ಧರ್ಮವೇ ಏಕೆ ಆಗಿರಕೂಡದು,

**ನಿಷಿದ್ಧಜ್ಗಳ್ ಪುಗುನ್ದಾಲ್ ಪ್ರಾಯಶ್ಚಿತ್ತಮ್ ಯಥಾಧಿಕಾರಮಾಗ್ಯೆಯಾಲೇ ವೈಷಮ್ಯಮುಣ್ಡು.** (೧) "**ಎನ್ನಡಿಯಾರದು ಶೆಯ್ಯಾರ್, ಶೆಯ್**

---

ಒಳ್ಳೇ ಶ್ರೇಯಸ್ಸಿಗೆ ಹೇತುವಾಗದೆಯೂ ಲೋಕದವರಿಗೆ ಹಿತವಲ್ಲದೆಯೂ ಇರುವದನ್ನು ಆಚರಿಸಕೂಡದು ; ಎಂಟು ವರ್ಷದ ಕನ್ಯೆಗೆ ವಿವಾಹ ಬೆಳಿಸುವದು ಧರ್ಮವಾಗಿದ್ದರೂ, ಈ ಸಮಯದಲ್ಲಿ ಅದು ಕೆಲವು ಸ್ಥಳಗಳಲ್ಲಿ ಲೋಕದ ಜನರಿಗೆ ಇಷ್ಟವಲ್ಲದೆ ಶಿಕ್ಷಾವಹವೆಂದು ಏರ್ಪಡಿಸಿರುವದರಿಂದ ಆಚರಿಸತಕ್ಕದ್ದಲ್ಲವೆಂಬ ಭಾವವು. ಆದಿ ಶಬ್ದದಿಂದ ಹೀಗೆಯೇ ಇನ್ನೂ ಅನೇಕ ಉಪಾಧಿಗಳಲ್ಲಿಯೂ ನಿಷೇಧಿಸಲ್ಪಟ್ಟವು ಉಂಟು ಎಂಬ ಭಾವವು, "**ನ ಭ್ರಾತರೌ ನಿಯುಞ್ಜೀತ ಶ್ರಾದ್ಧೇ ಪಿತೃಸುತಾವಪಿ**" ಅಣ್ಣತಮ್ಮಂದರನ್ನೂ ಜ್ಞಾತಿಗಳನ್ನೂ ಶ್ರಾದ್ಧ ನಿಮಂತ್ರಣಕ್ಕೆ ಕರೆಯುಬೇಡ; ಇವೇ ಮೊದಲಾದ ಅನೇಕ ನಿಷೇಧಿಸಲ್ಪಟ್ಟವು ಉಂಟು. ಪ್ರಪನ್ನನಾದವನು ನಿಷಿದ್ಧಾಪರಾಧಗಳನ್ನು ಬುದ್ಧಿಪೂರ್ವಕ ಮಾಡಿದರೂ ಅವು ಆತನಿಗೆ ಲೇಪಿಸುವದಿಲ್ಲವೆಂದರೆ, ಈ ಮೇಲೆ ನಿಷೇಧಿಸಿ ಹೇಳಿದವುಗಳನ್ನೂ ಅನುಷ್ಠಿಸಲಿ, ಇವುಗಳು ತಾನೇ ಏಕೆ ಕೂಡದು ಎಂಬ ಪ್ರತಿದ್ವಂದಿ ಆಕ್ಷೇಪವು ಉಂಟಾಗುತ್ತದೆ. ಇವು ಕೂಡದೆಂದರೆ ಅವೂ ಕೂಡದು ಎಂದೇ ಸಿದ್ಧಾನ್ತಿಸಬೇಕೆಂಬ ತಾತ್ಪರ್ಯವು.

**ನಿಷಿದ್ಧಜ್ಗಳ್ ಪುಗುನ್ದಾಲ್** - ಶಾಸ್ತ್ರದಲ್ಲಿ ನಿಷೇಧಿಸಲ್ಪಟ್ಟ ಕೃತ್ಯಗಳು ಎಂದರೆ ಅಕೃತ್ಯಕರಣಗಳು ಪ್ರಾಪ್ತವಾದರೆ, **ಪ್ರಾಯಶ್ಚಿತ್ತಮ್ ಯಥಾಧಿಕಾರಮಾಗ್ಯೆಯಾಲೇ** - ಆಯಾ ಪಾತಕಗಳಿಗೆ ಆಯಾ ಪ್ರಾಯಶ್ಚಿತ್ತಗಳು ಎಂದು ನಿಯತವಾಗಿರುವದರಿಂದ ಅಧಿಕಾರಾನುಗುಣವಾಗಿ ಪ್ರಾಯಶ್ಚಿತ್ತದಲ್ಲಿ, **ವೈಷಮ್ಯ ಉಂಡು** - ವ್ಯತ್ಯಾಸವು ಉಂಟು. ಭಕ್ತ ಪ್ರಪನ್ನರಿಗೆ ನಿಷಿದ್ಧಾಚರಣೆಯು ಪಾತಕವೆಂಬುದು ಸಮನಾಗಿದ್ದರೂ ಪ್ರಾಯಶ್ಚಿತ್ತಕ್ರಮದಲ್ಲಿ ವ್ಯತ್ಯಾಸ ಉಂಟು. ಹೇಗೆಂದರೆ,ಭಕ್ತನಿಗೆ ಬುದ್ಧಿ ಪೂರ್ವಾಘವು ಪ್ರಾಪ್ತವಾದರೆ "**ಅಪಿಚೇತ್ಪಾತಕಂ ಕಿಞ್ಚಿದ್ಯೋಗೀ ಕುರ್ಯಾತ್ಪ್ರಮಾದತಃ । ಯೋಗಮೇವ ನಿಷೇವೇತ ನಾನ್ಯಂ ಯತ್ನಂ ಸಮಾಚರೇತ್**" ಎಂದು ಹೇಳಿರುವಹಾಗೆ ಉಪಾಸನವೇ ಪ್ರಾಯಶ್ಚಿತ್ತವೆಂದು ಹೇಳಿತು. ಸ್ವತಂತ್ರ ಪ್ರಪತ್ತಿಯನ್ನನುಷ್ಠಿಸಿದ ಪ್ರಪನ್ನನಿಗೆ ಬುದ್ಧಿಪೂರ್ವಕವಾದ ಅಪರಾಧವು ಪ್ರಾಪ್ತವಾದರೆ, ಆ ಅಪರಾಧ ನಿವೃತ್ತಿಗೆ "**ಪುನಶ್ಶರಣಂವ್ರಜೇತ್**"ಎಂದು ಹೇಳಿರುವ ಹಾಗೆ ಪುನಶ್ಶರಣಾಗತಿಯನ್ನು ಅನುಷ್ಠಿಸತಕ್ಕದ್ದು ಎಂದು ಹೇಳಲ್ಪಟ್ಟಿರುತ್ತದೆ.

ಆದರೆ ಪ್ರಪನ್ನನು ಜ್ಞಾನಿಯಾದುದರಿಂದ ಆತನಿಗೆ ಬುದ್ಧಿಪೂರ್ವಕವಾಗಿ ಅಪ

---

(೧) ಪೆರಿ. ತಿರು. ೪, ೯, ೨

ರಾಧವೇ ಉಂಟಾಗಲಾರದಲ್ಲಾ, ಹಾಗಿರುವಾಗ ಪ್ರಾಯಶ್ಚಿತ್ತ ತಾನೇ ಎಲ್ಲಿಯದು? ಎಂದು ಪೂರ್ವಪಕ್ಷವನ್ನು ತಂದರೆ, ಹಾಗೆ ಅಪರಾಧಗಳು ಪ್ರಾಪ್ತವಾಗುವದುಂಟು ಎಂಬುದಕ್ಕೆ ಪೆರಿಯ ತಿರುಮೊಳಿಯ ಪಾಶುರವನ್ನು ಉದಾಹರಿಸಿ ಅದರ ತಾತ್ಪರ್ಯ ವನ್ನು ಸೂಚಿಸುತ್ತಾರೆ. (¯) ಎನ್ನಡಿಯಾರ್ ಅದು ಶೆಯ್ಯಾರ್ ಎಂಬ ಪೂರಾ ಪಾಶುರವು ಯಾವುದೆಂದರೆ—

**ತನ್ನಡಿಯಾರ್ ತಿರತ್ತಗತ್ತುತ್ತಾಮರೈಯಾಳಾಗಿಲುಂ ಶಿದಗುರೈಕ್ಕು ಮೇಲ್।ಎನ್ನಡಿಯಾರ್ ಅದು ಶೆಯ್ಯಾರ್ ಶೆಯ್‌ದಾರೇಲ್‌ನನ್ರುಶೆಯ್‌ವಾರೆ ನ್ಪರ್ ಪೋಲುಮ್ । ಮನ್ನುಡೈಯ ವಿಭೀಷಣರ್ಕ್ಕಾಯಮದಿಳಿ ಲಙೈತ್ತಿಶೈ ನೋಕ್ಕಿಮಲರ್‌ಕಣ್ ವೈತ್ತ। ಎನ್ನುಡೈಯ ತಿರುವರಂಗರ್ ಕ್ಕನ್ರಿಯುಂ ಮತ್ತೋರುವರ್‌ಕ್ಕು ಆಳಾವರೇ ॥**

**ಅರ್ಥವು—ತನ್ನಡಿಯಾರ್** - ತನ್ ಎಂಬ ಪದದಲ್ಲಿ ಸನ್ನಿಯೋಗ ಶಿಷ್ಟ ನ್ಯಾಯದ ಪ್ರಕಾರ ನಿತ್ಯಾನಪಾಯಿನಿಯಾದ ಲಕ್ಷ್ಮಿಯೂ ಹೇಳಲ್ಪಟ್ಟಳು, ಆದುದ ರಿಂದ ಹೀಗೆ ಲೋಕದಂಪತಿಗಳಿಬ್ಬರನ್ನೂ ಉಪಾಯೋಪೇಯರನ್ನಾಗಿ ಭಾವಿಸಿ ಆಶ್ರ ಯಿಸಿದ ಪರಮ ಭಕ್ತರ, **ತಿರತ್ತಗತ್ತು** - ವಿಷಯದಲ್ಲಿ, **ತಾಮರೈಯಾಳಾಗಿ ಲುಮ್** - ಕಮಲದಲ್ಲಿ ಉತ್ಪನ್ನಳಾಗಿರುವದರಿಂದ ಭಕ್ತರವಿಷಯದಲ್ಲಿ ಅನುಗ್ರಹ ಮಯಳಾಗಿ ವಾತ್ಸಲ್ಯಕಾರುಣ್ಯಾದಿ ಮಹಾಗುಣಗಳನ್ನುಳ್ಳವಳಾಗಿದ್ದರೂ, **ಶಿದಗು ಉರೈಕ್ಕುಂ ಏಲ್** - ತಾನು ಆಶ್ರಿತರ ವಿಷಯದಲ್ಲಿ ಪುರುಷಕಾರಭೂತಳಾಗಿ, ಅವರು ಮಾಡಿದ ಅಪರಾಧಗಳನ್ನು ತನ್ನ ಪತಿಗೆ ತಿಳಿಸುವದು ತನ್ನ ಕರ್ತವ್ಯ ವೆಂದು ಭಾವಿಸಿ ಹೇಳಲು ಆರಂಭಿಸಲಾಗಿ, ಆಗ ವಾತ್ಸಲ್ಯಾತಿಶಯದಿಂದ,ಅವಳ ಪತಿ ಯಾದ ಶ್ರೀರಂಗನಾಥನು, **ಎನ್ನಡಿಯಾರ್ ಅದು ಶೆಯ್ಯಾರ್** - ನಮ್ಮಲ್ಲಿ ಶರಣಾ ಗತಿಯನ್ನನುಷ್ಠಿಸಿದ ಪ್ರಪನ್ನರಾದ ಭಕ್ತರು ಎಂದಿಗೂ ಅಂತಹ ಅಪರಾಧಗಳನ್ನು ಬುದ್ಧಿಪೂರ್ವಕವಾಗಿ, **"ಧೀಪೂರ್ವೋತ್ತರ ಪಾಪ್ಮನಾ ಮಜನನಾತ್"** (೧೬೦ ನೇ ಪುಟವನ್ನು ನೋಡಿ) ಎಂಬಲ್ಲಿ ಹೇಳಿರುವಹಾಗೆ, ಮಾಡುವದಿಲ್ಲವು; **ಶೆಯ್‌ದಾರ್ ಏಲ್** - ಒಂದುವೇಳೆ ಮಾಡಿದುದಾದರೆ, **ನನ್ರು ಶೆಯ್‌ದಾರ್ ಎನ್ಬರ್ ಪೋ ಲುಮ್** - ಪ್ರಾಮಾದಿಕವಾಗಿ ನಡೆದು ಹೋಗಿರುವದರಿಂದ ಅದನ್ನು ನಾನು ಗುಣ ವಾಗಿಯೇ ಭಾವಿಸುವೆನು ಎಂದು ತನ್ನ ಪತ್ನಿಗೆ ಸಮಾಧಾನವನ್ನುಹೇಳುವಹಾಗೆ, **ಮನ್ ಉಡೈಯ ವಿಭೀಷಣರ್ಕ್ಕು ಆಯ್** - "ಮಹಾಪ್ರಾಜ್ಞ" ನೆಂಬ ಖ್ಯಾತಿ ಯನ್ನು ಹೊಂದಿರುವ ವಿಭೀಷಣನಿಗಾಗಿ, **ಮದಿಳ್ ಇಲಂಗೈದಿಶೈನೋಕ್ಕಿ** - ಆತನಿಗೆ ಸೇವೆಯನ್ನೀಯುವದಕ್ಕಾಗಿ ದಕ್ಷಿಣಾಭಿಮುಖನಾಗಿ, ಏಕೆಂದರೆ, ಶ್ರೀರಾಮ ಚಂದ್ರನು ಪಟ್ಟಾಭಿಷೇಕ ಮಹೋತ್ಸವದಲ್ಲಿ ತನಗೆ **"ಕುಲಧನ"** ವಾದ ಶ್ರೀರಂಗ

ದಾರೇಲ್ ನನ್ರು ಶೆಯ್‌ದಾರ್" ಎಜ್ಬ್ಗರದುವುವರ್ ಅಪರಾಧರ್ ಪುಗಿರು

ನಾಥನನ್ನು ಬಿಜಮಾಡಿಸಿ ಕೊಟ್ಟಿದುದು, ವರಯೂರಿನ ಧರ್ಮವರ್ಮನೆಂಬ ರಾಜನ ಮತ್ತು ಕಾವೇರಿಯ ಪ್ರಾರ್ಥನೆಗಳ ಮೇರಿಗೆ ಶ್ರೀರಂಗದಲ್ಲೇನೆಲಸಿ ಹೋದುದರಿಂದ, ವಿಭೀಷಣನಿಗೆ ಸೇವೆಯನ್ನೀಯುವದಕ್ಕಾಗಿ ದಕ್ಷಿಣಾಭಿಮುಖನಾಗಿ(೧೬೪೩ ನೆಯ ಪುಟ ನೋಡಿ) **ಮಲರ್‌ಕಣ್‌ವೈತ್ತ** - ಪುಂಡರೀಕ ಸದೃಶಗಳಾದ ಕಣ್ಣುಗಳನ್ನು ಹೊಂದಿ ಪವಡಿಸಿರುವ, **ಎನ್ನುಡೈಯ ತಿರುವರಂಗರ್‌ಕ್ಕು ಅನ್ರಿಯುಮ್**-ನನಗೆ ಶೇಷಿಯಾಗಿ ಧಾರಕಪೋಷಕನಾದ ಶ್ರೀರಂಗನಾಯಕಿಸಮೇತನಾದ ಶ್ರೀರಂಗನಾಥನಿಗಲ್ಲದೆ, **ಮಱ್ಱುಒರುವರ್‌ಕ್ಕು ಆಳ್ ಆವರೇ** - ಇನ್ನು ಯಾವ ಅನ್ಯದೇವತೆ ಮೊದಲಾದವರಿಗೆ ವಿವೇಕವಿರುವವರು ತಾವು ಶೇಷಭೂತರೆಂದು ಭಾವಿಸುವರೇ ? ಇದರಿಂದ ಪ್ರಣವಾರ್ಥವಾದ ಮಕಾರವಾಚ್ಯಜೀವನು, **ಆಯ್ದೈವ**-ಲಕ್ಷ್ಮೀನಾರಾಯಣರಿಗೂ ತದೀಯರಿಗೂ ಶೇಷಭೂತನೇ ವಿನಾ ಇನ್ನು ಯಾರಿಗೂ ಅಲ್ಲವೆಂಬುದು ಇಲ್ಲಿ ಉಪಪಾದಿತವು. ಇಲ್ಲಿ ವಿಭೀಷಣ ದೃಷ್ಟಾಂತದಿಂದ ತಿಳಿಯತಕ್ಕ ವಿಷಯವೇನೆಂದರೆ ಆತನು ಯದ್ಯಪಿ ರಾಕ್ಷಸಯೋನಿಯಲ್ಲಿ ಹುಟ್ಟಿ ರಾಕ್ಷಸರ ಮಧ್ಯೆ ಬೆಳದಿದ್ದರೂ, ಲಕ್ಷ್ಮಿಯ ಸ್ಥಾನದಲ್ಲಿ ಪುರುಷಕಾರರೂಪವಲ್ಲಿ ಆಂಜನೇಯನು ಇದ್ದುಕೊಂಡು, ವಿಭೀಷಣನು "**ಬುದ್ಧಿಪೂರ್ವನಿಹಾಗತಃ । ಏತಾವತ್ತು ಪುರಸ್ಕೃತ್ಯ ಯುಜ್ಯತೇ ತತ್ರ ಸಙ್ಗ್ರಹಃ । ಯಥಾಶಕ್ತಿ ಮಯೋಕ್ತಂತು ರಾಕ್ಷಸಸ್ಯಾರ್ಜವಂ ಪ್ರತಿ।** ಎಂದು ಪುರುಷಕಾರತ್ವವನ್ನು ನಡೆಸಿದುದರಿಂದ, ಸ್ವಾಮಿಯು ಒಡನೆಯೇ "**ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ**" ಎಂದೂ "**ದೋಷೋಯದ್ಯಪಿ ತಸ್ಯಸ್ಯಾತ್**" ಎಂದೂ ಹೇಳಿ, "**ಆನಯೈನಂ**" ಎಂದು ಸುಗ್ರೀವನಿಗೆ ಆಜ್ಞಾಪಿಸಿದರು. ಇಲ್ಲಿ **ಯದ್ಯಪಿ** ಎಂಬಲ್ಲಿರುವ ಅಪಿ ಶಬ್ದ ಸ್ವಾರಸ್ಯದಿಂದ **ಎನ್ನಡಿಯಾರ್ ಅದು ಶೆಯ್ಯಾರ್** ಎಂಬರ್ಥವು ದ್ಯೋತಿತವು. ಆತನು ರಾಕ್ಷಸ ಕೃತ್ಯವನ್ನು ಎಂದಿಗೂ ಮಾಡನೆಂಬ ಪೂರ್ಣ ನಂಬಿಕೆಯನ್ನು ಶ್ರೀರಾಮಚಂದ್ರಪ್ರಭುವು ಪ್ರಕಟಿಸಿರುತ್ತಾರೆ. ಅವನಲ್ಲಿ ದೋಷವೇ ಇರಲಾರದು ; ಇದ್ದರೆ ತಾನೆ ಏನು ? ಅದು ಪ್ರಾಮಾದಿಕವಾಗಿ ಉಂಟಾಗಬಹುದು. ಆಗಲೂ, ಆತನು ಪ್ರಾಜ್ಞನೇ. ರಕ್ಷಿಸಲು ಯೋಗ್ಯನೇ ಎಂಬ ಭಾವವನ್ನು ತೋರಿಸಿರುತ್ತಾರೆ. **ತಾಮ್ ರೈ ಯರಾಳಾಗಿಲುಮ್ ಶಿದೈಗುರೈಕ್ಕುಂ ಏಲ್** ಎಂಬುದಕ್ಕೆ ಲಕ್ಷ್ಮಿಯು ಭಕ್ತನ ಅಪರಾಧಗಳನ್ನು ತಿಳಿಸಲು ಆರಂಭಿಸಿದರೂ, **ತನ್ನಡಿಯಾರ್ ಅದು ಶೆಯ್ಯಾರ್** ಎಂದು **ಉತ್ತರವನ್ನೀಯುವನೆಂ**ಬರ್ಥವನ್ನು ಕೆಲವರು ಹೇಳಿರುತ್ತಾರೆ ಇದರಿಂದ ಶ್ರೀರಂಗನಾಥನೇ ಕೃಪಾಕರನು, ಲಕ್ಷ್ಮಿಯು ಅಲ್ಲವೆಂದಾಗುವದರಿಂದ,ಆಕೆಗೆ ಅನು

**ರ್ವೋರ್ಗೈಕ್ಕುಲಿಙ್ಗಮ್; ಇಙ್ಙು, "ಶೆಯ್‌ದಾರೇಲ್ ನನ್ರು ಶೆಯ್‌ದಾರ್" ಎನ್ರುದು ಕ್ಕು ಪ್ರಾಮಾದಿಕಮಾಗ ಪುಗುನ್ದಾಲ್ ನಾಮೇ ಕ್ಷಮಿಪ್ಪುದೋಮ್ ; ಬುದ್ಧಿ**

ಗ್ರಹಮಯತ್ವವೂ ಪುರುಷಕಾರತ್ವವೂ ಎರಡು ಇಲ್ಲವೆಂದು ಹೇಳಿದಂತಾಗುವದ ರಿಂದ, ಮೇಲೆ ನಾವು ಹೇಳಿರುವ ಅರ್ಥವು ಪ್ರಾಜ್ಞರಿಗೆ ಉಪಾದೇಯವಾಗಬಹುದು. **ಎನ್ನಡಿಯಾರ್‌ಅದು ಶೆಯ್ಯಾರ್ ಎಙ್ಗರದುವುನ್** - ಎಂದು ಪೆರಿಯಾಳ್ವಾರ ವರು ಹೇಳಿರುವದು, **ಅಪರಾಧಮ್ ಪುಗುರುಮ್** - ಪ್ರಪನ್ನನಾಗಿ ಮೋಕ್ಷಾರ್ಥಿ ಯಾಗಿರುವವನಿಗೂ ಕೂಡ ಬುದ್ಧಿಪೂರ್ವೋತ್ತರಾಘವು ಪ್ರವೇಶಿಸಬಹುದು **ಎಙ್ಗೈಕ್ಕು** - ಎಂದು ಹೇಳುವದಕ್ಕೆ, **ಲಿಙ್ಗಮ್** - ಹೇತುವು ಅಥವಾ ಪ್ರಮಾ ಣವು ಅಥವಾ ಜ್ಞಾಪಕವು. ಈ ಆಳ್ವಾರ್ ದಿವ್ಯ ಸೂಕ್ತಿಯು, ಪ್ರಪನ್ನರೂ ಕೂಡ ಉತ್ತರಾಘವುಳ್ಳವರಾಗಬಹುದು, ಎಂಬದನ್ನು ಸೂಚಿಸುತ್ತದೆಂಬ ಭಾವವು. ಅದು ಹೇಗೆ ಎಂದರೆ, **ಶೆಯ್‌ದಾರೇಲ್** - ಮಾಡಿದರಾದರೆ ಎಂಬ ಪ್ರಯೋಗವೇ ಇರುವ ದರಿಂದ, ಎಂತಹ ಪ್ರಪನ್ನನೇ ಆಗಿದ್ದರೂ,ಒಂದಾನೊಂದುಕಾಲದಲ್ಲಿ ತನ್ನ ಪ್ರಪನ್ನ ಸ್ವರೂಪವನ್ನೂ ಸ್ವನಿಷ್ಠೆಯನ್ನೂ ಮರೆತು ಬುದ್ಧಿಪೂರ್ವಕವಾಗಿಯೇ ಅಪರಾಧಕ್ಕೆ ಗುರಿಯಾಗಬಹುದು. ವಿಶ್ವಾಮಿತ್ರಾದಿ ಋಷಿಗಳೇ ಇದಕ್ಕೆ ಸಾಕ್ಷಿಯು. ದೂರ್ವಾಸರು ಮಹಾಭಾಗವತರಾದ ಅಂಬರೀಷಮಹರ್ಷಿಗೆ ಅಪರಾಧಮಾಡಿದರು. ದ್ರೌಪದಿಯು ಸಭೆಯಲ್ಲಿ ಧರ್ಮವನ್ನು ಹೇಳು ಎಂದು ಭೀಷ್ಮರನ್ನು ಪ್ರಾರ್ಥಿಸಿದರೂ ಧರ್ಮಸೂಕ್ಷ್ಮ ವನ್ನು ಹೇಳದೆ ಅವರು ಅಪರಾಧಕ್ಕೆ ಗುರಿಯಾದರು. ತೊಂಡರಡಿಪೊಡಿಯಾಳ್ವಾ ರವರೂ ಸಹ ಅಪರಾಧವನ್ನು ಸಂಪಾದಿಸಿಕೊಂಡರೆಂಬ ವೃತ್ತಾಂತ ಉಂಟು. ಆದುವ ರಿಂದಲೇ ತಾರೆಯು ಲಕ್ಷ್ಮಣನಿಗೆ ಹೇಳುತ್ತಾಳೇನೆಂದರೆ. **"ಮಹರ್ಷಯೋಧರ್ಮ ತಪೋಭಿಕಾಮಾ ಕಾಮಾಭಿಕಾಮಾಃ ಪ್ರತಿಬದ್ಧ ಮೋಹಾಃ"** ಧರ್ಮಾಭಿ ಕಾಮರಾಗಿರುವ ಮಹರ್ಷಿಗಳೇ ಒಂದಾನೊಂದು ಕಾಲದಲ್ಲಿ ಐಹಿಕ ಕಾಮಾದಿಗ ಳಲ್ಲಿ ಸಙ್ಗ ಉಂಟಾಗಿ ಅಪರಾಧಗಳನ್ನು ಮಾಡುತ್ತಾರೆಂದು ಹೇಳಿರುತ್ತಾಳೆ. ಆದು ದರಿಂದ ಪೆರಿಯಾಳ್ವಾರ್ರವರು **ಶೆಯ್ದಾರೇಲ್** ಎಂದು ಹೇಳಿರುವದರಿಂದ ಪ್ರಪ ನ್ನರೂ ಬುದ್ಧಿ ಪೂರ್ವಕವಾಗಿ ಅಪರಾಧಗಳನ್ನು ಮಾಡುವದುಂಟು ಎಂದು ಹೇಳಿ ದಂತಾಯಿತು. ಅದುದರಿಂದ ಪೂರ್ವಪಕ್ಷಿಯ ಅಭಿಪ್ರಾಯವಾದ ಪ್ರಪನ್ನನು ಎಂದಿಗೂ ಬುದ್ಧಿ ಪೂರ್ವಕವಾದ ಅಪರಾಧಗಳನ್ನು ಮಾಡುವದೇ ಇಲ್ಲವು ಎಂಬುದು ಇದರಿಂದ ನಿರಸ್ತವು. **ಶೆಯ್‌ದಾರೇಲ್ ನನ್ರು ಶೆಯ್‌ದಾರ್** ಎಂಬುದಕ್ಕೆ ತಾತ್ಪರ್ಯ ವೇನು ಎಂದರೆ ತಿಳಿಸುತ್ತಾರೆ.—**ಇಙ್ಙು**-ಈ ಪಾಶುರದಲ್ಲಿ, **ಶೆಯ್‌ದಾರೇಲ್ ನನ್ರು ಶೆಯ್‌ದಾರ್, ಎನ್ರುದುಕ್ಕು** - ಎನ್ನುವದಕ್ಕೆ, **ಪ್ರಾಮಾದಿಕಮಾಗ ಪುಗು**

**ಪೂರ್ವ್ವಕವಾಗ ಪ್ಪುಗುನ್ದಾಲ್ ಅವರ್ಗಳ್ ಕ್ಷಮೈಕ್ಕೊಳ್ಳಾದ ವಳವಿಲುಮ್ ಶಿಕ್ಷಾವಿಶೇಷಙ್ಗಳಾಲೇ ನಾಮ್ ಶಮಿಪ್ಪಿದೋಮ್ ; ಒರುಪಡಿಕ್ಕುಮ್ ನಾಮ್ ಕೈವಿಡೋಮೆನ್ರು ತಾತ್ಪರ್ಯಮ್. "ನನ್ರು ಶೆಯ್‌ದಾರೆನ್ಬಾರ್ ಪೋ**

ನ್ದಾಲ್ - ಅಬುದ್ಧಿಪೂರ್ವಕವಾಗಿ ಅಪರಾಧವು ಪ್ರಾಪ್ತವಾದರೆ, ನಾಮೇ ಕ್ಷಮಿಪ್ಪಿ**ದೋಮ್**-ನಾವೇ ಕ್ಷಮಿಸಿಬಿಡುವೆವು. ಏಕೆಂದರೆ, "**ಏವಂ ವಿದಿಪಾಪಂ ಕರ್ಮ ನಶ್ಲಿಷ್ಯತೇ**"ಎಂಬಲ್ಲೂ **ಅಶ್ಲೇಷ ವಿನಾಶೌ** ಎಂಬ ಸೂತ್ರದಲ್ಲೂ ಹೇಳಿರುವಹಾಗೆ, ಅದು ಲೇಪಿಸುವದೇ ಇಲ್ಲವು. ಈ ಅಭಿಪ್ರಾಯವು ಅಪರಾಧ ಪರಿಹಾರಾಧಿಕಾರದ ಅಂತ್ಯ ಶ್ಲೋಕದಲ್ಲಿ ವಿದಿತವು. "**ಪ್ರಾಮಾದಿಕಂ ಚೋತ್ತರಂ ನ್ಯಾಸೇನಕ್ಷಪಯೇತ್**" "**ಧೀ ಪೂರ್ವೋತ್ತರ ಪಾಪ್ಮನಾ ಮಜನನಾ ಜ್ಞಾತೇಪಿ ತನ್ನಿಷ್ಕೃತೇಃ ಕೌಟಿಲ್ಯೇಸತಿ ಶಿಕ್ಷಯಾ ಪ್ಯನಘಯೇತ್ ಕ್ರೋಡೀಕರೋತಿ ಪ್ರಭುಃ**" ಎಂಬುದರಿಂದ ಈ ಪಾಶುರಾರ್ಥವೇ ಅಲ್ಲಿಯೂ ಉಪಪಾದಿತವು. ಪ್ರಪನ್ನನಿಗೆ ಪ್ರಾಮಾದಿಕವಾದ ಉತ್ತರಾಘವು ಲೇಪಿಸುವದೇ ಇಲ್ಲವು. ಪ್ರಪನ್ನನು ಸಾಧಾರಣವಾಗಿ ಬುದ್ಧಿಪೂರ್ವಕವಾಗಿ ಅಪರಾಧಗಳನ್ನು ಮಾಡಲು ಹಿಂತೆಗೆಯುವನು. ಒಂದು ವೇಳೆ ವಿವೇಕವು ಹಿಂತೆಗೆದು ಅಂತಹ ಅಪರಾಧಗಳನ್ನು ಮಾಡಿದರೆ, ಪ್ರಾಯಶ್ಚಿತ್ತವನ್ನಾಗಲಿ ಪುನಶ್ಶರಣಾಗತಿಯನ್ನಾಗಲಿ ಮಾಡಿದರೆ, ಮನ್ನಿಸಿ ರಕ್ಷಿಸುವನು. ಹಾಗೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿದ್ದರೆ ಅಲ್ಪಶಿಕ್ಷೆಯನ್ನು ಕೊಟ್ಟು ದೇಹಾವಸಾನದಲ್ಲಿ ಮೋಕ್ಷವನ್ನು ಕೊಡುವನು. ಆದುದರಿಂದ ಅವನಿಗೆ ಎಂದಿಗೂ ಕೇಡಿಲ್ಲವು ಎಂಬ ಅಭಿಪ್ರಾಯವು. ಅಪರಾಧ ಮಾಡುವದೂ ಒಳ್ಳೇದು ಎಂದು ಭಾವಿಸುವನು ಎಂಬರ್ಥವಲ್ಲವು ಈ ಅಭಿಪ್ರಾಯಗಳನ್ನೇ ಮುಂದಿನ ಎರಡು ವಾಕ್ಯಗಳಿಂದ ವಿಶದವಾಗಿ ತಿಳಿಸುತ್ತಾರೆ. ಹಿಂದೆ ಅಪರಾಧಪರಿಹಾರಾಧಿಕಾರದಲ್ಲಿ ಹೇಳಿದುದರ ಅನುವಾದವೆಂದು ಭಾವಿಸತಕ್ಕದ್ದು.

ಬುದ್ಧಿಪೂರ್ವಕವಾದ ಉತ್ತರಾಘವು ಲೇಪಿಸುವದಿಲ್ಲವೆಂದು ವಾದಿಸುವವರನ್ನು ನಾಲ್ಕು ವಿಧವಾಗಿ ವಿಕಲ್ಪಿಸಿ ಪ್ರಶ್ನಿಸಬಹುದು ಏನೆಂದರೆ—(೧) ಈಶ್ವರನಿಗೆ ನಿಗ್ರಹೇಚ್ಛೆಯೇ ಉಂಟಾಗುವದಿಲ್ಲವೆಂಬುದು ತಾತ್ಪರ್ಯವೋ?(೨) ನಿಗ್ರಹೇಚ್ಛೆಯುಂಟಾದರೂ, ನಿಗ್ರಹದ ಫಲವಿಲ್ಲವೆಂಬ ತಾತ್ಪರ್ಯವೋ ? (೩) ಈಶ್ವರನಿಗೆ ಪ್ರೀತ್ಯಭಾವ ಮಾತ್ರ ಉಂಟಾದೀತು,ಪ್ರತ್ಯವಾಯವೇನೂ ಉಂಟಾಗುವದಿಲ್ಲವೆಂಬ ತಾತ್ಪರ್ಯವೋ? ಅಥವಾ (೪) ಕರ್ತೃವಿಗೆ ಪ್ರೀತ್ಯಭಾವ ಉಂಟೆಂಬುದು ತಾತ್ಪರ್ಯವೋ ? ಎಂದು ವಿಕಲ್ಪಿಸಿ, ಇವು ನಾಲ್ಕು ಅಭಿಪ್ರಾಯಗಳೂ ಸರಿಯಲ್ಲವೆಂದು ಮುಂದೆ ತೋರ್ಪಡಿ

(೧) ಲಕ್ಷ್ಮೀ. ೧೭.೯೧

ಲುಮ್" ಎನ್ರುಶೊಲ್ಲುಗೈಯಾಲೇ ಇದು ವಸ್ತುವೃತ್ತಿಯಿಲ್ ನನ್ರನ್ರೆನ್ನು ಮಿಡಮ್ ಸೂಚಿತಮ್. (೧)"ಅಸಾಯಸಂಪ್ಲವೇ ಸದ್ಯಃ ಪ್ರಾಯಶ್ಚಿತ್ತಂ ಸಮಾಚರೇತ್ । ಪ್ರಾಯಶ್ಚಿತ್ತಿ ರಿಯಂ ಸಾತ್ರ ಯತ್ಪುನ ಶ್ಶರಣಂ ವ್ರಜೇತ್" ಎನ್ರು

---

ಸುತ್ತಾರೆ. ಮೊದಲು ಪ್ರಥಮವಿಕಲ್ಪಕ್ಕೆ ಸಮಾಧಾನವನ್ನು ತಿಳಿಸುತ್ತಾರೆ.(೧)**ಬುದ್ಧಿಪೂರ್ವಕಮಾಗಪ್ಪುಗುನ್ದಾಲ್**-ಬುದ್ಧಿಪೂರ್ವಕವಾಗಿ ಉತ್ತರಾಘವು ಬಂದುಸೇರಿದರೆ, **ಅವರ್ಗಳ್**-ಆ ಪ್ರಪನ್ನರು, **ಕ್ಷಮೈಕೊಳ್ಳಾದವಳವಿಲ್**-ಇದಕ್ಕೆ ಪ್ರಾಯಶ್ಚಿತ್ತಾನುಷ್ಠಾನಮಾಡಿ ಅನುತಾಪದಿಂದ ಕ್ಷಮಿಸು ಎಂದು ಪ್ರಾರ್ಥಿಸದೇ ಇದ್ದರೂ, **ಶಿಕ್ಷಾವಿಶೇಷಙ್ಗಳಾಲೇ** - "ಕುಂಜಾಭವಂತಿ" "ಕಾಣಾಭವಂತಿ" "ಅವಿಧೇಯಪುತ್ರಾಭವನ್ತಿ" ಎಂದು ಹಿಂದೆ ಹೇಳಿದಹಾಗೆ ಅಲ್ಪಗಳಾದ ಶಿಕ್ಷಾವಿಶೇಷಗಳ ಮೂಲಕ, **ನಾಮ್ ಶಮಿಪ್ಪಿದೋಮ್** - ಭಕ್ತವತ್ಸಲನಾಗಿ ಸರ್ವೇಶ್ವರನಾದ ನಾನು ಆ ಅಪರಾಧಗಳನ್ನು ಪರಿಹರಿಸುವೆನು ; **ಒರುಪಡಿಯಾಲುಮ್** – ಯಾವುದೊಂದು ರೀತಿಯಲ್ಲೂ, **ನಾಮ್ ಕೈವಿಡೋಮೆನ್ರು** ತಾತ್ಪರ್ಯಮ್-ನಾವು ಎಂದಿಗೂ ಪ್ರಪನ್ನನನ್ನು ಕೈಬಿಡುವದಿಲ್ಲವು ಎಂದರೆ ರಕ್ಷಿಸದೇ ಇರುವದಿಲ್ಲವು ಎಂಬುದು ತಾತ್ಪರ್ಯವು. ಆದುದರಿಂದ ನಿಗ್ರಹೇಚ್ಛೆಯು ಉಂಟಾಗುವದು ಸಿದ್ಧವು. ಅಲ್ಪದಂಡನೆಯಿಂದ ಶಿಕ್ಷಿಸಿ, ದೇಹಾವಸಾನದಲ್ಲಿ ಮೋಕ್ಷವನ್ನು ಕೊಟ್ಟು, ಸರ್ವೇಶ್ವರನು ರಕ್ಷಿಸುವನು ಎಂಬ ಭಾವವು. **ನನ್ರುಶೆಯ್ದಾರ್ ಎನ್ಬರ್ ಪೋಲುಮ್ ಎನ್ರು**-ಆ ಅಪರಾಧಮಾಡಿದ ಪ್ರಪನ್ನರು ಒಳ್ಳೇದುಮಾಡಿದರೆಂದು ಸ್ವಾಮಿಯು ಅನ್ನುವರೆಂದು **ಶೊಲ್ಲುಗೈಯಾಲೇ** – ಹೇಳಿರುವದರಿಂದ, **ಇದು ವಸ್ತುವೃತ್ತಿಯಿಲ್** - ಸರಿಯಾಗಿ ನೋಡಿದರೆ, ಸರಿಯಾದಭಿಪ್ರಾಯವನ್ನು ನಾವು ಗ್ರಹಿಸುವ ಸಂದರ್ಭದಲ್ಲಿ, **ನನ್ರನ್ನು ಮಿಡಮ್ ಸೂಚಿತಮ್** - ಒಳ್ಳೇದಲ್ಲವೆಂಬುದು ಸೂಚಿತವು. **ನನ್ರುಶೆಯ್ದಾರ್** ಎಂದು ಹೇಳಬೇಕಾದರೆ **ನನ್ರು**ವಲ್ಲದ್ದಲ್ಲವೇ **ನನ್ರು** ಎಂದು ಹೇಳತಕ್ಕದ್ದು ? ಆ ಕಾರಣದಿಂದ **ನನ್ರು**ನ್ರು ಎಂಬುದು ಸಿದ್ಧವು. ಯಾವಾಗ ಬುದ್ಧಿಪೂರ್ವಕವಾದ ಅಕೃತ್ಯವೆಂದು ಏರ್ಪಟ್ಟಿತೋ, ಅದಕ್ಕೆ ಶಿಕ್ಷೆಯು ಇದ್ದೇತೀರಬೇಕೆಂಬ ಭಾವವು. ಇದು ತಮ್ಮ ಅಭಿಪ್ರಾಯಮಾತ್ರವೇ ಅಲ್ಲವು. ಶ್ರೀ ಯತಿವರ್ಯರ ಅಭಿಪ್ರಾಯವೂ ಹಾಗೆಯೇ. ಆದುದರಿಂದ "ಅಶ್ಲೇಷ"ವಾಕ್ಯವು ಅಬುದ್ಧಿಪೂರ್ವಕವಾದ ಉತ್ತರಾಘವಿಷಯವೇ ವಿನಾ, ಬುದ್ಧಿಪೂರ್ವಕವಾದ ಉತ್ತರಾಘವಿಷಯವಲ್ಲವೆಂದು ಹೇಳಿರುತ್ತಾರೆ. ಇದು ಹಿಂದೆಯೇ ಉಪಪಾದಿತವು. ಈಗ ಲಕ್ಷ್ಮೀತಂತ್ರಪ್ರಮಾಣವನ್ನು ಹಿಂದೆ ಉದಾಹರಿಸಿದುದನ್ನೇ ಜ್ಞಾಪಿಸುತ್ತಾರೆ. ಅಪರಾಧಪರಿಹಾರಾಧಿಕಾರದ ೧೫೦೩-ಳ ಪುಟಗಳನ್ನು ಪರಾಂಬರಿಸಿ. "**ಅಪಾಯ ಸಂಪ್ಲವೇ** - ಉತ್ತರಾಘವು

**ಶೊಲ್ಲುಗೈಯಾಲೇ ಬುದ್ಧಿಪೂರ್ವೋತ್ತರಾಘತ್ತಿಲ್ ಈಶ್ವರನುಕ್ಕು ನಿಗ್ರಹೇಚ್ಛೈ ಯುದಿಯಾದೆನ್ನವೊಣ್ಣಾದು. ಸರ್ವಶಕ್ತಿಯಾನವನುಕ್ಕು ನಿಗ್ರಹೇಚ್ಛೈ ಪಿರನ್ದಾಲ್ ಕ್ಷಮೈಕೊಳ್ಳಾದ ಪೋದು ಫಲಸಿದ್ಧಿಯಿಲ್ಲೈ ಯೆನ್ನವೊಣ್ಣಾದು.**

---

ಪ್ರಾಪ್ತವಾದರೆ, **ಸದ್ಯಃ**-ಒಡನೆಯೇ, **ಪ್ರಾಯಶ್ಚಿತ್ತಂ ಸಮಾಚರೇತ್**-ಪ್ರಾಯಶ್ಚಿತ್ತವನ್ನನುಷ್ಠಿಸತಕ್ಕದ್ದು; **ಪುನಃ ಶರಣಂ ವ್ರಜೇತ್**-ಪಾಪಪರಿಹಾರಕ್ಕಾಗಿ ಪುನಃ ಶರಣಾಗತಿಯನ್ನನುಷ್ಠಿಸುವದು ಎಂಬುದು, **ಯತ್**-ಯಾವುದೋ, **ಸಾ**-ಅದು, **ಇಯಂ ಪ್ರಾಯಶ್ಚಿತ್ತಿಃ** - ಈ ಉತ್ತರಾಘಕ್ಕಾಗಿ ಪ್ರಾಯಶ್ಚಿತ್ತವು" ಎನ್ರು **ಶೊಲ್ಲುಗೈಯಾಲೇ**-ಎಂದು ಹೇಳಿರುವದರಿಂದ, **ಬುದ್ಧಿಪೂರ್ವೋತ್ತರಾಘತ್ತಿಲ್**-ಪ್ರಪನ್ನನು ಬುದ್ಧಿಪೂರ್ವಕವಾಗಿ ಮಾಡುವ ಅಪರಾಧದಲ್ಲಿ, **ಈಶ್ವರನುಕ್ಕು ನಿಗ್ರಹೇಚ್ಛೈ ಯುದಿಯಾದು** - ಸರ್ವೇಶ್ವರನಿಗೆ ಆದಕ್ಕಾಗಿ ನಿಗ್ರಹಿಸುವ ಇಚ್ಛೆಯು ಯುಂಟಾಗಲಾರದು, **ಎನ್ನವೊಣ್ಣಾದು**-ಎಂದು ಹೇಳಲಾಗುವದಿಲ್ಲವು ಲಕ್ಷ್ಮೀತಂತ್ರಪ್ರಮಾಣವು, ಪ್ರಪನ್ನನ ವಿಷಯದಲ್ಲೂ ಬುದ್ಧಿಪೂರ್ವಕವಾದ ಉತ್ತರಾಘಪ್ರಾಪ್ತಿಯಲ್ಲಿ ಸರ್ವೇಶ್ವರನಿಗೆ ನಿಗ್ರಹೇಚ್ಛೆಯುಂಟು ಎಂಬುದನ್ನು ಸಮರ್ಥಿಸುತ್ತದೆ. ಯಾವಾಗ ನಿಗ್ರಹೇಚ್ಛೆಯುಂಟಾಯಿತೋ, ಆಗ ಪ್ರಾಯಶ್ಚಿತ್ತವನ್ನು ಮಾಡಿಕೊಂಡಾಗಲಿ, ಅಥವಾ ಅದಕ್ಕೆ ಬದಲಾಗಿ ಪುನಶ್ಶರಣಾಗತಿಯನ್ನನುಷ್ಠಿಸಿಯಾಗಲಿ, ಕ್ಷಮಾಪಣೆಯನ್ನು ಪ್ರಾರ್ಥಿಸದಿದ್ದರೆ, ಅಲ್ಪಶಿಕ್ಷೆಯನ್ನು ಕೊಟ್ಟೇಕೊಡುವನು ಎಂಬ ಭಾವವು. ಈ ಅಭಿಪ್ರಾಯಗಳೇ **"ಅಪಿಚೇತ್ಪಾತಕಂ ಕಿಂಚಿದ್ಯೋಗೀ ಕುರ್ಯಾತ್ಪ್ರಮಾದತಃ। ಯೋಗಮೇವ ನಿಷೇವೇತ ನಾನ್ಯಂ ಯತ್ನಂ ಸಮಾಚರೇತ್"** ಎಂಬಲ್ಲೂ ಉಪಪಾದಿತವಾಗಿವೆ. ಪ್ರಪನ್ನನು ಸಾಮಾನ್ಯವಾಗ ಪಾತಕಗಳನ್ನು ಮಾಡುವದಿಲ್ಲವು. ಒಂದುವೇಳೆ ಪ್ರಮಾದದಿಂದ ನಡೆದುಹೋದರೆ ಪ್ರಾಯಶ್ಚಿತ್ತರೂಪದಲ್ಲಿ ಯೋಗವನ್ನೇ ಅನುಷ್ಠಿಸತಕ್ಕದ್ದು. ಇನ್ನು ಏನೂ ಬೇಕಿಲ್ಲವೆಂಬುದು ತಾತ್ಪರ್ಯವು. (೨): ಮುಂದೆ ಎರಡನೆಯ ವಿಕಲ್ಪವೂ ಸರಿಯಲ್ಲವೆಂದು ತೋರಿಸುತ್ತಾರೆ. ನಿಗ್ರಹೇಚ್ಛೆಯೇನೋ ಉಂಟಾಗಬಹುದು. ಪ್ರಪನ್ನನ ವಿಷಯದಲ್ಲಿ ಆ ನಿಗ್ರಹೇಚ್ಛೆಯು ಫಲಕಾರಿಯಲ್ಲವೆಂಬುದನ್ನು ದೂಷಿಸುತ್ತಾರೆ. **ಸರ್ವಶಕ್ತಿಯಾನವನುಕ್ಕು ನಿಗ್ರಹೇಚ್ಛೈ ಪಿರನ್ದಾಲ್**-ಹೀಗೆ ಬುದ್ಧಿಪೂರ್ವೋತ್ತರಾಘಕ್ಕಾಗಿ, ಶಿಕ್ಷಿಸಬೇಕೆಂಬ ಇಚ್ಛೆಯು ಸರ್ವಶಕ್ತನಿಗೆ ಪ್ರಾಪ್ತವಾದರೆ, **ಕ್ಷಮೈಕೊಳ್ಳಾದಪೋದು**-ಅದಕ್ಕೆ ವಿಧಿಸಿರುವ ಪ್ರಾಯಶ್ಚಿತ್ತವನ್ನಾಗಲಿ ಪುನಶ್ಶರಣಾಗತಿಯನ್ನಾಗಲಿ ಅನುಷ್ಠಿಸಿ ಕ್ಷಮಿಸು ಎಂದು ಪ್ರಾರ್ಥಿಸದೇ ಇದ್ದರೆ, **ಫಲಮಿಲ್ಲೈ ಎನ್ನವೊಣ್ಣಾದು** - ಅಪರಾಧ ಫಲವಾದ ಶಿಕ್ಷೆಯು ಇಲ್ಲವೆಂದು ಹೇಳಲಾಗುವದಿಲ್ಲವು. ಅದಕ್ಕನು

**ಈಶ್ವರನುಕ್ಕು ಪ್ರೀತ್ಯಭಾವ ಮಾತ್ರಂ ಪಿರಕ್ಕುಮಿತ್ತನೈ ಯೆನ್ನಾಲ್ ತನಕ್ಕು ಅತ್ತಾಲ್ ಮೇಲೊರು ಪ್ರತ್ಯವಾಯಮಿಲ್ಲೈಯಾಗಿಲ್ ಪುನಃ ಪ್ರಪತ್ತಿ (ಪ್ರಾಯಶ್ಚಿತ್ತಂ) ಪಣ್ಣವೇಣ್ಡಾ, ತನಕ್ಕುಮ್ ಪ್ರೀತ್ಯಭಾವಮ್ ಪಿರಕ್ಕು ಮತ್ತನೈಯೆನ್ನಾಲುಮ್ ಪ್ರತ್ಯವಾಯಮ್ ಸಿದ್ಧಮಾಯಿತ್ತು.**

---

ಗುಣವಾದ ಅಲ್ಪಶಿಕ್ಷೆಯನ್ನು ವಿಧಿಸಿಯೇ ರಕ್ಷಿಸುವನು ಎಂಬ ತಾತ್ಪರ್ಯವು. (೩) ಮುಂದೆ ಮೂರನೆಯ ವಿಕಲ್ಪವೂ ಸರಿಯಲ್ಲವೆಂದು "ಈಶ್ವರನುಕ್ಕು" ಎಂದಾರಂಭಿಸಿದ ವಾಕ್ಯದಿಂದ ತೋರಿಸುತ್ತಾರೆ—**ಈಶ್ವರನುಕ್ಕು** – ಸರ್ವೇಶ್ವರನಿಗೆ, **ಪ್ರೀತ್ಯಭಾವ ಮಾತ್ರಂ ಪಿರುಕ್ಕು ಮಿತ್ತನೈ** - ಆ ಸಾಪರಾಧಿಯ ವಿಷಯದಲ್ಲಿ ಪ್ರೀತಿಯಿಲ್ಲದೆ ಹೋಗುವದು ಇಷ್ಟುಮಾತ್ರವೇ ವಿನಾ, **ಅತ್ತಾಲ್** – ಆ ಪ್ರೀತ್ಯಭಾವದೆಶೆಯಿಂದ **ಮೇಲೊರುಪ್ರತ್ಯವಾಯಮಿಲ್ಲೈಯಾಗಿಲ್** - ಇನ್ನಿ ಯಾವ ತೊಂದರೆಯು ಉಂಟಾಗುವದಿಲ್ಲವು ; ಎಂದರೆ, ಆ ಪ್ರೀತ್ಯಭಾವದಿಂದ ಸರ್ವೇಶ್ವರನು ಯಾವ ವಿಧದಲ್ಲೂ ಶಿಕ್ಷಿಸುವದಿಲ್ಲವು ; ಆದುದರಿಂದ **ಪುನಃ ಪ್ರಪತ್ತಿ(ಪ್ರಾಯಶ್ಚಿತ್ತಂ) ಪಣ್ಣವೇಣ್ಡಾ**-ಪುನಃ ಪ್ರಾಯಶ್ಚಿತ್ತವನ್ನಾಗಲಿ, ಪ್ರಪತ್ತಿಯನ್ನಾಗಲಿಮಾಡುವದುಅನಾವಶ್ಯಕವೆಂದಾಗುತ್ತದೆ; ಪ್ರಾಯಶ್ಚಿತ್ತಶಾಸ್ತ್ರವೂಲಕ್ಷ್ಮೀತಂತ್ರಾದಿ ಪ್ರಮಾಣಗಳೂ ನಿರರ್ಥಕವಾದವುಗಳಾಗುತ್ತವೆ. ಮುಂದೆ (೪) ನೆಯ ವಿಕಲ್ಪವೂ ಸರಿಯಾಗುವದಿಲ್ಲವೆಂದು ಹೇಳುತ್ತಾರೆ. ೪ನೆಯ ವಿಕಲ್ಪವು ಯಾವುದೆಂದರೆ ಸರ್ವೇಶ್ವರನಿಗೆ ಈ ಸಾಪರಾಧಿಯಾದ ಪ್ರಪನ್ನನ ವಿಷಯದಲ್ಲಿ ಪ್ರೀತ್ಯಭಾವ ಉಂಟಾದ ಕಾರಣದಿಂದ ಪ್ರಪನ್ನನಿಗೂ ಸರ್ವೇಶ್ವರನ ವಿಷಯದಲ್ಲಿ ಪ್ರೀತ್ಯಭಾವ ಉಂಟಾದೀತು, ಅಷ್ಟೇ ವಿನಾ ಇನ್ನೇನೂ ಪ್ರತ್ಯವಾಯ ಉಂಟಾಗುವದಿಲ್ಲವು ಎಂಬುದು. ಯಾವಾಗ ಪರಸ್ಪರ ಪ್ರೀತ್ಯಭಾವವು ಪ್ರಾಪ್ತವಾಯಿತೋ ಆಗ ಪ್ರತ್ಯವಾಯವು ಸಿದ್ಧವು ಎಂದು ಹೇಳುತ್ತಾರೆ. **ತನಕ್ಕುಮ್** - ಬುದ್ಧಿಪೂರ್ವಕವಾಗಿ ಅಪರಾಧಮಾಡಿದ ಪ್ರಪನ್ನನಾದ ತನಗೂ, **ಪ್ರೀತ್ಯಭಾವಂ** ಸರ್ವೇಶ್ವರನ ವಿಷಯದಲ್ಲಿ ಪ್ರೀತಿಯಿಲ್ಲದಿರೋಣವು, **ಪಿರಕ್ಕುಮತ್ತನೈ ಯೆನ್ನಾಲುಮ್** - ಉಂಟಾಗುವದು ಅಷ್ಟೇ ವಿನಾ ಏನೊಂದು ಶಿಕ್ಷೆಯನ್ನೂ ಕೃಪಾಸಾಗರನು ವಿಧಿಸುವದಿಲ್ಲವು ಎಂದರೂ, **ಪ್ರತ್ಯವಾಯವು, ಸಿದ್ಧಮಾಯಿತ್ತು** - ಸಿದ್ಧವಾದುದೇ ಆಯಿತು. ಪ್ರಪನ್ನನಾದ ತನಗೆ ಸರ್ವೇಶ್ವರನಲ್ಲಿ ಭಕ್ತಿರೂಪ ಪ್ರೀತಿಯುಂಟಾಗಿ ತನ್ಮೂಲಕ ಭಗವಂತನ ಪ್ರೀತ್ಯತಿಶಯವನ್ನು ಸಂಪಾದಿಸಿಕೊಂಡರೇನೇ ತನಗೆ ಉತ್ತಾರಕವು ; ಹಾಗಲ್ಲದೆ ತನಗೇನೇ ಪ್ರೀತಿಇಲ್ಲದೇ ಹೋದರೆ, ಸರ್ವೇಶ್ವರನೂ ಈತನನ್ನು ಪ್ರೀತಿಸನು, ಆಗ ಈತನಿಗೆ ಪ್ರತ್ಯವಾಯವೆಂಬುದು ಸಿದ್ಧ

ವೆಂಬಭಾವವು. ಇಲ್ಲಿ "ಯಶ್ಚ ರಾಮಂ ನಪಶ್ಯೇತ್ತು ಯಂಚರಾಮೋನಪಶ್ಯತಿ। ನಿಂದಿತಸ್ಸವಸೇಲ್ಲೋಕೇ ಸ್ವಾತ್ಮಾಪ್ಯೇನಂ ವಿಗರ್ಹತೇ" ಎಂಬುದು ಇಲ್ಲಿ ಅನುಸಂಧೇಯವು. ಶ್ರೀರಾಮನನ್ನು ಆತನೇ ಸರ್ವವೂ ಎಂದು ಆತನನ್ನು ಭಕ್ತಿವಿಶ್ವಾಸಗಳಿಂದ ಯಾವನು ನೋಡುವದಿಲ್ಲವೋ ಎಂದರೆ ಆಶ್ರಯಿಸುವದಿಲ್ಲವೋ, ಆ ಕಾರಣದಿಂದ ಈತನನ್ನು ಶ್ರೀರಾಮನು ಕೃಪೆಯಿಂದ ನೋಡುವದಿಲ್ಲವೋ, ಅಂತವನು ಲೋಕದಲ್ಲಿ ನಿಂದಿತನಾಗಿ ವಸಿಸುವನು ; ತಾನು ಎಂಥಹ ನಿರ್ಭಾಗ್ಯನೆಂದು ತನ್ನ ಮನಸ್ಸೇ ತನ್ನನ್ನು ನಿಂದಿಸುತ್ತದೆಂಬುದು ಈ ಶ್ಲೋಕತಾತ್ಪರ್ಯವು. ಆದುದರಿಂದ ಬುದ್ಧಿಪೂರ್ವಕವಾದ ನಿಷಿದ್ಧಾಚರಣೆಯ ವಿಷಯದಲ್ಲಿ ಹೇಗೆ ಹೇಗೆ ವಿಕಲ್ಪಿಸಿ ವಿಚಾರಮಾಡಿದರೂ ಪ್ರತ್ಯವಾಯವು ತಪ್ಪಿದ್ದಲ್ಲವಾದುದರಿಂದ, ಆ ನಿಷಿದ್ಧಾಚರಣೆಗೆ ಪ್ರಾಯಶ್ಚಿತ್ತ ಶಾಸ್ತ್ರದಲ್ಲಿ ವಿಧಿಸಿರುವದನ್ನಾಗಲಿ ಅಥವಾ ಪುನಶ್ಶರಣಾಗತಿಯನ್ನಾಗಲಿ ಅನುಷ್ಠಿಸಿ ಕ್ಷಮಾಪಣೆಯನ್ನು ಬೇಡತಕ್ಕದ್ದು ಆಗೀಗ ಮನ್ನಿಸಿ ರಕ್ಷಿಸುವನು. ಹಾಗೆ ಮಾಡದೇ ಹೋದರೆ, ನಿಗ್ರಹವು ತಪ್ಪಿದ್ದಲ್ಲವು. ಶರಣಾಗತಿಯು ಫಲಿಸಿ ಅಭಯಪ್ರದಾನವಾಗಿದ್ದಪಕ್ಷದಲ್ಲಿ, ಈ ನಿಷಿದ್ಧಾಚರಣೆಗಾಗಿ ಲಘುದಂಡನೆಯನ್ನು ವಿಧಿಸಿ ರಕ್ಷಿಸುವನು. ಇದೀಗ ಸಿದ್ಧಾಂತಾರ್ಥವು.

## ಪ್ರಪನ್ನನ ನಿಷಿದ್ಧಾಚರಣೆಯಲ್ಲಿ ಭಗವಂತನ ಅಪ್ರೀತಿಯ ಶಮನಕ್ಕಾಗಿ ಪುನಃ ಪ್ರಪದನಾನುಷ್ಠಾನದ ಆವಶ್ಯಕತೆಯು.

ಪ್ರಪನ್ನನಿಗೆ ನಿಷಿದ್ಧಾಚರಣೆಯು ಬುದ್ಧಿಪೂರ್ವಕವಾಗಿ ಪ್ರಾಪ್ತವಾದರೆ, ವಿಧಿಸಿರುವ ಪ್ರಾಯಶ್ಚಿತ್ತವನ್ನಾಗಲಿ ಪುನಃ ಪ್ರಪದನವನ್ನಾಗಲಿ ಮಾಡತಕ್ಕದ್ದೇ ಉಚಿತವೆಂದು ಹೇಳಲ್ಪಟ್ಟಿತಲ್ಲಾ, ಅಂತಹ ಪ್ರಾಯಶ್ಚಿತ್ತವನ್ನಾಗಲಿ ಪ್ರಪದನವನ್ನಾಗಲಿ, ಅನುಷ್ಠಿಸುವದು ಏತಕ್ಕಾಗಿ ಎಂದು ಚರ್ಚಿಸಿ, ಅದರ ಆವಶ್ಯಕತೆಯನ್ನು ಸ್ಥಾಪಿಸುತ್ತಾರೆ.-ಕೆಲವರು ಹೇಳಬಹುದು ಏನೆಂದರೆ-ಹಿಂದೆಮಾಡಿದ ನಿಷಿದ್ಧಾಚರಣೆಗಾಗಿ ಏನೂ ಪ್ರಾಯಶ್ಚಿತ್ತವು ಬೇಕಾಗಿಲ್ಲವು, ಮುಂದೆ ಭಗವಂತನ ಅಪ್ರೀತಿಯು ಉಂಟಾಗದಿರುವದಕ್ಕಾಗೀಗ ಪ್ರಾಯಶ್ಚಿತ್ತವನ್ನು ಅನುಷ್ಠಿಸತಕ್ಕದ್ದು ಎನ್ನುವರು. ಇವಕ್ಕೆ ಸಮಾಧಾನವೇನೆಂದರೆ—ತನ್ನ ಯೋಗಕ್ಷೇಮಾರ್ಥವಾಗಿ ಮುಂದೆ ಭಗವದಪ್ರೀತಿಯು ಉಂಟಾಗದಿರುವದಕ್ಕಾಗಿ ಪ್ರಾಯಶ್ಚಿತ್ತವು ಆವಶ್ಯಕವೆಂದು ಒಪ್ಪುವವರು, ಕಳೆದುಹೋದ ನಿಷಿದ್ಧಾಚರಣೆಗಾಗಿಯೂ ಎಂದು ಭಾವಿಸಿ, ಶ್ರುತಿವಾಕ್ಯಗಳನ್ನು ಉಲ್ಲಂಘಿಸಿದ ಅಪರಾಧವನ್ನು ಕಳೆದುಕೊಳ್ಳುವದಕ್ಕಾಗಿ, ಪ್ರಾಯಶ್ಚಿತ್ತವನ್ನು ಅನುಷ್ಠಿಸುವದು ಉಚಿತವಲ್ಲವೇ ಎಂದು ಪರಮಹಿತೋಪದೇಶವನ್ನು ಮಾಡುತ್ತಾರೆ.—ಅದಿಲುಮ್ - ಹಾಗೆ ಭಗವಂತನಿಗೆ ಅಪ್ರೀತಿಯು ಉಂಟಾಗಿ

## ಪ್ರಪನ್ನಸ್ಯ ನಿಷಿದ್ಧಾಚರಣೇ, ಭಗವದಪ್ರೀತಿ ಶಮನಾರ್ಥಂ ಪುನಃ ಪ್ರಪದನಂ ಕರ್ತವ್ಯಮ್

**ಅದಿಲುಮ್ ಕಳಿನ್ದದುಕ್ಕು ಪ್ರಾಯಶ್ಚಿತ್ತಮ್ ವೇಣ್ಡಾ, ಮೇಲುಮ್ ಅನುವೃತ್ತಮಾಯ್ ವರುಪುಗಿಗರ ಪ್ರೀತ್ಯಭಾವತ್ತೈ ಪತ್ತ ಪ್ರಾಯಶ್ಚಿತ್ತಮೆನ್ನಿಲ್, ಇತ್ತೋಡು ತುಲ್ಯಯೋಗ ಕ್ಷೇಮತ್ತೈಯಾಲೇ ಯಥಾಸಂಭವಮ್ ಶ್ರುತ್ಯಾದಿ ಸಿದ್ಧಙ್ಗಳಾನ ಉಪಕ್ಲೇಶಙ್ಗಳುಮ್ ವರುಮೆನ್ರು ಭೀತನಾಯ್, ಪ್ರಾಯಶ್ಚಿತ್ತಮ್ ಪಣ್ಣಪ್ರಾಪ್ತಮ್.**

---

ರುವ ಸಂದರ್ಭದಲ್ಲಿ, **ಕಳಿನ್ದದುಕ್ಕು** - ಗತಿಸಿಹೋದ ನಿಷಿದ್ಧಾಚರಣೆಗಾಗಿ, **ಪ್ರಾಯಶ್ಚಿತ್ತಮ್ ವೇಣ್ಡಾ** - ಪ್ರಾಯಶ್ಚಿತ್ತವೇನೂ ಬೇಕಾಗಿಲ್ಲವು, **ಮೇಲುಮ್ ಅನುವೃತ್ತವಾಗಿ ಪುಗುಗಿರ** - ಇನ್ನುಮೇಲೆ ಭವಿಷ್ಯತ್ಕಾಲದಲ್ಲಿ ಅನುಸರಿಸಿ ಪ್ರಾಪ್ತವಾಗಬಹುದಾದ, **ಪ್ರೀತ್ಯಭಾವತ್ತೈಪತ್ತ** - ನಿಷಿದ್ಧಾಚರಣೆಯ ಮೂಲಕ ಉಂಟಾಗಬಹುದಾದ ಭಗವಂತನ ಪ್ರೀತ್ಯಭಾವವನ್ನು ಕುರಿತು, **ಪ್ರಾಯಶ್ಚಿತ್ತಮೆನ್ನಿಲ್** - ಪ್ರಾಯಶ್ಚಿತ್ತವನ್ನು ಮಾಡಬಹುದು, ಎಂದೇನಾದರೂ ಪ್ರತಿಗಕ್ಷಿಯವರು ಒಪ್ಪಿದರೆ, **ತುಲ್ಯಯೋಗಕ್ಷೇಮತ್ತೈಯಾಲೇ** - ಅತೀತ ನಿಷಿದ್ಧಾಚರಣೆ ಮತ್ತು ಮುಂದೆ ನಿಷಿದ್ಧಾಚರಣೆ, ಈ ಎರಡು ಸಂದರ್ಭದಲ್ಲೂ ಯೋಗಕ್ಷೇಮವನ್ನು ಕಾಪಾಡಿಕೊಳ್ಳತಕ್ಕದ್ದು ಸಮವಾದುದರಿಂದ, **ಯಥಾಸಮ್ಭವಂ**- ನಿಷಿದ್ಧಾಚರಣೆಯು ಹೇಗೆ ಪ್ರಾಪ್ತವಾಯಿತೋ ಅದಕ್ಕನುಗುಣವಾಗಿ, **ಶ್ರುತ್ಯಾದಿ ಸಿದ್ಧಙ್ಗಳಾನ** - ಶ್ರುತಿ, ಅವಿ ಪವಿಂದ ಸ್ಮೃತಿಧರ್ಮಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟರುವ, **ಉಪಕ್ಲೇಶಙ್ಗಳ್** - ದುಃಖಗಳು, **ವರುಮೆನ್ರು ಭೀತನಾಯ್** - ಎಲ್ಲಿ ಬರುತ್ತೋ ಎಂದು ಭಯಪಟ್ಟವನಾಗಿ, **ಪ್ರಾಯಶ್ಚಿತ್ತಂ ಪಣ್ಣಪ್ರಾಪ್ತಮ್** - ನಿಷಿದ್ಧಾಚರಣೆಯ ಶಮನಕ್ಕಾಗಿ ಪುನಶ್ಶರಣಾಗತಿಯನ್ನು ಮಾಡುವುದು ಯೋಗ್ಯವಾದುದು. ಹಿಂದೆ ಕಳೆದುಹೋದ ಅಪರಾಧವನ್ನು ಮನ್ನಿಸಿಬಿಡುವನು, ಅದಕ್ಕೆ ಪ್ರಾಯಶ್ಚಿತ್ತಬೇಡ, ಮುಂದೆ ಬರುವವಕ್ಕಾಗಿ ಅದರಿಂದುಂಟಾಗುವ ಭಗವದಪ್ರೀತಿ ಶಮನಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಬಹುದು ಎಂದರೆ, ಮುಂದೆ ನಿಷಿದ್ಧಾಚರಣೆಯಿಂದ ಎಲ್ಲಿ ಭಗವದಪ್ರೀತಿ ಬರುತ್ತದೋ ಎಂದು ಪ್ರಾಯಶ್ಚಿತ್ತವನ್ನನುಷ್ಠಿಸುವವರು ಹಿಂದೆ ಕಳೆದು ಹೋದ ಬುದ್ಧಿಪೂರ್ವಕ ನಿಷಿದ್ಧಾಚರಣೆಗೂ ಎಂದು ಮಾಡಿದರೆ ತೊಂದರ ಏನು? ಮುಂದೆ ಭಗವದಪ್ರೀತಿಯುಂಟಾದೀತೆಂದು ಭಾವಿಸುವವರು ಹಿಂದೆ ಕಳೆದು ಹೋದ ನಿಷಿದ್ಧಾಚರಣೆಯಿಂದ ಭಗವದಪ್ರೀತಿ ಉಂಟಾಗಿಲ್ಲವೆಂದು ಹೇಳಲು ಹೇಗೆ ಸಾಧ್ಯವು? ಎರಡು ಸಂದರ್ಭದಲ್ಲೂ ತನ್ನ ಯೋಗ

**ಆಗೈಯಾಲ್ ಉಪಕ್ಲೇಶಙ್ಗಳುಮ್ ಇಜ್ಞುತ್ತ ಭಗವದನುಭವತ್ತುಕ್ಕು ಕ್ಕರಣಾಶಕ್ತಿ ಜ್ಞಾನಸಙ್ಕೋಚ ದುಃಖಾದಿಗಳಡಿಯಾಗ ವರುಮ್ ವಿಚ್ಛೇದ ಸಙ್ಕೋಚಙ್ಗಳುಂ ನಿಯತಾಯುಸ್ಸುಗಳಲ್ಲಾದಾರ್ ಕ್ಕಾಯುರ್ವೃದ್ಧಿ ಯಾಲೇ ಪರನುಫಲತ್ತುಕ್ಕು ವಿಳಂಬನುಮ್ ಪ್ರಸಙ್ಗಿಯಾನ್ಮೈಕ್ಕು ಪುನಃ ಪ್ರಪದನಮ್ ಪಣ್ಣುಗಿರದು.**

---

ಕ್ಷೇಮವನ್ನು ಕಾಪಾಡಿಕೊಳ್ಳತಕ್ಕದ್ದು ಆವಶ್ಯಕವು. ಅದೂ ಅಲ್ಲದೆ ಹಾಗೆ ಕಳೆದುದಕ್ಕೆ ಪ್ರಾಯಶ್ಚಿತ್ತಬೇಡನೆಂದರೆ, ಶ್ರುತಿಸ್ಮೃತಿ ಧರ್ಮಶಾಸ್ತ್ರಗಳಲ್ಲಿ ವಿಧಿಸಿರುವದಕ್ಕೆ ವಿರುದ್ಧವಾದ ಆಚರಣೆಯಾಗುತ್ತದೆ. ಆದುದರಿಂದ ಇಂತಹ ನಿಷಿದ್ಧಾಚರಣೆ ಮಾಡಿದುದರಿಂದ ಏನು ಉಪಕ್ಲೇಶ ಬರುತ್ತದೋ ಎಂದು ಭೀತನಾಗಿ, ಅಂತಹ ನಿಷಿದ್ಧಾಚರಣೆಗೆ ಪ್ರಾಯಶ್ಚಿತ್ತವನ್ನು ಅನುಷ್ಠಿಸುವದೇ ಉಚಿತವು ಎಂಬ ಭಾವವು.

ಹೀಗೆ ಇತರರು ಹೇಳುವಹಾಗೆ ಮುಂದಕ್ಕೆ ಭಗವದಪ್ರೀತಿಯುಂಟಾಗದಹಾಗೆ ಪುನಶ್ಶರಣಾಗತಿಯು ಅನಪೇಕ್ಷಿತವು ಎಂಬ ಅಭಿಪ್ರಾಯವೂ ಸರಿಯಲ್ಲವೆಂದು ಖಂಡಿಸಿ,ನಿಗಮನದಲ್ಲಿ ಈ ಎರಡನೆಯ ಪ್ರಾಯಶ್ಚಿತ್ತರೂಪ ಶರಣಾಗತಿಯಿಂದಾಗುವ ಪ್ರಯೋಜನಗಳನ್ನು ಪರಮಕೃಪಯಾ ಮುಂದಿನವಾಕ್ಯದಿಂದ ಉಪದೇಶಿಸುತ್ತಾರೆ.- **ಆಗೈಯಾಲ್** - ಆ ಅಭಿಪ್ರಾಯವೂ ಸರಿಯಾದುದಲ್ಲವಾಗಿ, ಶ್ರುತ್ಯಾದಿ ಸಿದ್ಧಗಳಾದ ಉಪಕ್ಲೇಶಗಳು ಎಲ್ಲಿ ಪ್ರಾಪ್ತವಾಗುತ್ತದೋ ಎಂದು ಭೀತನಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವದು ಉತ್ತಮವೆಂದು ನಿರ್ಧರಿಸಿದನಂತರ ಅದಕ್ಕನುಗುಣವಾಗಿ, **ಉಪಕ್ಲೇಶಙ್ಗಳುಮ್** - ದುಃಖಗಳೂ, **ಇಜ್ಞುತ್ತ ಭಗವದನುಭವತ್ತುಕ್ಕು** - ಈಗ ಬೇಕಾಗಿರುವ ಭಗವದನುಭವಕ್ಕೆ, **ಕರಣಾಶಕ್ತಿ** - ಇಂದ್ರಿಯಗಳ ದುರ್ಬಲ, **ಜ್ಞಾನಸಙ್ಕೋಚ** ಮತ್ತು **ದುಃಖಾದಿಗಳ**, **ಅಡಿಯಾಗ** - ಮೂಲವಾಗಿ, **ವರುಮ್** - ಪ್ರಾಪ್ತವಾಗುವ, **ವಿಚ್ಛೇದ** - ತಪ್ಪೋಣವೂ, **ಸಙ್ಕೋಚಙ್ಗಳುಮ್** - ನ್ಯೂನತೆಯೂ, ಹೀಗೆ ಭಗವದನುಭವಕ್ಕೆ ವಿಘ್ನಗಳೂ ಎಂಬ ಭಾವವು, ಮತ್ತು **ನಿಯತಾಯುಸ್ಸುಗಳಲ್ಲಾದಾರ್ಕ್ಕು** - ನಿಯತಾಯುಸ್ಸಗಳಲ್ಲದವರಿಗೆ, **ಆಯುರ್ವೃದ್ಧಿಯಾಲೇ**-ಆಯುಸ್ಸು ಹೆಚ್ಚುವದರಮೂಲಕ, **ಪರನುಫಲತ್ತುಕ್ಕು** - ಸರ್ವಶ್ರೇಷ್ಠವಾದ ಮೋಕ್ಷಪ್ರಾಪ್ತಿಗೆ, **ವಿಳಂಬಮುಂ**-ವಿಳಂಬವೂ ಸಹ, **ಪ್ರಸಙ್ಗಿಯಾನ್ಮೈಕ್ಕುಂ**-ಸಂಭವಿಸದೇ ಇರುವದಕ್ಕೂ, **ಪುನಃಪ್ರಪದನಂ**-ಪ್ರಾಯಶ್ಚಿತ್ತರೂಪದಲ್ಲಿ ಪುನಃ ಪ್ರಪದನವನ್ನು, **ಪಣ್ಣುಗಿರದು** - ಮಾಡತಕ್ಕದ್ದಾಗಿರುತ್ತದೆ. ಈ ನಿಷಿದ್ಧಾಚರಣೆಯಿಂದ ಭಗವದಪ್ರೀತಿಯುಂಟಾಗುವದು ಸಿದ್ಧವು,

**ಇದು ವೇಣ್ಡಾ ವೆನ್ಬಾರ್ಕುಮ್ ನಿಷಿದ್ಧಙ್ಗಳೈ ಕ್ಷಮಿಕ್ಕಿರನ್ಯಾಯತ್ತಾಲೇ ಇದುವುಮ್ ಕ್ಷಮಾವಿಷಯ ಮಾಕ್ಕೈಯಾಲೇ ಇದವೇ ಉಚಿತಮ್.**

---

ತನ್ಮೂಲಕವಾಗಿ ಸರ್ವೇಶ್ವರನು ಬುದ್ಧಿಪೂರ್ವಕವಾದ ಉತ್ತರಾಘಕ್ಕೆ ಶಿಕ್ಷಿಸುವದೂ ಸಿದ್ಧವು. ಅದು ಯಮೂ ಪವಾದುದು ಎಂದರೆ (೧) ಇಂದ್ರಿಯ ಶೈಥಿಲ್ಯಗಳ ಮೂಲಕ ಕ್ಲೇಶಗಳು, (೨) ಅಥವಾ ಜ್ಞಾನ ಸಙ್ಕೋಚಗಳಮೂಲಕ ಕ್ಲೇಶಗಳು ಅಥವಾ (೩) ಆಯುಸ್ಸನ್ನು ವೃದ್ಧಿಮಾಡಿ, ಅವಿಧೇಯ ಭಾರ್ಯಾ, ಅವಿಧೇಯಪುತ್ರ ಭ್ರಾತಾ ಇವರುಗಳ ಮೂಲಕ ಕ್ಲೇಶಗಳ ಅನುಭವವು; ಹೀಗೆ ಮೋಕ್ಷಪ್ರಾಪ್ತಿಗೆ ವಿಳಂಬವು. ಇವುಗಳಿಂದೆಲ್ಲಾ ತಪ್ಪಿಸಿಕೊಳ್ಳುವದಕ್ಕಾಗಿಯೇ ಪ್ರಾಯಶ್ಚಿತ್ತರೂಪವಾದ ಪುನಶ್ಶರಣಾಗತಿಯು ಎಂದು ತಿಳಿದು ಅದನ್ನು ಅನುಷ್ಠಿಸತಕ್ಕದ್ದು ಎಂದು ಹಿತೋಪದೇಶವು.

ಹೀಗೆ ನಿಷಿದ್ಧಾಚರಣೆಗೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿದ್ದರೆ ಪ್ರತವಾಯ ಉಂಟೆಂಬುದನ್ನು ಬಹುವಿಧವಾಗಿ ಉಪಪಾದಿಸಿ ಕೊನೆಯಲ್ಲಿ ಒಂದ್ಯುಕ್ತಿವಾದದ ಮೂಲಕವೂ ಸಮರ್ಥಿಸುತ್ತಾರೆ.—ಆ ವಾದವು ಹೇಗೆಂದರೆ ನಿಷಿದ್ಧಾಚರಣೆಗೆ ಪ್ರಾಯಶ್ಚಿತ್ತವಿಲ್ಲದಿದ್ದರೆ ಪ್ರತ್ಯವಾಯ ಉಂಟೆಂದು ನಾವು ಸಪ್ರಮಾಣವಾಗಿ ಹೇಳಿದೆವು; ನೀವು ಪ್ರತ್ಯವಾಯವಿಲ್ಲವೆಂದು ಹೇಳುತ್ತೀರಿ; ಈಗ ನಾವು ಹೇಳಿದಹಾಗೆ ಏನೊಂದೂ ಪ್ರಯಾಸವಿಲ್ಲದೆ ಪುನಶ್ಶರಣಾಗತಿರೂಪದಲ್ಲಿ ಪ್ರಾಯಶ್ಚಿತ್ತವನ್ನು ಮಾಡಿಕೊಂಡರೆ ನಿಮಗೇನೂ ಅದರಿಂದ ಪ್ರತ್ಯವಾಯವಿಲ್ಲದುದರಿಂದ, ಪ್ರಾಯಶ್ಚಿತ್ತವು ಸಾರ್ಥಕವಾದರೆ ಆಗಲಿ; ಇಲ್ಲದಿದ್ದರೆ ನಿರರ್ಥಕವಾಗಲಿ, ಅನುಷ್ಠಿಸಿಬಿಡುವದು ಒಳ್ಳೇದಲ್ಲವೋ? ನಿಷಿದ್ಧಾಚರಣೆಗೆ ಅಲ್ಲವೇ, ಪ್ರಾಯಶ್ಚಿತ್ತವು. ಇದು ನಿಷಿದ್ಧಾಚರಣೆಯೆಂಬ ಭಾವನೆಯು ಕೃಪಾಸಾಗರನಿಗೆ ಇದ್ದರೆ, ಪುನಶ್ಶರಣಾಗತಿಯಿಂದ ಸೇರಿದ ಕ್ಷಮಾಪಣೆಯಿಂದ ತೃಪ್ತನಾಗಿ ಮನ್ನಿಸುವನು, ಅದು ನಿಷಿದ್ಧಾಚರಣೆಯಲ್ಲವೆಂದು ಸರ್ವೇಶ್ವರನಿಗೆ ಭಾವನೆ ಇತ್ತೋ, ಈ ಶರಣಾಗತಿಯಿಂದ ಏನೊಂದೂ ಪ್ರತ್ಯವಾಯವಿಲ್ಲವು. ಆದುದರಿಂದ ಪ್ರಾಯಶ್ಚಿತ್ತಾನುಷ್ಠಾನವು ಉಚಿತವೆಂದು "ಇದುವೇಣ್ಡಾ" ಎಂದಾರಂಭಿಸಿದ ವಾಕ್ಯಮೂಲಕ ಉಪದೇಶಿಸುತ್ತಾರೆ.—**ಇದ ವೇಣ್ಡಾವೆನ್ಬಾರುಕ್ಕುಮ್** - ಇದು ಬೇಡವೆನ್ನುವರಿಗೂ ಕೂಡ, **ನಿಷಿದ್ಧಙ್ಗಳೈ ಕ್ಷಮಿಕ್ಕಿರನ್ಯಾಯತ್ತಾಲೇ** - ನಿಷಿದ್ಧಗಳಾಗಿದ್ದ ಪಕ್ಷದಲ್ಲಿ ಪ್ರಾಯಶ್ಚಿತ್ತವನ್ನು ಮಾಡಿಕೊಂಡರೆ ಕ್ಷಮಿಸುತ್ತಾನೆ ಎಂಬ ನ್ಯಾಯದ ಪ್ರಕಾರ, **ಇದುವುಮ್ ಕ್ಷಮಾವಿಷಯಮಾಗೈಯಾಲೇ** - ಪ್ರಪನ್ನನ ಮಾತು ಹಾಗಿರಲಿ, ಇದು ಕೂಡಾ ನಿಷಿದ್ಧಾಚರಣೆಯೇ ಎಂದು ಒಪ್ಪಿಕೊಂಡು ಭಗವಂತನಿಗೆ ಕ್ಷಮಾವಿಷಯವಾದುದ

ರಿಂದ, ಇದುವೇ ಉಚಿತವು - ಹೀಗೆ ಪ್ರಾಯಶ್ಚಿತ್ತವನ್ನಾಚರಿಸುವದೇ ಉಚಿತವು, ಇದುವೇ ಎಂಬ ಅವಧಾರಣದಿಂದ, ಹಾಗೆ ಪ್ರಾಯಶ್ಚಿತ್ತವನ್ನು ಆಚರಿಸದೇಇರುವದು ಉಚಿತವಲ್ಲವು ಎಂದು ಹೇಳಿದಂತಾಯಿತು. ಏಕೆಂದರೆ ಒಂದು ವೇಳೆ ಪ್ರತ್ಯವಾಯವು ಭಗವನ್ನಿಗ್ರಹಮೂಲಕ ಉಂಟಾದರೂ ಉಂಟಾಗಬಹುದೆಂಬ ಭಾವವು ಸೂಚಿತವು. ಯಾವವಿಧದಲ್ಲಿ ನಡೆದರೆ ಪ್ರತ್ಯವಾಯದ ಭಯವು ಈಷದಪಿ ಇಲ್ಲವೆಂದು ತೋರುತ್ತದೋ ಆ ಮಾರ್ಗವನ್ನಲ್ಲವೇ ಅವಲಂಬಿಸಬೇಕಾದುದು. ಪ್ರತ್ಯವಾಯವಿರಲಾರದು ಎಂಬ ಸಂದೇಹದಿಂದ ಇದ್ದುಕೊಂಡು, ಪ್ರಾಯಶ್ಚಿತ್ತತ್ಯಾಗಮಾಡುವದಕ್ಕಿಂತ, ಏನೊಂದೂ ಪ್ರತ್ಯವಾಯವಿಲ್ಲದ ಮಾರ್ಗವನ್ನು ಅವಲಂಬಿಸಿ, ಪ್ರಾಯಶ್ಚಿತ್ತವನ್ನು ಅನುಷ್ಠಿಸಿಬಿಟ್ಟು, ನಿರ್ಭಯನಾಗಿರುವದು ಉಚಿತವಲ್ಲವೇ ಎಂಬ ಭಾವವು ದ್ಯೋತಿತವು. ನಿಷಿದ್ಧಜಗ್ಧಿಕ್ಷಮಿಕ್ಕಿರನ್ಯಾಯವೆಂದು ಹೇಳಲ್ಪಟ್ಟಿದುದು ಯಾವುದೆಂದರೆ, "ಸಂದಿಗ್ಧೇಪಿ ಪರೇಲೋಕೇ ತ್ಯಾಜ್ಯಮೇವಾಶುಭಂ ಬುಧೈಃ। ಯದಿನಸ್ಯಾತ್ತತಃ ಕಿಂ ಸ್ಯಾದ್ಯದಿ ಸ್ಯಾನ್ನಾಸ್ತಿಕೋ ಹತಃ" ಎಂಬಲ್ಲಿ ಹೇಳಿರುವ ನ್ಯಾಯವು. ಇದರಭಿಪ್ರಾಯವೇನೆಂದರೆ—ಇದು ನಾಸ್ತಿಕನಿಗೆ ಹೇಳುವ ನ್ಯಾಯವು, ಪರಲೋಕವು ಇದೆಯೋ ಇಲ್ಲವೋ ಎಂಬ ಸಂದೇಹವಿದ್ದರೂ ಕೂಡ,ಪಂಡಿತರುಗಳಿಂದ ನಿಷಿದ್ಧಾಚರಣವು ಬಿಡಲ್ಪಡತಕ್ಕದ್ದೇಉಚಿತವು.ಏಕೇದರೆ, ನಾಸ್ತಿಕನು ಹೇಳುವಹಾಗೆ ಪರಲೋಕವಿಲ್ಲದಿದ್ದರೂ ಅಂತಹ ನಿಷಿದ್ಧಾಚರಣೆಯ ತ್ಯಾಗದಿಂದ ಪ್ರತ್ಯವಾಯವುಇಲ್ಲವು;ಆದರೆ,ಪರಲೋಕವಿದ್ದುದಾದರೆ ನಿಷಿದ್ಧಾಚರಣೆಯಿಂದ ನಾಸ್ತಿಕನು ಹತನಾದನು,ಎಂದರೆ ಕೆಟ್ಟುಹೋದನು ಎಂಬುದು ಶ್ಲೋಕಾರ್ಥವು. ಆ ನ್ಯಾಯವನ್ನೇ ಇಲ್ಲಿಯೂ ಉಪಯೋಗಿಸಿದರೆ, ಬುದ್ಧಿಪೂರ್ವಾಪರಾಧಗಳಿಂದ ಪ್ರಪನ್ನನನ್ನು ಸರ್ವೇಶ್ವರನು ಮನ್ನಿಸುವನೋಇಲ್ಲವೋ ಎಂಬುದು ಸಂದಿಗ್ಧವಿಷಯವು. ಮನ್ನಿಸುವನೆಂದು ಒಪ್ಪಿದರೆ, ಈ ಪುನಶ್ಶರಣಾಗತಿಯನ್ನನುಷ್ಠಿಸಿದುದರಿಂದ ಪ್ರತ್ಯವಾಯವಿಲ್ಲವು, ಮನ್ನಿಸಲಿಲ್ಲವಾದರೆ ಬುದ್ಧಿಪೂರ್ವಾಪರಾಧಿಯು ಕೆಟ್ಟನು ಎಂಬ ತಾತ್ಪರ್ಯವು. ಆದುದರಿಂದಲೇ ಪ್ರಾಜ್ಞರಾದವರು ಹೇಳಿರುವದು ಏನೆಂದರೆ,-ಬುದ್ಧಿಪೂರ್ವೋತ್ತರಾಘದಲ್ಲಿ ಪ್ರತ್ಯವಾಯ ಉಂಟೋ ಇಲ್ಲವೋ ಎಂಬ ಚರ್ಚೆಯು ಹಾಗಿರಲಿ, ಅಜ್ಞಾನದಿಂದಲೋ ಜ್ಞಾನಪೂರ್ವಕವಾಗಿಯೋ ಹೇಗೆ ಅಪರಾಧ ಉಂಟಾದರೂ "ಅಪಾಯ ಸಂಪ್ಲವೇ ಸದ್ಯಃ ಪ್ರಾಯಶ್ಚಿತ್ತಂ ಸಮಾಚರೇತ್" ಎಂಬ ಹಿತೋಪದೇಶವೇ ಅಮೋಘವಾದುದು ಎಂದು ಹೇಳಿದಂತಾಯಿತು. ಶ್ರೀ ಭಾಷ್ಯಕಾರರೇ ಶರಣಾಗತಿ ಗದ್ಯದಲ್ಲೇ ಸರ್ವಾಪರಾಧಾನ್ ಕ್ಷಮಸ್ವ ಎಂದು ಶರಣಾಗತಿ ಮಾಡಬೇಕೆಂಬುದನ್ನು ತೋರಿಸಿರುತ್ತಾರೆ, ಈ

**ಬುದ್ಧಿಪೂರ್ವೋತ್ತರಾಘತ್ತುಕ್ಕುಮ್ ಏರ್ಕನವೇ ಪ್ರಪತ್ತಿ ಪಣ್ಣ ವೊಣ್ಣಾದೆನ್ನ ಮಿಡಮುಮ್, ಮುನ್ಬು ಕೋಲಿನ ಫಲವೊಳಿಯ ಫಲಾಂತರಾರ್ಥ**

ಈ ಸರ್ವಶಬ್ದದಲ್ಲಿ ಬುದ್ಧಿಪೂರ್ವೋತ್ತರಾಘವು ಸೇರದೇ ಇದ್ದರೆ, ಇನ್ನುಯಾವುದೂ ಸೇರತಕ್ಕದ್ದಿರುವದೇ ಇಲ್ಲವು.

ಹೀಗೆ ಪ್ರಾಯಶ್ಚಿತ್ತಮಾಡಿಕೊಂಡರೂ ಪ್ರತ್ಯವಾಯವಿಲ್ಲವು, ಆದುದರಿಂದ ಪ್ರಾಯಶ್ಚಿತ್ತರೂಪದಲ್ಲಿ ಬುದ್ಧಿಪೂರ್ವೋತ್ತರಾಘಕ್ಕಾಗಿ ಪುನಶ್ಶರಣಾಗತಿಯು ಉಚಿತವು ಎಂದು ಯಾವಾಗ ಸ್ಥಾಪಿಸಲ್ಪಟ್ಟಿತೋ, ಆಗ ಎರಡು ಶಙ್ಕಾಗಳು ಉದಿಸಬಹುದು. (೧) ಶರಣಾಗತಿಯು "ಸಕೃದೇವಹಿಶಾಸ್ತ್ರಾರ್ಥಃ" ಎಂಬಲ್ಲಿ ಹೇಳಿರುವಹಾಗೆ ಒಂದೇಸಲ ಅನುಷ್ಠಿಸತಕ್ಕದಾದುದರಿಂದ ಒಂದೇಸಲವೇ ಮೋಕ್ಷಾರ್ಥಕ್ಕಾಗಿಯೂ, ಬುದ್ಧಿಪೂರ್ವಾಘವು ಒಂದುವೇಳೆ ಪ್ರಾಪ್ತವಾದರೆ ಅದಕ್ಕೆ ಪ್ರಾಯಶ್ಚಿತ್ತರೂಪವಾಗಿಯೂ, ಎಂದು ಸಙ್ಕಲ್ಪಿಸಿ, ಏಕೆ ಮಾಡಕೂಡದು? (೨) ಪುನಶ್ಶರಣಾಗತಿಯನ್ನು ಮಾಡುವದು "ಸಕೃದೇವ" ಎಂಬ ಶಾಸ್ತ್ರಕ್ಕೆ ವಿರುದ್ಧವಾಗುವದಿಲ್ಲವೇ? ಹೀಗೆ ಎರಡು ಶಙ್ಕಾಗಳು ಉಂಟಾಗಬಹುದು. ಈ ಎರಡು ಶಙ್ಕಾಗಳಿಗೂ ಹಿಂದೆಯೇ ಅಪರಾಧ ಪರಿಹಾರಾಧಿಕಾರದಲ್ಲಿ ಸಮಾಧಾನವನ್ನು ಹೇಳಿರುತ್ತೇವೆ ಎಂದು ತಿಳಿಸುತ್ತಾರೆ. (೧೫೫೨-ಇನೆಯ ಪುಟಗಳನ್ನು ನೋಡಿ) ಮೊದಲು ಪ್ರಪತ್ತ್ಯನುಷ್ಠಾನಕಾಲದಲ್ಲಿ ಪ್ರಾರಬ್ಧ ನಿವೃತ್ತಿ ಮತ್ತು ಬುದ್ಧಿಪೂರ್ವಾಘದ ಅನುದಯ ಇವುಗಳನ್ನು ಸೇರಿಸಿ ಭರನ್ಯಾಸವನ್ನು ಅನುಷ್ಠಿಸಬಹುದೇ ವಿನಾ, ಬುದ್ಧಿಪೂರ್ವೋತ್ತರಾಘಕ್ಕೆ ಪ್ರಾಯಶ್ಚಿತ್ತವು ಸರಿಯಲ್ಲವೆಂದು ತಿಳಿಸುವದಕ್ಕಾಗಿ ಅಲ್ಲಿ ಕೃತೇ ಪಾಪೇನುತಾಪೋವೈ ಎಂಬ ಪ್ರಮಾಣವನ್ನುದಾಹರಿಸಿ ನಿಮಿತ್ತ ಒದಗಿದನಂತರವಲ್ಲವೇ ನೈಮಿತ್ತಿಕವು ಉಚಿತವು ಎಂದು ಹೇಳಿದರು. ಪಾಪಮಾಡುವದಕ್ಕೆ ಮುಂಚೆಯೇ ಪ್ರಾಯಶ್ಚಿತ್ತವು ಎಂತಾದ್ದು? ಮಗುವು ಹೊಟ್ಟೆಯಲ್ಲಿರುವಾಗಲೇ ನಾಮಕರಣ ಶುಭಪ್ರಸ್ತುತವೇ? ಪ್ರಾಯಶ್ಚಿತ್ತಕ್ಕೆ ಕಾರಣ ಒದಗಿದನಂತರ ಪ್ರಾಯಶ್ಚಿತ್ತವು ನ್ಯಾಯವು ಎಂದು ಮುಂದಿನ ವಾಕ್ಯದಿಂದ ಹೇಳುತ್ತಾರೆ. ಹಾಗೆಯೇ ಎರಡನೆಯ ಪ್ರಾಯಶ್ಚಿತ್ತ ಶರಣಾಗತಿಯು ಮೋಕ್ಷಾರ್ಥವಾಗಿಯಲ್ಲವಾದುದರಿಂದ ಸಕೃಚ್ಛಾಸ್ತ್ರಕ್ಕೆ ವಿರೋಧವುಂಟಾಗುವದಿಲ್ಲವು ಎಂದೂ ಹೇಳುತ್ತಾರೆ. ಬುದ್ಧಿಪೂರ್ವೋತ್ತರಾಘತ್ತುಕ್ಕುಮ್-ಬುದ್ಧಿಪೂರ್ವಕವಾದ ಅಪರಾಧಗಳಿಗೂ, ಏರ್ಕನವೇ - ಮೊದಲೇ ಎಂದರೆ ಮೋಕ್ಷಾರ್ಥವಾಗಿ ಮಾಡುವ ಪ್ರಥಮ ಶರಣಾಗತಿಯಲ್ಲೇ, ಪ್ರಪತ್ತಿ ಪಣ್ಣ ವೊಣ್ಣಾದೋ? ಮೋಕ್ಷಾರ್ಥ ಸಙ್ಕಲ್ಪದೊಂದಿಗೆ, ಬುದ್ಧಿಪೂರ್ವಾಘದ ಶಮನಕ್ಕಾಗಿಯೂ ಪ್ರಪತ್ತಿ

**ಮಾಕ ಪ್ರಪತ್ತ್ಯಂತರಂ ಪಣ್ಣುಗೈಯಿಲ್ ವಿರೋಧ ಮಿಲ್ಲೈ ಎನ್ರುಮಿಡ ಮುಮ್, ಮುನ್ಬೇ ಸಮ-ರ್ಥಿತ್ತೋಮ್.**

ಮಾಟಕೂಡದೋ? **ಎನ್ನುಮಿಡಮುಮ್** - ಎಂಬ ಸಂದರ್ಭವನ್ನೂ ಮತ್ತು **ಮುನ್ಬುಕೋಲಿನ** - ಪ್ರಥಮ ಶರಣಾಗತಿಯಲ್ಲಿ ಪ್ರಾರ್ಥಿಸಿದ, **ಫಲಮೊಳಿಯ ಫಲಾಂತರಾರ್ಥಮಾಗ** - ಮೋಕ್ಷಫಲವಲ್ಲದೆ ಬೇರೆ ಫಲಕ್ಕಾಗಿ ಅದು ಯಾವುದೆಂಬ ಬುದ್ಧಿ **ಪೂರ್ವೋತ್ತರಾಘ**ದ ನಿವೃತ್ತಿಗಾಗಿ, **ಪ್ರಪತ್ತ್ಯಂತರಂ ಪಣ್ಣುಗೈಯಿಲ್** - ಬೇರೆ ಪ್ರಪತ್ತಿಯನ್ನು ಅನುಷ್ಠಿಸುವದರಲ್ಲಿ, **ವಿರೋಧಮಿಲ್ಲೈ ಎನ್ರುಮಿಡಮುಮ್** - ವಿರೋಧವೇನೂ ಇಲ್ಲವು ಎನ್ನುವ ಸಂದರ್ಭವನ್ನೂ ಸಹ, **ಮುನ್ಬೇ** - ಹಿಂದೆ ಅಪರಾಧ ಪರಿಹಾರಾಧಿಕಾರದಲ್ಲಿ, **ಸಮರ್ಥಿತ್ತೋಮ್** – ಪ್ರಮಾಣ ಸತ್ತರ್ಕಮೂಲಕ ಸಮರ್ಥಿಸಿ ಹೇಳಿರುತ್ತೇವೆ. ಅಲ್ಲಿ ಪರಾಂಬರಿಸಬಹುದು ಎಂಬುದು ತಾತ್ಪರ್ಯವು. (೧೫೪೭ನೆಯ ಪುಟನೋಡಿ) ಈ ಎರಡು ಪೂರ್ವಪಕ್ಷಗಳಿಗೂ ಹಿಂದೆಯೇ ಸಮಾಧಾನವನ್ನು ಚೆನ್ನಾಗಿ ಉಪಪಾದಿಸಿರುತ್ತೇವೆ. ಮೊದಲನೆಯ ಪೂರ್ವ ಪಕ್ಷಕ್ಕೆ ಸಮಾಧಾನವು ಹೇಗೆ ಎಂದರೆ ಪ್ರಾಯಶ್ಚಿತ್ತದ ಆವಶ್ಯಕತೆಯು ಪಾಪಮಾಡಿದನಂತರವೇ ಉದಿಸುತ್ತದೆಯೇ ವಿನಾ ಅದಕ್ಕೆ ಮೊದಲೇ ಪ್ರಾಯಶ್ಚಿತ್ತವೆಂಬುದು ಹಾಸ್ಯಾಸ್ಪದವು; ಏಕೆಂದರೆ ನಿಮಿತ್ತವು ಉದಸಿದರೇನೆ ನೈಮಿತ್ತಿಕದ ಆವಶ್ಯಕವು; ಪ್ರಾಯಶ್ಚಿತ್ತಾನುಷ್ಠಾನಕ್ಕೆ ಅಪರಾಧ ಕಾರ್ಯವಾಗಿರಬೇಕು; ಅದಕ್ಕಾಗಿ ಅನುತಾಪ ಉಂಟಾಗಿರಬೇಕು; ಇನ್ನು ಮುಂದಕ್ಕೆ ಎಂದಿಗೂ ಅಂತಹ ಅಪರಾಧಿಯಾಗುವದಿಲ್ಲವೆಂಬ ದೃಢಸಙ್ಕಲ್ಪದೊಂದಿಗೆ ಉಪರತಿ ಇರಬೇಕು. **"ಅಪಾಯಸಂಪ್ಲವೇ ಸದ್ಯಃ ಪ್ರಾಯಶ್ಚಿತ್ತಂ ಸಮಾಚರೇತ್"** ಎಂಬ ಪ್ರಮಾಣದಿಂದ ಅಪಾಯದ ಉದಯವಾದನಂತರವೇ ಪ್ರಾಯಶ್ಚಿತ್ತವೆಂಬುದು ವ್ಯಕ್ತವು. ೧೫೪೫ನೆಯ ಪುಟದಲ್ಲಿರುವ **"ಅನುತಾಪಾತ್"** ಎಂಬ ಕಾರಿಕೆಯಲ್ಲಿ ಇದು ಸುವ್ಯಕ್ತವು. ಹೀಗೆ ಪ್ರಾಯಶ್ಚಿತ್ತವನ್ನು ಕ್ಷಮಿಸು ಎಂಬ ಪ್ರಾರ್ಥನೆಯೊಂದಿಗೆ ಮಾಡಿದರೆ ಅದು ಸಾರ್ಥಕ್ಯವನ್ನು ಹೊಂದುತ್ತದೆ; ಹಾಗಲ್ಲದೆ ಅಪರಾಧ ಪೂರ್ವಭಾವಿಯಾಗಿಯೇ ಪ್ರಾಯಶ್ಚಿತ್ತವೆಂಬುದು ಒಪ್ಪತಕ್ಕ ವಿಷಯವಾಗುವದಿಲ್ಲವೆಂಬ ಭಾವವು.

ಪುನಶ್ಶರಣಾಗತಿಯು ಸಕೃಚ್ಛರಣಾಗತಿ ವಿಧಿಗೆ ವಿರುದ್ಧವಲ್ಲವೋ ಎಂಬ ಆಕ್ಷೇಪಕ್ಕೆ ವಿರುದ್ಧವಲ್ಲವೆಂದು ಸಮಾಧಾನವು ಹೇಳಲ್ಪಟ್ಟಿರುತ್ತದೆ. (೧೫೩೨ನೆಯ ಪುಟನೋಡಿ) ಹಾಗೆಯೇ ಪ್ರಮಾಣವಿರುತ್ತದೆ, **"ಪ್ರಾಯಶ್ಚಿತ್ತಿರಿಯಂ ಸಾತ್ರ ಯತ್ಪುನಶ್ಶರಣಂ ವ್ರಜೇತ್"** ಎಂದು ಲಕ್ಷ್ಮೀತಂತ್ರ ವಿಧಿ ಇರುತ್ತದೆ.

ಎರಡನೆಯ ಶರಣಾಗತಿಯಲ್ಲಿ ಮೋಕ್ಷಾರ್ಥವಾದ ಪ್ರಾರ್ಥನೆಯೇ ಇಲ್ಲವು. ಅಪರಾಧ ನಿವೃತ್ತಿಗಾಗಿ ಪ್ರಾಯಶ್ಚಿತ್ತರೂಪದಲ್ಲಿ ಶರಣಾಗತಿಯಾದುದರಿಂದ **ಸಕೃದೇವಹಿ ಶಾಸ್ತ್ರಾರ್ಥಃ** ಎಂಬುದಕ್ಕೆ ಏನೊಂದೂ ವಿರೋಧವಿಲ್ಲವೆಂಬ ಭಾವವು. ಸಂಧ್ಯಾವಂದನೆಯ ಅರ್ಘ್ಯಪ್ರದಾನದ ಕಾಲಾತೀತ ಪ್ರಾಯಶ್ಚಿತ್ತಕ್ಕೆ ಪುನಃ ಅರ್ಘ್ಯಪ್ರದಾನವು ಹೇಗೋ, ಮತ್ತು ಹೋಮದಲ್ಲಿ ನ್ಯೂನಾತಿರಿಕ್ತಪ್ರಾಯಶ್ಚಿತ್ತಕ್ಕೆ ಓಂ ಭೂರ್ಭುವಸುವಸ್ಸ್ವಾಹಾ ಎಂಬದಾಗಿ ಪುನಃ ಹೋಮವು ಹೇಗೋ, ಹಾಗೆಯೇ ಶರಣಾಗತ್ಯುತ್ತರ ಕೃತ್ಯದ ದೋಷಕ್ಕೆ ಪ್ರಾಯಶ್ಚಿತ್ತವು ಶರಣಾಗತಿಯೇ ಎಂಬ ಭಾವವು.

ಹಿಂದೆ **ಸರ್ವಧರ್ಮಾನ್ ಪರಿತ್ಯಜ್ಯ** ಎಂಬಲ್ಲಿ ಸರ್ವಧರ್ಮ ಶಬ್ದದಲ್ಲಿ ನಿಷಿದ್ಧನಿವೃತ್ತಿಯು ಸರ್ವಧರ್ಮ ಶಬ್ದದಲ್ಲಿ ಅಂತರ್ಗತ ವೆಂಬ ವಾದವನ್ನು, ಇಷ್ಟು ದೂರ ಪ್ರಮಾಣ, ಉಪಪಾದನ, ತರ್ಕ, ಯುಕ್ತಿವಾದ, ಮೊದಲಾದವುಗಳಿಂದ ಖಂಡಿಸಿ, ನಿಷಿದ್ಧಾಚರಣೆಯು ಯಾರಿಗೂ ಕೂಡದೆಂದೂ, ಅದರಲ್ಲೂ ಪ್ರಪನ್ನನಾದವನಿಗೆ ಸರ್ವಾತ್ಮನಾ ಕೂಡದೆಂದೂ, ಸ್ಥಾಪಿಸಿದರು. ಅಕೃತ್ಯಕರಣ ದೋಷವು ಜ್ಞಾನಿಯಾದವನಿಗೆ ಸುತರಾಂ ಸರಿಯಲ್ಲವೆಂದೂ, ಅಂತಹ ದೋಷಿಯು **"ಪ್ರಾಜ್ಞೈರ್ನಸಂಶ್ಲಿಷ್ಯತೇ"**(೧೪೮೯ನೆಯ ಪುಟ ನೋಡಿ) ಪ್ರಪನ್ನರ ಗೋಷ್ಠಿಗೆ ಅಯೋಗ್ಯನೆಂದು ಹೇಳಿದರು. ಮುಂದೆ ಕೃತ್ಯಾಕರಣದ ವಿಷಯವನ್ನು ಚರ್ಚಿಸುತ್ತಾರೆ. ಹಿಂದೆ ಉತ್ತರ ಕೃತ್ಯಾಧಿಕಾರದಲ್ಲೂ ಕೃತಕೃತ್ಯನಾದ ಪ್ರಪನ್ನನೂ ಸಹ ಆಜ್ಞಾರೂಪ ಕೈಂಕರ್ಯಗಳಾದ ನಿತ್ಯ ನೈಮಿತ್ತಿಕಗಳನ್ನು ತ್ಯಾಗಮಾಡತಕ್ಕದ್ದಲ್ಲವೆಂದು ಸ್ಥಾಪಿಸಲ್ಪಟ್ಟಿದ್ದರೂ (ಹಿಂದೆ ೧೧೪೭ರಿಂದ ೧೧೭೦ನೆಯ ಪುಟಗಳನ್ನು ನೋಡಿ) **"ಸರ್ವಧರ್ಮಾನ್ ಪರಿತ್ಯಜ್ಯ"** ಎಂಬಲ್ಲಿ ಸರ್ವ ಧರ್ಮಗಳಲ್ಲಿ ನಿತ್ಯನೈಮಿತ್ತಿಕಗಳೂ ಸೇರಿದವೆಂದು ಭಾವಿಸಿ, ಅವುಗಳ ಪರಿತ್ಯಾಗದಿಂದ ಪ್ರಪನ್ನನಿಗೆ ಪ್ರತ್ಯವಾಯವಿಲ್ಲವೆಂದು ಅಭಿಪ್ರಾಯಪಡುವರು. ಈ ಅಭಿಪ್ರಾಯವನ್ನೂ ಖಂಡಿಸುತ್ತಾರೆ. ಅಕೃತಕರಣ ದೋಷವು ಹೇಗೆ ಪ್ರಪನ್ನನಿಗೆ ಅನುಚಿತವಾದುದೋ, ಹಾಗೆಯೇ ಕೃತ್ಯಾಕರಣ ದೋಷವೂ ಸಹ ಪ್ರಪನ್ನನಿಗೆ ಸ್ವರೂಪಹಾನಿಕರವಾದುದೆಂದು **"ಇಪ್ಪಡಿ ಭಗವದಾಜ್ಞಾ ಸಿದ್ಧಮಾನ"** ಎಂದಾರಂಭಿಸಿದ ವಾಕ್ಯಗಳ ಮೂಲಕ ತಿಳಿಸುತ್ತಾರೆ.

**ನಿಷಿದ್ಧಾಚರಣೆಯಿಂದ ಪ್ರಪನ್ನನಿಗೆ ಹೇಗೆ ಸ್ವರೂಪಹಾನಿಯೋ,**
**ಹಾಗೆಯೇ ಕೃತ್ಯಾಕರಣ ದೋಷದಿಂದಲೂ.**

---

**ಇಪ್ಪಡಿ** - ಹೀಗೆ, ಎಂದರೆ ನಿಷಿದ್ಧಾಚರಣೆಯು ಪ್ರಪನ್ನನಲ್ಲೂ ಕೂಡ ಹೇಗೆ ಪ್ರತ್ಯವಾಯಕ್ಕೆ ಹೇತುವೋ ಹಾಗೆಯೇ ಎಂಬಭಾವವು, **ಭಗವದಾಜ್ಞಾ ಸಿದ್ಧಮಾನ** - **"ಅಹರಹಸ್ಸಂಧ್ಯಾಮುಪಾಸೀತ"** ಪ್ರತಿದಿನದಲ್ಲೂ ತ್ರಿಸಂಧ್ಯಾ

**ಯಥಾ ಅಕೃತ್ಯಕರಣದೋಷೇಣ ಪ್ರಪನ್ನಸ್ಯ ಸ್ವರೂಪಹಾನಿಃ, ತಥಾ ಕೃತ್ಯಾಕರಣ ದೋಷೇಣಾಪಿ.**

**ಇಪ್ಪಡಿ ಭಗವದಾಜ್ಞಾಸಿದ್ಧಮಾನ ಸದಾಚಾರಾನುಪಾಲತ್ತಿಲುಮ್ ವಿರೋಧಮಿಲ್ಲಾಮೈ ಕಣ್ಡುಕೊಳ್ವದು.**

---

ಕಾಲಗಳಲ್ಲೂ ಸಂಧ್ಯಾವಂದನಾದಿಗಳನ್ನು ಮಾಡತಕ್ಕದ್ದೆಂಬ ಭಗವದಾಜ್ಞಾರೂಪವಾದ, **ಸದಾಚಾರಾನುಪಾಲತ್ತಿಲುಮ್** – ಮಹಾ ಭಾಗವತೋತ್ತಮರ ನಿತ್ಯ ನೈಮಿತ್ತಿಕಾದಿಗಳ ಅನುಷ್ಠಾನಪ್ರಕಾರವನ್ನು ಕಾಪಾಡಿಕೊಂಡು ಬರುವದರಲ್ಲೂ, ವಿರೋಧಮಿಲ್ಲಾಮೈಕಣ್ಡು ಕೊಳ್ವದು-ವಿರೋಧವೇನೂ ಇಲ್ಲದಿರುವವನ್ನು ತಿಳಿದುಕೊಳ್ಳತಕ್ಕದ್ದು. ಪ್ರಪನ್ನನಿಗೆ ಇವು ಅನಾವಶ್ಯಕವೆಂದು ಭಾವಿಸಿ, ಪರಿತ್ಯಾಗಮಾಡಿಬಿಟ್ಟು ಪ್ರತ್ಯವಾಯಕ್ಕೆ ಗುರಿಯಾಗತಕ್ಕದ್ದಲ್ಲವೆಂಬುದನ್ನೂ ಗ್ರಹಿಸತಕ್ಕದ್ದೆಂಬಭಾವವು. ಬುದ್ಧಿಪೂರ್ವಪಾಪಗಳಲ್ಲಿ ಪ್ರವೃತ್ತಿಸಿದರೆ ಅದು ಪ್ರತ್ಯವಾಯಕ್ಕೆ ಹೇತುವು ಅದಕ್ಕಾಗಿ ಪುನಶ್ಶರಣಾಗತಿಯನ್ನು ಮಾಡಬೇಕೆಂದು ವಿಧಿಸಿದುದಾದರೆ, ಪುಣ್ಯಗಳೂ ಪಾಪರೂಪಗಳೇ; ಆದುದರಿಂದ, ಅವುಗಳನ್ನೂ ಅನುಷ್ಠಿಸುವವೂ ಪ್ರತ್ಯವಾಯವೆಂದಾಯಿತು. ನಿತ್ಯನೈಮಿತ್ತಿಕಗಳನ್ನೂ ಬುದ್ಧಿಪೂರ್ವಕವಾಗಿ ಅನುಷ್ಠಿಸಿದರೆ ಸುಕೃತರೂಪಗಳಾಗಿ **"ಪ್ರಾಜಾಪತ್ಯಂ ಗೃಹಸ್ಥಾನಾಂ"** ಎಂದು ಹೇಳಿರುವಹಾಗೆ ಮೋಕ್ಷಪ್ರತಿಬಂಧಕಗಳಾಗಿ ಪರಿಣಮಿಸುವದರಿಂದ,ಆಜ್ಞಾಕೈಙ್ಕರ್ಯಗಳಾದ ನಿತ್ಯನೈಮಿತ್ತಿಕಗಳೂ ಪ್ರಪನ್ನನಿಗೆ ತ್ಯಾಜ್ಯವಲ್ಲವೋ? ಎಂದರೆ, ತ್ಯಾಗಪೂರ್ವಕವಾಗಿ ಇವುಗಳನ್ನು ಅನುಷ್ಠಿಸಲೇಬೇಕು. ಆಗ ಫಲವು ಅಂಟುವದಿಲ್ಲವು. ಪರಿತ್ಯಾಗಮಾಡಿದಪಕ್ಷದಲ್ಲಿ,ಕೃತ್ಯಾಕರಣದೋಷಕ್ಕೆ ಗುರಿಯಾಗುವನೆಂದು ಹೇಳಲ್ಪಟ್ಟಿತು. ಆಳ್ವಾರಾಚಾರ್ಯರುಗಳೂ ಈ ಸಂಪ್ರದಾಯವನ್ನು ಹಿಂದಿನಿಂದ ಕಾಪಾಡಿಕೊಂಡು ಬಂದಿರುತ್ತಾರೆ. ಅಂತಹ ಸಂಪ್ರದಾಯವನ್ನು ಎಲ್ಲಾ ಪ್ರಪನ್ನರೂಕೂಡ ಪಾಲನಮಾಡಿಕೊಂಡು ಭಗವದನುಗ್ರಹಕ್ಕೆ ಪಾತ್ರರಾಗಬೇಕೇ ವಿನಾ, ಆಜ್ಞಾಕೈಙ್ಕರ್ಯವನ್ನು ಪರಿತ್ಯಾಗಮಾಡಿ,**ಆಜ್ಞಾಚ್ಛೇದೀ ಮಮದ್ರೋಹೀ** ಎಂದು ಹೇಳಿರುವಹಾಗೆ ಭಗವನ್ನಿಗ್ರಹಕ್ಕೆ ಗುರಿಯಾಗಬೇಡಿ ಎಂದು ಪರಮ ಹಿತೋಪದೇಶವನ್ನು ಮಾಡಿರುತ್ತಾರೆ.. ಒಂದುವೇಳೆ ನಿತ್ಯನೈಮಿತ್ತಿಕಾನುಷ್ಠಾನಕಾಲದಲ್ಲಿ ಫಲತ್ಯಾಗ ಮಾಡದೇ ಇದ್ದು, ಫಲ ಸಙ್ಕಲ್ಪ ಉಂಟಾದರೂ**"ಅನ್ತೇ ವಿರಕ್ತಿಮಾ ಸಾದ್ಯ ವಿಶತೇ ವೈಷ್ಣವಂ ಪದಂ"** ಎಂದು ಹೇಳಿರುವಹಾಗೆ, ಕೊನೆಗೆ ವೈರಾಗ್ಯವುಂಟಾಗಿ ದೇಹಾವಸಾನದಲ್ಲಿ ಮೋಕ್ಷವು ಸಿದ್ಧವೆಂಬ ಭಾವವು.

**ನಿಷಿದ್ಧೈರಪ್ಯಲೇಪಶ್ಚೇತ್ ಸದ್ವೃತ್ತೈರಲೇಪಃ ಕೈಮುತ್ಯನ್ಯಾಯಸಿದ್ಧಃ.**

**ಪ್ರಪನ್ನಸ್ಯ ನಿಷಿದ್ಧೈರಪ್ಯ ಲೇಪ ಮುಪಪಾದಯನ್ ।**
**ಯಥಾಭಿಮತ ಸದ್ವೃತ್ತಿ (ತ್ತ) ನಿಷ್ಠೇಭ್ಯಃ ಕಿಮಸೂಯತಿ? ॥೫೯॥**

**ನಿಷಿದ್ಧವೇ ಅಂಟುವದಿಲ್ಲವೆಂದರೆ ನಿತ್ಯನೈಮಿತ್ತಿಕಗಳೂ ಅಂಟುವದಿಲ್ಲ ವೆಂಬುದು ಕೈಮುತ್ಯನ್ಯಾಯಸಿದ್ಧವು.**

ನಿಷಿದ್ಧಾಚರಣೆಯು ಪ್ರಪನ್ನನಿಗೆ ದೋಷಾವಹವಲ್ಲವೆಂದು ಹೇಳುವವರೇ, ನಿತ್ಯನೈಮಿತ್ತಿಗಳ ಅನುಷ್ಠಾನದಲ್ಲಿ ಮೋಕ್ಷೇತರ ಫಲಪ್ರಾಪ್ತಿಯುಂಟಾಗಬಹುದು ; ಆದುದರಿಂದ ಪ್ರಪನ್ನನಿಗೆ ನಿತ್ಯನೈಮಿತ್ತಿಕಾನುಷ್ಠಾನವು ಅನಾವಶ್ಯಕವೆಂದು ಹೇಳುತ್ತಾರೆ. ಅವರನ್ನು ಶ್ರೀ ದೇಶಿಕರು ಕೇಳುತ್ತಾರೇನೆಂದರೆ, ನಿಷಿದ್ಧವಾದುದೇ ಅಂಟುವದಿಲ್ಲವೆಂದು ವಾದಿಸುವ ನೀವು, ನಿಷಿದ್ಧವಲ್ಲದೆ ಸದ್ವೃತ್ತವಾದ ನಿತ್ಯನೈಮಿತ್ತಿಕಗಳು ಅಂಟುತ್ತವೆ ಎಂದು ಹೇಳಿ, ಅವುಗಳ ವಿಷಯದಲ್ಲಿ ನಿಮಗೆ ಏಕೆ ಅಸೂಯೆಯು ? ಶಾಸ್ತ್ರನಿಷಿದ್ಧವೂ ನಿಮಗೆ ಗ್ರಾಹ್ಯವಾದುದಾದರೆ, ಈ ಶಾಸ್ತ್ರವಿಹಿತ ಸದ್ವೃತ್ತವೂ ಕೈಮುತಿಕನ್ಯಾಯದ ಪ್ರಕಾರ ಗ್ರಾಹ್ಯವಾಗಬೇಕು ; ಹಾಗಲ್ಲದೆ ಅವುಗಳ ವಿಷಯದಲ್ಲಿ ನಿಮಗೆ ಅಸೂಯೆ ಏತಕ್ಕೆ ? ಎಂದು ಮುಂದಿನ ಕಾರಿಕೆಯಲ್ಲಿ ಪ್ರಶ್ನಿಸುತ್ತಾರೆ.

**ಪ್ರಪನ್ನಸ್ಯ** - ಪ್ರಪನ್ನನಿಗೆ, **ನಿಷಿದ್ಧೈರಪಿ**-ಶಾಸ್ತ್ರನಿಷಿದ್ಧವಾದವುಗಳ ಅನುಷ್ಠಾನಗಳಿಂದಲೂ, **ಅಲೇಪಂ** - ಅವುಗಳ ಫಲಗಳು ಅಂಟದಿರುವಿಕೆಯನ್ನು, **ಉಪಪಾದಯನ್** - ವಾದಿಸುವಂತಾವನಾಗಿ, **ಯಥಾಭಿಮತ ಸದ್ವೃತ್ತನಿಷ್ಠೇಭ್ಯಃ** – ಶಾಸ್ತ್ರಗಳಲ್ಲಿ ನ್ಯಾಯವಾಗಿ ವಿಧಿಸಿ ಸದಾಚಾರರು ಅನುಷ್ಠಿಸಿರುವ ಪ್ರವೃತ್ತಿಗಳಲ್ಲಿ ನಿಷ್ಠರಾಗಿರುವವರ ದೆಶೆಯಿಂದ, **ಕಿಮಸೂಯತಿ** - ಏಕೆ ದ್ವೇಷಿಸುವದು ? ಏಕೆ ನಿಮಗೆ ಅಸೂಯೆಯು, ಅಂತವರ ವಿಷಯದಲ್ಲಿ ನಿಮಗೆ ಏಕೆದ್ವೇಷವು? ಎಂದು ಕೇಳುತ್ತಾರೆ. ಶಾಸ್ತ್ರನಿಷಿದ್ಧವೇ ಅಂಟುವದಿಲ್ಲವಾದರೆ, ಶಾಸ್ತ್ರವಿಹಿತವೂ ಅಂಟುವದಿಲ್ಲವೆಂಬುದು ಕೈಮುತ್ಯನ್ಯಾಯಸಿದ್ಧವು. ಹೀಗಿರುವಾಗ ಶಾಸ್ತ್ರವಿಹಿತವಾದ ನಿತ್ಯನೈಮಿತ್ತಿಕ ಅನುಷ್ಠಾನಪರರನ್ನು ಏಕೆ ದ್ವೇಷಿಸುವಿರಿ ? ಎಂದು ಕೇಳುತ್ತಾರೆ. ಹೀಗೆ ನಿಷಿದ್ಧಾನುಷ್ಠಾನವೂ ಲೇಪಿಸುವದಿಲ್ಲವೆಂದೂ ವಿಹಿತಾನುಷ್ಠಾನಗಳು ಆವಶ್ಯಕವಿಲ್ಲವೆಂದೂ ವಾದಮಾಡುವವರು ಯಾರೆಂದು ಶ್ರೀ ದೇಶಿಕರವರು ಮೊದಲಿನಿಂದಲೂ ಹೇಳಲಿಲ್ಲವು. ಮಹಾನುಭಾವರಾದ ಶ್ರೀ ದೇಶಿಕರವರಿಗೆ ಭಾಗವತೋತ್ತಮರಿಗೆ ಈಷದಪಿ ಮನಃಖೇದವನ್ನುಂಟುಮಾಡುವದು ಇಷ್ಟವಿಲ್ಲವು. ಆದರೆ

**ಕಾ. ಆಜ್ಞಾತಿಲಂಘನೇ ಯಸ್ಯ ರಕ್ಷಕತ್ವಂ ನಭಜ್ಯತೇ ।**
**ಆಜ್ಞಾನುಪಾಲನೇ ತಸ್ಯ ಕಥಂ ತದುಪರುದ್ಧ್ಯತೇ ? ॥೬॥**

ಮಹಾಗುರುವಾದವರು ಲೋಕದಲ್ಲಿ ಶಾಸ್ತ್ರಕ್ಕೂ, ತದನುಗುಣವಾದ ಸಂಪ್ರದಾಯಕ್ಕೂ, ವಿರುದ್ಧವಾದ ಅಭಿಪ್ರಾಯಗಳನ್ನು ನಿರಾಕರಿಸದಿದ್ದರೆ, ಸ್ವಾಭಲತ್ಯೇಶಾಸಿತಾವಾಗಿರಬೇಕೆಂಬ ಇತಿ ಕರ್ತವ್ಯತೆಯನ್ನು ತ್ಯಾಗಮಾಡಿದ ದೋಷಕ್ಕೆ ಗುರಿಯಾಗಕೂಡದೆಂದು ಭಾವಿಸಿ, ಅಭಿಪ್ರಾಯಗಳು ಸರಿಯಲ್ಲವೆಂದು ಅಷ್ಟುಮಾತ್ರ ಹೇಳಿದರೇವಿನಾ ಅನೇಕ ಸಂದರ್ಭಗಳಲ್ಲಿ ಯಾರು ಹಾಗೆ ಅಭಿಪ್ರಾಯ ಪಟ್ಟಿದ್ದಾರೆಂಬುದನ್ನು ಹೇಳಲಿಲ್ಲವು.

ಕಾರಿಕೆಯ **ಅರ್ಥವು**:—ಹಿಂದೆ ಹೇಳಿದುದನ್ನೇ ಇನ್ನೂ ಉಪಪಾದಿಸಿ ಹೇಳುತ್ತಾರೆ—**ಆಜ್ಞಾತಿಲಂಘನೇ** - ಪರದಾರ ಪರಧನಾದಿಗಳ ಅಪಹಾರಾದಿ ರೂಪವಾದ ದೋಷಗಳು ಕೂಡದು ಎಂಬ ಆಜ್ಞೆಯನ್ನು ಮೀರುವದರಿಂದ, **ಯಸ್ಯ** - ಯಾವ ಪ್ರಪನ್ನನ, **ರಕ್ಷಕತ್ವವು, ನಭಜ್ಯತೇ ಚೇತ್** - ಭಂಗವಾಗುವದಿಲ್ಲನೆಂದಾದರೆ, **ಆಜ್ಞಾನುಪಾಲನೇ** - ಶಾಸ್ತ್ರವಿಹಿತಗಳಾದ ನಿತ್ಯನೈಮಿತ್ತಿಕಾನುಷ್ಠಾನದಲ್ಲಿ, **ತಸ್ಯ** - ಅಂತಹ ಪ್ರಪನ್ನನಿಗೆ, **ತತ್** - ಆ ರಕ್ಷಕತ್ವವು, **ಕಥಮುಪರುದ್ಧ್ಯತೇ** - ಹೇಗೆ ಆ ನಿತ್ಯನೈಮಿತ್ತಿಕಗಳನ್ನನುಷ್ಠಿಸುವದರಿಂದ ತಡೆಯಲ್ಪಡುತ್ತದೆ? **"ಶ್ರುತಿಸ್ಸ್ಮೃತಿರ್ಮಮೈವಾಜ್ಞಾ ಯಸ್ತಾಮುಲ್ಲಂಘ್ಯವರ್ತತೇ । ಆಜ್ಞಾಚ್ಛೇದೀ ಮಮದ್ರೋಹೀ ಮದ್ಭಕ್ತೋಽಪಿ ನ ವೈಷ್ಣವಃ"**ಎಂಬ ಸರ್ವೇಶ್ವರ ವಾಕ್ಯಪ್ರಕಾರ ಆಜ್ಞಾತಿಲಂಘನವು ಪ್ರಪನ್ನನಿಗೆ ಮುಖ್ಯವಾಗಿ ಕೂಡದು. ಹೀಗಿದ್ದರೂ ಪ್ರತ್ಯವಾಯವಿಲ್ಲವು, ಕರುಣಾಮಹೋದಧಿಯು ರಕ್ಷಿಸುವದರಲ್ಲಿ ನಿಸ್ಸಂಶಯವು ಎಂದು ಹೇಳುತ್ತೀರಿ. **"ಸಂಧ್ಯಾಹೀನೋಽಶುಚಿರ್ನಿತ್ಯಮನರ್ಹಸ್ಸರ್ವಕರ್ಮಸು"** ಎಂದು ನಿತ್ಯ ನೈಮಿತ್ತಿಕಾನುಷ್ಠಾನ ಮಾಡದಿರುವವನನ್ನು ನಿಂದಿಸಿರುತ್ತದೆ. ಇವನ್ನು ಮನಸ್ಸಿನಲ್ಲಿಟ್ಟು ಇವು ವಿಹಿತಕರ್ಮಗಳಾಗಿರುವದರಿಂದ ತನ್ನ ಆಜ್ಞೆಗಳು ಸರಿಯಾಗಿ ನಡೆಯಬೇಕೆಂದು ಬದ್ಧಾದರನಾದಂಥ ಭಗವಂತನ ರಕ್ಷಕತ್ವವು ಆ ಆಜ್ಞೆಗಳ ಉಲ್ಲಂಘನೆಯಲ್ಲೂ ಭಂಗವನ್ನು ಹೊಂದುವದಿಲ್ಲವೆಂಬುದು ಹೇಗೆ ಸಮಂಜಸವಾದೀತೆಂಬುದು ತಾತ್ಪರ್ಯವು. ಆಜ್ಞಾತಿ ಲಂಘನದಲ್ಲೇ ಪ್ರತ್ಯವಾಯವಿಲ್ಲದಿರುವಾಗ ಆಜ್ಞಾನುಪಲನಕ್ಕೆ ಪ್ರತ್ಯವಾಯ ಎಲ್ಲಿಯದು ? ಆಜ್ಞಾತಿಲಂಘನಕ್ಕೇ ಪ್ರತ್ಯವಾಯವನ್ನು ಹೇಳಿ, ಆಜ್ಞಾನುಪಾಲನಕ್ಕೆ ಶ್ರೇಯಸ್ಸನ್ನು ಹೇಳುವದೀಗ ಪೂರ್ಣಸಾಮಂಜಸ್ಯ ವಿಷಯವೆಂದು ಇದರಿಂದ ಹೇಳಿದಂತಾಯಿತು.

## ವಿಹಿತಸ್ಯ ಪರಿತ್ಯಾಜ್ಯತ್ವೇ ಯುಕ್ತ್ಯನ್ತರ ಮಪ್ಯಾಹ.

**ನಚಾಚಾರಂ ವಿನಾ ಕಿಂಚಿತ್ಕೈಂಕರ್ಯ ಮುಪಪದ್ಯತೇ ।**
**ನ ಹಿ ಶೌಚ ಮಕೃತ್ವೈವ ಸಮಾರಾಧನ ಮರ್ಹತಿ ॥೬೧॥**

## ಶಾಸ್ತ್ರವಿಹಿತದ ಪರಿತ್ಯಾಗ ಕೂಡದೆಂಬುವದಕ್ಕೆ ಯುಕ್ತ್ಯನ್ತರವನ್ನು ಹೇಳುತ್ತಾರೆ.

**ಆಚಾರಂ ವಿನಾ** - ವರ್ಣಾಶ್ರಮಾದಿಗಳಿಗೆ ವಿಹಿತವಾದ ನಿತ್ಯನೈಮಿತ್ತಿಕ ಕರ್ಮಾನುಷ್ಠಾನಗಳಿಲ್ಲದೆ, **ಕಿಂಚಿತ್ಕೈಂಕರ್ಯಂ** - ಯಾವವಿಧಕೈಂಕರ್ಯವೂ, ಎಂದರೆ ನಿಮಗೆ ತುಂಬಾ ಅಭಿಮತವಾದ ಅನುಜ್ಞಾ ಕೈಂಕರ್ಯಗಳೂ ಭಾಗವತ ಕೈಂಕರ್ಯಗಳೂ ಯಾವುವೂ, **ನೋಪಪದ್ಯತೇ** - ಸಿದ್ಧಿಸುವದಿಲ್ಲವು. ಇದನ್ನು ಹೇಗೆ ಉಪಪಾದಿಸುತ್ತೀರಿ ? ಎಂದು ಕೇಳಿದರೆ ಅದಕ್ಕೆ ಉತ್ತರಾರ್ಧದಿಂದ ಉತ್ತರವನ್ನು ಹೇಳುತ್ತಾರೆ. ಆಚಾರವು ಎಂದರೆ ವಿಹಿತ ಆಜ್ಞಾ ಕೈಂಕರ್ಯಗಳಾದ ನಿತ್ಯನೈಮಿತ್ತಿಕಗಳ ಅನುಷ್ಠಾನವು. ಮಲವಿಸರ್ಜನ ದಂತಧಾವನ ಸ್ನಾನಾದಿಗಳಿಂದ ಬಾಹ್ಯ ಶೌಚ ಉಂಟಾಗುತ್ತದೆ, ಈ ಬಾಹ್ಯ ಶೌಚವು "**ಆಪೋಹಿಷ್ಠಾ ಮಯೋಭುವಃ**" ಎಂಬ ಮಂತ್ರಸ್ನಾನದಿಂದ ಪೂರ್ಣತೆಯನ್ನು ಹೊಂದುತ್ತದೆ. ಆಂತರ ಶೌಚಉಂಟಾಗುವದಕ್ಕೆ ಸಂಧ್ಯಾವಂದನಾದಿ ನಿತ್ಯನೈಮಿತ್ತಿಕಾನುಷ್ಠಾನಗಳು ಆವಶ್ಯಕವು. **ಸೂರ್ಯಶ್ಚೇತ್ಯಾದಿ** ಮಂತ್ರಗಳಿಂದಲೂ ಆಂತರಶೌಚಪ್ರಾಪ್ತಿಯುಂಟು; ಇದಾದನಂತರ ನಿಮಗೆ ಇಷ್ಟವಾದ ಭಗವದ್ಭಾಗವತಾರಾಧನಾರೂಪ ಸರ್ವಅನುಜ್ಞಾ ಕೈಂಕರ್ಯಗಳಿಗೆ ಅರ್ಹತೆಯು, ಮೇಲೆ ಉದಾಹರಿಸಿದ "**ಸನ್ಧ್ಯಾಹೀನೋಽ ಶುಚಿರ್ನಿತ್ಯಮನರ್ಹಸ್ಸರ್ವಕರ್ಮಸು**" ಎಂಬ ಪ್ರಮಾಣದಲ್ಲಿ ಸಿದ್ಧವು. ಆದುದರಿಂದ ಆಜ್ಞಾ ಕೈಂಕರ್ಯಗಳಿಲ್ಲದೆ ನಿಮಗೆ ಇಷ್ಟವಿರುವ ಭಗವದ್ಭಾಗವತ ಕೈಂಕರ್ಯಗಳ ಸಿದ್ಧಿ ಇಲ್ಲವೆಂದು ಹೇಳುತ್ತಾರೆ. **ಹಿ**-ಯಾವಕಾರಣದಿಂದ, **ಶೌಚ ಮಕೃತ್ವೈವ**-ಸ್ನಾನ ಸಂಧ್ಯಾವಂದನಾನುಷ್ಠಾನಗಳದ್ವಾರಾ ಶೌಚವನ್ನು ಹೊಂದದೇ ಎಂದರೆ ಬಹಿಃ ಅನ್ತಃ ಶುಚಿತ್ವಕ್ಕೆ ಆವಶ್ಯಕಗಳಾದ ಸಂಧ್ಯಾವಂದನಾದಿ ನಿತ್ಯನೈಮಿತ್ತಿಕಗಳನ್ನನುಷ್ಠಿಸದೇ ಎಂಬ ಭಾವವು. **ಸಮಾರಾಧನಂ**-ಅನುಜ್ಞಾ ಕೈಂಕರ್ಯಗಳಾದ ಭಗವದ್ಭಾಗವತಾರಾಧನಾದಿಗಳನ್ನು, **ನಾರ್ಹತಿ** - ನಡೆಸಲು ಯೋಗ್ಯನಾಗುವದಿಲ್ಲವೋ, ಆಕಾರಣದಿಂದ, **ಕೈಂಕರ್ಯಂನೋಪಪದ್ಯತೇ** ಎಂದು ಪೂರ್ವಾರ್ಧದಲ್ಲಿರುವದರೊಂದಿಗೆ ಅನ್ವಯವು. ಹೀಗೆ ಪ್ರಪನ್ನನು ಅಶುಚಿಯಾಗಿದ್ದರೂ ಅನುಜ್ಞಾ ಕೈಂಕರ್ಯಗಳನ್ನು ಎಸಗಿದರೂ ಪ್ರಪನ್ನ ವಾತ್ಸಲ್ಯಾತಿರೇಕವುಳ್ಳ ಪರಮಾತ್ಮನು

## ಆಚಾರಸ್ಯ ಕೈಙ್ಕರ್ಯಾರ್ಹತಾ ಜನಕತ್ವೇ ಕಿಂ ಪ್ರಮಾಣಮ್ ?

ಕಾ. "ಆಚಾರಪ್ರಭವೋ ಧರ್ಮೋ ಧರ್ಮಸ್ಯ ಪ್ರಭುರಚ್ಯುತಃ"
ಇತಿ ಪಂಚಮವೇದೇಽಪಿ ಸರ್ವಶಾಸ್ತ್ರಾರ್ಥ ಈರಿತಃ ॥೬೨॥

ಪ್ರೀತನಾಗಬಹುದು ಎಂದು ಅಭಿಪ್ರಾಯವುಳ್ಳವರಾಗಿರಬಹುದು ; ಅದೂ ಸರಿಯಲ್ಲವೆಂದು ತೋರಿಸುವದಕ್ಕಾಗಿ ಹೀಗೆ ಆಜ್ಞಾ ಕೈಙ್ಕರ್ಯಗಳನ್ನು ತ್ಯಜಿಸಿದವನು ಸಮಸ್ತಗಳಾದ ಅನುಜ್ಞಾ ಕೈಙ್ಕರ್ಯಗಳಿಗೂ ಅನರ್ಹನು, ಏತಕ್ಕೆಂದರೆ, ಅಂತವನು ಅಶುಚಿಯು ಸಮಸ್ತ ದೇವಭಾಗವತ ಕೈಙ್ಕರ್ಯಗಳಿಂದಲೂ ಬಹಿಷ್ಕೃತನು ; ಸರ್ವೇಶ್ವರನು ಎಂದಿಗೂ ಇದರಿಂದ ಪ್ರೀತನಾಗನು ಎಂಬ ಭಾವವು. ಪ್ರೀತನಾಗನು ಎಂದು ಹೇಗೆ ಹೇಳುವಿರಿ ? ಎಂದರೆ ಅದಕ್ಕೆ ಶ್ರೀ ವ್ಯಾಸಮಹರ್ಷಿಯು ಭೀಷ್ಮಪರ್ವವಾಕ್ಯವನ್ನು ಸ್ಮರಿಸಿದವರಾಗಿ ತನ್ಮೂಲಕ ಉತ್ತರವನ್ನು ದಯಪಾಲಿಸುತ್ತಾರೆ.

### ಆಚಾರವೇ ಕೈಙ್ಕರ್ಯಾರ್ಹತೆಯನ್ನುಂಟುಮಾಡುವದು ಎಂಬಲ್ಲಿ ಪ್ರಮಾಣವು ಯಾವುದು ?

"ಧರ್ಮಃ - ಭಗವತ್ಪ್ರೀತಿಮಾತ್ರವೇ ಫಲವಾಗಿ ಅನುಷ್ಠಿಸಲ್ಪಟ್ಟ ಶಾಸ್ತ್ರದಲ್ಲಿ ಹೇಳಲ್ಪಟ್ಟ ಅನುಜ್ಞಾ ಕೈಙ್ಕರ್ಯವು, ಆಚಾರ ಪ್ರಭವಃ-ನಿತ್ಯನೈಮಿತ್ತಿಕಾನುಷ್ಠಾನದಿಂದ ಉಂಟಾದುದು, ಕಾರಣವಾಗಿ ಉಳ್ಳದು, ಅಥವಾ ಪ್ರಯೋಜನವಾಗಿ ಉಳ್ಳದ್ದು, ತಸ್ಯ ಚ ಧರ್ಮಸ್ಯ-ಅಂತಹ ಧರ್ಮಕ್ಕಾದರೋ, ಪ್ರಭುರಚ್ಯುತಃ-ನಿರ್ವಾಹಕನಾಗಿ ಸಮರ್ಥನಾದವನು ಅಥವಾ ಸ್ವಾಮಿಯಾದವನು ಅಚ್ಯುತನು, ಎಂದರೆ ಆ ಕೈಙ್ಕರ್ಯಗಳನ್ನು ನಡೆಸಿಕೊಟ್ಟು ಅದರಿಂದ ಆರಾಧ್ಯನಾಗಿ ಸುಪ್ರೀತನಾಗುವನು ಅಚ್ಯುತನು ಎಂಬ ಭಾವವು", ಇತಿ - ಎಂಬದಾಗಿ, ಪಂಚಮವೇದೇಽಪಿ-ವೇದಾರ್ಥಗಳ ಉಪಬೃಹ್ಮಣವೇ ಮುಖ್ಯವಾಗಿ, "ಕೃಷ್ಣದ್ವೈಪಾಯನಂವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್" ಎಂದು ಶ್ಲಾಘಿಸಲ್ಪಟ್ಟ ಮಹರ್ಷಿಯಿಂದ ರಚಿಸಲ್ಪಟ್ಟ ಭಾರತದಲ್ಲಿರುವದರಿಂದ ಇದಕ್ಕೆ ಪಂಚಮ ವೇದವೆಂದು ಹೆಸರು, ಇಂತಹ ಭಾರತದಲ್ಲಿ ಸರ್ವಶಾಸ್ತ್ರಸಾರವಾದ ಈ ಅಭಿಪ್ರಾಯವು, ಈರಿತಃ - ಹೇಳಲ್ಪಟ್ಟಿರುತ್ತದೆ. ಈ ಶ್ಲೋಕದ ಪೂರ್ವಾರ್ಧವು, "ಸರ್ವಾಗಮಾನಾ ಮಾಚಾರಃ ಪ್ರಥಮಂ ಪರಿಕಲ್ಪ್ಯತೇ" ಎಂದು ಇರುತ್ತದೆ ಈ ಪೂರ್ವಾರ್ಧವನ್ನು ಮನಸ್ಸಿನಲ್ಲಿಟ್ಟು ಸರ್ವಶಾಸ್ತ್ರಾರ್ಥ ಈರಿತಃ ಎಂದು ಹೇಳಿರುತ್ತಾರೆ. ಇದರಿಂದ ಸರ್ವ ವೇದಾಧ್ಯಯನ, ವೇದಾರ್ಥಜ್ಞಾನ ಮೊದಲಾದವುಗಳಿಗಿಂತ ನಿತ್ಯ

**ನಿಷಿದ್ಧ ನಿವೃತ್ತಯೇ ಪೂರ್ವಪ್ರಪದನಾನುಸಂಧಾನ ಮೇವ ಯುಕ್ತಂ,**
**ನ ತು ಪುನಃ ಪ್ರಪದನಮ್ ಇತ್ಯತ್ರಾಹ**

**ಪ್ರಪತ್ತಿಪ್ರತಿಸಂಧಾನ ಮಾಪ್ತೈರ್ಯದು ಪದಿಶ್ಯತೇ ।**
**ತತ್ಸ್ವಾಧಿಕಾರನಿಯತಹಾನೋಪಾದಾನಸಿದ್ಧಯೇ ॥೬॥**

ನೈಮಿತ್ತಿಕಾನುಷ್ಠಾನಗಳಿಗೆ ಮಾಹಾತ್ಮ್ಯೆಯು ಹೇಳಲ್ಪಟ್ಟಿರುತ್ತದೆ. ವಿಷ್ಣು ಸಹಸ್ರನಾಮದ ಫಲ ಶ್ರುತಿಯಲ್ಲಿ ಈ ಶ್ಲೋಕವು ಇರುತ್ತದೆ. ಮಹಾಭಾರತವು ಐದನೇ ವೇದವೆಂದು "ವೇದಾನಧ್ಯಾಪಯಾಮಾಸ ಮಹಾಭಾರತಪಂಚಮಾನ್" ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ಕರ್ಮಯೋಗಾದಿಗಳಲ್ಲಿ ನಿಷ್ಠೆಯು ಉತ್ಪನ್ನವಾಗುವದಕ್ಕೂ ಮತ್ತು ಭಕ್ತಿಯೋಗ ನಿಷ್ಪತ್ತಿಗೂಸಹ ನಿತ್ಯ ನೈಮಿತ್ತಿಕಗಳು ಆವಶ್ಯಕವಾದುದರಿಂದ, ಆಚಾರ ಪ್ರಭವಃ ಎಂಬ ಪ್ರಯೋಗವಿರುತ್ತದೆ. ಆದರೆ ಪ್ರಪನ್ನನಿಗೆ ಉಪಾಯವು ಸಕೃದನುಷ್ಠೇಯವಾಗಿರುವದರಿಂದ, ನಿತ್ಯನೈಮಿತ್ತಿಕಗಳ ಸಾಪೇಕ್ಷತ್ವವು ಉಪಾಯ ನಿಷ್ಪತ್ತಿಗೆ ಬೇಕಾಗಿಲ್ಲದಿದ್ದರೂ, ಆಜ್ಞಾ ಕೈಙ್ಕರ್ಯಗಳಾದುದರಿಂದ ಪರಿತ್ಯಾಗಮಾಡಲು ಸಾಧ್ಯವಿಲ್ಲವು. ಪರಿತ್ಯಾಗಮಾಡಿದರೆ ಆಜ್ಞಾಚ್ಛೇದೀಯಾಗಿ ಶಿಕ್ಷೆಗೆ ಅರ್ಹನಾಗುವನು. ಇದೂ ಅಲ್ಲದೆ ಇತರ ಧರ್ಮಗಳಾದ ಅನುಜ್ಞಾ ಕೈಙ್ಕರ್ಯಗಳನ್ನು ಎಸೆಗಿದರೂ, ಸರ್ವೇಶ್ವರನು ಫಲೋನ್ಮುಖನಾಗುವದಿಲ್ಲವು. ಪ್ರಪತ್ತ್ಯುತ್ತರಕಾಲದಲ್ಲಿ ಮಾಡತಕ್ಕ ಅನೇಕ ಭಗವದ್ಭಾಗವತ ಕೈಙ್ಕರ್ಯರೂಪ ಧರ್ಮಗಳುಂಟು. ಇವುಗಳಿಗೆ ಅರ್ಹತೆಯುಂಟಾಗಬೇಕಾದರೂ ಆಚಾರವು ಆವಶ್ಯಕವು.

**ನಿಷಿದ್ಧನಿವೃತ್ತಿಗೆ ಪೂರ್ವಪ್ರಪದನದ ಅನುಸಂಧಾನವೇ ಯುಕ್ತವು,**
**ಪುನಃ ಪ್ರಪದನ ಬೇಕಿಲ್ಲವೆಂಬ ಶಙ್ಕಾವಿಗೆ ಸಮಾಧಾನವು.**

ಪ್ರಪನ್ನರಿಗೆ ಬುದ್ಧಿಪೂರ್ವಕವಾದ ನಿಷಿದ್ಧಾನುಷ್ಠಾನವು ಉಂಟಾದರೂ ಅಂಟುವದಿಲ್ಲವೆಂಬ ವಾದವೇನೋ ಸರಿಯಲ್ಲವೆಂದಾಯಿತು. ಇದು ಪೂರ್ವಾಚಾರ್ಯರುಗಳ ಅಭಿಮತಕ್ಕೆ ವಿರುದ್ಧವಾದುದರಿಂದಲೂ ಸರಿಯಲ್ಲವು. ಆದರೆ ನಿಷಿದ್ಧಾನುಷ್ಠಾನವು ಉಂಟಾದರೂ ಪುನಃ ಪ್ರಪದನವೆಂಬುದು ಯೋಗ್ಯವಾದುದಲ್ಲವು, ಏಕೆಂದರೆ ಪ್ರಪದನವು, ಸಕೃದೇವ ಪ್ರಪನ್ನಾಯ ಎಂದು ಶಾಸ್ತ್ರಾರ್ಥವಿರುವದರಿಂದ, ಒಂದೇ ಸಲ ಅನುಷ್ಠಿಸತಕ್ಕದ್ದು. ಆದುದರಿಂದ ಪೂರ್ವಪ್ರಪತ್ತಿಯ ಸ್ಮರಣವೇ ಈ ನಿಷಿದ್ಧಾನುಷ್ಠಾನಕ್ಕೆ ನಿಷ್ಕೃತಿಯೆಂದು ಆಪ್ತರೇ ಹೇಳಿರುವರಲ್ಲಾ, ಪುನಶ್ಶರಣಾಗತಿಯನ್ನು ಪ್ರಾಯಶ್ಚಿತ್ತರೂಪದಲ್ಲಿ ಅನುಷ್ಠಿಸತಕ್ಕದ್ದೆಂಬುದು ಹೇಗೆ? ಎಂದರೆ ಅದಕ್ಕೆ ಸಮಾ

ಧಾನವನ್ನು ೬೩, ೬೪ನೆಯ ಕಾರಿಕೆಗಳಿಂದ ಹೇಳುತ್ತಾರೆ. ಪ್ರಪತ್ತಿ ಪ್ರತಿಸಂಧಾನಂ - ಪ್ರಪನ್ನನು ಮೊದಲುಮಾಡಿದ ಮೋಕ್ಷಾರ್ಥ ಪ್ರಪತ್ತಿಯ ಅನುಸಂಧಾನವು ಉತ್ತರಾಘಗಳಿಗಾಗಿ ಪ್ರಾಯಶ್ಚಿತ್ತವು ಎಂದು, ಆಪ್ತೈಃ - ಆಪ್ತರಾದ ಆಚಾರ್ಯರಿಂದ, ಯತ್ - ಯಾವುದು, ಉಪದಿಶ್ಯತೇ – ಉಪದೇಶಿಸಲ್ಪಟ್ಟಿರುತ್ತದೋ, ತತ್ - ಆ ಆಪ್ತರಾದ ಆಚಾರ್ಯರ ಉಪದೇಶವು, ಪ್ರಾಯಶ್ಚಿತ್ತವೇ ಬೇಡವೆಂಬ ಅಭಿಪ್ರಾಯದಿಂದ ಹೇಳಲ್ಪಡಲಿಲ್ಲವು, ಇನ್ನು ಏತಕ್ಕಾಗಿ ಹೇಳಲ್ಪಟ್ಟಿತೆಂದರೆ ತಿಳಿಸುತ್ತಾರೆ.—ಸ್ವಾಧಿಕಾರ ನಿಯತ ಹಾನೋಪಾದಾನ ಸಿದ್ಧಯೇ - ಪ್ರಪನ್ನನಾದ ತನ್ನ ಅಧಿಕಾರಕ್ಕೆ ಯೋಗ್ಯವಾದ, ಹಾನೋಪಾದಾನ ಸಿದ್ಧಯೇ-ಅಪರಾಧಗಳಿಗೆ ಪ್ರಾಯಶ್ಚಿತ್ತರೂಪವಾದ ಪುನಶ್ಶರಣಾಗತಿಯನ್ನು ಯಾವ ಸಂದರ್ಭದಲ್ಲಿ ಬಿಡತಕ್ಕದ್ದು, ಯಾವಸಂದರ್ಭದಲ್ಲಿ ಸ್ವೀಕರಿಸತಕ್ಕದ್ದೆಂಬುದು ಸಿದ್ಧಿಸುವದಕ್ಕಾಗಿ, ಪೂರ್ವ ಪ್ರಪದನದ ಸ್ಮರಣೆಯೆಂದು ಭಾವಿಸತಕ್ಕದ್ದೆಂಬುದು, ಆಪ್ತರ ತಾತ್ಪರ್ಯವೆಂಬ ಭಾವವು ಪೂರ್ವಪ್ರಪತ್ತಿಯ ಸ್ಮರಣೆಯು ಉತ್ತರಾಘಗಳಿಗಾಗಿ ಪ್ರಾಯಶ್ಚಿತ್ತದ ತ್ಯಾಗಕ್ಕಾಗಿ ಅಲ್ಲವು. ತಾನು ಅಶಕ್ತನಾಗಿಯಲ್ಲವೇ ಲಘೂಪಾಯವನ್ನು ಅನುಷ್ಠಿಸಿದುದು ? ತಾನು ಅಕಿಂಚನನು; ಆದುದರಿಂದ ಈ ಉತ್ತರಾಘಗಳಿಗೆ ಶಾಸ್ತ್ರಗಳಲ್ಲಿ ವಿಧಿಸಿರುವ ಪ್ರಾಯಶ್ಚಿತ್ತಗಳನ್ನು ಅನುಷ್ಠಿಸಲು ಅಶಕ್ತನು; ಈ ಅನುಸಂಧಾನದಿಂದ ವಿಹಿತ ಪ್ರಾಯಶ್ಚಿತ್ತಗಳನ್ನು ಬಿಟ್ಟು ಲಘುವಾದ ಪುನಃ ಪ್ರಪದನವನ್ನು ಪ್ರಾಯಶ್ಚಿತ್ತವಾಗಿ ಭಾವಿಸುವದಕ್ಕಾಗಿ ಆ ಅನುಸಂಧಾನವು. ಈ ಪುನಃ ಪ್ರಪದನವನ್ನು ಯಾವಾಗ ಬಿಡತಕ್ಕದ್ದು, ಯಾವಾಗ ಅವಲಂಬಿಸತಕ್ಕದ್ದು ಎಂಬುವವುಗಳನ್ನೂ ತಿಳಿಯುವನು. ಅಪರಾಧವು ಅಬುದ್ಧಿ ಪೂರ್ವಕವಾದುದಾದರೆ, ಅದು ಅಂಟುವದಿಲ್ಲವೆಂದು ತಿಳಿದು ಪುನಃ ಪ್ರಪದನವನ್ನು ಬಿಡುವನು. ಬುದ್ಧಿಪೂರ್ವಕವಾದರೆ ಪುನಃ ಪ್ರಪದನವನ್ನವಲಂಬಿಸುವನು. ಈ ವಿಷಯಗಳನ್ನು ತಿಳಿಯುವದಕ್ಕಾಗಿ, ಪ್ರಪದನ ಪ್ರತಿಸಂಧಾನವನ್ನು ಹೇಳಿದರೇವಿನಾ, ಪ್ರಾಯಶ್ಚಿತ್ತವನ್ನು ಎಲ್ಲಾ ಸಂದರ್ಭದಲ್ಲೂ ತ್ಯಾಗಮಾಡಬಹುದೆಂಬ ವಿವಕ್ಷೆಯಿಂದ ಹೇಳಿದುದಲ್ಲವೆಂಬ ತಾತ್ಪರ್ಯವು. ಆಪ್ತರು ಹೀಗೆ ಸರಿಯಾದ ಅಭಿಪ್ರಾಯದಿಂದಲೇ ಹೇಳಿರುವದರಿಂದ ಅದಕ್ಕೆ ಅಪಾರ್ಥವನ್ನು ಕಲ್ಪಿಸುವದು ನ್ಯಾಯವಲ್ಲವೆಂಬ ಭಾವವು.

ಅಥವಾ, ಈ ಉತ್ತರಾರ್ಧಕ್ಕೆ ಇನ್ನೊಂದು ವಿಧವಾಗಿಯೂ ಸಾರವಿವರಣೆಯವರು ಅರ್ಥಮಾಡಿರುತ್ತಾರೆ; ಹೇಗೆಂದರೆ—ತನ್ನ ಅಶಕ್ತತೆ ಆಕಿಂಚನ್ಯಾದಿಗಳಿಗೆ ಅನುಗುಣವಾಗಿ, ಆ ಪ್ರಪದನ ಸ್ಮರಣೆಯು, ಹಾನೋಪಾದಾನಾದಿ ಸಿದ್ಧಯೇ-ಯಾವ ಸಂದರ್ಭದಲ್ಲಿ ಪ್ರಾಯಶ್ಚಿತ್ತವನ್ನು ಬಿಡಬಹುದು, ಯಾವ ಸಂದರ್ಭದಲ್ಲಿ ಬಿಡಬಾರದು ಅಙ್ಗೀಕರಿಸತಕ್ಕದ್ದು, ಎಂಬ ಜ್ಞಾನವು ಉಂಟಾಗುವದಕ್ಕೆ

ತದೇವ ಸ್ಫುಟಂ ದರ್ಶಯತಿ.

ಪ್ರತಿಸನ್ಧಾನತೋಽಹಿ ಸ್ಯಾದಧೀಪೂರ್ವೇಷ್ವಲೇಪಧೀಃ ।
ಬುದ್ಧಿಪೂರ್ವೇಷ್ವಪಿ ಪುನಃ ಪ್ರಪತ್ತೇರೇವ ಸಙ್ಗ್ರಹಃ ॥೬೪॥
ಅತಃ ಸಿದ್ಧಾನ್ತಮಾಹ.
ಅತೋ ನಿರಪರಾಧೇನ ವರ್ತಿತವ್ಯಂ ಕೃತಾತ್ಮನಾ ।
ಅಪರಾಧ ಪ್ರಸಙ್ಗೇಚ ಪುನಃ ಪ್ರಪದನಂ ಕ್ಷಮಮ್ ॥೬೫॥

---

ಮಾತ್ರವೇ ವಿನಾ, ಅದೇ ಪ್ರಾಯಶ್ಚಿತ್ತವಾಗುವದಿಲ್ಲವೆಂದೂ, ಅರ್ಥಮಾಡ ಬಹುದು ಎಂದು ಹೇಳಿರುತ್ತಾರೆ.

ಹಿಂದೆ ಹೇಳಿದುದನ್ನೇ ಸ್ಫುಟವಾಗಿ ವ್ಯಕ್ತಪಡಿಸುತ್ತಾರೆ.

**ಪ್ರತಿಸನ್ಧಾನತೋಽಹಿ** - ಪೂರ್ವ ಪ್ರಪತ್ತಿಯ ಸ್ಮರಣೆಯಿಂದ ಅಲ್ಲವೇ, **ಅಧೀಪೂರ್ವೇಷು** - ಬುದ್ಧಿ ಪೂರ್ವಕವಾಗಿ ಅಲ್ಲದೆ ಪ್ರಮಾದಿಕವಾಗಿ ಮಾಡಿದ ಅಪರಾಧಗಳಲ್ಲಿ, **ಅಲೇಪಧೀಃ** - ಶಾಸ್ತ್ರಗಳಲ್ಲಿ ಹೇಳಿರುವಹಾಗೆ ಅವು ಅಂಟುವದಿಲ್ಲವೆಂಬ ಬುದ್ಧಿಯು, **ಸ್ಯಾತ್**-ಉಂಟಾಗುತ್ತದೆ. **ಬುದ್ಧಿಪೂರ್ವೇಷ್ವಪಿ**-ಬುದ್ಧಿಪೂರ್ವಕವಾಗಿ ಮಾಡಿದ ಅಪರಾಧಗಳ ವಿಷಯದಲ್ಲಿಯಾದರೋ, **ಪುನಃ ಪ್ರಪತ್ತೇರೇವ** - ತಾನು ಅಶಕ್ತನಾಗಿ ಅಕಿಂಚನನಾದುದರಿಂದ ತನಗೆ ತತ್ತತ್ಪ್ರಾಯಶ್ಚಿತ್ತಗಳನ್ನು ಅನುಷ್ಠಿಸುವ ಆವಶ್ಯಕತೆ ಇಲ್ಲದೆ ಪುನಃ ಪ್ರಪದನವನ್ನೇ, **ಸಙ್ಗ್ರಹಃ** - ಪ್ರಾಯಶ್ಚಿತ್ತರೂಪದಲ್ಲಿ ಅಙ್ಗೀಕರಿಸೋಣವೂ ಸಹ, **ಸ್ಯಾತ್**-ಉಂಟಾಗುವದು. ಇಲ್ಲಿ ಏವಕಾರವು **ಪ್ರಪತ್ತೇರೇವ** ಎಂದಿರುವದರಿಂದ ಪ್ರತಿಪದ ಪ್ರಾಯಶ್ಚಿತ್ತವು ಅಪರಾಧಗಳಿಗೆ ಬೇಕಿಲ್ಲವು, ಸರ್ವಬುದ್ಧಿಪೂರ್ವಾಪರಾಧಗಳಿಗೂ ಪ್ರಾಯಶ್ಚಿತ್ತವು ಪ್ರಪನ್ನನಿಗೆ ಪುನಃ ಪ್ರಪದನವೇ ಎಂಬ ಭಾವವೂ ಸೂಚಿತವು.

ಆದುದರಿಂದ ಸಿದ್ಧಾನ್ತವನ್ನು ತಿಳಿಸುತ್ತಾರೆ—

**ಅತಃ** - ಆ ಕಾರಣದಿಂದ. ಬುದ್ಧಿಪೂರ್ವಾಪರಾಧ ಉಂಟಾದರೆ, ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾದ ಪ್ರಸಙ್ಗ ಬರುವದರಿಂದ, ಅವಕ್ಕೆ ಕಾರಣವೇ ಇಲ್ಲದಹಾಗೆ **ಕೃತಾತ್ಮನಾ** - ಈ ರಕ್ಷಾಭರ ಸಮರ್ಪಣೆ ಮಾಡಿ ಕೃತಕೃತ್ಯನಾದವನಿಂದ, **ನಿರಪರಾಧೇನ** - ಬುದ್ಧಿ ಪೂರ್ವಾಪರಾಧಗಳು ಪ್ರಾಪ್ತವಾಗದಹಾಗೆ, **ವರ್ತಿತವ್ಯಂ**-ನಡೆದುಕೊಳ್ಳತಕ್ಕದ್ದು. ಆದರೆ ಪ್ರಾರಬ್ಧವಶಾತ್, **ಅಪರಾಧಪ್ರಸಙ್ಗೇಚ** - ಬುದ್ಧಿಪೂರ್ವಾಪರಾಧವು ಪ್ರಾಪ್ತವಾದುದೇಯಾದರೆ, **ಪುನಃ ಪ್ರಪದನವು**. **ಕ್ಷಮಮ್** - ಯೋಗ್ಯವು ಎಂದರೆ ಉಚಿತವು ಎಂಬ ಭಾವವು.

ಇಲ್ಲಿ ಈತನು ಪ್ರಪನ್ನನಾದರೂ ಅಭ್ಯುಪಗತ ಪ್ರಾರಬ್ಧಕರ್ಮಾನುಭವಕ್ಕಾಗಿ ಜನ್ಮವನ್ನು ಎತ್ತಿರುವನಾದುದರಿಂದ, ಪ್ರಪದನಾನಂತರವೂ ಅಂತಹ ಫಲಾನುಭವ ಕ್ಕಾಗಿ ಬುದ್ಧಿಪೂರ್ವಕ ಅಪರಾಧಗಳನ್ನು ತನ್ನ ಯತ್ನವಿಲ್ಲದೆ ನಡೆಯುವದುಂಟಲ್ಲಾ; ನಿರಪರಾಧಿಯಾಗಿರುವಬಗೆ ಹೇಗೆ? ಎಂಬ ಶಙ್ಕಾವಿನಲ್ಲಿ ಸಮಾಧಾನವನ್ನು ಹೇಳು ತ್ತಾರೆ.—ಪ್ರಾರಬ್ಧಕರ್ಮಾನುಗುಣವಾಗಿ ಅಪರಾಧಗಳೇನೋ ಮಾಡಬಹುದು ಆದರೆ, ಪ್ರತಿಯೊಂದು ಕರ್ಮದ ಪ್ರಥಮ ಸಙ್ಕಲ್ಪದಲ್ಲಿ ಸರ್ವ ಸ್ವಾತಂತ್ರ್ಯವನ್ನು ಕರುಣಾಸಾಗರನು ಈ ಜೀವನಿಗೆ ಕೊಟ್ಟಿರುವನು; ಈ ಅಂಶವು "ಕೃತ ಪ್ರಯ ತ್ನಾಪೇಕ್ಷಸ್ತು ವಿಹಿತಪ್ರತಿಷಿದ್ಧವೈಯರ್ಥ್ಯಾದಿಭ್ಯಃ" (ಶಾರೀರ. ೨. ೩. ೪೧) ಎಂಬ ಸೂತ್ರದಲ್ಲಿ ಜೀವಾತ್ಮನ ಕರ್ತೃತ್ವವು ಪರಮಾತ್ಮಾಯತ್ತವೆಂದು ಹಿಂದಿನ ಸೂತ್ರದಲ್ಲಿ ಹೇಳಿದ್ದರೂ, ಆ ಜೀವಾತ್ಮನ ಸ್ವಬುದ್ಧಿಯಿಂದ ಮಾಡಲ್ಪಟ್ಟ ಪ್ರಥಮ ಪ್ರಯತ್ನವನ್ನು ಅಪೇಕ್ಷಿಸಿ, ಅನಂತರ ತದನುಗುಣವಾಗಿ ಪರಮಾತ್ಮನು ಅನು ಮತಿಯನ್ನು ಕೊಡುವನಾದುದರಿಂದ, ಶಾಸ್ತ್ರಗಳ ವಿಧಿನಿಷೇಧವಾಕ್ಯಗಳಾದ, ಸತ್ಯಂ ವದ, ನಾಹಿಂಸ್ಯಾತ್ ಇತ್ಯಾದಿಗಳಿಗೆ ವೈಯರ್ಥ್ಯವಿಲ್ಲವು. ಹಾಗಿಲ್ಲದೆ ಎಲ್ಲಾ ಪ್ರವೃತ್ತಿಗಳೂ ಪ್ರಾರಬ್ಧಾನುಗುಣವಾಗಿ ಪರಮಾತ್ಮಸಙ್ಕಲ್ಪಕ್ಕೆ ಅಧೀನವಾಬು ವಾದರೆ ಶಾಸ್ತ್ರಗಳ ವಿಧಿ ನಿಷೇಧವಾಕ್ಯಗಳ ವೈಯರ್ಥ್ಯವು ಪ್ರಾಪ್ತವಾಗುವದಲ್ಲದೆ, ಜೀವಾತ್ಮನ ಯತ್ನವಿಲ್ಲನೆ, ಪರಮಾತ್ಮಸಙ್ಕಲ್ಪರೀತ್ಯಾ ನಡೆಯುವದಕ್ಕೆ ಶಿಕ್ಷೆಯೆಂ ಬುದೂ ಸರಿಹೋಗುವದಿಲ್ಲವು ಯಾವಾಗ ಒಂದುಸಲ ಪಾಪಿಯಾದನೋ ಅವನು ಯಾವಾಗಲೂ ಪಾಪಿಯಾಗಿಯೇ ಆಗುವನೆಂದಾಗುತ್ತದೆ. ಆದುದರಿಂದ ಪ್ರಪ ನ್ನನು ತನಗಿರುವ ವಿವೇಕ ಬುದ್ಧಿಯಿಂದ ಯೋಚಿಸಿ, ಒಂದು ಕೆಲಸವನ್ನುಮಾಡು ವದು ಶಾಸ್ತ್ರವಿಹಿತವೋ, ಇಲ್ಲವೋ, ಅಕೃತ್ಯಕರಣ, ಕೃತ್ಯಾಕರಣ ದೋಷಗಳಿಗೆ ಸೇರಿದುದೋ,ಎಂದು ವಿವೇಕಿಸಿ ಪ್ರವೃತ್ತಿ ನಿವೃತ್ತಿಗಳನ್ನು ಆಚರಿಸಬಹುದು. ಇಷ್ಟು ಮಟ್ಟಿಗೆ ಆತನಿಗೆ ಸ್ವಾತಂತ್ರ್ಯವುಂಟೆಂದು ಸೂತ್ರವು ಬೋಧಿಸುತ್ತದೆ. ಆಕಾರಣ ದಿಂದಲೇ ಶ್ರೀ ನಿಗಮಾನ್ತದೇಶಿಕರವರು ನಿರಪರಾಧಿಯಾಗಿರುವದೂ ಸಾಧ್ಯವೆಂದೇ ತಿಳಿದೇ ನಿರಪರಾಧೇನ ವರ್ತಿತವ್ಯಂ ಕೃತಾತ್ಮನಾ ಎಂದು ಹೇಳಿರುತ್ತಾರೆ. ಈ ಅಭಿ ಪ್ರಾಯವನ್ನೇ ಮನಸ್ಸಿನಲ್ಲಿಟ್ಟು ಪ್ರಪನ್ನನು ವಿವೇಕಿಯಾದುದರಿಂದಲೇ, ಅಪರಾಧ ಪರಿಹಾರಾಧಿಕಾರಾಂತ್ಯದಲ್ಲಿ "ಧೀಪೂರ್ವೋತ್ತರಪಾಪ್ಮನಾ ಮಜನನಾತ್" ಬುದ್ಧಿ ಪೂರ್ವೋತ್ತರಾಘವು ಪ್ರಪನ್ನನಿಗೆ ಉಂಟಾಗುವದೇ ಇಲ್ಲವೆಂದು ಹೇಳಲ್ಪಟ್ಟಿತು. ಹೀಗೆ ಪ್ರಪನ್ನನಿಗೆ ಶಾಸ್ತ್ರಜನ್ಯವಿವೇಕಜನ್ಯಜ್ಞಾನಗಳ ಬಲವಿರುವದರಿಂದಲೇ, ಎನ್ನಡಿಯಾರ್ ಇದುಶೆಯ್ಯಾರ್" ಎಂದು ನಂಬಿಕೆಯಿಂದ ಹೇಳಲ್ಪಟ್ಟಿತು.

## ನಿರಪರಾಧೋತ್ತರಕೃತ್ಯಸಿದ್ಧಯೇ ಉಪಾಯದ್ವಯ ಮಾಹ.

**ಅಡಿಯಿಲೇ ನಿರಪರಾಧನಾಗವೇಣುಮೆನ್ರು ಕೋಲಿ ಪ್ರಪತ್ತಿ ಪಣ್ಣವನುಕ್ಕುಮ್, ಪಿನ್ಬು ಇದಕ್ಕಾಗ ಪ್ರಪತ್ತ್ಯನ್ತರಮ್ ಪಣ್ಣಿನವನುಕ್ಕುಮ್, ಉತ್ತರ ಕೃತ್ಯಂ ನಿರಪರಾಧಮಾಗವೇ ನಡಕ್ಕುಮ್.**

ಪ್ರಪನ್ನರಲ್ಲಿ ಇಂತಹ ಶಕ್ತಿಯನ್ನು ಕಂಡೇ, ಕುಲಶೇಖರಾಳ್ವಾರವರು ಅಸೂಯಾಗ್ರಸ್ತರಾದ ತನ್ನ ಮಂತ್ರಿಗಳ ಮುಂದೆ ಪ್ರಪನ್ನರು ನಿರಪರಾಧಿಗಳೆಂದು ಘಟಸರ್ಪವಿರುವ ಕುಂಭದಲ್ಲಿ ಬೆರಳನ್ನಿಟ್ಟು ಪ್ರಮಾಣಮಾಡಿದರು. ಅನಂತರ ಆ ಮಂತ್ರಿಗಳನ್ನು ಕರೆದು ಅವರು ಅಪರಾಧಿಗಳೆಂದು ನೀವು ಬೆರಳನ್ನಿಡಿ ಎಂದರೆ ಅವರು ಆಗ ಹಿಂತೆಗೆದರೆಂಬ ಇತಿಹಾಸವುಂಟು. ಹೀಗೆ ತನ್ನ ಶಾಸ್ತ್ರಜನ್ಯಜ್ಞಾನ, ವಿವೇಕಜನ್ಯಜ್ಞಾನಗಳಿಂದ ಉತ್ತರ ಕಾಲದಲ್ಲಿ ನಿರಪರಾಧಿಯಾಗಿರಲು ಸಾಧ್ಯವು. ಒಂದುವೇಳೆ ಪ್ರಾರಬ್ಧಕರ್ಮವು ಬಲಿಷ್ಠವಾಗಿ ಬುದ್ಧಿಪೂರ್ವಕವಾಗಿ ನಿಷಿದ್ಧ ಕರ್ಮದಲ್ಲಿ ಪ್ರವೃತ್ತಿಯನ್ನುಂಟು ಮಾಡಬಹುದು; ಅಂತಹ ಪ್ರವೃತ್ತಿಯುಂಟಾಗದಹಾಗೂ, ಒಂದುವೇಳೆ ಉಂಟಾದರೆ ಅದರಿಂದ ಪ್ರತ್ಯವಾಯ ಉಂಟಾಗದಹಾಗೂ, ಉತ್ತರ ಕೃತ್ಯಗಳಲ್ಲಿ ನಿರತನಾಗಿರಲು ಮಾಡುವ ಉಪಾಯಗಳು ಯಾವುವು ಎಂಬ ವಿಮರ್ಶೆಯಲ್ಲಿ ಎರಡೇ ಉಪಾಯಗಳೆಂದು, "ಅಡಿಯಿಲೇ" ಎಂದಾರಂಭಿಸಿದ ವಾಕ್ಯಮೂಲಕ ಉಪದೇಶಿಸುತ್ತಾರೆ.

**ನಿರಪರಾಧವಾದ ಉತ್ತರಕೃತ್ಯದ ಸಿದ್ಧಿಗಾಗಿ ಮಾಡತಕ್ಕ ಉಪಾಯಗಳೆರಡೆಂದು ತಿಳಿಸುತ್ತಾರೆ.**

**ಅಡಿಯಿಲೇ** - ಪ್ರಥಮದಲ್ಲೇ ಎಂದರೆ ಮೋಕ್ಷಾರ್ಥವಾಗಿ ಮಾಡಿದ ಪ್ರಥಮ ಪ್ರಪದನಕಾಲದಲ್ಲೇ, **ನಿರಪರಾಧನಾಗ ವೇಣುಮೆನ್ರು ಕೋಲಿ** - ಪ್ರಾರಬ್ಧಕರ್ಮಾನುಗುಣವಾಗಿ ಬುದ್ಧಿಪೂರ್ವಾಘಗಳು ಯಾವುವೂ ಸಿದ್ಧಿಸದಿರಲೆಂದು ಪ್ರಾರ್ಥಿಸಿ, **ಪ್ರಪತ್ತಿ ಪಣ್ಣವನುಕ್ಕುಮ್** - ಪ್ರಪದನಾನುಷ್ಠಾನವನ್ನು ಮಾಡಿದವನಿಗೂ, ಇದೊಂದು ಉಪಾಯವು, ಅಥವಾ **ಪಿನ್ಬು** - ಅನಂತರದಲ್ಲಿ, **ಇದಕ್ಕಾಗ** ಎಂದರೆ ನಿರಪರಾಧನಾಗುವದಕ್ಕಾಗಿ, **ಪ್ರಪತ್ತ್ಯನನ್ತರಮ್** - ರಕ್ಷಾಭರ ಸಮರ್ಪಣ ರೂಪ ಪ್ರಪದನವಾದನಂತರ, **ಪಣ್ಣಿನವನುಕ್ಕುಮ್** - ಪುನಃ ಪ್ರಪದನವನ್ನು ಮಾಡಿದವನಿಗೂ, ಉತ್ತರಕೃತ್ಯವು, **ನಿರಪರಾಧಮಾಗವೇ**-ಬುದ್ಧಿಪೂರ್ವಾಪರಾಧಗಳು ಯಾವುವೂ ಇಲ್ಲದೇ, **ನಡಕ್ಕುಮ್** - ನಡೆಯುತ್ತದೆ. (೧) ಬುದ್ಧಿ ಪೂರ್ವೋತ್ತರಾಘಗಳೂ, ಪ್ರಾರಬ್ಧದಿಂದ ಉಂಟಾಗುವ ಅಪರಾಧಗಳೂ ಸಹ ಪ್ರಾಪ್ತವಾಗದೇ ಇರುವದಕ್ಕಾಗಿ, ಪ್ರಥಮ ಪ್ರಪದನದೊಂದಿಗೆ ಇವುಗಳನ್ನೂ

ಸೇರಿಸಿ ಸಙ್ಕಲ್ಪಿಸಬಹುದು. (೨) ಅಥವಾ ಇದಾದನಂತರವೂ ಅದಕ್ಕಾಗಿಯೇ ಪುನಃ ಪ್ರಸದನವನ್ನು ಮಾಡಿದರೆ, ಬುದ್ಧಿಪೂರ್ವೋತ್ತರಾಘಗಳು ಯಾವುವೂ ಪ್ರಾಪ್ತವಾಗದೆ, ಉತ್ತರಕೃತ್ಯಗಳೆಲ್ಲಾ ಶಾಸ್ತ್ರವಿಹಿತವಾಗಿರುವಹಾಗೆ ನಡೆಯುತ್ತವೆ ಎಂದು ಉಪದೇಶಿಸಿದರು. ಪ್ರಾರಬ್ಧ ಕರ್ಮದ ಪ್ರಾಬಲ್ಯಾನುಸಾರವಾಗಿ ಪ್ರಪನ್ನನಿಗೂ ಬುದ್ಧಿಪೂರ್ವಕಗಳಾದ ಉತ್ತರಾಘಗಳು ಪ್ರಾಪ್ತವಾಗುತ್ತವೆ ಎಂದು ತಟಸ್ಥನಾಗಿರಕೂಡದು. ಅವುಗಳಿಂದ ತಪ್ಪಿಸಿಕೊಳ್ಳಲು ಯತ್ನಿಸಿ, ಮೇಲೆ ಹೇಳಿದ ಎರಡು ವಿಧಗಳಾದ ಉಪಾಯಗಳಲ್ಲಿ ಯಾವುದಾದರೂ ಒಂದನ್ನು ಅವಲಂಬಿಸಿದರೆ ಉತ್ತರಾಘಗಳು ಪ್ರಾಪ್ತವಾಗುವದಿಲ್ಲವೆಂದು ಹಿತೋಪದೇಶವನ್ನು ಮಾಡಿರುತ್ತಾರೆ. ಇದನ್ನು ವಿಮರ್ಶಿಸಿ ತಿಳಿಯದ ಪ್ರತಿಕಕ್ಷಿಯವರು, ತಮ್ಮನ್ನು ಈ ಸಂದರ್ಭಗಳಲ್ಲಿ ನಿಂದಿಸಿರುತ್ತಾರೆಂದು ಅಭಿಪ್ರಾಯಪಡುವರು. ಆದರೆ ಪ್ರಾಜ್ಞರಾದವರು ಹಿತೋಪದೇಶವೆಂದೇ ಭಾವಿಸಿ, ಕೃತಜ್ಞತಾಪೂರ್ವಕವಾಗಿ ನಡೆದುಕೊಂಡಿರುವದನ್ನು ಕಂಡಿರುವೆವು.

ಹಿರಣ್ಯಕಶಿಪು, ರಾವಣ, ಶಿಶುಪಾಲಾದಿಗಳು ಯಾವಾಗಲೂ ಬುದ್ಧಿಪೂರ್ವಕವಾಗಿಯೇ ಅಪರಾಧಗಳನ್ನು ಮಾಡಿದ್ದರೂ ಭಗವಂತನು ರಕ್ಷಿಸಲಿಲ್ಲವೇ? ಘಂಟಾಕರ್ಣನೂ ಹಾಗೆಯೇ ಅಪರಾಧಿಯಾಗಿದ್ದರೂ ರಕ್ಷಿಸಲ್ಪಡಲಿಲ್ಲವೇ? ಎಂಬ ಇತಿಹಾಸಗಳನ್ನು ಮೂಲಮಾಡಿಕೊಂಡು, ಅವರುಗಳು ಕ್ಷಮಿಸು ಎಂಬ ಪ್ರಾರ್ಥನೆಕೂಡಾ ಇಲ್ಲದೆ ಹೇಗೆ ರಕ್ಷಿಸಲ್ಪಟ್ಟರೋ, ಹಾಗೆಯೇ ಪ್ರಪನ್ನನೂ ಸಹ ಕೃತ್ಯಾಕರಣ, ಅಕೃತ್ಯಕರಣ ರೂಪ ಅಪರಾಧಗಳನ್ನು ಮಾಡಿದರೂ ಕ್ಷಮಿಸಿಬಿಡುವನು ಎಂಬ ವಾದಕ್ಕೆ ಸಮಾಧಾನವನ್ನು ಹೇಳುತ್ತಾರೆ.—ಆಯಾ ಪ್ರಕರಣಗಳ ಅಭಿಪ್ರಾಯ ತಿಳಿಯದೆ ಮಾಡುವ ವಾದವೆಂದುಹೇಳುತ್ತಾರೆ—ಶಿಶುಪಾಲಾದಿವಿಷಯದಲ್ಲಿ ಶಾಪಪ್ರಯುಕ್ತವಾಗಿ ಬಂದುದು ವಿರುದ್ಧಾಚರಣೆಯು; ಜಯವಿಜಯರು ಪರಮ ಭಕ್ತರೇ; ಆದುದರಿಂದ ಮೂರುಜನ್ಮಗಳು ಕಳೆದನಂತರ ಅವರು ಗ್ರಾಹ್ಯರೇ ಸರಿ. ಘಂಟಾಕರ್ಣನು ಶಾಪದಿಂದ ಪಿಶಾಚನಾಗಿ ನಾರಾಯಣ ಶಬ್ದವು ಕಿವಿಗೆ ಬೀಳಕೂಡದೆಂದು ಘಂಟೆಯನ್ನು ಬಾರಿಸುತ್ತಾ ವಿಷ್ಣುದ್ವೇಷಿಯಾಗಿದ್ದರೂ, ರುದ್ರನಿಂದ ಪ್ರೇರಿತನಾಗಿ ಕೊನೆಗೆ ವಿಷ್ಣುವಿನಲ್ಲಿ ಶರಣಾಗತಿಯೊಂದಿಗೆ ಧ್ಯಾನಮಾಡಿ ಮೋಕ್ಷವನ್ನು ಹೊಂದಿದನು. "ಮುಕ್ತಿಪ್ರದಾತಾ ಸರ್ವೇಷಾಂ ವಿಷ್ಣುರೇವ ನ ಸಂಶಯಃ" ಎಂಬ ರುದ್ರೋಕ್ತಿಯು ಇರುತ್ತದೆ. (ಹರಿವಂಶ. ಘಂಟಾಕರ್ಣ ವೃತ್ತಾಂತ ಭವಿಷ್ಯ. ೮೦-೩೦.)

ಮುಂದೆ ಇತಿಹಾಸಗಳಲ್ಲೂ ಬುದ್ಧಿ ಪೂರ್ವೋತ್ತರಾಘಗಳಿಗಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಂಡಿದುದಕ್ಕೆ ನಿದರ್ಶನ ಉಂಟೆಂದು ನಿದರ್ಶನಗಳನ್ನು ಪ್ರದರ್ಶಿಸುತ್ತಾರೆ.

## ಅಪರಾಧ ಕ್ಷಾಪಣಸ್ಯಾವಶ್ಯ ಕರ್ತವ್ಯತ್ವೇ ಇತಿಹಾಸ ಪ್ರದರ್ಶನಮ್.

ಇತಿಹಾಸಪುರಾಣಙ್ಗಳಿಲ್ ಶಿಲವೃತ್ತಾಂತ ದರ್ಶನಮಾತ್ರತ್ತೈಕೊಂಡು ವಚನವಿರೋಧತ್ತೈ ಅನಾದರಿತ್ತು, ಭಾಗವತನುಡೈಯ ಬುದ್ಧಿಪೂರ್ವೋತ್ತರಾಘಮ್ ಕ್ಷನ್ತವ್ಯಮೆನ್ರು ಶಿಲರ್ ಶೊಲ್ಲುವರ್‍ಗಳ್ ; ಇದುವುಮ್ ಅವ್ವೋ ಪ್ರಕರಣಙ್ಗಳಿಲ್ ಅಭಿಪ್ರಾಯ ಮರಿಯಾಮಲ್ ವನ್ದದು.

ಮಹಾರಾಜರ್ಕ್ಕು ಮುಳ್‌ಪಡ ಸಮಯಾತಿಲಂಘನಮಾತ್ರಮಾನ ಅಪರಾಧಮ್ ಪೆರುಮಾಳ್ ತಿರುವುಳ್ಳತ್ತಿಲೇ ಶೋಕಾಭಿಭವತ್ತಾಲೇ ಪ್ರತಿ

---

## ಅಪರಾಧಕ್ಕಾಗಿ ಕ್ಷಮಾಪಣೆಯ ಆವಶ್ಯಕತೆಯನ್ನು ಪ್ರದರ್ಶಿಸುವ ನಿದರ್ಶನವು.

ಇತಿಹಾಸ ಪುರಾಣಗಳಲ್ಲಿ, ಶಿಲವೃತ್ತಾನ್ತದರ್ಶನ ಮಾತ್ರತ್ತೈಕ್ಕೊಂಡು-ಶಿಶುಪಾಲ ಘಂಟಾಕರ್ಣಾದಿ ವೃತ್ತಾಂತಗಳ ಆಪಾತ ಪ್ರತೀತಿಯನ್ನು ಮಾತ್ರ ಗ್ರಹಿಸಿ ಎಂದರೆ ಮೇಲೆ ಮೇಲೆ ತೋರುವದನ್ನು ಮಾತ್ರ ಗ್ರಹಿಸಿ, ವಚನವಿರೋಧತ್ತೈ ಅನಾದರಿತ್ತು - "ಮನೀಷೀ ವೈದಿಕಾಚಾರಂ ಮನಸಾಪಿ ನ ಲಂಘಯೇತ್" ಎಂಬ ಮತ್ತು "ಆಪಾಯ ಸಂಪ್ಲವೇ ಸದ್ಯಃ ಪ್ರಾಯಶ್ಚಿತ್ತಂ ಸಮಾಚರೇತ್" ಇತ್ಯಾದಿ ಶಾಸ್ತ್ರಪ್ರಮಾಣ ವಚನಕ್ಕೆ ವಿರೋಧ ಉಂಟಾಗುತ್ತದೆಂಬುದನ್ನು ನಿರಾಕರಿಸಿ, ಭಾಗವತನುಡೈಯ - ಪ್ರಪನ್ನನ, ಬುದ್ಧಿಪೂರ್ವೋತ್ತರಾಘಮ್ ಕ್ಷನ್ತವ್ಯಮೆನ್ರು-ಬುದ್ಧಿಪೂರ್ವೋತ್ತರಾಘವು ಸರ್ವೇಶ್ವರನಿಂದ ಕ್ಷಮಿಸಿ ಬಿಡಲು ಯೋಗ್ಯವೆಂದು ಶಿಲರ್‌ಶೊಲ್ಲುವರ್‍ಗಳ್-ಕೆಲವರು ಹೇಳುವರು, ಇದುವುಮ್-ಈ ಅಭಿಪ್ರಾಯವೂ ಸಹ, ಅವ್ವೋಪ್ರಕರಣಙ್ಗಳಿಲ್ - ಆಯಾಯಾ ವೃತ್ತಾಂತಪ್ರಕರಣಗಳಲ್ಲಿನ, ಅಭಿಪ್ರಾಯ ಮರಿಯಾಮಲ್ ವನ್ದದು-ವಿಮರ್ಶಿಸಿ ತಿಳಿಯಬೇಕಾದ ಅಭಿಪ್ರಾಯದ ಸರಿಯಾದ ಜ್ಞಾನಾಭಾವ ಮೂಲಕವಾಗಿ ಉಂಟಾದುದು. ಶಿಶುಪಾಲ, ಘಂಟಾಕರ್ಣರು ಅಪರಾಧಿಗಳಾಗಿ ತೋರಿದರೂ ರಕ್ಷಿಸಲ್ಪಡಲು ಕಾರಣವೇನು ಎಂದು ವಿಮರ್ಶಿಸಿ ತಿಳಿಯದೆ ಮಾಡುವವಾದವು ಎಂಬಭಿಪ್ರಾಯವು. ಮುಂದೆ ಇತಿಹಾಸಗಳಲ್ಲಿ ತುಂಬಾ ಭಗವತ್ಪ್ರೀತಿಗೆ ಒಳಪಟ್ಟವರೂ ಕೂಡ ಬುದ್ಧಿಪೂರ್ವೋತ್ತರಾಘಗಳಿಗಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಂಡ ಸಂದರ್ಭಗಳನ್ನು ತಿಳಿಸುತ್ತಾರೆ.—

ಮಹಾರಾಜರ್ಕ್ಕು - ಸುಗ್ರೀವನಾದ ವಾನರ ರಾಜನಿಗೆ, ಮುಳ್‌ಪಡ ಸಮಯಾತಿಲಂಘನಮಾತ್ರಮಾನ ಅಪರಾಧಂ - ವರ್ಷರ್ತುವಾಗಿರುವದರಿಂದ ಸೀತಾನ್ವೇಷಣಕ್ಕೆ ಅನುಕೂಲವಿಲ್ಲವೆಂದು "ಚತ್ವಾರೋವಾರ್ಷಿಕಾ ಮಾಸಾಃ"

**ಭಾಸಿತ್ತು(೧)ನ ಚ ಸಙ್ಕುಚಿತಃ ಪನ್ಥಾ ಏನ ವಾಲೀ ಹತೋ ಗತಃ । ಸಮಯೇ ತಿಷ್ಠ ಸುಗ್ರೀವ ಮಾವಾಲಿಪಥ ಮನ್ವಗಾಃ"ಎನ್ರರುಳಚ್ಚೆಯ್ಯಕ್ಕೇಟ್ಟ್ಯ ಇಳೈಯ ಪೆರುಮಾಳ್, ಪೆರುಮಾಳ್ ತಾಮೇ ತಣಿಯ ವಿಡ ವೇಣ್ಡುಮ್ಪಡಿ ಶೀರಿ ಯರುಳಿ ಕಿಷ್ಕಿಂಧೈಯಿಲೇ (ಶೊಲ್ಲ) (೨)"ಕೃತಾಪರಾಧಸ್ಯ ಹಿತೇ ನಾನ್ಯತ್ಪ**

---

(ರಾ. ಕಿ. ೩೦. ೬೪) ನಾಲ್ಕು ತಿಂಗಳ **ಕಾ**ಲವನ್ನು ಅತಿಕ್ರಮಣರೂಪಮಾತ್ರವಾದ ಅಪರಾಧವು, **ಪೆರುಮಾಳ್ ತಿರುವುಳ್ಳತ್ತಿಲೇ** - ಭಗವಂತನಾದ ಶ್ರೀರಾಮನ ಮನಸ್ಸಿನಲ್ಲಿ, **ಶೋಕಾಭಿಭವತ್ತಾಲೇ ಪ್ರತಿಭಾಸಿತ್ತು** - **"ಚತ್ವಾರೋ ವಾರ್ಷಿಕೋ ಮಾಸಾ ಗತಾ ವರ್ಷಶತೋಪಮಾಃ । ಮಮ ಶೋಕಾಭಿಭೂತಸ್ಯ ಸೌಮ್ಯ ಸೀತಾಮಪಶ್ಯತಃ"** (ರಾ. ಕಿ. ೩೦. ೬೪ ) ಎಂದು ಹೇಳಿರುವ **ಕಾಲಾತಿ ಲಂಘನವಾಡಿವ ಅಲ್ಪಾಪರಾಧವು** ಸೀತೆಯನ್ನು ಕಾಣದೆ ವಿರಹತಾಪದಿಂದಿರುವ **ಸ್ವಾಮಿಗೆ, ನಾಲ್ಕು ತಿಂಗಳೂ** ವರ್ಷ ಶತಗಳಿಗೆ ಸಮಾನವಾಗಿ **ತೋ**ರಿದುದರಿಂದ, ತುಂಬಾ ಶೋಕಪಾರವಶ್ಯದಿಂದ, **ಪ್ರತಿಭಾಸಿತ್ತು** - ಹೆಚ್ಚಾದುದಾಗಿ ತೋರಿ, (ತನ್ನ ತಮ್ಮನಾದ ಲಕ್ಷ್ಮಣನನ್ನು ಕುರಿತು ನೀನು ಹೋಗಿ ಸುಗ್ರೀವನಿಗೆ ಹೇಳ ತಕ್ಕದ್ದು ಏನು ಎಂದರೆ) "ಹೇ ಸುಗ್ರೀವನೇ, **ಏನವಾಲೀ ಗತೋ ಹತಃ** - ವಾಲಿಯಾದವನು ನನ್ನಿಂದ ಒಂದೇ ಬಾಣದಿಂದ **ಹೊಡೆಯಲ್ಪಟ್ಟು** ಮರಣಹೊಂದಿ ಯಾವ **ಮಾರ್ಗ**ದಿಂದ ಹೊರಟುಹೋದನೋ, **ನಚಸಙ್ಕುಚಿತಃ ಪನ್ಥಾಃ**- ಅದೇನು ಸಣ್ಣದಾರಿಯಲ್ಲವು, ನಿನ್ನನ್ನೂ ಹಿಡಿಸಬಲ್ಲದು ಎಂಬಭಾವವು, ನೀನೂ ಕೂಡ ಒಂದೇ ಬಾಣದಿಂದ **ಹತ**ನಾಗಲು ಯೋಗ್ಯನೆಂಬರ್ಥವು, ಆದುದರಿಂದ **ಸಮಯೇ ತಿಷ್ಠ** - **ಮಾಡಿದ** ಪ್ರತಿಜ್ಞೆಯಲ್ಲಿ ನಿಲ್ಲು, **ಮಾವಾಲಿಪಥ ಮನ್ವಗಾಃ** - ವಾಲಿ ಹೋದ ಮಾರ್ಗವನ್ನು ನೀನೂ ಅನುಸರಿಸಿ ಹೋಗಬೇಡ," **ಎನ್ರರುಳಚ್ಚೆಯ್ಯ** - ಎಂದು ಅಪ್ಪಣೆ ಕೊಡಿಸಲಾಗಿ, **ಕೇಟ್ಟು** - ಅವನ್ನು ಕೇಳಿ, **ಇಳೈಯ ಪೆರುಮಾಳ್**- ಲಕ್ಷ್ಮಣನು, **ಪೆರುಮಾಳ್ ತಾಮೇತಣಿಯ ವಿಡವೇಣ್ಡುಮ್ಪಡಿ** - ಭಗವಂತನಾದ ಶ್ರೀರಾಮನು ತಾನೇ ಕೋಪಸಮಾಧಾನವನ್ನು ಹೇಗೆ ಹೊಂದಬೇಕೋ ಹಾಗೆ, **ಶೀರಿ ಅರುಳಿಕಿಷ್ಕಿಂಧೈಯಿಲೆ ಶೊಲ್ಲ** - ಕೋಪಗೊಂಡು ಕಿಷ್ಕಿಂಧೆಗೆ ಹೋಗಿ, ಹೇಳಲಾಗಿ, (ಆಗ ಸುಗ್ರೀವನು ಏನುಮಾಡಬೇಕೆಂದು ತೋರದೆ ಭಯಶಂಕಿತನಾಗಿ ತನ್ನ ಪ್ರಾಜ್ಞನಾದ ಸಚಿವನಾದ ಆಂಜನೇಯನಲ್ಲಿ ಆಲೋಚನೆಮಾಡಲು, ಆಗ ಆಂಜನೇಯನು ಒಂದು ಒಳ್ಳೇ ಉಪಾಯವನ್ನು ತಿಳಿಸುತ್ತಾನೆ; ಏನೆಂದರೆ) (೨) **ಕೃತಾಪರಾಧಸ್ಯ**- ಪ್ರತಿಜ್ಞೆಯನ್ನು ಮೀರಿದುದರಿಂದ ನಿರ್ಘೃಣನೆಂಬ ಅಪರಾಧವನ್ನು ಹೊಂದಿದ,

---

(೧) ರಾ.ಕಿ. ೩೦. ೮೧. (೨) ರಾ. ಕಿ. ೩೨-೧೭.

ಶ್ಯಾಮ್ಯ ಹಂ ಕ್ಷಮಂ। ಅಂತರೇಣಾಂಜಲಿಂ ಬಧ್ವಾ ಲಕ್ಷ್ಮಣಸ್ಯ ಪ್ರಸಾದನಾತ್" ಎನ್ರು ಐಂದ್ರ ವ್ಯಾಕರಣ ಪಂಡಿತ್ರ್ ಮಹಾರಾಜರ್ಕ್ಕು ಉಪದೇಶಿತ್ತಾನಿರೇ. ಅನ್ವಳವಿಲ್ ಮಹಾರಾಜರುಮಿಶೈನ್ದು,(೩)"ಯದಿಕಿಞ್ಚಿದತಿಕ್ರಾನ್ತಂ ವಿಶ್ವಾಸಾತ್ಪ್ರಣಯೇನವಾ। ಪ್ರೇಷ್ಯಸ್ಯ ಕ್ಷಮಿತವ್ಯಂ ಮೇ ನ ಕಶ್ಚಿನ್ನಾಪರಾಧ್ಯತಿ"

ತೇ-ನಿನಗೆ ಅಹಂ-ಹಿತಚಿಂತಕನಾದ ನಾನು, ಅಂಜಲಿಂ ಬಧ್ವಾ "ಅಂಜಲಿಃ ಪರಮಾ ಮುದ್ರಾಕ್ಷಿಪ್ರಂ ದೇವಪ್ರಸಾದಿನೀ"ಎಂದು ಹೇಳಿರುವ ಹಾಗೆ,ಅಂಜಲಿಮಾಡಿ ಎಂದರೆ ಕೈಯನ್ನು ಮುಗಿದುಕೊಂಡ, ಲಕ್ಷ್ಮಣಸ್ಯ ಪ್ರಸಾದನಾತ್ ಅಂತರೇಣ – ಶ್ರೀ ರಾಮಭಕ್ತನಾಗಿರುವ ಲಕ್ಷ್ಮಣನನ್ನು ಪ್ರಸನ್ನನಾಗಿ ಮಾಡಿಕೊಳ್ಳುವದನ್ನು ಬಿಟ್ಟು, ಭಗವದಪರಾಧಕ್ಕೆ ಭಾಗವತ ಕ್ಷಮಾಪಣೆಯೇ ಪ್ರಾಯಶ್ಚಿತ್ತವಾದುದರಿಂದ, ಅದನ್ನು ಬಿಟ್ಟು ಎಂಬ ಭಾವವು, ಅನ್ಯತ್-ಬೇರೆ, ಕ್ಷಮಂ-ಯೋಗ್ಯವಾದ ಉಪಾಯವನ್ನು,ನಪಶ್ಯಾಮಿ-ನಿನಗೆ ಕಾಣೆನು, ಹಿ – ಇದು ಸತ್ಯವಾದ ವಿಷಯವು, ಎಂದರೆ ಶ್ರೀ ರಾಮ ಪ್ರಸನ್ನತೆಯನ್ನು ಸಂಪಾದಿಸಿಕೊಳ್ಳಬೇಕೆಂಬ ನಿನಗಿಷ್ಟವಿದ್ದರೆ, ಈಗ ಅತಿಕೋಪಗೊಂಡು ಬಂದಿರುವ ಆತನ ಪರಮ ಭಕ್ತನಾದ ಲಕ್ಷ್ಮಣನಲ್ಲಿ ಅಂಜಲಿಯನ್ನು ಮಾಡಿ ಆತನ ಪ್ರಸನ್ನತೆಯನ್ನು ಸಂಪಾದಿಸಿಕೊಳ್ಳುವದಕ್ಕಿಂತ ಬೇರೆ ಉಪಾಯವು ತನಗೆ ತೋಚುವದಿಲ್ಲವೆಂಬ ಭಾವವು" ಎನ್ರು – ಹೀಗೇ ಐಂದ್ರವ್ಯಾಕರಣ ಪಂಡಿತ್ರ್-ಇಂದ್ರವ್ಯಾಕರಣ ಶಾಸ್ತ್ರಜ್ಞನಾಗಿ, ಆ ಕಾರಣದಿಂದ ಮಹಾ ಪ್ರಾಜ್ಞನಾದ ಆಂಜನೇಯನು,ಮಹಾರಾಜರ್ಕ್ಕು-ರಾಜನಾದ ಸುಗ್ರೀವನಿಗೆ, "ಸುಗ್ರೀವಂ ನಾಥ ಮಿಚ್ಛತಿ" ಎಂಬಲ್ಲಿ ತೋರಿಬರುವಹಾಗೆ ಶ್ರೀರಾಮನಿಂದ ರಾಜನಾಗಿ ಮಾಡಲ್ಪಟ್ಟಿರುವದರಿಂದ ಹಾಗೆ ಪ್ರಯೋಗವು, ಉಪದೇಶಿತ್ತಾನಿರೇ - ಉಪದೇಶಿಸಿದನಲ್ಲವೇ. ಅನ್ವಳವಿಲ್ - ಆರೀತಿಯಲ್ಲೇ, ಮಹಾರಾಜರ್ - ರಾಜನಾದ ಸುಗ್ರೀವನೂ, ಇಶೈನ್ದು - ತನ್ನ ಸಚಿವನಾದ ಆಂಜನೇಯನ ಹಿತೋಪದೇಶವನ್ನು ಅಂಗೀ ಕರಿಸಿ, (ಲಕ್ಷ್ಮಣನ ಕ್ಷಮಾಪಣೆಯನ್ನು ಪ್ರಾರ್ಥಿಸಿದನೆಂದುಮುಂದೆ ಹೇಳುತ್ತಾರೆ) (೩) "ವಿಶ್ವಾಸಾತ್-ತುಂಬಾ ವಿಶ್ವಾಸವು ಶ್ರೀರಾಮನಿಗೆ ನನ್ನಲ್ಲುಂಟು ಎಂಬುದರಿಂದ ಅಪ್ರಮತ್ತನಾಗಿಯೂ, ಮತ್ತು ಪ್ರಣಯೇನಚ - ಸಮ ಮಿತ್ರತೆ ಭಾವನೆಯಿಂದಲೂ ಸಹ, ಕಿಂಚಿತ್-ಸ್ವಲ್ಪಮಟ್ಟಿಗೆ, ಅತಿಕ್ರಾನ್ತಂ ಯದಿ - ಅತಿಕ್ರಮಣವಾಗಿದ್ದರೆ, ಪ್ರೇಷ್ಯಸ್ಯ - ನಿನಗೂ ಶ್ರೀರಾಮನಿಗೂ ಸಹ ದಾಸ ಭೂತನಾದ ಮೇ-ನನ್ನ, ಅಪರಾಧವು, ಕ್ಷಮಿತವ್ಯಂ-ಕ್ಷಮಿಸಲ್ಪಡತಕ್ಕದ್ದು, ಏಕೆಂದರೆ ಕಶ್ಚಿದಪಿ - ಯಾವನೊಬ್ಬನೇಯಾಗಲಿ ಅಪರಾಧ್ಯತೀತಿನ-ಈ ಲೋಕದಲ್ಲಿ ಅಪರಾಧಮಾಡುವ

(೩) ರಾ. ಕಿಷ್ಕಿಂ. ೩೬. ೧೧.

ಎನ್ರು ವಿಣ್ಣಪ್ಪಂ ಶೆಯ್ಯವೇಣ್ಡಿತ್ತು; ಅಪ್ಪೋದು ಇಳೈಯ ಪೆರುಮಾಳುಕ್ಕುಮ್, ತಾಮ್ ಮಿಗುದಿಯಾಗ ಚೊನ್ನ ವಾರ್ತ್ತೈಗಳುಕ್ಕು (೪) ಯಚ್ಚ ಶೋಕಾಭಿಭೂತಸ್ಯ ಶ್ರುತ್ವಾ ರಾಮಸ್ಯ ಭಾಷಿತಮ್ । ಮಯಾತ್ವಂ ಪರುಷಾಣ್ಯುಕ್ತಸ್ತಚ್ಚ ತ್ವಂ ಕ್ಷನ್ತುಮರ್ಹಸಿ" ಎನ್ರುಕ್ಷಮೈ ಕೊಳ್ಳವೇಣ್ಡಿತ್ತು.

ದಿಲ್ಲವೆಂಬುದು ಇಲ್ಲವಷ್ಟೇ. ಸಂಸಾರಿಗಳಾಗಿ ಈ ಲೋಕದಲ್ಲಿರುವವರೆಲ್ಲಾ ಅಪರಾಧಿಗಳೇ ಎಂಬರ್ಥವು; ಅಪರಾಧಿಯಲ್ಲದಿದ್ದರೆ ಈ ಲೋಕದ ಬಂಧವನ್ನನುಭವಿಸುವದಕ್ಕೆ ಯಾರೂ ಬರುತ್ತಲೇ ಇರಲಿಲ್ಲವೆಂಬ ಭಾವವು. ಹೀಗೆ ಸರ್ವರೂ ಅಪರಾಧಿಗಳಾಗಿರುವಾಗ, ಕ್ಷಮಿಸು ಎಂದು ಬೇಡಿದವನನ್ನಾಗಲಿ ಕ್ಷಮಿಸದಿದ್ದರೆ, ನೀನುಉದಾರನೆನಿಸಿ ಕ್ಷಮೆಯನ್ನು ತೋರಲು ನಿನಗೆ ಯಾರೂ ಇಲ್ಲವಾಗುತ್ತದೆಂಬ ತಾತ್ಪರ್ಯವು. ಇದು ಬುದ್ಧಿ ಪೂರ್ವಕವಾದ ಅಪರಾಧವಲ್ಲವೆಂದು ವಿಶ್ವಾಸದಿಂದಲೂ ಪ್ರಣಯಎಂದಲೂ ಭಾವಿಸಿದ್ದೆನು ಬುದ್ಧಿಪೂರ್ವಕವಾದ ಅಪರಾಧವೇ ಎಂದು ನೀನು ಭಾವಿಸುವದಾದರೆ, ಅದಕ್ಕೆ ಪ್ರಾಯಶ್ಚಿತ್ತರೂಪದಲ್ಲಿ ಅಂಜಲಿಬದ್ಧನಾಗಿ ಕ್ಷಮಿಸು ಎಂದು ಪ್ರಾರ್ಥಿಸಿರುತ್ತೇನೆಯಾದುದರಿಂದ ನೀನು ಕ್ಷಮಿಸಲೇ ಬೇಕು ಎಂಬ ತಾತ್ಪರ್ಯವು" ಎನ್ರು ಎಂಬದಾಗಿ, ವಿಣ್ಣಪ್ಪಂ ಶೆಯ್ಯ ವೇಣ್ಡಿತ್ತು - ವಿಜ್ಞಾಪಿಸಿಕೊಳ್ಳಬೇಕಾಗಿ ಪ್ರಾಪ್ತವಾಯಿತು. ಇದರಿಂದ ಬುದ್ಧಿ ಪೂರ್ವೋತ್ತರಾಘಕ್ಕೆ ಪ್ರಾಯಶ್ಚಿತ್ತವೂ ಆವಶ್ಯಕವೆಂಬ ಭಾವವು, ಶೆಯ್ಯವೇಣ್ಡಿತ್ತು ಎಂಬ ಪ್ರಯೋಗದಿಂದ ಪ್ರದರ್ಶಿತವು. ಲಕ್ಷ್ಮಣನೂ ಸಹ, ಮಹಾ ಭಾಗವತನಾದ ಸುಗ್ರೀವನನ್ನು ಮಹಾ ಕ್ರೂರವಾಗಿ ನಿಂದಿಸಿದ್ದನು; ಯಾವಾಗ ಸುಗ್ರೀವನು ಕ್ಷಮಾಪಣೆಯನ್ನು ಕೇಳಿಕೊಂಡನೋ ಆಗ ತನ್ನ ಅಪರಾಧಕ್ಕಾಗಿ, ಸುಗ್ರೀವನ ಕ್ಷಮಾಪಣೆಯನ್ನು ಲಕ್ಷ್ಮಣನು ಪ್ರಾರ್ಥಿಸುತ್ತಾನೆಂದು ಸಪ್ರಮಾಣವಾಗಿ ತಿಳಿಸುತ್ತಾರೆ. - ಅಪ್ಪೋದು - ಆವಾಗ ಎಂದರೆ ಸುಗ್ರೀವನು ಕ್ಷಮಾಪಣೆಯನ್ನು ಬೇಡಿದನಂತರ, ಇಳೆಯ ಪೆರುಮಾಳುಕ್ಕುಮ್ - ಶ್ರೀಲಕ್ಷ್ಮಣನಿಗೂ, ತಾಮ್ ಮಿಗುದಿಯಾಗ - ತಾವು ಮಿತಿಮೀರಿ, ಚೊನ್ನವಾರ್ತ್ತೈಗಳುಕ್ಕುಮ್ - "ಕೋ ನೃಶಂಸ ತರಃ" ಎಂದೂ "ಅನಾರ್ಯಸ್ತ್ವಂ ಕೃತಘ್ನಶ್ಚ ಮಿಥ್ಯಾವಾದೀಚ ವಾನರ" ಎಂದೂ "ತ್ವಂದುರಾತ್ಮ" ಎಂದೂ, ಹೀಗೆಲ್ಲಾ ನಿಂದಿಸಿ ಹೇಳಿದ ಕಠಿಣೋಕ್ತಿಗಳಿಗಾಗಿ, (೪) "ಶೋಕಾಭಿಭೂತಸ್ಯ ರಾಮಸ್ಯ ಸೀತಾವಿಯೋಗ ಶೋಕಪರವಶನಾದ ಶ್ರೀರಾಮನ, ಭಾಷಿತಮ್ - "ಉಚ್ಯಮಾನೋಽಪಿ ಪರುಷಂ ನೋತ್ತರಂ ಪ್ರತಿಪದ್ಯತೇ" ಯಾರಾದರೂ ಕ್ರೂರವಾಗಿ ಮಾತನ್ನಾಡಿದರೂ ಪ್ರತಿಯಾಗಿ ಕ್ರೂರ ಮಾತುಗಳನ್ನಾಡದವನು ಈಗ ಅತಿ ಕ್ರೂರ

(೪) ರಾ. ಕಿಷ್ಕಿಂ. ೩೬. ೨೦.

ಇಪ್ಪಡಿ ಪ್ರಪನ್ನನುಕ್ಕುಮ್ ಪ್ರಾರಬ್ಧಕರ್ಮವಿಶೇಷಙ್ಗಳಾಲೇ ಬುದ್ಧಿ

ವಾಗಿ ಆಡಿದ ಮಾತುಗಳನ್ನು, ಶ್ರುತ್ವಾ - ಕೇಳಿದವನಾಗಿ, ಮನಸ್ಸು ಕಡೆಯದೆ, ಮಯಾ - ನನ್ನಿಂದಲೂ ಸಹ, ಆ ಕಾರಣದಿಂದ, ಪರುಷಾಣಿ - ಕ್ರೂರಗಳಾದ ಮಾತುಗಳು, ಉಕ್ತ ಇತಿಯತ್–ಹೇಳಲ್ಪಟ್ಟವೆಂಬುದು ಯಾವುದುಂಟೋ ತಚ್ಚ - ಅದನ್ನಾದರೋ, ತ್ವಂ - ನೀನು, ಕ್ಷನ್ತುಮರ್ಹಸಿ - ಕ್ಷಮಿಸಲು ಯೋಗ್ಯನಾಗು; ಇಲ್ಲಿ ಭಾಗವತಾಪರಾಧಕ್ಕೆ ಪ್ರಾಯಶ್ಚಿತ್ತವಾಗಿ ಭಾಗವತ ಕ್ಷಮಾಪಣೆಯೇ ಎಂಬ ಶಾಸ್ತ್ರಾರ್ಥವು ಇಲ್ಲಿ ಬೋಧಿತವು. ಕ್ಷಮಾಪಣೆಗಾಗಿ ಸ್ವಾಮಿಯನ್ನು ಪ್ರಾರ್ಥಿಸಿದರೂ, ತಾನು ಭಕ್ತಪರಾಧೀನನಾಗಿ ಅಶಕ್ತನೆಂದು ಹೇಳಿಬಿಡುವನೆಂಬುದು ಅಂಬರೀಷೋಪಾಖ್ಯಾನದಲ್ಲಿ ವೇದ್ಯವು. ಆದುದರಿಂದ ಭಾಗವತಾಪರಾಧಕ್ಕೆ ಆ ಭಾಗವತನ ಕ್ಷಮಾಪಣೆಯೇ ಪ್ರಾಯಶ್ಚಿತ್ತವೇ ವಿನಾ ಅನ್ಯಥಾ ಇಲ್ಲವು. ಹಾಗೆ ಆ ಭಾಗವತ ಸಾನ್ನಿಧ್ಯವು ದೊರೆಯದಿದ್ದರೆ ತನ್ನ ಗುರುವಿನ ಮೂಲಕ ಪ್ರಾಯಶ್ಚಿತ್ತರೂಪ ಪುನಶ್ಶರಣಾಗತಿಯೇ ಅಪರಾಧ ನಿವರ್ತಕವು" ಎನ್ರು - ಎಂದೀಪ್ರಕಾರವಾಗಿ, ಕ್ಷಮೈಕೊಳ್ಳವೇಣ್ಡಿತ್ತು - ಕ್ಷಮೆಯನ್ನು ಪ್ರಾರ್ಥಿಸ ಬೇಕಾಗಿ ಬಂತು. ಬುದ್ಧಿಪೂರ್ವವಾದ ಭಗವದಪಚಾರಕ್ಕೆ ಭಗವಂತನ ಅಥವಾ ಆತನ ಅಂತರಂಗಭಕ್ತನ ಕ್ಷಮಾಪಣೆಯು ಪ್ರಾಯಶ್ಚಿತ್ತವೆಂದು ಸುಗ್ರೀವ ಕ್ಷಮಾಪಣೆಯಿಂದ ವೇದ್ಯವು. ಭಗವಂತನಲ್ಲಿ ಕ್ಷಮಾಪಣೆಯೂ ಸಹ ಪ್ರಾಯಶ್ಚಿತ್ತವೆಂದು ಹೇಳಲು ಇಲ್ಲಿಗೆ ಸಾಧಕವೇನಿದೆ ಎಂದು ಕೇಳಿದರೆ, ಲಕ್ಷ್ಮಣನಲ್ಲಿ ಕ್ಷಮಾಪಣೆಯನ್ನು ಪ್ರಾರ್ಥಿಸಿದನಂತರ ಲಕ್ಷ್ಮಣನು ಸುಗ್ರೀವನನ್ನು ಕುರಿತು "ಸಾಂತ್ವಯಸ್ವ ವಯಸ್ಯಂ ತ್ವಂ" ಶ್ರೀರಾಮನಲ್ಲಿಗೆ ಹೋಗಿ ಆತನನ್ನು ಸಮಾಧಾನ ಮನಸ್ಕನನ್ನಾಗಿ ಮಾಡು ಎಂದು ಹಿತೋಪದೇಶ ಮಾಡಿದುದರಿಂದಲೂ, ಅಲ್ಲಿಂದ ಶ್ರೀರಾಮನಲ್ಲಿಗೆ ಹೋಗಿ "ಕೃತಾಂಜಲಿಪುಟೋಭವತ್" ಎಂದೂ, "ಪಾದಯೋಃ ಪತಿತಂ ಮೂರ್ಧ್ನಾ ತಮುತ್ಥಾಪ್ಯ ಹರೀಶ್ವರಂ। ಪ್ರೇಮ್ಣಾಚ ಬಹುಮಾನಾಚ್ಚ ರಾಘವಃ ಪರಿಷಸ್ವಜೇ"ಎಂದೂ ಇರುವದರಿಂದ ಅದೂಕೂಡ ಸದ್ಯಃ ಫಲದಾಯಕವಾದ ಪ್ರಾಯಶ್ಚಿತ್ತರೂಪವೆಂಬುದು ವಿದಿತವು; ಮತ್ತು ಭಾಗವತನ ಬುದ್ಧಿ ಪೂರ್ವೋತ್ತರಾಘಕ್ಕೆ ಭಾಗವತನ ಕ್ಷಮಾಪಣೆಯೇ ಪ್ರಾಯಶ್ಚಿತ್ತವೆಂಬುದು ಶ್ರೀ ಲಕ್ಷ್ಮಣ ಪ್ರವೃತ್ತಿಯಿಂದ ವೇದ್ಯವು.

ಈಗ ಸ್ಥಾಪಿಸಿದ ವಿಷಯವನ್ನು ನಿಗಮನಮಾಡಿ ಹೇಳುತ್ತಾರೆ. ಇಪ್ಪಡಿ– ಈಗ ಮೇಲೆ ಸುಗ್ರೀವ ಲಕ್ಷ್ಮಣರ ಪ್ರವೃತ್ತಿಗಳ ಮೂಲಕ ಉಪಪಾದಿಸಿದ ರೀತಿಯಲ್ಲಿ, ಪ್ರಪನ್ನನಿಗೂ ಕೂಡ ಪ್ರಾರಬ್ಧ ಕರ್ಮವಿಶೇಷಗಳಿಂದ, ಬುದ್ಧಿಪೂರ್ವೋತ್ತರಾಘವು, ಪುಗಿರವುಮ್ ಕೂಡುಮ್ - ಪ್ರಾಪ್ತವಾಗಲೂ ಬಹುದು. ಇದರಿಂದ

**ಪೂರ್ವೋತ್ತರಾಘಂ ಪುಗಿರವುಙ್ಕಡುಮ್; ಅನ್ವೈ ಪುಗುನ್ದಾಲ್ ಅನು ತಪ್ತನಾಯ್ ಕ್ಷನ್ವೈ ಕೊಳ್ಳುವುಮ್ ವೇಣುಮ್.**

**ಶ್ರೀ ಯಾಮುನೇಯ ಭಕ್ತಾಂಘ್ರಿರೇಣು ದಿವ್ಯಸೂಕ್ತಿಭಿಃ**
**ಪ್ರಾಯಶ್ಚಿತ್ತಾನುಷ್ಠಾನಂ ನೋಪಪದ್ಯತ ಇತ್ಯತ್ರಾಹ.**

---

**(೧) "ನಧರ್ಮ ನಿಷ್ಠೋಽಸ್ಮಿ" (೨) "ಕುಳಿತ್ತು ಮೂನ್ರುನಲ್ಲೈ ಯೋಮ್ಬು ಙ್ಕರಿಕೊಳನ್ದಣನ್ವೈ ದನ್ನೈ ಯೊಳಿತ್ತಿಟ್ಟೇನ್" ಇತ್ಯಾದಿಗಳುಮ್ ಕಲ್ಪ**

---

ಪ್ರಾಪ್ತವಾಗುವದೇ ಇಲ್ಲವೆಂಬ ವಾದವು ಸರಿಯಲ್ಲವೆಂದು ಹೇಳಿದಂತಾಯಿತು. **ಅನ್ವೈಪುಗುನ್ದಾಲ್** - ಅಂತಹ ಬುದ್ಧಿ ಪೂರ್ವೋತ್ತರಾಘವು ಒಂದುವೇಳೆ ಪ್ರಾಪ್ತ ವಾದರೆ, **ಅನುತಪ್ತನಾಯ್** - ಅಯ್ಯೋ! ಇಂತಹ ಅಪರಾಧವು ಸಂಘಟಿಸಿತೇ ಎಂದು ಪರಿತಾಪವನ್ನು ಹೊಂದಿದವನಾಗಿ, ಇನ್ನು ಮುಂದಕ್ಕೆ ಇಂತಹ ಅಪರಾಧ ವನ್ನು ಎಂದಿಗೂ ಮಾಡುವದಿಲ್ಲವೆಂಬ ಸಙ್ಕಲ್ಪವನ್ನು ಹೊಂದಿದವನಾಗಿ ಎಂಬು ದಕ್ಕೂ ಉಪಲಕ್ಷಣವು, **ಕ್ಷನ್ವೈ ಕೊಳ್ಳುವುಮ್ ವೇಣುಮ್** - ಕ್ಷಮಿಸು ಎಂಬ ಪ್ರಾರ್ಥನೆಯನ್ನೂ ಮಾಡತಕ್ಕದ್ದು; ಹೀಗೆ ಹೇಳಿದುದು ಭಗವಂತನಲ್ಲಿ ಪುನಶ್ಶರಣಾ ಗತಿಯನ್ನು ಮಾಡಬೇಕೆಂಬುದೂ ಹೇಳಿದಂತಾಯಿತು.

**ಶ್ರೀ ಯಾಮುನೇಯ ಭಕ್ತಾಂಘ್ರಿರೇಣು ದಿವ್ಯಸೂಕ್ತಿಗಳಿಂದ ಪ್ರಾಯಶ್ಚಿತ್ತಾ ನುಷ್ಠಾನದ ಆವಶ್ಯಕತೆಯು ತೋರುವದಿಲ್ಲವೆಂಬ ಶಙ್ಕಾವಿಗೆ ಉತ್ತರವು.**

---

ಶ್ರೀ ಯಾಮುನೇಯರವರ **"ನಧರ್ಮನಿಷ್ಠೋಽಸ್ಮಿ"** ಎಂಬ ಶ್ಲೋಕವು, ಮತ್ತು ಭಕ್ತಾಂಘ್ರಿ ರೇಣುರವರ ತಿರುಮಾಲೈಯ **"ಕುಳಿತ್ತು ಮೂನ್ರುನಲ್ಲೈ"** ಎಂಬ ಪಾಶುರವು, **ಇತ್ಯಾದಿಗಳುಮ್** - ಇವೇ ಮೊದಲಾದ ದಿವ್ಯ ಸೂಕ್ತಿ ಗಳೂ, ಕರ್ಮಯೋಗಾದಿಗಳಕ್ಕು, ಇಲ್ಲಿ ಆದಿಪದದಿಂದ ಜ್ಞಾನಯೋಗ ಭಕ್ತಿ ಯೋಗಗಳಿಗೂ ಸಹ, **ಶಕ್ತಿಯಿಲ್ಲಾನ್ವೈ** - ಅಶಕ್ತತೆಯನ್ನು, **ಶೊಲ್ಲುಗಿರನವ ತ್ತನ್ವೈ** - ಹೇಳುತ್ತವೇ ಇಷ್ಟುಮಾತ್ರವೇ ಸರಿ, ಧರ್ಮಾನುಷ್ಠಾನ ಯಾ ವುದೂ ಆವಶ್ಯಕವಿಲ್ಲವೆಂದು ಹೇಳಲಿಲ್ಲವೆಂದು ಉಪದೇಶಿಸುತ್ತಾರೆ.—**ಭಗವ ದಾಜ್ಞಾನುಪಾಲನತ್ತೈ** - ಭಗವದಾಜ್ಞಾರೂಪಗಳಾಗಿ ನಿತ್ಯನೈಮಿತ್ತಿಕಗಳ ಅನುಷ್ಠಾನರೂಪ ಆಜ್ಞೆಯನ್ನು ಶಿರಸಾ ವಹಿಸಿ ನಡೆಸತಕ್ಕದ್ದನ್ನು, ತವಿರ **ಚೊಲ್ಲುಗಿರನವನ್ರು**-ಬಿಡಬಹುದೆಂದು ಆ ದಿವ್ಯ ಸೂಕ್ತಿಗಳು ಹೇಳಿದವು ಎಂಬರ್ಥ

---

(೧) ಆಳ. ಸ್ತೋ. ೨೨ (೨) ತಿರುಮಾಲೈ ೨೫.

**ಯೋಗಾದಿಗಳುಕ್ಕು ಶಕ್ತಿಯಿಲ್ಲಾನ್ಮೈ ಕೊಲ್ಲುಗಿರನ ವತ್ತನ್ನೈ ; ಯಥಾಶಕ್ತಿ ಭಗವದಾಜ್ಞಾನುಪಾಲನತ್ತೈ ತವಿರಚ್ಚೊಲ್ಲುಗಿನ್ರನವನ್ರ-**

---

ವಲ್ಲವು. ಈ ಶ್ಲೋಕದ ಮತ್ತು ಪಾಶುರದ ಸಮಂಜಸಾರ್ಥವನ್ನು ಮೊದಲು ತಿಳಿಸಿ, ಅನಂತರ ಪೂರ್ವಪಕ್ಷಿಗಳು ಹೇಗೆ ಅರ್ಥಮಾಡಿದ್ದರೆಂಬುವನ್ನು ಪ್ರತಿಪಾದಿಸಿ, ಅದು ಹೇಗೆ ಸಮಂಜಸವಾಗುವದಿಲ್ಲವೆಂದು ತಿಳಿಸುವೆವು. "ನಧರ್ಮನಿಷ್ಠೋಸ್ಮಿ" ಎಂಬ ಶ್ಲೋಕಾರ್ಥಕ್ಕೆ ಹಿಂದೆ ಉತ್ತರ ಕೃತ್ಯಾಧಿಕಾರದ ೧೨೬೪-೫ ಪುಟಗಳನ್ನು ಪರಾಂಬರಿಸಿ. ತಿರುಮಾಲೆಯ ಪಾಶುರಾರ್ಥಕ್ಕೆ ೧೨೬೯ನೆಯ ಪುಟವನ್ನು ಪರಾಂಬರಿಸಿ. ಪೂರ್ವ ಪಕ್ಷಿಗಳು ಹೇಗೆ ಅರ್ಥಮಾಡಿದರು ಎಂದರೆ ನಧರ್ಮನಿಷ್ಠೋಽಸ್ಮಿ - ನಿನಗೆ ಅಪೇಕ್ಷಣೀಯರು ಕರ್ಮಯೋಗನಿಷ್ಠರು, ಅವರ ಹಾಗೆ ನಾನಲ್ಲವು, ನಾನು ಪ್ರಪನ್ನನಾದುದರಿಂದ ಅದನ್ನು ತ್ಯಾಗಮಾಡಿ ಧರ್ಮನಿಷ್ಠೆಯಿಲ್ಲದವನು, ಹಾಗೆಯೇ ನಚಾತ್ಮವೇದಿ - ಜ್ಞಾನಯೋಗ ನಿಷ್ಠೆಯನ್ನು ತ್ಯಾಗಮಾಡಿದವನು, ನಭಕ್ತಿಮಾನ್ - ಭಕ್ತಿಯೋಗನಿಷ್ಠೆಯನ್ನೂ ತ್ಯಾಗಮಾಡಿದವನು; ಏಕೆಂದರೆ ಸರ್ವಧರ್ಮಾನ್ ಪರಿತ್ಯಜ್ಯ ಎಂಬುವರಿಂದ ಇವುಗಳನ್ನೆಲ್ಲಾ ತ್ಯಾಗಮಾಡು ಎಂದು ಹೇಳಿರುವದರಿಂದ ಎಂಬ ಭಾವವು. ತಿರುಮಾಲೆ ಪಾಶುರಕ್ಕೂ ಹೀಗೆಯೇ ಅರ್ಥಮಾಡುತ್ತಾರೆ. ಮೂನ್ರನಲ್ಲೈ ಓಮ್ಬುಗ್ಗೆ ಕುರಿಕೊಳ್ ಅನ್ದಣ್ಮೈಯೈತನ್ನೈ ಒಳಿತ್ತಿಟ್ಟೇನ್" ಎಂದರೆ ಕರ್ಮಯೋಗಕ್ಕೆ ಬೇಕಾದ ತ್ರೇತಾಗ್ನಿಯನ್ನು ಉಪಚರಿಸಿ ಸಾವಧಾನದಿಂದ ಅನುಷ್ಠೇಯವಾದ ಬ್ರಾಹ್ಮಣಕೃತ್ಯವನ್ನು ತ್ಯಜಿಸಿದೆನು, ಎಂಬುದರಿಂದ ಕರ್ಮಯೋಗ ಭಕ್ತಿಯೋಗಾದಿಗಳನ್ನು ಬ್ರಾಹ್ಮಣಕೃತ್ಯವೆನ್ನುವದರಿಂದ ನಿತ್ಯನೈಮಿತ್ತಿಕಾನುಷ್ಠಾನಗಳನ್ನೂ ಪ್ರಪನ್ನನಾಗಿ ತ್ಯಜಿಸಿದೆನು, ಆದುದರಿಂದ ನಾನು ರಕ್ಷಣೀಯನಲ್ಲವೇ ಎಂಬುದು ಅವರುಗಳ ಅರ್ಥವು. ನಮ್ಮ ಸಿದ್ಧಾಂತಾರ್ಥ ಹೇಗೆಂದರೆ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗ ದ್ವಾರಾ ನಿನ್ನನ್ನಾಶ್ರಯಿಸಿ ಮುಕ್ತಿಯನ್ನು ಹೊಂದಲು ನಾನು ಅಶಕ್ತನು, ಕರ್ಮಯೋಗ ನಿಷ್ಠೆಗಾಗಲಿ, ಅದು ಒಂದುವೇಳೆ ಸಿದ್ಧಿಸಿದರೂ ಅನಂತರ ಹಾಗೆಯೇ ಜ್ಞಾನಯೋಗ ಭಕ್ತಿಯೋಗನಿಷ್ಠೆಗಾಗಲಿ ನನಗೆ ಸಾಮರ್ಥ್ಯವಿಲ್ಲವು, ಅದುದರಿಂದ ನಾನು ಅಕಿಂಚನನು, ಅನನ್ಯ ಗತಿಕನು; ಆದುದರಿಂದ ಈ ಗುರೂಪಾಯವನ್ನು ಬಿಟ್ಟು ಲಘೂಪಾಯವನ್ನು ಅವಲಂಬಿಸಿರುತ್ತೇನೆ ಎಂದು ಹೇಳಿ ಉತ್ತರಾರ್ಥದಿಂದ" ಅಕಿಂಚನೋಽನನ್ಯಗತಿಶ್ಶರಣ ತತ್ಪಾದಮೂಲಂ ಶರಣಂ ಪ್ರಪದ್ಯೇ" ಎಂದು, ಶರಣಾಗತಿಯನ್ನು ಮಾಡಿದರೇ ವಿನಾ, ಶ್ರೀ ಯಾಮುನೇಯರೇ ಆಗಲಿ ಶ್ರೀ ಭಕ್ತಾಂಘ್ರಿ ರೇಣುರೇ ಯಾಗಲಿ ಸ್ನಾನ ಸಂಧ್ಯಾವಂದನಾದಿಗಳನ್ನೆಲ್ಲಾ

**ಅತಃ ಭಗವದಾಜ್ಞಾನುಪಾಲನ ಮೇವ ಕರ್ತ್ತವ್ಯ ಮಿತಿ ನಿಗಮಯತಿ.**

**ಆಗೈಯಾಲ್ ಪ್ರಪನ್ನನುಕ್ಕುಮ್ ಬ್ರಾಹ್ಮಣ್ಯಾದಿ ವಿಶಿಷ್ಟ ಶರೀರಮ್ ವಿಡುಮಳವುಮ್ ಅವ್ವೋ ಜಾತ್ಯಾದಿಗಳಕ್ಕೀಡಾನ ಭಗವದಾಜ್ಞಾನುಪಾಲನಮ್ ಕರ್ತ್ತವ್ಯಮ್.**

ಪರಿತ್ಯಾಗಮಾಡಿ ಭರನ್ಯಾಸವನ್ನು ಮಾಡಲಿಲ್ಲವು ಎಂಬ ಭಾವವು. ಆದುದರಿಂದ ಈ ಎರಡುದಿವ್ಯಸೂಕ್ತಿಗಳೂ ಏನನ್ನು ವ್ಯಕ್ತಪಡಿಸುತ್ತವೆ ಎಂದರೆ ಆಕಿಂಚನ್ಯವನ್ನೂ ಅನನ್ಯ ಗತಿತ್ವವನ್ನೂ ವ್ಯಕ್ತಪಡಿಸುತ್ತವೆ, ಹೀಗೆ ಶರಣಾಗತಿಗೆ ಬೇಕಾದ ಮುಖ್ಯವಾದ ಅಙ್ಗಗಳು ಹೇಳಲ್ಪಟ್ಟವು ಎಂಬ ಭಾವವು. ಇದರಿಂದ ತಾನು ಕರ್ಮಯೋಗಾದಿಗಳಿಗೆ ಅಶಕ್ತನೆಂದಾದುದರಿಂದ, **ಶಕ್ತಿಯಿಲ್ಲಾಮೈ ಶೊಲ್ಲುಗಿರನವತ್ತನೈ** ಎಂದು ಹೇಳಿದರು. ನಿತ್ಯ ನೈಮಿತ್ತಿಕಾದಿಗಳನ್ನು ಪರಿತ್ಯಾಗಮಾಡಲು ಶಾಸ್ತ್ರಾನುಮತಿ ಯುಂಟು ಎಂಬರ್ಥವಲ್ಲವೆಂಬ ತಾತ್ಪರ್ಯವು. **ಸರ್ವಧರ್ಮಾನ್ ಪರಿತ್ಯಜ್ಯ** ಎಂಬಲ್ಲಿ ನಿತ್ಯನೈಮಿತ್ತಿಕಗಳು ಸೇರಲಿಲ್ಲವು ಎಂಬ ಭಾವದಿಂದ **ಭಗವದಾಜ್ಞಾನುಪಾಲನತ್ತೈತವಿರ ಚೊಲ್ಲುಗಿರನವನ್** ಎಂದುಉಪದೇಶಿಸಿರುತ್ತಾರೆ

**ಆದುದರಿಂದ ಭಗವದಾಜ್ಞಾನುಪಾಲನವು ಆವಶ್ಯಕವೆಂದು ಪರಿಸಮಾಪ್ತಿಯು.**

**ಆಗೈಯಾಲ್** - ಆಕಾರಣದಿಂದ, ಎಂದರೆ ಹೀಗೆ ಎಲ್ಲಾ ಪೂರ್ವಪಕ್ಷಗಳಿಗೂ ಸಮಾಧಾನವನ್ನು ಹೇಳಿ, ನಿತ್ಯ ನೈಮಿತ್ತಿಕಾದಿ ಆಜ್ಞಾ ಕೈಙ್ಕರ್ಯಗಳುಎಂದಿಗೂ ಬಿಡತಕ್ಕವಲ್ಲವೆಂದು ಉಪಪಾದಿಸಿ, **ಸರ್ವಧರ್ಮಾನ್** ಎಂಬಲ್ಲಿ ಇವು ಸೇರಲಿಲ್ಲವೆಂದು ವ್ಯವಸ್ಥೆ ಮಾಡಿದುದರಿಂದ, **ಪ್ರಪನ್ನನುಕ್ಕುಮ್** - ಪ್ರಪನ್ನನಿಗೂ ಕೂಡ, ಭಕ್ತಿಯೋಗ ನಿಷ್ಠನಿಗೇನೋ ಉಪಾಸನಕ್ಕೆ ಅಙ್ಗವಾಗಿ ನಿತ್ಯನೈಮಿತ್ತಿಕಗಳ ಅನುಷ್ಠಾನವು ಆವಶ್ಯಕವಾದರೆ, ಪ್ರಪನ್ನನಿಗೆ ಭರನ್ಯಾಸಕ್ಕೆ ಇವುಗಳ ಅನುಷ್ಠಾನವು ಅಙ್ಗವಲ್ಲದಿದ್ದರೂ ಪ್ರಪನ್ನನಿಗೂ ಆವಶ್ಯಕವು ಎಂದು ಹೇಳುವದಕ್ಕಾಗಿ, **ಪ್ರಪನ್ನನುಕ್ಕುಮ್** ಎಂಬ ಪ್ರಯೋಗವು. **ಬ್ರಾಹ್ಮಣ್ಯಾದಿ ವಿಶಿಷ್ಟ ಶರೀರಮ್**, ಬ್ರಾಹ್ಮಣ, ಆದಿ ಪದದಿಂದ ಕ್ಷತ್ರಿಯ ವೈಶ್ಯ ಯೋನಿಗಳಲ್ಲಿ ಜನಿಸಿದ ಶರೀರವನ್ನು, **ವಿಡುಮಳವುಮ್** - ಬಿಡುವ ತನಕವೂ, ಎಂದರೆ ಆಯಾ ದೇಹ ವಿಯೋಗ ಉಂಟಾಗುವವರೆಗೂ, **ಅವ್ವೋಜಾತಿಗಳಕ್ಕೀಡಾನ** - ಆಯಾ ಜಾತಿಗಳಿಗೆ ಯೋಗ್ಯವಾದ, **ಭಗವದಾಜ್ಞಾನು ಪಾಲನಮ್** - ಭಗವಂತನ ಆಜ್ಞೆಗಳಾದ "ಅಹರಹಸ್ಸಂಧ್ಯಾಮುಪಾಸೀತ" ಇತ್ಯಾದಿಗಳನ್ನು ಪಾಲಿಸಿ ಅನುಷ್ಠಾನವು, **ಕರ್ತ್ತವ್ಯಮ್**-

ಮಾಡತಕ್ಕದ್ದೇ, ಬಿಡತಕ್ಕದ್ದಲ್ಲವೆಂಬ ಭಾವವು. ಈ ಪ್ರಮಾಣಗಳು ಆಪ್ರಪನ್ನರನ್ನು ಕುರಿತದ್ದೇವಿನಾ ಪ್ರಪನ್ನರನ್ನು ಕುರಿತದ್ದಲ್ಲವೆಂದು ಹೇಳಿದರೆ, ಹಾಗೆ ಹೇಳಲು ಪ್ರಮಾಣವೆಲ್ಲಿದೆ ಎಂದು ಕೇಳುವೆವು. ಇಂತಹ ಪ್ರಾಜ್ಞರುಗಳ ಅಭಿಪ್ರಾಯಗಳಿಗೆ ವಿರೋಧವಾಗಿ ಪ್ರಪನ್ನನಿಗೆ ನಿತ್ಯನೈಮಿತ್ತಿಕಗಳು ಬೇಕಿಲ್ಲವೆಂಬ ವಾದವು ಯುಕ್ತವಲ್ಲವೆಂದು ಈ ಅಧಿಕಾರಾಂತ್ಯದಲ್ಲಿ ಹಿತೋಪದೇಶವನ್ನು ಶ್ರೀ ದೇಶಿಕರವರು ಮಾಡಿರುತ್ತಾರೆ. ಶ್ರೀ ಪರಾಶರರು ತಾವಿದ್ದ ಕಾಲದಲ್ಲೇ ಕಲಿಕಾಲದ ಸ್ವರೂಪವನ್ನು ತಮ್ಮ ಶಿಷ್ಯರಾದ ಮೈತ್ರೇಯರಿಗೆ ಉಪದೇಶಿಸುವ ಸಂದರ್ಭದಲ್ಲಿ "ವರ್ಣಾಶ್ರಮಾಚಾರವತೀ ಪ್ರವೃತ್ತಿರ್ನ ಕಲೌ ನೃಣಾಂ" ಮನುಷ್ಯರಲ್ಲಿ "ವರ್ಣಾಶ್ರಮಗಳಿಗನುಗುಣವಾದ ಆಚಾರವು ಕಲಿಯುಗದಲ್ಲಿ ಇರುವದಿಲ್ಲವು" ಎಂಬ ಉಕ್ತಿಯು ಇರುವಾಗ, ಮತ್ತೂ ಬ್ರಾಹ್ಮಣನು ಸಾಮಾನ್ಯವಾಗಿ ಸಂಧ್ಯಾವಂದನೆ ಮೊದಲಾದ ಆಚಾರಗಳನ್ನು ಪರಿತ್ಯಾಗಮಾಡಿ ಶೂದ್ರಾದಿಗಳೊಂದಿಗೆ ಸಮನಾಗಿರಬೇಕೆಂದು ಸರ್ವ ಪ್ರಯತ್ನವನ್ನೂ ಮಾಡುತ್ತಿರುವಾಗ, ಪ್ರಪನ್ನನು ನಿತ್ಯನೈಮಿತ್ತಿಕಗಳನ್ನು ಪರಿತ್ಯಾಗಮಾಡಲು ಶಾಸ್ತ್ರಾನುಮತಿಯುಂಟೆಂದು ಭ್ರಮಿಸಿದರೆ, ಶ್ರೀ ದೇಶಿಕವರ್ಯರು ವೃಥಾ ಪರಿತಾಪವನ್ನು ಪ್ರಕಟಿಸಿದರೆಂದು ನಾವೀಗ ಹೇಳತಕ್ಕದ್ದಾಗಿರುತ್ತದೆ. ಅಧೋಮುಖ ಪ್ರವಾಹವು ಲಕ್ಷಣಜೋಲಾ ಗಂಗಾಪ್ರವಾಹದಹಾಗೆ ಬಹು ವೇಗವಾಗಿ ಪ್ರವಹಿಸುತ್ತಿರುವದರಿಂದ ಎಲ್ಲಾ ಉಚ್ಚನೀಚ ಪ್ರವಾಹಗಳೆಲ್ಲಾ ಸಮುದ್ರವನ್ನು ಹೊಂದಿ ಸಮವಾಗುತ್ತದೆಂಬುದರಲ್ಲಿ ಸಂದೇಹವಿಲ್ಲವು. ಪರಮ ಪವಿತ್ರವಾದ ಸ್ವಾದುವಾದ ಸ್ವಚ್ಛವಾದ ನಿರ್ಮಲವಾದ ಪರ್ವತಾಗ್ರದಲ್ಲಿದ್ದ ಗಂಗೋದಕವು, ಸರ್ವ ಮಲಗಳಿಂದಲೂ ಲವಣಾದಿಗಳಿಂದಲೂ ಯುಕ್ತವಾಗಿ ತನ್ನ ಪವಿತ್ರತೆಯನ್ನು ನೀಗಿಕೊಂಡು ಸಮುದ್ರದೊಂದಿಗೆ ಏಕೀಭವಿಸಿತೇ ಎಂಬ ಪರಿತಾಪವು ಪ್ರಾಜ್ಞರಿಗೆ ತಪ್ಪಿದ್ದಲ್ಲವು. ಆದುದರಿಂದ ಆ ಕಾಲದಲ್ಲಿ ಕೆಲವು ಮಹಾನುಭಾವರುಗಳಾದರೂ ಇಂತಹ ವರ್ಣಾಶ್ರಮ ಧರ್ಮಗಳನ್ನು ಪರಿತ್ಯಜಿಸದೆ, ಭಗವದಾಜ್ಞಾ ಕೈಙ್ಕರ್ಯಗಳನ್ನು ನಡೆಸಿ ಪರಮ ಶ್ರೇಯಸ್ಸಿಗೆ ಸಾಧನಮಾಡಿಕೊಂಡು, ಲೋಕಸಙ್ಗ್ರಹರೂಪದಲ್ಲಿ ಕೆಲವರಿಗಾದರೂ ಮೇಲುಪಙ್ಕ್ತಿಯ ರೂಪದಲ್ಲಿರಲೆಂದು ಹಿತೋಪದೇಶವನ್ನು "ಬ್ರಾಹ್ಮಣ್ಯಾದಿ ಶರೀರವಿಡಮುಳುವುಮ್ ಭಗವದಾಜ್ಞಾನುಪಾಲನಮ್ ಕರ್ತವ್ಯಮ್" ಎಂಬ ವಾಕ್ಯದ ಮೂಲಕ ಮಾಡಿರುತ್ತಾರೆ. ಇದನ್ನು, ದೋಷದೃಕ್ಕಾಗಿ ದೋಷೋದ್ಘಾಟನೆ ಮಾಡಿರುವರೆಂದೂ, ತಮ್ಮ ಸಿದ್ಧಾನ್ತಕ್ಕೆ ವಿರೋಧವಾಗಿ ನಡೆಯುತ್ತಾರೆಂಬ ಅಸೂಯೆಯಿಂದ ನಿಂದಿಸಿದರೆಂದೂ, ಕೆಲವರು ಹೇಳುವದು ಅನುಚಿತವೆಂಬುದನ್ನೂ ಇದರಿಂದ ಗ್ರಹಿಸಬಹುದು.

ಉಕ್ತಾರ್ಥಾ (ತ್ಯಾಜ್ಯೋಪಾದೇಯಾರ್ಥಾ) ದ್ವಾಭ್ಯಾಂ ಕಾರಿಕಾಭ್ಯಾಂಸಂಗೃಹ್ಣಾತಿ

ಆಹಾರಗ್ರ (ಗೃ) ಹ ಮಂತ್ರಾರ್ಥ ಜಾತ್ಯಾದಿ ನಿಯಮೈರ್ಯುತಃ ।
ಕುರ್ಯಾಲ್ಲಕ್ಷ್ಮೀಶ ಕೈಂಕರ್ಯಂ ಶಕ್ತ್ಯಾ ಽನನ್ಯ ಪ್ರಯೋಜನಃ ॥೬೬॥

ಈ ಅಧಿಕಾರದಲ್ಲಿ ಸ್ಥಾಪಿಸಲ್ಪಟ್ಟ ಅರ್ಥಗಳನ್ನ ಎರಡು ಕಾರಿಕೆಗಳಿಂದ ಸಙ್ಗ್ರಹಿಸುತ್ತಾರೆ.

ವಿವಾದಾಸ್ಪದವಾದ ವಿಷಯದಲ್ಲಿ ಪೂರ್ವಪಕ್ಷವನ್ನುಮಾಡಿ ಸಿದ್ಧಾನ್ತಿಸಿದ ಅರ್ಥಗಳನ್ನು ಕಾರಿಕೆಗಳ ಮೂಲಕ ಸ್ಥಾಪಿಸುತ್ತಾರೆ. ಅಭಿಪ್ರಾಯಗಳ ಸ್ಥಿರೀಕರಣಕ್ಕಾಗಿಯೇ ಈ ಕಾರಿಕೆಗಳಾದುದರಿಂದ ಎರಡು ಕಾರಿಕೆಗಳ ಮೂಲಕ ಅಧಿಕಾರಾರ್ಥವನ್ನು ಸ್ಥಾಪಿಸುತ್ತಾರೆ—

**ಅರ್ಥವು**—ಈ ಅಧಿಕಾರದಲ್ಲಿ ಪ್ರಪನ್ನನು ಬುದ್ಧಿಪೂರ್ವಕವಾಗಿ ಅಪರಾಧಗಳನ್ನು ಮಾಡಕೂಡದೆಂದೂ, ಆ ಅಪರಾಧ ನಿವೃತ್ತಿಯಲ್ಲಿ ಅಕೃತ್ಯಕರಣ ಮಾತ್ರವೇ ಅಲ್ಲದೆ, ಕೃತ್ಯಾಕರಣವೂ ಸೇರಿರುದರಿಂದ ಬುದ್ಧಿಪೂರ್ವಕವಾಗಿ ಸ್ನಾನ ಸಂಧ್ಯಾವಂದನಾದಿ ನಿತ್ಯ ನೈಮಿತ್ತಿಕ ಕರ್ಮಗಳನ್ನೂ ಪರಿತ್ಯಾಗ ಮಾಡಕೂಡದೆಂದೂ.ಅವಶ್ಯಕವಾಗಿ ಮಾಡತಕ್ಕದ್ದೆಂದೂ,ಸ್ಥಾಪಿಸಿದರು. ನಿತ್ಯ ನೈಮಿತ್ತಿಕ ಕರ್ಮಗಳ ಅನುಷ್ಠಾನವು ಪ್ರಯಾಸ ಸಾಧ್ಯವು ; ಪ್ರಪನ್ನನಾಗಿ ಕೃತಕೃತ್ಯನಾಗಿರುವವನಿಗೆ ಇಂತಹ ಆಯಾಸ ಸಾಧ್ಯವಾದುದನ್ನು ಅನುಷ್ಠಿಸಲೇಬೇಕೆಂಬ ನಿರ್ಬಂಧವು ಸರಿಯೇ? ಅದೂ ಅಲ್ಲದೆ ಸಂಧ್ಯಾವಂದನಾದಿಗಳಲ್ಲಿ ಅನ್ಯದೇವತಾಭಜನ ರೂಪ ಮಂತ್ರಗಳುಂಟು. ಅನ್ಯದೇವತಾ ಭಜನವು ಸರ್ವಾತ್ಮನಾ ಪ್ರಪನ್ನನಿಗೆ ಕೂಡದು ಎಂದೂ ಉಪದೇಶಿಸಲ್ಪಟ್ಟಿರುತ್ತದೆ. ಇದರಿಂದ ಮೋಕ್ಷವಿರುದ್ಧಫಲಗಳು ಪ್ರಾಪ್ತಗಳಾಗುತ್ತವೆ. ಹೀಗಿರುವಾಗ ಇವು ಹೇಗೆ ಅವಶ್ಯಕವು? ಇತ್ಯಾದಿ ಪೂರ್ವಪಕ್ಷಗಳಿಗೆ ಸಮಾಧಾನವನ್ನೂ ಹೇಳುವವರಾಗಿ, ಹಿಂದೆ ಹೇಳಿದ ತ್ಯಾಜ್ಯೋಪಾದೇಯಗಳಾದ ಅನುಷ್ಠಾನಗಳನ್ನು ಸಙ್ಗ್ರಹಿಸಿ ಹೇಳುತ್ತಾರೆ. ಈ ಪೂರ್ವಪಕ್ಷಗಳಿಗೆ ಸಮಾಧಾನವು ಕೃತಕೃತ್ಯಾಧಿಕಾರದಲ್ಲಿಯೇ ಹೇಳಲ್ಪಟ್ಟಿದ್ದರೂ, ಇಲ್ಲಿಯೂ ಅವು ಅನುವಾದರೂಪದಲ್ಲಿ ಹೇಳಲ್ಪಡುತ್ತವೆಂದು ಭಾವಿಸತಕ್ಕದ್ದು.(೧೧೫೦-೧೧೬೦ ಪುಟಗಳನ್ನು ಪರಾಂಬರಿಸಿ.)

**ಅರ್ಥವು—ಆಹಾರಗ್ರಹ..........ನಿಯಮೈಃ** - ನಿಯಮ ಶಬ್ದವು ಆಹಾರಾದಿ ಎಲ್ಲಾದಕ್ಕೂ ಅನ್ವಯಿಸತಕ್ಕದ್ದು, ಆಹಾರವು, ಗೃಹವೆಂದರೆ ಜ್ಞಾನವು ಎಂದರ ಸದಾಚಾರ್ಯರಿಂದ ಉಪದಿಷ್ಟವಾದ ಜ್ಞಾನಾನುಸಾರವಾಗಿ ಅನುಷ್ಠಾನವು, ಮಂತ್ರ - ಆಚಾರ್ಯೋಪದಿಷ್ಟವಾದ ಮಂತ್ರವು, ಇದರಿಂದ ರಹಸ್ಯ

ತ್ರಯವು ಸೂಚಿತವು, **ಅರ್ಥ** - ದ್ರವ್ಯಸಂಪಾದನೆ, **ಜಾತಿ** - ತನ್ನ ವರ್ಣವು, ಆದಿ ಶಬ್ದದಿಂದ, ಆಶ್ರಮ, ಪ್ರವರ, ಚರಣ, ಕುಲದೇಶಗಳು . **ಸೂಚಿಸಲ್ಪಟ್ಟಿವು**, ಇವುಗಳ **ನಿಯಮೈಃ** - ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟ ನಿಯಮಗಳಿಂದ, **ಯುತಃ** – ಕೂಡಿದವನಾಗಿ, ಪ್ರಪನ್ನನು, **ಶಕ್ತ್ಯಾ** - ತನ್ನ ಶಕ್ತ್ಯನುಸಾರವಾಗಿ, **ಲಕ್ಷ್ಮೀಶ ಕೈಙ್ಕರ್ಯಮ್** - ತಾನು ಮಾಡುವ ನಿತ್ಯ ನೈಮಿತ್ತಿಕಾದಿ ಇಂತಹ ಸರ್ವ ಅನು ಷ್ಠಾನಗಳಾದ ಲಕ್ಷ್ಮೀನಾರಾಯಣರ ಆಜ್ಞಾರೂಪಕೈಙ್ಕರ್ಯವನ್ನು, **ಅನನ್ಯ ಪ್ರಯೋಜನಃ** - ಅವರುಗಳ ಸಂಪ್ರೀಣನಕ್ಕಾಗಿ ಮಾಡಿದ ಕೈಙ್ಕರ್ಯವಲ್ಲದೆ ಇನ್ನು ಯಾವಪ್ರಯೋಜನವೂ ಇಲ್ಲದವನಾಗಿ, **ಕುರ್ಯಾತ್** - ಮಾಡತಕ್ಕದ್ದು. ಇಲ್ಲಿ **ಆಹಾರನಿಯಮವು** ಯಾವುದೆಂದರೆ ಜಾತಿ,ಆಶ್ರಯ,ನಿಮಿತ್ತವೇ ಮೊದಲಾದ ದೋಷಗಳಿಂದ ದುಷ್ಟವಾದುದಲ್ಲದೆ, ಭಗವಂತನಿಗೆ ನಿವೇದನಮಾಡಿ ಪರಿಶುದ್ಧತೆ ಯನ್ನು ಹೊಂದಿದ ಆಹಾರ ಸೇವನೆಯು. (೨೬೩೪-೩೫ನೆಯ ಪುಟಗಳನ್ನು ನೋಡಿ) **ಗೃಹನಿಯಮವು** – ಸತ್ಸಂತಾನ ಪ್ರಸೂತರಾದ ಸದಾಚಾರ ನಿಷ್ಠೆಯುಳ್ಳ ವೇದ ವಿತ್ತದ ಆಚಾರ್ಯರಿಂದಲೇ ಜ್ಞಾನೋಪದೇಶವನ್ನು ಹೊಂದಬೇಕೆಂಬ ನಿಯ ಮವು, **ಮಂತ್ರನಿಯಮವು** - ದೇವತಾಂತರ ಮಂತ್ರಗಳನ್ನೂ, ಕಾಮ್ಯಸಾಧನ ಭಗವನ್ಮಂತ್ರಗಳನ್ನೂ ತ್ಯಜಿಸಿ, ವ್ಯಾಪಕ ಮೊದಲಾದ ಮೋಕ್ಷಸಾಧಕ ಮಂತ್ರಗ ಳಾದ ಮೂಲಮಂತ್ರ ದ್ವಯ ಚರಮಶ್ಲೋಕರೂಪ ಮಂತ್ರಗಳ ಜಪವನ್ನೇ ಅನುಷ್ಠಿಸತಕ್ಕದ್ದೆಂಬ ನಿಯಮವು. ಇತರ ವ್ಯಾಪಕ ಮಂತ್ರಗಳೂ ಆಗ ಬಹುದು. ಈ ಸಂದರ್ಭದಲ್ಲಿ **ವ್ಯಾಪಕತ್ರಯಮನ್ತ್ರರತ್ನಾನಾಂ ಜಪಃಕಾರ್ಯೋ ಮುಮುಕ್ಷೋಃ**" ಎಂಬ ವಾಕ್ಯವು ಅನುಸಂಧೇಯವು. **ಅರ್ಥನಿಯಮಃ** – ವ್ಯಭಿಚಾರಸ್ತ್ರೀ, ನಪುಂಸಕ, ಪತಿತ, ಶತ್ರುಗಳು ಇವರುಗಳಿಂದ ಒಂದು ಕವಡೆ ಕಾಸನ್ನಾದರೂ ಎಂತಹ ಕಷ್ಟದಶೆಯಲ್ಲೂ ಪರಿಗ್ರಹಿಸುವದಿಲ್ಲವೆಂದೂ ಧರ್ಮದಿಂದ ಸ್ವಾರ್ಜಿತ ಧನವನ್ನೇ ಪರಿಗ್ರಹಿಸುತ್ತೇನೆಂಬ ನಿಯಮವು ; **ಜಾತಿನಿಯಮವು**- ಬ್ರಾಹ್ಮಣನು ಪರೀಕ್ಷಾರ್ಥವಾಗಿಯಾಗಲಿ ತನ್ನ ವರ್ಣಕ್ಕೆ ಅನುಚಿತ ಪ್ರವೃತ್ತಿ ಯಾದ ಆಯುಧವನ್ನು ಪ್ರಯೋಗಿಸುವದಿಲ್ಲವೆಂಬ, ಮತ್ತು ತನ್ನ ವರ್ಣೋಚಿತ ಪ್ರವೃತ್ತಿಯಲ್ಲಿರಬೇಕೆಂಬ ನಿಯಮವು ; ಕ್ಷತ್ರಿಯನು ಭಿಕ್ಷಾಟನ ಚರ್ಯೆಯನ್ನು ಮಾಡುವದಿಲ್ಲವೆಂಬ ಮತ್ತು ಲೋಕಕಂಟಕರನ್ನು ವಧಿಸುವನೆಂಬ ನಿಯಮವು ; ಸ್ತ್ರೀಗಳಿಗೂ ಶೂದ್ರರಿಗೂ ಮಂತ್ರ ಮಾತ್ರ ಉಕ್ತಿಯೇ ವಿನಾ ಪೂರಾ ಮಂತ್ರ ಕೂಡದೆಂಬ ನಿಯಮವು. ಆದಿ ಶಬ್ದದಿಂದ ವರ್ಣನಿಯಮವು - ಬ್ರಾಹ್ಮಣನಿಗೆ ಯಜನ, ಅಧ್ಯಾಪನ, ಕ್ಷತ್ರಿಯನಿಗೆ ಶಸ್ತ್ರ ಜೀವನ, ವೈಶ್ಯನಿಗೆ ವಾಣಿಜ್ಯ, ಶೂದ್ರ ನಿಗೆ ಕೂಲಿಯಿಂದ ಜೀವನ, ಇವೇ ಮೊದಲಾದ ನಿಯಮವು ; ಆಶ್ರಮ ನಿಯ

ಮವು - ಬ್ರಹ್ಮಚಾರಿಯು, ಪುಷ್ಪತಾಂಬೂಲಾದಿಗಳನ್ನು ಪರಿತ್ಯಾಗ ಮಾಡಬೇಕೆಂಬ ನಿಯಮವು; ಗೃಹಸ್ಥನು ಪತ್ನೀಯುಕ್ತನಾಗಿದ್ದರೆ ಅನಗ್ನಿಕನಾಗಿರಕೂಡದೆಂಬ ನಿಯಮವು; ಯತಿಗೂ, ವಾನಪ್ರಸ್ಥನಿಗೂ ಹಾಗೆಯೇ ಅನೇಕ ನಿಯಮಗಳುಂಟು, ಇವರುಗಳು ಯಾರು ಯಜ್ಞೋಪವೀತವನ್ನು ಪರಿತ್ಯಾಗಮಾಡಕೂಡದೆಂಬ ನಿಯಮವು, **ಗೋತ್ರನಿಯಮವು** - ಸಗೋತ್ರದಲ್ಲಿ ದಾನಮಾಡಬಹುದು ; ಕನ್ಯಾದಾನ ಮಾತ್ರ ಕೂಡದೆಂಬ ನಿಯಮವು; ಪ್ರವರ ನಿಯಮವು - **ಸಮಪ್ರವರ ಗೋತ್ರಂಚ ವಿಧುರಂ ಬ್ರಹ್ಮಚಾರಿಣಂ | ದೇವಾರ್ಥೇ ವರಯೇದ್ವಿದ್ವಾನ್‌ಪಿತ್ರರ್ಥೇ ವರಣಂತ್ಯಜೇತ್** ಎಂದಿರುವದರಿಂದ ದೇವ ಕಾರ್ಯಗಳಲ್ಲಿ ತನ್ನ ಪ್ರವರವಿರುವನನ್ನೂ ಹೆಂಡತಿ ಇಲ್ಲದವನನ್ನೂ ಬ್ರಾಹ್ಮಣನನ್ನೂ ವರಿಸಬಹುದು, ಪಿತೃಕಾರ್ಯಗಳಾದ ಶ್ರಾದ್ಧಾದಿಗಳಲ್ಲಿ ಕೂಡದೆಂಬ ನಿಯಮವು ; **ಚರಣ ನಿಯಮವು**-ಬಹ್ವೃಚರು ಉಪಾಕರ್ಮವನ್ನು ಶ್ರವಣನಕ್ಷತ್ರದಲ್ಲೇ ಮಾಡಬೇಕೇ ವಿನಾ ಪೌರ್ಣಮಿ ಬೇಕಾಗಿಲ್ಲವೆಂಬ ನಿಯಮವು, **ದೇಶ ನಿಯಮವು**-**ನಾಪ್ಸು ನೈವಾಮ್ಭಸಿ ತೀರೇ ಸ್ಮಶಾನೇ ನ ಸಮಾಚರೇತ್ | ಉತ್ಸರ್ಗಂ ವಾ ಪುರೀಷಸ್ಯ ಮೂತ್ರಸ್ಯ ಚ ವಿಸರ್ಜನಮ್** ಎಂಬುದು; **ಕಾಲನಿಯಮಃ**-ಹರಿವಾಸರದಲ್ಲಿ ಊಟಮಾಡಕೂಡದೆಂಬ ನಿಯಮವು; **ಅವಸ್ಥಾನಿಯಮವು** - **ಏಕಾದಶ್ಯಾಂ ನಭುಂಜೀತ ಶಕ್ತಸ್ಸನ್ ನಿರುಪದ್ರವಃ** ; ರೋಗಾದಿಗಳೇನೂ ಇಲ್ಲದೆ ಶಕ್ತನಾಗಿದ್ದರೆ ಏಕಾದಶಿಯಲ್ಲಿ ಊಟ ಮಾಡಬಾರದೆಂಬ ನಿಯಮವು ; **ಗುಣನಿಯಮವು** - ತುಂಬಾ ಉದ್ದವಾದ ಅಥವಾ ಬಹಳ ನೋಟಾದ ಕೂದಲುಗಳುಳ್ಳ, ಅಧಿಕಾಂಗ ಮತ್ತು ಹೀನಾಂಗಗಳಾದವಳನ್ನು ಮದುವೆ ಮಾಡಿಕೊಳ್ಳಕೂಡದು ಇತ್ಯಾದಿ ನಿಯಮವು ; ಇಂತಹ ನಿಯಮಗಳಿಂದ ಪ್ರಪನ್ನನು ಯುಕ್ತನಾಗಿ, ಅನನ್ಯ ಪ್ರಯೋಜನನಾಗಿ ಭಗವತ್ಪ್ರೀತ್ಯೇಕ ಪ್ರಯೋಜನನಾಗಿ ಲಕ್ಷ್ಮೀನಾರಾಯಣರಿಗೆ ಕೈಙ್ಕರ್ಯವೆಂದು ಭಾವಿಸಿ, ಆಜ್ಞಾನುಜ್ಞಾ ಕೈಙ್ಕರ್ಯಗಳನ್ನು ಮಾಡತಕ್ಕದ್ದು ಎಂಬತಾತ್ಪರ್ಯವು. ನಿತ್ಯನೈಮಿತ್ತಿಕಗಳ ಅನುಷ್ಠಾನದಲ್ಲಿ ಬಹು ಆಯಾಸವೂ, ಸರಿಯಾಗಿ ನಡೆಸಿದರೆ ಸ್ವರ್ಗಾದಿ ಫಲಗಳೂ,ಸರಿಯಾಗಿ ನಡೆಸದೆ ವ್ಯತ್ಯಸ್ತವಾದರೆ ನರಕಾದಿ ಫಲಗಳೂ, ಹೀಗೆ ನಶ್ವರ ಫಲಗಳನ್ನು ಕೊಡುವುವುಗಳನ್ನು ಏಕೆ ಅನುಷ್ಠಿಸುವದು? ಎಂಬೀಶಙ್ಕೆಗಳಿಗೆ ಕಾರಣವೇ ಇಲ್ಲವೆಂಬ ಭಾವವು. ಇಂತಹ ಆಜ್ಞಾರೂಪ ನಿತ್ಯನೈಮಿತ್ತಿಕಾನುಷ್ಠಾನವನ್ನು ತ್ಯಾಗ ಮಾಡಿದರೆ ಅನರ್ಥಗಳುಂಟೆಂದೂ, ಹಾಗೆ ತ್ಯಾಗಮಾಡದೆ ಇದ್ದವನಿಗೆ ಅನರ್ಥಗಳು ಯಾವುವೂ ಇಲ್ಲವೆಂದು ಇಷ್ಟುಮಾತ್ರವೇ ಗ್ರಹಿಸತಕ್ಕದ್ದಲ್ಲವು. ಹೀಗೆ ಅನನ್ಯಪ್ರಯೋಜನನಾಗಿಭಗವತ್ಪ್ರೀತ್ಯರ್ಥವಾಗಿಯೇ ಇಂತಹ ಅಜ್ಞಾನುಜ್ಞಾರೂಪ ಕೈಙ್ಕರ್ಯಗಳನ್ನು ನಡೆಸುವವನು ಉತ್ಕೃಷ್ಟನು ಎಂದು ಹೇಳಲು ಹೊರಟು,ಹಾಗೆ

**ಕಾ. ಆಚಾರಾತ್ಮಗುಣೋಪಾಯ ಪುರುಷಾರ್ಥ ವಿಶೇಷತಃ ।**
**ಅಧಿಕಾರಿಣಿ ವೈಶಿಷ್ಟ್ಯಂ ಪ್ರಕೃಷ್ಯೇತೋತ್ತರೋತ್ತರಮ್ ॥೬೭॥**

ಕೈಙ್ಕರ್ಯಗಳನ್ನು ಎಸಗುವವರಲ್ಲಿ ಯಾವ ಯಾವ ಅಧಿಕಾರಿಗಳು ಹೇಗೆ ಉತ್ತರೋತ್ತರ ಉತ್ಕರ್ಷಕ್ಕೆ ಅರ್ಹರೆಂಬುದನ್ನು ಸಙ್ಗ್ರಹವಾಗಿ ಮುಂದಿನ ಕಾರಿಕೆಯಾದ "**ಆಚಾರಾತ್ಮಗುಣೋಪಾಯ**" ಎಂಬುದರಿಂದ ಉಪದೇಶಿಸುತ್ತಾರೆ.

**ಕಾರಿಕೆಯ ಅರ್ಥವು**—**ಆಚಾರಾತ್ಮಗುಣೋಪಾಯ ಪುರುಷಾರ್ಥ ವಿಶೇಷತಃ** - ಆಚಾರವೆಂದರೆ ಕೇವಲ ನಿತ್ಯ ನೈಮಿತ್ತಿಕಾದಿ ಸದಾಚಾರಾನುಷ್ಠಾನವು, ಅದರೊಂದಿಗೆ ಆತ್ಮಗುಣ ವೆಂದರೆ ಅಂತರ ಬಾಹ್ಯೇಂದ್ರಿಯ ನಿಗ್ರಹರೂಪವಾದ ಶಮದಮಾದಿ ಗುಣಗಳಿರೋಣವೂ, ಅವುಗಳೊಂದಿಗೆ ಉಪಾಯಾನುಷ್ಠಾನವೂ, ಎಂದರೆ ಭಕ್ತಿಯೋಗವನ್ನಾಗಲಿ, ಪ್ರಪತ್ತಿಯನ್ನಾಗಲಿ ಅವಲಂಬಿಸೋಣವು. ಇವುಗಳೊಂದಿಗೆ ಪರಮ ಪುರುಷಾರ್ಥವಾಗಿರುವ ಮೋಕ್ಷಾಪೇಕ್ಷೆಯಿರುವ ಪ್ರಪನ್ನನಾಗಿರೋಣವೂ, ಹೀಗೆ ಈ ನಾಲ್ಕು ವಿಶೇಷಗಳಿಂದ, **ಅಧಿಕಾರಿಣಿ ವೈಶಿಷ್ಟ್ಯಂ** - ಅಧಿಕಾರಿಯಲ್ಲಿ ಮಾಹಾತ್ಮ್ಯರೂಪ ವೈಲಕ್ಷಣ್ಯವು, **ಉತ್ತರೋತ್ತರಂ** - ಬರೀ ಸದಾಚಾರ ನಿಷ್ಠನಿಗಿಂತಲೂ ಅದೂ ಇರುವ ಗುಣನಿಷ್ಠನು ಶ್ರೇಷ್ಠನು, ಅವನಿಗಿಂತಸದಾಚಾರ ಗುಣನಿಷ್ಠೆಯಿಂದ ಕೂಡಿದ ಉಪಾಯನಿಷ್ಠನು ಶ್ರೇಷ್ಠನು, ಇತರ ಅಂತಹ ಉಪಾಯನಿಷ್ಠರುಗಳಿಗಿಂತ, ಪುರುಷಾರ್ಥ ನಿಷ್ಠೆಯಿರುವ ಮೋಕ್ಷಾರ್ಥಿಗಳಾದ ಏಕಾಂತಿ ಪರಮೈಕಾಂತಿಗಳು ಶ್ರೇಷ್ಠರು ; ಹೀಗೆ ಉತ್ತರೋತ್ತರವಾಗಿ, **ಪ್ರಕೃಷ್ಯೇತ** - ಶ್ರೇಷ್ಠರಾಗುವರು. ಈ ನಾಲ್ಕು ವಿಧ ಅಧಿಕಾರಿಗಳೂ ಸದಾಚಾರ ನಿಷ್ಠರೇ ಎಂಬ ಭಾವದಿಂದ ಹೇಳಿರುತ್ತಾರೆ. ಅಂತಹ ಸದಾಚಾರನಿಷ್ಠೆ ಯಿಲ್ಲವವರು ಆತ್ಮೋಜ್ಜೀವನವನ್ನು ಮಾಡಿಕೊಳ್ಳಲು ಅನರ್ಹರೆಂಬ ಭಾವವು. ಸದಾಚಾರನಿಷ್ಠೆಯುಳ್ಳವರಲ್ಲಾದರೋ ಬರೀ ನಿಷ್ಠೆಯುಳ್ಳವರೂ ಉತ್ತಮರೇ ; ಅದರೊಂದಿಗೆ ಶಮದಮಾದಿ ಆತ್ಮ ಗುಣಗಳಿರುವವರು ಇನ್ನೂ ಉತ್ತಮ; ಅವುಗಳೊಂದಿಗೆ ಉಪಾಯನಿಷ್ಠೆಯುಳ್ಳ ಚತುರ್ವಿಧ ಭಕ್ತರೂ ಇನ್ನೂ ಉತ್ತಮರೇ; ಅವುಗಳೊಂದಿಗೆ ಇತರ ಪುರುಷಾರ್ಥಗಳನ್ನು ನಿರಾಕರಿಸಿ ಮೋಕ್ಷೈಕ ಫಲದಲ್ಲಿ ಮನಸ್ಸಿರುವ ಪ್ರಪನ್ನರು ಪರಮೋತ್ತಮರು ; ಭಕ್ತಿಯೋಗನಿಷ್ಠಪ್ರಪನ್ನನಿಗಿಂತ, ಭರನ್ಯಾಸ ನಿಷ್ಠ ಪ್ರಪನ್ನನು ಅಧಿಕನು ಎಂದು ಹಿಂದೆಯೇ "**ಸತ್ಕರ್ಮನಿರತಾಶ್ಶುದ್ಧಾ ಸಾಂಖ್ಯಯೋಗವಿದಸ್ತಥಾ । ನಾರ್ಹಂತಿ ಶರಣಸ್ಥಸ್ಯ ಕಲಾಂಕೋಟಿತಮೀಮಪಿ**" ಎಂಬ ಪ್ರಮಾಣಮೂಲಕ ಹೇಳಿರುತ್ತಾರೆ.(೨೩೭-೨ನೆಯ ಪುಟಗಳನ್ನು ನೋಡಿ), ಈ ಭರನ್ಯಾಸಾನುಷ್ಠಾನದಲ್ಲೂ ಸ್ವತಂತ್ರ ನಿಷ್ಠನಿಗಿಂತ ಆಚಾರ್ಯನಿಷ್ಠನು ಉತ್ತಮನು. ಈ

**ಉಕ್ತ ಪ್ರಭಾವ ನಿಯಮಸ್ಯ ರಹಸ್ಯತ್ರಯ ಪ್ರತಿಪಾದ್ಯತ್ವಮಾಹ.**

**ಇಪ್ಪ್ರಭಾವ ನಿಯಮುಮ್ ರಹಸ್ಯತ್ರಯತ್ತಿಲ್ ಈಶ್ವರನುಡೈಯ ಪ್ರಶಾಸಿತೃತ್ವಾದಿ ಗುಣಾನುಬಂಧನಮಾಹ ಅನುಸನ್ಧೇಯಮ್.**

---

ಶರಣಾಗತಿ ಮಾಡಿದ ಪ್ರಪನ್ನರು ಏಕಾಂತಿ ಪರಮೈಕಾಂತಿಗಳೆಂದು ಎರಡು ವಿಧವೆಂದು ಯತೀಂದ್ರಮತ ದೀಪಿಕೆಯಲ್ಲೂ ಇತರ ಕಡೆಯಲ್ಲೂ ಹೇಳಲ್ಪಟ್ಟಿರುತ್ತದೆ. ಏಕಾಂತಿಗಳು ಪರಮೈಕಾನ್ತಿಗಳು ಇವರೇ ಸದಾಚಾರ ನಿಷ್ಠೆಯುಳ್ಳ ಪ್ರಪನ್ನರಲ್ಲಿ ಸರ್ವೋತ್ಕೃಷ್ಟರು ಎಂಬ ಭಾವವು. ಹೀಗೆ ಸದಾಚಾರ ಸಂಪನ್ನನಾದ ಪರಮೈಕಾಂತಿಯನ್ನು ಅತ್ಯಂತ ಪ್ರಶಂಸಾವಹನೆಂದೂ, ವಿಶೇಷ ಮಾನನೀಯನೆಂದೂ ಹೇಳಿದರು. ಮುಂದೆ ಈಗ ಉಕ್ತವಾದ ಪ್ರಭಾವ ನಿಯಮವು ರಹಸ್ಯತ್ರಯಗಳಲ್ಲಿ ಎಲ್ಲಿಯಾದರೂ ಪ್ರತಿಪಾದ್ಯವೋ ಎಂದರೆ ಅವುಗಳಲ್ಲಿ ಅನುಸಂಧಾನ ಮಾಡಬಹುದೆಂದು ಸೂಚಿಸುತ್ತಾರೆ.

**ಹಿಂದೆ ಹೇಳಲ್ಪಟ್ಟ ಪ್ರಭಾವನಿಯಮವು ರಹಸ್ಯತ್ರಯದಲ್ಲಿ ಉಪಪಾದಿತವೆಂದು ಹೇಳುತ್ತಾರೆ.**

---

ಇಷ್ಟುದೂರ ಈ ಪ್ರಭಾವ ವ್ಯವಸ್ಥೆಯನ್ನು ಮಾಡಿ, ಎಲ್ಲಾ ಪೂರ್ವಪಕ್ಷಗಳಿಗೂ ಸಮಾಧಾನವನ್ನುಹೇಳಿ, ಸಾಧ್ಯೋಪಾಯದ ಆವಶ್ಯಕತೆಯನ್ನೂ, ಹಾಗೆಯೇ ಪ್ರಪನ್ನನಾದ ಕೃತಕೃತ್ಯನಿಗೂ ನಿತ್ಯನೈಮಿತ್ತಿಕಾಜ್ಞಾ ಕೈಙ್ಕರ್ಯರೂಪ ಸದಾಚಾರ ನಿಷ್ಠೆಯ ಆವಶ್ಯಕತೆಯನ್ನೂ, ಸಹ ಸ್ಥಾಪಿಸಿದರು. ಇದನ್ನು ರಹಸ್ಯತ್ರಯಗಳಲ್ಲೂ ಅನುಸಂಧಾನ ಮಾಡಬಹುದಾದ ಸ್ಥಳಗಳು ಯಾವುವೆಂದರೆ ತಿಳಿಸುತ್ತಾರೆ.—ಇಪ್ಪ್ರಭಾವ ನಿಯಮುಮ್ - ಹೀಗೆ ನಿತ್ಯ ನೈಮಿತ್ತಿಕರೂಪ ಆಜ್ಞಾ ಕೈಙ್ಕರ್ಯಗಳನ್ನು ಮಾಡಿಯೇತೀರಬೇಕೆಂಬನಿಯಮವು, ರಹಸ್ಯತ್ರಯತ್ತಿಲ್ - ಮೂರು ರಹಸ್ಯಗಳಲ್ಲೂ, ಈಶ್ವರನುಡೈಯ - ಸರ್ವೇಶ್ವರನ, ಪ್ರಶಾಸಿತೃತ್ವಾದಿ ಗುಣಾನುಬಂಧಮಾಹ - ನಾರಾಯಣ ಶಬ್ದದಲ್ಲಿ ತೋರಿಬರುವ, ಆಜ್ಞಾಪಿಸುವ ಶಕ್ತಿಯುಳ್ಳೋಣವೇ ಮೊದಲಾದ ಗುಣಗಳ ಸಂಬಂಧಮೂಲಕವಾಗಿ, ಅನುಸನ್ಧೇಯವು. ನಾರಾಃ ಅಯನಂ ಆಧಾರಃ ಯಸ್ಯಸಃ ಎಂಬ ಬಹುವ್ರೀಹ್ಯರ್ಥದಿಂದ ನಿತ್ಯರಾದ ಚೇತನರನ್ನೇ ಆಧಾರವಾಗಿ ಉಳ್ಳವನೆಂಬುದರಿಂದ ಅಂತರ್ಯಾಮಿತ್ವವೂ, ತನ್ಮೂಲಕ ಪ್ರಶಾಸಿತೃತ್ವವೂ ವ್ಯಕ್ತಪಡುತ್ತವೆ. ಆದುದರಿಂದ ಭಗವಂತನು ಶಾಸ್ತಾವಾದುದರಿಂದ ಆತನಿಗೆ ಮಕಾರವಾಚ್ಯನಾಗಿ ದಾಸಭೂತನಾಗಿರುವವನಿಗೆ ಭಗವಂತನ ಆಜ್ಞೆಗಳಾದ ಅಹರಹಸ್ಸಂಧ್ಯಾಮುಪಾಸೀತ

ಇತ್ಯಾದಿಗಳನ್ನು ನಡೆಸುವದೇ ಕರ್ತವ್ಯವೆಂಬುದೂ, ಹಾಗೆ ನಡೆಸದೇ ಇದ್ದರೆ ಆಜ್ಞಾಚ್ಛೇದೀ ಮಮದ್ರೋಹೀ ಎಂದು ಹೇಳಿರುವ ಹಾಗೆ ಆತನ ನಿಗ್ರಹಕ್ಕೆ ಪಾತ್ರನಾಗುವನೆಂಬುದೂ, ದ್ಯೋತಿತವು. ನಾರಾಯಣ ಶಬ್ದವೇನೋ ಮೂಲ ಮಂತ್ರ, ದ್ವಯಗಳಲ್ಲಿ ಉಂಟು; ಚರಮಶ್ಲೋಕದಲ್ಲಿಲ್ಲವಲ್ಲಾ; ಅಲ್ಲಿ ಎಲ್ಲಿ ಅನುಸಂಧೇಯವೆಂದರೆ, ಮಾಮೇಕಂ ಶರಣಂ ವ್ರಜ ಎಂದು ನಿರುಪಾಧಿಕ ಕರುಣೆಯಿಂದ ಪ್ರೇರಿತನಾಗಿ ಹಿತೋಪದೇಶಮಾಡಿ ರಕ್ಷಿಸಬೇಕೆಂದಿರುವ ಆಶ್ರಯೋಪಯುಕ್ತ ಗುಣಸಾಗರನ ವಿಷಯದಲ್ಲಿ ಅವನಿಗೆ ಅನುಕೂಲನಾಗಿ ಪ್ರವರ್ತಿಸಬೇಕೇ ವಿನಾ ಪ್ರತಿಕೂಲ ಪ್ರವೃತ್ತಿ ಕೂಡದಷ್ಟೇ; ಆದುದರಿಂದ ಅಹರಹಸ್ಸಂಧ್ಯಾಮುಪಾಸೀತ ಎಂಬ ತನ್ನ ಆಜ್ಞೆಯನ್ನು ಅನುವರ್ತಿಸುವವನಿಗೆ ಹಾಗೆ ಉಪದೇಶವೇ ವಿನಾ ವರ್ಣಾಶ್ರಮ ಧರ್ಮವನ್ನು ತ್ಯಜಿಸುವವನಿಗಲ್ಲವೆಂದು ಭಾವಿಸತಕ್ಕದ್ದು. "ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ" ಎಂದು ಹಿತೋಪದೇಶವನ್ನು ಮಾಡಿ, ಅನಂತರ ಪರಮಪುರುಷಾರ್ಥಾವಾಪ್ತಿಗೆ ಬೇಕಾದ ಪರಮ ಹಿತೋಪದೇಶವನ್ನು ಮಾಮೇಕಂ ಶರಣಂ ವ್ರಜ ಎಂದು ಉಪದೇಶಿಸಿದರು. ಇವೆಲ್ಲಾ ಸರ್ವೇಶ್ವರನ ನಿರ್ಹೇತುಕ ಕೃಪಾ ಪ್ರಭಾವವೆಂದುಂಟಾದ ಉಪದೇಶವು. ಇದನ್ನು ಮನಸ್ಸಿನಲ್ಲಿಟ್ಟೇ ಪ್ರಕಾಶಿತತ್ವಾದಿಗುಣ ಎಂಬಲ್ಲಿ ಆದಿ ಪದವು. ಈ ಪದದಿಂದ ಆಶ್ರಯೋಪಯುಕ್ತ ಗುಣಗಳೂ ಅವುಗಳಲ್ಲಿ ಮುಂದಿನ ಪಾಶುರದಲ್ಲಿ ಉಪಪಾದಿತವಾಗಿರುವ ನಿರುಪಾಧಿಕ ಕೃಪೆಯೂ ಸಹ ಹೇಳಲ್ಪಟ್ಟವು. ಇಹಲೋಕದಲ್ಲೂ, ಶಾಸ್ತಾವಾದ ನ್ಯಾಯಾಧಿಪತಿಗೆ, ಶಿಕ್ಷಿಸುವ ಸಂದರ್ಭದಲ್ಲಿ ಕೃಪೆಯೂ ಸ್ವಲ್ಪಮಟ್ಟಿಗೆ ಇದ್ದರೆ ಶೋಭಿಸುತ್ತದೆ. ಆದರೆ ಈತನು ಅಸ್ವತಂತ್ರನಾದುದರಿಂದ ತುಂಬಾ ಕೃಪೆಮಾಡಲು ಅವಕಾಶವಿಲ್ಲವು. ಪರಮಾತ್ಮನು ಸ್ವತಂತ್ರನಾದುದರಿಂದ ತನ್ನ ಆಜ್ಞಾನುಸಾರ ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನವನ್ನು ಮಾಡುವನಲ್ಲಿ ಪ್ರೀತಿಯುಂಟಾಗಿ ಶರಣಾಗತಿಯನ್ನನುಷ್ಠಿಸುವಹಾಗೆ ಮಾಡಿ ತನ್ನ ಕೃಪಾ ಪ್ರಭಾವದಿಂದ ರಕ್ಷಿಸುವನೆಂಬುದರಲ್ಲಿ ಸಂದೇಹವಿಲ್ಲವು.

**ಅರ್ಥವು**—ಪ್ರಪನ್ನರಿಗೆ ವರ್ಣಾಶ್ರಮಧರ್ಮ ಪರಿಪಾಲನವು ಮುಖ್ಯವಾಗಿ ಕರ್ತವ್ಯವೆಂದು ಈ ಪಾಶುರ ಮುಖೇನ ಸಙ್ಗ್ರಹಿಸಿ ಹೇಳುತ್ತಾರೆ. "ನಿರಪೇಕ್ಷಂ ಮುನಿಂ ಶಾನ್ತಂ ನಿರ್ವೈರಂ ಸಮದರ್ಶನಂ। ಅನುವ್ರಜಾಮ್ಯಹಂ ನಿತ್ಯಂ ಪೂಯೇಯೇತ್ಯಂಘ್ರಿ ರೇಣುಭಿಃ" "ಜ್ಞಾನೀತ್ವಾತ್ಮೈವ ಮೇಮತಂ" ಎಂಬಿವೇ ಮೊದಲಾದವುಗಳಿಂದ ಪಾವನವೆಂದೂ ಧಾರಕವೆಂದೂ ಹೇಳಲ್ಪಟ್ಟಿರುವ ಚರಮಶ್ಲೋಕ ತಾತ್ಪರ್ಯಗಳನ್ನು ಚೆನ್ನಾಗಿ ಗ್ರಹಿಸಿದ ಭಾಗವತರುಗಳು ವೈದಿಕ ಮರ್ಯಾದೆಯ ಉಲ್ಲಂಘನೆಯಿಂದ ಸಂತೋಷಿಸುವದಿಲ್ಲವೆಂಬದಾಗಿ ತಮ್ಮ ಮಹಾದಯಾಳು

ತಕವಾನ್ಗರಿಕ್ಕಿನ್ರ ತನ್ನಡಿಯಾರ್ಗಳ್ಳೈ ತ್ತ ತಿ (ತ್ತ) ರತ್ತಿಲ್ ।
ಮಿಕವಾದರಂ ಶೆಯ್ಯು ಮೆಯ್ಯರುಳ್ ವಿತ್ತಗ್ನ ಮೆಯ್ಯುರೈಯಿನ್ ।
ಅಕವಾಯರಿನ್ತನರಾರಣ ನೀತಿನೆರಿ ಕುಲ್ಯೈದಲ್ ।
ಉಕವಾರೆನ ವೆಜ್ಕಡೇಶಿಕೆಯುಣ್ಮೈಯುರೈತ್ತನರೇ ॥೩೨॥

ಗಳಾದ ಆಚಾರ್ಯರಾದರೋ ನಿತ್ಯ ನೈಮಿತ್ತಿಕ ರೂಪಗಳಾದ ಆಜ್ಞಾ ಕೈಙ್ಕರ್ಯ ಗಳನ್ನು ಮಾಡಿಯೇತೀರಬೇಕೆಂಬುದನ್ನು ಮನಸ್ಸಿನಲ್ಲಿಟ್ಟು ಹೇಳಿದರೆಂದು ಉಪ ದೇಶಿಸುತ್ತಾರೆ.—ತಗವಾಲ್ - "ಜೀವೇದುಃಖಾಕುಲೇ ವಿಷ್ಣೋಃ ಕೃಪಾ ಕಾ ಪ್ಯುಪಜಾಯತೇ" ಪ್ರಪನ್ನನ ದೈನ್ಯವನ್ನೂ ಅನನ್ಯ ಗತಿತ್ವವನ್ನೂ ನೋಡಿ ವಿಷ್ಣು ವಿಗೆ ಕೃಪೆಯುಂಟಾಗುತ್ತದೆ ಎಂದು ಹೇಳಿರುವಹಾಗೆ, ತಗವಾಲ್ ಎಂದರೆ ಪರಮ ಕೃಪೆಯಿಂದ, ತರಕ್ಕಿನ್ರ - ಆತ್ಮ ಸತ್ತೆಯನ್ನು ಹೊಂದಿರುವ, ತನ್ನಡಿಯಾರ್ ಗಳ್ಳೈ - ತನ್ನ ಪಾದದಲ್ಲಿ ಶರಣಾಗತಿಯನ್ನನುಷ್ಠಿಸಿದ ಪ್ರಪನ್ನರನ್ನು, "ಉನ್ನಡಿ ಕ್ಕೀಳ್ಮರನ್ದು ಪುಗುಂದೇನೇ" ಎಂದು ಹೇಳಿ ಭರನ್ಯಾಸವನ್ನು ಅನುಷ್ಠಿಸಿದ ವರನ್ನು ಎಂಬ ಭಾವವು, ತ್ತ ತರತ್ತಿಲ್ - ತನಗಿಂತಲೂ, "ಜ್ಞಾನೀತ್ವಾತ್ಮೈವ ಮೇಮತಂ" ಎಂದು ಹೇಳಿರುವಹಾಗೆ, ಹೆಚ್ಚು ಮಾಹಾತ್ಮ್ಯ ಇರುವಹಾಗೆ ಅಥವಾ ತ್ತತರತ್ತಿಲ್ - ತನಗೆ ಸಮಾನನಾಗುವಹಾಗೆ, ತರಂ ಎಂದರೆ ಸ್ವಭಾ ವವು, ತ್ತತಿರತ್ತಿಲ್ ಎಂದು ಸಾರಪ್ರಕಾಶಿಕಾ, ಸಾರವಿವರಣೀ ವ್ಯಾಖ್ಯಾತೃಗಳು ಪಾಠಾಂತರವನ್ನು ಸ್ವೀಕರಿಸಿರುತ್ತಾರೆ. ಆಗಲೂ ಅದೇ ಅರ್ಥವೇ, ಅಥವಾ ತನಗೆ ಸಮವಾದ ಭೋಗಪ್ರಧಾನದಿಂದ, ಮಿಗವಾದರಂಶೆಯ್ಯುಮ್ - "ಉದಾ ರಾಸ್ಸರ್ವ ಏವೈತೇ" "ಇಮೌ ಸ್ಮಮುನಿ ಶಾರ್ದೂಲ ಕಿಂಕರೌಸಮುಪಸ್ಥಿತೌ। ಆಜ್ಞಾಪಯಯಥೇಷ್ಟಂ ವೈ ಶಾಸನಂ ಕರವಾವಕಿಮ್" ಎಂದೂ ಹೇಳಿರುವ ಹಾಗೆ, ತನಗಿಂತ ಹೆಚ್ಚಾದವರೆಂದು ಭಾವಿಸುವ, ಮೆಯ್ಯರುಳ್ - ಸತ್ಯವಾಗಿರುವ ಎಂದರೆ ಫಲದಿಂದ ಕೂಡಿರುವ ಕೃಪೆಯಿಂದ, ವಿತ್ತಗ್ನ - ಆಶ್ಚರ್ಯ ಚೇಷ್ಟಿತ ನಾದ ಶ್ರೀಕೃಷ್ಣನ, ಮೆಯ್ಯುರೈಯಿನ್ - ಸತ್ಯವಾಕ್ಯದ ಚರಮ ಶ್ಲೋಕಾಭಿಪ್ರಾ ಯದ, ಅಗವಾಯರಿನ್ದನರ್ - ತಾತ್ಪರ್ಯವನ್ನು ಚನ್ನಾಗಿ ಗ್ರಹಿಸಿದ ಪ್ರಾಜ್ಞ ರಾದ ವ್ಯಾಸಾದಿ ಮಹರ್ಷಿಗಳೂ, ಪಾದಿಹುಸಾಂಬುವಾಹರೇ ಮೊದಲಾದ ಗುರು ಪರಂಪರೆಯೂ ಸಹ, ಆರಣ ನೀತಿ ನೆರಿ-ವೇದಾಂತೋದಿತ ನೀತಿಮಾರ್ಗದ, ಉಪ ನಿಷತ್ತುಗಳಲ್ಲಿ ವಿಧಿವಾಕ್ಯದಿಂದ ಹೇಳಿರುವಮಾರ್ಗದ, ಕುಲ್ಯೈದಲ್ - ಭಂಗ ಎಂದರೆ ನಿತ್ಯ ನೈಮಿತ್ತಿಕರೂಪ ಆಜ್ಞಾ ಕೈಙ್ಕರ್ಯಗಳ ಪರಿತ್ಯಾಗವನ್ನು, ಉಗ ವಾರ್ ಏನ - ಕಂಡು ಸಂತೋಷಿಸುವವಿಲ್ಲವು, ಎಂದು, ಎಙ್ಗಳ್ ದೇಶಿಕರ್ -

ಪಾದಿಹಂಸಾಂಬುವಾಹರೇ ಮೊದಲಾದವರು, ಉಕ್ತ್ಯೈ - ಯಥಾರ್ಥವಾದ ಅಭಿಪ್ರಾಯವನ್ನು ಎಂದರೆ ತತ್ತ್ವಾರ್ಥವನ್ನು, ಉಕ್ತೈತ್ತನರೇ - ಉಪದೇಶಿಸಿದರಲ್ಲವೇ.

ತಾತ್ಪರ್ಯವು--ಕೃತಕೃತ್ಯನಾದ ಪ್ರಪನ್ನನಿಗೆ ನಿತ್ಯ ನೈಮಿತ್ತಿಕಾನುಷ್ಠಾನಗಳ ಆವಶ್ಯಕತೆ ಇಲ್ಲವೆಂಬುದು, ಸರ್ವಧರ್ಮಾನ್ ಪರಿತ್ಯಜ್ಯ ಎಂಬಲ್ಲಿ ಸರ್ವಧರ್ಮಗಳೆಂದು ಹೇಳಿರುವದರಿಂದ, ತೋರಿಬರುತ್ತದೆ, ಎಂಬುವವನ್ನು ಕುರಿತು ಶ್ರೀದೇಶಿಕರವರು ಪರಮದಯೆಯಿಂದ ಹಿತೋಪದೇಶವನ್ನು ಮಾಡುವವರಾಗಿ ಹೇಳುತ್ತಾರೆ — ವೇದಗಳ ಅರ್ಥವನ್ನೂ ವೇದಾಂತಾರ್ಥಾಭಿಪ್ರಾಯವನ್ನೂ, ಇವುಗಳನ್ನು ಅನುಸರಿಸಿ ವೇದೋಪಬೃಹ್ಮಣ ಮಾಡಿದ ಸ್ಮೃತಿಕರ್ತರೇನು, ಧರ್ಮಶಾಸ್ತ್ರಜ್ಞರೇನು, ತಮ್ಮ ಗುರು ಪರಂಪರೆಯೇನು ತಮ್ಮ ಸ್ವಂತ ಆಚಾರ್ಯರೇನು ಇವರುಗಳೆಲ್ಲಾ ಐಕ ಕಂಠ್ಯದಿಂದ ಉಪದೇಶಿಸಿರುವದು ಏನೆಂದರೆ—ನಿತ್ಯ ನೈಮಿತ್ತಿಕಗಳಾದ ಆಜ್ಞಾ ಕೈಂಕರ್ಯಗಳನ್ನು ಎಂದಿಗೂ ತ್ಯಾಗವಮಾಡತಕ್ಕದ್ದಲ್ಲವೆಂದೂ, ಹಾಗೆ ತ್ಯಾಗ ಮಾಡಿದವರನ್ನು ಕಂಡು ತಾವು ಸಂತೋಷಿಸುವದಿಲ್ಲವೆಂದೂ, ಇಂತಹ ಕೃತ್ಯಾಕರಣಾಪರಾಧದಿಂದ ಸ್ವಾಮಿಯ ನಿಗ್ರಹಕ್ಕೆ ಪಾತ್ರರಾಗುವದು ಸರಿಯಲ್ಲವೆಂದೂ, ಈ ಪಾಶುರದ ಮೂಲಕ ಸೂಚಿಸುತ್ತಾರೆ. ನಿತ್ಯ ನೈಮಿತ್ತಿಕ ಪರಿತ್ಯಾಗವನ್ನು ಚರಮಶ್ಲೋಕವು ಅನುಮೋದಿಸುತ್ತದೆ ಎಂದು ಹೇಳುವವರು ಪೂರ್ವವಾಕ್ಯಗಳನ್ನು ಮರೆತು ಹೇಳುವ ಹಾಗೆ ಇರುತ್ತದೆ. ೧೬ನೆಯ ಅಧ್ಯಾಯದಲ್ಲಿ "ಯಶ್ಶಾಸ್ತ್ರ ವಿಧಿ ಮುತ್ಸೃಜ್ಯ ವರ್ತತೇ ಕಾಮಕಾರತಃ । ನ ಸ ಸಿದ್ಧಿಮವಾಪ್ನೋತಿ ನಸುಖಂ ನ ಪರಾಂಗತಿಮ್ । ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ ಕಾರ್ಯಾಕಾರ್ಯವ್ಯವಸ್ಥಿತೌ" ಎಂಬ ಉಪದೇಶವು, ಉಪಾಯಾನುಷ್ಠಾನ ಮಾಡಿದವನಿಗೂ ಕೂಡ ಶಾಸ್ತ್ರವಿಧಿಯು ಆವಶ್ಯಕವೆಂದೂ, ಶಾಸ್ತ್ರವಿಧಿಯನ್ನು ತ್ಯಜಿಸಿದವನಿಗೆ ಸುಖವೂ ಪರಾಂಗತಿಯೂ ಇಲ್ಲವೆಂದೂ, ಹೀಗೆ ಕಾರ್ಯಾಕಾರ್ಯವ್ಯವಸ್ಥೆಯಲ್ಲಿ ಶಾಸ್ತ್ರವೇ ಪ್ರಮಾಣವೆಂದು ಹೇಳಿರುವದರಿಂದ, ಉಪಾಯನಿಷ್ಠನೂ ಕೂಡ ಅಹರಹಸ್ಸಂಧ್ಯಾಮುಪಾಸೀತ ಇತ್ಯಾದಿ ವಿಧಿವಾಕ್ಯಗಳಿಗೆ ವಿರುದ್ಧವಾಗಿ ನಡೆಯಕೂಡದೆಂದು ಹೇಳಿತು. ಅನಂತರ ೧೮ನೆಯ ಅಧ್ಯಾಯದಲ್ಲಿ ಅಮೋಘ ಚರಮಶ್ಲೋಕವನ್ನು ಲೀಲಾಸಾರಥಿಯು ಉಪದೇಶಿಸುವದಕ್ಕೆ ಹಿಂದೆಯೇ, ೪೫. ೪೬ನೆಯ ಶ್ಲೋಕಗಳಲ್ಲಿ "ಸ್ವೇಸ್ವೇಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ" ಎಂದೂ, "ಸ್ವಕರ್ಮಣಾ ತ ಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ" ಎಂದೂ, ಸ್ವವರ್ಣೋಚಿತ ಶಾಸ್ತ್ರ ವಿಹಿತಕರ್ಮಗಳ ಅನುಷ್ಠಾನವು ವಿಧಿಸಲ್ಪಟ್ಟಿರುತ್ತದೆ. ಇದೆಲ್ಲಾ ಉಪಾಯನಿಷ್ಠನ ವಿಷಯವಾದುದರಿಂದ ಆತನಿಗೆ ಯಾವ ಸ್ವವರ್ಣೋಚಿತ ಧರ್ಮಗಳೂ

ಬೇಕಿಲ್ಲವೆಂಬುದು ಸಮಂಜಸವಾದ ಅಭಿಪ್ರಾಯವಲ್ಲವು. ಅದೂ ಅಲ್ಲದೆ, ೧೮ ನೆಯ ಅಧ್ಯಾಯದ ಆದಿಯಲ್ಲೇ "ಯಜ್ಞ ದಾನ ತಪಃಕರ್ಮ ನತ್ಯಾಜ್ಯಂ ಕಾರ್ಯ ಮೇವ ತತ್" ಎಂದು ಹೇಳಿರುತ್ತದೆ. ಇಲ್ಲಿ ಯಜ್ಞ ಶಬ್ದದಲ್ಲಿ ನಿತ್ಯ ನೈಮಿತ್ತಿಕ ಪಂಚಮಹಾ ಯಜ್ಞಗಳು ಅಂತರ್ಗತಗಳು. ಹೀಗೆ ಉಪದೇಶಿಸಿ, ಶಾಸ್ತ್ರಾಂತ್ಯದಲ್ಲಿ "ಸರ್ವಧರ್ಮಾನ್ ಪರಿತ್ಯಜ್ಯ" ವೆಂಬಲ್ಲಿ ನಿತ್ಯನೈಮಿತ್ತಿಕಗಳು ಬೇಡವೆಂದು ಎಂದಿಗಾದರೂ ಉಪದೇಶಿಸುವರೇ? "ಕುರ್ವನ್ನೇವೇಹಕರ್ಮಾಣಿ" ಎಂಬ ಉಪನಿಷದುಪದೇಶಕ್ಕೂ ವಿರೋಧವಾಗಿ ಉಪದೇಶಿಸುವರೇ? ಆರಣನೀತಿ ನೆರಿಕುಲ್ಯೈತಲ್- ಆದುದರಿಂದ ಇಂತಹ ವೇದಾಂತ ವಿಧಿಮಾರ್ಗದ ಭಂಗವನ್ನು ಎಂದರೆ ಇಂತಹ ಆಜ್ಞಾ ಕೈಂಕರ್ಯಗಳ ತ್ಯಾಗವನ್ನು ಶಾಸ್ತ್ರಜ್ಞರಾದ ಮಹರ್ಷಿಗಳೂ ತಮ್ಮ ಆಚಾರ್ಯರೂ ಸಹ, ಉಕಪಾರ್ - ಸಂತೋಷಿಸರು ಎಂದು ಹೇಳಿದರು. ಅವಶ್ಯ ಕರ್ತವ್ಯವೆಂಬುದಕ್ಕೆ ಶ್ರುತಿ,ಸ್ಮೃತಿ,ಪುರಾಣೇತಿಹಾಸ ಪ್ರಮಾಣಗಳ ಬಾಹುಳ್ಯ ಉಂಟೆಂಬ ಬಲದಿಂದ ಹಾಗೆ ಹೇಳಿರುತ್ತಾರೆ. ಅರಣನೀತಿನೆರಿ ಎಂದು ಹೇಳಿರುವದಕ್ಕೆ ಶ್ರುತಿ ಪ್ರಮಾಣಗಳುಂಟೋ? ಎಂದರೆ ಸಂಧ್ಯಾವಂದನೆ ಮನ್ತ್ರಗಳೆಲ್ಲಾ ಶ್ರುತಿ ಮನ್ತ್ರಗಳೇ. "ಸೂರ್ಯಶ್ಚ" "ಅಗ್ನಿಶ್ಚ"ಮನ್ತ್ರಗಳೂ, ಗಾಯತ್ರೀಮನ್ತ್ರವೂ, ಗಾಯತ್ರೀದೇವತಾ ಉಪಸ್ಥಾನ ಮಂತ್ರಗಳೆಲ್ಲಾ ತೈತ್ತರೀಯ ಉಪನಿಷದ್ವಾಕ್ಯಗಳು. "ಮಿತ್ರಸ್ಯಾ" ದಿ ಮನ್ತ್ರಗಳಾಗಿರುವ ಋಗ್ಯಜುರ್ವೇದ ಮನ್ತ್ರಗಳ ತ್ಯಾಗ ಹೇಗೆ? ಅಗಲಿ ಮನ್ತ್ರಗಳೆಲ್ಲಾ ವೇದಪ್ರತಿಪಾದಿತಗಳೆಂದು ಒಪ್ಪೋಣ. ಬ್ರಹ್ಮವಿತ್ತಿಗೆ ಆವಶ್ಯಕವೆಂದು ಎಲ್ಲಿ ಹೇಳಿದೆ? ಎಂದರೆ :—

(೧) "ತಸ್ಮಾದ್ಬ್ರಾಹ್ಮಣೋಽಹೋರಾತ್ರ ಸಂಯೋಗೇ ಸನ್ಧ್ಯಾಮುಪಾಸ್ತೇ (ಛಾಂ. ಶ್ರುತಿ)

(೨) "ತದುಹವಾ ಏತೇ ಬ್ರಹ್ಮವಾದಿನಃ ಪೂರ್ವಾಭಿಮುಖಾ ಸ್ಸಂಧ್ಯಾಯಾಂ ಗಾಯತ್ರ್ಯಾ ಅಭಿಮನ್ತ್ರಿತಾ ಪ ಊರ್ಧ್ವಂ ವಿಕ್ಷಿಪಂತಿ (ತೈ.ಆರಣ)

(೩) ಉದ್ಯನ್ತ ಮಸ್ತಂ ಯನ್ತಮಾದಿತ್ಯ ಮಭಿಧ್ಯಾಯನ್ ಕುರ್ವನ್ ಬ್ರಾಹ್ಮಣೋ ವಿದ್ವಾನ್ಸಕಲಂ ಭದ್ರಮಶ್ನುತೇಽಸಾವಾದಿ ಬ್ರಹ್ಮೇತಿ ಬ್ರಹ್ಮೈವ ಸನ್ಬ್ರಹ್ಮಾಪ್ಯೇತಿ ||

(೪) "ನೋಪತಿಷ್ಠೇತ ಯಃ ಪೂರ್ವಾಮುಪಾಸ್ತೇ ನ ಚ ಪಶ್ಚಿಮಾಂ |
ಸ ಶೂದ್ರವ ದ್ಬಹಿಷ್ಕಾರ್ಯ ಸ್ಸರ್ವಸ್ಮಾತ್ಸಾಧು ಕರ್ಮಣಃ" || (ಮನುಃ)

(೫) "ಅನಾಗತಾಂತು ಯೇ ಪೂರ್ವಾ ಮನತೀತಾಂತು ಪಶ್ಚಿಮಾನ್ |
ಸನ್ಧ್ಯಾಂನೋಪಾಸತೇ ವಿಪ್ರಾಃ ಕಥಂತೇ ಬ್ರಾಹ್ಮಣಾ ಸ್ಸ್ಮೃತಾಃ ||
ಯೋ ಹಿಂಸನ್ತಿ ಸದಾಸೂರ್ಯಂ ಮೋಕ್ಷದ್ವಾರ ಮನುತ್ತಮಂ |

ಕಥಂ ಮೋಕ್ಷಸ್ಯ ಸಂಪ್ರಾಪ್ತಿಃ ಭವೇತ್ತೇಷಾಂ ದ್ವಿಜನ್ಮನಾಮ್"? ॥
(ಪಿತಾಮಹಃ)

(೬) ಕಾಮಾನ್ಮೋಹಾತ್ತಥಾಲೋಭಾತ್ಸನ್ಧ್ಯಾಂ ನಾತಿಕ್ರಮೇದ್ದ್ವಿಜಃ ।
ಸನ್ಧ್ಯಾತಿಕ್ರಮಣಾ ದ್ವಿಪ್ರೋ ಬ್ರಾಹ್ಮಣ್ಯಾತ್ಪತತೇ ಯತಃ" ॥
(ಸ್ಮೃತ್ಯರ್ಥಸಾರವು)

(೭) ಗಾಯತ್ರೀಂಚಿನ್ತಯೇದ್ಯಸ್ತು ಹೃತ್ಪದ್ಮೇಸಮುಪಸ್ಥಿತಾಮ್। ಸರ್ವಧರ್ಮ ವಿನಿರ್ಮುಕ್ತ ಸ್ಸಯಾತಿ ಪರಮಾಂಗತಿಮ್ ॥ (ಯೋಗ ಯಾಜ್ಞ್ಯಃ)

ಗಾಯತ್ರಿಯ ಮುಖ್ಯಾರ್ಥವೇನೆಂದರೆ—ಸವಿತೃಮಂಡಲಾನ್ತರ್ವರ್ತಿಯಾದ ಪುಂಡರೀಕಾಕ್ಷನಾದ, ಸಕಲ ಜಗತ್ತಿಗೂ ಆಧಾರಭೂತನಾದ ವಿಷ್ಣು ಸಂಜ್ಞೆಯುಳ್ಳ ಯಾವ ಭರ್ಗವೋ, ಯಾವ ತೇಜಸ್ಸೋ, ಅದನ್ನು ಧೀಮಹಿ - ಚಿನ್ತಿಸೋಣ ವೆಂಬರ್ಥವು. ಇಂತಹ ಅರ್ಥವುಳ್ಳ ಗಾಯತ್ರಿಯು ಪ್ರಪನ್ನನಿಗೆ ಹೇಗೆ ಅನಾವ ಶ್ಯಕವೆಂದು ಹೇಳುವರೋ ತಿಳಿಯದು. ಈ ಸಂದರ್ಭವಲ್ಲಿ ಯೋಗ ಯಾಜ್ಞವಲ್ಕ್ಯರು ಹೇಳಿರುವದೇನೆಂದರೆ."ಈಶ್ವರಂ ಪುರುಷಾಖ್ಯಂಚ ಸತ್ಯಧರ್ಮಾಣ ಮಚ್ಯುತಮ್। ಭರ್ಗಾಖ್ಯಂ ವಿಷ್ಣುಸಂಜ್ಞಂಚ ಧ್ಯಾತ್ವಾzಮೃತ ಮುಪಾಶ್ನುತೇ ॥ ಇಲ್ಲಿ ಭರ್ಗ ಶಬ್ದವು ರುದ್ರನನ್ನು ಬೋಧಿಸುತ್ತದೆಂಬ ಕೆಲವರ ವಾದವು ನಿರಾಕರಿಸಲ್ಪಟ್ಟಿತು. ರುದ್ರನನ್ನು ಬೋಧಿಸುವ ಭರ್ಗಶಬ್ದವು ಪುಲ್ಲಿಂಗವಾಗಿರತಕ್ಕದ್ದು. ಆಗ ಭರ್ಗಂ ಎಂದಿರಬೇಕು. ಇಲ್ಲಿರುವದು ನಪುಂಸಕಲಿಂಗ ದ್ವಿತೀಯಾಂತ ಪದವು.

(೮) "ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾ ಮೃತಮಶ್ನುತೇ"

ಇಲ್ಲಿ ಅವಿದ್ಯಯಾ ಎಂದರೆ ನಿತ್ಯನೈಮಿತ್ತಿಕ ಕರ್ಮಾನುಷ್ಠಾನದಿಂದ ಎಂದು, ವ್ಯಾಸಮಹರ್ಷಿಯೂ, ಶ್ರೀ ಭಾಷ್ಯಕಾರರೂ ಸಹ ಅರ್ಥಮಾಡಿರುತ್ತಾರೆ.

(೯) ಉಪತಿಷ್ಠನ್ತಿ ವೈ ಸಂಧ್ಯಾಂ ಯೇನಪೂರ್ವಾಂ ನಪಶ್ಚಿಮಾಂ। ವ್ರಜನ್ತಿ ತೇ ದುರಾತ್ಮಾನ ಸ್ತಾಮಿಸ್ರಂ ನರಕಂ ನೃಪ। ತಸ್ಮಾನ್ನೋಲ್ಲಂಘನಂ ಕಾರ್ಯಂ ಸನ್ಧ್ಯಾವಂದನ ಕರ್ಮಣಃ ॥ (ವಿಷ್ಣುಪುರಾಣವು)

(೧೦) "ಸನ್ಧ್ಯಾಮುಪಾಸತೇ ಯೇತು ಸತತಂ ಸಂಶಿತವ್ರತಾಃ।
ವಿಧೂತ ಪಾಪಾಸ್ತೇಯಾನ್ತಿ ಬ್ರಹ್ಮಲೋಕಂ ಸನಾತನಂ॥" (ಯಮಃ)

(೧೧) "ವೇದೋದಿತಂ ಸ್ವಕಂ ಕರ್ಮ ನಿತ್ಯಂ ಕುರ್ಯಾ ದತನ್ದ್ರಿತಃ। ತದ್ಧಿ ಕುರ್ವನ್ ಯಥಾಶಕ್ತಿ ಪ್ರಾಪ್ನೋತಿ ಪರಮಾಂ ಗತಿಮ್" ॥ (ಮನುಃ)

(೧೨) "ಬ್ರಹ್ಮಯಜ್ಞಪರೋ ವಿಪ್ರೋ ಬ್ರಹ್ಮಲೋಕೇ ಮಹೀಯತೇ " ॥
"ಬ್ರಹ್ಮಯಜ್ಞ ವಿಹೀನಶ್ಚ ಬ್ರಹ್ಮಹಾ ಕೀರ್ತಿತೋ ಬುಧೈಃ" (ಪೈಠೀನಸಿಃ)

(೧೩) ಆಚಾರಾ ಲ್ಲಭ್ಯತೇ ಚಾ ಯುರಾಚಾರಾ ದೀಪ್ಸಿತಾಃ ಪ್ರಜಾಃ ।
ಆಚಾರಾ ದ್ಧನ ಮಕ್ಷ್ಯಯ್ಯ ಮಾಚಾರೋ ಹನ್ತ್ಯ ಲಕ್ಷಣಮ್(ಮನುಃ)
(೧೪) ವೇದಾಧ್ಯಯನ ಹೀನೋಽಪಿ ಶ್ರದ್ಧದಾನೋ ಜಿತೇನ್ದ್ರಿಯಃ।
ಆಚಾರಯುಕ್ತೋ ವಿಪ್ರಸ್ತು ಪುಣ್ಯಾಂಗತಿ ಮವಾಪ್ನುಯಾತ್॥ ಮನುಃ
(೧೫) ವರ್ಣಾಶ್ರಮೋಕ್ತಂ ಕರ್ಮೈವ ವಿಧ್ಯುಕ್ತಂ ಕಾಮ ಪೂರಕಂ ।
ಯೇನ ಯುಕ್ತಿಯಕೇ ಗಾರ್ಗಿ ಬಂಧಸ್ತಸ್ಯ ಕರೇ ಸ್ಥಿತಃ।
ವರ್ಣಾಶ್ರಮೋಕ್ತಂ ಯಃ ಕುರ್ಯಾದ್ವಿಧ್ಯುಕ್ತಂ ಕಾಮವರ್ಜಿತಂ।
ವಿಧಿವತ್ಕರ್ವತಸ್ತಸ್ಯ ಮುಕ್ತಿರ್ಗಾರ್ಗಿ ಕರೇಸ್ಥಿತಾ।
ಚತುರ್ಣಾವಾಶ್ರಮಸ್ಥಾನಾ ಮಹನ್ಯಹನಿ ನಿತ್ಯಶಃ। ವಿಧ್ಯುಕ್ತಂ ಕರ್ಮ
ಕರ್ತವ್ಯಂ ಕಾಮಸಙ್ಕಲ್ಪ ವರ್ಜಿತಂ " ॥ (ಯೋಗಯಾಜ್ಞವಲ್ಕ್ಯಃ)
(೧೬) ವರ್ಣಾಶ್ರಮೋಕ್ತಂ ಕರ್ಮೈವ ಯೇನ ಕುರ್ಯಾದ್ದ್ವಿಜಾಧಮಃ।ಸಯಾತಿ
ನರಕಾನ್ ಘೋರಾನ್ ಸಾರಾಲೀಂ ಯೋನಿಮಾಪ್ನುಯಾತ್॥(ಪರಾಶರಃ)
(೧೭) ಸಂಧ್ಯಾಹೀನೋಽಶುಚಿ ರ್ನಿತ್ಯ ಮನರ್ಹ ಸ್ಸರ್ವಕರ್ಮಸು।

ಹೀಗೆ ಶ್ರುತಿ ಸ್ಮೃತಿ ಧರ್ಮಶಾಸ್ತ್ರ ಇತಿಹಾಸಪುರಾಣಗಳೆಲ್ಲಾ ವರ್ಣಾಶ್ರಮ ಧರ್ಮಗಳು ಅವಶ್ಯ ಕರ್ತವ್ಯಗಳೆಂದು ಹೇಳಿರುವಾಗ, ಶ್ರುತಿವಾಕ್ಯಕ್ಕೂ, ಸ್ಮೃತಿಧರ್ಮ ಶಾಸ್ತ್ರಾದಿ ಗ್ರಂಥಗಳ ಕರ್ತೃರಾದ ಮಹರ್ಷಿಗಳಾಗಿ ಬ್ರಹ್ಮನಿಷ್ಠರುಗಳಾಗಿ ಪ್ರಾಜ್ಞ ರಾದ ತತ್ವದರ್ಶಿಗಳ ಅಭಿಪ್ರಾಯಕ್ಕೂ,ವಿರುದ್ಧವಾದ ಅಭಿಪ್ರಾಯವನ್ನು ಹೇಳಬಹು ದೇ? ಇಂತಹ ಅಪಾರ್ಥವನ್ನು ಚರಮಶ್ಲೋಕಕ್ಕೆ ಕಲ್ಪಿಸಿ,ತಮಗೂ,ತಮ್ಮನ್ನು ಅನು ಸರಿಸಿ ನಡೆಯುವವರಿಗೂ ಹಿತ ಪ್ರವೃತ್ತಿ ಇಲ್ಲದ ಹಾಗೆ ಮಾಡಿ, ಭಗವಂತನ ನಿಗ್ರ ಹಕ್ಕೆ ತಾವೂ ಪಾತ್ರರಾಗಿ, ಇತರರೂ ಪಾತ್ರರಾಗುವಹಾಗೆ ಮಾಡುತ್ತಾರಲ್ಲಾ ಎಂಬ ಪರಿತಾಪದಿಂದ ಈ ಪಾಶುರವನ್ನು ಅನುಗ್ರಹಿಸಿರುತ್ತಾರೆ. ಮಹಾ ಭಾಗವತರು ಗಳಾದ ಜ್ಞಾನನಿಧಿಗಳಿಗೆ ಯಾವಾಗ ಈ ಪರಿತ್ಯಾಗವು ಇಷ್ಟವಲ್ಲವೋ. ಆವಾಗ ಭಗವಂತನಿಗೂ ಇಷ್ಟವಲ್ಲವೆಂಬುದು ಸ್ಪಷ್ಟವು. ಇತರ ವಿಷಯವು ಹಾಗಿರಲಿ, ತಮಗೆ ತಮ್ಮ ಆಚಾರ್ಯರ ಉಪದೇಶವು, ಪ್ರಸನ್ನನೂ ಇಂತಹ ಆಜ್ಞಾ ಕೈಙ್ಕರ್ಯ ಗಳನ್ನು ಮಾಡಿಯೇತೀರಬೇಕೆಂದು ಇರುವದರಿಂದ, ಗುರುವಿನ ಆಜ್ಞೆಯು ತಮಗೆ ತುಂಬಾ ಉಪಾದೇಯವು ಎಂಬುದೂ ಸೂಚಿತವು. ಈ ಆಚಾರ್ಯರುಗಳು ಸತ್ಸಂಪ್ರ ದಾಯಮೂಲಕ ಶ್ರೀ ಭಾಷ್ಯಕಾರರ ಅಭಿಪ್ರಾಯವನ್ನು ಚನ್ನಾಗಿ ಅರಿತವರಾದ ಪ್ರಯುಕ್ತ ಅವರ ಉಪದೇಶವು, ತಮಗೆ ತುಂಬಾ ಗ್ರಾಹ್ಯವೆಂಬ ಭಾವವೂ ತೋರಿ ಬರುತ್ತದೆ. ಶ್ರೀ ಭಾಷ್ಯಕಾರರು ತಮಗೆ ದೇಹವಿಯೋಗವಾಗುವ ದಿನದಲ್ಲೂ ಶಕ್ತಿ ತುಂಬಾ ಕುಂದಿದ್ದರೂ, ತಮ್ಮನ್ನು ಎತ್ತಿ ನಿಲ್ಲಿಸಬೇಕೆಂದು ಇಬ್ಬರು ಶಿಷ್ಯರಿಗೆ

ಶ್ಲೋಕವು. ಚಾತುರ್ವರ್ಣ್ಯ ಚತುರ್ವಿಧಾಶ್ರಮ ಮುಖೇ ಭೇದೇ ಯಥಾವಸ್ಥಿತೇ
ವೃತ್ತಂ ತನ್ನಿಯತಂ ಗುಣಾನುಗುಣಯಾವೃತ್ತ್ಯಾ ವಿಶಿಷ್ಟಂ ಶ್ರಿತಾಃ ||

ಹೇಳಿ, ಸಂಧ್ಯಾವಂದನದಲ್ಲಿ ಅರ್ಘ್ಯವನ್ನು ಸಮರ್ಪಿಸಿದರೆಂಬ ಇತಿಹಾಸವುಂಟು. ಆಜ್ಞಾ ಕೈಂಕರ್ಯಗಳು ಪ್ರಪನ್ನನಿಗೆ ಅನಾವಶ್ಯಕವೆಂದು ಹೇಳುವವರು ಈ ಶ್ರೀ ಯತಿರಾಜರ ಅನುಷ್ಠಾನವನ್ನು ಪರಿಗ್ರಹಿಸಲಿ ಎಂಬುದು ಇಲ್ಲಿ ಆಶಯವು.

**ಶ್ಲೋಕಾರ್ಥವು**—ಇಷ್ಟುದೂರ ಕಷ್ಟಪಟ್ಟು ಈ ಭರನ್ಯಾಸದ ಪ್ರಭಾವವನ್ನು ವ್ಯವಸ್ಥೆ ಮಾಡಿ, ಸಿದ್ಧಂತ ಸ್ಥಾಪನೆಯನ್ನು ಮಾಡುವ ಸಂದರ್ಭದಲ್ಲಿ ಉಂಟಾಗಬಹುದಾದ ಅನೇಕ ಪೂರ್ವಪಕ್ಷಗಳಿಗೂ ಸಮಾಧಾನವನ್ನು ಹೇಳಿ, ಪ್ರಪನ್ನನಿಗೆ ಆಜ್ಞಾರೂಪ ನಿತ್ಯನೈಮಿತ್ತಿಕ ಕರ್ಮಗಳ ಆವಶ್ಯಕತೆ ಏನೂ ಇಲ್ಲವೆಂಬ ಪೂರ್ವಪಕ್ಷಕ್ಕೆ ಸಮಂಜಸಗಳಾದ ಸಮಾಧಾನವೇನೋ ಹೇಳಿದ್ದು ಸರಿಯೇ. ಆದರೆ ಈ ಕಲಿಕಾಲದಲ್ಲಿ ವರ್ಣಾಶ್ರಮ ಧರ್ಮಗಳು ಸರಿಯಲ್ಲವೆಂದೂ, ಎಲ್ಲರೂ ಸಮವೆಂದೂ, ಆಹಾರಾದಿಗಳಲ್ಲಿ ನಿರ್ಬಂಧ ಕೂಡದೆಂದೂ, ಹೀಗೆಲ್ಲಾ ಅಭಿಪ್ರಾಯಗಳು ಪ್ರಬಲವಾಗಿರುವಾಗ, ತಾವು ಈಗಇಷ್ಟು ಕಷ್ಟಪಟ್ಟು ಪ್ರಭಾವ ವ್ಯವಸ್ಥೆಯನ್ನು ಮಾಡಿದುದು, ಅರಣ್ಯದಲ್ಲಿ ಬಿದ್ದ ಚಂದ್ರಿಕೆಯಂತೆ ನಿರರ್ಥಕವಲ್ಲವೋ ? ಎಂದರೆ, ಈಗಲೂ ಕೂಡ ಸತ್ಸಂಪ್ರದಾಯದಲ್ಲಿ ಮಮತೆಯುಳ್ಳ ಪ್ರಪನ್ನರಾದ ಮಹನೀಯರುಂಟು, ಅವರುಗಳು ಈ ವ್ಯವಸ್ಥೆಯ ವಿಷಯದಲ್ಲಿ ಚಿಂತಿಸುವರು, ಅವರಿಗಾಗಲಿ ಉಪಯುಕ್ತವು. ಆದುದರಿಂದ ನಿರರ್ಥಕವಲ್ಲವೆಂದು ಹೇಳಿ, ಈ ಅಧಿಕಾರವನ್ನು ಪೂರೈಸುತ್ತಾರೆ. ಈ ಭರನ್ಯಾಸ ಸತ್ಸಂಪ್ರದಾಯಗಳ ರಕ್ಷೆಯು ಅವರುಗಳಿಗೆ ಸೇರಿದುದು ಎಂದು ಹೇಳುತ್ತಾರೆ.-ಚಾತುರ್ವರ್ಣ್ಯ....ಮುಖೇ, ಚಾತುರ್ವರ್ಣ್ಯ-ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕು ವರ್ಣವೂ, ಚತುರ್ವಿಧಾಶ್ರಮ - ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಯತ್ಯಾಶ್ರಮವೆಂಬ ನಾಲ್ಕು ಆಶ್ರಮಗಳ, ಮುಖೇ - ಮೊದಲಾಗಿವುಳ್ಳ, ಭೇದೇ - ಭೇದವು (ಸತಿಸಪ್ತಮಿ), ಇಲ್ಲಿ ಆದಿ ಶಬ್ದದಿಂದ ಶಾಖೆ ಮೊದಲಾದವು ಹೇಳಲ್ಪಟ್ಟವು; ಯಥಾವಸ್ಥಿತೇ ಸತಿ-ಶಾಸ್ತ್ರಗಳಲ್ಲಿ ಹೇಗೆ ಹೇಳಿದೆಯೋ ಹಾಗೆ,ತಮ್ಮಿಂದ ಈಗ ಈ ಅಧಿಕಾರದಲ್ಲಿ ವ್ಯವಸ್ಥೆ ಮಾಡಲ್ಪಡಲಾಗಿ, ತನ್ನಿಯತಂ ವೃತ್ತಂ - ಆಯಾ ವರ್ಣಾಶ್ರಮಚವರಿಗೆ ಶಾಸ್ತ್ರಗಳಲ್ಲಿ ವಿಹಿತವಾದ ಧರ್ಮವನ್ನು, ಗುಣಾನುಗುಣಯಾವೃತ್ತ್ಯಾವಿಶಿಷ್ಟಂ - ತನ್ನ ಈಗಿನ ಪ್ರಪನ್ನ ಧರ್ಮಕ್ಕೆ ಅನುಗುಣವಾದುದು ಭಗವತ್ಕೈಂಕರ್ಯವು, ಆದುದರಿಂದ ಆಜ್ಞಾನುಜ್ಞಾ ಕೈಂಕರ್ಯದ, ವೃತ್ತ್ಯಾ-ಅನುಷ್ಠಾನದಿಂದ, ವಿಶಿಷ್ಟಂ - ಯುಕ್ತವಾದುದನ್ನಾಗಿ, ಶ್ರಿತಾಃ - ಆಶ್ರಯಿಸಿರುವವರು (ಸಾ. ದೀ.) ಅಥವಾ ಪ್ರಪ

ತ್ಯಾಗೋಪಪ್ಲವ ನಿತ್ಯದೂರ ಶರಣವ್ರಜ್ಯಾವಿಧೌ ಕೋವಿದಾ।
ಶ್ಚಿಂತಾ ಮಭ್ಯುಪಗನ್ತು ಮನ್ತಿಮಯುಗೇ ಪ್ಯೇಕಾನ್ತಿನ ಸ್ಸಂತಿ ನಃ॥೩೩॥

ನ್ನತ್ಯ ಏಕಾಂತಿಕತ್ವಾದಿ ಗುಣಕ್ಕೆ ಅನುರೂಪವಾದ ಆಜ್ಞಾನುಜ್ಞಾ ಕೈಂಕರ್ಯಗಳಿಂದ ಯುಕ್ತವಾದುದನ್ನಾಗಿ ಆಶ್ರಯಿಸಿದವರು (ಸಾ. ಸಾ) ಅಥವಾ ವರ್ಣಾಶ್ರಮ ಧರ್ಮಗಳಿಗೆ ಅನುಗುಣವಾದ ವೃತ್ತಿಗಳಿಂದ ವಿಶಿಷ್ಟರಾದವರು, ಅಥವಾ ಗೀತೆಯಲ್ಲಿ ಹೇಳಿರುವಹಾಗೆ ಅಮಾನಿತ್ವಾದಿ ಪ್ರಪನ್ನನಿಗೆ ಯೋಗ್ಯವಾದ ಆತ್ಮಗುಣಗಳಿಂದ ಯುಕ್ತವಾದ ಅನುಷ್ಠಾನವನ್ನು ಆಶ್ರಯಿಸಿದವರು (ಸಾ. ಸಂ.), ಹೀಗೆ ನಿಯತ ವೃತ್ತವನ್ನು ಆಶ್ರಯಿಸಿದವರು, ಇನ್ನೂ ಎಂತವರೆಂದರೆ ಉತ್ತರಾರ್ಧದಿಂದ ಹೇಳುತ್ತಾರೆ. **ತ್ಯಾಗೋ......ವಿಧೌ ಕೋವಿದಾಃ** - **ತ್ಯಾಗ** - ಪೂರ್ವ ಪಕ್ಷಿಗಳು ಹೇಳಿದಹಾಗೆ ಸಮಸ್ತ ಧರ್ಮಗಳ ಸ್ವರೂಪತ್ಯಾಗವೆಂಬರ್ಥದಿಂದುಂಟಾದ **ಉಪಪ್ಲವ** - ಶಾಸ್ತ್ರಪ್ರಮಾಣ ಸಂಪ್ರದಾಯಗಳಿಗೆ ಉಂಟಾದ ಸಂಕ್ಷೋಭದಿಂದ, **ನಿತ್ಯ ದೂರ** - ಯಾವಾಗಲೂ ಇಂತಹ ಗಂಧವಿಲ್ಲದೆ ಅತಿದೂರವಾಗಿ ವರ್ತಿಸುವ, **ಶರಣಂವ್ರಜ್ಯಾವಿಧೌ**-"**ಮಾಮೇಕಂ ಶರಣಂವ್ರಜ**" ಎಂದು ಗೀತಾ ಚರಮ ಶ್ಲೋಕದ ವಿಧಿಯಲ್ಲಿ, **ಕೋವಿದಾಃ** - ಲೀಲಾ ಸಾರಥಿಯ ಅಭಿಪ್ರಾಯ ಸ್ವಾರಸ್ಯವನ್ನು ಗ್ರಹಿಸಿದ ಪ್ರಾಜ್ಞರು, ಇಂತಹ **ಏಕಾನ್ತಿನಃ** - ಚಾತಕ ವೃತ್ತಿಯನ್ನು ಹೊಂದಿ ಏಕದೇಶಧ್ಯಾನದಿಂದ ಪರಮಾತ್ಮನನ್ನು ಧ್ಯಾನಿಸುವ ಪ್ರಪನ್ನರು, **ಅಂತಿಮ ಯುಗೇಪಿ**-ವರ್ಣಾಶ್ರಮ ಧರ್ಮಗಳನ್ನೆಲ್ಲಾ ತಲಕೆಳಕು ಮಾಡಲು ಕುತೂಹಲವುಳ್ಳವರಿಂದ ಕೂಡಿದ ಕಲಿಯುಗದಲ್ಲೂ ಕೂಡ, **ನಃ**-ನಮ್ಮ, **ಚಿಂತಾಂ ಅಭ್ಯುಪಗನ್ತುಂ** - ನಾವು ಈಗ ಕಷ್ಟಪಟ್ಟು ಪರಮಹಿತಕ್ಕಾಗಿ ಸ್ಥಾಪಿಸಿದ ಪ್ರಭಾವ ವ್ಯವಸ್ಥೆಯ ಚಿಂತೆಯನ್ನು ಅಙ್ಗೀಕರಿಸಲು, **ಸನ್ತಿ** - ಇರುತ್ತಾರೆ.—ಕೆಲವರು **ನಃ**-ಎಂಬುದನ್ನು ನಮ್ಮ ಏಕಾನ್ತಿಗಳು ಎಂದು **ಏಕಾನ್ತಿನಃ** ಎಂಬಲ್ಲಿ ಸೇರಿಸಿರುತ್ತಾರೆ.

**ತಾತ್ಪರ್ಯವು**—ಶ್ರುತಿ ಸ್ಮೃತಿ, ಧರ್ಮಶಾಸ್ತ್ರ, ಇತಿಹಾಸ, ಪುರಾಣ, ಇವೆಲ್ಲಾ ಶಾಸ್ತ್ರಗಳಲ್ಲೂ ವರ್ಣಾಶ್ರಮ ಧರ್ಮಗಳು ಶ್ಲಾಘಿಸಲ್ಪಟ್ಟಿವೆ. ಪ್ರತಿಯೊಬ್ಬ ವರ್ಣದವರೂ **ಸ್ವೇ ಸ್ವೇ ಕರ್ಮಣ್ಯಭಿರತ**ರಾಗಿರಬೇಕೆಂದೂ ಇಲ್ಲಿಯೂ ಕೂಡ ಉಪಪಾದಿತವು. ಈ ವರ್ಣಾಶ್ರಮ ಧರ್ಮಗಳು ಶಾಸ್ತ್ರಗಳಲ್ಲಿ ಹೇಗೆ ಹೇಳಲ್ಪಟ್ಟಿವೆ ಎಂದರೆ—ಸದಾಚಾರ ಪರಿತ್ಯಾಗದಲ್ಲಿ ಪ್ರತ್ಯವಾಯ ಉಂಟೆಂದು ಇದೇ ಗೀತೆಯಲ್ಲೇ ವ್ಯಕ್ತವಾಗಿ ಹೇಳಿರುತ್ತದೆ. "**ನ ಹಿ ದೇಹಭೃತಾಂ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ**" ಎಂದು ಸದಾಚಾರ ಹೀನನಾಗಿರಲು ಸಾಧ್ಯವೇ ಇಲ್ಲವೆಂದು ಹೇಳಿರುತ್ತಾರೆ. ಹಾಗೆಯೇ "**ನಿಯತಸ್ಯತು ಸಂನ್ಯಾಸಃ ಕರ್ಮಣೋನೋಪ**

ಪದ್ಯತೇ। ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ" ನಿಯತ ಕರ್ಮಗಳ ಸ್ವರೂಪತ್ಯಾಗಕ್ಕೆ ಅವಕಾಶವೇ ಇಲ್ಲವೆಂದು ಹೇಳಿ, ಹಾಗೆ ಪರಿತ್ಯಾಗ ಮಾಡುವದು ತಮೋಗುಣವಿಲಾಸವೆಂದು ಹೇಳಲ್ಪಟ್ಟಿರುತ್ತದೆ. ಅಶ್ವಮೇಧಕದಲ್ಲಿ "ಶ್ರುತಿಃ ಸ್ಮೃತಿರ್ಮಮೈವಾಜ್ಞಾ ಯಸ್ತಾಮುಲ್ಲಂಘ್ಯವರ್ತತೇ। ಆಜ್ಞಾಚ್ಛೇದೀ ಮಮ ದ್ರೋಹೀ ಮದ್ಭಕ್ತೋಽಪಿ ನ ವೈಷ್ಣವಃ॥ ಏತಾನ್ಯಪಿತು ಕರ್ಮಾಣಿ ಸಙ್ಗಂ ತ್ಯಕ್ತ್ವಾ ಫಲಾನಿ ಚ। ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತ ಮುತ್ತಮಮ್" ಆದುದರಿಂದ ವರ್ಣಾಶ್ರಮಧರ್ಮಗಳು ಯಾವುಯಾವುವು ನಿಯತವಾಗಿ ವಿಧಿಸಲ್ಪಟ್ಟಿರುವವೋ, ಅವುಗಳಲ್ಲಿ ಫಲಸಂಗಾದಿಗಳನ್ನು ತೊರೆದು, ಅವು ತನ್ನ ಜನ್ಮಕ್ಕೆ ಅಂಟಿದವುಎಂದು ಭಾವಿಸಿ, ದೇಹಾವಸಾನದವರೆಗೂ ಅನುಷ್ಠಿಸಲೇ ಬೇಕು ಎಂದೂ, ಹಾಗೆ ಅನುಷ್ಠಿಸದಿದ್ದರೆ ಭಗವನ್ನಿಗ್ರಹಕ್ಕೆ ಪ್ರಸನ್ನನಾಗಿದ್ದರೂ ಗುರಿಯಾಗುವನೆಂಬುದಕ್ಕೆ ಅನೇಕ ಪ್ರಮಾಣಗಳು ಹಿಂದೆ ಉದಾಹರಿಸಲ್ಪಟ್ಟಿರುತ್ತವೆ. ಈಚಾತುರ್ವಣ್ಯಕ್ಕೂ ಶಾಸ್ತ್ರವಿಹಿತಗಳಾದ ಪ್ರವೃತ್ತಿಗಳು ಯಾವುವೆಂಬುದು ಧರ್ಮಶಾಸ್ತ್ರಗಳಲ್ಲಿ ಪ್ರೋಕ್ತವಾಗಿರುತ್ತದೆ ಸಂಕ್ಷೇಪವಾಗಿ ಈ ಶ್ಲೋಕಗಳು ಅವರುಗಳ ಪ್ರವೃತ್ತಿಗಳನ್ನು ಬೋಧಿಸುತ್ತವೆ. "ಅಧ್ಯಾಪನಂಚಾಧ್ಯಯನಂ ಯಜನಂ ಯಾಜನಂತಥಾ। ದಾನಂ ಪ್ರತಿಗ್ರಹಶ್ಚೈವ ಷಟ್ಕರ್ಮಾಣ್ಯಗ್ರಜನ್ಮನಃ" "ಷಣ್ಣಾಂತು ಕರ್ಮಣಾಂ ಮಧ್ಯೇ ತ್ರೀಣಿ ಕರ್ಮಾಣಿ ಜೀವಿಕಾಃ। ಯಾಜನಾಧ್ಯಾಪನೇಚೈವ ವಿಶಿಷ್ಟಾಚ್ಚ ಪರಿಗ್ರಹಃ" "ಶಸ್ತ್ರಾಸ್ತ್ರ ಭೃತ್ವಂ ಕ್ಷತ್ರಸ್ಯ ವಣಿಕ್ಪಶುಕೃಷೀವಿಶಃ। ಆಜೀವನಾರ್ಥಂ ಧರ್ಮಸ್ತು ದಾನಮಧ್ಯಯನಂ ಯಜಿಃ" ಇತ್ಯಾದಿ ಸದಾಚಾರವು ಶ್ರುತಿ ಸ್ಮೃತಿ, ಧರ್ಮಶಾಸ್ತ್ರಗಳಿಗೆ ಅನುಸಾರವಾಗಿಯೇ ಇವೆ. ಆದುದರಿಂದ ಹಿರಿಯರನುಷ್ಠಿಸಿದ ಸತ್ಸಂಪ್ರದಾಯಕ್ಕನುಗುಣವಾಗಿ ಆಚಾರವಿರಬೇಕು. ಇಂತಹ ಆಚಾರವೇ ಪರಮಧರ್ಮವೆಂದೂ, ಅಂತಹ ಧರ್ಮಗಳಿಗೆಲ್ಲಾ ಪ್ರಭುವಾದವನು ಅಚ್ಯುತನು ಎಂದು ಹೇಳಲ್ಪಟ್ಟಿರುತ್ತದೆ. ಶ್ರೀಮದ್ಗೀತೋಪದೇಶವು ಕ್ಷತ್ರಿಯಧರ್ಮಗಳನ್ನು ತ್ಯಜಿಸಿ ಭ್ರಮಯುಕ್ತನಾದ ಅರ್ಜುನನಿಗೆ ಕ್ಷತ್ರಿಯ ಧರ್ಮವಾದ ದುಷ್ಟನಿಗ್ರಹ ಶಿಷ್ಟಪರಿಪಾಲನವನ್ನು ಬೋಧಿಸುವದಕ್ಕಾಗಿ ಹೊರಟು, ಚಾತುರ್ವರ್ಣ್ಯಂ ಮಯಾ ಸೃಷ್ಟಂ ಎಂದು ಶ್ರೀಕೃಷ್ಣ ಭಗವಾನರವರಿಂದ ಉಪದೇಶಿಸಲ್ಪಟ್ಟು, ಆ ಚಾತುರ್ವರ್ಣ್ಯ ಧರ್ಮವನ್ನು ಕೊನೆಯಲ್ಲೂ "ಸ್ವೇ ಸ್ವೇ ಕರ್ಮಣ್ಯಭಿರತಃ" ಎಂಬ, "ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ" ಎಂಬ, ಉಪದೇಶಗಳಿಂದ ಸಮರ್ಥನೆಮಾಡಿ ಹೇಳಿರುವದರಿಂದ ವರ್ಣ ಸಾಂಕರ್ಯವು ಸುತರಾಂ ಕೂಡದೆಂದು ಅರ್ಜುನನೂ (ಗೀ.೧-೪೧ ೨) ನೆಯ ಶ್ಲೋಕಗಳಲ್ಲೂ, ಶ್ರೀ ಕೃಷ್ಣಭಗವಾನರವರು ಗೀ.೩-೨೪ನೆಯ ಶ್ಲೋಕದಲ್ಲೂ,

ಹೇಳಿದ್ದರೂ, ಈ ಕಾಲದ ಕಲಿಮಹಾ ಪುರುಷರು ಒಂದು ಕೈಯಲ್ಲಿ ಗೀತೆಯನ್ನು ಹಿಡಿದುಕೊಂಡು ಅದನ್ನು ಶ್ಲಾಘಿಸುತ್ತಲೂ, ಇನ್ನೊಂದು ಕೈಯಿಂದ ಅದರ ಅನೋಘೋಪದೇಶದ ಮೂಲೋತ್ಪಾಟನೆಗಾಗಿ ಜರಿವಣಿಗೆಯನ್ನು ಮಾಡುತ್ತಿರುವದನ್ನೂ, ಶ್ರೀ ನಿಗಮಾನ್ತರವರು ತಮ್ಮ ಕಾಲದಲ್ಲೇ ನೋಡಿ ವಿಶೇಷ ಪರಿತಾಪವನ್ನು ಪ್ರದರ್ಶಿಸಿರುವರಾಗಿ, ಸ್ವಲ್ಪ ಧೈರ್ಯವನ್ನು ತೆಗೆದುಕೊಂಡು ಯಾವಾಗಲೂ ಈ ಸತ್ಸಂಪ್ರದಾಯಕ್ಕೆ ಚ್ಯುತಿಯಿಲ್ಲವು; ಕೆಲವರಾದರೂ ಪ್ರಪನ್ನರಾದ ಪರಮೇಕಾಂತಿಗಳಾಗಿ ಹಿಂದಿನ ಮುನಿತ್ರಯರಾದ, ನಾಥಮುನಿ, ಯಾಮುನಮುನಿ, ಭಾಷ್ಯಕಾರರು ಲೋಕಸಙ್ಗ್ರಹಾರ್ಥವಾಗಿ ಮೇಲುಪಙ್ಕ್ತಿಯನ್ನು ಹಾಕಿ ಇಟ್ಟಿದುದರ ಮರ್ಯಾದೆಯನ್ನು ಈಷದಪಿ ಅತಿಕ್ರಮಿಸದೆ ಅದನ್ನು ಕಾಪಾಡಿಕೊಂಡು ಬಂದ ಸತ್ಪಥವನ್ನು ಪರಮ ಶ್ರದ್ಧೆಯಿಂದ ಅನುವರ್ತಿಸಿ ನಡೆಯುವವರ ಪ್ರಯೋಜನಕ್ಕಾಗಿ ಈ ಹಿತೋಪದೇಶವು ಎಂದು ಹೇಳಿರುತ್ತಾರೆ. ಹೀಗೆ ಯಾವಾಗಲೂ ಲೋಕದಲ್ಲಿ ಅತಿ ವಿರಳವಾಗಿಯಾದರೂ ಇಂತವರು ಉಂಟೆಂಬವನ್ನು ತಿಳಿಸುವದಕ್ಕಾಗಿ ಇಂತಹ ದುರವಸ್ಥೆಗಳುಳ್ಳ "ಅಂತಿಮಯುಗೇ ಅಭ್ಯುಪಗಂತುಂ ಏಕಾನ್ತಿನಃ ಸನ್ತಿನಃ" ಎಂದು ಪ್ರಯೋಗಿಸಿರುತ್ತಾರೆ. ಶ್ರೀನಿವಾಸನ ಕೃಪೆಯನ್ನು ದಯಾಶತಕದ ಮೂಲಕ ಕೊಂಡಾಡಿದ ಮಹನೀಯರಿಗೆ ಶ್ರೀನಿವಾಸನ ನಿರ್ಹೇತುಕ ಕೃಪೆಯಲ್ಲಿ ಅತ್ಯಂತ ವಿಶ್ವಾಸವು. ಕಲಿಯುಗದಲ್ಲಿ "ಅಧರ್ಮೋಗ್ರಸತೇ ಧರ್ಮಂ" ಎಂದು ಶ್ರೀ ವಾಲ್ಮೀಕಿ ಪರಾಶರ ವ್ಯಾಸಾದಿಗಳು ತಮ್ಮಗಳ ಕಾಲದಲ್ಲೇ ಸರ್ವಜ್ಞರಾದುದರಿಂದ ಹೇಳಿದ್ದರೂ, ಮತ್ತು "ಕಲೌ ಕಾರ್ತಯುಗಂ ಧರ್ಮಂ ಕರ್ತುಮಿಚ್ಛತಿ ಯೋ ನರಃ। ಸ್ವಾಮಿದ್ರೋಹೀ ತಂ ಮತ್ವಾ ತಸ್ಮೈ ಪ್ರದ್ವಿಷತೇ ಕಲಿಃ" ಕಲಿಯುಗದಲ್ಲಿ ಇದ್ದುಕೊಂಡು ಕೃತಯುಗ ಧರ್ಮ ಪ್ರವರ್ತನೆಯನ್ನು ಮಾಡುವನೆಂದು ಸಙ್ಕಲ್ಪಿಸಿದರೆ, ಕಲಿಮಹಾಪುರುಷನು ತನಗೆ ಅಧರ್ಮವೇ ಧರ್ಮವಾದುದರಿಂದ, ಹಾಗೆ ಪ್ರವರ್ತಿಸುವವನ್ನು ತನಗೆ ದ್ರೋಹಿ ಎಂದು ಭಾವಿಸಿ ನಕ್ಷತ್ರಿಕನು ನಳನಿಗೆ ಪ್ರೇರಿಸಿದಹಾಗೆ ಪ್ರೇರಿಸಿ, ಅಧರ್ಮ ಪ್ರೋತ್ಸಾಹವನ್ನೇ ಮಾಡಿಸುವನೆಂದು ಹೇಳಲ್ಪಟ್ಟಿದ್ದರೂ, "ಧರ್ಮೇಣ ಲಭತೇ ಸರ್ವಂ ಧರ್ಮಸಾರ ಮಿದಂಜಗತ್ ಎಂಬ ಮಹರ್ಷಿ ವಚನದಲ್ಲಿ ತುಂಬಾ ವಿಶ್ವಾಸಯುಕ್ತರಾಗಿರುವದರಿಂದಲೂ, "ಧರ್ಮೋವಿಗ್ರಹವಾನ್ ಅಧರ್ಮವಿರತಿಂ ಧನ್ವೀ ಸತನ್ವೀತುನಃ" (ದಶಾವತಾರದಲ್ಲಿ ಶ್ರೀ ರಾಮಾವತಾರ ಸ್ತೋತ್ರವು.) ಧನುರ್ಧಾರಿಯಾಗಿ ಧರ್ಮವೇ ಮೂರ್ತೀಭವಿಸಿದ ಹಾಗೆ ಇರುವ ಶ್ರೀ ರಾಮನು ಅಧರ್ಮೋಚ್ಚಾಟನೆಯನ್ನು ಮಾಡುತ್ತಾನೆಂಬ ಪೂರ್ಣ ನಂಬಿಕೆಯಿಂದಲೂ, ಸತ್ಸಂಪ್ರದಾಯ ನಿಷ್ಠರಾದ ಏಕಾನ್ತಿನಸ್ಸಂತಿನಃ ಎಂದು ಶ್ರೀ ವೇದಾನ್ತ ಗುರುಗಳು ಹೇಳಿರುತ್ತಾರೆ. ಗೀತೆಯ ಉಪದೇಶಕ್ರಮವನ್ನು ಯಥಾರ್ಥವಾಗಿ ಅರಿತು,

ವೇದೋತ್ತಂಸವಿಹಾರಸಾರಥಿಗಿರಾ ಗುಂಭೇನವಿಸ್ರಂಭಿತೋ ಸಾರಜ್ಞಾಃ" ಎಂದು ಹಿಂದೆ ಸಾರನಿಷ್ಕರ್ಷಾಧಿಕಾರಾಂತ್ಯದಲ್ಲಿ ಹೇಳಿರುವ ಹಾಗೆ, ಶರಣಂವ್ರಜ ಎಂಬ ವಿಧ್ಯರ್ಥವನ್ನು ಚನ್ನಾಗಿ ವಿವೇಕಿಸಿ ತಿಳಿದ ಮಹಾನುಭಾವರೂ ವಿರಳವಾಗಿ ಉಂಟು. ಅಂತವರು ಸತ್ಸಂಪ್ರದಾಯಾಚಾರ ನಿಷ್ಠೆಗಳಿಂದ ಎಂದಿಗೂ ದೂರವಾಗಿರುವದಿಲ್ಲವೆಂದೂ ಹೇಳಿರುತ್ತಾರೆ. ಅವರುಗಳು ವರ್ಣಾಶ್ರಮಧರ್ಮಗಳ ಮರ್ಯಾದೆಯನ್ನು ಈಷದಪಿ ಉಲ್ಲಂಘಿಸರು. ಅಂತಹ ಮಹಾನುಭಾವರುಗಳು ಸರ್ವಕಾಲದಲ್ಲೂ ಶ್ರೀನಿವಾಸನ ಕೃಪೆಯಿಂದ ಅವತರಿಸಿ, ಸತ್ಸಂಪ್ರದಾಯ ಸದಾಚಾರನಿಷ್ಠೆಯುಂಟಾಗುವ ಹಾಗೆ ಅವರುಗಳ ಭ್ರಮೆಗಳನ್ನು ಹೋಗಲಾಡಿಸುತ್ತಾರೆಂದು ಹೇಳಿರುತ್ತಾರೆ.— ಹಾಗೆಯೇ ಶ್ರೀ ಭಾಗವತದಲ್ಲೂ, ಜನಸ್ಯ ಕೃಷ್ಣಾದ್ವಿಮುಖಸ್ಯ ದೈವಾದ ಧರ್ಮಶೀಲಸ್ಯ ಸುದುಃಖಿತಸ್ಯ । ಅನುಗ್ರಹಾಯ್ಯೈವ ಚರಂತಿ ನೂನಂ ಭೂತಾನಿ ಭವ್ಯಾನಿ ಜನಾರ್ದನಸ್ಯ" ಎಂದು ಹೇಳಲ್ಪಟ್ಟಿರುತ್ತದೆ. ಅನೇಕ ಜನರು ಶ್ರೀಕೃಷ್ಣನನ್ನು ಧ್ಯಾನಿಸುವ ಸ್ವಭಾವವಿಲ್ಲದೆ ಐಹಿಕದಲ್ಲೇ ಮುಳುಗಿ ಆತನಿಂದ ವಿಮುಖರಾಗಿದ್ದಾರೆ. ಇಂತವರು ಪ್ರಾರಬ್ಧ ಕರ್ಮಕ್ಕೆ ವಶರಾಗಿ ಅನೇಕ ಜನಗಳು ಸತ್ಸಂಪ್ರದಾಯವನ್ನೂ ಸದಾಚಾರವನ್ನೂ ತ್ಯಜಿಸಿ ಅಧರ್ಮಶೀಲರಾಗಿದ್ದಾರೆ. ಆದುದರಿಂದಲೇ ಅವರು ಸುದುಃಖಿತರು, ತುಂಬಾ ದುಃಖಭಾಕ್ಕುಗಳಾಗಿದ್ದಾರೆ; ಅಂತವರನ್ನು ಸತ್ಸಂಪ್ರದಾಯ ಸದಾಚಾರ ಶೀಲರನ್ನಾಗಿ ಮಾಡಿ, ತನ್ನನ್ನು ಆಶ್ರಯಿಸಿ ತನ್ನನ್ನು ಹೊಂದುವಹಾಗೆ ಮಾಡುವದಕ್ಕಾಗಿ ಜನಾರ್ದನನು ಅನೇಕ ಇಂತಹ ಸತ್ಸಂಪ್ರದಾಯನಿಷ್ಠರಾಗಿರುವ ಭವ್ಯಾನಿ ಭೂತಾನಿ-ಪರಮೈಕಾಂತಿಕಗಳಾದ ಭಾಗವತೋತ್ತಮರು ಈ ಲೋಕದಲ್ಲಿ ತುಂಬಾ ಪುಣ್ಯ ಪ್ರದೇಶಗಳಲ್ಲಿ ವಸಿಸಿ ಸಂಚರಿಸುವಹಾಗೆ ಮಾಡುವನೆಂದು ಹೇಳಲ್ಪಟ್ಟಿರುತ್ತದೆ. ಆತನ ಪರಮಕೃಪೆಯು ಅಷ್ಟು ಅಮೋಘವಾದುದು ಎಂಬ ನಂಬಿಕೆಯಿಂದ ಆಡಿದ ಮಾತಾಗಿ ರುತ್ತದೆ. ಆದುದರಿಂದ ವಿಷ್ಣುಪುರಾಣವಲ್ಲಿ "ವರ್ಣಾಶ್ರಮಾಚಾರವತಾ ಪುರುಷೇಣ ಪರಃ ಪುಮಾನ್। ವಿಷ್ಣುರಾರಾಧ್ಯತೇ ಪನ್ಥಾ ನಾನ್ಯಸ್ತತ್ತೋಷಕಾರಕಃ" (ವಿ.ಪು.೩.೮.೯) ಎಂದು ವರ್ಣಾಶ್ರಮಾಚಾರವುಳ್ಳ ಪುರುಷನಿಂದ ಪರಮ ಪುರುಷನು ಆರಾಧಿಸಲ್ಪಡುವನೇ ವಿನಾ, ಈಗಿನ ಕಲಿಯುಗದ ಮಹಾನುಭಾವರು ಎಲ್ಲಾ ಒಂದೇ ವರ್ಣದವರಾಗಬೇಕೆಂದು ಸರ್ವ ಪ್ರಯತ್ನ ಮಾಡುವರಿಂದ ವಿಷ್ಣುವೂ ಆರಾಧಿಸಲ್ಪಡುವದಿಲ್ಲವು. ಆದರೆ ಈ ಅಧರ್ಮಪ್ರವರ್ತನೆಯ ಪ್ರವಾಹವು ಪ್ರಬಲವಾದುದಾದರೆ ಧರ್ಮ ಸಂಸ್ಥಾಪನೆಗಾಗಿ ಕಲ್ಕ್ಯವತಾರವು ಮುಂದೆ ನಡೆಯುತ್ತದೆಂದು ತುಂಬಾ ಪ್ರಾಜ್ಞರೆಲ್ಲರೂ ನಂಬಿರುತ್ತಾರೆ. ಆದುದರಿಂದ ಸ್ವಲ್ಪ ಕಾಲ ಅಧರ್ಮವು ತಲೆ ಎತ್ತಿದರೂ ಧರ್ಮವನ್ನೇ "ಉದ್ಧರಾಮ್ಯಹಂ" ಎಂಬುವದೇ ಸರ್ವೇಶ್ವರನ ಸಙ್ಕಲ್ಪ

ವಾದುದರಿಂದಲೂ ಸತ್ಸಂಪ್ರದಾಯವು ನೆಲೆಗೊಳ್ಳುತ್ತದೆಂಬುದೇ ಶ್ರೀ ದೇಶಿಕರವರ ಸಂಪೂರ್ಣ ನಿಶ್ಚಯವು. ಲೋಕಕಂಟಕ ಹಿಟ್ಲರಾದಿಗಳು ದುರ್ಯೋಧನಾದಿಗಳ ಹಾಗೆ ಬಹು ಕಾಲ ನಿಲ್ಲಲಾರರು.

ಸಾರದೀಪಿಕಾವ್ಯಾಖ್ಯಾತೃವು ಈ ಅಧಿಕಾರದಲ್ಲಿ ಸ್ಥಾಪಿಸಲ್ಪಟ್ಟ ಅಭಿಪ್ರಾಯಗಳನ್ನೆಲ್ಲಾ ಶ್ಲೋಕರೂಪದಲ್ಲಿ ಸಙ್ಗ್ರಹಿಸಿರುತ್ತಾರೆ. ಅವುಗಳು ಯಾವುವೆಂದರೆ—

೧. ಸ್ವವಂಶ್ಯೇತ್ತಾರಕತ್ವಂ ಚಾ ಪರಿಚ್ಛಿನ್ನ ಪ್ರಭಾವತಾ ।
ಸಮಂ ಸರ್ವ ಪ್ರಪನ್ನಾನಾಂ ಜಾತ್ಯಾದೌ ತು ವ್ಯವಸ್ಥಿತಿಃ ॥
೨. ಸತ್ವಾದಿಗುಣವದ್ದೇಹ ಪ್ರಯುಕ್ತ ಬ್ರಾಹ್ಮಣತ್ವತಃ ।
ಸತ್ವಾದಿ ಗುಣವಚ್ಚಿತ್ತ ಬ್ರಾಹ್ಮಣ್ಯಂ ತ್ವನ್ಯದಿಷ್ಯತೇ ॥
೩. ಶಾರೀರಬ್ರಾಹ್ಮಣತ್ವಾದಿ ರುತ್ಪತ್ತಿಮರಣಾವಧಿಃ ।
ಮಾನಸಬ್ರಾಹ್ಮಣತ್ವಾದಿ ಸ್ಸತ್ವಾದ್ಯುನ್ಮೇಷ ಹೇತುಕಃ ॥
೪. ಪ್ರಹ್ಲಾದಾದೌ ಜನ್ಮಸಿದ್ಧ ಶ್ಚಾನ್ಯತ್ರಾಗಂತುಕ ಸ್ಸ್ಮೃತಃ ।
ಬ್ರಾಹ್ಮಣೇ ಚಿತ್ತಶೂದ್ರತ್ವ ಮತಿನಿಂದಾವಹಂಭವೇತ್ ॥
೫. ಶೂದ್ರೇ ಮಾನಸವಿಪ್ರತ್ವಂ ತತ್ಪ್ರಶಂಸಾವಹಂ ಭೃಶಮ್ ।
ಗರ್ವಹೇತು ರ್ಯದ್ಯುಭಯ ಮನರ್ಥೇ ಪರ್ಯವಸ್ಯತಿ ॥
೬. ಉಭಯಂ ಯದಿ ನೈಚ್ಯಾಯ ಪುರುಷಾರ್ಥಾಯ ಕಲ್ಪತೇ ।
ದೇವತಾಂತರ ಸಂಬಂಧ ತ್ಯಾಗಾದೇಕಾನ್ತಿನಸ್ಸ್ಮೃತಾಃ ॥
೭. ಪರಮೈಕಾನ್ತಿನ ಸ್ತೇಸ್ಯು ರರ್ಥಾನ್ತರ ಪರಾಙ್ಮುಖಾಃ ।
ಶ್ರೇಷ್ಠಾ ಸ್ತತ್ರಾಪಿ ಭಗವತ್ಕೈಙ್ಕರ್ಯೈಕ ಪ್ರಯೋಜನಾಃ ॥
೮ ಅಧರ್ಮಪರಿಹಾರೇಪಿ ಧರ್ಮತ್ವೇನ ವಿವಕ್ಷಿತೇ ।
ತ್ಯಜ ಧರ್ಮ ಮಿತಿ ತ್ವತ್ರ ತತ್ತ್ಯಾಗೋ ನೋಪಪದ್ಯತೇ ॥
೯. ಯತ್ಸ್ವತಂತ್ರ ವಿಧೇ ರೇವ ನಿತ್ಯಂ ತಸ್ಯ ಪರಿಗ್ರಹಃ ।
ಶರಣಾಗತಿ ಮಾತ್ರಂತು ಲೋಕೇ ಯದ್ಯಪಿ ದೃಶ್ಯತೇ ॥
೧೦. ಶಾಸ್ತ್ರಾದೃತೇ ಪರಿಕರಃ ಕ್ರಮಶ್ಚಾಪಿ ನಸಿಧ್ಯತಿ ।
ಸರ್ವಧರ್ಮಾ ಪರಿತ್ಯಜ್ಯೇತ್ಯತ್ರ ಧರ್ಮೋಽರ್ಜುನೋಕ್ತಿತಃ ॥
೧೧. ನಿವೃತ್ತಿರೂಪಧರ್ಮಾಣಾ ಮಪಿ ತ್ಯಾಗಪ್ರಸಙ್ಗತಃ ।
ಬುದ್ಧಿಪೂರ್ವೋತ್ತರಾಘಾಣಾ ಮಲೇಪಂ ಕೇಚಿದೂ ಚಿರೇ ॥
೧೨ ಅಲೇಪಕ ಮತಾದೇತತ್ಕಷ್ಟಂ ಪಾಪಸ್ಯ ಕರ್ಮಣಃ ।
ಅನಶ್ಯಕರಣೀಯತ್ವಂ ಯದೇತೈಃ ಪ್ರತಿಪಾದ್ಯತಃ ॥

೧೩. ಪೂರ್ವ ಮೇವ ನ್ಯಾಸಕಾಲೇ ಬುದ್ಧಿಪೂರ್ವೋತ್ತರಾಗಸಾಂ ।
ಕ್ಷಂತವ್ಯತ್ವಾಯ ಸಙ್ಕಲ್ಪೋ ನ ಕಾರ್ಯೋ ವಿಧ್ಯಭಾವತಃ ॥
೧೪. ಪೂರ್ವೋದ್ದಿಷ್ಟ ಫಲಾದನ್ಯ ಫಲಾರ್ಥಂ ಚೇತ್ಪುನಃಕ್ರಿಯಾ ।
ಪ್ರಪತ್ತೇರನ್ಯೈವ ದೋಷಾಯೇತ್ಯರ್ಥಃ ಪ್ರಾಗೇವ ದರ್ಶಿತಃ ॥
೧೫. ಪ್ರಪತ್ತಿಕಾಲೇ ನಿಷ್ಪಾಪ ವೃತ್ತಿ ಸಙ್ಕಲ್ಪನಂ ಕ್ಷಮುವ್ ।
ಯದ್ವಾ ಪಶ್ಚಾತ್ತದರ್ಥಂತು ಪುನಃ ಪ್ರಪದನಂ ಚರೇತ್ ॥

ಗ್ರಂಥವಿಸ್ತರ ಭಯದಿಂದ ಇದಕ್ಕೆ ಅರ್ಥವನ್ನು ಬರೆಯಲಿಲ್ಲವು. ಅರ್ಥವು ಸ್ಪಷ್ಟವು.

ಎಂಬಲ್ಲಿಗೆ ಶ್ರೀಮದ್ರಹಸ್ಯತ್ರಯಸಾರದ ೨೫ನೆಯ ಪ್ರಭಾವವ್ಯವಸ್ಥಾಧಿಕಾರಕ್ಕೆ
ತಿರುನಾರಾಯಣಪುರಂ ಸಿ. ಯಂ. ವಿಜಯರಾಘವಶರ್ಮನ
ಆಚಾರ್ಯ ಹೃದಯಾನ್ವೇಷಿಣೀ
ಎಂಬ ಅರ್ಥ ತಾತ್ಪರ್ಯಗಳೂ ಸಂಪೂರ್ಣವು.
ಶ್ರೀಮತೇ ಶ್ರೀನಿವಾಸಮಹಾದೇಶಿಕಾಯ ನಮಃ
ಶ್ರೀ ಕೃಷ್ಣಾರ್ಪಣಮಸ್ತು.

ಶ್ರಿಯೈ ನಮಃ
ಶ್ರೀನಿವಾಸಾಯ ನಮಃ
ಶ್ರೀಮತೇ ರಾಮಾನುಜಾಯ ನಮಃ
ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ

    

# ಅಥ ಪ್ರಭಾವರಕ್ಷಾಧಿಕಾರಃ ೨೬

**ಶಿಲಾ ದೇ ಸ್ತ್ರೀತ್ವಾದಿ ರ್ವಿಪರಿಣತಿ ರಸ್ತ್ಯದ್ಭುತ ಮಿದಂ ।**
**ತತೋಽಪ್ಯೇತಚ್ಚಿತ್ರಂ ಯದುತ ದಹನಸ್ಯೇವ ಹಿಮತಾ ॥**

---

ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯನಮಃ

**ಅವತಾರಿಕೆಯು**—ಹಿಂದಿನ ಅಧಿಕಾರದಲ್ಲಿ ಪ್ರಪತ್ತಿಯ ಪ್ರಭಾವದ ವ್ಯವಸ್ಥೆಯನ್ನು ಮಾಡಿದರು. ಈಗ ಉಪಪಾದಿಸಿದ ರೀತಿಯಲ್ಲಿ ಪ್ರಭಾವ ವ್ಯವಸ್ಥೆಯು ಏನೆಂದರೆ,—ಪ್ರಾರಬ್ಧ ಕರ್ಮಗಳನ್ನೂ ಹೋಗಲಾಡಿಸುವ ಶಕ್ತಿಯುಳ್ಳ ಇಂತಹ ಪ್ರಪತ್ತಿಯಿಂದ ವಶೀಕೃತನಾದ ಕರುಣಾಸಾಗರನು ಪಙ್ಕ್ತಿಪಾವನತ್ವಾದಿಗಳ ಹಾಗೆ, ಪ್ರಪತ್ತ್ಯುತ್ತರಕಾಲದಲ್ಲಿ ಈ ಪ್ರಪನ್ನನಿಗೆ ಅತಿದುಸ್ಸಹವಾದ ದುಃಖವನ್ನುಂಟುಮಾಡುವ ಪ್ರಾರಬ್ಧ ಕರ್ಮವನ್ನೂ ಹೋಗಲಾಡಿಸಲು ಶಕ್ತಿಯುಳ್ಳವನಾದುದರಿಂದ, ಪ್ರಪತ್ತ್ಯುತ್ತರಕಾಲದಲ್ಲಿ ಆತನಿಗೆ ದುಃಖಾಭಾವವಿರಬೇಕು; ಹಾಗಿಲ್ಲದೇ ಇರುವದರಿಂದ ಈ ಪ್ರಭಾವ ವ್ಯವಸ್ಥೆ ಎಂಬುದು ಅತಿವಾದವಾಗುವದಿಲ್ಲವೋ ? ಈ ಸ್ಥಿರೀಕರಣ ಭಾಗದ ಆದಿಯಲ್ಲೇ ಪ್ರದರ್ಶಿಸಿದ ಈ ಶಙ್ಕೆಯನ್ನು ಹಿಂದಿನ ಅಧಿಕಾರದಲ್ಲಿ ಪರಿಹಾರಮಾಡಿ,ಭಗವಂತನಲ್ಲೂಭಾಗವತರಲ್ಲೂ ಮಾಡುವ ಪ್ರಪತ್ತಿಪ್ರಭಾವರಕ್ಷೆಯನ್ನು ಈ ಅಧಿಕಾರದಲ್ಲಿ ಉಪಪಾದಿಸುತ್ತಾರೆ. ಆದುದರಿಂದಲೇ ಈ ಅಧಿಕಾರಕ್ಕೆ ಪ್ರಭಾವರಕ್ಷಾಧಿಕಾರವೆಂದು ಹೆಸರು. ಹಿಂದಿನ ಅಧಿಕಾರದಲ್ಲಿ ಪ್ರಪತ್ತಿಗೆ ಎಷ್ಟು ಪ್ರಭಾವವನ್ನು ಹೇಳಬೇಕೋ ಅದನ್ನು ಬಿಟ್ಟು ಅದರ ಪ್ರಭಾವವನ್ನು ಹೆಚ್ಚಿಸಿ, ಪ್ರಪನ್ನನ ಬುದ್ಧಿಪೂರ್ವಕ ಉತ್ತರಾಘವನ್ನೂ ಕೂಡ ಹೋಗಲಾಡಿ

ಸುವ ಶಕ್ತ್ಯಾದಿಗಳುಂಟೆಂದು ಹೇಳುವದನ್ನು ನಿರಾಕರಿಸಿ, ಅದಕ್ಕೆ ಪ್ರಭಾವವು ಇಷ್ಟೇ ಎಂದು ಸ್ಥಾಪಿಸಿದುದರಿಂದ ಪ್ರಭಾವ ವ್ಯವಸ್ಥಾಧಿಕಾರವೆಂಬ ಹೆಸರೂ, ಇದರ ಲ್ಲಾದರೋ ಪ್ರಪತ್ತಿಗೆಇರುವ ಮಹಾತ್ಮ್ಯೆಯಲ್ಲಿ ನ್ಯೂನತೆಯನ್ನು ಆರೋಪಿಸಿ ಹೇಳು ವದನ್ನು ಖಂಡಿಸಿ, ಅದಕ್ಕಿರುವ ಪ್ರಭಾವವನ್ನು ರಕ್ಷಿಸುವದರಿಂದ ಈ ಅಧಿಕಾರಕ್ಕೆ ಪ್ರಭಾವರಕ್ಷಾಧಿಕಾರವೆಂಬ ಹೆಸರೂ, ಎಂದು ಭಾವಿಸತಕ್ಕದ್ದು. ಪ್ರಾರಬ್ಧವನ್ನು ಹೋಗಲಾಡಿಸುವ ಶಕ್ತಿಯು ಪ್ರಪದನಕ್ಕೆ ಇಲ್ಲವೆಂಬ ಶಙ್ಕೆಗೆ ಕಾರಣವಿಲ್ಲವು. ಸರ್ವೇಶ್ವರನಿಗೆ ಇರುವ ಅಘಟಿತ ಘಟನಾರೂಪ ಪರಮಾದ್ಭುತಾಶ್ಚರ್ಯ ಶಕ್ತಿಯು ಇತಿಹಾಸಗಳಿಂದ ಸ್ಪಷ್ಟವಾಗುವಾಗ, ಈ ಪ್ರಾರಬ್ಧ ನಿವೃತ್ತಿಯು ಒಂದು ಅಸಾಧ್ಯ ವಿಷಯವೇ? ಬ್ರಹ್ಮಾಸ್ತ್ರಕ್ಕೆ ಗುಬ್ಬಿಯೊಂದು ವಿಷಯವೇ ಎಂದು ಕೈಮುತಿಕ ನ್ಯಾಯದಿಂದ ಹೇಳಲು ಉದ್ಯುಕ್ತರಾಗಿ, ಇಂತಹ ಅನಂತವೀರ್ಯನ ದಿವ್ಯ ಚೇಷ್ಟಿತಗಳನ್ನು ಈ ಸಙ್ಗ್ರಹ ಶ್ಲೋಕದಲ್ಲಿ ಕೊಂಡಾಡುತ್ತಾರೆ.

**ಅರ್ಥವು—ಶಿಲಾದೇಃ** - ಕಲ್ಲೇ ಮೊದಲಾದವುಗಳಿಗೆ, **ಸ್ತ್ರೀತ್ವಾದಿ ವಿಪರಿಣತಿಃ** - ಸ್ತ್ರೀರೂಪವೇ ಮೊದಲಾಗಿ ವ್ಯತ್ಯಸ್ಥವಾಗಿ ಪರಿಣಮಿಸೋಣವು, ಎಂದರೆ ಪತಿಯಾದ ಗೌತಮರ ಶಾಪದಿಂದ ಶಿಲೆಯಾಗಿರುವ ಅಹಲ್ಯೆಗೆ, ಶ್ರೀರಾಮ ಪಾದ ಸ್ಪರ್ಶದಿಂದ ವಿಶಾಪ ಉಂಟಾಗಿ ಪಾತಿವ್ರತ್ಯಭಂಗದಿಂದುಂಟಾದ ದೋಷನಿವೃತ್ತಿ ಮೂಲಕ ಪಾರಿಶುಧ್ಯದಿಂದ ಮೊದಲಿದ್ದ ಹಾಗೆ ಸ್ತ್ರೀರೂಪ ಪ್ರಾಪ್ತಿಯು, ಇಲ್ಲಿ ಎರಡು ಆದಿ ಪದಗಳಿರುವದರಿಂದ ಶಿಲೆ ಮೊದಲಾದವುಗಳಿಗೆ ಸ್ತ್ರೀತ್ವ ಮೊದಲಾದವುಗಳ ಪ್ರಾಪ್ತಿ ಎಂಬುದರಿಂದ ಅರ್ಥಾತ್, ಉತ್ತರೆಯ ಗರ್ಭದಲ್ಲಿ ಅಶ್ವತ್ಥಾಮರ ಅಪಾಂಡವಾಸ್ತ್ರದಿಂದ ಶಿಶುವು ಸುಟ್ಟುಹೋಗಿ ಇದ್ದಿಲಾದುದು, ಶ್ರೀಕೃಷ್ಣನ ಅದ್ಭುತ ಮಾಹಾತ್ಮ್ಯೆಯಿಂದ ಪುನಃ ಜೀವಿಸಿ ಪರೀಕ್ಷಿದ್ರೂಪದಲ್ಲಿ ಪುಂಸ್ತ್ವ ಪ್ರಾಪ್ತಿಯೂ, ಅಥವಾ ರಾಮಾವತಾರದಲ್ಲೇ ಬ್ರಾಹ್ಮಣನ ಮೃತಕುಮಾರನು ಶ್ರೀರಾಮಾನುಗ್ರಹದಿಂದ ಪುನಃ ಜೀವಿಸಿದುದೂ, ಅಥವಾ ಕೃಷ್ಣಾವತಾರದಲ್ಲಿ ಬ್ರಾಹ್ಮಣನ ಪುತ್ರರುಗಳನ್ನು ಬದುಕಿಸಿಕೊಡುತ್ತೇನೆಂದು ಶಪಥಮಾಡಿದ ಅರ್ಜುನನು, ಮಾನಭಂಗಕ್ಕಾಗಿ ಪ್ರಾಣತ್ಯಾಗವನ್ನು ನಿಶ್ಚಯಿಸುವಾಗ ಅದನ್ನು ತಪ್ಪಿಸಿ ಶ್ರೀಕೃಷ್ಣನು ಆ ಪುತ್ರರುಗಳನ್ನು ತಂದು ಕೊಟ್ಟಿನುದೂ ಸಹ, ಸೂಚಿತವು. ಇಂತಹ ಪರಿಣತಿ ರೂಪವಾದ, **ಇದಂ ಅದ್ಭುತಂ** - ಈ ಆಶ್ಚರ್ಯವು. **ಆಸ್ತು** - ಹಾಗಿರಲಿ; **ದಹನಸ್ಯೈವ** - ಅಗ್ನಿಗೇನೇ, **ಹಿಮತಾ** - ತಣ್ಣಗಿರೋಣವು, **ಯತ್ ಉತ** - ಯಾವುದು ಉಂಟಲ್ಲವೇ, **ಏತತ್** - ಇದು, **ತತೋಪಿ ಚಿತ್ರಂ** - ಹಿಂದಿನಹಾಗೆ ಸಾಮಾನ್ಯ ಪರಿಣತಿಯಲ್ಲದೆ ಪ್ರತ್ಯುತ ವಿರುದ್ಧಸ್ವಭಾವವುಳ್ಳದ್ದಾಗಿ ಪರಿಣತಿಯು, ಇನ್ನೂ ಹೆಚ್ಚು ವಿಚಿತ್ರವಾದುದು. ಇದಕ್ಕೆ ನಿದರ್ಶನಗಳಾಗಿ ಮೂರು

**ತೃಣಸ್ಯೈವಾ ಸ್ತ್ರತ್ವಂ ರಿಪುಷು ನಿಹತೇ ರೇವ ಹಿತತಾ ।**
**ಪದತ್ರೇಣ್ಯೈವೇಹ ತ್ರಿಭುವನಪರಿತ್ರಾಣ ಮಿತಿಚ ॥೫೭॥**

ವೃತ್ತಾಂತಗಳನ್ನು ಹೇಳಬಹುದು;—(೧) ಪ್ರಹ್ಲಾದನು ತಂದೆಯಿಂದ ಅಗ್ನಿಯಲ್ಲಿ ಸುಡಲ್ಪಟ್ಟರೂ ಸರ್ವೇಶ್ವರನ ಸಙ್ಕಲ್ಪದಿಂದ ಶೀತಲವಾಗಿ ಅಗ್ನಿಯು ಸುಡದಿರುವದೂ; (೨) ಆಂಜನೇಯನ ಬಾಲಕ್ಕೆ ಬೆಂಕಿಯು ರಾವಣನ ಆಜ್ಞೆಯಿಂದ ಬಿದ್ದರೂ ಪರಮಾತ್ಮ ಸಙ್ಕಲ್ಪವನ್ನು ತಿಳಿದ "ಶೀತೋಭವಹನೂಮತಃ" ಎಂಬ ಸೀತೆಯ ಅನುಗ್ರಹದಿಂದ ಅಗ್ನಿಯು ಶೀತಲವಾಗಿ ಪರಿಣಮಿಸಿದುದೂ; (೩) ಸೀತೆಯೇ ಅಗ್ನಿ ಪ್ರವೇಶ ಮಾಡಿದಾಗ ಸ್ವಾಮಿಸಙ್ಕಲ್ಪದಿಂದ ಅಗ್ನಿಯು ಶೀತಲವಾಗಿ ತೋರಿದುದೂ; ಇವು ಮೂರು ಇತಿಹಾಸಗಳೂ ನಿದರ್ಶನಗಳಾಗಬಹುದು. **ತೃಣಸ್ಯೇವ ಅಸ್ತ್ರತ್ವಂ ತತೋಽಪಿಚಿತ್ರಂ** - ಒಂದು ಹುಲ್ಲುಕಡ್ಡಿಯೇ ಅಸ್ತ್ರಭಾವವನ್ನು ಹೊಂದಿದ ಪರಿಣತಿಯು, ಅದಕ್ಕೂ ವಿಚಿತ್ರವಾದುದು ; ಸೀತೆಯ ತೊಡೆಯಲ್ಲಿ ಶ್ರೀರಾಮನು ಮಲಗಿದ್ದಾಗ ಕಾಕಾಸುರನು ಬಂದು ಸೀತೆಯ ಸ್ತನವನ್ನು ಚುಚ್ಚಿದ ಕೋಪದಿಂದ ಶ್ರೀರಾಮನು ಒಂದು ದರ್ಭೆಯನ್ನು ಅಭಿಮಂತ್ರಿಸಿ ಬ್ರಹ್ಮಾಸ್ತ್ರವಾಗಿ ಬಿಟ್ಟ ಇತಿಹಾಸವು ಅನುಸಂಧೇಯವು. **ರಿಪುಷು ನಿಹತೇರೇವ ಹಿತತಾ** - ಅತ್ಯಂತವಿರೋಧಿಗಳಾಗಿ ಪ್ರವೃತ್ತಿಯುಳ್ಳವರಾದುದರಿಂದ ಶತ್ರುಗಳಾಗಿರುವವರ ವಿಷಯದಲ್ಲಿ, ನಿಹತೇರೇವ-ಸರ್ವೇಶ್ವರನಿಂದ ಕೊಲ್ಲಲ್ಪಡೋಣವೇ, ಹಿತತಾ-ಶಾಪವಿಮೋಚನಾದಿಗಳಮೂಲಕ ಶ್ರೇಯಸ್ಸಾಧನಕ್ಕೆ ಕಾರಣವಾಗಿರುವದರಿಂದ ಹಿತವಾಗಿ ಪರಿಣಮಿಸೋಣವೂ, ಇದು ಇನ್ನೂ ವಿಚಿತ್ರವಾದುದು. ಇದು ಶಿಶುಪಾಲ ರಾವಣಾದಿಗಳಲ್ಲಿ ನಿದರ್ಶನವನ್ನು ಹೊಂದಿದೆ. **ಪದತ್ರೇಣ್ಯೈವ**-ಜಡಗಳಾಗಿ ದಾರುಮಯವಾಗಿರುವ ಮಣಿಖಚಿತ ದಿವ್ಯ ಪಾದುಕೆಗಳಿಂದಲೇ, ತ್ರಿಭುವನ ಪರಿತ್ರಾಣಂ - ಪರಮಭಾಗವತನಾದ ಭರತನಿಗೆ ಸಹಾಯವಾಗಿ ಮೂರುಲೋಕದ ಪಾಲನೆಯ ಸಂರಕ್ಷಣೆಯೂ ಇತಿಚ - ಎಂಬುದು ಯಾವುದುಂಟೋ ಅದೂ, ತತೋಽಪಿ ಚಿತ್ರಂ - ಇವುಗಳಿಗಿಲ್ಲಕ್ಕೂ ವಿಚಿತ್ರವಾದುದು. ಆದರೆ ಭರತಾಳ್ವಾರವರ ಪ್ರಾರ್ಥನೆಯಮೇರಿಗೆ ರಾಜ್ಯ ಪರಿಪಾಲನೆಯನ್ನು ಮಾಡಿದುದು ಈ ಲೋಕದ ವೃತ್ತಾಂತವಾಯಿತು, ತ್ರಿಭುವನ ಪರಿತ್ರಾಣಂ ಎಂಬ ಪ್ರಯೋಗ ಹೇಗೆ? ಎಂದರೆ ತ್ರಿವಿಕ್ರಮಾವತಾರದಲ್ಲಿ ಸ್ವಾಮಿಯ ಪಾದುಕೆಯು ಮೂರುಲೋಕವನ್ನು ಅನುಗ್ರಹಿಸಿದುದರಿಂದ ಆ ಇತಿಹಾಸವನ್ನು ಇಟ್ಟು ಕೊಳ್ಳಬಹುದು.

ತಾತ್ಪರ್ಯವು—ಶರಣಾಗತಿಯು ಸ್ವಾಮಿಪಾದದಲ್ಲಿ ಈ ಆತ್ಮವನ್ನು ಸಮರ್ಪಿಸುವಂತಾದ್ದಾಗಿರುವದರಿಂದ, ಶರಣಾಗತಿಗೆ ನಿರತಿಶಯಾನಂದದಾಯಕ

ವಾದ ಪರಿಪೂರ್ಣ ಬ್ರಹ್ಮಾನುಭವರೂಪ ಮಹತ್ಫಲವನ್ನುಂಟುಮಾಡುವ ಶಕ್ತಿಯುಂಟೆಂಬುದು ಏತರಿಂದ ಎಂದರೆ ಸರ್ವೇಶ್ವರನ ಚರಣದ್ವಂದ್ವದ ಮಾಹಾತ್ಮ್ಯೆಯು ಇಷ್ಟೆಂದು ಹೇಳಲು ಸಾಧ್ಯವಿಲ್ಲದುದರಿಂದ ಅದಕ್ಕೆ ಅನೇಕ ನಿದರ್ಶನಗಳನ್ನು ಹೇಳಿ, ಒಂದಕ್ಕಿಂತ ಒಂದು ಅದ್ಭುತವು ಮತ್ತು ಆಶ್ಚರ್ಯವೆಂದು ಹೇಳುತ್ತಾರೆ.

(೧) ಮೊದಲು ಶಿಲಾದೇಃಸ್ತ್ರೀತ್ವಾದಿ ಎಂಬುದರಿಂದ ಶ್ರೀರಾಮನ ಪಾದಸ್ಪರ್ಶದಿಂದ ಶಿಲೆಯೇ ಸ್ತ್ರೀರೂಪವನ್ನು ಹೊಂದಿತೆಂಬುದರಿಂದ ಅಹಲ್ಯಾ ವೃತ್ತಾಂತವನ್ನು ಸೂಚಿಸುತ್ತಾರೆ. ಅಹಲ್ಯಾ ವೃತ್ತಾಂತವು ಹಿಂದೆಯೇ ಬರೆಯಲ್ಪಟ್ಟಿರುತ್ತದೆ. ಬಾಲಕಾಂಡ ಶ್ರೀಮದ್ರಾಮಾಯಣದಲ್ಲಿ ಹೇಳಿರುವದು ಇಂದ್ರನು ಗೌತಮರವೇಷವನ್ನು ಧರಿಸಿ, ಆಶ್ರಮವನ್ನು ಪ್ರವೇಶಿಸಿ, ಅಹಲ್ಯೆಗೆ ತನ್ನ ನಿಜಾಕಾರವನ್ನು ವ್ಯಕ್ತಪಡಿಸಲು; ಬಂದವನು ಸ್ವರ್ಗಲೋಕಾಧಿಪತಿಯಾದ ಇಂದ್ರನೇ, ಎಂಬದಾಗಿ ಮೋಹಪಟ್ಟು ಆಕೆಯು ಸಂಗಮಕ್ಕೆ ಸಮ್ಮತಿಸಿದಳು. ಅನಂತರ ಇಂದ್ರನು ಆಶ್ರಮವನ್ನು ಬಿಟ್ಟು ತೆರಳುವದರಲ್ಲೇ ಗೌತಮರು ಬಂದುಬಿಟ್ಟದುದರಿಂದ ಇಂದ್ರನೂ ಮತ್ತು ಅಹಲ್ಯೆಯೂ ಶಪಿಸಲ್ಪಟ್ಟರು. ಅಹಲ್ಯೆಗೆ ಪ್ರಾಪ್ತಶಾಪವು ಅಲ್ಲಿ ಹೇಳಿರುವದು ಹೇಗೆಂದರೆ.-"ಇಹವರ್ಷಸಹಸ್ರಾಣಿ ಬಹೂನಿ ತ್ವಂ ನಿವತ್ಸ್ಯಸಿ। ವಾಯುಭಕ್ಷಾ ನಿರಾಹಾರಾ ತಪ್ಯಂತೀ ಭಸ್ಮಶಾಯಿನೀ। ಅದೃಶ್ಯಾ ಸರ್ವಭೂತಾನಾ ಮಾಶ್ರಮೇಸ್ಮಿನ್ ನಿವತ್ಸ್ಯಸಿ। ಯದಾ ಚೈತದ್ವನಂ ಘೋರಂ ರಾಮೋ ದಶರಥಾತ್ಮಜಃ ಆಗಮಿಷ್ಯತಿ ದುರ್ಧರ್ಷ ಸ್ತದಾ ಪೂತಾ ಭವಿಷ್ಯಸಿ"ಓ ಅಹಲ್ಯೆಯೇ ನೀನು ಇಲ್ಲೇ ಅನೇಕ ಸಾವಿರ ವರ್ಷಗಳು ವಸಿಸುತ್ತೀಯೇ; ನಿರಾಹಾರಳಾಗಿ ವಾಯು ಭಕ್ಷಣವನ್ನು ಮಾಡುತ್ತಾ., ಭಸ್ಮಶಾಯಿಯಾಗಿ ತಪಸ್ಸನ್ನು ಚರಿಸುವವಳಾಗಿ, ಯಾರಿಂದಲೂ ಕಾಣಲ್ಪಡದೇ, ಈ ಆಶ್ರಮದಲ್ಲೇ ಇರುತ್ತೀಯೇ; ಯಾವಾಗ ದಶರಥಪುತ್ರನಾಗಿ ಅವತರಿಸಿ ಶ್ರೀರಾಮಚಂದ್ರನು ನೀನಿರುವ ಸ್ಥಳದಲ್ಲಿ ಪಾದವಿನ್ಯಾಸ ಮಾಡುವರೋ, ಆಗ ನೀನು ಹೀಗೆ ಪತಿತಳಾಗಿದ್ದರೂ ಪರಿಶುದ್ಧಳಾಗುವಿ" ಎಂದು ಗೌತಮರು ಶಾಪವಿಶಾಪಗಳನ್ನು ಕೊಟ್ಟಿರುತ್ತಾರೆ. ಅಹಲ್ಯೆಯು ಪರಪುರುಷನೆಂದು ತಿಳಿದನಂತರವೂ ಇಂದ್ರನೊಂದಿಗೆ ಸಂಗಮಕ್ಕೆ ಒಪ್ಪಿದುದರಿಂದ ಮಹರ್ಷಿಗಳಾದ ವಾಲ್ಮೀಕಿ ಗೌತಮರುಗಳಿಂದ "ದುರ್ಮೇಧಾ" ಎಂದೂ "ದುರ್ವೃತ್ತೆ" ಎಂದೂ, "ದುಷ್ಟಚಾರಿಣೀ" ಎಂದೂ ಹೀಗೆಲ್ಲಾ ನಿಂದಿಸಲ್ಪಟ್ಟ ಇಂತಹ ಅಸತಿಯೂ ಕೂಡ ಶ್ರೀರಾಮ ಪಾದಸ್ಪರ್ಶ ಮಾಹಾತ್ಮ್ಯೆಯಿಂದ ಸ್ವಸ್ವರೂಪವನ್ನು ಹೊಂದಿ, ಪರಮ ಸಾಧ್ವೀ ಎಂಬ ಯಶಸ್ಸನ್ನೂ ಲೋಕದಲ್ಲಿ ಹೊಂದಿದಳು. ಹಾಗೆ ಪವಿತ್ರೀಕರಿಸಲ್ಪಟ್ಟದರಿಂದ ಗೌತಮ ಮಹರ್ಷಿಯೂ ಕೂಡ ಆಕೆಯನ್ನು

ಪರಿಗ್ರಹಿಸಿದರು. 'ಅಹಲ್ಯಾ ದ್ರೌಪದೀ ತಾರಾ ತಾರಾ ಮಂಡೋದರೀತಥಾ" ಎಂದು ಈ ಐದು ಕನ್ಯೆಯರ ಸ್ಮರಣೆಯು ಮಹಾಪಾತಕನಾಶರೂಪವಾದುದೆಂದೂ ಹೇಳಲ್ಪಟ್ಟಿರುತ್ತದೆ. ಈ ಸಂದರ್ಭದಲ್ಲಿ ಆಕೆಯು ಶಿಲಾರೂಪದಲ್ಲಿದ್ದಳೆಂದು ವಾಲ್ಮೀಕಿ ರಾಮಾಯಣದಲ್ಲಿಹೇಳಲ್ಪಡಲಿಲ್ಲವೆಂದೂ,ಆಕಾರಣದಿಂದ ಪಾದ್ಮ ಪುರಾಣಾದಿಗಳಿಂದ ಅಹಲ್ಯೆಯ ಶಿಲಾರೂಪವನ್ನುಗ್ರಹಿಸತಕ್ಕದ್ದೆಂದೂ ಕೆಲವರು ಇಲ್ಲಿಅಭಿಪ್ರಾಯಪಟ್ಟಿರುತ್ತಾರೆ. ಇದು ಸರಿಯಲ್ಲವು. ಏಕೆಂದರೆ ಉತ್ತರರಾಮಾಯಣದ ೩೦ನೆಯ ಸರ್ಗದ ೩೨ನೆಯಶ್ಲೋಕದಲ್ಲಿ ಶಿಲಾರೂಪಪ್ರಾಪ್ತಿಯುವ್ಯಕ್ತವು,ಅಲ್ಲಿಹೇಳಿರುವದೇನೆಂದರೆ.— "ತಪಶ್ಚಚಾರ ಸುಮಹತ್ಸಾ ಪತ್ನೀ ಬ್ರಹ್ಮವಾದಿನಃ।ಶಿಲಾರೂಪಮನುಪ್ರಾಪ್ತಾ ಶ್ಚತ್ಸಜ್ಜಕೃತಕಿಲ್ಬಿಷಾ" ಅಲ್ಲೇ ಶ್ರೀಗೌತಮ ಮಹರ್ಷಿಯ ಶಾಪದಿಂದ ಆಬ್ರಹ್ಮವಿತ್ತಿನ ಪತ್ನಿಯಾದ ಅಹಲ್ಯೆಯು ಶಿಲಾರೂಪವನ್ನು ಹೊಂದಿ, ತನಗೆ ಪ್ರಾಪ್ತವಾದ ದೋಷಕ್ಕಾಗಿ ತಪಸ್ಸನ್ನೂ ಮಾಡುತ್ತಾ ಶ್ರೀರಾಮಾಗಮನವನ್ನು ನಿರೀಕ್ಷಿಸುತ್ತಾ ಇದ್ದಳೆಂದು ಶ್ರೀ ವಾಲ್ಮೀಕಿಯೇ ಹೇಳಿರುತ್ತಾರೆ. ಅಲ್ಲಿ ಈಕೆಗೆ ಅಹಲ್ಯೆಯೆಂಬ ಹೆಸರು ಏತಕ್ಕೆಂಬುದೂ ತಿಳಿಸಲ್ಪಟ್ಟಿರುತ್ತದೆ. ಈಕೆಯು ಬ್ರಹ್ಮನಿರ್ಮಿತ ಕನ್ಯೆಯು, ರೂಪದಲ್ಲಿ ಯಾವುದೊಂದೂ ದೋಷವಿಲ್ಲದಹಾಗೆ ನಿರ್ಮಿಸಲ್ಪಟ್ಟವಳು, ಆದುದರಿಂದ ಅಹಲ್ಯೆ ಎಂದು ಹೆಸರೆಂದು"ಹಲಂ ನಾಮ ಹ ವೈರೂಪ್ಯಂ ಹಲ್ಯಂ ತತ್ರಭವಂ ಭವೇತ್। ಯಸ್ಯಾ ನವಿದ್ಯತೇ ಹಲ್ಯಂ ತತೋಽಹಲ್ಯೇತಿ ವಿಶ್ರುತಾ" ಎಂದು ಹಲ್ಯವೆಂದರೆ ಅಂಗವೈರೂಪ್ಯದಿಂದುಂಟಾದುದು, ಅಂತಹ ದೋಷವು ಸ್ವಲ್ಪವೂ ಇಲ್ಲದ ಸರ್ವಾಂಗ ಸುಂದರಳಾದುದರಿಂದ ಅಹಲ್ಯೆ ಎಂಬ ಹೆಸರನ್ನು ಕೊಟ್ಟೆನು ಎಂದು ಅಲ್ಲಿ ಚತುರ್ಮುಖನೇ ಇಂದ್ರನಿಗೆ ಹೇಳುತ್ತಾರೆ. ಆದುದರಿಂದ ಶಿಲಾರೂಪಪ್ರಾಪ್ತಿ ಉಂಟೆಂಬುದು ಶ್ರೀರಾಮಾಯಣದಲ್ಲೇ ಸುವ್ಯಕ್ತವು. ಶ್ರೀ ದೇಶಿಕರವರಿಗೆ ಈ ಅಭಿಪ್ರಾಯವು ಪರಮ ಗ್ರಾಹ್ಯವಾಗಿ ಶಿಲಾದೇಸ್ಸಿತ್ರೀತ್ವಾದಿಃ ಎಂಬ ಪ್ರಯೋಗವು.

ಈ ಅಹಲ್ಯಾ ವೃತ್ತಾಂತವು, ಸರ್ವೇಶ್ವರನ ಪಾದಕಮಲದ ಪಾವನತ್ವವನ್ನು ಬೋಧಿಸುವ ಇತರ ವೃತ್ತಾಂತಗಳಿಗೂ ಉಪಲಕ್ಷಣವು. ಗಂಗಾಜಲಕ್ಕೆ "ಶಿವಶ್ಶಿವೋಽಭೂತ್" ಎಂದು ಹೇಳಿರುವಹಾಗೆ ಅಧಿಕಮಾಹಾತ್ಮ್ಯೆಯು ಏತರಿಂದೆಂದರೆ ವಿಷ್ಣುವಿನ ವಾಮಪಾದಾಬ್ಜದಿಂದ ಸಂಭೂತಳಾಡುದರಿಂದೆಂಬುದು ಸುಪ್ರಸಿದ್ಧವು. ಈ ಗ್ರಂಥಕರ್ತರೇ ಶ್ರೀಪಾದುಕಾ ಸಹಸ್ರವೆಂಬ ಸ್ತೋತ್ರರತ್ನದಲ್ಲಿ,ಶ್ರೀ ರಜ್ಞನಾಥನ ಪಾದಕಮಲದ ಮಾಹಾತ್ಮ್ಯೆಯನ್ನು ಪಾದುಕೆಯು ತಿಳಿದಿರುವದರಿಂದ ಸ್ವಾಮಿಯ ಪಾದವನ್ನು ಬಿಟ್ಟು ಅಗಲದಿರಲು ಇಷ್ಟವಿಲ್ಲವೆಂದು ಪ್ರಭಾವ ಪದ್ಧತಿಯಲ್ಲಿ ಕೊಂಡಾಡಿರುವ ಶ್ಲೋಕವು, ಈ ಸಂದರ್ಭದಲ್ಲಿ ಅನುಸಂಧೇಯವು.

ಯೋಷಿದ್ಭೂತ ದೃಷಂತ್ಯಪೋಥ ಶಕಟ ಸ್ತ್ರೀಮಾನಿ ವೈಮಾನಿಕ ।
ಸ್ರೋತಸ್ಮಿನ್ನ್ಯಪಲಂಭನಾನಿ ಭಸಿತೋ ದಂಚ ತ್ಪರಿಕ್ಷಿಂತಿ ಚ ।
ದೂತ್ಯಾದಿಷ್ಟಪಿ ದುರ್ವಚಾನಿ ಪದಯೋಃ ಕೃತ್ಯಾನಿ ಮತ್ವೇವಯ ।
ದ್ಧತ್ತೇ ತತ್ತ್ರಣಯುಂ ತದೇವ ಚರಣತ್ರಾಣಂ ವೃಣೇ ರಙ್ಗಿಣಃ ॥೩೯॥

ಇದರರ್ಥವು—ಶ್ರೀ ರಾಮಾವತಾರದಲ್ಲಿ ಮಿಥಿಲಾನಗರಿಗೆ ಹೋಗುವ ಅವಸರದಲ್ಲಿ ಗೌತಮಶಾಪದಿಂದ ಅಪವಿತ್ರಳಾಗಿ ಕಲ್ಲಾಗಿ ಬಿದ್ದಿದ್ದ ಅಹಲ್ಯೆಯನ್ನು ಪವಿತ್ರೀಕರಿಸಿ ಸ್ತ್ರೀಯಾಗಿ ಮಾಡಿದುದೂ, ಕೃಷ್ಣಾವತಾರದಲ್ಲಿ ಮಗುವಾಗಿರುವಾಗ ಬಂಡಿಯ ರೂಪದ ಲೋಕಕಂಟಕನಾದ ಅಸುರನನ್ನು ಒದ್ದು ಕೊಂದುಹಾಕಿದುದೂ, ತ್ರಿವಿಕ್ರಮಾವತಾರದಲ್ಲಿ ಆಕಾಶವನ್ನು ಅಳೆದಾಗ ಚತುರ್ಮುಖನು ಈತನ ದಿವ್ಯಪಾದವನ್ನು ತೊಳೆದಾಗ, ವಿಷ್ಣುಪಾದಾಂಬುವು ದೇವಗಂಗೆಯಾಗಿ ಪ್ರವಹಿಸಿದುದೂ, ಪುನಃ ಕೃಷ್ಣಾವತಾರದಲ್ಲಿ ದ್ರೋಣಪುತ್ರನಾದ ಅಶ್ವತ್ಥಾಮನು ತನ್ನ ತಂದೆಯಾದ ದ್ರೋಣರ ಮರಣವನ್ನು ಕೇಳಿ ಕಡುದುಃಖಿತನಾಗಿ ಅಪಾಂಡವಾಸ್ತ್ರವನ್ನು ಪ್ರಯೋಗಿಸಲು, ಉತ್ತರೆಯ ಗರ್ಭದಲ್ಲಿ ಪಿಂಡವು ಬೆಂದು ಕಪ್ಪಾಗಿರುವದನ್ನು ತನ್ನ ಪಾದದ ಮಾಹಾತ್ಮ್ಯೆಯಿಂದ ಪರೀಕ್ಷಿದ್ರಾಜನನ್ನಾಗಿ ಮಾಡಿದುದೂ, ಹೀಗೆಲ್ಲಾ ಅದ್ಭುತಾಶ್ಚರ್ಯ ಮಾಹಾತ್ಮ್ಯೆಯು ಇರುವದನ್ನು ಕಂಡು ಪಾದಗಳನ್ನೆಂದಿಗೂ ಅಗಲದೆ ಇರುವ ಶ್ರೀ ರಙ್ಗನಾಥನ ಮಣಿ ಪಾದುಕೆಯ ಶರಣವನ್ನು ಹೊಂದುವೆನು ಎಂಬುದು. ಕಲ್ಲು ಹೆಂಗಸಾದುದು, ಇದ್ದಿಲು ಪುರುಷನಾದುದು ಎರಡೂ ವಿಚಿತ್ರಕರವಾದುವೆಂಬ ತಾತ್ಪರ್ಯವು.

೨. ಈ ಮೇಲೆ ಉಪಪಾದಿಸಲ್ಪಟ್ಟ ಅಹಲ್ಯಾ ಶಾಪವಿಮೋಚನ ಮತ್ತು ಪರೀಕ್ಷಿದ್ರಾಜನಿಗೆ ಪ್ರಾಣವಿತ್ತುದು, ಇವುಗಳಿಗಿಂತ ಆಶ್ಚರ್ಯಕರವಾದುದು ಯಾವು ಹೆಂದರೆ ದಹನಸ್ಯೇವ ಹಿಮತಾ–ಪ್ರಹ್ಲಾದ ಆಂಜನೇಯರಿಗೆ ತಮ್ಮ ಪಿತಾ ಮತ್ತು ಶತ್ರುಗಳಿಂದ ಅಗ್ನಿಯಿಂದ ಸುಡಲ್ಪಟ್ಟರೂ ಅಗ್ನಿಯ ಸ್ವರೂಪಾನುಗುಣ ಸ್ವಭಾವವೇ ವಿರುದ್ಧವಾಗಿ ಪರಿಣಮಿಸಿದುದು ಇನ್ನೂ ಆಶ್ಚರ್ಯವೇ. ಹಿಂದಿನ ಸಂದರ್ಭಗಳಲ್ಲಿ ಆಯಾ ಅವಸ್ಥೆಗಳಿಗೆ ಅನುಗುಣವಾದ ಗುಣಗಳು ವ್ಯತ್ಯಸ್ತವಾಗದೆ ಅವಸ್ಥಾಂತರಪ್ರಾಪ್ತಿಯು ; ಈ ಸಂದರ್ಭದಲ್ಲಾದರೋ, ಅಗ್ನಿಯಾಗಿಯೇ ಇದ್ದರೂ ತನ್ನ ಸ್ವರೂಪನಿರೂಪಕ ಧರ್ಮವೇ ಬದಲಾಯಿಸಿಹೋಗಿ ದಹನ ಶಕ್ತಿಗೆ ಬದಲಾಗಿ ಹಿಮತಾ ಉಂಟಾದರೆ ಹೆಚ್ಚು ಆಶ್ಚರ್ಯವೆಂದು ಹೇಳುವದು ಸಹಜವಾಬದೇ ; ಆದುದರಿಂದಲೇ ತತೋಽಪಿ ಏತಚ್ಚಿತ್ರಂ ಎಂದು ಹೇಳಿದರು. ಪ್ರಹ್ಲಾದನ ವಿಷಯದಲ್ಲಿ ಸರ್ವೇಶ್ವರನ ಕರುಣಾ ಮಾಹಾತ್ಮ್ಯೆಯ ವಿಜೃಂಭಣೆಯು ; ಆಂಜನೇಯರ ವಿಷಯದಲ್ಲಿ, ತನಗೆ ಅನಪಾಯಿನಿಯಾಗಿ ವಿಶೇಷಣರೂಪ

ಳಾದ ಈಶ್ವರ ಕೋಟಿಯನ್ನು ಸೇರಿರುವ ಶ್ರೀ ಮಹಾಲಕ್ಷ್ಮಿಯ ಕೃಪಾಪ್ರಭಾವದ ವಿಜೃಂಭಣೆಯು.

೩. ಈ ಹಿಂದೆ ಹೇಳಿದುದಕ್ಕೂ ಇನ್ನೂ ವಿಚಿತ್ರ ವಿಷಯ ಉಂಟೆಂದೂ ಹೇಳುತ್ತಾರೆ.—ತೃಣಸ್ಯೇವಾಸ್ತ್ರತ್ವಂ; ಅರಾಧ್ಯಪರಾಧಿಯಾದ ಕಾಕಾಸುರ ನಿಗ್ರಹಕ್ಕಾಗಿ ಮಂತ್ರಿಸಿಬಿಟ್ಟ ದರ್ಭೆಯೇ ಬ್ರಹ್ಮಾಸ್ತ್ರವಾದುದು. ಹಿಂದೆ ಅಗ್ನಿಯ ದಹನಶಕ್ತಿಯ ನಿರೋಧದಿಂದ ಆತನ ಸುಡುವ ಶಕ್ತಿಯುಹೋಗಿ ಹಿಮತಾಉಂಟಾದ ಆತನ ಮಾಹಾತ್ಮ್ಯೆಯು ಹೇಳಲ್ಪಟ್ಟಿತು. ಈ ಸಂದರ್ಭದಲ್ಲಾದರೋ; ಚಲನಶಕ್ತಿ ಮಾರಣಶಕ್ತಿ ಶತ್ರುಹನನ ಮೊದಲಾದ ಯಾವ ಶಕ್ತಿಯೂ ಇಲ್ಲದೆ ಜಡವಾಗಿರುವ ತೃಣಕ್ಕೆ ಬ್ರಹ್ಮಾಸ್ತ್ರರೂಪ ವಿಚಿತ್ರಶಕ್ತಿಯುಂಟಾದುದು ಪರಮಾಶ್ಚರ್ಯವು ಎಂದು ತೃಣಸ್ಯೇವಾಸ್ತ್ರತ್ವಂ ಎಂಬ ಪ್ರಯೋಗವು. ಹೀಗೆ ಬ್ರಹ್ಮಾಸ್ತ್ರ ಬಿಟ್ಟರೆ ಶತ್ರುವಿಗೆ ಮರಣವೇ ವಿನಾ ಅನ್ಯಥಾ ಆಗುವ ಸಂದರ್ಭವಿಲ್ಲದಿದ್ದರೂ, ಕಾಕನು "ತಮೇವ ಶರಣಂಗತಃ" (ಸುಂ. ೩೮.೩೪) ಎಂದು ಹೇಳಿರುವ ಹಾಗೆ ಯಾವಾಗ ಶರಣವನ್ನು ಹೊಂದಿದನೋ, ಆಗ ಶ್ರೀರಾಮನು "ಸ ತಂ ನಿಪತಿತಂ ಭೂಮೌ ಶರಣ್ಯಶ್ಶರಣಾಗತಂ । ವಧಾರ್ಹಮಪಿ ಕಾಕುತ್ಸ್ಥಃ ಕೃಪಯಾ ಪರ್ಯಪಾಲಯತ್" ತನ್ನ ಕೃಪಾ ಪ್ರಭಾವದಿಂದ ಪರಿಪಾಲಿಸಿದನು; ಆದರೆ ಬ್ರಹ್ಮಾಸ್ತ್ರವು ವ್ಯರ್ಥವಾಗಲಾರದುದರಿಂದ ಆದಕ್ಕಾಗಿ "ಹಿನಸ್ತಿಸ್ಮ ಸದಕ್ಷಿಣಂ" ಎಂದು ಹೇಳಿರುವ ಹಾಗೆ ಬಲಗಣ್ಣನ್ನು ಬ್ರಹ್ಮಾಸ್ತ್ರಕ್ಕೆ ಅರ್ಪಿಸೆಂದು ಹೇಳಿ ಕರುಣಿಸಿದನು.

೪. ಇದಕ್ಕೂ ವಿಚಿತ್ರವಾದ ವಿಷಯವೇನೆಂದರೆ ಮುಂದೆ ಹೇಳುತ್ತಾರೆ.—ರಿಪುಷು ನಿಹತೇರೇವ ಹಿತತಾ - ಶತ್ರುಗಳನ್ನು ಧ್ವಂಸ ಮಾಡಲು ಸಂಕಲ್ಪಿಸಿ ಪ್ರಯತ್ನಪಟ್ಟು ಅವತಾರಾದಿಗಳನ್ನೂ ಕೂಡ ಮಾಡಿ, ಅವರುಗಳ ಬಹು ಪ್ರಯಾಸದಿಂದ ಹನನವೂ ಕೂಡ, ಅವರಿಗೆ ಪರಮಹಿತವಾಗಿ ಪರಿಣಮಿಸೋಣವು, ಹಿಂದೆ ಹೇಳಿದುದಕ್ಕಿಂತಲೂ ವಿಚಿತ್ರಕರವಾದುದು- ಹಿರಣ್ಯಕಶಿಪುವು ಪರಮ ಶತ್ರುವಾಗಿ ತನ್ನನ್ನು ನಾನಾ ಬಗೆಯಲ್ಲಿ ನಿಂದಿಸುವದೂ, ಮತ್ತು ತನ್ನ ಭಕ್ತನನ್ನು ಹಿಂಸಿಸಿದುದೂ, ರಾವಣನು ತನ್ನ ಪತ್ನಿಯನ್ನೇ ಕೊಂಡುಹೋಗುವದೂ, ಇಂತಹ ದುರ್ಮಾರ್ಗಿಗಳಾದುದರಿಂದ ಅವರುಗಳನ್ನು ಕೊಂದಿದ್ದು, ತನ್ನೊಂದಿಗೆ ಸೇರುವದಕ್ಕೇ ಹೇತುವಾಗಿ ಪರಿಣಮಿಸಿತು. ಭಗವದ್ವೇಷಿಯಾಗಿ ಆತನನ್ನೇ ನಿರಂತರ ಚಿಂತನೆಯಲ್ಲಿರುವದರಿಂದ "ಭಗವಾನ್ ದಿವ್ಯ ಮನುಪಮಂ ಸ್ಥಾನಂ ಪ್ರಯಚ್ಛತಿ" (ವಿ. ಪು- ೪.೧೪.೫೩.) ಎಂದು ಹೇಳಿರುವ ಹಾಗೆ ಕರುಣಾಸಾಗರನು ತನ್ನ ಸಾಯುಜ್ಯವನ್ನೇ ಕೊಡುವನು ಎಂಬ ಭಾವವು. ಹೀಗೆ ಶತ್ರುಗಳನ್ನೇ ಅನುಗ್ರಹಿಸುವವನಾದರೆ ತನ್ನ ಶರಣಾಗತನಿಗೆ ಪ್ರಾರಬ್ಧಕರ್ಮವು ಕ್ಲೇಶ

ಪಡಿಸಕೂಡದೆಂದು ಪ್ರಾರ್ಥಿಸಲ್ಪಟ್ಟರೆ ಆತನ ಕೋರಿಕೆಯನ್ನು ಸಲ್ಲಿಸನೇ? ಎಂಬ ಭಾವವು ದ್ಯೋತಿತವು.

ಮುಂದೆ ಸ್ವಾಮಿ ಪಾದಕಮಲವನ್ನು ನಂಬಿಕೊಂಡಿರುವ ಪಾದುಕೆಯ ಮಾಹಾತ್ಮ್ಯೆಯನ್ನು ಏನೆಂದು ಹೇಳಲಿ? ಆದರ ಪ್ರಭಾವವನ್ನು ಎಷ್ಟೆಂದು ಹೇಳಲಾದೀತು? ಮೇಲೆ ಹೇಳಿದವುಗಳಿಗಿಂತ ಪರಮಾದ್ಭುತಾಶ್ಚರ್ಯಯುಕ್ತವಾದುದೆಂದು ಹೇಳುತ್ತಾರೆ—ಪದತ್ರೇಣ್ಯೈನೇಹ ತ್ರಿಭುವನ ಪರಿತ್ರಾಣ ಮಿತಿ ಚ ಎಂಬುದು ಆಶ್ಚರ್ಯವಾದವುಗಳಲ್ಲೆಲ್ಲಾ ಆಶ್ಚರ್ಯವು. ತಾನು ಹೇಗೆ ಎಲ್ಲಾ ಪ್ರಜೆಗಳಿಗೂ ಏನೆಂದೂ ಈತಿ ಬಾಧೆಗಳಿಲ್ಲದ ಹಾಗೆ ಅತಿಶಯ ಸುಖದಾಯಕನಾಗಿ ರಾಜ್ಯಭಾರವನ್ನು ಮಾಡುತ್ತಿದ್ದನೋ, ಅಷ್ಟುಸುಖವಾಗಿ ನಿನ್ನ ಪಾದಕಮಲವನ್ನು ಅಲಂಕರಿಸುತ್ತಿದ್ದ ಪಾದುಕೆಯೇ ಶ್ರೀಭರತಾಳ್ವಾರಿಗೆ ಆರಾಧ್ಯೇಷ್ಟದೇವತೆಯಾಗಿದ್ದುಕೊಂಡು ರಾಜ್ಯಭಾರವನ್ನೂ ನಡೆಸಿತು ಎಂಬುದೂ, ಆಶ್ಚರ್ಯತಮವಿಷಯವೆಂದು ಹೇಳಿರುತ್ತಾರೆ. ಈ ಪಾದುಕೆಗಳ ಮಾಹಾತ್ಮ್ಯೆಯನ್ನು ಪ್ರಥಮತಃ ಬಲ್ಲವರು ವಾಲ್ಮೀಕಿ ಮಹರ್ಷಿಯು. ಅದನ್ನನುಸರಿಸಿ ಗುರುವರ್ಯರಾದ ಶ್ರೀದೇಶಿಕರು ಸಾವಿರ ಶ್ಲೋಕದಿಂದ ಶ್ರೀರಂಗನಾಥನ ಮಣಿಪಾದುಕೆಯನ್ನು ಪರಮಾದ್ಭುತವಾಗಿ ಕೊಂಡಾಡಿರುತ್ತಾರೆ. ಈ ಅಮೋಘ ಗ್ರಂಥದ ರಸಾಸ್ವಾದನಕ್ಕಿಂತ ಚೇತನೋತ್ತಾರಣೆಗೆ ಸಹಾಯಕರವಾದ ಮಾರ್ಗವು ಬೇರೆ ದೊರೆಯಲಾರದು. ಸ್ವಾಮಿಯ ಕೃಪೆಯನ್ನು ನೂರು ಶ್ಲೋಕಗಳಿಂದ ದಯಾಶತಕವೆಂಬ ಅಮೋಘ ಗ್ರಂಥದಿಂದ ಕೊಂಡಾಡಿದರು. ಸ್ವಾಮಿ ಪಾದುಕೆಯನ್ನು ನಂಬಿದರೆ ಆತನ ಕೃಪೆಯು ತಾನಾಗಿಯೇ ಸಿದ್ಧವು ಎಂದು ತಿಳಿದವರಾದುದರಿಂದಲೇ ಪಾದುಕೆಯ ಮಾಹಾತ್ಮ್ಯೆಯನ್ನು ೧೦೦ ಶ್ಲೋಕದಿಂದ ಕೊಂಡಾಡಿದರೆ, ಮನವು ದಣಿಯದು ಎಂದು ಭಾವಿಸಿ, ೧೦೦೦ ಶ್ಲೋಕಗಳಿಂದ ಕೊಂಡಾಡಿರುತ್ತಾರೆ. ಮೇಲೆ ಉದಾಹರಿಸಿರುವ ಪ್ರಭಾವ ಪದ್ಧತಿ ಶ್ಲೋಕವೇ ಒಂದು ನಿದರ್ಶನವು. ಪ್ರಭಾವ ಒಂದನ್ನೇ ೭೦ ಶ್ಲೋಕಗಳಿಂದ ವರ್ಣಿಸಿರುತ್ತಾರೆ—ಹಾಗೆ ಪಾದುಕೆಯ ಮಾಹಾತ್ಮ್ಯೆಯನ್ನು ಹೇಗೆ ಕೊಂಡಾಡಿರುತ್ತಾರೆಂಬುದಕ್ಕೆ ಇನ್ನೂ ಎರಡು ಶ್ಲೋಕಗಳನ್ನು ಉದಾಹರಿಸಬೇಕೆಂಬ ಆಶೆಯಿಂದ ಬಾಧಿತನಾಗಿ ವಿಜ್ಞಾಪಿಸಿಕೊಳ್ಳುತ್ತೇನೆ.

(೧) ರಾಮೋ ವನಂ ವ್ರಜತಿ ಪಙ್ಕ್ತಿರಥೇ ಪ್ರಸುಪ್ತೇ ರಾಜ್ಯಾಪವಾದಚಕಿತೇ ಭರತೇ ತದಾನೀಂ । ಆಶ್ವಾಸಯೇತ್ಕಃ ಕೋಸಲವಾಸಿನಸ್ತ್ವಾಂ ಸೀತೇವ ಚೇತ್ತ್ವಮಪಿ ಸಾಹಸವೃತ್ತಿರಾಸೀಃ ॥೧೦೭॥ ಈ ಶ್ಲೋಕದಲ್ಲಿ ಪಾದುಕೆಯ ಪ್ರಭಾವವು ಅನುಗ್ರಹಮಯಳೆಂದು ಪ್ರಸಿದ್ಧಿಯನ್ನು ಹೊಂದಿರುವ ಸೀತೆಯ ಪ್ರಭಾವಕ್ಕಿಂತ ಅತಿಶಯವಾದುದು ಎನ್ನುತ್ತಾರೆ—ಹೇಗೆಂದರೆ, ರಾಮೋವನಂ

ವ್ರಜತಿ - ಶ್ರೀರಾಮನು ಪಿತೃವಚನ ಪರಿಪಾಲನನೆಪದಿಂದ ವನವನ್ನು ಹೊಂದಲು; ಪಙ್ಕ್ತಿರಥೇ ಪ್ರಸುಪ್ತೇ - ದಶರಥನು ಪುತ್ರಶೋಕದಿಂದ ದೀರ್ಘನಿದ್ರೆಯನ್ನು ಹೊಂದಲು ; ರಾಜ್ಯಾಪವಾದ ಚಕಿತೇ ಭರತೇ ತದಾನೀಂ – ತನ್ನ ತಾಯಿಗೆ ಚುಚ್ಚಿಕೊಟ್ಟು ಜ್ಯೇಷ್ಠಪುತ್ರನಿಗೆ ಸಲ್ಲತಕ್ಕ ರಾಜ್ಯವನ್ನು ದುಷ್ಟತಾಯಿಯ ಮೂಲಕ ಅಪಹರಿಸಿದನೆಂಬ ಲೋಕಾಪವಾದಕ್ಕೆ ನಡುಗಿ ಭರತನು ನಿಲ್ಲಲು; ಆಗ "ನತ್ವಾಮನ್ಯತ ವೈದೇಹಃ ಪಿತಾ ಮೇ ಮಿಥಿಲಾಧಿಪಃ । ರಾಮಜಾಮಾತರಂ ಪ್ರಾಪ್ಯ ಸ್ತ್ರಿಯಂ ಪುರುಷವಿಗ್ರಹಂ" ಎಂಬಲ್ಲಿ ಹೇಳಿರುವ ಹಾಗೆ ಸ್ತ್ರೀಯಾದ ತನ್ನನ್ನು ವನದಲ್ಲಿ ರಕ್ಷಿಸಲು ಯೋಗ್ಯತೆಯಿಲ್ಲದವನೆಂದು ತಿಳಿಯದೆ. ತನ್ನ ತಂದೆಯು ಪುರುಷ ವೇಷಧಾರಿಯಾಗಿರುವ ಸ್ತ್ರೀ ಎಂಬ ಜ್ಞಾನವಿಲ್ಲದೆ, ತನ್ನನ್ನು ಮದುವೆ ಮಾಡಿದ ನೆಂದು ಸೀತೆಯು ಪತಿಗೆ ನಿಷ್ಠುರೋಕ್ತಿಗಳನ್ನು ಆಡಿ, ಆತನನ್ನು ಬಿಟ್ಟಿರಲಾರನೆಂದು ಹೇಗೆ ಇದ್ದು ಬಿಟ್ಟಳೋ, ಹಾಗೆಯೇ, ಓ ಪಾದುಕೆಯೇ ನೀನೂ ಸಹ ಸ್ವಾಮಿ ಪಾದವನ್ನು ಬಿಟ್ಟು ಅಗಲಿರಲಾರನೆಂದು ಹೇಳಿ ಸೀತೆಯಹಾಗೆ ಸಾಹಸವೃತ್ತಿಯ ನ್ನವಲಂಬಿಸಿ ನಿಂತುಬಿಟ್ಟದ್ದರೆ, ಆಶ್ವಾಸಯೇಃ ಕೋಸಲ ವಾಸಿನಸ್ತ್ವಂ- ಅಂತಹ ಕಷ್ಟದೆಶೆಯಲ್ಲಿ ಕೋಸಲದೇಶದವರನ್ನು ಸಮಾಧಾನವನ್ನು ಮಾಡು ವರ್‍ಯಾರು? ಆದುದರಿಂದ ನೀನು ದೊಡ್ಡ ಮನಸ್ಸು ಮಾಡಿ ಸ್ವಾಮಿಯ ಅನುಜ್ಞೆ ಯನ್ನು ಹೊಂದಿ ಬಂದಿದ್ದರಿಂದಲ್ಲವೇ ರಾಜ್ಯದಲ್ಲೆಲ್ಲಾ ಕ್ಷೇಮ ಉಂಟಾಯಿತೆಂಬ ಭಾವವು ಆದುದರಿಂದ ಸೀತೆಯ ಪ್ರಭಾವಕ್ಕಿಂತ ಮೇಲಾದುದು ಪಾದುಕೆಯ ಪ್ರಭಾವವೆಂಬ ತಾತ್ಪರ್ಯವು. ಏಕೆಂದರೆ ನಿನ್ನ ಸುಖವನ್ನೂ ನಿರಾಕರಿಸಿ ಪ್ರಜೆ ಗಳನ್ನು ಪಾಲಿಸಬೇಕೆಂದು ಬಂದಿದುದರಿಂದ.

ಈ ಮುಂದಿನ ಶ್ಲೋಕದಲ್ಲಿ ಶ್ರೀರಾಮನಿಗಿಂತ ಶ್ರೀರಾಮಪಾದುಕೆಯ ಪ್ರಭಾ ವವು ಅತಿಶಯವೆಂದು ಹೇಳುತ್ತಾರೆ—"ಪಾದಾವನಿ ಪ್ರಭವತೋ ಜಗತಾಂ ತ್ರಯಾಣಾಂ ರಾಮಾದಪಿ ತ್ವಮಧಿಕಾ ನಿಯತಂ ಪ್ರಭಾವಾತ್ । ನೋಚೇ ತ್ಕಥನ್ನು ಭರತಸ್ಯ ತಮೇವ ಲಿಪ್ಸೋಃ ಪ್ರತ್ಯಾಯನಂ ಪರಿಪಣಂಭವತೀಭವಿತ್ರೀ" (೧೦೮) ಹೇ ಪಾದವನಿ-ಓ ರಂಗನಾಥನ ಮಣಿಪಾದುಕೆಯೇ, ಶ್ರೀರಾಮಚಂದ್ರ ಗಿಂತಲೂ ಪ್ರಭಾವದಲ್ಲಿ ನೀನು ಅಧಿಕಳೆಂಬುದು ಸಿದ್ಧವು. ಏಕೆಂದರೆ ಭರತನಾದರೋ ಮಹಾಪ್ರಾಜ್ಞನು, ಶ್ರೀರಾಮನನ್ನು ಹೇಗಾದರೂ ಮಾಡಿ ವನವಾಸದಿಂದ ನಿವರ್ತಿಸಿ ಹಿಂತಿರುಗಿ ಕರೆದುಕೊಂಡು ಬರುವದೇ ನಿಶ್ಚಯವು, ಇಲ್ಲದಿದ್ದರೆ ಪ್ರಾಣತ್ಯಾಗ ಮಾಡುವೆನೆಂದು ಪ್ರತಿಜ್ಞೆಮಾಡಿ ರಾಮನಲ್ಲಿಗೆ ಬಂದನು. ನಾನು ಬರುವದಕ್ಕೆ ಆಡ ವಾಗಿ ಈ ಪಾದುಕೆಗಳನ್ನು ಇಟ್ಟುಕೋ ಎಂದು ಹೇಳಿದರೆ, ಒಪ್ಪಿ, ಪಾದುಕೆಗಳನ್ನು ತಲೆಯಲ್ಲಿ ಧರಿಸಿ ಭರತನು ಹಿಂತಿರುಗಿದುದರಿಂದ, ಅಡವಾಗಿ ಇಟ್ಟುಕೊಳ್ಳುವ ಪದಾ

ರ್ಥವು ಕೇಳಿದ ಹಣಕ್ಕಿಂತ ಹೆಚ್ಚು ಬೆಲೆಯುಳ್ಳದ್ದಾಗಿರುವ ಪ್ರಯುಕ್ತ, ಶ್ರೀರಾಮ ಪ್ರಭುವಿಗಿಂತ ಆತನ ಪಾದುಕೆಯು ಮಾಹಾತ್ಮ್ಯೆಯಲ್ಲಿ ಅಧಿಕವಾದುದೆಂಬುದು ಭರತನಿಗೆ ವೇದ್ಯವೆಂಬ ಭಾವವು. ತ್ರಿಭುವನಪರಿತ್ರಾಣಂ ಎಂಬ ಪ್ರಯೋಗವಿರುವಾಗ ಈ ಲೋಕಕ್ಕೆ ಮಾತ್ರ ಅನ್ವಯಿಸುವ ಭರತಾಳ್ವಾರವರ ಇತಿಹಾಸವು ಹೇಗೆ ಸಮಂಜಸವೆಂದು ಆಕ್ಷೇಪಿಸಿದರೆ, ತ್ರಿವಿಕ್ರಮಾವತಾರ ಕಥೆಯನ್ನು ಅಙ್ಗೀಕರಿಸಬಹುದು ಎಂದು ಹೇಳುವೆವು. ಬಲಿಚಕ್ರವರ್ತಿಯಿಂದ ಮೂರುಹೆಜ್ಜೆಯ ಪ್ರದೇಶವನ್ನು ಪ್ರಾರ್ಥಿಸಿ ಬೆಳೆದು ತ್ರಿವಿಕ್ರಮನಾಗಿ ಮೇಲಿನ ಲೋಕಗಳನ್ನೆಲ್ಲಾ ಒಂದು ಹೆಜ್ಜೆಯಿಂದ ಆಕ್ರಮಿಸಿ, ಭೂಮಿಯನ್ನೂ ಕೆಳಗಿನ ಲೋಕಗಳನ್ನೂ ಇನ್ನೊಂದು ಹೆಜ್ಜೆಯಿಂದ ಅಳೆದು, ಮೂರನೆಯ ಹೆಜ್ಜೆಗೆ ಸ್ಥಳವಿಲ್ಲದೆ ಬಲಿಯ ಶಿರಸ್ಸಿನಲ್ಲಿಟ್ಟು ಅನುಗ್ರಹಿಸಿದ ವೃತ್ತಾಂತವು ಇಲ್ಲಿಅನುಸಂಧೇಯವು. ಬಲಿಯು ಶ್ರೀಹರಿಯ ಪಾದವನ್ನು ತೊಳೆದು, ಮೂರ್ಧ್ನಿಯಲ್ಲಿ ಪಾದೋದಕವನ್ನು ಸ್ವೀಕರಿಸಿದುದರಿಂದ ಪಾವನತ್ವವನ್ನು ಹೊಂದಿದನೆಂದು "ಶ್ರೀಮತ್ಪಾದಯುಗಂತದಾ ಅವನಿಜ್ಯಾ ವಹನ್ಮೂರ್ಧ್ನಿತದಪೋ ವಿಶ್ವಪಾವನೀಃ" ಎಂಬಲ್ಲಿ (ಭಾಗ. ೮. ೨೦. ೧೮)ಹೇಳಲ್ಪಟ್ಟಿರುತ್ತದೆ. ತ್ರಿವಿಕ್ರಮನಾಗಿ ಬೆಳದಾಗ, ಸ್ವಾಮಿಪಾದವು ಬ್ರಹ್ಮಲೋಕವನ್ನು ವ್ಯಾಪಿಸಿದಾಗ, ಚತುರ್ಮುಖನು ತನ್ನ ಕಮಂಡಲು ಜಲದಿಂದ ತೊಳೆದುದರಿಂದ, "ಸ್ವರ್ಧುನ್ಯಭವನ್ನಭಸಿ ಪತತೀನಿಮಾರ್ಷ್ಟಿ ಲೋಕತ್ರಯಂ ಭಗವತೋ ವಿಶದೇವಕೀರ್ತಿಃ" (ಭಾಗ. ೮. ೨೧. ೪) ಆ ನೀರು ಮೂರು ಲೋಕವನ್ನೂ ಪವಿತ್ರೀಕರಿಸುವದಾಗಿ ಭಗವಂತನ ಕೀರ್ತಿಯಹಾಗೆ ನಿರ್ಮಲವಾದುದಾಗಿ, ಧ್ರುವ ಮಂಡಲದಿಂದ ಕೆಳಕ್ಕೆ ದೇವನದಿಯಾಗಿ ಪ್ರವಹಿಸಿತೆಂದು ಹೇಳಲ್ಪಟ್ಟಿರುತ್ತದೆ. ಆದುದರಿಂದ ಹೀಗೆ ತ್ರಿಭುವನ ಪರಿತ್ರಾಣವು ಎಲ್ಲಾದಕ್ಕಿಂತ ಅತ್ಯಂತಾದ್ಭುತವಾದುದೆಂಬ ತಾತ್ಪರ್ಯವಾದರೂ ಆಗಬಹುದು. ಆಗಲಿ ಮೂಲದಲ್ಲಿ ಪದಕ್ರೇಣೈವ ಎಂಬ ಪ್ರಯೋಗದಿಂದ ಪಾದುಕೆ ಎಂಬರ್ಥವಾಗುವಾಗ ತ್ರಿವಿಕ್ರಮಾವತಾರ ಕಥೆಯಲ್ಲಿ ಹೇಳಿರುವ ಸರ್ವೇಶ್ವರನ ಪಾದಮಾಹಾತ್ಮ್ಯೆಯನ್ನು ಹೇಳಬಹುದೋ? ಎಂದು ಆಕ್ಷೇಪಿಸಿದರೆ, ಸ್ವಾಮಿಯು ಲಕ್ಷ್ಮೀ ದಿವ್ಯಾಭರಣ, ದಿವ್ಯಾಯುಧಗಳ ಯೋಗವಿಲ್ಲದೇ ಅವತರಿಸುವದಿಲ್ಲವೆಂದೂ, ಅಜಹತ್ಸ್ವಸ್ವರೂಪಸ್ವಭಾವನಾಗಿಯೇ ಅವತರಿಸುವನೆಂದೂ, ಹೇಗೆ ಹೇಳಲ್ಪಟ್ಟಿದೆಯೋ, ಹಾಗೆಯೇ ಅವತರಿಸಿದ ನಂತರ ಪಾದುಕೆಗಳಿಂದ ಒಪ್ಪುತ್ತಿದ್ದನೆಂದು ಒಪ್ಪಿಕೊಳ್ಳಲು ಏನೂ ಅಭ್ಯಂತರವಿಲ್ಲವು.

ಹೀಗೆ ಸರ್ವೇಶ್ವರನ ಪಾದುಕೆಗೇನೇ ಒಂದಕ್ಕಿಂತ ಒಂದು ಅತಿಶಯಿತವಾದ ದಿವ್ಯಾದ್ಭುತ ವೃತ್ತಾಂತಗಳಿರುವದರಿಂದ, ಸರ್ವೇಶ್ವರನ ಪಾದಕಮಲದಲ್ಲಿ ಮಾಡಿದ ಶರಣಾಗತಿಯು ಪ್ರಪನ್ನನ ಪ್ರಾರಬ್ಧ ಕರ್ಮವನ್ನು ಹೋಗ

ಅಧಿಕಾರಾರ್ಥಂ ಪ್ರತಿಜಾನೀತೇ.

ಉಪಾಯ ಪ್ರಭಾವ ವ್ಯವಸ್ಥೈ ಶೊನ್ನೋಮ್. ಇನಿಮೇಲ್ ಉಪಾಯ ಪ್ರಭಾವತ್ತೈ ಸಙ್ಕುಚಿತಮಾಗ ಪಾರ್‍ತ್ತು ವರುಮ್ ತಪ್ಪುಗಳ್ ಪರಿಹರಿಕ್ಕಿರೋಮ್.

ಪ್ರಪತ್ತೇಃ ಪ್ರಾರಬ್ಧ ನಾಶಕತ್ವಂ ನ ಸಂಭವತೀತಿ ಶಙ್ಕೋ ತ್ಥಾಪನಾಯ ಸಿದ್ಧಾನ್ತಸ್ಥಿತಿಮಾಹ.

(೧) "ಅತ್ಯುತ್ಕಟೈಃ ಪುಣ್ಯಪಾಪೈ ರಿಹೈವ ಫಲಮಶ್ನುತೇ" ಎಙ್ಗಿರ

---

ಲಾಡಿಸಲಾರದೆಂಬ ಶಙ್ಕೆವಿಗೆ ತಳಹದಿಯೇ ಇಲ್ಲವೆಂಬ ತಾತ್ಪರ್ಯವು. ಪ್ರಾರಬ್ಧ ಕರ್ಮದ ಹಾವಳಿ ತಪ್ಪಬೇಕೆಂದು ಶರಣಾಗತಿಯ ಮೂಲಕ ಪ್ರಾರ್ಥಿಸಿದವನ ಈ ಅಲ್ಪ ಪ್ರಾರ್ಥನೆಯು, ಅಂತಹ ಅದ್ಭುತವಾಗಿಯೂ ಆಶ್ಚರ್ಯಕರವಾಗಿಯೂ ಇರುವ ಫಲಗಳನ್ನುಂಟುಮಾಡುವ ಇತಿಹಾಸಗಳಿರುವಾಗ, ಫಲಕಾರಿಯಾಗದೆ ಎಂದಿಗಾದರೂ ಇದ್ದೀತೇ? ಆದುದರಿಂದ ಅಂತಹ ಶಂಕೆಗೆ ಈಷದಪಿ ಅವಕಾಶವೇ ಇಲ್ಲವೆಂಬ ತಾತ್ಪರ್ಯವು.

ಈ ಅಧಿಕಾರದಲ್ಲಿ ಹೇಳುವುದರ ಪ್ರತಿಜ್ಞಾ ವಾಕ್ಯವನ್ನು ದಯಪಾಲಿಸುತ್ತಾರೆ.

ಉಪಾಯ ಪ್ರಭಾವವ್ಯವಸ್ಥೈಶೊನ್ನೋಮ್ - ಹಿಂದಿನ ಅಧಿಕಾರದಲ್ಲಿ ಈ ಉಪಾಯದ ಪ್ರಭಾವವನ್ನು ವ್ಯವಸ್ಥೆ ಮಾಡಿ ಹೇಳಿದೆವು; ಬುದ್ಧಿ ಪೂರ್ವೋತ್ತರಾಘವನ್ನೂ ಕೂಡ ನಾಶಮಾಡುವ ಸಾಮರ್ಥ್ಯವೇ ಮೊದಲಾದ ಅದಕ್ಕಿಲ್ಲದಿರುವ ಪ್ರಭಾವವನ್ನು ಆರೋಪಿಸಿದುದನ್ನು ನಿರಾಕರಿಸಿ, ಪ್ರಭಾವ ವ್ಯವಸ್ಥೆಯನ್ನು ಮಾಡಿದೆವು. ಇನಿಮೇಲ್ - ಇನ್ನು ಮೇಲೆ ಈ ಅಧಿಕಾರದಲ್ಲಿ, ಸಙ್ಕುಚಿತಮಾಗ ಪಾರ್‍ತ್ತುವರುಮ್ – ಪ್ರಭಾವಕ್ಕೆ ಸಂಕೋಚವನ್ನು ಉಂಟುಮಾಡಿದುದರಿಂದ ಬರುವ, ತಪ್ಪುಗಳ್ - ಅಸಂಗತವಾದ ಅಭಿಪ್ರಾಯಗಳನ್ನು, ಪರಿಹರಿಕ್ಕಿರೋಮ್ - ಪರಿಹರಿಸುವೆವು. ಪ್ರಪತ್ತಿಗಿರುವ ಮಾಹಾತ್ಮ್ಯೆಯನ್ನು ತಗ್ಗಿಸಿ, ಮಾಡುವ ಪೂರ್ವ ಪಕ್ಷಗಳಿಗೆ ಸಮಾಧಾನವನ್ನು ಹೇಳುವೆವು ಎಂಬ ಭಾವವು.

ಪ್ರಪತ್ತಿಗೆ ಪ್ರಾರಬ್ಧ ನಾಶಕತ್ವವಿಲ್ಲವೆಂಬ ಶಙ್ಕೆವನ್ನುಂಟುಮಾಡಲು ಸಿದ್ಧಾನ್ತದ ಸ್ಥಿತಿಯನ್ನು ಅನುವದಿಸುತ್ತಾರೆ.

(೧) "ಅತ್ಯುತ್ಕಟೈಃ - ಅತ್ಯಂತ ಹೆಚ್ಚಾದ, ಪುಣ್ಯಪಾಪೈಃ - ಪುಣ್ಯ

---

(೧) ವಿಹಗೇಂದ್ರ ಸಂಹಿತೆ.

ಕಣಕ್ಕಿಲೇ, (೨) "ಉಪಾಯ ಭಕ್ತಿಃ ಪ್ರಾರಬ್ಧ ವ್ಯತಿರಿಕ್ತಾಘನಾಶಿನೀ। ಸಾಧ್ಯಭಕ್ತಿಸ್ತು ಸಾ ಹಂತ್ರೀ ಪ್ರಾರಬ್ಧಸ್ಯಾಪಿ ಭೂಯಸೀ" ಎನ್ಗೈಯಾಲೇ ಪ್ರಾರಬ್ಧಙ್ಗಳೈಯುಮ್ ಕೂಡ ಅಮುಕ್ಕಿ, ತನ್ ಫಲತ್ತೈ ಕೊಡುಕ್ಕವಱ್ಱನ ಪ್ರಪತ್ತಿಯೈ ಪಣ್ಣಿನವನುಕ್ಕು, ವಿದ್ಯಾನ್ತರ ನ್ಯಾಯತ್ತಾಲೇ, ಉತ್ತರಪೂರ್ವಾಘಙ್ಗಳುಮ್, ಇವ್ವಿದ್ಯೈಕ್ಕು ತನ್ನೇಱ್ಱಮಾನ ಸಾಮರ್ಥ್ಯತ್ತಾಲೇ ಪ್ರಾರಬ್ಧ ಕರ್ಮಫಲತ್ತೈ ಪತ್ತು ವುಣ್ಣಾನ ಅರ್ತ್ತಿಯಿನೆಲ್ಲೈಕ್ಕೀಡಾಕ ಕ್ಷಣಾನ್ತರ, ದಿವಸಾ

ಮತ್ತು ಪಾಪಗಳಿಂದ, ಇಹೈವ - ಈ ಜನ್ಮದಲ್ಲೇ, ಫಲಮಶ್ನುತೇ – ಫಲವನ್ನು ಅನುಭವಿಸುವನು, ಎಙ್ಗಿರಕಣಕ್ಕಿಲೇ - ಎಂದು ಹೇಳಿರುವ ನ್ಯಾಯರೀತ್ಯಾ, ಎಂದರೆ, ತುಂಬಾ ಉತ್ಕೃಷ್ಟವಾದ ಪುಣ್ಯವನ್ನು ಮಾಡಿದರೂ ಅಥವಾ ತುಂಬಾ ಕ್ರೂರವಾದ ಪಾಪವನ್ನು ಮಾಡಿದರೂ, ಅದರ ಫಲವನ್ನು ಒಡನೆ ಈ ಜನ್ಮದಲ್ಲೇ ಮೂರು ಘಂಟೆಯೋ, ಮೂರು ದಿನವೋ, ಮೂರು ತಿಂಗಳೋ ಅಷ್ಟರಲ್ಲೇ ಅನುಭವಿಸುವನೆಂಬ ಪ್ರಮಾಣರೀತ್ಯಾ ಎಂಬ ಭಾವವು, ಪ್ರಪತ್ತಿಗೆ ಪ್ರಾರಬ್ಧ ನಿವರ್ತಕತ್ವವು ಎಲ್ಲಿಯೂ ಹೇಳದಿರುವುದರಿಂದ ಅಂತಹ ಶಕ್ತಿಯುಂಟೆಂದು ಹೇಳ ಬಹುದೋ ಎಂಬ ಶಂಕಾನಿವಾರಣೆಗಾಗಿ ಈ ಪ್ರಮಾಣವು. (೨) "ಉಪಾಯ ಭಕ್ತಿಃ - ಸಾಧ್ಯೋಪಾಯವಾದ ಸಾಙ್ಗಭಕ್ತಿಯೋಗವು, ಪ್ರಾರಬ್ಧವ್ಯತಿರಿಕ್ತಾ ಘನಾಶಿನೀ - ಪ್ರಾರಬ್ಧವಲ್ಲದ ಇತರ ಪಾಪಗಳನ್ನು ಹೋಗಲಾಡಿಸುವಂತಾದ್ದು" "ಸಾ ಸಾಧ್ಯಭಕ್ತಿಸ್ತು - ಭಕ್ತಿಯೋಗದ ಫಲವನ್ನೇ ಯಾವುದು ಸಾಧಿಸಿ ಕೊಡುವದೋ ಅದು ಎಂಬುದರಿಂದ ಪ್ರಪದನವು ಹೇಳಲ್ಪಟ್ಟಿತು, ಪ್ರಾರಬ್ಧಸ್ಯ - ಪ್ರಾರಬ್ಧ ಕರ್ಮಕ್ಕೂ - ಕೂಡ, ಭೂಯಸೀ - ಹೆಚ್ಚಾಗಿ, ಹಂತ್ರೀ – ನಾಶಮಾಡು ವಂತಾದ್ದು", ಎನ್ಗೈಯಾಲೇ - ಎಂದು ಹೇಳಿರುವದರಿಂದ, ಪ್ರಾರಬ್ಧಙ್ಗಳೈ ಯುಮ್ ಕೂಡ – ಪ್ರಾರಬ್ಧಕರ್ಮಗಳನ್ನೂ ಕೂಡ, ಇವರಲ್ಲಿ ಅನಭ್ಯುಪಗತ - ಪ್ರಾರಬ್ಧವೂ ಸೇರಿತು, ಏಕೆಂದರೆ, ದೇಹಾವಸಾನದಲ್ಲಿ ಪ್ರಪದನವು ಮುಕ್ತಿಯನ್ನು ಕೊಡುತ್ತದೆ ಎಂದು ಶಾಸ್ತ್ರಾಭಿಪ್ರಾಯವಾದುದರಿಂದ, ಅಮುಕ್ಕಿ - ಮುಳುಗಿಸಿ, ಎಂದರೆ ಫಲಕೊಡದ ಹಾಗೆ ನಿರೋಧಿಸಿ, ತನ್ ಫಲತ್ತೈ ಕೊಡುಕ್ಕವಱ್ಱನ - ತನ್ನ ಫಲವಾದ ಮೋಕ್ಷವನ್ನು ದೇಹಾವಸಾನದಲ್ಲೇ ಕೊಡುವ, ಪ್ರಪತ್ತಿಯೈ - ಭರ ನ್ಯಾಸವನ್ನು, ಪಣ್ಣಿನವನುಕ್ಕು - ಅನುಷ್ಠಿಸಿದ ಪ್ರಪನ್ನನಿಗೆ, ವಿದ್ಯಾನ್ತರನ್ಯಾಯ ತ್ತಾಲೇ - ಉಪಾಸನವಾದ ಭಕ್ತಿಯೋಗವನ್ನನುಷ್ಠಿಸುವದರಿಂದುಂಟಾಗುವ ನ್ಯಾಯದಿಂದ, ಉತ್ತರಪೂರ್ವಾಘಙ್ಗಳುಮ್ - ಶ್ರುತಿಯಲ್ಲೂ ಬ್ರಹ್ಮಸೂತ್ರ

(೨)

**ನ್ತರ. ಜನ್ಮಾನ್ತರಾದ್ಯನುವೃತ್ತಿಯುಮ್ ಕೆಳಿಯಕ್ಕಡವದೆನ್ರು "ಮಾಶುಚಃ" ಎಙ್ಗಿರವಾಕ್ಯತ್ತುಕ್ಕು ಅಭಿಪ್ರಾಯಮ್.**

ದಲ್ಲೂ ಹೇಳಿರುವ ಹಾಗೆ ಪೂರ್ವಾಘಕ್ಕೆ ನಾಶವೂ ಉತ್ತರಾಘದ ಅಶ್ಲೇಷವೂ ಇಳ್ಳ ಈ ಎರಡು ವಿಧ ಪುಣ್ಯಪಾಪಗಳನ್ನೂ, ಈ ವಿದ್ಯೆಕ್ಕು - ಭಕ್ತಿಯೋಗ ವಿದ್ಯೆಗಳ ಹಾಗೆಯೇ, ಈ ನ್ಯಾಸವಿದ್ಯೆಯಾದ ಭರನ್ಯಾಸಕ್ಕೂ, ತನ್ನೇತ್ತವಾನ ಸಾಮರ್ಥ್ಯತ್ತಾಲೇ - ತನಗೇನೇ ಅಸಾಧಾರಣವಾದ ಪ್ರಭಾವವಾದ ಸಾಮರ್ಥ್ಯದ ಮೂಲಕ, ಪ್ರಾರಬ್ಧ ಕರ್ಮಫಲತ್ತೈಪತ್ತ - ಪ್ರಾರಬ್ಧಕರ್ಮಫಲವನ್ನು ಕುರಿತು, ಉಣ್ಡಾನ ಆರ್ತಿಯಿನೆಲ್ಲೈಕ್ಕೀಡಾನ - ಉಂಟಾದ ಆರ್ತಿಯ ಎಂದರೆ ಹೆಚ್ಚಾದ ದೈನ್ಯದ ತಾರತಮ್ಯಕ್ಕನುಗುಣವಾಗಿ, ಕ್ಷಣಾನ್ತರ ದಿವಸಾನ್ತರ ಜನ್ಮಾನ್ತರಾದ್ಯನುವೃತ್ತಿಯುಮ್ ಕೆಳಿಯಕ್ಕಡವದೆನ್ರು - ಒಂದು ಕ್ಷಣವಾಗಲಿ ದಿನವಾಗಲಿ ಜನ್ಮವಾಗಲಿ, ಈ ಅವಸ್ಥೆಯು ಕೂಡದೆಂದು ಎಷ್ಟುಮಟ್ಟಿಗೆ ಈ ಭರನ್ಯಾಸನಿಷ್ಠನು ಆರ್ತಿಯುಳ್ಳವನಾಗುತ್ತಾನೋ, ಅದಕ್ಕನುಗುಣವಾಗಿ, ಆ ಕ್ಷಣ, ದಿನ ಜನ್ಮಗಳಲ್ಲೇ, ಹೋಗಲಾಡಿಸಿ ದೇಹಾವಸಾನವನ್ನುಂಟು ಮಾಡಿ ಫಲವನ್ನು ಕೊಡುವದೆಂಬುದು, "ಮಾಶುಚಃ" ಎಂದಿರುವ ಚರಮಶ್ಲೋಕದಲ್ಲಿರುವ ವಾಕ್ಯಕ್ಕೆ, ಅಭಿಪ್ರಾಯಮ್ - ತಾತ್ಪರ್ಯವು, ಇದೀಗ ಸಿದ್ಧಾಭಿಪ್ರಾಯವು. ಇದನ್ನು ಹೀಗೆ ಅನುವಾದ ಮಾಡಿ, ಇದರ ಮೇಲೆ ಮುಂದೆ ಪೂರ್ವಪಕ್ಷವನ್ನು ಹೇಳುತ್ತಾರೆ. ಈ ವಾಕ್ಯದ ತಾತ್ಪರ್ಯ ವೇನೆಂದರೆ—ಪ್ರಪತ್ತಿಯು ಅತ್ಯದ್ಭುತ ಮಹಿಮೆಯುಳ್ಳದುದು ; ಆದುದರಿಂದ ಪ್ರಪನ್ನನು ಆರ್ತನಾಗಿ, ಅಗ್ನಿಪಂಜರದ ಮಧ್ಯದಲ್ಲಿ ಸಿಕ್ಕಿದ ಹಾಗೆ ಭಾವಿಸಿ, ನಮ್ಮಾಳ್ವಾರ್ರವರು ಆರ್ತಸ್ವರದಿಂದ ಪರಮಾತ್ಮ ಸಾಯುಜ್ಯವನ್ನು ಅಪೇಕ್ಷಿಸಲು ಹೇಗೆ ಹೊಂದಿದರೋ, ಹಾಗೆಯೇ ಇನ್ನೂ ಪ್ರಾರಬ್ಧವು ಅನುಭವಿಸತಕ್ಕದ್ದಿದ್ದರೂ, ಆರ್ತನು ಯಾವಾಗ ಅಪೇಕ್ಷಿಸುತ್ತಾನೋ ಆಗಲೇ ಎಂದರೆ, ಉತ್ತರಕ್ಷಣವೇ ನಿನ್ನ ವಿಶ್ಲೇಷೆಯನ್ನು ತಡೆಯಲಾರೆ ಎಂದರೆ ಆ ಕ್ಷಣದಲ್ಲೇ, ನಾಳೆ ದಿನದವರೆಗೆ ತಡೆಯಲಾರೆನೆಂದರೆ ಈ ದಿನವೇ, ಮುಂದಿನ ಜನ್ಮದವರೆಗೆ ತಡೆಯಲಾರೆ ಎಂದರೆ ಈ ಜನ್ಮಾಂತ್ಯದಲ್ಲೇ, ಹೀಗೆ ಲಕ್ಷ್ಮೀಯುಕ್ತನಾದ ಶ್ರೀ ವಾಸುದೇವನು ಪರಮಪದದಲ್ಲಿ ತನ್ನ ಸಾಯುಜ್ಯವನ್ನು ಕೊಡುವನು. ಹೀಗೆ ಆರ್ತದೆಶೆಯಲ್ಲಿ, ಪ್ರಾರಬ್ಧ ವಿಶೇಷ ವಿದ್ದರೂಕೂಡ ಅದನ್ನೂ ಕೂಡ ನಾಶಮಾಡಿ, ಪರಮಾತ್ಮ ಸಾಯುಜ್ಯವನ್ನು ಕೊಡುವ ಅತ್ಯದ್ಭುತಶಕ್ತಿಯು ಪ್ರಪತ್ತಿಗೆ ಉಂಟೆಂಬುದು ಸಿದ್ಧಾನ್ತವು. ಇದರ ಸಮರ್ಥನೆಗಾಗಿ ಎರಡು ಪ್ರಮಾಣಗಳನ್ನು ಉದಾಹರಿಸಿದರು. ವಿಹಗೇಂದ್ರ ಸಂಹಿತಾ ಪ್ರಮಾಣದಲ್ಲಿ ಅತಿ ಮಹತ್ತಾದ ಪುಣ್ಯಪಾಪಗಳಿಗೆ ಮೂರು ಘಂಟೆ ದಿನ ಸಂವತ್ಸರಗಳಲ್ಲೇ ಫಲ

ವನ್ನು ಕೊಡುವ ವಿಶೇಷ ಶಕ್ತಿಯುಂಟೆಂದುಹೇಳಿರುವದರಿಂದ,ಪ್ರಪತ್ತಿಯೂ ಅಂತಹ ಅತ್ಯದ್ಭುತ ಸುಕೃತವಾದುದರಿಂದ, ಮಹಾ ವಿಶ್ವಾಸ ತಾರತಮ್ಯದಿಂದ ತುಂಬಾ ಆರ್ತನಾಗಿ, ಪ್ರಾರ್ಥಿಸಿದುದಾದರೆ ಈತನಿಗೆ ಪರಮಾತ್ಮ ಪ್ರಾಪ್ತಿಯುಂಟೆಂದು ಆ ವಾಕ್ಯವು ಸೂಚಿಸುತ್ತದೆ. ಎರಡನೆಯ ಪ್ರಮಾಣವಾದರೋ ಕಂಠೋಕ್ತವಾಗಿ ಪ್ರಾರಬ್ಧಶೇಷವನ್ನೂ ಹೋಗಲಾಡಿಸುವ ಸಾಮರ್ಥ್ಯವು ಭಕ್ತಿಯೋಗಕ್ಕೆ ಇಲ್ಲದಿದ್ದರೂ, ಸಾಧ್ಯಭಕ್ತಿ ಎಂದು ಹೇಳಿಸಿಕೊಳ್ಳುವ ಭರನ್ಯಾಸಕ್ಕೆ ಸಾಹಂತ್ರೀ ಪ್ರಾರಬ್ಧಸ್ಯಾಪಿಭೂಯಸೀ ಎಂದು ಹೇಳಿರುವ ಹಾಗೆ ಪ್ರಾರಬ್ಧವನ್ನೂ ನಾಶಪಡಿಸುವ ಶಕ್ತಿಯುಂಟೆಂದು ಹೇಳಲ್ಪಟ್ಟಿತು. ಇದಕ್ಕೆ ನಿದರ್ಶನವಾಗಿ ಶ್ರೀಭರತಾಳ್ವಾರ್ರವರು ತಿರುವಯೋಧ್ಯೆಯಲ್ಲಿ ರಾಮಸಾಯುಜ್ಯಾಕಾಂಕ್ಷೆಯಿಂದ ಶರಣಾಗತಿಯನ್ನು ಮಾಡಿದರು. ಇದು ಆರ್ತ ಶರಣಾಗತಿಯು; ಆದರೆ ಆ ಶರಣಾಗತಿಯು ಸ್ವಾಮಿಸಂಕಲ್ಪರೂಪವಾದ ಪಿತೃವಾಕ್ಯಪರಿಪಾಲನರೂಪವಾದ ಉಪಾಧಿಯು ಪ್ರತಿಬಂಧಕವಾಗಿದ್ದುದರಿಂದ ೧೪ ವರ್ಷ ಕಳೆದ ನಂತರ ಲಭಿಸಿತು. ಅದು ಕಳೆಯಿತೋ ಇಲ್ಲವೋ, ವಿಭೀಷಣನಿಂದ ಲಂಕೆಯಲ್ಲಿ ಒಂದು ದಿನವಾದರೂ ನಿಂತು ವಿಶ್ರಮಿಸಿಕೊಂಡು ಹೋಗಬೇಕೆಂದು ಶ್ರೀರಾಮಚಂದ್ರಪ್ರಭುವು ಬಹುವಾಗಿ ಪ್ರಾರ್ಥಿತನಾದರೂ, ನಿಲ್ಲಲು ಸಮ್ಮತಿಸದೆ, ಉತ್ತರವನ್ನು ಹೇಳುತ್ತಾರೇನೆಂದರೆ,— "ಮಾಂ ನಿವರ್ತಯಿತುಂ ಯೋಸೌ ಚಿತ್ರಕೂಟ ಮುಪಾಗತಃ । ಶಿರಸಾ ಯಾಚತಸ್ತಸ್ಯ ವಚನಂನ ಕೃತಂ ಮಯಾ" ನನ್ನನ್ನು ಹಿಂತಿರುಗಿಸಿ ಕರೆದುಕೊಂಡು ಹೋಗಬೇಕೆಂದು ತಲೆಬಾಗಿ ಆರ್ತನಾಗಿ ಬೇಡಿದವನ ಮಾತನ್ನು ನಡೆಸಿಕೊಡಲಿಲ್ಲವೇ,ಎಂದು ಪರಿತಪಿಸುತ್ತಾ ಹೇಳುತ್ತಾರೇನೆಂದರೆ—ಅದುದರಿಂದ "ತಂತುಮೇ ಭ್ರಾತರಂ ದ್ರಷ್ಟುಂ ಭರತಂ ತ್ವರತೇ ಮನಃ"(ಯುದ್ಧ ೧೨೫.೧೮.೧೯)ನನ್ನತಮ್ಮನಾದ ಭರತನನ್ನು ಬೇಗ ಹೋಗಿ ನೋಡಬೇಕೆಂದು ಮನಸ್ಸು ತ್ವರೆಗೊಳಿಸುತ್ತದೆ ಎಂದು ಹೇಳಿ ಹೋಗಿ, "ಅಂಕೇ ಭರತ ಮಾರೋಪ್ಯ ಮುದಿತಃ ಪರಿಷಸ್ವಜೇ" (ರಾ. ಯುದ್ಧ. ೧೩೦-೩೯) ಭರತನನ್ನು ತನ್ನ ತೊಡೆಯಮೇಲೆ ಕೂಡಿಸಿಕೊಂಡು ಬಹು ಸಂತೋಷದಿಂದ ಆಲಿಂಗಿಸಿದನು ಎಂದು ಹೇಳಲ್ಪಟ್ಟಿರುವಹಾಗೆ, ಆರ್ತನಾಗಿ ಶರಣಾಗತಿಯನ್ನು ಮಾಡಿದವನು ಪ್ರಾರಬ್ಧಶೇಷನಿವೃತ್ತಿಮೂಲಕವಾಗಿ ಶ್ರೀ ಭರತರು ರಾಮಸಾಯುಜ್ಯವನ್ನು ಪಡೆದ ಹಾಗೆ, ಶ್ರೀ ಲಕ್ಷ್ಮೀಪತಿಯ ಸಾಯುಜ್ಯವನ್ನು ಹೊಂದುವರು ಎಂಬುದು ಚರಿತಾರ್ಥವು. ಈ ಮಹತ್ತಾದಭಿಪ್ರಾಯವು,ಮಾಶುಚಃ ಎಂಬ ಅಮೋಘವಾಕ್ಯದಲ್ಲಿ ಅಂತರ್ಗತವೆಂದು ಹೇಳಲ್ಪಟ್ಟಿತು. ಆದರೆ ಹಿಂದೆ ಅಪರಾಧಪರಿಹಾರಾಧಿಕಾರದ ಅಂತ್ಯದಲ್ಲಿ "ಪ್ರಾರಬ್ಧೇತರ ಪೂರ್ವಪಾಪ ಮಖಿಲಂ" ಎಂಬಲ್ಲಿ ಪ್ರಾರಬ್ಧಮಾತ್ರವಲ್ಲದೆ ಇತರ ಎಲ್ಲಾ ಪೂರ್ವಪಾಪಗಳೂ

## ಪೂರ್ವಪಕ್ಷಾನುವಾದಃ

**ಇನ್ವರ್ಥಂ ತತ್ವನಾಗಿಲ್ ಪ್ರಾರಬ್ಧಕರ್ಮ ವಿಶೇಷ ಫಲನಾಯ್ ಕೊಣ್ಡು ವರುಗಿರದುಃಖಙ್ಗಳುಮ್, ದುಃಖ ಕಾರಣಙ್ಗಳಾನ ಕರ್ಮಙ್ಗಳಿನುಡೈಯ ಆರ್ಜನಮುಮ್, ಕಳಿಯವೇಣ್ಡಾವೋ? ಆರ್ತನಾಯ್ ಪುರುಷರ್**

---

ಈ ಪ್ರಪತ್ತಿಯಿಂದ ನಾಶವಾಗುತ್ತದೆಂದು ಹೇಳಿರುವುದು ಈಗ ಇಲ್ಲಿ ಉಪಪಾದಿಸಿದ ಅಭಿಪ್ರಾಯಕ್ಕೆ ವಿರುದ್ಧವಲ್ಲವೋ? ಎಂಬ ಆಕ್ಷೇಪ ತಂದರೆ, ಅದು ಸಾಮಾನ್ಯವಾದ ಪ್ರಾರಬ್ಧಕರ್ಮನಾಶವನ್ನು ಪ್ರಾರ್ಥಿಸದ ದೃಪ್ತಾಧಿಕಾರಿಯನ್ನು ಕುರಿತು ಹೇಳದ ವಚನವು; ಆತನೇ ಪ್ರಪದನಾನುಷ್ಠಾನಕಾಲದಲ್ಲಿ ಪ್ರಾರಬ್ಧವೂ ಕಳೆಯಬೇಕೆಂದು ಶರಣಾಗತಿಮಾಡಿದ್ದರೆ ಅದೂ ಕಳೆದುಹೋಗುತ್ತಿತ್ತು. ಇದು, ಅಂತಹ ಭರನ್ಯಾಸವನ್ನು ಕುರಿತು ಹೇಳಿದುದೆಂದಾಗಲಿ ಅಥವಾ ಆರ್ತನ ಭರನ್ಯಾಸವೆಂದಾಗಲಿ,ಭಾವಿಸುವದರಿಂದ ಪರಸ್ಪರವಿರೋಧವೇನೂ ಇಲ್ಲವೆಂದುಭಾವಿಸತಕ್ಕದ್ದು.

ಇದೀಗ ತತ್ವವು ಇವರ ಮೇಲೆ ಪೂರ್ವಪಕ್ಷಗಳನ್ನು "ಇನ್ವರ್ಥಂ ತತ್ವನಾಗಿಲ್" ಎಂದಾರಂಭಿಸಿ, ವರೈಯಿಟ್ಟುಪಾರ್ ಪರ್‌ಗಳ್ ಎಂದು ಮುಗಿಸಿರುವ ವಾಕ್ಯಗಳ ಮೂಲಕ ಅನುವಾದಮಾಡಿ ಹೇಳುತ್ತಾರೆ.

### ಪೂರ್ವಪಕ್ಷದ ಅನುವಾದವು.

**ಇನ್ವರ್ಥಮ್** - ಈಗ ಉಪಪಾದಿಸಿದ ಅಭಿಪ್ರಾಯವು, **ತತ್ವನಾಗಿಲ್** - ಯಥಾರ್ಥವಾದುದಾದರೆ, **ಪ್ರಾರಬ್ಧ ಕರ್ಮವಿಶೇಷ ಫಲನಾಯ್ ಕೊಂಡು ವರುಗಿರ ದುಃಖಙ್ಗಳುಮ್** - ಪ್ರಾರಬ್ಧಕರ್ಮವಿಶೇಷದ ಫಲವಾಗಿ ಪ್ರಾಪ್ತವಾಗುವ ದುಃಖಗಳೂ, **ದುಃಖಕಾರಣಙ್ಗಳಾನ ಕರ್ಮಙ್ಗಳಿನುಡೈಯ ಆರ್ಜನಮುಮ್** - ಅಂತಹ ದುಃಖಗಳಿಗೆ ಕಾರಣಗಳಾದ ಕರ್ಮಗಳ ಸಂಪಾದನೆಯೂ ಎಂದರೆ ಪ್ರಾಪ್ತಿಯೂ, **ಕಳಿಯ ವೇಣ್ಡಾವೋ** - ಕಳೆದುಹೋಗಬೇಡವೋ? ಇದೀಗ ಆಕ್ಷೇಪವು. ಹಾಗೆ ಪ್ರಪತ್ತಿಗೆ ಪ್ರಾರಬ್ಧಕರ್ಮವನ್ನೂ ಕೂಡ ಹೋಗಲಾಡಿಸುವ ಶಕ್ತಿಯಿದ್ದುದಾದರೆ ಪ್ರಪನ್ನನಿಗೆ ದುಃಖಗಳು ಪ್ರಾಪ್ತವಾಗಕೂಡದು; ಅಂತಹ ದುಃಖಗಳನ್ನುಂಟುಮಾಡುವ ಕರ್ಮಗಳ ಸಂಘಟನೆಯೂ ಕೂಡದು. ಹಾಗೆ ಲೋಕದಲ್ಲಿ ನೋಡಿಲ್ಲವಲ್ಲಾ? ಪ್ರಪನ್ನನಿಗೆ ದುಃಖಪ್ರಾಪ್ತಿಯನ್ನೂ ಅಂತಹ ದುಃಖವನ್ನೀಯುವ ಕರ್ಮಸಂಘಟನೆಯನ್ನೂ ಕಂಡಿರುವೆವಷ್ಟೇ ಎಂಬುದು ಆಕ್ಷೇಪವು. ಇದಕ್ಕೆ ನಿದರ್ಶನವಾಗಿ ಕೂರತ್ತಾಳ್ವಾರ್,ಪೆರಿಯನಂಬಿ, ಶ್ರೀ ಭಾಷ್ಯಕಾರರ್, ಶ್ರೀನಿಗಮಾಂತದೇಶಿಕರ್ ಮೊದಲಾಗಿ ಇನ್ನೂ ಅನೇಕರನ್ನೂ ಪೂರ್ವಪಕ್ಷಿಯು

**ಅರ್ಥಿಕ್ಕ ಕ್ಕೊಡುಕ್ಕ ವೇಣು ಮೆನ್ನಿಲ್, ಅನುಷಙ್ಗಿಕಮಾನ ಪಞ್ಚಪಾವನತ್ವಾದಿಗಳೈಪ್ಪೋಲೇ, ಅನಭಿಸಂಹಿತಙ್ಗಳೈಯುಮ್ ಕೊಡ ಹಿತೈಷಿಯಾನ ಈಶ್ವರ್ ತಾನೇ ಕೊಡುಕ್ಕತ್ತಟ್ಟೇ? ಇಪ್ಪಡಿ ಶೆಯ್ಯಕ್ಕಾಣಾಮೈಯಾಲ್,**

ಹೇಳಬಹುದು. ಕೂರತ್ತಾಳ್ವಾರರ ನಿದರ್ಶನವನ್ನು ಶ್ರೀನಿಗಮಾಂತ ಮಹಾದೇಶಿಕರೇ ಮುಂದೆ ಹೇಳುತ್ತಾರೆ. ಹಾಗೆಯೇ ಇತಿಹಾಸಗಳಲ್ಲಿ ವಸಿಷ್ಠರಿಗೆ ಪುತ್ರವಿಯೋಗ ದುಃಖವೂ, ವಿಶ್ವಾಮಿತ್ರರಿಗೆ ವಸಿಷ್ಠರ ಕಾಮಧೇನು ಹರಣಮೂಲಕ ದುಃಖವೂ, ನಾರದ ದೂರ್ವಾಸರಿಗೆ ಮಹಾಭಾಗವತಾಪಚಾರಮೂಲಕ ದುಃಖವೂ, ಇವರೇ ಮೊದಲಾದ ಪ್ರಪನ್ನರಾದ ಋಷಿಗಳಿಗೂ ಪ್ರಾರಬ್ಧಕರ್ಮಫಲವಾದ ದುಃಖವು ತಪ್ಪಲಿಲ್ಲವು. ಕೂರತ್ತಾಳ್ವಾರ್ ಪೆರಿಯನಂಬಿ ಇವರುಗಳಿಗೆ ಕ್ರಿಮಿಕಂಠ ಚೋಳನ ಮೂಲಕ ಕಣ್ಣುಗಳನ್ನು ಕಳೆದುಕೊಂಡ ದುಃಖವು. ಶ್ರೀ ಭಾಷ್ಯಕಾರರಿಗೂ ಆತನಮೂಲಕವಾಗಿಯೇ ಶ್ರೀರಂಗವನ್ನು ಬಿಟ್ಟು ವಿದೇಶದಲ್ಲಿ ವಾಸಮಾಡಿದ ಕ್ಲೇಶವು. ಶ್ರೀನಿಗಮಾಂತಮಹಾದೇಶಿಕರವರಿಗೆ ತುರುಷ್ಕ ಯವನರ ಮೂಲಕ ತೊಂದರೆಯು. ಹಾಗೆಯೇ ಇನ್ನೂ ಅನೇಕರಿಂದ ಪುನಃ ಪುನಃ ಕ್ಲೇಶವು. ಪಾಂಡವರಿಗೂ ಪದೇಪದೇ ಬಹುಕ್ಲೇಶಗಳು. ಈ ಆಕ್ಷೇಪಕ್ಕೆ ಸಮಾಧಾನರೂಪದಲ್ಲಿ, ಅಂತಹ ಪ್ರಪನ್ನರು ಪ್ರಾರಬ್ಧನಾಶಮೂಲಕ ಮುಕ್ತಿ ಬೇಕೆಂದು ಪ್ರಾರ್ಥಿಸಲಿಲ್ಲವಾದುದರಿಂದ ಪ್ರಾರಬ್ಧವು ಕಳೆಯಲಿಲ್ಲವು, ತನ್ಮೂಲಕ ದುಃಖಾನುಭವವೂ, ದುಃಖಪ್ರಾಪ್ತಿಗೆ ಸಹಕಾರಿಯಾದ ಕರ್ಮಸಂಘಟನೆಯೂ ಪ್ರಾಪ್ತವಾಯಿತು ಎಂದು ಸಿದ್ಧಾಂತಿಯು ಸಮಾಧಾನವನ್ನು ಹೇಳಬಹುದೆಂದು ಆಲೋಚಿಸಿ, ಅಂತಹ ಸಮಾಧಾನವನ್ನು ಹೇಳಿದರೂ ಆಕ್ಷೇಪವು ನಿವರ್ತಿಸಲಿಲ್ಲವೆಂದು ಪೂರ್ವಪಕ್ಷವೇ ಅನುವದಿಸಲ್ಪಡುತ್ತದೆ,—ಹೇಗೆಂದರೆ? **ಆರ್ತನಾಯ್ ಪುರುಷರ್ ಅರ್ಥಿಕ್ಕ**-ಈ ಪ್ರಪನ್ನನಾದ ಪುರುಷನು ಆರ್ತನಾಗಿ ಈ ಪೃಥ್ವಿಯಲ್ಲಿದ್ದು ಕೊಂಡು ಪ್ರಾರಬ್ಧ ಕರ್ಮ ಫಲಗಳಾದ ದುಃಖಗಳನ್ನನುಭವಿಸಿಕೊಂಡು ಸಹ್ವಾತ್ಮನಾ ಇರಲಾರನೆಂದು ಪ್ರಾರ್ಥಿಸಿದ್ದಾದರೆ, **ಕೊಡುಕ್ಕವೇಣುಮೆನ್ನಿಲ್**. ಪರಮಾತ್ಮನು ಅಂತಹ ಪ್ರಾರಬ್ಧಕರ್ಮಫಲ ನಿವೃತ್ತಿಯನ್ನು ಕೊಡತಕ್ಕದ್ದು ಎಂದು ಸಮಾಧಾನವನ್ನು ತಂದರೆ, ಆಗಲೂ ಆಕ್ಷೇಪವು ತಪ್ಪಲಿಲ್ಲವೆಂದು ಪೂರ್ವಪಕ್ಷಿಯು ಹೇಳುತ್ತಾರೆ.—**ಆನುಷಙ್ಗಿಕಮಾನ ಪಞ್ಚಪಾವನತ್ವಾದಿಗಳೈಪ್ಪೋಲೇ**-ಆ ಪ್ರಪತ್ತಿಗೆ ಸಂಬಂಧಿಸಿದ ಅನಂತರ ಫಲವಾಗಿ, ಸಂಬಂಧಮೂಲಕ ಉಂಟಾದ ಮಹಾರ್ಗಗಳಪಙ್ಕ್ತಿಯು,ಹೇಗೆಪಾವನತ್ವವನ್ನು ಅಪೇಕ್ಷಿಸದೇ ಇರುವಅಧಿಕಾರಿಯನ್ನೂ ಕೂಡ ಪವಿತ್ರೀಕರಿಸುತ್ತದೋ ಹಾಗೆ, **ಅನಭಿಸಂಹಿತಙ್ಗಳೈಯುಮ್ ಕೊಡ**-ಹಾಗೆ

ಶೋಕವಿಷಯಮಾನ ಅಂಶಮೆಲ್ಲಾಮ್ ನಿಶ್ಶೇಷಮಾಗ ಪ್ರಪತ್ತಿಯಾಲೇ ಕಳಿಯುಮೆನ್ರಿಡಮ್ ಪ್ರಪತ್ತಿ ಪ್ರಭಾವಾತಿಶಯತ್ತೈ ಪ್ಪತ್ತಿ ಸ್ತುತಿಪಣ್ಣಿನ ಪಡಿಯೆನ್ರು ಶಿಲರ್ ಇದೈ ಪ್ರಭಾವತ್ತೈ ನರೈಯಿಟ್ಟುಪ್ಪಾರ್ಪರ್ಗಳ್.

---

ಆರ್ತನಾಗಿ ಪ್ರಾರ್ಥಿಸದೇ ಇರುವವನನ್ನು ಕೂಡ, ಅದು ಯಾವುದೆಂದರೆ ಪ್ರಾರಬ್ಧಫಲ ನಿವೃತ್ತಿಯನ್ನೂ ಕೂಡ, ಹಿತ್ತೈಷಿಯಾನ-ಜೀವಾತ್ಮನವಿಷಯದಲ್ಲಿ ತುಂಬಾ ದಯಾಳುವಾಗಿ ಹಿತವನ್ನೇ ಮಾಡಬೇಕೆಂದಿರುವ, ಈಶ್ವರರ್-ಸರ್ವೇಶ್ವರನು ತಾನೇ, ಕೊಡುಕ್ಕತಟ್ಟೇೞ್-ಪ್ರಾರಬ್ಧ ನಾಶವನ್ನು ಕೊಡುವುದಕ್ಕೆ ಪ್ರತಿಬಂಧಕವೇನಿದೆ? ಆರ್ತನಾಗಿ ಅಧಿಕಾರಿಯು ಪ್ರಾರ್ಥನೆ ಇಲ್ಲವಾದರೂ ಮಹಾನುಭಾವರ ಪಜ್ಞ್ತಿಲಾಭವು ಹೇಗೆ ಆತನನ್ನು ಪವಿತ್ರೀಕರಿಸುತ್ತದೋ, ಆ ರೀತಿಯಲ್ಲಿ ಈತನು ಪ್ರಾರ್ಥಿಸದಿದ್ದರೂ, ಜೀವಾತ್ಮನಿಗೆ ಹಿತವನ್ನೇ ಮಾಡಬೇಕೆಂದಿರುವ ಸರ್ವೇಶ್ವರನು, ಈ ಪ್ರಪನ್ನನು ಆರ್ತನಾಗಿ ಪ್ರಾರ್ಥಿಸದಿದ್ದರೂ, ತಾನೇ ಕರುಣಿಸಿ ಪ್ರಾರಬ್ಧಕರ್ಮಶೇಷದಿಂದುಂಟಾಗುವ ದುಃಖಗಳನ್ನು ತಪ್ಪಿಸಲು ಅಭ್ಯಂತರವೇನು? ಎಂದು ಪೂರ್ವ ಪಕ್ಷಿಯ ಅಭಿಪ್ರಾಯವು. ಅಗ್ನಿಯ ಧರ್ಮವು ಸುಡುವಂತಾದ್ದು, ನೀರಿನ ಧರ್ಮವು ತೋಯಿಸುವಂತಾದ್ದು. ಕಾಗದಗಳನ್ನು ಸುಡಬೇಕೆಂದೂ, ಬಟ್ಟೆಯನ್ನು ತೋಯಿಸಬೇಕೆಂದೂ ಇರುವ ಅಧಿಕಾರಿಯು ಅಗ್ನಿಯಿಂದ ಕಾಗದವು ಸುಟ್ಟುಹೋಗಲಿ, ನೀರಿನಿಂದ ಬಟ್ಟೆಯು ಒದ್ದೆಯಾಗಲಿ ಎಂದು ಪ್ರಾರ್ಥಿಸಬೇಕೆ? ಪ್ರಾರ್ಥಿಸದೇನೇ ಅಗ್ನಿಯು ಸುಡುತ್ತವೆ, ನೀರು ತೊಯಿಸುತ್ತವೆ; ಹಾಗೆಯೇ ದಯಾಳುವಾಗಿ ರಕ್ಷಿಸಬೇಕೆಂದು ಕಾದಿರುವ ಸರ್ವೇಶ್ವರನನ್ನು ಆಶ್ರಯಿಸಿದ ನಂತರ, ತನ್ನ ಕರ್ತವ್ಯವನ್ನು ಈಶ್ವರನು ನಡೆಸಬೇಕಲ್ಲವೇ! ಆತನನ್ನು ಕುರಿತು ಪ್ರಾರ್ಥಿಸಬೇಕೇ? ಎಂದು ಆ ಸಮಾಧಾನದ ಮೇಲಿನ ಆಕ್ಷೇಪವು.

ಮುಂದಿನ ವಾಕ್ಯದಿಂದ ಪೂರ್ವಪಕ್ಷಿಗಳು ತಮ್ಮ ಆಕ್ಷೇಪವನ್ನು ವ್ಯಕ್ತಪಡಿಸಿ, ಪ್ರಪತ್ತಿಗೆ ಹೀಗೆ ಪ್ರಾರಬ್ಧ ನಿವೃತ್ತಿರೂಪ ಮಾಹಾತ್ಮ್ಯೆಯನ್ನು ಸಿದ್ಧಾಂತಿಗಳು ಹೇಳುವದು, ಲೋಕವಿರುದ್ಧವಾದ ವಿಷಯವಾದುದರಿಂದ ಪ್ರಪತ್ತಿ ಮಾಹಾತ್ಮ್ಯೆಯ ಸ್ತುತಿರೂಪವಾದುದೇ ವಿನಾ, ಯಥಾರ್ಥವಾದ ಅದರ ಪ್ರಭಾವವಿಷಯವಾದುದಲ್ಲವೆಂದು ನಿಗಮನಮಾಡಿ ಹೇಳುತ್ತಾರೆ. ಇಪ್ಪಡಿ ಶೆಯ್ಯಕ್ಕಾಣಾಮೈಯಾಲೇ - ಹೀಗೆ ಈಶ್ವರನು ನಡೆಸಿಕೊಡುವದನ್ನು ಕಂಡಿಲ್ಲವಾದುದರಿಂದ, ಶೋಕವಿಷಯಮಾನ ಅಂಶಮೆಲ್ಲಾಮ್ - ಶೋಕಕ್ಕೆ ಕಾರಣಭೂತವಾದ ಪ್ರಾರಬ್ಧಾಂಶವೆಲ್ಲಾ, ನಿಶ್ಶೇಷವಾಗಿ, ಪ್ರಪತ್ತಿಯಾಲೆ ಕಳಿಯುಮೆನ್ರಿಡಮ್ - ಪ್ರಪತ್ತಿಮೂಲಕ ನಿವೃತ್ತಿ ಹೊಂದುವದು ಎಂಬ ವಿಷಯವು, ಪ್ರಪತ್ತಿಯ ಪ್ರಭಾ

## ಶಙ್ಕಾ ಪರಿಹಾರಃ

**ಇದುಕ್ಕುತ್ತರಮ್—ಅನುಗ್ರಹಶೀಲನಾಯ್ ಆಶ್ರಯಿಪ್ಪಾರ್‌ಕ್ಕು ಪ್ರಪತ್ತಿ ವಾಕ್ಯೋಚ್ಚಾರಣ ಪ್ರಾರಂಭತ್ತಿಲೇ ಕಡುಗ ಮೋಕ್ಷಮ್ ಕೊಡುಕ್ಕ**

---

ವಾತಿಶಯವನ್ನು, **ಪಣ್ಣಿ** - ಕುರಿತ, **ಸ್ತುತಿಪಣ್ಣಿನಪಡಿ ಯೆನ್ರು** - ಸ್ತೋತ್ರ ಮಾಡಿದಹಾಗೆ ಎಂದು, **ಶಿಲರ್** - ಕೆಲವರು, **ಪ್ರಭಾವತ್ತೈ** - ಈ ಪ್ರಪತ್ತಿಯ ಪ್ರಭಾವವನ್ನು, **ವರೈಯಿಟ್ಟುಪ್ಪಾರ್ ಪರ್‌ಗಳ್** - ಸಙ್ಕೋಚಿಸಿ ಕಾಣುವರು ಎಂದರೆ ಅದರ ಮಾಹಾತ್ಮ್ಯೆಯನ್ನು ತಗ್ಗಿಸಿ ಹೇಳುವರು ಎಂಬ ಭಾವವು ಪ್ರಪತ್ತಿಗೆ ಹೀಗೆ ಅದ್ಭುತ ಶಕ್ತಿ ಇದ್ದುದಾದರೆ, ಪ್ರಪನ್ನನು ಪ್ರಾರಬ್ಧ ಕರ್ಮಕ್ಕೆ ವಶನಾಗಿ ದುಃಖದಿಂದ ನರಳಕೊಡದು. ಆದರೆ ಪ್ರಪನ್ನರೂ ಕೂಡ ಪ್ರಾರಬ್ಧ ಕರ್ಮ ಫಲದಿಂದ ಪೀಡಿತರಾಗಿ ಕ್ಲೇಶಗಳನ್ನು ಅನುಭವಿಸಿರುವದನ್ನು ಕಂಡಿರುವೆವು. ಅದುದರಿಂದ ಪ್ರಪತ್ತಿಯಿಂದ ಪ್ರಾರಬ್ಧಾಂಶವೂ ಕೂಡ ಕಳೆಯುತ್ತದೆಂಬ ಹೇಳಿಕೆಯು, ಪ್ರಪತ್ತಿಪ್ರಭಾವ ಸ್ತುತಿಗಾಗಿ ಹೇಳಿದ ಅತಿಶಯೋಕ್ತಿಯೇ ವಿನಾ, ಯಥಾರ್ಥವಿಷಯವಲ್ಲವೆಂಬುದು ಪೂರ್ವಪಕ್ಷಿಯ ಆಕ್ಷೇಪವು. ಈ ಪೂರ್ವಪಕ್ಷಕ್ಕೆ "ಇದುಕ್ಕುತ್ತರಮ್" ಎಂದಾರಂಭಿಸಿ, "ಅನುಸಂಧಿಕ್ಕೈಯುಚಿತಮ್" ಎಂದು ಮುಗಿಸಿರುವ ವಾಕ್ಯಗಳ ಮೂಲಕ ಸಮಾಧಾನವನ್ನು ಹೇಳುತ್ತಾರೆ. ಪೂರ್ವಪಕ್ಷಿಯು ಹೇಳಿದ ಲೋಕಾನುಭವ ರೀತ್ಯಾ ಪ್ರಪನ್ನನು ಕ್ಲೇಶಗಳನ್ನನುಭವಿಸಿರುವದೇನೋ ಸತ್ಯವೇ, ಆದರೆ ಪರಮಕಾರಣಿಕನಾದ ಶ್ರಿಯಃಪತಿಯು ಅಂತಹ ಸಂದರ್ಭದಲ್ಲಿನ ಆಶಯವೇನೆಂಬುದನ್ನು ತಿಳಿಸಿ, ಆರ್ತನಾಗಿ ಪ್ರಾರ್ಥಿಸಿದರೆ ಪ್ರಾರಬ್ಧನಾಶಮಾಡುವ ಮಾಹಾತ್ಮ್ಯೆಯು ಪ್ರಪತ್ತಿಗೆ ಉಂಟೆಂದು ಸ್ಥಾಪಿಸುತ್ತಾರೆ.

### ಶಙ್ಕಾ ಪರಿಹಾರವು.

---

**ಇದುಕ್ಕು** - ಈ ಮೇಲಿನ ಆಕ್ಷೇಪಕ್ಕೆ, **ಉತ್ತರಮ್** - ಸಮಾಧಾನರೂಪದಲ್ಲಿ ಉತ್ತರವೇನೆಂದರೆ ಹೇಳುವೆವು.—**ಅನುಗ್ರಹಶೀಲನಾಯ್** - ಅನುಗ್ರಹ ಮಾಡುವದೇ ಅಸಾಧಾರಣ ಸ್ವಭಾವವಾಗಿರುವ, **ಪ್ರಪತ್ತಿ ವಾಕ್ಯೋಚ್ಚಾರಣ ಪ್ರಾರಂಭತ್ತಿಲೇ** - ಸ್ವತಂತ್ರನಿಷ್ಠೆ ಅಥವಾ ಉಕ್ತಿನಿಷ್ಠೆಯ ಮೂಲಕವಾಗಿ, ಪ್ರಪದನ ಮನ್ತ್ರೋಚ್ಚಾರಣೆಯ ಪ್ರಾರಂಭದಲ್ಲೇ ಎಂದರೆ ವಾಕ್ಯವನ್ನು ಪೂರ್ಣಮಾಡುವದಕ್ಕೆ ಮುಂಚೆಯೇ, **ಕಡುಗ** - ಶೀಘ್ರದಲ್ಲೇ, **ಮೋಕ್ಷಮ್ ಕೊಡುಕ್ಕ ತ್ವರಿಕ್ಕುರ** - ಮೋಕ್ಷವನ್ನು ಕೊಡುವದಕ್ಕಾಗಿ ತ್ವರೆಗೊಳಿಸುವ, **ಈಶ್ವರರ್** - "**ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ।**

**ಸ್ವರಿಕ್ಕರ ಈಶ್ವರರ್, ಇವನುಡೈಯ ನಕ್ಕೈಯಾಲೇ ಶಿರಿದು ಕಾಲ ಇಙ್ಗೇ ವೈಕ್ಕ ವಿಶೈನ್ದ ವಳವಿಲೇ ಇನ್ದಿಡತ್ತಿಲುಳ್ಳ ಶಿತ್ತಿನ್ಬಙ್ಗಳೈ ದುಃಖಪ್ರಸಂಗ ರಹಿತವಾಗ ಅನುಭವಿಕ್ಕ ವಾಗಿಲಿವನುಕ್ಕಿನ್ನಶೈ ಯೊರುಕಾಲುಮ್ ಮಾಳಾದು.**

---

ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ" ಎಂದು ತನ ದೃಢಸಙ್ಕಲ್ಪವನ್ನು ಹೇಳಿಕೊಂಡ ಸರ್ವೇಶ್ವರನು, ಇವನುಡೈಯ – ಈ ಆಶ್ರಯಿಸಿದ ಪ್ರಪನ್ನನ, ನಕ್ಕೈಯಾಲೇ - ಇಚ್ಛೆಯಿಂದ, ಶಿರಿದುಕಾಲಂ - ಸ್ವಲ್ಪಕಾಲ, ಇಙ್ಗೇ - ಈ ಲೋಕದಲ್ಲೇ, ಇಶೈನ್ದವಳವಲೇ – ಅಪೇಕ್ಷಿಸಿದ ಪ್ರಕಾರ, ಇನ್ದಿಡತ್ತಿಲುಳ್ಳ – ಈ ಲೋಕದಲ್ಲೇ ಉಂಟಾಗುವ, ಶಿತ್ತಿನ್ಬಗಳೈ - ವಿಷಯಾನುಭವ ರೂಪವಾದ ಅಲ್ಪಸಾರಗಳಾದ ಸುಖಗಳನ್ನು, ದುಃಖಪ್ರಸಙ್ಗ ರಹಿತವಾಗ – ಸ್ವಲ್ಪವೂ ದುಃಖಸಂಬಂಧವೇ ಇಲ್ಲದ ಹಾಗೆ, ಅನುಭವಿಕ್ಕವಾಕ್ಕಿಲ್ - ಅನುಭವ ಉಂಟಾಗುವ ಹಾಗೆ ಮಾಡಿದರೆ, ಇವನುಕ್ಕು - ಈ ದೃಪ್ತಪ್ರಪನ್ನನಿಗೆ ಇನ್ನಶೈ - ಈ ವಿಷಯಾನುಭವಗಳಲ್ಲಿ ಅಭಿಲಾಷೆಯು, ಒರುಕಾಲುಮ್ - ಒಂದು ಕಾಲದಲ್ಲೂ, ಮಾಳಾದು – ನಿವರ್ತಿಸುವದೇ ಇಲ್ಲವು ; ಸರ್ವೇಶ್ವರನು ಆಶ್ರಿತನ ವಿಷಯದಲ್ಲಿ ತುಂಬ ಅನುಗ್ರಹಶೀಲನು ; ಆವನಲ್ಲಿ ಯಾವ ದೋಷಗಳುಂಟೆಂದು ಹಿಂದು ಮುಂದು ನೋಡದೆ, "ಯದಿವಾ ರಾವಣಸ್ಸ್ವಯಂ" ಎಂದು ಮಹಾಪರಾಧಿಯಾದ ರಾವಣನೇ ಏಕೆ ಶರಣಾಗತನಾಗಕೂಡದು, ಅಂತವನನ್ನು ರಕ್ಷಿಸಿಬಿಡುವನೆಂದು ಹೇಳಿದ ಮಹಾಕೃಪಾಸಿಧಿಯು ; ಇವನು ಮಹಾವಿಶ್ವಾಸಯುಕ್ತನಾಗಿ ಆರ್ತನಾಗಿ ಇಲ್ಲಿ ಒಂದು ಕ್ಷಣ ಕೂಡ ಇರಲಾರನೆಂದರೆ, ಒಡನೇ ದೇಹಾವಸಾನ ಮೂಲಕ ಮುಕ್ತಿ ಕೊಡಲು ಕಂಕಣಬದ್ಧನಾಗಿರುವವನು. ಇವನ ಮನೋವ್ಯಾಪಾರವನ್ನು ಸರ್ವಜ್ಞನಾದ ಪ್ರಭು ತ್ತ ತಿಳಿಯುವನಾಗುವದರಿಂದ, ಅಂತಹ ಆರ್ತಿಯು ಈ ಪ್ರಪನ್ನನಲ್ಲಿ ಇದ್ದುದಾದರೆ, ಪ್ರಪದನ ಮಂತ್ರವು ಪೂರೈಸುವುದಕ್ಕೆ ಮೊದಲೇ ಮೋಕ್ಷವನ್ನು ಕೊಡುವಂತವನು. ಆದರೆ ಆತನು ದೃಪ್ತಪ್ರಪನ್ನನಾಗಿ ಕೆಲವು ಕಾಲ ಇನ್ನೂ ಇದ್ದು ಐಹಿಕ ಸುಖಗಳನ್ನು ಅನುಭವಿಸಿದ ನಂತರ ಮೋಕ್ಷವನ್ನು ಅಪೇಕ್ಷಿಸಿದುದಾದರೆ, ಹೀಗೆಯೇ ಐಹಿಕಸುಖಗಳಲ್ಲೇ ಹೆಚ್ಚು ಪ್ರೀತಿಯು ಜನಿಸಿ, ದೇಹಾವಸಾನವು ಇನ್ನು ವಿಳಂಬಿಸಲಿ ಎಂದೇ ಅಪೇಕ್ಷಿಸುವವನು. "ನ ಜಾತು ಕಾಮಃ ಕಾಮಾನಾ ಮುಪಭೋಗೇನ ಶಾಮ್ಯತಿ | ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾ ಭಿವರ್ಧತೇ -(ಭಾಗ ೯.೧೯.೧೪) ವಿಷಯೇಚ್ಛೆಯು ಉಪಭೋಗದಿಂದ ಎಂದಿಗೂ ಶಮನವಾಗುವದಿಲ್ಲವು, ಅಗ್ನಿಗೆ ಆಜ್ಯಾಹುತಿಯನ್ನು ಮಾಡಿದ ಹಾಗೆಲ್ಲಾ ಅದು ಹೇಗೆ ವೃದ್ಧಿಯನ್ನೇ ಹೊಂದುತ್ತದೋ, ಹಾಗೆಯೇ

**ಭಗವದನುಭವತ್ತಿಲ್ ಭೋಗ್ಯತಾಬುದ್ಧಿಯುಮ್ ಕೊಳನ್ದು ವಿಟ್ಟು ವಾರಾದು; ಅಗ್ಗೈಯಾಲ್ (೧) "ಯಸ್ಯಾನುಗ್ರಹ ಮಿಚ್ಛಾಮಿ ತಸ್ಯವಿತ್ತಂ ಹರಾಮ್ಯಹಮ್ । ಬಾಂಧವೈಶ್ಚ ವಿಯೋಗೇನ ಸದಾ ಭವತಿ ದುಃಖಿತಃ॥ತೇನ ದುಃಖೇನ ಸಂತಪ್ತೋ ಯದಿಮಾಂ ನಪರಿತ್ಯಜೇತ್ । ತಂ ಪ್ರಸಾದಂ ಕರಿಷ್ಯಾಮಿ ಯಸ್ಸುರೈರಪಿ ದುರ್ಲಭಃ" ಎನ್ಗಿರಪಡಿಗಳಿಲೇ ದುಃಖಾದಿಗಳುಕ್ಕು ಕಾರಣಮಾನ**

---

ವಿಷಯೇಚ್ಛೆಯು ಉಪಭೋಗದಿಂದ ವೃದ್ಧಿಯನ್ನೇ ಹೊಂದುತ್ತದೆ ಎಂದು ಹೇಳಿರುವ ಹಾಗೆ, ಈ ಪ್ರಪನ್ನನು ದುಃಖಗಳಿಲ್ಲದೆ ಐಹಿಕಸುಖಾನುಭವಗಳನ್ನು ಮಾಡುತ್ತಾ ಹೋದರೆ, ಇಲ್ಲಿಯೇ ಇರಬೇಕೆಂದು ಮನಸ್ಸಾಗುತ್ತಯೇ ವಿನಾ ದೇಹಾವಸಾನಕ್ಕೆ ಒಡಂಬಡುವುದಿಲ್ಲವು. ಪ್ರಪನ್ನನು ಮೃತ್ಯುವನ್ನು "ಪ್ರಿಯಮಿವಾತಿಥಿಂ". ಎಂದು ಹೇಳಿರುವ ಹಾಗೆ ಭಾವಿಸತಕ್ಕದ್ದು. ಆದುದರಿಂದ ಮುಂದಿನ ವಾಕ್ಯಗಳಿಂದ ಅಂತವನಿಗೆ ಭಗವದನುಭವದಲ್ಲಿ ಭೋಗ್ಯತಾ ಬುದ್ಧಿಯು ಹುಟ್ಟುವುದಿಲ್ಲವು ; ಅದಕ್ಕಾಗಿ ಆತನಿಗೆ ಪ್ರಾರಬ್ಧಮೂಲಕ ಕೆಲವು ಕ್ಲೇಶಗಳುಂಟಾದರೆ ಆಗ ಐಹಿಕದಲ್ಲಿ ಜಿಹಾಸೆಯು ಹುಟ್ಟಿ, ಭಗವಂತನಲ್ಲಿ ಮನಸ್ಸನ್ನಿಡುವನೆಂದು ಉಪದೇಶಿಸುತ್ತಾರೆ. **ಭಗವದನುಭವತ್ತಿಲ್** - ಭಗವಂತನನ್ನು ಧ್ಯಾನಿಸಿ ಆತನನ್ನು ಅನುಭವಿಸುವವರಲ್ಲಿ, (ಇಲ್ಲಿ ಉಪಾಸನೆಯು ಹೇಳಲ್ಪಡಲಿಲ್ಲವು) **ಭೋಗ್ಯತಾ ಬುದ್ಧಿಯುಮ್** - ತುಂಬಾ ಸ್ವಾರಸ್ಯವಾದ ವಿಷಯವೆಂಬ ಬುದ್ಧಿಯೂ, **ಕೊಳನ್ದು ವಿಟ್ಟುವಾರಾದು** ಅಭಿವೃದ್ಧಿಯನ್ನು ಹೊಂದಿಮದು ಆಗಲಾರದು. **ಅಗ್ಗೈಯಾಲ್** - ಆ ಕಾರಣದಿಂದ, ಎಂದರೆ ಐಹಿಕದಲ್ಲಿ ಜಿಹಾಸೆ ಹುಟ್ಟಿ ಭಗವದನುಭವದಲ್ಲಿ ಭೋಗ್ಯತಾಬುದ್ಧಿಯು ವೃದ್ಧಿಯನ್ನು ಹೊಂದುವುದಕ್ಕಾಗಿ, (೧) **"ಯಸ್ಯ** - ಯಾವನಿಗೆ, **ಅನುಗ್ರಹಂ** – ಶ್ರೇಯಸ್ಸನ್ನುಂಟುಮಾಡಬೇಕೆಂದು, **ಇಚ್ಛಾಮಿ** - ಅಪೇಕ್ಷಿಸುವನೋ, **ತಸ್ಯ** - ಅಂತವನ, **ವಿತ್ತಂ** - ಧನವನ್ನು, ಇನು ಆ ಅಧಿಕಾರಿಗೆ ವಿಶೇಷ ಪ್ರೀತಿ ಯಾವುವರಲ್ಲಿ ಉಂಟೋ ಅದಕ್ಕೆಲ್ಲಾ ಉಪಲಕ್ಷಣವು. ಕ್ಷೇತ್ರ, ಪುತ್ರ, ಪಶು ಮೊದಲಾದವುಗಳೆಲ್ಲಾ ಈ ವಿತ್ತಶಬ್ದದಿಂದ ಹೇಳಲ್ಪಟ್ಟಿತು, **ಹರಾಮಿ** - ಅಪಹರಿಸುವೆನು; ಹಾಗೆ ಅನುಗ್ರಹ ಮಾಡುವುದಕ್ಕಾಗಿ ಆತನಿಗೆ ತುಂಬಾ ಪ್ರಿಯವಾದುದನ್ನು ಅಪಹರಿಸಬಹುದೋ ಎಂದರೆ ಅದಕ್ಕೆ ಸರ್ವೇಶ್ವರನು ಸಮಾಧಾನವನ್ನು ಹೇಳುತ್ತಾರೆ. **ಬಾಂಧವೈಶ್ಚವಿಯೋಗೇನ** - ಪಿತಾ, ಪುತ್ರ, ಪತ್ನೀ ಮೊದಲಾದ ಬಂಧುಗಳ ವಿಯೋಗದಿಂದ ಇದರಿಂದ ಬಂಧು ವಿಯೋಗವೂ ವಿತ್ತಾಪಹರಣಕ್ಕೇ ಸಮಾನವೆಂಬುದು ಬೋಧಿತವು, ಆತನು, **ಸದಾಭವತಿ ದುಃಖಿತಃ**

---

(೧) ವರಾಹ ಪುರಾಣ.

**ಪ್ರಾರಬ್ಧ ಕರ್ಮವಿಶೇಷತ್ತೈಸನ್ನಿಹಿತಜ್ಞಳಾನ ಕಶಾದಿಗಳೈಪ್ಪೋಲೇ ತುಣೈಯಾಗ ಕ್ಕೊಂಡು ಪಿತ್ರಾದಿಗಳೈಪ್ಪೋಲೆ ಶಿಕ್ಷಕನಾನ ಈಶ್ವರ್ರ, (ಶಿಲ) ಕಠಿನ ಪ್ರಕೃತಿ ಗಳುಕ್ಕು ಪಣ್ಣುಗಿರ ವನುಗ್ರಹವಿಶೇಷ ಮಿದೆನ್ರು ಅನುಸಂಧಿಕ್ಕೈಯುಚಿತಮ್.**

---

ಯಾವಾಗಲೂ ದುಃಖವುಳ್ಳವನಾಗಿ ಆಗುವನು ; **ತೇನದುಃಖೇನ ಸಂತಪ್ತಃ** – ಆ ದುಃಖದಿಂದ ಬೆಂದವನಾಗಿ, **ಯದಿಮಾಂ ನಪರಿತ್ಯಜೇತ್** - ನನ್ನನ್ನು ದುಃಖ ನಿವೃತ್ತಿಗಾಗಿ ಬಿಡದೆ ಸ್ಮರಿಸಿ ಆಶ್ರಯಿಸಿದವನಾದರೆ, **ಯಸ್ಸುರೈರಪಿದುರ್ಲಭಃ** - ದೇವತೆಗಳಿಗೂ ಕೂಡ ದುರ್ಲಭವಾದ, **ತಂ ಪ್ರಸಾದಂ ಕರಿಷ್ಯಾಮಿ** - ಅಂತಹ ಪ್ರಸನ್ನತೆಯನ್ನು ಅನುಗ್ರಹಿಸುವೆನು. ದೇವತೆಗಳಿಗೂ ಕೂಡ ಇಲ್ಲದಭೋಗವೆಂದು ಹೇಳಿದುದರಿಂದ ಅಂತವನಿಗೆ ಮೋಕ್ಷಾನಂದವನ್ನೀಯುವೆನು ಎಂಬರ್ಥವು. ಆತನು ಹಿಂದೆ ಮಾಡಿರುವ ಸುಕೃತ ಪರಿಪಾಕವನ್ನು ಮನಸ್ಸಿನಲ್ಲಿಟ್ಟು, ಆತನು ನನ್ನನ್ನು ಸ್ಮರಿಸಲಿ ಆಶ್ರಯಿಸಲಿ ಎಂದು ಸ್ವಲ್ಪಸಂಕಟವನ್ನು ಅವನಿಗೆ ಉಂಟು ಮಾಡುವೆನು. '**ಸಂಕಟ ಬಂದರೆವೇಙ್ಕಟರಮಣ**' ವೆಂಬಗಾದೆಗೆ ಅನುಸಾರವಾಗಿ ಆತನು ನನ್ನನ್ನು ಆ ಆರ್ತಿ ನಿವಾರಣೆಗಾಗಿ ಪ್ರಥಮತಃ ಭಜಿಸುವನು. ಅನಂತರ ಐಹಿಕವು ಅಸ್ಥಿರವೆಂದು ತಿಳಿದು, ಅದರಲ್ಲಿ ಜಿಹಾಸೆಯು ಹುಟ್ಟಿ, ನನ್ನನ್ನು ಆಶ್ರಯಿಸುವನು. ಆಗ ಆತನಿಗೆ ಮುಕ್ತಿಯನ್ನು ಕೊಟ್ಟು ಪಾಲಿಸುವೆನು ಎಂಬ ತಾತ್ಪರ್ಯವು. ಭಾಗವತದಲ್ಲಿ ದಶಮಸ್ಕಂಧದ ೮೮ನೆಯ ಅಧ್ಯಾಯದಲ್ಲಿ ಶ್ರೀ ಕೃಷ್ಣ ಭಗವಾನರವರು ಶ್ರೀ ಯುಧಿಷ್ಠಿರನಿಗೆ ಉಪದೇಶಿಸಿದ ಶ್ಲೋಕಗಳು ಇಲ್ಲಿ ಅನುಸಂಧೇಯಗಳು. **"ಯಸ್ಯಾಹ ಮನುಗೃಹ್ಣಾಮಿ ಹರಿಷ್ಯೇ ತದ್ಧನಂ ಶನೈಃ। ತತೋಽಧನಂ ತ್ಯಜನ್ತ್ಯಸ್ಯ ಸ್ವಜನಾ ದುಃಖದುಃಖಿತಂ॥ ಸ ತದಾ ವಿತಥೋದ್ಯೋಗೋ ನಿರ್ವಿಣ್ಣಸ್ಸ್ಯಾದ್ಧನೇಹಯಾ। ಮತ್ಪರೈಃ ಕೃತಮೈತ್ರಸ್ಯ ಕರಿಷ್ಯೇ ಮದನುಗ್ರಹಮ್॥** (೮-೯) ಯಾರಿಗೆ ಅನುಗ್ರಹಿಸಬೇಕೆಂದು ನನಗೆ ಸಙ್ಕಲ್ಪ ಉಂಟಾಗುತ್ತದೋ, ಅಂತವನ ಧನವನ್ನೆಲ್ಲಾ ಅಪಹರಿಸಿ, ಆತನನ್ನು ಅಧನನನ್ನಾಗಿಯೂ ದುಃಖಪೀಡಿತನಾಗಿಯೂ ಮಾಡುವೆನು. ಅದರಿಂದ ಆಗ ಸ್ವಜನರು ತ್ಯಾಗಮಾಡುವರು. ಧನೋದ್ಯೋಗವನ್ನು ಬಿಟ್ಟು, ನನ್ನ ಪರಮ ಭಕ್ತರಲ್ಲಿ ಮೈತ್ರಿಯನ್ನು ಮಾಡುವಹಾಗೆ ಪ್ರೇರಿಸಿ, ಅವನಿಗೆ ಕೊನೆಯಲ್ಲಿ ನನ್ನನ್ನುಹೊಂದುವಹಾಗೆ ಅನುಗ್ರಹಿಸುವನೆಂದು ಧರ್ಮರಾಜರಿಗೆ ಹೇಳುತ್ತಾರೆ. ಶ್ರೀ ಶುಕಮಹರ್ಷಿಯನ್ನು ಪರೀಕ್ಷಿದ್ರಾಜನು ಪ್ರಶ್ನಿಸುತ್ತಾನೇನೆಂದರೆ.—ಲೋಕದಲ್ಲಿ ಸಾಧಾರಣವಾಗಿ **"ಯೇ ಭಜನ್ತ್ಯಶಿವಂ ಶಿವಮ್ ಪ್ರಾಯಸ್ತೇಧನಿನೋಭೋಜಾ ನತುಲಕ್ಷ್ಮ್ಯಾಃ ಪತಿಮ್ ಹರಿಮ್"॥** ರುದ್ರನನ್ನು ಭಜಿಸಿದವರಿಗೆ ಶೀಘ್ರ ಧನಪ್ರಾಪ್ತಿಯೂ

ಲಕ್ಷ್ಮೀಪತಿಯನ್ನು ಪ್ರಾರ್ಥಿಸಿದವರಿಗೆ ಶೀಘ್ರವಾಗಿ ಉಂಟಾಗದಿರುವದಕ್ಕೂ, ಕಾರಣ ವೇನು ಎಂದು ಪ್ರಶ್ನಿಸುತ್ತಾನೆ. ಆಗ ಮಹರ್ಷಿಯು ಹೇಳುತ್ತಾರೇನೆಂದರೆ.— ಮೂರುವಿಧ ಅಹಂಕಾರಕ್ಕೂ ಅಧಿಪತಿಯು ರುದ್ರನು. ಅಹಂಕಾರೋಽಧ್ಯಾತ್ಮಂ ಅಹಂಕರ್ತವ್ಯ ಮಧಿಭೂತಂ, ರುದ್ರಸ್ತತ್ರಾಧಿದೈವತಮ್" ಎಂದು ಶ್ರುತಿ ಯಲ್ಲಿ ಹೇಳಿರುವಹಾಗೆ ರುದ್ರನನ್ನು ಪ್ರಾರ್ಥಿಸಿದರೆ ಕ್ಷಿಪ್ರದಲ್ಲೇ ಧನಪ್ರಾಪ್ತಿ ಯುಂಟಾಗುತ್ತದೆ. ಆದರೆ ಆತನಿಗೆ ಮೋಕ್ಷವನ್ನು ಕೊಡುವ ಶಕ್ತಿಯಿಲ್ಲವು. ಶ್ರೀ ಹರಿಯಾದರೋ, ಹರಿರ್ಹಿ ನಿರ್ಗುಣ ಸ್ಸಾಕ್ಷಾದ್ಭಗವಾನ್ ಪ್ರಕೃತೇಃ ಪರಃ।ಸ ಸರ್ವ ದೃಗು ಪದ್ರಷ್ಟಾ ತಂ ಭಜನ್ನಿರ್ಗುಣೋಭವೇತ್" ಶ್ರೀ ಹರಿಗೆ ರುದ್ರನಹಾಗೆ ಪ್ರಾಕೃತಗುಣ ಸಂಬಂಧವಿಲ್ಲವು; ತನ್ನನ್ನು ಭಜಿಸುವವರಿಗೂ ಪ್ರಾಕೃತ ಗುಣ ಸಂಬಂಧವಿಲ್ಲದಹಾಗೆ ಮಾಡಿ ಮುಕ್ತಿಯನ್ನು ಕೊಡಬೇಕೆಂಬುದೇ ಆ ಕರುಣಾ ಸಾಗರನ ಆಶಯವು. ಆದುದರಿಂದ ನಶ್ವರವಾದ ಧನವನ್ನಪೇಕ್ಷಿಸಿದರೆ ರುದ್ರನ ಹಾಗೆ ಶೀಘ್ರದಲ್ಲಿ ಕೊಡಲು ಇಷ್ಟವಿಲ್ಲವು. ಏಕೆಂದರೆ ಧನಪ್ರಾಪ್ತಿಯಲ್ಲಿ ಜಿಹಾಸೆ ಯನ್ನು ಹುಟ್ಟಿಸಿ, ನನ್ನನ್ನು ಮೋಕ್ಷಕ್ಕಾಗಿ ಭಜಿಸುವಹಾಗೆಮಾಡಿ ಮೋಕ್ಷವನ್ನು ಕೊಡುವೆನು. ದ್ರವ್ಯಾಕಾಂಕ್ಷೆಗಾಗಿ ಭಜಿಸನೆ, ಮೋಕ್ಷಕ್ಕಾಗಿ ಭಜಿಸುವವರಿಗೆ ತನ್ನಲ್ಲೇ ಮನಸ್ಸು ನೆಲಗೊಳ್ಳುವದಕ್ಕಾಗಿ ಅವರಲ್ಲಿರುವ ಧನವನ್ನೂ ಅಪಹರಿಸಿ ಬಿಡುವೆನು. ಈ ವಿಷಯವನ್ನು ಕುರಿತು ನಿನ್ನ ಪಿತಾಮಹನಾದ ಯುಧಿಷ್ಠಿರನು ಭಗವಂತನಾದ ಕೃಷ್ಣನನ್ನು ಪ್ರಶ್ನಿಸಲು, ಆಗ ಶ್ರೀಕೃಷ್ಣನು ಹೇಳಿದುದನ್ನು ನಿನಗೆ ತಿಳಿಸುವನೆಂದು ಹೇಳಿ ಮೇಲಿನ ಶ್ಲೋಕಗಳನ್ನು ಉದಾಹರಿಸಿರುತ್ತಾರೆ. ಈ ವಿಷಯದಲ್ಲಿ ಶ್ರೀಮದ್ಭಾಗವತದಲ್ಲಿ ಇನ್ನೊಂದು ಇತಿಹಾಸವು ಉಂಟು. ಶ್ರೀಕೃಷ್ಣ ಭಗವಾನರವರು ಉದ್ಧವರೊಂದಿಗೆ ಹೋಗುತ್ತಿರುವಾಗ ಮಾರ್ಗದಲ್ಲಿ ಮಳೆಬರಲು, ಒಬ್ಬರಾಜನಮನೆಗೆ ಹೋಗುತ್ತಾರೆ. ಆಗ ರಾಜಭಟರು ಇವರನ್ನು ತಡೆದುದನ್ನು ರಾಜನು ತಿಳಿದರೂ, ಅವರನ್ನು ನಿರೋಧಿಸಲಿಲ್ಲವಾದುದರಿಂದ, ಬಹುಕಾಲ ರಾಜನು ಹೀಗೆಯೇ ಇರತಕ್ಕದ್ದೆಂದು ಹೇಳಿ, ಅನಂತರ ಇನ್ನೂ ಮಳೆಯು ಹೊಯ್ಯುತ್ತಲೇ ಇದ್ದುದರಿಂದ, ಒಬ್ಬ ಬ್ರಹ್ಮವಿತ್ತಿನ ಆಶ್ರಮವನ್ನು ಪ್ರವೇಶಿಸುತ್ತಾರೆ. ಆಗ ಅವರು ಇರಿಬ್ಬರನ್ನೂ ಅರ್ಘ್ಯಪಾದ್ಯಾಚಮನ ಫಲಮೊದಲಾದವುಗಳ ಸಮರ್ಪಣೆಯೊಂ ದಿಗೆ ಅರ್ಚಿಸಿದುದರಿಂದ, ಆತನಿಗೆ ಶೀಘ್ರದಲ್ಲೇ ದೇಹಾವಸಾನ ಉಂಟಾಗಲಿ ಎಂದು ಹರಸುತ್ತಾರೆ. ಇದನ್ನು ಕಂಡು ಉದ್ಧವರು ಇದೇನು ವಿಚಿತ್ರವು? ಆ ರಾಜನಿಗೆ ಬಹು ಕಾಲ ಹೀಗೆಯೇ ಇರು ಎಂದು ಹೇಳಿದುದೂ, ಈ ಬ್ರಹ್ಮವಿತ್ತಿಗೆ ಶೀಘ್ರದಲ್ಲಿ ಮರಣವಾಗಲೆಂದು ಹೇಳಿದುದೂ, ಯಾವನ್ಯಾಯವು? ಎಂದಾಕ್ಷೇಪಿಸ ಸಲು, ಅದಕ್ಕೆ ಶ್ರೀಕೃಷ್ಣನು ನಕ್ಕು, ಈ ರಾಜನು ಅಹಂಕಾರಯುಕ್ತನಾಗಿ ಭಾಗವತ

ರೆಂಬ ಭಕ್ತಿಶೂನ್ಯನಾದುದರಿಂದ ಬಹುಕಾಲ ಈ ಲೀಲಾ ವಿಭೂತಿಯಲ್ಲೇ ದುಃಖಾನು ಭವಕ್ಕಾಗಿ ಇರಲಿ ಎಂದು ಹೇಳಿದೆನು. ಈ ಬ್ರಹ್ಮವಿತ್ತಾದರೋ ಪರಮಭಕ್ತನು, ಈತನನ್ನಗಲಿ ಇರಲು ನನಗೆ ಇಷ್ಟವಿಲ್ಲವಾದುದರಿಂದ, ದೇಹಾವಸಾನವು ಶೀಘ್ರದಲ್ಲಿ ಉಂಟಾಗಿ ನಿತ್ಯವಿಭೂತಿಗೆ ನನ್ನಲ್ಲಿಗೆ ಶೀಘ್ರ ಬರಲಿ ಎಂದು ಹಾಗೆ ವರವನ್ನಿತ್ತೆನೆಂದು ಸಮಾಧಾನವನ್ನು ಹೇಳಿದರು. ಇದು ಇಲ್ಲಿ ಅನುಸಂಧೇಯವು. **ಎಜ್ಞ್ಗರ ಪಡಿಯೇ**-ಎಂದು ಹೇಳಿರುವಹಾಗೆ,**ದುಃಖಾದಿಗಳುಕ್ಕ ಕಾರಣಮಾನ** - ದುಃಖ ಮೊದಲಾದವುಗಳಿಗೆ ಕಾರಣವಾದ, ಆದಿಶಬ್ದದಿಂದ ಸುಖವೂ ಹೇಳಲ್ಪಟ್ಟಿತು, **ಪ್ರಾರಬ್ಧಕರ್ಮವಿಶೇಷತ್ತೈ**-ಪ್ರಾರಬ್ಧ ಕರ್ಮ ವಿಶೇಷವನ್ನು, **ಸನ್ನಿಹಿತಜ್ಞಳಾನ ಕಶಾದಿಗಳೈಪ್ಪೋಲೆ**-ಉಂಟಾದ ಚಾಟಿಯು ಹೊಡೆತಗಳ ಹಾಗೆ, **ತುಣೈಯಾಗಕ್ಕೊಂಡು**-ಸಹಕಾರಿಗಳನ್ನಾಗಿ ಭಾವಿಸಿ, **ಪಿತ್ರಾದಿಗಳೈಪ್ಪೋಲೆ** - ಪಿತಾ, ಜೇಷ್ಠಭ್ರಾತಾ, ವಿದ್ಯಾಕಲಿಸುವ ಉಪಾಧ್ಯಾಯ, ಗುರು ಮೊದಲಾದವರುಗಳ ಹಾಗೆ, **ಶಿಕ್ಷಕನಾನ ಈಶ್ವರ್** - ಶಿಕ್ಷಕನಾದ ಸರ್ವೇಶ್ವರನು, **ಕಠಿನ ಪ್ರಕೃತಿಗಳುಕ್ಕು** - ಕ್ರೂರ ಸ್ವಭಾವವುಳ್ಳವರಿಗೆ, ಎಂದರೆ ವಿರಕ್ತಿಯಿಂದ ಪರಮಾತ್ಮನ ಧ್ಯಾನದಲ್ಲಿ ನಿರತರಾಗದೆ ಐಹಿಕದಲ್ಲಿ ಮಗ್ನರಾಗಿರುವವರಿಗೆ, **ಪಣ್ಣುಗಿರ** - ಮಾಡುವ, **ಅನುಗ್ರಹ ವಿಶೇಷ ಮಿದೆನ್ರು** - ಈ ಪ್ರಾರಬ್ಧದಿಂದುಂಟಾದ ದುಃಖವು ಅನುಗ್ರಹರೂಪದಲ್ಲಿ ಅಲ್ಪಶಿಕ್ಷೆಯೆಂದು, **ಅನುಸಂಧಿಕ್ಕೈಯುಚಿತಮ್** - ತಿಳಿಯೋಣವು ಯೋಗ್ಯವಾದುದು. ಪ್ರಪನ್ನರಾದವರು ಹೇಗೆ ಇರಬೇಕೋ, ಮತ್ತು ಯಾವ ಉತ್ತರ ಕೃತ್ಯಾದಿಗಳನ್ನು ಕೈಕೊಂಡು ಹೇಗೆ ಇರಬೇಕೋ,ಹಾಗಿರದೆ ಕೆಲವರು ಐಹಿಕದಲ್ಲೇ ಲಿಪ್ತರಾಗಿದ್ದರೆ, ಅಂತವರಿಗೆ ಸರಿಯಾದ ಮಾರ್ಗದಲ್ಲಿರದ ಪುತ್ರನನ್ನು ತಂದೆಯ್ಯು ಒಂದು ಬೆತ್ತದ ಮೂಲಕ ಎರಡು ಹೊಡತವನ್ನು ಕೊಟ್ಟು, ಹೀಗೆ ಅಲ್ಪದಂಡನೆಯಮೂಲಕ ಹೇಗೆ ಸರಿಯಾದ ಮಾರ್ಗಕ್ಕೆ ತರುವದು ಬಾಲನಿಗೆ ಅನುಗ್ರಹ ರೂಪವಾದುದೋ, ಈ ಪ್ರಾರಬ್ಧಕರ್ಮಮೂಲಕ ಅಲ್ಪದುಃಖವನ್ನುಂಟುಮಾಡುವದೂ ಸಹ,ಐಹಿಕದಲ್ಲಿ ಜಿಹಾಸೆ ಹುಟ್ಟಿಸಿ, ತನ್ನಲ್ಲೇ ಮನಸ್ಸನ್ನು ಇಡುವಹಾಗೆ ಮಾಡುವಂತಹ ಅನುಗ್ರಹವೆಂದು ಭಾವಿಸುವದು ಉಚಿತವು. ಸ್ವಾಮಿಯು ತನ್ನನ್ನಾಶ್ರಯಿಸಿದ್ದರೂ ಕೈಬಿಟ್ಟು ಕ್ಲೇಶಕೊಟ್ಟನೆಂದು ಆತನ ದಯೆಯನ್ನು ನಿಂದಿಸುವದಾಗಲಿ, ಸರ್ವಶಕ್ತನೆಂದು ಹೇಳಿಸಿಕೊಳ್ಳುವ ಸರ್ವೇಶ್ವರನಲ್ಲಿ ಮಾಡಿದ ಶರಣಾಗತಿಯು ಪ್ರಾರಬ್ಧದಿಂದುಂಟಾಗುವ ಕ್ಲೇಶಗಳನ್ನು ಹೋಗಲಾಡಿಸುವ ಶಕ್ತಿಯಿಲ್ಲದುದು ಎಂದು ನಿಂದಿಸುವದಾಗಲಿ, ಯುಕ್ತವಲ್ಲವೆಂಬ ಭಾವವು ಅಂತಹ ಪ್ರಾರಬ್ಧ ಮೂಲಕ ಉಂಟಾದ ಕ್ಲೇಶವೂ ಕೂಡ, "ಯದಿವಾ ರಾವಣಸ್ಸ್ವಯಂ" ಎಂದು ಹೇಳಿರುವ ಕರುಣಾನಿಧಿಯು ಅನುಗ್ರಹವೆಂಬ ಭಾವನೆಯೇ ಪ್ರಪನ್ನನಿಗೆ ಯೋಗ್ಯ

ವಾದುದೆಂಬ ಭಾವವು. ಇದರಿಂದ ಚರಮ ಶ್ಲೋಕದಲ್ಲಿ ಹೇಳಿರುವ **ಮಾಶುಚಃ** ಎಂದು ಹೇಳಿರುವ ವಾಕ್ಯಕ್ಕೆ ಏನೊಂದು ಕೊರತೆಯೂ ಉಂಟಾಗುವದಿಲ್ಲವೆಂಬುದೂ ಸೂಚಿತವು. ಈ ಮುಂದಿನ ಶ್ಲೋಕದಲ್ಲಿ ಹೇಳಿರುವಹಾಗೆ, ಪ್ರಾರಬ್ಧಾಂಶವೂ ಕಳೆಯಬೇಕೆಂದು ಅತನನ್ನು ಪ್ರಾರ್ಥಿಸಿದುದಾದರೆ ಅದೂ ಕೂಡ ನಷ್ಟವಾಗಿ ಕ್ಲೇಶವು ತಪ್ಪುವದರಲ್ಲೇನೂ ಸಂದೇಹವಿರುವದಿಲ್ಲವು. ಈ ಮುಂದಿನ ಶ್ಲೋಕದಲ್ಲಿ ಪ್ರಾರಬ್ಧ ಪಾಪವು ತಮ್ಮನ್ನು ಬಾಧಿಸದಹಾಗೆ ನಿನ್ನ ಕ್ಷಮಾಗುಣವು ಅನುಗ್ರಹಿಸಲೆಂಬ ಪ್ರಾರ್ಥನೆಯು ಇರುತ್ತದೆ—**ದೇವತ್ವಾಂ ಶರಣಂ ಪ್ರಪನ್ನಮಪಿ ಮಾಂ ದುಃಖಾನ್ಯನನ್ಯಾಶ್ರಯಂ।ಬಾಧನ್ತೇ ಯದಿ ಸರ್ವಪಾಪ ನಿವಹಾತ್ ತ್ವಾಂ ಮೋಕ್ಷಯಿಷ್ಯಾಮ್ಯಹಮ್।ಇತ್ಯುಕ್ತಂ ತನವಾಕ್ಯಮರ್ಥವಿಧುರಂ ಜಾಯೇತಯದ್ವಾ ಭವಾಂ।ತತ್ರಾಶಕ್ತ ಇತಿ ಪ್ರಥೇತಿಹ ತತೋ ಮಾಂ ರಕ್ಷತು ತ್ವತ್ಕ್ಷಮಾ॥ಹೇ ದೇವ**–ಲೀಲಾವಿಭೂತಿಯಲ್ಲಿ ಕ್ರೀಡಿಸುವ ಸ್ವಾಮಿಯೇ,ಕರುಣಾಸಾಗರನಾದ ನಿನ್ನನ್ನು ಉಪಾಯವೆಂದು ಭಾವಿಸಿ ಶರಣಾಗತಿಯನ್ನನುಷ್ಠಿಸಿದನಂತರವೂ,ಅನನ್ಯ ಗತಿಕನಾದ ನನ್ನನ್ನು ದುಃಖಗಳು ಬಾಧಿಸಿದುದಾದರೆ, ಅರ್ಜುನ ಲೀಲಾಸಾರಥಿಯಾಗಿ ಸರ್ವಪಾಪಗಳಿಂದಲೂ ಬಿಡುಗಡೆಯನ್ನು ಹೊಂದಿಸುವೆನು ನೀನು ಅಳಬೇಡವೆಂದು ಹೇಳಿದವಾಕ್ಯವು ವ್ಯರ್ಥವಾಗುವದಿಲ್ಲವೋ? ಒಂದುವೇಳೆ ನಿನ್ನಂಥ ಮಹಾ ಪಾಪಿಯನ್ನು ಕುರಿತು ನಾನು ಹೇಳಿದ ವಾಕ್ಯವಲ್ಲವು, ಏನೋ ಅಲ್ಪ ಸ್ವಲ್ಪ ಪಾಪಗಳನ್ನು ಮಾಡಿದವರನ್ನು ಕುರಿತು ಹೇಳಿದುದು ಎನ್ನುತ್ತೀಯೋ? ಆಗ **ಅಶಕ್ತ ಇತಿ ಪ್ರಥೇ ತಹಿ** - ಸ್ವಲ್ಪ ಪಾಪವಿದ್ದರೆ ಹೋಗಲಾಡಿಸುವ ಶಕ್ತಿಯುಳ್ಳವನು, ಹೆಚ್ಚು ಪಾಪಮಾಡಿದವರನ್ನು ರಕ್ಷಿಸುವ ಶಕ್ತಿ ಇಲ್ಲವೆಂಬದಾಗಿ, ನಿನ್ನ ಸರ್ವಶಕ್ತಿತ್ವಕ್ಕೆ ಕುಂದಕ ಉಂಟಾಗುತ್ತದೆ. ಆದುದರಿಂದ ನಿನ್ನ ಸರ್ವಶಕ್ತನೆಂಬ ಬಿರುದನ್ನು ಕಾಪಾಡಿಕೊಳ್ಳುವದಕ್ಕಾಗಿ ನನ್ನ ಪ್ರಾರಬ್ಧ ಕರ್ಮಗಳನ್ನೂ ಕೂಡ, ನಿನ್ನ ಕ್ಷಮಾಗುಣವು ಹೋಗಲಾಡಿಸಲಿ ಎಂಬುದು ಶ್ಲೋಕತಾತ್ಪರ್ಯವು.

ದುಃಖದಿಂದ ಖಿನ್ನನಾದವನು, ಕಷ್ಟಪ್ರಾಪ್ತಿಯನ್ನೂ ಹೀಗೆ ಅನುಗ್ರಹವೆಂದು ಭಾವಿಸುವದು ಸಾಧ್ಯವೋ? ಎಂದರೆ, ತುಂಬಾ ಜ್ಞಾನಶೂನ್ಯನು ಹಾಗೆ ಭಾವಿಸನು. ಒಂದುವೇಳೆ ತನ್ನ ಪ್ರಪನ್ನತೆಯಿಂದ ಏನೂ ಫಲವಿಲ್ಲವು, ತಾನು ಪ್ರಪನ್ನನಾದರೂ ದುಃಖಗಳೂ ತಪ್ಪಲಿಲ್ಲವೆಂದು ಜ್ಞಾನಶೂನ್ಯನು ಪ್ರಚ್ಯುತನಾಗಬಹುದು. ಅವರೆ ಜ್ಞಾನಿಗಳು ತಾವು ಹೇಳಿದರೀತಿಯಲ್ಲಿ ಅನುಗ್ರಹವೆಂದೇ ಭಾವಿಸುವರು ಎಂದು ಹೇಳುವದಕ್ಕಾಗಿ ಅಭಿಯುಕ್ತರ ದಿವ್ಯ ಸೂಕ್ತಿಯನ್ನು ತಮ್ಮ ಹೇಳಿಕೆಗೆ ನಿದರ್ಶನವಾಗಿ ಪ್ರಕಟಿಸುತ್ತಾರೆ.-ಪ್ರಾರಬ್ಧದಿಂದ ಪ್ರಾಪ್ತವಾಗುವ ಕ್ಲೇಶಾದಿಗಳನ್ನು, ತನಗೆ ಶಾಸ್ತಾವಾದ ಉಪಾಧ್ಯಾಯರು ಎಂದು ಭಾವಿಸತಕ್ಕದ್ದು,

ಸ್ವಾಭಿಪ್ರಾಯಂ ಅಭಿಯುಕ್ತಸೂಕ್ತಿನಾ ದೃಢಯತಿ.

ಒರುವ್ಯಾಧಿ ವಿಶೇಷತ್ತೈಯುಣ್ಡೋವೆನ್ರು ರಾಜಾಕೇಳ್ಕ್ಕ, ಅವರು ವೊರು ಉಪಾಧ್ಯಾಯ ರುಣ್ಡೆನ್ರು ಭಟ್ಟರರುಳಿಚ್ಚೆಯ್‌ದಾರ್. ಆಯುಸ್ಸು

ಎಂಬರೆ ಅನುಗ್ರಹಕ್ಕಾಗಿ ಅಲ್ಪ ಶಿಕ್ಷೆಯನ್ನು ಕೊಡುವವರೆಂದು ಭಾವಿಸತಕ್ಕದ್ದೆಂದು ಹೇಳುತ್ತಾರೆ. ಶಿಕ್ಷೆಯು ಹೇಗೆ ಅನುಗ್ರಹವೆಂದರೆ, ಅದು ಐಹಿಕದಲ್ಲಿ ಜಿಹಾಸೆಯನ್ನು ಹುಟ್ಟಿಸಿ, ವೈರಾಗ್ಯವನ್ನುಂಟುಮಾಡಿ, ಭಗವಂತನಲ್ಲಿ ಮನಸ್ಸನ್ನೂ, ಮೋಕ್ಷದಲ್ಲಿ ಆಶೆಯನ್ನೂ, ಹೆಚ್ಚಿಸುವದರ ಮೂಲಕ ಅನುಗ್ರಹವೇ ಎಂಬ ಭಾವವು.

ತಮ್ಮ ಅಭಿಪ್ರಾಯವನ್ನು ಅಭಿಯುಕ್ತರ ದಿವ್ಯ ಸೂಕ್ತಿಯಮೂಲಕ ಸಮರ್ಥಿಸುತ್ತಾರೆ.

ಪ್ರಕರಣವೇನೆಂದರೆ—ಶ್ರೀ ಪರಾಶರ ಭಟ್ಟರು ವ್ಯಾಧಿಯಿಂದ ಪೀಡಿತರಾಗಿರುವಾಗ, ಅವರಲ್ಲಿ ಗುರುಭಾವವನಿಟ್ಟಿದ್ದ ಒಬ್ಬ ರಾಜನು, ಅವರಲ್ಲಿಗೆ ಬಂದು ಅವರ ದೇಹಸ್ಥಿತಿಯನ್ನು ವಿಚಾರಿಸಲು ಬಂದಾಗ, ರೋಗ ಹೇಗಿದೆ ಎಂದು ಪ್ರಶ್ನಿಸಲು, ರೋಗವು ಇನ್ನೂ ಗುಣವಾಗದೇ ಇರುವ ಸಂದರ್ಭದಲ್ಲಿ ಹೇಳುವ ವಾಕ್ಯವು.— **ಒರುವ್ಯಾಧಿ ವಿಶೇಷತ್ತೈ ಯುಂಡೋವೆನ್ರು** - ನಿಮಗೆ ವ್ಯಾಧಿ ವಿಶೇಷವು ಇನ್ನೂ ಹ್ಯಾಗಿದೆ ಎಂದು, **ರಾಜಾ ಕೇಳ್ಕ್ಕ** - ರಾಜನು ಯೋಗಕ್ಷೇಮವನ್ನು ವಿಚಾರಿಸಲಾಗಿ, ಅದಕ್ಕೆ ಅವರು ಉತ್ತರವನ್ನು ದಯಪಾಲಿಸುತ್ತಾರೇನೆಂದರೆ, **ಅವರುವರ್**- ಅವರು (ಪರಾಶರಭಟ್ಟರು), **ಒರು ಉಪಾಧ್ಯಾಯರುಣ್ಡು**-ಒಬ್ಬ ಶಿಕ್ಷಕನು ಉಂಟು **ಎನ್ರು ಭಟ್ಟರ್** - ಎಂದು ಪರಾಶರಭಟ್ಟರು, **ಅರುಳಿಚ್ಚೆಯ್‌ದಾರ್** - ಉತ್ತರವನ್ನು ಅನುಗ್ರಹಿಸಿದರು. ವ್ಯಾಧಿ ವಿಶೇಷವನ್ನು ಒಬ್ಬ ಶಿಕ್ಷಕನನ್ನಾಗಿ ಭಾವಿಸಿ ಹೇಳಿದರು. ಆದರಿಂದ ಅವರ ಅಭಿಪ್ರಾಯವೇನೆಂದರೆ, ವ್ಯಾಧಿಯು ಪ್ರಾರಬ್ಧದಿಂದುಂಟಾದ ಕ್ಲೇಶವು, ಇಂತಹ ಅಲ್ಪಶಿಕ್ಷೆಯ ಮೂಲಕ ಸರ್ವೇಶ್ವರನು ಕ್ಲೇಶವನ್ನುಂಟುಮಾಡುವದರಿಂದ ತನ್ನಿವಾರಣವೊದಲಾದವುಗಳಿಗಾಗಿಯಾಗಲಿ, ಅಥವಾ ಮನಸ್ಸು ತನ್ನಲ್ಲಿರುವಹಾಗೆ ಅನುಗ್ರಹಿಸುವದಕ್ಕಾಗಲಿ, ಈ ವ್ಯಾಧಿರೂಪವಾದ ಅಲ್ಪ ಶಿಕ್ಷೆಯು ಎಂಬ ಭಾವವು. ಅಥವಾ ಐಹಿಕದಲ್ಲಿ ಜಿಹಾಸೆಯು ಹುಟ್ಟಿ ಅಲ್ಪಸಾರಗಳಾದ ಇಲ್ಲಿನ ಅಶಾಶ್ವತ ದುಃಖಮಿಶ್ರವಾದ ಸುಖಗಳಿಗಾಗಲಿ ಆಶೆಪಡದೆ ಇರುವಹಾಗೆ ಶಿಕ್ಷಕರಾದ ಈ ರೋಗಗಳು, ಉಪಾಧ್ಯಾಯರುಗಳು ಎಂಬ ತಾತ್ಪರ್ಯವು. ಉಪಾಧ್ಯಾಯನ ಕೆಲಸವೇನು ಎಂದರೆ ಬಾಲನು ಅಮಾರ್ಗದಲ್ಲಿ ಹೋಗುತ್ತಿದ್ದರೆ ಅದನ್ನು ತಪ್ಪಿಸುವದಕ್ಕಾಗಿ ಬೆತ್ತದಿಂದ ಒಂದೆರಡು ಹೊಡೆತವನ್ನು

**ವಳರ್ಕ್ಕವೊಣ್ಣಾದಪಡಿ ನಿಯತಾಯುಸ್ಸಾನವನುಕ್ಕು ಉಳ್ಳತ್ತಿಲುದ್ವೇಗಂ ಪಿರಕ್ಕೈಕ್ಕಾಗವುಮ್, ಅನಿಯತಾಯುಸ್ಸುಕಳುಕ್ಕು ಆಯುಷ್ಕಾಮೀಯಾದಿಗಳ್ ವಳರ್ಕ್ಕೈಯಿಟ್ಟು ವಳರ್ಕ್ಕ ನಿನೈಯಾವೈಕ್ಕಾಗವುಮ್ ದುಃಖಾದಿಗಳಿವನುಕ್ಕು ಉಪಾಧ್ಯಾಯರ್ಗಳ್. ಇದು ಆಳ್ವಾನುಳ್ಳಿಟ್ಟಾರ್ ಪಕ್ಕಲಿಲೇ ಪ್ರಸಿದ್ಧಮ್.**

---

ಕೊಟ್ಟು, ಆತನನ್ನು ಅಂತಹ ಮಾರ್ಗದಿಂದ ತಪ್ಪಿಸಿ ಸರಿಯಾದ ಮಾರ್ಗಕ್ಕೆ ತಿರುಗಿಸುವದು. ಇಂತಹ ವ್ಯಾಧ್ಯಾದಿ ಕ್ಲೇಶಗಳೂ ಸಹ ಹಾಗೆಯೇ ಮಾಡುತ್ತವೆಂಬ ಭಾವವು. ಪರಮಾತ್ಮನನ್ನು ಮರೆಯದಹಾಗೆ ಆತನನ್ನೇ ಸ್ಮರಿಸುವಹಾಗೆ ಮಾಡುವದರಿಂದ ಅವು ಅನುಗ್ರಹರೂಪವಾದುವುಗಳೇ. ವ್ಯಾಧಿಮೊದಲಾದವುಗಳು ನಿಯತಾಯುಸ್ಸುಳ್ಳವರಿಗೂ ಅನಿಯತಾಯುಸ್ಸುಳ್ಳವರಿಗೂ ಹೇಗೆ ಉಪಾಧ್ಯಾಯರುಗಳು ಎಂಬುದನ್ನು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. ಮನುಷ್ಯರು ಎರಡು ವಿಧವು. ನಿಯತಾಯುಸ್ಸುಗಳು,ಅನಿಯತಾಯುಸ್ಸುಗಳೆಂಬದಾಗಿ. **ನಿಯತಾಯುಸ್ಸುಗಳು** ಯಾರೆಂದರೆ—ಆಯುಷ್ಕಾಮೇಷ್ಟಿಯೇ ಮೊದಲಾದವುಗಳಿಂದ ಆಯುಸ್ಸಿನ ವೃದ್ಧಿಯನ್ನು ಹೊಂದದವರು, **ಅನಿಯತಾಯುಸ್ಸುಗಳು**-ಆಯುಷ್ಕಾಮೀಯೇಷ್ಟಿ ಮೊದಲಾದವುಗಳಿಂದ ಆಯುಸ್ಸಿನ ವೃದ್ಧಿಯನ್ನು ಹೊಂದಿದವರು. **ಆಯುಸ್ಸುವಳರ್ಕ್ಕವೊಣ್ಣಾದಪಡಿ** - ಆಯುಷ್ಕಾಮೇಷ್ಟಿ ಮೊದಲಾದವುಗಳಿಲ್ಲದುದರಿಂದ ಆಯುಸ್ಸು ಅಭಿವೃದ್ಧಿ ಹೊಂದದಹಾಗೆ, **ನಿಯತಾಯುಸ್ಸಾನವನುಕ್ಕು**-ನಿಯತವಾದ ಆಯುಸ್ಸುಳ್ಳವನಿಗೆ,**ಉಳ್ಳತ್ತಿಲುದ್ವೇಗಂಪಿರಕ್ಕೈಕ್ಕಾಗವುಮ್**-ಆತನಿಗಿರುವ ಆಯುಸ್ಸಿನ ಮಧ್ಯದಲ್ಲೇ ಮನಸ್ಸಿನಲ್ಲಿ ವ್ಯಸನ ಅಥವಾ ಜಿಹಾಸೆಯು ಜನಿಸುವದಕ್ಕಾಗಿಯೂ, **ಅನಿಯತಾಯುಸ್ಸುಗಳಕ್ಕು** - ಅನಿಯತಾಯುಸ್ಸಿನವರಿಗೆ, **ಆಯುಷ್ಕಾಮೀಯಾದಿಗಳ್ ವಳರ್ಕ್ಕೈಯಿಟ್ಟು** - ಆಯುಷ್ಕಾಮೇಷ್ಟಿ ಮೊದಲಾದವುಗಳ ಮೂಲಕವಾಗಿ ಎಂದರೆ ಅವುಗಳನ್ನನುಷ್ಠಿಸಿ, **ವಳರ್ಕ್ಕನಿನೈಯಾವೈಕ್ಕಾಗವುಮ್** - ಆಯುಸ್ಸನ್ನು ವೃದ್ಧಿಹೊಂದಿಸಿಕೊಳ್ಳಬೇಕೆಂಬ ಪ್ರಯತ್ನಮಾಡದೇ ಇರುವದಕ್ಕಾಗಿಯೂ, **ದುಃಖಾದಿಗಳ್** - ದುಃಖಭಯ ಮೊದಲಾದ ಕ್ಲೇಶಗಳು, **ಇವನುಕ್ಕು** - ಈ ಪ್ರಪನ್ನನಿಗೆ, **ಉಪಾಧ್ಯಾಯರ್ಗಳ್** - ಹಿತಮಾಡುವದಕ್ಕಾಗಿ ಏರ್ಪಟ್ಟ ಶಿಕ್ಷಕರು. ನಿಯತಾಯುಸ್ಸುಗಳಿಗೆ ಈ ದುಃಖ ಭಯಾದಿಗಳು ಹೇಗೆ ಹಿತಮಾಡುವ ಉಪಾಧ್ಯಾಯರುಗಳು ಎಂದರೆ ಈತನು ಆಯುಷ್ಕಾಮೇಷ್ಟಿ ಮೊದಲಾದವುಗಳನ್ನು ಅನುಷ್ಠಿಸತಕ್ಕವನಲ್ಲವು, ಆದರೂ ಆತನಿಗೆ ಇನ್ನು ಮುಂದಿರುವ ಆಯುಃಪರಿಮಿತಿಯಲ್ಲೇ ಪ್ರಾರಬ್ಧವಶಾತ್ ದುಃಖಗಳನ್ನುಂಟುಮಾಡುವದರ ಮೂಲಕ ಈತನಿಗೆ ಅಷ್ಟರಲ್ಲೇ ಐಹಿಕ ಜಿಹಾಸೆಯುಂಟಾಗಿ ಪರಮಾತ್ಮನಲ್ಲಿ ಮನ

ಸ್ಸನ್ನು ಇಟ್ಟವನಾಗುವನು. ಅನಿಯತಾಯುಸ್ಸುಗಳಿಗಾದರೋ, ಈ ದುಃಖಾದಿಗಳು ಹೇಗೆ ಹಿತಪ್ರವರ್ತಕಗಳು ಎಂದರೆ, ಈ ಆಯುಷ್ಕಾಮೇಷ್ಟಿ ಮೊದಲಾದವುಗಳನ್ನು ಅನುಷ್ಠಿಸಬಹುದಾಗಿದ್ದರೂ, ಈಗ ಇರುವ ಕ್ಲೇಶಗಳೇ ಸಾಕು, ಇನ್ನು ಹೆಚ್ಚಿಸಿಕೊಳ್ಳೋಣ ಬೇಡವೆಂದು ಸಙ್ಕಲ್ಪಿಸಿ ಅಂತಹ ಇಷ್ಟಿಯನ್ನನುಷ್ಠಿಸದೇ ಇರುವದಕ್ಕೂ, ತನ್ಮೂಲಕ ಐಹಿಕ ಜಿಹಾಸೆಯು ಹುಟ್ಟಿ ಪರಮಾತ್ಮನಲ್ಲಿ ಮನಸ್ಸನ್ನಿಡುವಹಾಗೆ ಮಾಡುವದಕ್ಕೂ, ಹಿತಪ್ರವರ್ತಕಗಳಾದ ಉಪಾಧ್ಯಾಯರುಗಳು ಎಂಬ ಭಾವವು. ಹಾಗೆ ಕ್ಲೇಶಗಳನ್ನು ಹಿತವಾಗಿ ಭಾವಿಸುವವರು ಲೋಕದಲ್ಲಿ ಉಂಟೋ? ಎಂದರೆ "ವಿಪದ ಸ್ಸಂತು ನ ಶ್ಯಶ್ವದ್ಯಾಸು ಸಂಕೀರ್ತ್ಯತೇ ಹರಿಃ" ಎಂದು, "ಯದಾಹುರ್ವ್ಯದ್ಧಾಃ" ಎಂದೂ ಶ್ರೀ ಸಾರವಿವರಣಿಯವರು ಉದಾಹರಿಸಿರುತ್ತಾರೆ; ವಿಪತ್ತುಗಳೇ ನಮಗೆ ಬಾರಿಬಾರಿಗೆ ಉಂಟಾಗಲಿ, ಹಾಗೆ ಉಂಟಾಗುವದರಿಂದ ಅಂತಹ ಕಷ್ಟಗಳಲ್ಲಿ ಶ್ರೀಹರಿಯು ಸ್ತುತಿಸಲ್ಪಡುವನಾದುದರಿಂದಎಂದು ಜ್ಞಾನವೃದ್ಧರು ಹೇಳಿರುತ್ತಾರೆ. ಹಾಗೆ ವಿಪತ್ತನ್ನು ಅನುಗ್ರಹವೆಂದು ಭಾವಿಸಿದುದಕ್ಕೆ ನಿದರ್ಶನ ಉಂಟೋ? ಎಂದರೆ ಶ್ರೀ ಭಾಷ್ಯಕಾರರ ಪ್ರಿಯಶಿಷ್ಯರಾಗಿ ಶ್ರೀಭಾಷ್ಯ ಮೊದಲಾದ ಗ್ರಂಥ ರಚನೆಯಲ್ಲಿ ಸಹಾಯಕರಾದ ಶ್ರೀ ಕೂರತ್ತಾಳ್ವಾರವರ ನಿದರ್ಶನ ಉಂಟೆಂದು ಮುಂದೆ ತಿಳಿಸುತ್ತಾರೆ.—ಇದು · ಹೀಗೆ ದುಃಖಪ್ರಾಪ್ತಿಗೆ ಹೇತುವಾದ ವಿಪತ್ತನ್ನೇ ಅನುಗ್ರಹವೆಂದು ಈ ಭಾವಿಸೋಣವು, ದುಃಖಾದಿಗಳನ್ನು ಉಪಾಧ್ಯಾಯರನ್ನಾಗಿ ಭಾವಿಸೋಣವು, ಆಳ್ವಾನುಳ್ಳಿಟ್ಟಾರ್ ಪಕ್ಕಲಿಲೇ ಪ್ರಸಿದ್ಧಮ್ - ಕೂರುತ್ತಾಳ್ವಾರ್ ಮೊದಲಾದವರುಗಳ ಸಾನ್ನಿಧ್ಯದಲ್ಲಿ ಎಂದರೆ ವೃತ್ತಾಂತಗಳಲ್ಲಿ ಪ್ರಸಿದ್ಧವು ಸಙ್ಗ್ರಹವಾಗಿ ಈ ವೃತ್ತಾಂತವು ಯಾವುದೆಂದರೆ.—ಶೈವನಾದ ಕ್ರಿಮಿಕಂಠ ಚೋಳ ಭೂಪಾಲನು ಬಲಾತ್ಕರಿಸಿ ಶ್ರೀ ಭಾಷ್ಯಕಾರರನ್ನು ಹಿಡಿದು ತಂದು, ಶೈವನಾಗಿ ಮಾಡಬೇಕೆಂದು ಸಙ್ಕಲ್ಪಿಸಿದನು. ಇದನ್ನು ಶ್ರೀ ಕೂರೇಶರು ತಿಳಿದು, ಶ್ರೀ ಯತಿವರ್ಯರನ್ನು ಶ್ರೀರಂಗದಿಂದ ಮೈಸೂರುದೇಶದ ಸಾಲಗ್ರಾಮದ ಕಡೆಗೆ ಪ್ರಯಾಣಮಾಡುವಹಾಗೆಮಾಡಿ,ಅವರ ಕಾವಿಶಾಟಿ ತ್ರಿದಂಡ ಕಮಂಡಲುಗಳನ್ನು ತಾವೇ ಧರಿಸಿ, ತಮ್ಮ ಪ್ರಾಚಾರ್ಯರಾದ ಪೆರಿಯನಂಬಿಗಳೊಂದಿಗೆ ಚೋಳನ ಸಭೆಗೆ ಹೋಗಿ ಆ ರಾಜನನ್ನು ವಾದದಲ್ಲಿ ಗೆಲ್ಲಬೇಕೆಂದು ಯತ್ನಿಸಿದರು. ಬ್ರಹ್ಮವಿಷ್ಣು ರುದ್ರರಲ್ಲಿ, ಬ್ರಹ್ಮನು ವಿಷ್ಣುವಿನ ಪಾದವನ್ನು ತೊಳೆದುದರಿಂದ ಆ ಜಲವು ಗಂಗೆಯಾಗಿ ಬಹು ಪವಿತ್ರವಾಗಿ ಪ್ರವಹಿಸಿತು. ಅದನ್ನು ಶಿವನು ತಲೆಯಲ್ಲಿ ಧರಿಸಿದುದರಿಂದ ಪವಿತ್ರನಾದನು. ಹೀಗಿರುವಾಗ ಈ ಮೂವರಲ್ಲಿ ಯಾರು ಅಧಿಕರೆಂಬುದನ್ನು ನೀನೇ ತಿಳಿ. ಶ್ರೀಮನ್ನಾರಾಯಣನೇ ಜಗತ್ಕಾರಣನಾಗಿ ಸರ್ವಸ್ಮಾತ್ಪರನೆಂದು ಕೂರೇಶರು ವಾದಮಾಡಲು ತೊಡಗಿದರು. ರಾಜನು ಈ

ವಾದಕ್ಕೆ ಒಡಂಬಡದೆ, ಶಿವಾತ್ಪರತರಂ ನಾಸ್ತಿ ಎಂದು ಬರೆಸಿ, ಅದನ್ನು ಅಙ್ಗೀ
ಕರಿಸಿದುದಾಗಿ ಸ್ವಹಸ್ತದಲ್ಲಿ ನಿಮ್ಮ ನಾಮಂಗಳನ್ನು ಬರೆಯಿರಿ ಎಂದು ಬಲಾತ್ಕರಿ
ಸಲು; ಶಿವ ಶಬ್ದಕ್ಕೆ ಶ್ಲೇಷೆಯಿಂದ ಒಂದು ಚಿಕ್ಕ ಕೊಳಗವೆಂಬರ್ಥವಾಗುವದರಿಂದ,
ಅದರ ಕೆಳಗೆ ದ್ರೋಣಮಸ್ತಿ ತತಃ ಪರಂ, ಎಂದು ಅದಕ್ಕೂ ದೊಡ್ಡದಾಗಿ
ಕೊಳಗವೆಂಬುದು ಬೇರೆ ಉಂಟು ಎಂದು ಬರೆದಿದ್ದರಿಂದ, ಶಿವನಿಗಿಂತ ಅಧಿಕ
ನಾಗಿ ಶ್ರೀಮನ್ನಾರಾಯಣನು ಉಂಟು ಎಂಬ ಅರ್ಥಗರ್ಭಿತ ವಾಕ್ಯವೆಂದು ಭಾವಿಸಿ,
ಅತಿ ಕುಪಿತನಾಗಿ ಈ ಇಬ್ಬರ ಮಹಾನುಭಾವರುಗಳ ಕಣ್ಣನ್ನು ಕೀಳಿಸಿ ಬಿಟ್ಟನು.
ಈ ಅತ್ಯುತ್ಕಟವಾದ ಭಾಗವತಾಪರಾಧದಿಂದ ಆ ದುಷ್ಟರಾಜನು, ಕುತ್ತಿಗೆಯಲ್ಲಿ ವ್ರಣ
ಉಂಟಾಗಿ ಹುಳುಬಿದ್ದು ಸತ್ತದ್ದರಿಂದ, ಕ್ರಿಮಿಕಂಠ ಚೋಳನೆಂಬ ಹೆಸರಿನಿಂದ ನಿಂದಿ
ಸಲ್ಪಟ್ಟನು. ಶ್ರೀ ಪೆರಿಯನಂಬಿಗಳಿಗೆ ನೇತ್ರವೇದನೆಯು ದುಸ್ಸಹವಾಗಿ ಪರಿಣಮಿಸಿ,
ಅವರು ದಿವ್ಯ ವೈಕುಂಠವನ್ನು ಸೇರಿದರು. ಶ್ರೀ ಕೂರೇಶರು ಬಂದು ಶ್ರೀರಂಗದಲ್ಲಿ
ಇರುತ್ತಿದ್ದರು. ಕ್ರಿಮಿಕಂಠ ಚೋಳನು ಮೃತನಾದನೆಂಬ ವರ್ತಮಾನವನ್ನು ಕೇಳಿ,
ಶ್ರೀ ಯತಿವರ್ಯರು ಶ್ರೀರಂಗಕ್ಕೆ ಬಂದು ತಮ್ಮ ಪ್ರಿಯ ಶಿಷ್ಯರಿಗೆ ಪ್ರಾಪ್ತವಾದ
ದುರವಸ್ಥೆಯಿಂದಲೂ, ತಮ್ಮ ಆಚಾರ್ಯರು ದುರುಳ ರಾಜನು ಕೊಟ್ಟ ಪೀಡೆಯಿಂದ
ಮೃತರಾದುದರಿಂದಲೂ, ಪರಿತಾಪವನ್ನು ಹೊಂದಿ, ತಮ್ಮ ಶಿಷ್ಯರನ್ನು ಕುರಿತು ಶ್ರೀ
ವರದನು ನಿಮ್ಮ ವಿಷಯದಲ್ಲಿ ತುಂಬಾ ಕೃಪೆಯುಳ್ಳವನಾದುದರಿಂದ, ಶ್ರೀ ವರದ
ನನ್ನು ಸ್ತುತಿಸಿ ನೇತ್ರವನ್ನು ದಯಪಾಲಿಸುವಹಾಗೆ ಪ್ರಾರ್ಥಿಸೆಂದು ಆಜ್ಞಾಪಿಸಲು;
ಆಗ ಶ್ರೀ ಕೂರೇಶರು ತಮ್ಮ ಗುರುವಾದ ಯತಿವರ್ಯರ ಆಜ್ಞಾನುಸಾರವಾಗಿ
“ಸ್ವಸ್ತಿಹಸ್ತಿಗಿರಿ ಮಸ್ತಶೇಖರಸ್ಸನ್ತನೋತು ಮಯಿ ಸಂತತಂ ಹರಿಃ । ನಿಸ್ಸ
ಮಾಭ್ಯಧಿಕ ಮಭ್ಯಧತ್ತ ಯಂ ದೇವಮೌಪನಿಷದೀ ಸರಸ್ವತೀ” ಎಂದು
ಶ್ರೀ ವರದರಾಜಸ್ತವವನ್ನು ಆರಂಭಿಸಿ, ೨೩ನೆಯ ಶ್ಲೋಕದಲ್ಲಿ “ನೀಲ ಮೇಘ
ನಿಭ ಮಞ್ಜನ ಪುಞ್ಜಶ್ಯಾಮಕುಂತಲ ಮನಂತಶಯಂ ತ್ವಾಂ। ಅಬ್ಜಪಾಣಿ
ಪದಮಮ್ಬುಜನೇತ್ರಂ ನೇತ್ರಸಾತ್ಕುರುಕರೀಶ ಸದಾತ್ವಮ್” ಅಪ್ರಾಕೃತ
ನೇತ್ರವನ್ನು ಕೊಟ್ಟು ನಿನ್ನ ಅಪ್ರಾಕೃತ ದಿವ್ಯ ಮಙ್ಗಳ ವಿಗ್ರಹವನ್ನು ಸಾಕ್ಷಾತ್ಕರಿ
ಸುವಹಾಗೆ ಮಾಡು ಎಂದು ಪ್ರಾರ್ಥಿಸಿದರೇವಿನಾ, ಪ್ರಾಕೃತನೇತ್ರಗಳನ್ನು ದಯ
ಪಾಲಿಸೆಂದು ಪ್ರಾರ್ಥಿಸಲಿಲ್ಲವು; ಈ ಲೋಕದ ಹೇಯವಸ್ತುಗಳನ್ನು ನೋಡದಹಾಗೆ
ಮಾಡಿದುದು ಶ್ರೀಶನ ಕರುಣೆಯೆಂದೇ ಭಾವಿಸಿದರು. ಕೂರೇಶರು ಅನಂತರ
ತಮ್ಮ ಗುರುವಿನ ಸಾನ್ನಿಧ್ಯವನ್ನು ಹೊಂದಿ, ತಾವು ಮಾಡಿದ ಸ್ತವವನ್ನು ಓದಿಸಿ
ಹೇಳಿ, ತಮಗೆ ಪ್ರಾಪ್ತವಾದ ದಿವ್ಯ ಚಕ್ಷುಸ್ಸಿನ ವಿಷಯವನ್ನು ಅರಿಕೆ ಮಾಡಿಕೊಂ
ಡರು. ಇದಕ್ಕೆ ಯತಿವರ್ಯರು ಪ್ರೀತರಾಗದೆ, ಶಿಷ್ಯರನ್ನೂ ಕರೆದುಕೊಂಡು

ಕಾಂಚೀಪುರಕ್ಕೆ ಬಂದು ಶ್ರೀ ವರದನಲ್ಲಿ ಶರಣಾಗತಿಯನ್ನನುಷ್ಠಿಸಿ, ಶ್ರೀಕೂರೇಶರಿಗೆ ಪ್ರಾಕೃತನೇತ್ರವನ್ನೂ ದಯಪಾಲಿಸಬೇಕೆಂದು ಪ್ರಾರ್ಥಿಸಲಾಗಿ, ತಮ್ಮ ಆಚಾರ್ಯರನ್ನೂ ಅವಲೋಕಿಸುವ ಪುಣ್ಯವು ತಮಗೆ ಶ್ರೀವರದನ ಕೃಪೆಯಿಂದುಂಟಾಯಿತೆಂದು ಕೂರೇಶರು ಹರ್ಷಚಿತ್ತರಾದರೆಂಬುದು ವೃತ್ತಾಂತವು. ತಮಗೆ ಕಣ್ಣು ನಷ್ಟವಾದುದೂ ಕೂಡ ಭಗವದನುಗ್ರಹವಾಗಿಯೇ ಶ್ರೀ ಕೂರೇಶರು ಭಾವಿಸಿ, ಪ್ರಾಕೃತ ಚಕ್ಷುಸ್ಸನ್ನು ಪ್ರಾರ್ಥಿಸದೇ ಇದ್ದುದರಿಂದ, **ಇದು ಆಳ್ವಾನುಳ್ಳಿಟ್ಟಾರ್ ಪಕ್ಕಲಿಲೇ ಪ್ರಸಿದ್ಧಮ್** ಎಂದು ಹೇಳಿರುತ್ತಾರೆ. **ಇಲ್ಲಿ ಉಳ್ಳಿಟ್ಟಾರ್** - ಮೊದಲಾದವರು ಎಂದು ಹೇಳಿರುವದರಿಂದ, ನಾರಾಯಣ ಮುನಿ ಮೊದಲಾದವರು ಸೂಚಿಸಲ್ಪಟ್ಟರೆಂದು ಸಾರಪ್ರಕಾಶಿಕೆಯವರು ಹೇಳುತ್ತಾರೆ. ಶ್ರೀ ನಾರಾಯಣಾರ್ಯರು ವ್ಯಾಧಿಯನ್ನು ಅನುಭವಿಸುತ್ತಿರುವಾಗ, ರಾಜನು ಅವರಲ್ಲಿಗೆ ಬಂದು ವ್ಯಾಧಿಯು ಹೇಗಿದೆಯೆಂದು ಪ್ರಶ್ನಿಸಲಾಗಿ, ಪ್ರಾರಬ್ಧವನ್ನು ಕಳಿಸುವದಕ್ಕಾಗಿ ಭಗವಂತನಿಂದ ಮಾಡಲ್ಪಟ್ಟ ಉಪಕಾರರೂಪವಾದುದು ಎಂದು ಹೇಳಿದರೆಂಬ ವೃತ್ತಾಂತ ಉಂಟು.

ಸಾಧಾರಣ ಜನಗಳಿಗಾದರೆ ಇಂತಹ ದುಃಖವೂ, ದಂಡನೆಯೂ ಉಪಾಧ್ಯಾಯರೂಪವಾಗಿ ಪರಿಣಮಿಸಿ, ಪರಮಾತ್ಮನಲ್ಲಿ ಮನಸ್ಸನ್ನು ಇಡಲು ಸಹಕಾರಿಯಾದೀತೆಂದೇನೋ ಒಪ್ಪಬಹುದು. ಆದರೆ ದಿವ್ಯ ಸೂರಿಗಳಹಾಗೆ ಪ್ರವೃತ್ತಿಗಳುಳ್ಳ, ಯಾವಾಗಲೂ ಪರಮಾತ್ಮನನ್ನೇ ಸ್ಮರಿಸುತ್ತಿರುವ ಮಹಾ ಭಾಗವತೋತ್ತಮರಾದ ಕೂರೇಶ ಪ್ರಭೃತಿಗಳಲ್ಲಿ, ಇಂತಹ ಕ್ಲೇಶಗಳು ಉಪಾಧ್ಯಾಯಸ್ಥಾನೀಯಗಳು ಎಂದು ಹೇಳಲು ಹೇಗೆ ಸಾಧ್ಯವು? ಅಂತವರುಗಳಿಗೆ ಉಪಾಧ್ಯಾಯರು ಬೇಕಿಲ್ಲವಲ್ಲಾ ಎಂದರೆ ಅಂತವರಿಗೂ ಕೂಡ ಹೇಗೆ ಪ್ರಯೋಜನವೆಂಬುದನ್ನು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ.

**ಮಹಾ ಭಾಗವತೋತ್ತಮರಿಗೂ ಕೂಡ ದುಃಖಾನುಭವ ಉಂಟುಮಾಡುವದರಲ್ಲೇನು ಪ್ರಯೋಜನವು? ಎಂಬ ಶಙ್ಕಾ ಸಮಾಧಾನವು.**

---

ಇಂತಹ ಭಾಗವತೋತ್ತಮರುಗಳ ವಿಷಯದಲ್ಲಿ ಅನುಚಿತ ಪ್ರವೃತ್ತಿಯನ್ನು ತಪ್ಪಿಸಿ ಮನಸ್ಸು ಪರಮಾತ್ಮನಲ್ಲಿ ನಿಲ್ಲುವದಕ್ಕಾಗಿ ಅಲ್ಲವು; ಏಕೆಂದರೆ ಆ ಭಾಗವತೋತ್ತಮರು ಪರಮಾತ್ಮನ ಚಿನ್ತನೆಯಲ್ಲೇ ಯಾವಾಗಲೂ ಇರುವರು; ಇನ್ನು ಏತಕ್ಕೆಂದರೆ,—ಐಹಿಕಗಳಲ್ಲಿ ನಿರ್ವೇದವು ಸಂಪೂರ್ಣವಾಗಿ ಜನಿಸಿ, ತನ್ಮೂಲಕವಾಗಿ ತ್ವರಾತಿಶಯ ಉಂಟಾಗುವದಕ್ಕಾಗಿ ಇಂತಹ ದುಃಖಾನುಭವವೆಂದು ಉಪದೇಶಿಸುತ್ತಾರೆ. **ಅಪಚಾರಙ್ಗಳೈಯುಮ್**-ಭಗವಂತನೇ ಮೊದಲಾದವರುಗಳ ವಿಷಯ

**ಮಹಾಭಾಗವತಾನಾಮಪಿ ದುಃಖಾನುಭವಜನನಸ್ಯ ಕಿಂ ಪ್ರಯೋಜನ ಮಿತ್ಯತ್ರಾಹ.**

**ಅಪಚಾರಙ್ಗಳೈಯುಮ್ ತತ್ಫಲಙ್ಗಳೈಯುಮ್ ಶಿಲರ್ಕ್ಕುಕ್ಕಾಟ್ಟಿ ಮರ್ರೈಕ್ಕಿರವಿದುವುಮ್ (೧) "ಪಾಂಬೋಡೊರು ಕೂರೈಯಿಲೆ ಪಯಿನ್ರಾರ್ಪೋಲೆ ತಾಙ್ಗಾದುಳ್ಳಮ್ ತಳ್ಳುಮೆನ್ ತಾಮರೈಕ್ಕಣ್ಣಾ" ಎನ್ರು ನಿರ್ವೇದಪೂರ್ತ್ತಿಯೈಕ್ಕಡುಗಪ್ಪಿರಪ್ಪಿತ್ತು ತಾನಿಶೆನ್ರ ಸಂಸಾರನಿವರ್ತನತ್ತೈಕ್ಕಡುಗ ಇವನೆಯುಮಿಶೈವಿಕ್ಕೈಕ್ಕಾಗವತ್ತನೈ.**

---

ದಲ್ಲಿ ಅಪಚಾರಗಳನ್ನೂ, **ತತ್ಫಲಙ್ಗಳೈಯುಮ್** - ಅಂತಹ ದುಷ್ಕರ್ಮಗಳಿಂದ ಪ್ರಾಪ್ತವಾಗುವ ಫಲಗಳನ್ನೂ, **ಶಿಲರ್ಕ್ಕು ಕಾಟ್ಟಿ** - ಕೆಲವರಿಗೆ ತೋರ್ಪಡಿಸಿ, **ಮರ್ರೈಕ್ಕಿರವಿದುವುಮ್** - ಅನಂತರ ಹೋಗಲಾಡಿಸುವದೂ ಸಹ (೧) "**ಪಾಂಬೋಡು** - ಘಟಸರ್ಪದೊಂದಿಗೆ, **ಒರುಕೂರೈಯಿಲೇ** - ಒಂದೇ ಗುಡಿಸಲಿನಲ್ಲಿ, **ಪಯಿನ್ರಾರ್ಪೋಲ್** - ವಾಸಮಾಡುತ್ತಿರುವ ಹಾಗೆ, **ಎನ್** - ನನ್ನ, ಹಿಂದೆ ಅನೇಕಜನ್ಮಗಳ ಕ್ಲೇಶವೇ ಸಾಲದಾಗಿರುವ ನನ್ನ, **ತಳರುಮ್** - ಚಂಚಲವಾದ, **ಉಳ್ಳಮ್** - ಮನಸ್ಸು, **ತಾಙ್ಗಾದು** - ತಡೆದುಕೊಳ್ಳಲಾರದು, **ಓ ತಾಮರೈಕ್ಕಣ್ಣಾ** - ಆಶ್ರಿತರನ್ನು ಪರಮ ದಯೆಯಿಂದ ಕಟಾಕ್ಷಿಸುವ, "**ತಂಪದ್ಮದಳ ಪತ್ರಾಕ್ಷಂ**" ಎಂದು ಸೀತೆಯಿಂದ ಶ್ಲಾಘಿಸಲ್ಪಟ್ಟ ಕಮಲದಳದೋಪಾದಿಯಲ್ಲಿರುವನೇತ್ರಗಳುಳ್ಳವನೇ" ಈ ಪಾಶುರದ ಪೂರ್ವಾರ್ಧವೇನಂದರೆ- **ತೂಙ್ಗಾರ್ ಪಿರವಿಕ್ಕಳಿನ್ನುಮ್ಪುಕಪ್ಪೆಯ್ದುವಾಙ್ಗಾಯೆನ್ರು ಶಿನ್ದಿತ್ತು ನಾನದರ್ಕಞ್ಜಿ**" ಎಂದಿರುತ್ತದೆ; ಇದರರ್ಥವೇನೆಂದರೆ. **ಎನ್**-ನನಗೆ ಸ್ವಾಮಿಯಾದ, **ತಾಮರೈಕ್ಕಣ್ಣಾ** - ಪ್ರಪನ್ನರನ್ನು ದಿವ್ಯಕಟಾಕ್ಷದಿಂದೀಕ್ಷಿಸುವ "**ಕಪ್ಯಾಸಂ**" ಎಂಬ ಶ್ರುತಿಯಲ್ಲಿ ಹೇಳಿರುವಹಾಗೆ, ಆಗತಾನೆ ಸೂರ್ಯಕಿರಣದಿಂದ ವಿಕಸಿತವಾದ ತಾವರೇ ಪುಷ್ಪದಹಾಗೆ ಇರುವ ಕಣ್ಣುಳ್ಳ ಸರ್ವೇಶ್ವರನೇ, **ಇನ್ನುಮ್** ಇನ್ನುಮುಂದಕ್ಕೂ, **ತೂಙ್ಗು ಆರ್** - ತಮಃ ಪ್ರಚುರವಾದ, **ಪಿರವಿಗಳ್** - ಜನ್ಮಗಳಲ್ಲಿ, **ಪುಹಪ್ಪೆಯ್ದು** – ಹೋಗುವಹಾಗೆ ಮಾಡುವುದನ್ನು **ವಾಙ್ಗಾಮ್ ಎನ್ರು**- ನನ್ನ ಅಪರಾಧಗಳ ಮೂಲಕ ತಪ್ಪಿಸಲಾರೆ ಎಂದು, **ಅದರ್ಕು** ಅಂತಹ ಜನ್ಮಸಂತತಿಗೆ, **ಅಂಜಿ** - ಭಯಪಟ್ಟು, **ಪಾಂಬೋಡು** – ಘಟಸರ್ಪದೊಂದಿಗೆ **ಒರುಕೂರೈಯಿಲೇ** - ಒಂದೇ ಗುಡಿಸಿಲಿನಲ್ಲಿ **ಪಯಿನ್ರಾರ್ ಪೋಲ್** - ವಾಸಮಾಡುವವರ ಹಾಗೆ, **ಉಳ್ಳಮ್** – ನನ್ನ ಮನಸ್ಸಾದುದು, **ತಾಙ್ಗಾದು** - ಸ್ಥಿರವಾಗಿ ನಿಲ್ಲಲಾರದೆ, **ತಳ್ಳುಮ್** – ಅನೇಕ ಜನ್ಮಗಳನ್ನೆತ್ತಿ ಕ್ಲೇಶಪಟ್ಟದ್ದೇ ಸಾಕಾಗಿತ್ತು ; ಈಗ

---

(೧) ಪೆರಿ. ತಿರು. ೧೧. ೮. ೩.

ಲಾದರೂ ಈ ಜನ್ಮದಲ್ಲಿ ಸ್ವಲ್ಪಮನಸ್ಸಿಗೆ ನೆಮ್ಮದಿಯುಂಟೋ ಎಂದರೆ, ಕ್ರೂರಗಳಾದ ಈ ದಶೇಂದ್ರಿಯಗಳಿಗೆ ಸಿಕ್ಕಿರುವದೂ, ಮತ್ತು ಕಳತ್ರ, ಸುತಾದಿಗಳಿಂದುಂಟಾದ ಕ್ಲೇಶಗಳಿಗೆ ಸಿಕ್ಕಿರುವದೂ, ಅತ್ಯನ್ತಭಯಾವಹವಾಗಿದೆ; ಹೇಗೆಂದರೆ ಘಟಸರ್ಪವು ವಾಸವಾಗಿರುವ ಮನೆಯಲ್ಲೇ ನಾನು ವಾಸವಾಗಿರುವಹಾಗೆ ಇರುತ್ತದೆ. ಕ್ಷೇತ್ರಜ್ಞನಾಗಿ ಈ ಕ್ಷೇತ್ರದಲ್ಲಿರುವದು ತನಗೆ ಅನುಕೂಲವೆಂದರೆ, ಅರಿಷಡ್ವರ್ಗಗಳು ಹಾವಿನೋಪಾದಿಯಲ್ಲಿ ಕಚ್ಚಿ ವಿಷವೇರಿ ಕುಣಿದಾಡುವಹಾಗೆ ಮಾಡುತ್ತವೆ. ಅಥವಾ ಚಂಚಲವಾದಮನಸ್ಸೇ ಒಂದು ಘಟಸರ್ಪವು. ಅದಕ್ಕೆ ದಶೇನ್ದ್ರಿಯಗಳೆಂಬ ಹತ್ತು ಹೆಡೆಗಳು. ಒಂದೊಂದು ಹೆಡೆಯಲ್ಲೂ ವಿಷಯರೂಪ ವಿಷವುಳ್ಳ ಹಲ್ಲುಗಳುಂಟು. ಎಲ್ಲಿ ಆ ವಿಷಯೋಪಭೋಗವೆಂಬ ವಿಷಹಲ್ಲಿನಿಂದ ಈ ಹಾವು ಕಚ್ಚಿಬಿಟ್ಟ ವಿಷವೇರಿ ಜರಾಮರಣ ಜನ್ಮ ಹೀಗೆ ಜನ್ಮಸಂತತಿಯುಂಟಾಗುತ್ತದೋ ಎಂಬ ಭಯದಿಂದ ನೆಲೆಗಾಣದೆ ಮನಸ್ಸು ಅಸ್ಥಿರವಾಗಿದೆ ಎಂಬ ಭಾವವು ತೋರಿಬರುತ್ತದೆ. ಇನ್ನೊಂದುಕಡೆಯಲ್ಲಿ ದಶೇಂದ್ರಿಯಗಳಿಗೆ ವಶವಾದ ಮನಸ್ಸನ್ನು ಹತ್ತು ತಲೆಗಳುಳ್ಳ ರಾವಣನೆಂದು ರೂಪಕಮಾಡಲ್ಪಟ್ಟಿರುತ್ತದೆ. - **"ದಶೇಂದ್ರಿಯಾನನಂ ಘೋರಂ ಯೋ ಮನೋರಜನೀಚರಮ್ । ವಿವೇಕಶರಜಾಲೇನ ಶಮಂ ನಯತಿ ಯೋಗಿನಾಮ್ ।** ಎಂಬುದು ಅನುಸಂಧೇಯವು. ವಿಭೀಷಣನಿಗೆ ರಾವಣಗೃಹವಾಸವು ದೊರೆತಹಾಗೆ ನನಗೂ ಹಾವಿನೊಂದಿಗೆ ವಾಸವು ದೊರೆತಿರುತ್ತದೆ. ವಿಭೀಷಣನಿಗೆ ಹೇಗೆ ರಾವಣನೊಂದಿಗೆವಾಸವು ಸರಿಬೀಳಲಿಲ್ಲವೋ, ಹಾಗೆಯೇ ನನಗೆ ಈ ಕ್ಷೇತ್ರ ವಾಸವು ಸರಿಬೀಳುವದಿಲ್ಲವು. ಓ ಪದ್ಮಪತ್ರನಿಭೇಕ್ಷಣನೇ, ನೀನು ಆ ವಿಭೀಷಣನನ್ನು **"ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ"** ಎಂದೂ, **"ಆನಯೈನಂ ಹರಿಶ್ರೇಷ್ಠ"** ಎಂದೂ ಹೇಳಿ, **ಲೋಚನಾಭ್ಯಾಂ ಪಿಬನ್ನಿವ"** ಎಂದು ಹೇಳಿರುವಹಾಗೆ, ನಿನ್ನ ಪುಂಡರೀಕ ಸದೃಶ ಲೋಚನದ ದಿವ್ಯ ಕಟಾಕ್ಷದಿಂದ ನೋಡಿದಹಾಗೆ, ನನ್ನನ್ನೂ **'ಮೈತ್ರೇಣೇಕ್ಷಸ್ವಚಕ್ಷುಷಾ"** ಎಂದು ಶ್ರುತಿಯಲ್ಲಿ ಹೇಳಿರುವಹಾಗೆ, ಕಟಾಕ್ಷಿಸುಎಂದು ತಾಮುರೈಕ್ಕಣ್ಣಾ ಎಂಬ ಸಂಬೋಧನೆಯು. " **ಎನ್ರು** - ಎಂಬದಾಗಿ **ನಿರ್ವೇದಪೂರ್ತಿಯೈ** - ಐಹಿಕದಲ್ಲಿ ವೈರಾಗ್ಯದ ಸಂಪೂರ್ಣತೆಯನ್ನು, **ಕಡುಗಪ್ಪಿರಪಿತ್ತು** - ಶೀಘ್ರವಲ್ಲಿಹುಟ್ಟಿಸಿ, **ತನಿಶೈನ್ದ** - ಪ್ರಣತರಕ್ಷಣೆಯಲ್ಲಿ ಕಂಕಣಬದ್ಧನಾದ ತಾನು ಸಜ್ಕಲ್ಪಿಸಿದ, **ಸಂಸಾರನಿವರ್ತನತ್ತೈ** – ಸಂಸಾರದಿಂದ ಬಿಡುಗಡೆಯನ್ನು, **ಕಡುಗ**. ಶೀಘ್ರವಾಗಿ, **ಇಪನೆಯು ಮಿಶೈವಿಕ್ಕೈಕಾಹವತ್ತನ್ನೈ**. ಈ **ಮೋಕ್ಷಾಧಿಕಾರಿಯು** ಅಪೇಕ್ಷಿಸುವಹಾಗೆ ಮಾಡುವದಕ್ಕಾಗಿ ಮಾತ್ರವೇಎಂದುಭಾವಿಸತಕ್ಕದ್ದು. ತುಂಬಾಕಾಲ ಹೀಗೆ ಈ ಸಂಸಾರದಲ್ಲೇ ಕ್ಲೇಶಪಡದಹಾಗೆ ಕ್ಷಿಪ್ರದಲ್ಲೇ ದೇಹಾವಸಾನಮೂಲಕ ಮೋಕ್ಷವನ್ನು ಕೊಡು

**ಇನ್ನಿಡತ್ತಿಲ್ ಪ್ರತಿಕೂಲಾನುಭವಾಂಶವುಮ್ ದುಷ್ಕರ್ಮಫಲಮ್ ; ಇದು ಶಿಕ್ಷಣಮಾಗಿರುದುವುಮ್, ಪ್ರಾಯಶ್ಚಿತ್ತತ್ತಿಲೇ ಮೂಟ್ಟುಗಿರದುವುಮ್,**

---

ಎಂದು ಪ್ರಾರ್ಥಿಸುವದಕ್ಕಾಗಿ ಇಂತಹ ಅಲ್ಪಕ್ಲೇಶಗಳು ಸ್ವಾಮಿಸಙ್ಕಲ್ಪದಿಂದ ಪ್ರಾರಬ್ಧ ಕರ್ಮಾನುಗುಣವಾಗಿ ಪ್ರಾಪ್ತವಾಗುತ್ತವೆ. ಇದೀಗ ಪ್ರಯೋಜನವು; ಇಂತಹ ಅಲ್ಪದಂಡನೆಯೂಕೂಡ ಕಾಕನ ಒಂದು ಕಣ್ಣನ್ನು ತೆಗೆದುಹಾಕಿದಹಾಗೂ ಗಜರಾಜನಿಗೆ ನಕ್ರನಿಂದುಂಟಾದ ಕ್ಲೇಶದಹಾಗೂ, ಪಾಂಡವರಿಗುಂಟಾದ ಕ್ಲೇಶಗಳ ಹಾಗೂ, ಅಂಬರೀಷನಿಗೆ ದೂರ್ವಾಸರಿಂದುಂಟಾದ ಕ್ಲೇಶಗಳಹಾಗೂ, ಅನುಗ್ರಹ ರೂಪವಾದುದೆಂದೇ ಭಾವಿಸತಕ್ಕದ್ದೆಂಬ ತಾತ್ಪರ್ಯವು.

ಹಾಗಾದರೆ ಇಂತಹ ಕ್ಲೇಶಗಳನ್ನು ಸರ್ವೇಶ್ವರನು ತಾನೇ ಸ್ವತಃ ಸಙ್ಕಲ್ಪಿಸಿ ಉಂಟುಮಾಡುತ್ತಾನೆಯೋ? ಹಾಗೆ ಉಂಟುಮಾಡಿದರೆ ವೈಷಮ್ಯ ನೈರ್ಘೃಣ್ಯಾದಿಗಳು ಆತನಿಗೆ ಪ್ರಾಪ್ತವಾಗುವದಿಲ್ಲವೇ? ಕ್ಲೇಶಾದಿಗಳು, ಭಗವಂತನಿಂದುಂಟಾದ ನಿಗ್ರಹ ಸಙ್ಕಲ್ಪರೂಪ ದುಷ್ಕರ್ಮ ಫಲವು. ಹೀಗಿರುವಾಗ ಭಾಗವತನಿಗೆ ಉಂಟಾಗುವ ಕ್ಲೇಶದ ಫಲವು, ನಿರ್ವೇದಪೂರ್ತಿ ಪ್ರಯೋಜನವುಳ್ಳದು ಎಂದು ಹೇಳಿದುದು ಹೇಗೆ ಸಮಂಜಸವೆಂಬ ಆಕ್ಷೇಪವು ತಪ್ಪಲಿಲ್ಲವು. ಆದುದರಿಂದ ಮುಂದೆ ಇಂತಹ ಆಕ್ಷೇಪಕ್ಕೂ ಸಮಾಧಾನವನ್ನು ಹೇಳುತ್ತಾರೆ. ಹಿಂದೆ ಹೇಳಿದುದನ್ನೆಲ್ಲಾ ಸಙ್ಗ್ರಹಿಸಿ, ಈ ಕ್ಲೇಶಾನುಭವದಲ್ಲಿ ಆಕಾರತ್ರಯವೂ ಉಂಟೆಂದು ಹೇಳುತ್ತಾರೆ. ಕ್ಲೇಶ ಪ್ರಾಪ್ತಿ ಏನೋ ದುಷ್ಕರ್ಮಫಲವೇ, ಅದರಲ್ಲಿ ಸಂಶಯವಿಲ್ಲವು; ಇದೊಂದು ಆಕಾರವು. ಅಧಿಕಾರಿಗೆಶಿಕ್ಷೆಯಾಗಿ ಪರಿಣಮಿಸಿ,ಅದರಿಂದ ಐಹಿಕ ವಿರಕ್ತಿಯುಂಟಾಗಿ ಪರಮಾತ್ಮನಲ್ಲಿ ಮನಸ್ಸುಂಟಾಗುವದರ ಮೂಲಕ ಅನುಗ್ರಹರೂಪವು;ಇದು ಎರಡನೆಯ ಆಕಾರವು; ಇದರಿಂದ ಸಜಾತೀಯಾಪರಾಧಗಳನ್ನು ಪುನಃ ಮಾಡದಿರೋಣವು ; ಇದೂ ಅನುಗ್ರಹವೇ ; ಹೀಗೆ ಮೂರು ಆಕಾರಗಳನ್ನೂ ಭಾವಿಸುದಾದರೆ ಯಾವ ಶಙ್ಕೆಗಳಿಗೂ ಅವಕಾಶವಿಲ್ಲವೆಂದು ಭಾವಿಸಿ, ಆ ಮೂರು ಆಕಾರಗಳನ್ನೂ ಮುಂದಿನ ವಾಕ್ಯದಿಂದ ತಿಳಿಸುತ್ತಾರೆ.—ಇನ್ನಿಡತ್ತಿಲ್-ಈ ಸಂದರ್ಭದಲ್ಲಿ, **ಪ್ರತಿಕೂಲಾನುಭವಾಂಶಮ್** - ದುಃಖಾನುಭವರೂಪವಾದುದು, **ದುಷ್ಕರ್ಮ ಫಲಮ್** - ಈತನ ದುಷ್ಕರ್ಮವಾದ ಪ್ರಾರಬ್ಧಾಂಶದ ಫಲವು, ಹೀಗೆ ತಿಳಿಯುವದರಿಂದ ಪರಮಾತ್ಮನಿಗೆ ವೈಷಮ್ಯ ನೈರ್ಘೃಣ್ಯರೂಪ ಅಪರಾಧವನ್ನು ಆರೋಪಿಸಿದಂತಾಗುವದಿಲ್ಲವು. **ಇದು ಶಿಕ್ಷಣಮಾಗಿರುದುವುಮ್** – ನಿರ್ವೇದವನ್ನುಂಟುಮಾಡುವದರ ಮೂಲಕ ಪುನಃ ಆ ವಿಧವಾದ ಅಪರಾಧವನ್ನು ಮಾಡದ ಹಾಗೆ ಶಿಕ್ಷಣರೂಪವಾಗಿರುವದೂ ಮತ್ತು, **ಪ್ರಾಯಶ್ಚಿತ್ತತ್ತಿಲೆ ಮೂಟ್ಟುಗಿರದುವುಮ್** - ಅಪರಾಧ ಸಂಘಟನೆಯುಂಟಾದ

**ಉಪಾಯಫಲಮ್. ಇವತ್ತಿಲ್ ಶಿಕ್ಷಣಾದಿಗಳ್ ಪ್ರಾರಬ್ಧಸುಕೃತ ವಿಶೇಷ ಫಲಮಾಯುಮ್ ವರುಮ್.**

---

ಸಂದರ್ಭದಲ್ಲಿ, ಇಂತಹ ದುಃಖವು ಎಲ್ಲಿ ಉಂಟಾಗುತ್ತದೋ ಎಂಬ ಭೀತಿಯಿಂದ ಪ್ರಾಯಶ್ಚಿತ್ತವನ್ನು ನಡೆಸುವದೂ, ಹೀಗೆ ಇವೆರಡೂ **ಉಪಾಯಫಲಮ್** - ಉಪಾಯಾನುಷ್ಠಾನದಿಂದುಂಟಾದ ಅನುಗ್ರಹರೂಪ ಫಲವು. ಅದು ಹೇಗೆಂದರೆ—ಶರಣಾಗತಿಯನ್ನು ಅನುಷ್ಠಿಸಿ ಬುದ್ಧಿಪೂರ್ವಕವಾಗಿ ಅಪರಾಧಗಳನ್ನು ಮಾಡಿದರೆ ಅವುಗಳಿಂದ ಮುಂದಕ್ಕೆ ಉಪರತಿಯುಂಟಾಗುವದಕ್ಕಾಗಿ ಅಲ್ಪಶಿಕ್ಷೆಯನ್ನು ಭಕ್ತಾನುಗ್ರಹಶಾಲಿಯು ವಿಧಿಸಬಹುದೆಂದೂ ಭಾವಿಸಬಹುದು. ಅಥವಾ ಪ್ರಾಯಶ್ಚಿತ್ತವು ಹೇಗೆ ಕೃತಾಪರಾಧದ ನಿವೃತ್ತಿಯನ್ನುಂಟುಮಾಡುತ್ತದೋ, ಹಾಗೆ ಪ್ರಪನ್ನನಿಗೆ ಈ ಶಿಕ್ಷೆಯನ್ನು ಬುದ್ಧಿಪೂರ್ವೋತ್ತರಾಘದ ನಿವಾರಣರೂಪಪ್ರಾಯಶ್ಚಿತ್ತವೆಂದಾಗಲಿ ಭಾವಿಸಬಹುದೆಂಬ ತಾತ್ಪರ್ಯವು. ಇವನ್ನೇ ಸಙ್ಗ್ರಹವಾಗಿ, ಇದು **ಶಿಕ್ಷಣಮಾಗಿರುದುವುಮ್, ಪ್ರಾಯಶ್ಚಿತ್ತತ್ತಿಲೇ ಮೂಟ್ಟುಗಿರುದುವುಮ್, ಉಪಾಯಫಲಮ್** - ಎಂದು ಅಪ್ಪಣೆ ಕೊಡಿಸಿರುತ್ತಾರೆ.-ಆದುದರಿಂದ ತಾತ್ಪರ್ಯವೇನೆಂದರೆ-ಪ್ರಪನ್ನನ ವಿಷಯದಲ್ಲಿ ಒಂದು ಶಿಕ್ಷೆಯೇ ನಿಗ್ರಹವೂ ಆಗಬಹುದು, ಅನುಗ್ರಹವೂ ಆಗಬಹುದು ಎಂಬುದು. ಈ ಪ್ರಪನ್ನನು ಮಾಡಿರುವ ಬುದ್ಧಿಪೂರ್ವೋತ್ತರಾಘಕ್ಕೆ ಪುನರ್ಜನ್ಮವು ಸರಿಯಾದ ಶಿಕ್ಷೆಯಾಗಿರುವಾಗ ಪ್ರಪನ್ನನೆಂದು ಭಾವಿಸಿ, ಅಂತಹ ಪುನರ್ಜನ್ಮವನ್ನು ತಪ್ಪಿಸಿ, ಈ ಅಲ್ಪ ಶಿಕ್ಷೆಯಿಂದ "**ಖಂಜಾಭವಂತಿ ಕಾಣಾಭವಂತಿ**" ಎಂದು ಹೇಳಿರುವಹಾಗೆ ಅಲ್ಪವಾಗಿ ಶಿಕ್ಷಿಸಿಬಿಟ್ಟು, ದೇಹಾವಸಾನದಲ್ಲಿ ತನ್ನ ಪ್ರಾಪ್ತಿಯುಂಟಾಗುವಹಾಗೆ ಮಾಡುವದು ಅನುಗ್ರಹವಲ್ಲವೇ ? ಎಂಬ ಭಾವವು.

ಹೀಗೆ ಇವೆರಡೂ ಉಪಾಯಾನುಷ್ಠಾನದಿಂದ ಪ್ರಾಪ್ತವಾಗುವ ಫಲವೆಂದು ಹೇಳಿದರೆ, ಇನ್ನೊಂದು ಪೂರ್ವಪಕ್ಷವೂ ತಪ್ಪಿದ್ದಲ್ಲವು; ಹೇಗೆಂದರೆ—ಪ್ರತಿಕೂಲಾನುಭವಾಂಶವೇನೋ ಪ್ರಾರಬ್ಧದ ದುಷ್ಕೃತಾಂಶವೆಂದು ಹೇಳಲು ಏನೂ ಅಭ್ಯಂತರವಿಲ್ಲವು. ಆದರೆ ಅನುಗ್ರಹಪ್ರಾಯಶ್ಚಿತ್ತಗಳೆಂಬ ಆಕಾರಗಳು ಉಪಾಯಫಲವೆಂದು ಹೇಳಿಬಿಟ್ಟರೆ, ಪ್ರಾರಬ್ಧಾಂಶದ ಸುಕೃತಕ್ಕೆ ನೈರರ್ಥಕ್ಯವನ್ನು ಹೇಳಬೇಕಾಗುತ್ತದೆ ಎಂಬುದು, ಒಂದು ಆಕ್ಷೇಪವು. ಅನುಗ್ರಹವೆಲ್ಲಾ ಹಿಂದಿನ ಸುಕೃತವಾಗಿರುವದರಿಂದ ಸುಕೃತಕ್ಕೇನೂ ಫಲವಿಲ್ಲವು, ದುಷ್ಕೃತಕ್ಕೆಮಾತ್ರ ಫಲವುಂಟೆಂದು ಹೇಳಿದಂತಾಯಿತು; ಇದು ಇನ್ನೊಂದು ಆಕ್ಷೇಪವು, ಹೀಗೆ ಈ ಎರಡು ಆಕ್ಷೇಪಕ್ಕೂ "**ಇವತ್ತಿಲ್**" ಎಂದಾರಂಭಿಸಿದ ವಾಕ್ಯದಿಂದ ಸಮಾಧಾನವನ್ನು ಹೇಳುತ್ತಾರೆ.— **ಇವತ್ತಿಲ್** - ಈ ಆಕಾರಗಳಲ್ಲಿ, **ಶಿಕ್ಷಣಾದಿಗಳ್** - ಶಿಕ್ಷೆಯೇ ಮೊದಲಾದುವುಗಳು

**ಸುಕೃತವಿಶೇಷಫಲ ಮಾಯುುವ್ ವರುಮ್** - ಸುಕೃತವಿಶೇಷಗಳಿಂದ ಈ ಅಲ್ಪಗಳಾದ ಶಿಕ್ಷಾರೂಪ ಫಲಗಳಾಗಿಯೂ ಪ್ರಾಪ್ತವಾಗುವುವು. ಇಲ್ಲಿ ಆದಿಶಬ್ದದಿಂದ, ಪ್ರಾಯಶ್ಚಿತ್ತರೂಪಶರಣಾಗತಿಯು ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು. ಇಲ್ಲಿ ತಾತ್ಪರ್ಯವೇನೆಂದರೆ - ಪ್ರಾರಬ್ಧಾನುಭವಕ್ಕಾಗಿ ಸರ್ವೇಶ್ವರನು ನಮಗೆ ಈ ಕ್ಷೇತ್ರವನ್ನು ದಯಪಾಲಿಸಿರುತ್ತಾನೆ. ದುಷ್ಕೃತಾನುಭವಕ್ಕಾಗಿ ಭಗವನ್ನಿಗ್ರಹರೂಪ ಶಿಕ್ಷಣವು ಉಂಟಾಗುತ್ತದೆಂದು ಹೇಳಿ, ಪ್ರಪನ್ನನವಿಷಯದಲ್ಲಿ ಮೂರುವಿಧ ಆಕಾರವನ್ನು ಭಾವಿಸಬಹುದೆಂದು ಹೇಳಿದರು. ಪ್ರಾರಬ್ಧದಲ್ಲಿ ಸುಕೃತವೂ ಇರುತ್ತದೆ, ಇದಕ್ಕಾಗಿ ಈತನಿಗೆ ಸಾಧು ಸಮಾಗಮ, ಸದ್ಗುರುಪ್ರಾಪ್ತಿ, ತನ್ಮೂಲಕ ಉಪಾಯಾನುಷ್ಠಾನ ಮೊದಲಾದ ಸುಕೃತಫಲಗಳುಂಟಾಗತಕ್ಕದ್ದಿರುತ್ತದೆ. ಅದಕ್ಕಾಗಿ ಕರುಣಾಸಾಗರನು ಯಾವುದಾದರೂ ಒಂದು ದುಷ್ಕರ್ಮಕ್ಕಾಗಿ ಪ್ರಾಪ್ತವಾದ ಶಿಕ್ಷೆಯನ್ನು ಮೂಲ ಮಾಡಿಕೊಂಡು, ಅದು ಐಹಿಕ ಜಿಹಾಸೆಯುಂಟಾಗುವಹಾಗೆ ಮಾಡಿ, ಐಹಿಕಗಳನ್ನು ಧಿಕ್ಕರಿಸಿ, ಪರಮಾತ್ಮನಲ್ಲಿ ಮನಸ್ಸನ್ನಿಟ್ಟು, ತತ್ಪ್ರಾಪ್ತಿಗಾಗಿ ಉಪಾಯಾನುಷ್ಠಾನವನ್ನು ಮಾಡುವಹಾಗೆಮಾಡಿ, ಹೀಗೆ ಸುಕೃತ ವಿಶೇಷಫಲಕ್ಕಾಗಿಯೂ ಪ್ರಾಪ್ತವಾಗಬಹುದು ಎಂಬಭಾವವು. ಇದಕ್ಕೆದ್ರೌಪದಿ, ಸುಗ್ರೀವ, ವಿಭೀಷಣಾದಿಗಳೇ ನಿದರ್ಶನವು. ದ್ರೌಪದಿಗೆ ದುರ್ಯೋಧನ ಸಭೆಯಲ್ಲಿ ಮಾನಭಂಗವೂ, ಸುಗ್ರೀವನಿಗೆ ರಾಜ್ಯಕಳತ್ರ ವಿಯೋಗವೂ, ವಿಭೀಷಣನಿಗೆ ದುಷ್ಟನೊಂದಿಗೆ ವಾಸವೂ, ಸಭೆಯಲ್ಲಿ "ಧಿಕ್ಕುಲ ಪಾಂಸನಮ್" ಎಂಬ ನಿಷ್ಠುರೋಕ್ತಿ ಅವಮಾನಗಳೂ, ಕಾರಣಗಳಾಗಿ ತನ್ಮೂಲಕ ಭಗವದನುಗ್ರಹ ಪ್ರಾಪ್ತಿಯುಂಟಾಯಿತು. ಶ್ರೀ ವಸುದೇವ ದೇವಕಿಯರಿಗೆ ಬಂದ ದುಃಖರೂಪಶಿಕ್ಷೆಯು ಸರ್ವೇಶ್ವರನು ಪುತ್ರನಾಗಿಜನಿಸುವ ಮತ್ತು ಶತ್ರುನಿರಸನ ಉಂಟಾಗುವ, ಸುಕೃತಗಳಿಗೆ ಹೇತುವಾಯಿತು. ಹಾಗೆಯೇ ಪಾಂಡವರಿಗೆಉಂಟಾದ ಶಿಕ್ಷೆಗಳು ಭಗವದನುಗ್ರಹರೂಪ ಸುಕೃತಕ್ಕೆ ಹೇತುವಾಯಿತು. ಧ್ರುವನಿಗೆ ಉಂಟಾದ ಕ್ಲೇಶವು ಆತನಿಗೆ ಮಹತ್ತಾದಶ್ರೇಯಸ್ಸನ್ನುಂಟುಮಾಡಿತು. ಶ್ರೀ ರಾಮಚಂದ್ರಪ್ರಭುವಿಗೆ ಪ್ರಾಪ್ತವಾದ ವನವಾಸವು, "ವನವಾಸೋ ಮಹೋದಯಃ" ಎಂದು ಅವರೇ ಹೇಳಿಕೊಂಡಹಾಗೆ, ಅವರವಿಖ್ಯಾತಿಗೂ ಋಷಿಗಳಸಂರಕ್ಷಣೆಗೂ ಲೋಕಶ್ರೇಯಸ್ಸಿಗೂ ಹೇತುವಾಯಿತು; ಪ್ರಹ್ಲಾದನಿಗೆ ಪ್ರಾಪ್ತವಾದಶಿಕ್ಷೆಗಳು ಪರಮಾತ್ಮನಲ್ಲಿ ಐಕಾಂತಿಕಾತ್ಯಂತಿಕಭಕ್ತ್ಯುತ್ಪಾದನೆಗೆ ಹೇತುವಾಯಿತು. ಹೀಗೆ ಇತಿಹಾಸಗಳಿಂದ ನೂರಾರು ನಿದರ್ಶನಗಳನ್ನು ಆರಿಸಿ ತೆಗೆಯಬಹುದು. ಈ ವಾಕ್ಯವನ್ನು ಹಿಂದಿನವಾಕ್ಯವಾದ ಇನ್ನಿಡತ್ತಿಲ್ ಎಂಬ ಎರಡುವಾಕ್ಯವನ್ನು ಪ್ರಕರಣಾನುಗುಣವಾಗಿ ಅನ್ವಯಿಸುವಾಗ ತೋರಿಬರುವದೇನೆಂದರೆ, ಶಿಕ್ಷೆಯು ಕೃತೋಪಾಯನಿಗೆ ಅನುಗ್ರಹರೂಪವಾಗಿ ಪರಿಣಮಿಸಬಹುದೆಂದು ಹೇಳಿದರು. ಈ ವಾಕ್ಯದಲ್ಲಾದರೋ ಅಕೃತೋಪಾಯನಿಗೂ,

## ಪ್ರಪನ್ನ ಜನಸ್ಯ ಭಗವನ್ನಿಗ್ರಹಃ ಅನುಗ್ರಹ ಏವ

**ಪ್ರಾಣಾರ್ಥಿಯಾಯ್ ವಿಳುನ್ದ ಕಾಕತ್ತುಕ್ಕು ಪ್ಪಾ್ರಣನ್ನೈಕ್ಕೊಡುಕ್ಕೈಯಾಲೇ, ಅಙ್ಗುವಮ್ ಪ್ರಪತ್ತಿಫಲವಮ್ ಪೂರ್ಣಮ್ ದುಷ್ಪ್ರಕೃತಿಯಾನ**

ಕೃತೋಪಾಯರೂಪ ಸುಕೃತವು ಪ್ರಾರಬ್ಧರೀತ್ಯಾ ಉಂಟಾಗುವದಕ್ಕೂ, ಶಿಕ್ಷೆಯು ಹೇತುವಾಗಬಹುದೆಂಬುದು ಅಭಿಪ್ರಾಯವು. ಆದುದರಿಂದ ಈ ಎರಡನೆಯ ವಾಕ್ಯದಲ್ಲಿ ಹೇಳಿದುದು, ಶಿಕ್ಷೆಯು ನಿರ್ವೇದದ್ವಾರಾ, ಈತನಿಗೆ ಉಂಟಾಗಬೇಕಾಗಿದ್ದ ಉಪಾಯಪ್ರವೃತ್ತಿರೂಪ ಸುಕೃತಕ್ಕೂ ಕಾರಣವಾಗಬಹುದೆಂಬುದು ಮುಖ್ಯತಾತ್ಪರ್ಯವು. ಇದನ್ನೆಲ್ಲವನ್ನೂ ಮನಸ್ಸಿನಲ್ಲಿಟ್ಟೇ, ಕರುಣಾನಿಧಿಯ ಸುಸಙ್ಕಲ್ಪದಲ್ಲಿ ಪೂರ್ಣನಂಬಿಕೆಯನ್ನಿಟ್ಟು, "ವಿಪದ ಸ್ಸಂತು ನಶ್ಶಶ್ವತ್" ನನುಗೆ ವಿಪತ್ತುಗಳು ಪದೇ ಪದೇ ಉಂಟಾಗಲಿ ಎಂದು ಆಶಿಸಲ್ಪಟ್ಟಿತು. ಹೀಗೆ ಒಬ್ಬನಿಗೆ ದುಷ್ಕೃತಗಳಿದ್ದರೆ ದುಷ್ಕೃತಮೂಲಕ ಶಿಕ್ಷೆಯನ್ನುಂಟುಮಾಡಿ, ಅದರ ಫಲವಾಗಿ ವೈರಾಗ್ಯವನ್ನು ಹುಟ್ಟಿಸಿ, ಸಾಧು ಸಮಾಗಮ, ಆಚಾರ್ಯಪ್ರಾಪ್ತಿ, ಸಾಧನಾನುಷ್ಠಾನಗಳನ್ನುಂಟುಮಾಡುತ್ತದೆ.

### ಪ್ರಪನ್ನಜನಕ್ಕೆಮಾಡುವ ಭಗವಂತನ ನಿಗ್ರಹವು ಅನುಗ್ರಹವೇ.

ಉಪಾಯಾನುಷ್ಠಾನಮಾಡಿದವನಿಗೆ ಶಿಕ್ಷೆಯೂ ಅನುಗ್ರಹವೆಂದು ಹೇಳಲ್ಪಟ್ಟಿತಲ್ಲಾ, ಕಾಕಾಸುರ ವೃತ್ತಾಂತದಲ್ಲಿ ಹಾಗೆ ತೋರಿಬರುವದಿಲ್ಲವಲ್ಲಾ? ಅತನ ಒಂದು ಕಣ್ಣನ್ನು ಬ್ರಹ್ಮಾಸ್ತ್ರಕ್ಕೆ ತುತ್ತಾಗಿಮಾಡಿ ತೆಗದು ಹಾಕಿದುದುಹೇಗೆ ಅನುಗ್ರಹವಾದೀತು? ಇದರಿಂದ ಶರಣಾಗತಿಗೆ ಸಂಪೂರ್ಣವಾಗಿ ರಕ್ಷಿಸುವ ವ ಹಾತ್ಮೆ ಯಿಲ್ಲವೆಂದಾಗಲಿಲ್ಲವೋ? ಎಂದರೆ ಈ ಎರಡು ಆಕ್ಷೇಪಣೆಗೂ ಕಾರಣವಿಲ್ಲವೆಂದು ಉಪಪಾದಿಸಿ ಹೇಳುತ್ತಾರೆ. ಅದು ನಿಗ್ರಹವಲ್ಲವು, ಅನುಗ್ರಹವೇ ಎಂದೂ, ಶರಣಾಗತಿಯ ಪ್ರಭಾವಕ್ಕೆ ಏನೊಂದೂ ನ್ಯೂನತೆಯಿಲ್ಲವೆಂದೂ ಹೇಳುತ್ತಾರೆ.— ಪ್ರಾಣಾರ್ಥಿಯಾಯ್ - ಕಾಕನು ಮಾಡಿದ ಮಹಾಪರಾಧಕ್ಕೆ ಕೋಪಿಸಿ, ದರ್ಭೆಯನ್ನು ಅಭಿಮಂತ್ರಿಸಿ ಬಿಟ್ಟುದುದು ಬ್ರಹ್ಮಾಸ್ತ್ರವಾಗಿ ಪರಿಣಮಿಸಿ, ಪ್ರಾಣಾಪಹಾರಿಯಾಗಿ ಅಟ್ಟಿಸಿಕೊಂಡು ಬಂದುದರಿಂದ ಆತನು ಪ್ರಾಣಾರ್ಥಿಯಾಗಿ, ಪ್ರಾಣವನ್ನು ಕಾಪಾಡು ಎಂದು ಪ್ರಾರ್ಥಿಸುವನಾಗಿ, ವಿಳುನ್ದ - ಬ್ರಹ್ಮರುದ್ರರೂ ತನ್ನ ತಂದೆಯಾದ ಇಂದ್ರನೂ ಯಾರೂ ತನ್ನನ್ನು ಕಾಪಾಡಲು ಅಸಮರ್ಥರೆಂದು ಹೇಳಿದನಂತರ (೧) "ಸಪಿತ್ರಾಚ ಪರಿತ್ಯಕ್ತ ಸ್ಸುರೈಶ್ಚ ಸಮಹರ್ಷಿಭಿಃ । ತ್ರೀನ್

ವಿಕ್ಕಾಕತ್ತುಕ್ಕು ಶಿಕ್ಷೈಯಗಾಗ ಒರುಕಣ್ಣೈ ವಾಙ್ಗಿವಿಟ್ಟದುವುಮ್ ನಿಗ್ರಹ ಮುನ್ರು, ಅನುಗ್ರಹ ವಿಶೇಷಮ್.

---

ಲೋಕಾ‌ನ್ ಸಂಪರಿಕ್ರಮ್ಯ ತಮೇವ ಶರಣಂಗತಃ" ಶ್ರೀರಾಮಚಂದ್ರಪ್ರಭು ವಿನ ಕಾಲಿನಮೇಲೆ, ವಿಳುನ್ದ - ಬಿದ್ದ, ಕಾಕತ್ತುಕ್ಕು - ಕಾಕಾಸುರನಿಗೆ, ಪ್ರಾಣ ನೈಕ್ಕೊಡುಕ್ಕೈಯಾಲೇ - ಪ್ರಾಣದಿಂದ ಉಳಿಸಿ ರಕ್ಷಿಸಿದುದರಿಂದ, ಪ್ರಪತ್ತಿ ಫಲಂ ಪೂರ್ಣಮ್ - ಶರಣಾಗತಿಯ ಫಲವು ಸಂಪೂರ್ಣವಾಗಿ ಪ್ರಾಪ್ತವಾಯಿತು. ಆ ಕಾಕನು ಶರಣಾಗತಿಯನ್ನು ಅನುಷ್ಠಿಸಿದುದು, ತನ್ನನ್ನು ಅಸ್ತ್ರದಿಂದ ಬಿಡಿಸಿ ಪ್ರಾಣದಾನವನ್ನು ಮಾಡಬೇಕೆಂಬದಾಗಿ; ಅದು ಸಂಪೂರ್ಣವಾಗಿಫಲಿಸಿರುವದರಿಂದ ಇಲ್ಲಿಯೂ ಶರಣಾಗತಿಯ ಮಾಹಾತ್ಮ್ಯಕ್ಕೆ ಏನೊಂದೂ ಕುಂದುಕವಿಲ್ಲವೆಂದು ಒಂದು ಆಕ್ಷೇಪಕ್ಕೆ ಸಮಾಧಾನವನ್ನು ಹೇಳಿದರು. ಮುಂದೆ ಆತನ ಒಂದು ಕಣ್ಣನ್ನು ತೆಗೆದು ಹಾಕಿಸುದು ಅನುಗ್ರಹ ವಿಶೇಷವೆಂಬುದನ್ನು ಸಮರ್ಥಿಸುತ್ತಾರೆ.—ದುಷ್ಪ್ರಕೃತಿಯಾನ - ತುಂಬಾ ಕೆಟ್ಟ ಸ್ವಭಾವವುಳ್ಳ, ಇಕ್ಕಾಕತ್ತುಕ್ಕು ಶಿಕ್ಷೈಯಾಗ - ಈ ಕಾಕಾಸುರನಿಗೆ ಶಿಕ್ಷಾರ್ಥವಾಗಿ, ಒರುಕಣ್ಣೈವಾಙ್ಗಿವಿಟ್ಟದುವುಮ್ - (೨) "ಹಿನಸ್ತು ದಕ್ಷಿಣಾಕ್ಷಿತ್ವಚ್ಛರ ಇತ್ಯಥಸೋಽಬ್ರವೀತ್" ಎಂದು ಹೇಳಿರುವಹಾಗೆ ದಕ್ಷಿಣ ಕಣ್ಣನ್ನು ಬ್ರಹ್ಮಾಸ್ತ್ರವು ತೆಗದುಹಾಕಿದುದೂ, ನಿಗ್ರಹಮುನ್ರು - ನಿಗ್ರಹವಲ್ಲವು, ಏಕಂದರೆ ಅದು ಅನುಗ್ರಹ ವಿಶೇಷಮ್ - (೩) "ವಧಾರ್ಹಮಪಿ ಕಾಕುತ್ಸ್ಥಃ ಕೃಪಯಾ ಪರ್ಯಪಾಲಯತ್" ವಧಿಸಲು ಅರ್ಹನಾಗಿದ್ದರೂ ಪ್ರಾಣದಿಂದ ಉಳಿಸಿ ರಕ್ಷಿಸು ಎಂದು ಬೇಡಿದುದರಿಂದ ತುಂಬಾ ಕೃಪೆಯಿಂದ ಶ್ರೀರಾಮಚಂದ್ರನು ರಕ್ಷಿಸಿದನು ಎಂದು ಮಹರ್ಷಿಯ ವಾಕ್ಯಾನುಸಾರವಾಗಿಯೇ, ಅನುಗ್ರಹ ವಿಶೇಷವು. ಸರಿಯಾಗಿ ನೋಡಿದರೆ ಅಂತಹ ಅಪರಾಧಕ್ಕೆ ವಧೆಯೂ ಅನಂತರ ಕಲ್ಪಾಂತನವರೆಗೂ ನರಕ ಪ್ರಾಪ್ತಿಯೂ ಅವನ್ನೆಲ್ಲಾ ತಪ್ಪಿಸಿ ಕಾಪಾಡಿದುದು ಅನುಗ್ರಹವೆಂಬುದರಲ್ಲಿ ಸಂದೇಹವಿಲ್ಲವೆಂಬ ತಾತ್ಪರ್ಯವು. ಈ ಸಂದರ್ಭದಲ್ಲಿ ಇನ್ನೊಂದು ಪೂರ್ವಪಕ್ಷವು ಉದಿಸಬಹುದು. ಹೇಗೆಂದರೆ ಶರಣಾಗತಿಯನ್ನನುಷ್ಠಿಸಿದರೆ, ಶರಣಾಗತಿಗೆ ಪೂರ್ವದಲ್ಲಿ ಮಾಡಿದ ಸರ್ವಪಾಪಗಳೂ ನಶಿಸಿ ಹೋಗಬೇಕಲ್ಲವೇ ? ಹಾಗಿಲ್ಲದೇ ಅವರಾಕ್ಕಾಗಿ ಒಂದು ಕಣ್ಣನ್ನು ಕಿತ್ತು ಹಾಕುವದು, ಸರಿಯೋ ? ಶರಣಾಗತಿಯ ಪ್ರಭಾವಕ್ಕೆ ಆಗಲೂ ಕುಂದಕವಿಲ್ಲವೋ? ಎಂಬ ಆಕ್ಷೇಪವನ್ನು ತಂದರೆ ಇದಕ್ಕೆ ಎರಡುವಿಧವಾಗಿ ಸಮಾಧಾನವನ್ನು ಹೇಳಬಹುದು; ಹೇಗೆಂದರೆ (೧) ಇಲ್ಲಿ ಗೋಪ್ತೃತ್ವವರಣವು ಪ್ರಾಣದಿಂದ ಕಾಪಾಡೋ

---

(೧) ರಾಮಾ. ಸುಂ ೩೬-೩೪, (೨) ರಾ, ಸುಂ. ೩೮, ೩೬,

ಣವು; ಅದು ಕೊಟ್ಟಿದ್ದಾಯಿತಾದುದರಿಂದ ಶರಣಾಗತಿಯು ವಿತಥವಾಗದೆ ಪೂರ್ಣವು, ಆದುದರಿಂದಲೇ **ಪ್ರಪತ್ತಿ ಫಲಂ ಪೂರ್ಣಂ** ಎಂದು ಸ್ವಾರಸ್ಯವಾಗಿ ಹೇಳಿರುತ್ತಾರೆ. (೨) ಈ ಕಾಕಾಸುರನು ಶರಣಾಗತಿಯನ್ನು ಮಾಡುವುದಕ್ಕೆ ಮೊದಲೇ ಬ್ರಹ್ಮಾಸ್ತ್ರವು ಪ್ರಯೋಗಿಸಲ್ಪಟ್ಟಿದರಿಂದ ಆ ಉಪಾಧಿಯು ಪ್ರಾಪ್ತವಾದುದರಿಂದ ಅದರಫಲ ಾಗಿ ಒಂದುಕಣ್ಣನ್ನು ಕಾಕನುಕೊಡಬೇಕಾಗಿಬಂತು; ಅದೂ ಅನುಗ್ರಹ ವಿಶೇಷವೇ; ಆ ಅಸ್ತ್ರಕ್ಕೆ ಆಹುತಿಯಾಗಿ ಒಂದು ಕಣ್ಣನ್ನುಕೊಟ್ಟು ಪ್ರಾಣವನ್ನು ಉಳಿಸಿದುದು ಅನುಗ್ರಹವೆಂಬುದರಲ್ಲಿ ಸಂದೇಹವಿಲ್ಲವು. "**ಮೋಘಂ ಕರ್ತುಂ ನಶಕ್ಯಂತು ಬ್ರಾಹ್ಮಮಸ್ತ್ರಂ**" ಅಸ್ತ್ರವನ್ನು ವ್ಯರ್ಥವಾದುದಾಗಿ ಮಾಡುವದು ಸಾಧ್ಯವಿಲ್ಲವು. ಶರಣಾಗತಿಗೆ ಪೂರ್ವಭಾವಿಯಾದ ಈ ಅಸ್ತ್ರಪ್ರಯೋಗರೂಪ ಉಪಾಧಿಯಿಲ್ಲದಪಕ್ಷದಲ್ಲಿ, ಕಾಕನ ಕಣ್ಣನ್ನು ಕೂಡ ಈಕೃಪಾನಿಧಿಯು ಎಂದಿಗೂ ತೆಗೆದುಹಾಕುತ್ತಿರಲಿಲ್ಲವು. ಶರಣಾಗತಿಗೆ ಪೂರ್ವಭಾವಿಯಾದ ಉಪಾಧಿಯು ಇದ್ದುದಾದರೆ ಅಲ್ಲಿವರೆಗೂ ಶರಣಾಗತಿಯಫಲವು ಸಿದ್ಧಿಸುವದಿಲ್ಲವೆಂಬುದಕ್ಕೆ, ಭರತಾಳ್ವಾರವರು ಶ್ರೀ ರಾಮಚಂದ್ರನಲ್ಲಿಗೆ ಕಾಡಿಗೆಬಂದು ರಾಜ್ಯದಲ್ಲಿ ಪಟ್ಟಾಭಿಷಿಕ್ತನಾಗುಎಂದು ಮಾಡಿದ ಶರಣಾಗತಿಯು, ೧೪ ವರ್ಷದವರೆಗೂ ಫಲಿಸಲಿಲ್ಲವು. ಏಕೆಂದರೆ ಕೈಕೇಯಿ ದಶರಥರಲ್ಲಿ ತಾನು ೧೪ ವರ್ಷಗಳಕಾಲ ವನವಾಸವನ್ನು ಮಾಡುತ್ತೇನೆಂದು ಒಪ್ಪಿಬಂದ ಉಪಾಧಿಯು ಪ್ರತಿಬಂಧಕವಾದುದರಿಂದ, ಒಡನೆಯೇ ಫಲಿಸದೆ ೧೪ ವರ್ಷಗಳು ಕಳೆದ ಮಾರನೆಯ ದಿನವೇ ಸಿದ್ಧಿಸಿತು. ಈ ಶರಣಾಗತಿಯನ್ನು ಮನಸ್ಸಿನಲ್ಲಿಟ್ಟೇ, ವಿಭೀಷಣಾಳ್ವಾರ್ "**ವಸ ತಾವದಿಹ ಪ್ರಾಜ್ಞ ಯದ್ಯಸ್ತಿ ಮಯಿ ಸೌಹೃದಮ್**" ಈ ಲಂಕೆಯಲ್ಲೇ ಸ್ವಲ್ಪ ಕಾಲ ತಮ್ಮ ಪ್ರಿಯನಾದ ಲಕ್ಷ್ಮಣನೊಂದಿಗೂ ಪ್ರಿಯಳಾದ ಪತ್ನಿಯೊಂದಿಗೂ ಇರಬೇಕೆಂದು ವಿಶೇಷವಾಗಿ ಪ್ರಾರ್ಥಿಸಲ್ಪಟ್ಟರೂ, ಸಮ್ಮತಿಸದೆ, "**ತಂತು ಮೇ ಭ್ರಾತರಂ ದ್ರಷ್ಟುಂ ಭರತಂ ತ್ವರತೇ ಮನಃ। ಮಾಂ ನಿವರ್ತಯಿತುಂ ಯೋಽಸೌ ಚಿತ್ರಕೂಟ ಮುಪಾಗತಃ। ಶಿರಸಾ ಯಾಚಿತ ಸ್ತಸ್ಯ ವಚನಂ ನಕೃತಂ ಮಯಾ**" ತಲೆಬಾಗಿ ನಮಸ್ಕರಿಸಿ ಶರಣಾಗತಿಯನ್ನನುಷ್ಠಿಸಿದ ತಮ್ಮನ ಮಾತನ್ನು ನಡೆಸಿಕೊಡಲಿಲ್ಲವೇ ಎಂದು ಹೇಳಿ, ಪರಿತಾಪಪಟ್ಟು, ಹೊರಟುಹೋಗಿ ಆತನ ಮನೋರಥವನ್ನು ಪೂರ್ಣಮಾಡಿದರೆಂಬ ವೃತ್ತಾಂತವು ಅನುಸಂಧೇಯವು. ಇದರಿಂದ ಶರಣಾಗತಿಯ ಪ್ರಭಾವಕ್ಕೆ ಏನೊಂದು ಕುಂದಕವೂ ಇಲ್ಲವೆಂಬುದು ಸಿದ್ಧವು ಇದೂ ಅಲ್ಲದೆ ಕಾಕನು ಮುಮುಕ್ಷುವಲ್ಲವು, ಇಂತಹ ದುಷ್ಪ್ರಕೃತಿಯು ತೊಲಗಿ ಮುಂದಕ್ಕೆ ಸದ್ವ್ಯಾಪಾರವುಳ್ಳವನಾಗಿ ತನ್ನನ್ನಾಶ್ರಯಿಸಲಿ ಎಂಬ ಪರಮ ಕೃಪೆಯಿಂದಲೂ ಒಂದು ಕಣ್ಣನ್ನು ತೆಗೆದುಹಾಕಿರಬಹುದೆಂಬ ಭಾವನೆಯೂ ಸಾಧ್ಯವು. ಎರಡು ಕಣ್ಣನ್ನೂ

ಆತನ ಅಂತಃಪುರದ್ರೋಹಮಾಡಿದ ಮಹಾಪರಾಧಕ್ಕಾಗಿ ಕಳೆಯಬಹುದಾಗಿದ್ದರೂ ಕಾಕನಿಗೆ ಗಮನ ಆಹಾರಾನ್ವೇಷಣಾದಿ ದೇಹಯಾತ್ರೆಗಳಿಗೆ ತೊಂದರೆಯೇನೂ ಆಗದಹಾಗೆ, ಒಂದು ಕಣ್ಣನ್ನು ಮಾತ್ರ ಅಸ್ತ್ರಕ್ಕಾಗಿ ತೆಗೆದುದೂ ಕೃಪಾಪ್ರಭಾವವೇ. ಈ ಭಾವವನ್ನೇ ಪ್ರತಿಪಾದಿಸಿ ಶ್ರೀ ನಿಗಮಾನ್ತ ದೇಶಿಕರವರು ದಯಾಶತಕದ "ಅಪಾಂಪತ್ಯುಃ" ಎಂಬ (೬೩ನೆಯ) ಶ್ಲೋಕದಲ್ಲಿ ಸಮುದ್ರ ಜಾಮದಗ್ನಿ ಮುನಿ, ಕಾಕ, ಇವರುಗಳ ವೃತ್ತಾಂತಗಳಮೂಲಕ ಹೇಳಿರುತ್ತಾರೆ. ಹೀಗೆ ಶಿಕ್ಷೆಯೂ ಅನುಗ್ರಹವೆಂದೇ ಮಹಾನುಭಾವರುಗಳು ಭಾವಿಸುವದನ್ನೇ ಮೂಲವಾಡಿಕೊಂಡು ಅನುಜ್ಞಾಲಂಕಾರವು ಉದಾಹರಿಸಲ್ಪಟ್ಟಿರುತ್ತದೆ. ಹೇಗೆಂದರೆ— **"ದೋಷಸ್ಯಾಭ್ಯರ್ಥನಾನುಜ್ಞಾ ತತ್ರೈವ ಗುಣದರ್ಶನಾತ್ । ವಿಪದಸ್ಸನ್ತು ನಶ್ಶಶ್ವದ್ಯಾಸು ಸಙ್ಕೀರ್ತ್ಯತೇ ಹರಿಃ"** ಇದರರ್ಥವೇನೆಂದರೆ ವಿಪತ್ತುಗಳೇ ನಮಗೆ ಬಾರಿಬಾರಿಗೆ ಉಂಟಾಗಲಿ, ಏಕೆಂದರೆ ಅಂತಹ ವಿಪತ್ತುಗಳಲ್ಲಿ ಶ್ರೀ ಹರಿಯು ಸ್ತುತಿಸಲ್ಪಡುವನು. ಹೀಗೆ ದೋಷದಲ್ಲಿ ಗುಣವನ್ನು ಹೇಳುವದು ಅನುಜ್ಞಾಲಙ್ಕಾರವು. ಹೀಗೆ ಭಗವನ್ನಿಗ್ರಹವು ಅನುಗ್ರಹರೂಪವೆಂದೇ ಅನೇಕ ಸಾಧುಗಳು ಭಾವಿಸುವರು, ಆದುದರಿಂದಲೇ **"ಕಿಂ ದುಸ್ಸಹಂನು ಸಾಧೂನಾಂ"** (ಭಾಗ. ೧೦) ಸಾಧುಗಳಿಗೆ ಯಾವುದು ನಿಗ್ರಹರೂಪವಾಗಿ ಪ್ರಾಪ್ತವಾದರೂ, ಅವುಗಳು ತಮ್ಮ ಅನುಗ್ರಹಕ್ಕಾಗಿ ಬಂದವು ಎಂದು ಭಾವಿಸುವರೇ ವಿನಾ ದುಃಖಿಸುವದಿಲ್ಲವು. ಹಾಗೆಯೇ **ಹರಿ ದುರ್ಃಖಾನಿ ಭಕ್ತೇಭ್ಯೋ ಹಿತಬುದ್ಧ್ಯಾ ಕರೋತಿ ವೈ । ಶಸ್ತ್ರಕ್ಷಾರಾಗ್ನಿಕರ್ಮಾಣಿ ಸ್ವಪುತ್ರಾಯ ಯಥಾಪಿತಾ"** ಎಂಬುದು ಅನುಸಂಧೇಯವು. ಶ್ರೀಹರಿಯು ಭಕ್ತರಿಗೆ ದುಃಖಗಳನ್ನು ಹಿತಬುದ್ಧಿಯಿಂದ ಮಾಡುತ್ತಾನೆಯೇ ವಿನಾ, ಅನ್ಯಥಾ ಅಲ್ಲವು, ಅದು ಹೇಗೆಂದರೆ? ಪಿತಾವಾದವನು ತನ ಪುತ್ರನಿಗೆ ಹೇಗೆ ಹಿತಕ್ಕಾಗಿಯೇ ವೈದ್ಯನಮೂಲಕ ಶಸ್ತ್ರಪ್ರಯೋಗ, ಕತ್ತಿಯಮೂಲಕ ಚೌಲಕರ್ಮ, ಶಂಖಚಕ್ರಾಂಕನರೂಪ ಅಗ್ನಿ ಚಿಕಿತ್ಸೆಯನ್ನೂ ಮಾಡಿಸುತ್ತಾನೋ, ಹಾಗೆ ಎಂದು ಭಾವಿಸತಕ್ಕದ್ದು.

**ಕ್ಷಣಕಾಲಸಾಧ್ಯವಾದ ಪ್ರಪತ್ತಿಗೆ ಮೋಕ್ಷಪರ್ಯನ್ತವಾದ ಫಲವನ್ನುಂಟುಮಾಡುವ ಪ್ರಭಾವ ಉಂಟೆಂದು ಹೇಗೆ ನಂಬತಕ್ಕದ್ದು?**

---

ಪ್ರಪದನವು ಒಂದು ಕ್ಷಣಕಾಲ ಸಾಧ್ಯವಾದುದು. ಹೀಗಿರುವಾಗ ನಿರತಿಶಯ ಶಾಶ್ವತವಾದ ಸುಖರೂಪ ಮೋಕ್ಷಪ್ರಾಪ್ತಿಯನ್ನುಂಟುಮಾಡುತ್ತದೆಂದೂ, ಹಾಗೆಯೇ ಭಕ್ತಿಯೋಗದಲ್ಲೂ ಕ್ಷಣಕಾಲವನುಷ್ಠಿಸಿದ ಅಙ್ಗಶರಣಾಗತಿಯಮೂಲಕ ಪ್ರಾರಬ್ಧ ನಿವರ್ತಕತ್ವ ಉಂಟೆಂದರೆ ನಂಬಬಹುದೇ? ಎಂದರೆ ಬ್ರಹ್ಮಹತ್ಯಾದಿಪಾಪಗಳೂ

**ಕ್ಷಣಕಾಲಸಾಧ್ಯಪ್ರಪತ್ತೇಃ ಕಥಂ ಮೋಕ್ಷಪರ್ಯನ್ತಫಲ ಜನಕತ್ವರೂಪ ಪ್ರಭಾವಃ?**

---

**ಆಗ್ಗೈಯಾಲ್ ಅಭೂತಸಂಪ್ಲವಂ ನರಕತ್ತಿಲೇ ಕಿಡುಕ್ಕುಮ್ಪಡಿ ಕ್ಷಣ ಕೃತ ಪಾಪಕರ್ಮಙ್ಗಳುಡೈಯ ಪ್ರಭಾವಮಾನ ಭಗವನ್ನಿಗ್ರಹ (ವಿಶೇಷ) ತ್ತೈ**

---

ಕ್ಷಣಕಾಲದಲ್ಲೇ ಮಾಡತಕ್ಕವು; ಅದು ಅನೇಕಕಾಲ ನರಕವಾಸವನ್ನುಂಟು ಮಾಡುತ್ತದೆ ಎಂದು ಒಪ್ಪಿದರೆ, ಹಾಗೆಯೇ ಈ ಕ್ಷಣಕಾಲಸಾಧ್ಯ ಭರನ್ಯಾಸವೂ ನಿರತಿಶಯ ಶಾಶ್ವತ ಫಲವನ್ನು ಕೊಡುತ್ತದೆ ಎಂದು ಒಪ್ಪಿಕೊಳ್ಳಲು ಅಭ್ಯಂತರವೇನು? ಆದುದರಿಂದ ಹೀಗೆ ಮೋಕ್ಷವನ್ನು ಕೊಡುವ ಪ್ರಭಾವವು ಈ ಶರಣಾಗತಿಗೆ ಉಂಟೆಂದು ಹೇಳುವದರಲ್ಲಿ ಏನೊಂದೂ ಅಸಾಮಂಜಸ್ಯವು ಇಲ್ಲವು ಎಂದು ಮುಂದೆ ಹೇಳುತ್ತಾರೆ. **ಆಗ್ಗೈಯಾಲ್** - ಆಕಾರಣವೆಂದ, ಪ್ರಪದನದ ಮಾಹಾತ್ಮ್ಯೆಗೆ ಬಾಧಕತ್ವವು ಎಲ್ಲಿಯೂ ತೋರಿಬರುವದಿಲ್ಲವಾದುದರಿಂದ, **ಅಭೂತ ಸಂಪ್ಲವಂ-ಭೂತ ಸಂಪ್ಲ** ವೆಂದರೆ ಭೂತ ಪ್ರಳಯವು, ಭೂತಗಳಿಗೆ ಪ್ರಳಯ ಉಂಟಾಗುವವರೆಗೂ, **ನರಕತ್ತಿಲೇ ಕಿಡುಕ್ಕುಮ್ಪಡಿ**-ನರಕದಲ್ಲೇ ಬಿದ್ದಿರುವಹಾಗೆ, **ಕ್ಷಣ ಕೃತಪಾಪಕರ್ಮಙ್ಗಳುಡೈಯ**-ಒಂದು ಕ್ಷಣಮಾತ್ರದಲ್ಲಿ ಮಾಡಿದ ಬ್ರಹ್ಮಹತ್ಯಾದಿ ಮಹಾ ಪಾತಕಗಳ, **ಪ್ರಭಾವಮಾನ**-ಫಲರೂಪವಾದ, **ಭಗವನ್ನಿಗ್ರಹವಿಶೇಷತ್ತೈ**-ಭಗವನ್ನಿಗ್ರಹರೂಪವಿಶೇಷವನ್ನು, **ಇಶೈನ್ದಾರ್ ಪೋಲುವುಮ್**-ಒಪ್ಪಿಕೊಂಡವರ ಹಾಗೂ, ಪ್ರಪತ್ತಿಯೂ ಕ್ಷಣಕಾಲ ಸಾಧ್ಯವಾಗಿದ್ದರೂ ದೇಹವಿಯೋಗಾನಂತರ ಮುಕ್ತಿಯನ್ನು ಕೊಡುವ ಪ್ರಭಾವವುಳ್ಳದ್ದೆಂದು ಒಪ್ಪಬಹುದಲ್ಲಾ ಎಂದು ಹೇಳುತ್ತಾರೆ,—ಮುಂದೆ ಹಾಗೆಯೇ ಕೆಲವು ಕ್ಷಣಕಾಲದಲ್ಲಿ ಮಾಡಿದ ಸುಕೃತಗಳಿಗೆ ವಿಶೇಷ ಶ್ರೇಯಸ್ಸನ್ನುಂಟುಮಾಡುವ ಶಕ್ತಿಯುಂಟೆಂದು ಹೇಗೆ ಒಪ್ಪುತ್ತೀರೋ, ಹಾಗೆಯೇ ಪ್ರಪದನಕ್ಕೂ ನಿರತಿಶಯ ಶ್ರೇಯಸ್ಸನ್ನು ಸಾಧಿಸುವ ಶಕ್ತಿಯುಂಟೆಂದು ಒಪ್ಪಬಹುದೆಂದು "**ದುರ್ಗಸಂಸಾರ**" ವೆಂದು ಆರಂಭಿಸಿ "**ಇಶೈನ್ದಾರ್ ಪೋಲವುಮ್**" ಎಂಬುವವರೆಗೂ ಉಪಪಾದಿಸಿ ಹೇಳುತ್ತಾರೆ. ಇಲ್ಲಿ **ಅಭೂತ ಸಂಪ್ಲವಂ ನರಕತ್ತಿಲೇ ಕಿಡಕ್ಕುಂ ಪಡಿ** ಎಂದು ಹೇಳುವಾಗ ಶ್ರೀನಿಗಮಾನ್ತರವರು "**ಬ್ರಹ್ಮಹತ್ಯಾಶ್ವಮೇಧಾಭ್ಯಾಂ ಪುಣ್ಯಪಾಪ ಕೃತೋವಿಧಿಃ। ಅಭೂತ ಸಂಪ್ಲವಂ ತತ್ತತ್ಫಲ ಮುಕ್ತಂ ತಯೋರ್ದ್ವಿಜ**" ಎಂಬ ಸೂಕ್ತಿಯನ್ನು ಮನಸ್ಸಿನಲ್ಲಿಟ್ಟು ಪ್ರಯೋಗಿಸಿರುವ ಹಾಗೆ ತೋರುತ್ತದೆ. ಆದರೆ ಇದನ್ನು ಏಕೆ ಪ್ರಮಾಣವಾಗಿ ಉದಾಹರಿಸಲಿಲ್ಲವೆಂದರೆ ಬ್ರಹ್ಮಹತ್ಯವು ಕ್ಷಣಿಕವಾಗಿ ಅವರಿಗೆ ಪ್ರಕೃತಕ್ಕೆ ಬೇಕಾದುದು

ಯಿಶ್ಶೈನ್ವಾರೊಪ್ಪೇಲವುನ್, (೧) "ದುರ್ಗ ಸಂಸಾರಕಾನ್ತಾರ ಮಪಾರ ಮಭಿಧಾವತಾನ್ । ಏಕಃ ಕೃಷ್ಣನಮಸ್ಕಾರೋ ಮುಕ್ತಿತೀರಸ್ಯ ದೇಶಿಕಃ" ಎನ್ರುವನ್ (೨) "ಏಕೋಽಪಿ ಕೃಷ್ಣೇ ಸುಕೃತಃ ಪ್ರಣಾಮೋ ದಶಾಶ್ವ

ಅಶ್ವಮೇಧವು ಕ್ಷಣಿಕವಲ್ಲವು, ಆದುದರಿಂದ ಇವನ್ನು ತ್ಯಜಿಸಿ ಬ್ರಹ್ಮಹತ್ಯ ದೃಷ್ಟಾನ್ತವನ್ನು ಮಾತ್ರ ತಂದಿರುತ್ತಾರೆ. ಈ ಬ್ರಹ್ಮಹತ್ಯ ಮತ್ತು ಅಶ್ವಮೇಧಗಳಿಗೆ ಪಾಪಪುಣ್ಯರೂಪ ಫಲಗಳು ಆಭೂತ ಸಂಪ್ಲವವೆಂದರೆ ಪ್ರಳಯದವರೆಗೂ ಉಂಟಾಗಬಹುದು ಎಂಬುದು ಶ್ಲೋಕತಾತ್ಪರ್ಯವು. ಹಾಗೆಯೇ ಕ್ಷಣಕೃತ ಸುಕೃತಕ್ಕೂ ಒಳ್ಳೇ ಫಲವುಂಟೆಂದು ಹೇಳುವ ಪ್ರಮಾಣಗಳನ್ನು ಉದಾಹರಿಸುತ್ತಾರೆ—(೧) "ಅಸಾರಂ – ಸಾರವೇ ಇಲ್ಲದಿರುವ ಎಂದರೆ ಬಹು ವಿಶಾಲವಾದ ದುರ್ಗ - ದಾಟಲು ಅಸಾಧ್ಯವಾದ, ಸಂಸಾರ ಕಾನ್ತಾರಂ - ಸಂಸಾರವೆಂಬಮರಳು ಕಾಡನ್ನು ಕುರಿತು, ಅಭಿಧಾವತಾಂ - ಓಡಿಹೋಗುತ್ತಲಿರುವ, ಓಡಿ ಓಡಿ ಆಯಾಸ ಉಂಟಾಗುವಹಾಗೆ ಸಂಚರಿಸುತ್ತಿರುವವರಿಗೆ, ಮರಳು ಬಿಸಲಲ್ಲಿ ಕಾದು, ಕಾಲು ಬೆಂದು ಹೋಗುವಹಾಗೆ ಸುಡುತ್ತಿರುವದರಿಂದ ಓಡಿ ಓಡಿ ಹೋಗುವ ಎಂಬ ಭಾವವು. ಏಕಃ ಕೃಷ್ಣನಮಸ್ಕಾರಃ - ಒಂದಾದ ಕೃಷ್ಣನ ನಮಸ್ಕಾರವೇ, ಮುಕ್ತಿತೀರಸ್ಯ – ಮುಕ್ತಿ ಎಂಬುವ ದಡಕ್ಕೆ, ದೇಶಿಕಃ – ಹೊಂದಿಸುವಂತಾದ್ದು ಒಂದು ಸಲ ನಮಸ್ಕಾರವು ಮುಕ್ತಿಯನ್ನು ಹೊಂದಿಸುವ ಶಕ್ತಿಯುಳ್ಳದು, ಇದರಿಂದ ಒಂದುಸಲವೇ ನಮಸ್ಕಾರಮಾಡತಕ್ಕದ್ದೆಂದು ವಿಧಿಸಿದ ಹಾಗಲ್ಲವು, ಏಕೆಂದರೆ ಶಾಸ್ತ್ರವು ಪ್ರದಕ್ಷಿಣ ನಮಸ್ಕಾರಗಳನ್ನು "ಯುಗ್ಮೇನೈವ ಕುರ್ಯಾತ್" ಎಂದರೆ ೨, ೪ ಸಾರಿ ಹೀಗೆ ಎರಡೆರಡು ಸಾರಿ ಮಾಡಬೇಕೆಂದು ಹೇಳುತ್ತದೆ, ಭಕ್ತವತ್ಸಲನಾಗಿ ಶರಣಾಗತ ವಶ್ಯನಾದ ಶ್ರೀ ಕೃಷ್ಣನಿಗೆ ಸಕೃತ್ಪ್ರಣಾಮವೇ ಅನುಗ್ರಹಿಸಲು ಸಾಕು ಎಂಬ ಭಾವವು. (೭, ೮, ೯ನೆಯ ಪುಟಗಳನ್ನು ನೋಡಿ.) ಸಂಸಾರವೆಂಬ ಅಗಾಧ ಸಮುದ್ರಕ್ಕೆ ಆಚೆ ಮುಕ್ತಿಸ್ಥಾನವಿದೆ ಎಂಬಭಿಪ್ರಾಯದಿಂದ ಮುಕ್ತಿತೀರಸ್ಯಎಂಬ ಪ್ರಯೋಗವು." ಇಲ್ಲಿ ನಮಸ್ಕಾರವುಸಾಧಾರಣನಮಸ್ಕಾರವಲ್ಲವು. ಸರಿಯಾದ ನಮಸ್ಕಾರವು ಶ್ರೀ ವಿಭೀಷಣಾಳ್ವಾರ್ ಮಾಡಿದ ಶರಣಾಗತಿರೂಪ ನಮಸ್ಕಾರವು. ಸಾಧಾರಣವಾದ ಸಾಮಾನ್ಯಭಕ್ತಿಯಿಂದ ಮಾಡುವ ನಮಸ್ಕಾರವು ಮೋಕ್ಷವನ್ನು ಹೊಂದಿಸಲಾರದು. ಪ್ರಪದನಾನುಷ್ಠಾನದೊಂದಿಗೆ ಮಾಡುವನಮಸ್ಕಾರವೇ ಮುಕ್ತಿ ತೀರದಾಯಕವು. ಎನ್ರುವನ್ - ಎಂಬದಾಗಿಯೂ ಮತ್ತು (೨) ಕೃಷ್ಣೇ ಶ್ರೀ ಕೃಷ್ಣನಲ್ಲಿ, ಏಕೋಽಪಿ ಸುಕೃತಃ ಪ್ರಣಾಮಃ - ಒಂದಾಗಿ ಚನ್ನಾಗಿ ಅನು

(೧) ವಿ. ಧ. ೧. ೧೮. (೨) ಭಾ. ಶಾ. ನಿ. ೪೭. ೧೨೩.

ಮೇಧಾವಭೃಥೇನ ತುಲ್ಯಃ। ದಶಾಶ್ವಮೇಧೀ ಪುನರೇತಿ ಜನ್ಮ ಕೃಷ್ಣಪ್ರಣಾಮೀ ನ ಪುನರ್ಭವಾಯ" ಎನ್ರುಮ್, ಸುಕೃತಪ್ರಣಾಮ ವಿಶೇಷತ್ತಿನುಡೈಯ ಪ್ರಭಾವತ್ತೈ ಯಿಶೈನ್ದಾರ್ ಪೋಲವುಮ್, (೩) "ಸಕೃದೇವ ಪ್ರಪನ್ನಾಯ"

---

ಷ್ಠಿಸಲ್ಪಟ್ಟ ಎಂದರೆ ಸಪರಿಕರವಾದ ಶರಣಾಗತಿಯೊಂದಿಗೆ ಮಾಡಲ್ಪಟ್ಟ ಪ್ರಣಾಮವೂ ಕೂಡ, ಆ ಪ್ರಣಾಮದ ಲಕ್ಷಣವೇಂತಾದ್ದೆಂಬುದಕ್ಕೆ "ಲಲಾಟೋದರ ಜಾನ್ವಂಘ್ರಿ ಯುಗ್ಮಾನ್ಯೂರ್ಧ್ವಗತೌಕರೌ। ಭೂಮೌ ಸಂಧಾಯ ಮನಸಾ ವಾಸುದೇವ ಮನುಸ್ಮರೇತ್" ಹಣೆ ಉದರ ಮೊಣಕಾಲುಗಳು ಕಾಲುಗಳು ಮತ್ತು ಶಿರಸ್ಸಿಗೂ ಮೇಲಕ್ಕೆಚಾಚಿದ ಕೈಗಳೂ, ಹೀಗೆ ಇವೆಲ್ಲವೂ ಭೂಮಿಯನ್ನು ಸ್ಪರ್ಶಿಸುವುಗಳಾಗಿಯೂ, ಮನಸ್ಸು ಶ್ರೀವಾಸುದೇವನನ್ನು ಸ್ಮರಿಸುವದಾಗಿಯೂ, ಇರತಕ್ಕದ್ದೆಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ಶಾಂಡಿಲ್ಯರು, "ಉರಸಾ ಮನಸಾ ದೃಷ್ಟ್ಯಾ ಶಿರಸಾಪಿ ಧಿಯಾಪಿ ಚ। ಪದ್ಭ್ಯಾಂ ಕರಾಭ್ಯಾಂ ವಾಚಾಚ ಪ್ರಣಾಮೋಽಷ್ಟಾಂಗ ಉಚ್ಯತೇ." ಎಂದು ಹೇಳಿರುತ್ತಾರೆ. **ದಶಾಶ್ವಮೇಧಾವಭೃಥೇನ ತುಲ್ಯಃ** – ಹತ್ತು ಅಶ್ವಮೇಧಗಳನ್ನು ಮಾಡಿ ಅವಭೃಥ ಸ್ನಾನದೊಂದಿಗೆ ಸಮಾನವು; ಶ್ರೀ ಸಾರಾಸ್ವಾದಿನಿಯವರು ಮುಂದಿನ ಉತ್ತರಾರ್ಧಾಭಿಪ್ರಾಯವನ್ನು ಮನಸ್ಸಿನಲ್ಲಿಟ್ಟು ಅಪಿ ಎಂಬುದನ್ನು ಪ್ರಶ್ನಾರ್ಥಕವಾಗಿ ತುಲ್ಯಃಅಪಿ - ಸಮಾನವೇನು? ಎಂದರೆ ಸಮಾನವಾಗುವದಿಲ್ಲವು ಎಂದು ಅರ್ಥಮಾಡಿರುತ್ತಾರೆ. **ದಶಾಶ್ವಮೇಧೀ** ಹತ್ತು ಅಶ್ವಮೇಧಗಳನ್ನು ನಡೆಸಿದವನು, **ಪುನರೇತಿಜನ್ಮ** - **ಪುನಃ** ಜನ್ಮವನ್ನು ಹೊಂದುವನು, **ಕೃಷ್ಣಪ್ರಣಾಮೀ** - ಶ್ರೀಕೃಷ್ಣನಲ್ಲಿ ಶರಣಾಗತನಾಗಿ ಪ್ರಣಾಮವನ್ನೆಸಗಿದವನು **ನಪುನರ್ಭವಾಯ** - ಪುನಃ ಜನ್ಮವನ್ನೆತ್ತುವದಿಲ್ಲವು" **ಎನ್ರುಮ್**-ಎಂದೂ, **ಸುಕೃತ ಪ್ರಣಾಮ ವಿಶೇಷತ್ತಿನುಡೈಯ** - ಇಲ್ಲಿ ಸಾಮಾನ್ಯ ಪ್ರಣಾಮವು ಹೇಳಲ್ಪಡಲಿಲ್ಲವಾಗಿ **ಸುಕೃತ** - ಸುಷ್ಠುಕೃತ, ಚನ್ನಾಗಿ ಪರಿಕರಗಳೊಂದಿಗೆ ಭಕ್ತಿಶ್ರದ್ಧಾ ಪೂರ್ವಕವಾಗಿ, ಮಾಡಲ್ಪಟ್ಟ ಶರಣಾಗತಿರೂಪ ಪ್ರಣಾಮ ವಿಶೇಷದ, **ಪ್ರಭಾವತ್ತೈ** - ಮಹಿಮೆಯನ್ನು, **ಇಶೈನ್ದಾರ್ ಪೋಲವುಮ್** - ಅಙ್ಗೀಕರಿಸಿದವರಹಾಗೂ ಮತ್ತು (೩) "**ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ**-ಉಪಾಸನಾದಿಗಳಲ್ಲಿ ಆವೃತ್ತಿ ಇರುವ ಹಾಗೆ ಅಲ್ಲದೆ, ಒಂದೇಸಲ ಶರಣಾಗತಿಯನ್ನು ಮಾಡಿ, ನಮಸ್ಕರಿಸಿ, ನಾನು ನಿನ್ನವನು ರಕ್ಷಿಸುಎಂದು ಬಾಯಲ್ಲಿ ಹೇಳಬಹು ದೈನ್ಯದಿಂದ ಪ್ರಾರ್ಥಿಸಿದವನಿಗೆ, ಮುಂದೆ "**ಅಭಯಂ ಸರ್ವಭೂತೇಭ್ಯೋ ದದಾಮ್ಯೇ ತದ್ವ್ರತಂ ಮಮ**" ಎಂದು ಇರುತ್ತದೆ,

---

(೩) ರಾಮಾ. ಯುದ್ಧ. ೧೮. ೩೩

(೪) "ಅಥಪಾತಕ ಭೀತಸ್ತ್ವಂ" (೫) "ಕುಯೋನಿಷ್ವಪಿ ಸಂಜಾತೋ ಯಸ್ಸಕೃಚ್ಛರಣಂಗತಃ ಇತ್ಯಾದಿಗಳಿಲ್ ಶೊಲ್ಲುಗಿರಪಡಿಯೇ ಇಪ್ರಪತ್ತಿ ಪ್ರಭಾವತ್ತೈ

ಅಭಯಂ ದದಾಮಿ - "ಅಥಸೋಽಭಯಂ ಗತೋಭವತಿ", "ಆನಂದಂ ಬ್ರಹ್ಮಣೋ ವಿದ್ವಾನ್ ನಬಿಭೇತಿ ಕುತಶ್ಚನ" ಎಂದು ಬ್ರಹ್ಮವಿದ್ಯೆಗೆ ಫಲವನ್ನು ಹೇಳಿದಹಾಗೆ, ಈ ನ್ಯಾಸವಿದ್ಯೆಯೂ ಬ್ರಹ್ಮವಿದ್ಯೆಯಾದುದರಿಂದ ಪುನರಾವೃತ್ತಿರೂಪ ಭಯವಿಲ್ಲದ ಮೋಕ್ಷವನ್ನು ಕೊಡುವೆನು, ಇದನ್ನು ಸರ್ವಭೂತೇಭ್ಯಃ ದದಾಮಿ - ಪಶುರ್ಮನುಷ್ಯಃ ಪಕ್ಷೀ ವಾ ಯೇ ಚ ವೈಷ್ಣವ ಸಂಶ್ರಯಾಃ। ತೇನೈವ ತೇ ಪ್ರಯಾಸ್ಯಂತಿ ತದ್ವಿಷ್ಣೋಃ ಪರಮಂ ಪದಮ್ ಎಂದು ಹೇಳಿರುವ ಹಾಗೆ ಆ ಪ್ರಪನ್ನನಿಗೆ ಸಂಬಂಧಪಟ್ಟ ಇತರ ಮನುಷ್ಯರೂ ಪಶುಗಳೂ ಪಕ್ಷಿಗಳೂ ಹೀಗೆ ವಿಷ್ಣು ಭಕ್ತನಾದ ಪ್ರಪನ್ನನನ್ನು ಆಶ್ರಯಿಸಿದ ಸರ್ವರಿಗೂ ಕೊಡುವೆನು ಎಂಬರ್ಥವು" ಮತ್ತು (೪) ಅಥ ಪಾತಕ ಭೀತಸ್ತ್ವಂ - ಹಾಗಿಲ್ಲದಿದ್ದರೆ ನೀನು ಪಾತಕಗಳಿಂದ ಭಯಪಟ್ಟವನಾಗಿ, ಮುಂದೆ "ಸರ್ವಭಾವೇನ ಭಾರತ। ವಿಮುಕ್ತಾನ್ಯಸಮಾರಂಭೋ ನಾರಾಯಣಪರೋ ಭವ" ಎಂದು ಇರುತ್ತದೆ. ಉಪಾಸನ ರೂಪ ಅನ್ಯೋಪಾಯದಿಂದ ಪಾಪ ನಿವೃತ್ತಿಯು ಕಷ್ಟವೆಂದು ಭಾವಿಸುವದಾದರೆ, ಕರ್ಮಯೋಗಾದಿ ಪರಂಪರಾ ರೂಪ ಕರ್ಮಕಲಾಪವನ್ನೆಲ್ಲಾ ಬಿಟ್ಟು ಶ್ರೀ ಮನ್ನಾರಾಯಣನನ್ನು ಶರಣಾಗತಿಯ ಮೂಲಕ ಆಶ್ರಯಿಸು ಎಂಬ ತಾತ್ಪರ್ಯವು. ಇದು ಧರ್ಮದೇವತೆಯು ತನ್ನ ಪುತ್ರನಾದ ಧರ್ಮರಾಯನಿಗೆ ಉಪದೇಶಿಸುವ ಪ್ರಕರಣವು [೨೩೫ನೆಯ ಪುಟವನ್ನು ನೋಡಿ] (೫) ಕುಯೋನಿಷು - ಇದು ಹಿಂದೆಯೇ ಉದಾಹೃತವು ೨೨೪ನೆಯ ಪುಟವನ್ನು ನೋಡಿ, ಕುತ್ಸಿತಗಳಾದ ಶೂದ್ರ ನಿಷಾದ ಪಂಚಮ ಯೋನಿಗಳಲ್ಲೂ ಕೂಡ, ಸಂಜಾತೋಽಪಿ – ಹುಟ್ಟಿದವನಾಗಿದ್ದರೂ ಕೂಡ, ಯಃ - ಯಾವ ಅಂತವನು, ಸಕೃಚ್ಛರಣಂಗತಃ - ಒಂದು ಸಲ ಶರಣಾಗತನಾದರೆ "ತಂ ಮಾತಾ ಪಿತೃಹಂತಾರ ಮಪಿಪಾತಿ ಭವಾರ್ತಿಹಾ" ಎಂದು ಮುಂದಿರುತ್ತದೆ, ಅಂತವನು ಒಂದುವೇಳೆ ತಾಯಿತಂದೆಯನ್ನು ಕೊಂದವನಾದರೂ ಕೂಡ, ಸಂಸಾರ ದುಃಖವನ್ನು ಹೋಗಲಾಡಿಸುವ ಶ್ರೀಮನ್ನಾರಾಯಣನು, ಆತನನ್ನು ಪಾತಿ-ರಕ್ಷಿಸುವನು ಎಂದರೆ ಆತನು ಭರನ್ಯಾಸವನ್ನನುಷ್ಠಿಸಿದರೆ, ಅಂತಹ ಮಹಾ ಪಾತಕಿಗೂ ಕೂಡ ಮೋಕ್ಷವನ್ನು ಕೊಟ್ಟು ರಕ್ಷಿಸುವನೆಂಬ ಭಾವವು" ಇತ್ಯಾದಿಗಳಿಲ್ ಶೊಲ್ಲುಗಿರ ಪಡಿಯೇ - ಇತ್ಯಾದಿ

[೪] ವಿ. ಧ. ೬೬. ೭೨. (೫) ಸನತ್ಕುಮಾರ ಸಂಹಿತಾ.

**ಯುವನ್ ಶಾಸ್ತ್ರಾರ್ಥೋಪಪ್ಲವ ಪ್ರಸಙ್ಗವಿಲ್ಲಾದ ವಿಷಯತ್ತಿಲ್ ಶುರಙ್ಗಾದೇ ಯನುಸಂಧಿಕ್ಕ ಪ್ಪಾಪ್ತನ್.**

ಪ್ರಮಾಣಗಳಲ್ಲಿ ಹೇಳಿರುವಹಾಗೆ, **ಪ್ರಪತ್ತಿ ಪ್ರಭಾವತ್ತೈಯುವನ್** - **ಪ್ರಪತ್ತಿ ಮಾಹಾತ್ಮ್ಯಯನ್ನೂ, ಶಾಸ್ತ್ರಾರ್ಥೋಪಪ್ಲವ ಪ್ರಸಙ್ಗವಿಲ್ಲಾದ ವಿಷಯತ್ತಿಲ್** - ಇಲ್ಲಿ ಶಾಸ್ತ್ರಾರ್ಥವು ಯಾವುದೆಂದರೆ ಜಾತ್ಯಾದಿ ನಿಯತ ಅನುಷ್ಠಾನವು. ಇದಕ್ಕೆ **ಉಪಪ್ಲವ** ವೆಂದರೆ ತೊಂದರೆ ಅಥವಾ ವಿರೋಧವು, ಅಂತಹ ವಿರೋಧದ ಪ್ರಸಙ್ಗವಿಲ್ಲದಿರುವ ವಿಷಯದಲ್ಲಿ, **ಶುರಙ್ಗಾದೆ** - ಸಂಕೋಚ ಅಥವಾ **ನ್ಯೂನತೆ ಬಾರದೆ** ಇರೋಣ ಹೇಗೋ ಹಾಗೆ, **ಅನುಸನ್ಧಿಕ್ಕಪ್ಪ್ರಾಪ್ತನ್** - ಅನುಸಂಧಾನ ಮಾಡುವದು ಉಚಿತವು. ಮನುಷ್ಯನು ಅತ್ಯಲ್ಪಕಾಲದಲ್ಲೇ ಮಹತ್ತಾದ ಬಹು ಕಾಲವನುಭವಿಸಿದರೂ ಮುಗಿಯದಷ್ಟು ಪಾಪಗಳನ್ನು ಮಾಡುತ್ತಾನೆಂದು "**ಯ ಬ್ಬ್ರಹ್ಮ ಕಲ್ಪ ನಿಯುತಾನುಭವೇ ಪ್ಯನಾಶ್ಯಂ ತತ್ಕಿಲ್ಬಿಷಂಸೃಜತಿಜನ್ತುರಿಹ ಕ್ಷಣಾರ್ಧೇ**" ಎಂಬಲ್ಲಿಹೇಳಲ್ಪಟ್ಟಿರುತ್ತದೆ. ಹೀಗೆ ಒಂದು ಅರ್ಧಕ್ಷಣಕಾಲದಲ್ಲೇ ಭ್ರೂಣಹತ್ಯ ಬ್ರಹ್ಮಹತ್ಯ ಪರದಾರಗಮನ ಮೊದಲಾದ ಮಹಾಪಾತಕಗಳನ್ನು ಮಾಡಿದವರಿಗೆ ಬಹುಕಾಲ ನರಕಪ್ರಾಪ್ತಿ ಎಂಬುದನ್ನು ಒಪ್ಪುವಾಗ,ಹಾಗೆಯೇ ಕ್ಷಣಕಾಲ ದಲ್ಲಿ ಅನುಷ್ಠಿಸುವ ಸಾಙ್ಗಭರನ್ಯಾಸಾನುಷ್ಠಾನದಿಂದ ಮೋಕ್ಷಪ್ರಾಪ್ತಿಯುಂಟು ಎಂದರೆ ಏಕೆಒಪ್ಪ ಕೂಡದು ? ಆದುದರಿಂದ ಸಕೃದನುಷ್ಠಾನವಾದರೂ ಅದಕ್ಕೆ ನಿರತಿಶಯ ಮೋಕ್ಷವನ್ನು ಹೊಂದಿಸುವ ಪ್ರಭಾವಉಂಟು. ಇಂತಹ ಪ್ರಭಾವವಿದೆಎಂದಾದನಂತರ "**ನಶೂದ್ರಾ ಭಗವದ್ಭಕ್ತಾಃ ವಿಪ್ರಾ ಭಾಗವತಾಸ್ಸ್ಮೃತಾಃ**" ಎಂಬಲ್ಲಿ ಹೇಳಿರುವ ವಾಕ್ಯರೀತ್ಯಾ, ಅಂತಹ ಶೂದ್ರನೂವಿಪ್ರನಾದರೆ,ಅಧ್ಯಯನ ಮಾಡಬಹುದೆಂದು ಅಙ್ಗೀಕರಿಸಲಾಗುತ್ತದೆಯೇ ? ಎಂಬ ಭಾವವು.ಏಕೆಂದರೆ "**ತಸ್ಮಾಚ್ಛೂದ್ರ ಸಮೀಪೇ ನಾಧ್ಯೇತವ್ಯಃ**" ಎಂಬ ಶಾಸ್ತ್ರಕ್ಕೆ ಅದು ವಿರೋಧವಾಗುತ್ತದೆ. ಆದುದರಿಂದ ಪ್ರಪತ್ತಿಯ ಪ್ರಭಾವವನ್ನು ಅನುಸಂಧಾನಮಾಡುವಾಗ ಶಾಸ್ತ್ರವಿರುದ್ಧವಿಲ್ಲದಹಾಗೆ ಅನುಸಂಧಾನ ಮಾಡಬೇಕೆಂಬ ಭಾವವು. ಅದು ಕೀಳುಜಾತಿಯವನನ್ನು ಉತ್ತಮ ಜಾತಿಯವನನ್ನಾಗಿಯೂ ಮಾಡುತ್ತದೆ ಎಂದು ಏಕೆ ಒಪ್ಪಕೂಡದೆಂಬ ವಾದವನ್ನು ತಂದು ಶಾಸ್ತ್ರಕ್ಕೆ ಉಪಪ್ಲವ ಉಂಟಾಗುವಹಾಗೆ ಮಾಡತಕ್ಕದ್ದು ಯುಕ್ತವಲ್ಲವೆಂಬ ಭಾವವು. ಇದು ಹಿಂದಿನ ಅಧಿಕಾರದಲ್ಲಿ ಹೇಳಲ್ಪಟ್ಟಿತು. ಭರನ್ಯಾಸವೂ ಸಕೃದನುಷ್ಠೇಯವೆಂಬುವದಕ್ಕೆ ಮೇಲೆ ಐದು ಪ್ರಮಾಣಗಳನ್ನು ವಿಷ್ಣುಧರ್ಮ, ಭಾರತ ಶಾನ್ತಿಪರ್ವ, ರಾಮಾಯಣ ಸನತ್ಕುಮಾರ ಸಂಹಿತಾ ವಾಕ್ಯಗಳನ್ನು ಉದಾಹರಿಸಿದರು. ಆದುದರಿಂದ ಸಕೃದನುಷ್ಠಿಸಿದುದಾ

**(೧) "ತಂ ಮಾತಾಪಿತೃಹನ್ತಾರ ಮಪಿ ಪಾತಿ ಭವಾರ್ತಿಹಾ" ಎನ್ನುದ ವುಮ್ ಉತ್ತರಾಘ ಮಲ್ಲಾದಪೋದು ಉಪಪ್ಲವಮಿಲ್ಲೈ.**

ದರೆ ಇಂತಹ ನಿರತಿಶಯಾನಂದರೂಪಮೋಕ್ಷವನ್ನು ಹೊಂದಿಸುವ ಪ್ರಭಾವ ಉಂಟೆಂದು ಒಪ್ಪತಕ್ಕದ್ದರಲ್ಲಿ ಏನೊಂದೂ ವಿರೋಧವಿಲ್ಲವೆಂಬ ತಾತ್ಪರ್ಯವು. ಶಾಸ್ತ್ರಪ್ರಮಾಣಶರಣರೆಲ್ಲಾ ಇದನ್ನು ಒಪ್ಪತಕ್ಕವಿಷಯವೇ,ಏಕೆಂದರೆ ಮೇಲಿನ ಪ್ರಮಾಣಗಳೆಲ್ಲಾ ಹಾಗೆ ಹೇಳುವದರಿಂದ ಎಂಬ ಭಾವವು. ಇನ್ನೂ ಇತರ ಪ್ರಮಾಣಗಳಿಗೆ ೧೦೮೫ನೆಯ ಪುಟವನ್ನು ಪರಾಂಬರಿಸಿ.

ಶಾಸ್ತ್ರ ಪ್ರಮಾಣಾನುಗುಣವಾಗಿ ಕ್ಷಣಕಾಲ ಸಾಧ್ಯ ಭರನ್ಯಾಸಕ್ಕೆ ಇನ್ನೆಂದಿಗೂ ಜನ್ಮವಿಲ್ಲದೆ, ದುಃಖಾನುಭವವಿಲ್ಲದೆ, ನಿರತಿಶಯಾನಂದರೂಪ ಶಾಶ್ವತ ಮೋಕ್ಷಸುಖವನ್ನು ಕೊಡುತ್ತದೆ ಎಂದೇನೋ ಒಪ್ಪೋಣ. ಆದರೆ "ತಂ ಮಾತಾಪಿತೃಹಂತಾರ ಮಪಿ ಪಾತಿ ಭವಾರ್ತಿಹಾ" ಎಂದು ಹೇಳಿದುದು ಅತಿಶಯೋಕ್ತಿಯಲ್ಲವೋ? ಅಂತಹ ಮಹಾ ಪಾತಕಿಯಾಗಿ ಸದಾ ನರಕಭಾಕ್ಕಾಗಿಯೇ ಇರಲು ಯೋಗ್ಯನಾದವನಿಗೂ ಈ ಭರನ್ಯಾಸದಿಂದ ಮೋಕ್ಷ ಉಂಟೆಂಬುದನ್ನು ಹೇಗೆ ನಂಬಲು ಸಾಧ್ಯವು? ಎಂಬ ಶಙ್ಕೆಗೆ ಮುಂದೆ ಸಮಾಧಾನವನ್ನು ಹೇಳುತ್ತಾರೆ—ಇಂತಹ ಪಾತಕಗಳು ಭರನ್ಯಾಸಕ್ಕೆ ಪೂರ್ವಭಾವಿಯಾಗಿದ್ದರೆ ಹೇಗೆ? ಉತ್ತರಾಘಗಳಾದರೆ ಹೇಗೆ? ಎಂಬದಾಗಿ ಎರಡು ವಿಧವಾಗಿ ವಿಕಲ್ಪಿಸಿ ಸಮಾಧಾನವನ್ನು ಹೇಳುತ್ತಾರೆ.—**ತಂ** - ಅಂತಹ ಸಕೃಚ್ಛರಣಾಗತನಾದ ಪ್ರಪನ್ನನನ್ನು, **ಮಾತಾಪಿತೃ ಹನ್ತಾರಮಪಿ** - ತಾಯಿ ತಂದೆಯನ್ನು ಕೊಂದ ಪಾತಕಿಯಾಗಿದ್ದರೂ ಕೂಡ, **ಭವಾರ್ತಿಹಾ** - ಸಂಸಾರ ದುಃಖಗಳನ್ನು ಹೋಗಲಾಡಿಸುವ ಕೃಪಾಸಾಗರನು, **ಪಾತಿ**-ಸಂರಕ್ಷಿಸುತ್ತಾನೆ" ಎನ್ನುದುವುಮ್ - ಎಂದು ಹೇಳಿರುವದು, **ಉತ್ತರಾಘಮಲ್ಲಾದಪೋದು** - ಉತ್ತರಾಘವಲ್ಲದಿರುವ ಸಂದರ್ಭದಲ್ಲಿ ಎಂದರೆ ಪೂರ್ವಾಘವಾಗಿದ್ದ ಪಕ್ಷದಲ್ಲಿ, **ಉಪಪ್ಲವಮಿಲ್ಲೈ** - ಏನೊಂದು ವಿರೋಧವೂ ಇಲ್ಲವು. ಅದರಲ್ಲಿ ಶಾಸ್ತ್ರವಿರುದ್ಧವಾದುದು ಏನೂ ಇಲ್ಲವು. **"ಅಪಾಯಸಂಪ್ಲವೇ ಸದ್ಯಃ ಪ್ರಾಯಶ್ಚಿತ್ತಂ ಸಮಾಚರೇತ್"** ಎಂಬದಾಗಿ ಬುದ್ಧಿ ಪೂರ್ವಕವಾಗಿ ಇಂತಹ ಉತ್ತರಾಘವು ಪ್ರಾಪ್ತನಾದರೆ ಅದಕ್ಕೆ ಪ್ರಾಯಶ್ಚಿತ್ತವು ವಿಧಿಸಲ್ಪಟ್ಟಿರುವದರಿಂದ, ಪ್ರಾಯಶ್ಚಿತ್ತದ ಅಪೇಕ್ಷೆ ಇಲ್ಲವೇನೇ ಇಲ್ಲಿ ಹೇಳಲ್ಪಟ್ಟಿರುವದರಿಂದ ಇದು ಪೂರ್ವಾಘವಿಷಯವೆಂದೇ ಹೇಳತಕ್ಕದ್ದಾದರೆ, ಆಗ

(೧)

ಶರಣಾಗತಿಯು ಸಮಸ್ತ ಪಾಪಗಳನ್ನೂ ನಾಶಪಡಿಸಿ ಮೋಕ್ಷವನ್ನು ಕೊಡುತ್ತದೆಂಬುದು ಶಾಸ್ತ್ರಾರ್ಥವಾದುದರಿಂದ ಮಾತಾ ಪಿತೃಹನ್ತಾವಾದರೂ ಕೂಡ ಮೋಕ್ಷ ಉಂಟೆಂದು ಹೇಳುವದರಲ್ಲಿ ಏನೂ ವಿರೋಧವಿಲ್ಲವು. ಹಾಗೆಯೇ ಶ್ರೀ ರಾಮಚಂದ್ರ ಪ್ರಭುವಿನ ಉಕ್ತಿ ಇರುತ್ತದೆ. ವಿಭೀಷಣನೇನೂ ಪಾಪವಾಡಿದವನಲ್ಲವು. ಆತನು ನಿರಪರಾಧಿಯು. ಅಂತಹ ಶರಣಾಗತನನ್ನು ನಮ್ಮ ಪಂಗಡಕ್ಕೆ ಸೇರಿಸಿಕೊಳ್ಳುವದು ನ್ಯಾಯವೇ ಎಂಬ ಚರ್ಚೆಯೇ ಅಸಂಗತವಾದುದು. ಶರಣಾಗತನು ಎಂತವನಾದರೇನು ? ಪುಣ್ಯವಂತನಾದರೇನು ? ಮಹಾ ಪಾಪಿಯಾದರೇನು? ಆದುದರಿಂದ 'ಆನಯೈನಂ ಹರಿಶ್ರೇಷ್ಠ ದತ್ತ ಮಸ್ಯಾಭಯಂ ಮಮ । ವಿಭೀಷಣೋ ವಾ ಸುಗ್ರೀವ ಯದಿವಾ ರಾವಣಸ್ಸ್ವಯಂ" ಪರದಾರಾಪಹಾರಿಯಾದ ಪರಮ ನೀಚನಾದ ರಾವಣನೇ ಬಂದು ಶರಣಾಗತನಾದರೂ, ಆತನಿಗೂ ಕೂಡ ಅಭಯವನ್ನೀಯುವೆನೆಂದು ಸರ್ವಲೋಕ ಶರಣ್ಯನು ಹೇಳಿಕೊಂಡಿರುತ್ತಾನೆ. ಎಂತಹ ಗುರುತರ ಪಾತಕಿಯಾಗಿದ್ದರೂ ಶರಣಾಗತಿಯು ಅಂತವನನ್ನು ಕಾಪಾಡುತ್ತದೆ ಎಂಬ ಈ ಅಭಿಪ್ರಾಯವು ಕ್ಷಮಾ ಷೋಡಶಿಯ ಒಂದು ಅಮೋಘಶ್ಲೋಕದಲ್ಲಿ ಬಹು ನಿಪುಣವಾಗಿ ಉಪಪಾದಿತವು ಅದು ಯಾವುದೆಂದರೆ.—"ದೇವತ್ವಾಂ ಶರಣಂ ಪ್ರಪನ್ನ ಮಪಿಮಾಂ ದುಃಖಾನನನ್ಯಾಶ್ರಯಂ । ಬಾಧನ್ತೇಯದಿ ಸರ್ವ ಪಾಪ ನಿವಹಾತ್ತ್ವಾಂ ಮೋಕ್ಷಯಿಷ್ಯಾಮ್ಯಹಮ್ । ಇತ್ಯುಕ್ತ್ವಂ ತವವಾಕ್ಯ ಮರ್ಥ ವಿಧುರಂ ಜಾಯೇತ ಯಾದ್ವಾಭವಾಂ । ಸ್ತತ್ರ ಶಕ್ತ ಇತಿ ಪ್ರಥೇತಹಿ ತತೋ ಮಾಂ ರಕ್ಷತುತ್ವತ್ಕೃಪಾ ॥ ಇದರ ಅರ್ಥವು. ಓ ಲೀಲಾ ವಿಭೂತಿ ಪ್ರಿಯನೇ! ನೀನು ಲೀಲಾ ಸಾರಥಿಯಾಗಿ ಅನುಗ್ರಹಿಸಿದ ಪ್ರಸಿದ್ಧ ಗೀತಾಚರಮಶ್ಲೋಕದಲ್ಲಿ ಶರಣಂವ್ರಜ ಎಂದು ವಿಧಿಸಿದ ರೀತಿಯಲ್ಲಿ ನಿನ್ನಲ್ಲಿ ಶರಣಾಗತಿಯನ್ನನುಷ್ಠಿಸಿ ಪ್ರಪನ್ನನಾದೆನು. ಆದರೂ ಪ್ರಾರಬ್ಧಪಾಪಗಳ ಮೂಲಕ ದುಃಖಗಳು ನನ್ನನ್ನು ಬಾಧಿಸಿದುದಾದರೆ ನಿನ್ನ ಅಮೋಘವಾಕ್ಯಾದ "ಸರ್ವಪಾಪ ನಿವಹಗಳಿಂದಲೂ ಬಿಡಿಸುವೆನು ಅಳಬೇಡ" ವೆಂಬುದು ವ್ಯರ್ಥವಾಗಲಿಲ್ಲವೋ ? ಎಂದು ಆಕ್ಷೇಪಿಸಿದರೆ ಅದಕ್ಕೆ ನೀನು ಪ್ರತಿಯಾಗಿ "ಹೇಳಿದ್ದೇನೋ ಹೌದು, ನಿನ್ನಂತಹ ಹಿಂದೆ ಮಾತಾ ಪಿತೃಹಂತಾರನಾಗಿದ್ದ ಮಹಾ ಪಾತಕಿಯನ್ನು ಕುರಿತು ಹೇಳಿದುದಲ್ಲವು, ಅಲ್ಪ ಸ್ವಲ್ಪ ಪಾತಕಗಳನ್ನು ಮಾಡಿದ್ದರೆ ಮೋಕ್ಷಯಿಷ್ಯಾಮಿ ಎಂದು ಹೇಳಿದ್ದೇನೋ ಹೌದು" ಎಂದು ನೀನು ಸಮಾಧಾನವನ್ನು ಹೇಳಿದರೆ, ಆಗ ನೀನು ಅಲ್ಪ ಸ್ವಲ್ಪ ಅಪರಾಧಗಳನ್ನು ಮಾಡಿದ ಶರಣಾಗತರಿಗೇ ಶರಣ್ಯನು, ಗುರುತರ ಪಾತಕಗಳನ್ನು ಮಾಡಿ ಶರಣಾಗತರಾದವರಿಗೆ ರಕ್ಷಕನಲ್ಲವು ಎಂದಾಗಿ ಆಗ ನಿನಗೆ ಸರ್ವಶಕ್ತನೆಂಬ ಬಿರುದು ಹೋಗಿ, ಗುರುತರ ಪಾತಕಿಗಳನ್ನು ರಕ್ಷಿಸಲು ಅಶಕ್ತನೆಂದಾಗುವದರಿಂದ,

ನಿನ್ನ ಸರ್ವ ಶಕ್ತತೆಯನ್ನು ಕಾಪಾಡಿಕೊಳ್ಳಬೇಕೆಂಬಪೇಕ್ಷೆ ಇದ್ದುದಾದರೆ, **ಮಾಂ ರಕ್ಷತು ತ್ವತ್ಕ್ಷಮಾ** - ನಿನ್ನ ಕ್ಷಮಾಗುಣವು ನನ್ನನ್ನು ಕಾಪಾಡಲಿ" ಎಂದು ಸ್ತೋತ್ರ ಕರ್ತರ್ ಹೇಳಿಕೊಂಡಿರುತ್ತಾರೆ. ಇದರಿಂದ **ಮಾತಾಪಿತೃಹನ್ತಾ**ವಾಗಿ ಮಹಾಪಾತಕಿಯಾಗಿದ್ದರೂ ಅಥವಾ ತತ್ಸದೃಶವಾದ ಮುಂದೆ ಅನಭ್ಯುಪಗತಪ್ರಾರಬ್ಧವಿದ್ದರೂ ಕೂಡ, ಅದೂ ನಾಶವಾಗಿ, ಆ ಜನ್ಮದಲ್ಲೇ ದೇಹಾವಸಾನದಲ್ಲಿ ಮೋಕ್ಷವೆಂಬುದು ಸಿದ್ಧವು. ಇದು ಹಿಂದೆಯೇ "**ಪ್ರಾರಬ್ಧೇತರ ಪೂರ್ವಪಾಪಮಖಿಲಂ ಪ್ರಾಮಾದಿಕಂ ಚೋತ್ತರಂ ನ್ಯಾಸೇನಕ್ಷಪಯನ್ನನಭ್ಯುಪಗತ ಪ್ರಾರಬ್ಧ ಖಂಡಂಚನಃ**"ಎಂಬಲ್ಲಿ ಹೇಳಲ್ಪಟ್ಟಿರುತ್ತದೆ [೧೬೦೮-೯ನೆಯ ಪುಟಗಳನ್ನು ನೋಡಿ] ಆದುದರಿಂದಲೇ **ಉತ್ತರಾಘ ಮಶ್ಲಾದಪ್ರೋದು** ಎಂಬ ವ್ಯಾಖ್ಯಾನವು. ಉತ್ತರಾಘವಲ್ಲದುದು ಎಂಬುದರಿಂದ **ಪೂರ್ವಾಘ**ವು ಅಥವಾ ಪ್ರಾರಬ್ಧವು. **ಪೂರ್ವಾಘವು** ನಾಶಹೊಂದುತ್ತದೆ, ಪ್ರಾರಬ್ಧವು ಅನುಭವಿಸಲ್ಪಡುತ್ತದೆ, ಅಂತೂ ಎರಡು ಸಂದರ್ಭದಲ್ಲೂ ದೇಹಾವಸಾನದಲ್ಲಿ ಮೋಕ್ಷವೆಂಬ ಸಿದ್ಧಾಂತಕ್ಕೆ ಏನೊಂದೂ ವಿರೋಧವಿಲ್ಲವು ಎಂದು ಹೇಳುವದಕ್ಕಾಗಿ **ಉಪಪ್ಲವ ಮಿಲ್ಲೈ** ಎಂಬ ಪ್ರಯೋಗವು. ಈ ಸಂದರ್ಭದಲ್ಲಿ **ಸಾಧ್ಯಭಕ್ತಿಸ್ತು ಸಾಹಂತ್ರೀ ಪ್ರಾರಬ್ಧಸ್ಯಾಪಿ ಭೂಯಸೀ**" ಎಂಬ ಪ್ರಮಾಣವು ಅನುಸಂಧೇಯವು. **ಸಾಧ್ಯಭಕ್ತಿ** ಎಂದರೆ ಪ್ರಪತ್ತಿ ಎಂದು, "**ಸಾಧನಂ ಭಗವತ್ಪ್ರಾಪ್ತೌ ಸಏವೇತಿಸ್ಥಿರಾಮತಿಃ । ಸಾಧ್ಯಭಕ್ತಿಸ್ತಥಾಸ್ಯೈವ ಪ್ರಪತ್ತಿರಿತಿಗೀಯತೇ**" ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. "**ತಂ ಮಾತಾ ಪಿತೃಹಂತಾರಂ**" ಎಂಬುದು ಉತ್ತರಾಘಾಧಿಕಾರಿಯನ್ನು ಬೋಧಿಸುತ್ತವೆ ಎಂದು ಹೇಳಿದರೂ ಚಿಂತೆಯಿಲ್ಲವು, ಅಂತವನಿಗೂ ಆಜನ್ಮದಲ್ಲೇ ಈ ಶರಣಾಗತಿಯ ಮಾಹಾತ್ಮ್ಯಯಿಂದ ದೇಹಾವಸಾನಾನಂತರ ಮುಕ್ತಿಯುಂಟೋ ? ಎಂದರೆ, ಈ ಉತ್ತರಾಘಕ್ಕಾಗಿ ಪ್ರಾಯಶ್ಚಿತ್ತ ರೂಪದಲ್ಲಿ ಪುನಶ್ಶರಣಾಗತಿಯನ್ನು ಅನುಷ್ಠಿಸಿದುದಾದರೆ ಆ ಅಪರಾಧವು ಪರಿಹಾರವಾಗಿ ಮುಕ್ತಿಯುಂಟು. ಒಂದುವೇಳೆ ಪ್ರಾಯಶ್ಚಿತ್ತರೂಪ ಶರಣಾಗತಿಯನ್ನು ಅನುಷ್ಠಿಸದೇ ಹೋದರೆ ಸರ್ವೇಶ್ವರನು ಆತನನ್ನು ದಂಡನೆಗೆ ಗುರಿಮಾಡಿ ರಕ್ಷಿಸುವನು. ಈ ಅಭಿಪ್ರಾಯಗಳು ಅಪರಾಧ ಪರಿಹಾರಾಧಿಕಾರದಲ್ಲಿ "**ಧೀ ಪೂರ್ವೋತ್ತರ ಪಾಪ್ಮನಾಮಜನನಾಜ್ಞಾತೇಪಿ ತನ್ನಿಷ್ಕೃತೇಃ ಕೌಟಿಲ್ಯೇ ಸತಿ ಶಿಕ್ಷಯಾಪ್ಯನಘಯನ್ ಕ್ರೋಡೀಕರೋತಿ ಪ್ರಭುಃ**" ಎಂಬಲ್ಲಿ ವ್ಯಕ್ತವು. [೧೬೦೮-೯ನೆಯ ಪುಟಗಳನ್ನು ನೋಡಿ.] ಅಥವಾ ಇಂತಹ ಮಹಾಪರಾಧವನ್ನು ಮಾಡಬೇಕಾದರೆ, ಶರಣಾಗತಿಯು ಸರಿಯಾಗಿ ಪರಿಕರಗಳೊಂದಿಗೆ ಅನುಷ್ಠಿಸಲ್ಪಡದೇ, ಅದು ಶರಣಾಗತಿಯಾಗದೆ, ಸ್ವಾಮಿಯ ಕೃಪೆಯು ದೊರೆಯದೇ, ಇಂತಹ ದುಷ್ಕೃತ್ಯಕ್ಕೆ ಒಳಗಾದನೆಂದೂ ಭಾವಿಸಬಹುದು.

**ಉತ್ತರಾಘ ವಿಷಯತ್ತಿಲ್ ನಿಸ್ತಾರಕ್ರಮಙ್ಗಳ್ ಮುನ್ಬೇ ಶೊನ್ನೋಮ್. (೧) "ಶರಣಂ ಚ ಪ್ರಪನ್ನಾನಾಂ ತವಾಸ್ಮೀತಿ ಚ ಯಾಚತಾಮ್ । ಪ್ರಸಾದಂ ಪಿತೃಹಂತೄಣಾಮಪಿ ಕುರ್ವನ್ತಿ ಸಾಧವಃ" ॥ ಇತ್ಯಾದಿಗಳುಮ್ ಇಪ್ಪಡಿಕ್ಕು ಸುಘಟಿತಙ್ಗಳಾಮ್.**

---

ಹಿಂದೆ ಉಪಪಾದಿಸಿದ ರೀತಿಯಲ್ಲಿ ಪ್ರಪನ್ನನಾದನಂತರ ಇಂತಹ ಮಾತಾಪಿತೃಹನನರೂಪವಾದ ಮಹಾಪರಾಧವು ಪ್ರಾಪ್ತವಾದರೆ ಹೇಗೆಎಂಬುದನ್ನು "**ಉತ್ತರಾಘ ವಿಷಯತ್ತಿಲ್**"ಎಂದು ಆರಂಭಿಸಿದ ವಾಕ್ಯಮೂಲಕ ಉಪಪಾದಿಸಿಹೇಳುತ್ತಾರೆ.— **ಉತ್ತರಾಘ ವಿಷಯತ್ತಿಲ್**-ಈ ಮಾತಾಪಿತೃಹನನವು ಉತ್ತರಾಘವಾಗುವ ವಿಷಯದಲ್ಲಿ, ಯಾವಾಗ ಮಾತಾಪಿತೃಹನನವು ಹೇಳಲ್ಪಟ್ಟಿತೋ ಆಗ ಪ್ರಾಣಿಹನನವೂ ಸಹ ಹೇಳಿದಂತೆ ಆಯಿತು, ಅಂತಹ ಸಂದರ್ಭದಲ್ಲಿ, **ನಿಸ್ತಾರ ಕ್ರಮಙ್ಗಳ್**- "**ಅಪಾಯಸಂಪ್ಲವೇಸದ್ಯಃ ಪ್ರಾಯಶ್ಚಿತ್ತಂ ಸಮಾಚರೇತ್**" (ಲಕ್ಷ್ಮೀತಂತ್ರ. ೧೩. ೯೧) ಎಂಬಲ್ಲಿ ಹೇಳಿರುವಹಾಗೆ, ಅಂತಹ ಅಪರಾಧಗಳಿಗೆ ಪರಿಹಾರ ಕ್ರಮಗಳನ್ನು **ಮುನ್ಬೇ ಶೊನ್ನೋಮ್** - ಅಪರಾಧ ಪರಿಹಾರಾಧಿಕಾರದಲ್ಲಿ ಹಿಂದೆಯೇ ಹೇಳಿದೆವು. ೧೫೯-೧೬೦೧ನೆಯ ಪುಟಗಳನ್ನು ನೋಡಿ.(೧)"**ಶರಣಂ ಪ್ರಪನ್ನಾನಾಂ ಚ**–ಉಪಾಯವನ್ನಾಗಿತಿಳಿದು ಶರಣಾಗತಿಯನ್ನು ಅನುಷ್ಠಿಸಿದವರುಗಳಿಗೆ, **ತವಾಸ್ಮೀತಿ ಚ ಯಾಚತಾಮ್** - ನಿನಗೆ ಎಂದರೆ ಪರಮ ಪುರುಷನಿಗೆ ಶೇಷಭೂತನಾಗಿದ್ದೇನೆ ಎಂದು ಪ್ರಾರ್ಥಿಸುವ ಎಂದರೆ ನಿನಗೆ ನಿತ್ಯ ಕೈಙ್ಕರ್ಯಮಾಡಬೇಕೆಂದು ಯಾಚಿಸುವ, **ಪಿತೃಹಂತೄಣಾಮಪಿ** - ಹಾಗೆ ಶರಣಾಗತಿಯನ್ನು ಅನುಷ್ಠಿಸಿದವರು ಪಿತೃವನ್ನು ಕೊಂದವರಾದರೂ ಕೂಡ, **ಸಾಧವಃ** - ಸಾಧುಜನಗಳು, ಪ್ರಾಜ್ಞರು **ಪ್ರಸಾದಂ ಕುರ್ವನ್ತಿ** - ಅನುಗ್ರಹವನ್ನು ಮಾಡುವರು" **ಇತ್ಯಾದಿಗಳ್**- ಇವೇ ಮೊದಲಾದ ಪ್ರಮಾಣಗಳೂ ಕೂಡ, **ಇಪ್ಪಡಿಕ್ಕು** - ಈ ಸಂದರ್ಭದಲ್ಲಿ' **ಸುಘಟಿತಙ್ಗಳಾಮ್** - ಶಾಸ್ತ್ರಸಮ್ಮತ ವಾದವುಗಳೇ. ಅದು ಹೇಗೆ ಎಂದರೆ, ಪ್ರಪನ್ನನಾಗಿ ಉತ್ತರಾಘರೂಪದಲ್ಲಿ ಇಂತಹ ಮಹತ್ತಾದ ಅಪರಾಧಗಳು ಪ್ರಾಪ್ತವಾದರೂ ಕೂಡ, ಆದಕ್ಕೆ ಅನುತಾಪ ಉಂಟಾಗಿ ಪ್ರಾಯಶ್ಚಿತ್ತವನ್ನನುಷ್ಠಿಸಿ, ಮುಂದೆ ಹಾಗೆ ಮಾಡುವದಿಲ್ಲವೆಂಬ ಸಙ್ಕಲ್ಪಯುಕ್ತನಾಗಿದ್ದಾನೆಂದು ಭಾವಿಸಿ, ಸಾಧುಗಳು ಪ್ರಸಾದಂ ಕುರ್ವಂತಿ ಎಂದು ಹೇಳಲ್ಪಟ್ಟಿತೆಂಬ ಭಾವವು. ಹಾಗೆ ಸಾಧುಗಳು ಅನುಗ್ರಹಿಸುವದಕ್ಕೆ ಕಾರಣವೇನು? ಎಂದರೆ, "**ಯಾ ಪ್ರೀತಿ ರ್ಮಯಿ**

---

(೧) ವಿ. ಧ. ೧೦೬-೫೩.

**ಸಂನ್ಯಸ್ತಾ ಮದ್ಭಕ್ತೇಷು ಸದಾಸ್ತು ತೇ। ಅವಮಾನ ಕ್ರಿಯಾ ತೇಷಾಂ ಸಂಹರತ್ಯ ಖಿಲಂಜಗತ್"** ಎಂದು ಪ್ರಪನ್ನಾವಮಾನವು ನಿಂದಿಸಲ್ಪಟ್ಟಿರುವದರಿಂದ ಸಾಧುಗಳು ಅನುಗ್ರಹಿಸುವದೇ ಸತ್ಯವು. ಇದರಲ್ಲಿ ಶಾಸ್ತ್ರವಿರುದ್ಧವೇನೂ ಇಲ್ಲವೆಂಬ ಭಾವವು. ಒಂದುವೇಳೆ ಆತನು ಹೀಗೆ ಪುನಶ್ಶರಣಾಗತಿಯನ್ನನುಷ್ಠಿಸಿ ಪರಿಶುದ್ಧನಾಗದ ಪಕ್ಷದಲ್ಲಿ ಅಪರಾಧಪರಿಹಾರಾಧಿಕಾರಾಂತ್ಯ ಶ್ಲೋಕದಲ್ಲಿ **"ಶಿಕ್ಷಯಾಪ್ಯನ ಘೇಯರ್ನ ಕ್ರೋಡೀಕರೋತಿ ಪ್ರಭುಃ"** ಅಂತವನನ್ನು ಶಿಕ್ಷಿಸಿ, ಪರಿಶುದ್ಧನನ್ನಾಗಿ ಮಾಡಿ ದೇಹಾವಸಾನದಲ್ಲಿ ಮೋಕ್ಷವನ್ನು ಕೊಡುವನೆಂದು ಹೇಳಲ್ಪಟ್ಟಿತು.

ಆಗಲಿ, ಅಪರಾಧಪರಿಹಾರಾಧಿಕಾರದ ಆದಿಸಙ್ಗ್ರಹ ಶ್ಲೋಕದಲ್ಲಿ, **"ಯದ್ಯಪ್ಯೇವ ಮಸಾರವಿಷಯ ಸ್ರೋತಃ ಪ್ರಸೂತೈಃ ಪುನಃ। ಪಂಕೈರೇವ ಕಳಂಕಯ ನ್ನಿಜತನುಂ ಪ್ರಾಜ್ಞೈ ರ್ನಸಂಶ್ಲಿಷ್ಯತೇ"** ಎಂದು ಹೇಳಿರುವದು ಈ ಅಭಿಪ್ರಾಯಕ್ಕೆ ವಿರೋಧವಾಗುವದಿಲ್ಲವೇ? ಶರಣಾಗತಿಯಿಂದ ಶುದ್ಧನಾದ ಪ್ರಪನ್ನನು ವಿಷಯೋಪಭೋಗಾದಿಗಳು, ಮತ್ತು ಇವುಗಳಿಂದುಂಟಾಗುವ ಅಪರಾಧಗಳು, ಇಂತಹ ಅಪರಾಧಗಳಿಗೆ ಗುರಿಯಾದರೆ, ಪ್ರಾಜ್ಞರೊಂದಿಗೆ ಸೇರಿರುವದಕ್ಕೆ ಯೋಗ್ಯನಲ್ಲವು ಎಂದು ಹೇಳಿದುದು ವಿರೋಧವಲ್ಲವೋ? ಎಂದರೆ ವಿರೋಧವೇನೂ ಇಲ್ಲವು; ಅಲ್ಲಿ ಹೇಳಿದುದು ಪ್ರಪನ್ನನ ಸ್ವರೂಪಕ್ಕೆ ಯೋಗ್ಯವಲ್ಲವು, ಅಂತವನು ಐಹಿಕೋಪ ಭೋಗಗಳಲ್ಲಿ ಲಿಪ್ತನಾಗಕೂಡದು, ಲಿಪ್ತನಾದರೆ ತನ್ನ ಸ್ವರೂಪಕ್ಕೆ ಹಾನಿಯು ಎಂದು ಇಷ್ಟುಮಾತ್ರ ಬೋಧಿಸಲ್ಪಟ್ಟಿತೇವಿನಾ, ಅಂತವನಿಗೆ ದೇಹಾವಸಾನದಲ್ಲಿ ಮೋಕ್ಷವಿಲ್ಲವೆಂದು ಹೇಳಲಿಲ್ಲವಾದುದರಿಂದ ಪರಸ್ಪರ ವಿರುದ್ಧಾಭಿಪ್ರಾಯಗಳಲ್ಲವು. ಮೈಗೆ ಕೆಸರು ಬಳಿದುಕೊಂಡವನು ಸ್ವಚ್ಛವಾಗಿ ಪರಿಶುದ್ಧರಾಗಿರುವರ ಜೊತೆಸೇರಲು ಯೋಗ್ಯನಲ್ಲವೆಂದು ಇಷ್ಟುಮಾತ್ರವೇ ಅಲ್ಲಿ ಹೇಳಿದರು. ಮುಂದೆ ಪ್ರಪತ್ತಿಯ ಪ್ರಭಾವದ ಉಪಪಾದನೆಗಾಗಿ ಉಪಾಯನಿಷ್ಠ ಭಾಗವತನ ಪ್ರಭಾವವನ್ನು ತಿಳಿಸುತ್ತಾರೆ.

**ಉಪಾಯನಿಷ್ಠನಾದ ಭಾಗವತನ ಮಹಿಮೆಯಲ್ಲೂ ಏನೂ ನ್ಯೂನತೆ ಇಲ್ಲವು.**

---

ಹಿಂದೆ ಒಂದು ಕ್ಷಣಕಾಲಸಾಧ್ಯವಾದ ಪ್ರಪತ್ತಿಯು ಎಲ್ಲಿಯಾದರೂ ಮಹಾಪರಾಧಗಳನ್ನೆಲ್ಲಾ ಹೋಗಲಾಡಿಸೀತೆ ಎಂಬ ಸಂದೇಹವನ್ನು ಹೋಗಲಾಡಿಸಿ ಪ್ರಪದನಕ್ಕೆ ಅಂತಹ ಪಾಪವನ್ನು ಹೋಗಲಾಡಿಸಿ ಮೋಕ್ಷವನ್ನು ಕೊಡುವಶಕ್ತಿಯುಂಟೆಂದು ಸಮರ್ಥಿಸಿದರು. ಆದರೆ ಕೆಲವರು ಸಂಪೂರ್ಣ ವೈರಾಗ್ಯವಿಲ್ಲದೆ, ಐಹಿಕ ಸಂಸಾರ ಪ್ರವೃತ್ತಿಗಳಲ್ಲಿ ಅನ್ವಯವನ್ನಿಟ್ಟುಕೊಂಡು ಶರಣಾಗತಿಯನ್ನನುಷ್ಠಿಸಿರುತ್ತಾರೆ; ಇದು ಕೆಲವರಿಗೆ ಸರಿಬೀಳದೆ ಯಾವಾಗ ಸಂಪೂರ್ಣವೈರಾಗ್ಯವಿಲ್ಲವೋ ಆಗ

ಉಪಾಯ ನಿಷ್ಠಭಾಗವತ ಪ್ರಭಾವೇಽಪಿ ನ್ಯೂನತಾ ನಾಸ್ತೀತ್ಯಾಹ.

ನಮ್ ದರ್ಶನತ್ತಿಲೇ ನಿಲೈಯುಡೈಯರಾಯ್, ಮುಮುಕ್ಷುಕ್ಕ ಳಾಯ್, ಕರ್ಮಜ್ಞಾನ ಭಕ್ತಿ ಪ್ರಪತ್ತಿಗಳಿಲ್ ಏದೇನುಮೊರು ಶಾಸ್ತ್ರೀಯ ಮರ್ಯಾದೈಯಾಲೇ ಭಗವತ್ಪ್ರವಣ ರಾನಾರ್ಕ್ಕು ಯತಮಾನ ಸಂಜ್ಞಾದ್ಯವ

---

ಶರಣಾಗತಿಯು ಮುಕ್ತಿಯನ್ನು ತರಲಾರದು, ಅಂತಹ ಪ್ರಪನ್ನರೆಂದು ಹೇಳಿಸಿಕೊಳ್ಳು ವವರು, ಸರಿಯಾದ ವೈರಾಗ್ಯಯುಕ್ತ ಭಾಗವತರುಗಳೊಂದಿಗೆ ಸಂಭಾಷಣೆಗೂ ಕೂಡ ಅನರ್ಹರೆಂದು ಅಭಿಪ್ರಾಯಪಡುವರು. ಶ್ರೀನಿಗಮಾಂತ ದೇಶಿಕರವರು ಇದು ಸರಿ ಯಾದ ಅಭಿಪ್ರಾಯವಲ್ಲವೆಂದು ಸಪ್ರಮಾಣವಾಗಿ ತೋರಿಸುತ್ತಾರೆ—ನಮ್ ದರ್ಶ ನತ್ತಿಲ್ – "ನಾಥೋಪಜ್ಞಪ್ರವೃತ್ತಂ ಬಹುಭಿರುಪಚಿತಂ ಯಾಮುನೇಯ ಪ್ರಬಂಧೈಸ್ಸಮ್ಯಕ್ತ್ರಾತಂ ಯತೀನ್ದ್ರೈರಖಿಲತಮಃ ಕರ್ಶನಂ ದರ್ಶನಂ ನಃ" ಎಂದು ಹೇಳಿರುವಹಾಗೆ, ನಾಥಮುನಿಗಳ ಪ್ರಥಮಜ್ಞಾನದಿಂದ ಉಂಟಾದ್ದಾಗಿ ಶ್ರೀಯಾಮುನಮುನಿಗಳ ದಿವ್ಯಗ್ರಂಥಗಳಿಂದ ಚೆನ್ನಾಗಿ ಅಭಿವೃದ್ಧಿಯನ್ನು ಹೊಂದಿ ದುದಾಗಿ, ಶ್ರೀಭಾಷ್ಯಕಾರರವರಿಂದ ಚೆನ್ನಾಗಿ ರಕ್ಷಿಸಲ್ಪಟ್ಟದ್ದಾಗಿ, ಎಲ್ಲಾ ಸಿದ್ಧಾಂ ತಗಳಲ್ಲಿರುವ ಅಜ್ಞಾನಾಂಧಕಾರವನ್ನೆಲ್ಲಾ ಯಥಾರ್ಥಜ್ಞಾನವೆಂಬ ಬೆಳಕಿನಿಂದ ಹೋಗಲಾಡಿಸುವಂತಾದ್ದಾಗಿ, ಹೀಗೆ ಮಹಿಮೆಯನ್ನು ಹೊಂದಿರುವ, ನಮ್ ದರ್ಶನತ್ತಿಲ್ - ನಮ್ಮ ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ, ನಿಲೈಯುಡೈಯ ರಾಯ್ - ಪ್ರತಿಷ್ಠಿತೆಯನ್ನು ಹೊಂದಿದವರಾಗಿ, ಮುಮುಕ್ಷುಕ್ಕಳಾಯ್ - ಮೋಕ್ಷಾರ್ಥಿಗಳಾಗಿ, ಕರ್ಮಜ್ಞಾನ ಭಕ್ತಿಪ್ರಪತ್ತಿಗಳಿಲ್ - ಉಪಾಸನಕ್ಕೆ ಪರಂ ಪರಯಾ ಕಾರಣಗಳಾದ ಕರ್ಮಯೋಗವೇನು, ಜ್ಞಾನಯೋಗವೇನು, ಮತ್ತು ಸಾಕ್ಷಾದುಪಾಯಗಳಾದ ಭಕ್ತಿಯೋಗವೆಂದರೆ ಪರಮಾತ್ಮೋಪಾಸನವೇನು ಮತ್ತು ಭರನ್ಯಾಸವೇನು, ಈ ಎರಡುಮಾರ್ಗಗಳಲ್ಲಿ ಏದೇನುಮೊರುಶಾಸ್ತ್ರೀಯಮರ್ಯಾದೆ ಯಾಲೇ - ಯಾವುದಾದರೂ ಒಂದು ಮೋಕ್ಷಕ್ಕೆ ಕಾರಣಭೂತವಾಗಿ ಶಾಸ್ತ್ರದಲ್ಲಿ ಹೇಳಿರುವ ಪ್ರಕಾರ, ಭಗವತ್ಪ್ರವಣ ರಾನಾರಕ್ಕು - ಭಗವಂತನನ್ನು ಆಶ್ರಯಿಸಿ ದವರಿಗೆ, ಯತಮಾನ ಸಂಜ್ಞಾದ್ಯವಸ್ಥೈಗಳಿಲೇ - ಯತಮಾನ ಸಂಜ್ಞಾ ವಸ್ಥೆ, ಆದಿಪದದಿಂದ ವ್ಯತಿರೇಕ ಸಂಜ್ಞಾವಸ್ಥೆ, ಏಕೇನ್ದ್ರಿಯ ಸಂಜ್ಞಾವಸ್ಥೆ, ವಶೀಕರಣ ಸಂಜ್ಞಾವಸ್ಥೆ, ಹೀಗೆ ಇಂದ್ರಿಯಗಳನ್ನೂ ಮನಸ್ಸನ್ನೂ ವಿಷಯಗ ಳಿಂದ ತಿರುಗಿಸಿ ಮನಸ್ಸು ಜೀವಾತ್ಮನಲ್ಲೂ ಮತ್ತು ಪರಮಾತ್ಮನಲ್ಲೂ ನಿಲ್ಲುವಹಾಗೆ ಮಾಡುವ ಅವಸ್ಥಾ ವಿಶೇಷಗಳು, ಇಂತಹ ವೈರಾಗ್ಯವನ್ನು ಹೊಂದುವ ಪ್ರಯತ್ನ

**ಸ್ಥೈಗಳಿಲೇ ಅರ್ಥಸಙ್ಗಾದಿಗಳಾಗಿರ ಶಿಲವ್ಯಾಧಿಗಳ್ ನಿಶ್ಶೇಷಮಾಗ ಶಮಿಯಾದ ಮಟ್ಟೈಕೊಣ್ಡು ಇವರ್‌ಗಳ್ ಪ್ರಾಕೃತರೈಪ್ಪೋಲೆ ಅಸಂಭಾಷ್ಯರೆನ್ರು ಶಿಲ ವೈರಾಗ್ಯ ಮಾತ್ರ ಪ್ರಧಾನರ್‌ಗಳ್ ಶೊಲ್ಲುವರ್‌ಗಳ್.**

---

ದಲ್ಲಿರುವಾಗ, **ಅರ್ಥಸಂಗಾದಿಗಳಾಗಿರ** - ದ್ರವ್ಯಾಶೆ ಮತ್ತು ಕಾಮಪ್ರವರ್ತನೆಯಲ್ಲಿ ಆಶೆ ಇವೇ ಮೊದಲಾದವುಗಳಾದ, ಇಲ್ಲಿ ಆದಿ ಶಬ್ದದಿಂದ ಕಾಮದಿಂದುಂಟಾಗುವ, ಕ್ರೋಧ ಲೋಭಾದಿಗಳು ಹೇಳಲ್ಪಟ್ಟವು, **ಶಿಲವ್ಯಾಧಿಗಳ್** - ಕೆಲವು ರೋಗಗಳು, **ನಿಶ್ಶೇಷಮಾಗ ಶಮಿಯಾದ ಮಟ್ಟೈಕೊಂಡು** - ನಿಶ್ಶೇಷವಾಗಿ ನಿವಾರಣೆ ಹೊಂದದಿರುವದನ್ನು ಮಾತ್ರ ಮೂಲಮಾಡಿಕ್ಕೊಂಡು, **ಅವರ್‌ಗಳ್** - ಆ ಮೋಕ್ಷಾರ್ಥಿಗಳು, **ಪ್ರಾಕೃತರೈಪ್ಪೋಲೆ** - ಸಾಧಾರಣರಾಗಿ ವಿಷಯೋಪಭೋಗಗಳಲ್ಲಿಮಾತ್ರವೇ ಆಶೆ ಇರುವವರಹಾಗೆ, **ಅಸಂಭಾಷ್ಯರೆನ್ರು** - ಪ್ರಪನ್ನರೊಂದಿಗೆ ಸಂಭಾಷಣೆಗೆ ಅನರ್ಹರೆಂದು, **ಶಿಲವೈರಾಗ್ಯಮಾತ್ರ ಪ್ರಧಾನರ್** - ಕೆಲವು ವೈರಾಗ್ಯವನ್ನು ಮಾತ್ರವೇ ಮೋಕ್ಷಾರ್ಥಿಗೆ ಮುಖ್ಯವಾದುದನ್ನಾಗಿ ಭಾವಿಸುವವರು, **ಶೊಲ್ಲುವರ್‌ಗಳ್** – ಹೇಳುವರು. ಯಾರು ಎಂದು ಹೇಳಲಿಲ್ಲವು. ಇಂತವರೆಂದರೆ ವೈಷಮ್ಯಗಳಿಗೆ ವೃಥಾ ಕಾರಣವಾದೀತೆಂದು ಭಾವಿಸಿ ಶ್ರೀ ನಿಗಮಾಂತ ದೇಶಿಕರವರು ಹೇಳಲಿಲ್ಲವು. ಹಾಗಿರುವಾಗ, ಶ್ರೀ ನಿಗಮಾಂತರ ಮಾರ್ಗವೇ ನಮಗೂ ಸತ್ಸಂಪ್ರದಾಯವಾದುದರಿಂದ ನಾವೂ ಹೇಳುವದಿಲ್ಲವು. ಪ್ರಪತ್ತಿಯನ್ನು ಅನುಷ್ಠಿಸಿದವನಿಗಾಗಲಿ, ಅಥವಾ ಭಕ್ತ್ಯುಪಾಯವನ್ನನುಷ್ಠಿಸುವದಕ್ಕಾಗಿ, ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳಲ್ಲಿ ಯಾವ ಪರ್ವದಲ್ಲಿ ಅನುಷ್ಠಾನವಿರುವಾಗ ಯಾಗಲಿ ಮೋಕ್ಷಾಧಿಕಾರಿಗೆ ಬೇಕಾದ ವೈರಾಗ್ಯದ, ಮೇಲೆ ಹೇಳಿದ ನಾಲ್ಕು ಅವಸ್ಥೆಗಳಲ್ಲಿ ಎಲ್ಲಿಯಾದರೂ, ಧನಾಶೆಯಾಗಲಿ, ಕಾಮ ಕ್ರೋಧಾದಿ ಸಙ್ಗವಾಗಲಿ ಉಂಟಾದರೆ, ಅವರುಗಳು ಸಂಪೂರ್ಣವಾಗಿ ಮೋಕ್ಷಪ್ರಾಪ್ತಿಗೆ ಅನರ್ಹರೆಂದೂ ಅವರೊಂದಿಗೆ ಪ್ರಪನ್ನರಾದವರು ಸಂಭಾಷಿಸಕೂಡದೆಂಬುದು ಕೆಲವರ ಅಭಿಪ್ರಾಯವು. ಇದು ಸರಿಯಾದ ಅಭಿಪ್ರಾಯವಲ್ಲವೆಂದು ಮುಂದಿನ ವಾಕ್ಯದಿಂದ ಹೇಳುತ್ತಾರೆ. ಈ ವಾಕ್ಯದಲ್ಲಿ ಕರ್ಮಜ್ಞಾನ ಭಕ್ತಿ ಪ್ರಪತ್ತಿಗಳಿಲ್ ಎಂದು ನಾಲ್ಕು ಹೇಳಲ್ಪಟ್ಟರುವದರಿಂದ ಇವು ನಾಲ್ಕೂ ಪ್ರತ್ಯೇಕ ಮೋಕ್ಷೋಪಾಯಗಳೆಂದು ಕೆಲವರು ಭ್ರಮಯುಕ್ತರಾಗಬಹುದು. ಇಂತಹ ಭ್ರಮೆಯ ನಿವಾರಣಕ್ಕಾಗಿ ಸಾರದೀಪಿಕಾ ವ್ಯಾಖ್ಯಾತೃವು, "ಮೋಕ್ಷತ್ತುಕ್ಕು ಪರಂಪರಯಾ ಕಾರಣಙ್ಗಳಾನ ಕರ್ಮಯೋಗ ಜ್ಞಾನಯೋಗಙ್ಗಳೆನ್ನ, ಸಾಕ್ಷಾದುಪಾಯಙ್ಗಳಾನ ಭಕ್ತಿ ಪ್ರಪತ್ತಿಗಳೆನ್ನ, ಇವತ್ತಿಲಿವೈ ಯೆಲ್ಲಾಂ ಭಗವದ್ಭಜನತ್ತಿಲ್

ಶಾಸ್ತ್ರೀಯ ಮರ್ಯಾದೆಗಳ್" ಎಂದು ಹೀಗೆವ್ಯಾಖ್ಯಾನಮಾಡಿರುತ್ತಾರೆ. ಸ್ವತಂತ್ರೋಪಾಯವಾದ ಪ್ರಪತ್ತಿಯು ಸಕೃದನುಷ್ಠೇಯವಾದುದು. ಕರ್ಮಯೋಗ ಜ್ಞಾನಯೋಗಗಳು ಭಕ್ತಿಯೋಗಕ್ಕೆ ಅಙ್ಗಗಳಾದುದರಿಂದ, ಇವುಗಳೆಲ್ಲಾ ಚಿರಕಾಲಾನುಷ್ಠೇಯಗಳಾದುದರಿಂದ, ಅಙ್ಗಗಳೂ ಸಾಕ್ಷಾದುಪಾಯವೂ ಸಹ ಹೇಳಲ್ಪಟ್ಟವು ಹಾಗಿದ್ದ ಪಕ್ಷದಲ್ಲಿ ಭಕ್ತಿಯೊಂದೇ ಹೇಳಿದ್ದರೆ ಸಾಕಾಗಿತ್ತಲ್ಲವೇ? ಈ ವೈರಾಗ್ಯವನ್ನು ಸಾಧಿಸಿಕೊಡುವ ಯತಮಾನ ಸಂಜ್ಞಾದ್ಯವಸ್ಥೆಗಳು ಭಕ್ತಿಯೋಗದಲ್ಲಿ ಮಾತ್ರವೇ ಇಲ್ಲದೆ ಜ್ಞಾನಯೋಗಾದಿಗಳಲ್ಲೂ ಉಂಟಾದುದರಿಂದ ಇಲ್ಲಿ ನಾಲ್ಕೂ ಹೇಳಲ್ಪಟ್ಟವು. ಇದರಿಂದ ಇವು ನಾಲ್ಕೂ ಸಾಕ್ಷಾದುಪಾಯಗಳೆಂದು ಭಾವಿಸತಕ್ಕದ್ದಲ್ಲವು. ಈ ಸಂದರ್ಭದಲ್ಲಿ ಶ್ರೀ ಯತಿವರ್ಯರ ದಿವ್ಯಸೂಕ್ತಿಗಳು ಸರ್ವಸಂಶಯಗಳನ್ನೂ ಹೋಗಲಾಡಿಸುತ್ತವೆ. (೧) **ತದಿದ ಮಪವರ್ಗೋಪಾಯತಯಾ ವಿಧಿತ್ಸಿತಂ ವೇದನ ಮುಪಾಸನ ಮಿತ್ಯವಗಮ್ಯತೇ** – ಮೋಕ್ಷಕ್ಕೆ ಉಪಾಯವು ಉಪಾಸನವೇ ಎಂದು ಹೇಳಲ್ಪಟ್ಟಿರುತ್ತದೆ. (೨) ಪುನಃ **"ಸರ್ವಾಸೂಪನಿಷತ್ಸು ಮೋಕ್ಷ ಸಾಧನತಯಾ ವಿಹಿತಂ ವೇದನ ಮುಪಾಸನ ಮಿತ್ಯುಕ್ತಮ್"** – ಎಲ್ಲಾ ಉಪನಿಷತ್ತುಗಳಲ್ಲೂ ಉಪಾಸನವೇ ಮೋಕ್ಷಸಾಧನವೆಂದು ಹೇಳಲ್ಪಟ್ಟಿರುತ್ತದೆ. (೩) **"ನಾಹಂ ವೇದೈ" ರಿತ್ಯಾದಿನಾ** (ಗೀ. ೧೧. ೫೩) **ತದ್ಭಕ್ತಿವ್ಯತಿರಿಕ್ತೋಪಾಯನಿಷೇಧಉಕ್ತಃ**–**ನಾಹಂವೇದೈಃ** ಎಂಬ ಗೀತಾಶ್ಲೋಕದಮೂಲಕ ಭಕ್ತಿಯಲ್ಲದೆ ಬೇರೇ ಸಾಕ್ಷಾದುಪಾಯವಿಲ್ಲವೆಂದು ಹೇಳಿರುತ್ತದೆ. ಇಲ್ಲಿ ಭಕ್ತಿ ಎಂದರೆ **"ಏವಂರೂಪಾಧ್ರುವಾನುಸ್ಮೃತಿರೇವ ಭಕ್ತಿ ಶಬ್ದೇನಾಭಿಧೀಯತೇ** ಉಪಾಸನವೇ ಎಂಬ ಶ್ರೀ ಭಾಷ್ಯಕಾರೋಕ್ತಿಯೇ ಇರುತ್ತದೆ. (೪) ಶ್ರೀ ಭಗವದ್ಗೀತಾ ಮೂರನೆಯ ಅಧ್ಯಾಯದ ಅವತಾರಿಕೆಯಲ್ಲೂ ಸ್ಪಷ್ಟವಾಗಿ ಕರ್ಮಯೋಗ ಜ್ಞಾನಯೋಗಗಳು ಉಪಾಸನವಾದ ಮೋಕ್ಷೋಪಾಯಕ್ಕೆ ಅಙ್ಗಗಳೆಂದು ಹೇಳಲ್ಪಟ್ಟವೆ. **"ಪುರುಷೋತ್ತಮ ಪ್ರಾಪ್ತ್ಯುಪಾಯ ಭೂತ ವೇದನೋಪಾಸನ ಧ್ಯಾನಾದಿ ಶಬ್ದ ವಾಚ್ಯ ತದೈಕಾನ್ತಿ ಕಾತ್ಯನ್ತಿಕ ಭಕ್ತಿಂ ವಕ್ತುಂ ತದಙ್ಗಭೂತಂ ಪ್ರಾಪ್ತುರಾತ್ಮನೋ ಯಾಥಾತ್ಮ್ಯದರ್ಶನಂ ತನ್ನಿತ್ಯತಾ ಜ್ಞಾನಪೂರ್ವಕಾಸಙ್ಗ ಕರ್ಮನಿಷ್ಪಾದ್ಯಜ್ಞಾನಯೋಗಸಾಧ್ಯಮುಕ್ತಮ್"** ಇದರಿಂದ ಕರ್ಮಯೋಗವು ಜ್ಞಾನಯೋಗವನ್ನು ಸಾಧಿಸಬಲ್ಲದೆಂದೂ ಹಾಗೆಯೇ ಜ್ಞಾನಯೋಗವು ಭಕ್ತಿಯೋಗವನ್ನು ಸಾಧಿಸಬಲ್ಲದೆಂದೂ ಹೀಗೆ ಅಙ್ಗಗಳೆಂದು ಹೇಳಲ್ಪಟ್ಟಿರುತ್ತದೆ. (೫) ಹಾಗೆಯೇ ಯಾಮುನಮುನಿಗಳೂ ಗೀತಾರ್ಥಸಂಗ್ರಹದ ಪ್ರಥಮ ಶ್ಲೋಕದಲ್ಲೂ **"ಸ್ವಧರ್ಮಜ್ಞಾನ ವೈರಾಗ್ಯ ಸಾಧ್ಯ ಭಕ್ತ್ಯೇಕಗೋಚರಃ** - ಕರ್ಮಯೋಗವೇನು ಜ್ಞಾನಯೋಗವೇನು ವೈರಾಗ್ಯವೇನು ಇವುಗಳಿಂದ ಸಾಧಿಸಲ್ಪಟ್ಟ ಪರಮಾ

ತ್ಮೋಪಾಸನಮಾತ್ರದಿಂದಲೇ ಸಾಕ್ಷಾತ್ಕರಿಸಲ್ಪಡುವವನೆಂದು ಹೇಳಲ್ಪಟ್ಟಿರು ತ್ತದೆ. ಆದುದರಿಂದಲೇ ಭಕ್ತಿ ಪ್ರಪತ್ತಿಗಳೇ ಸಾಕ್ಷಾತ್ತಾಗಿ ಉಪಾಯಗಳು. ಶ್ರೀ ನಿಗಮಾನ್ತ ದೇಶಿಕರವರು ಈ ಮೇಲಿನವಾಕ್ಯದಲ್ಲಿ ಕರ್ಮಜ್ಞಾನಭಕ್ತಿ ಪ್ರಪ ತ್ತಿಗಳಿಲ್ ಏದೇನು ಮೊರುಶಾಸ್ತ್ರ ಮರ್ಯಾದೆಯಾಲೇ ಭಗವತ್ಪ್ರಪಣಾವಾನಾರ್ಕ್" ಎಂದು ಇವು ನಾಲ್ಕು ಉಪಾಯಗಳು ಎಂದು ಹೇಳಿದರು ಎಂದು ಕಲ್ಪಿಸಿ ಭಗವ ದ್ಗೀತಾ ಬೋಧಕ್ಕೆ ವಿರುದ್ಧವಾಗಿ ಇಲ್ಲಿ ಹೇಳಿರುತ್ತಾರೆಂಬುದು ತುಂಬಾ ಶೋಚ ನೀಯವಾದ ವಿಷಯವು. ಸ್ವಾಮಿ ದೇಶಿಕರವರೇ ಇದೇ ಅಧಿಕಾರದಲ್ಲೇ ಮುಂದೆ "ಮುಕ್ತಿಮಾರ್ಗತ್ತುಕ್ಕು ಮುನ್ನಡಿಯಾನ ಕರ್ಮಯೋಗಾದಿಪರ್ವಙ್ಗಳಿಲೇ" ಎಂದು ಇರುವದನ್ನಾದರೂ ವಿಮರ್ಶಿಸಿ ತಿಳಿದರೆ ಭ್ರಮ ನಿವಾರಣೆಯಾಗುತ್ತದೆ. ಇಲ್ಲಿ ಕರ್ಮಯೋಗವು ಮುಕ್ತಿಮಾರ್ಗಕ್ಕೆ ಮೊದಲು ಮೆಟ್ಟಲು ಎಂದು ಹೇಳಿರುವ ದರಿಂದ ಮಿಕ್ಕಮೆಟ್ಟಲುಗಳನ್ನು ಹತ್ತಿದರೇನೆ ಮೋಕ್ಷಪ್ರಾಪ್ತಿಯು ಎಂಬುದು ಅತಿ ವಿಶದವು. ಇದನ್ನೇಸ್ವಾಮಿ ನಾಗಮಾಂತರು ನ್ಯಾಯಸಿದ್ಧಾಂಜನದಲ್ಲಿ "ನಕೇವಲಂ ಕರ್ಮ ಜ್ಞಾನಸಮುಚ್ಚಯೋಽಪಿ ಮೋಕ್ಷಹೇತುಃ" ಎಂದು ವ್ಯಕ್ತವಾಗಿ, ಬರೀ ಕರ್ಮಯೋಗವೇ ಆಗಲಿ, ಅಥವಾ ಜ್ಞಾನಯೋಗ ಸಹಕೃತವಾಗಲಿ ಮೋಕ್ಷವನ್ನು ಕೊಡುವದಿಲ್ಲವೆಂದು, ತಿಳಿಸಿರುತ್ತಾರೆ.

ವೈರಾಗ್ಯದ ಅವಸ್ಥೆಗಳು ನಾಲ್ಕೆಂದು ಒಂದಕ್ಕಿಂತ ಒಂದು ಉತ್ಕರ್ಷಾವಸ್ಥೆ ಎಂದು ಭಗವದ್ಗೀತೆಯ ೨ನೆಯ ಅಧ್ಯಾಯದಲ್ಲಿ ೫೫ ರಿಂದ ೫೮ ನೆಯ ಶ್ಲೋಕ ಗಳಲ್ಲಿ ಉಪಪಾದಿತವು. ಇವು ಯಾವುವೆಂದರೆ—

೧. ಯತಮಾನ ಸಂಜ್ಞಾವಸ್ಥೆಯು. ಇದು ೫೮ನೆಯ ಶ್ಲೋಕದಲ್ಲಿ ಉಪಪಾದಿತವು ಇದರಲ್ಲಿ ಬಾಹ್ಯೇಂದ್ರಿಯಗಳನ್ನು ವಿಷಯಗಳಲ್ಲಿ ಪ್ರವರ್ತಿಸಿದ ಹಾಗೆಯೂ, ಜೀವಾತ್ಮ ಸ್ವರೂಪದಲ್ಲಿ ನಿಲ್ಲುವಹಾಗೆ ಪ್ರಯತ್ನಿಸುವ ಅವಸ್ಥೆಯು.

೨. ವ್ಯತಿರೇಕ ಸಂಜ್ಞಾವಸ್ಥೆಯು - ಬಾಹ್ಯೇಂದ್ರಿಯಗಳನ್ನು ನಿಗ್ರಹಿಸು ವಾಗ ಮನಸ್ಸು ಚಂಚಲವಾಗುವ ಸಂದರ್ಭದಲ್ಲಿ ವಿಷಯಗಳಲ್ಲಿ ಔದಾಸೀನ್ಯ ವನ್ನು ಹೊಂದಿ, ಮನಸ್ಸು ಆತ್ಮರೂಪ ಚಿನ್ತನದಲ್ಲೇ ನಿಲ್ಲುವಹಾಗೆಮಾಡುವ ಅವಸ್ಥೆಯೆ. ಇದು ಗೀತಾ (೨-೫೭) ರಲ್ಲಿ ಉಪಪಾದಿತವು.

೩. ಏಕೇನ್ದ್ರಿಯ ಸಂಜ್ಞಾವಸ್ಥೆಯು – ಮೇಲೆ ಹೇಳಿದಹಾಗೆ ಪ್ರಯತ್ನ ವನ್ನಿಟ್ಟರೂ ಬಹುಕಾಲದಿಂದ ಬಂದ ವಿಷಯೋಪಭೋಗವಾಸನೆಯು ಜೀವಾತ್ಮ ಸ್ವರೂಪ ಚಿನ್ತನದಲ್ಲಿಟ್ಟ ಜ್ಞಾನವನ್ನು ಅಪಹರಿಸಬಹುದು. ಇಂತಹ ವಾಸನೆ ಯನ್ನು ಜಯಿಸಿ, ಪುರುಷನನ್ನು ದ್ವೇಷಿಸುವ ಯುವತಿಗೆ, ಆ ಪುರುಷನ ಸಙ್ಗ ವನ್ನೇ ಏರ್ಪಡಿಸುವ ಮೂಲಕ ಆತನಲ್ಲಿ ಅನುರಾಗ ಉಂಟಾಗುವಹಾಗೆ ಮಾಡೋಣ

**ಇದುವುನ್ ಭಗವಚ್ಛಾಸ್ತ್ರಾದಿಗಳಿಲ್ ಖಿನ್ನವೃತ್ತ್ಯಾದಿ ಪ್ರಕರಣಙ್ಗಳಾಲೇ ಪರಿಹಾರ್ಯಮ್.**

---

ಹೇಗೋ ಹಾಗೆ, ತನ್ನ ಪರಿಶುದ್ಧಾತ್ಮ ಸ್ವರೂಪ ಚಿನ್ತನದಲ್ಲೇ ಪ್ರೀತಿ ಹೆಚ್ಚಿ ವಿಷಯೋಪಭೋಗವಾಸನೆಯನ್ನು ನಿರ್ಮೂಲಮಾಡುವ ಅವಸ್ಥೆಯು. (ಗೀ ೨-೫೬)

೪. **ವಶೀಕಾರ ಸಂಜ್ಞಾವಸ್ಥೆಯು**-ಇದರಲ್ಲಿ ಪರಮ ವೈರಾಗ್ಯಪ್ರಾಪ್ತಿಯು. ಆತ್ಮಾವಲೋಕನವು ಸಿದ್ಧಿಯಾಗುವ ಅವಸ್ಥೆಯು. ಜೀವಾತ್ಮನ ಸಾಕ್ಷಾತ್ಕಾರವು ಪರಮಾನಂದರೂಪವಾಗಿ ತೋರುತ್ತದೆಯಾದುದರಿಂದ, ವಿಷಯಗಳಲ್ಲಿ ಅತ್ಯಂತ ವಿರಕ್ತಿಯು. ಈ ನಾಲ್ಕು ಅವಸ್ಥೆಗಳ ಉಪಪಾದನಕ್ಕಾಗಿ ದಾಸನು ಬರೆದಿರುವ ಭಗವದ್ಗೀತಾ (೨-೫೫ರಿಂದ ೫೮) "**ಪ್ರಜಹಾತಿ ಯದಾ ಕಾಮಾನ್**" ಎಂದಾರಂಭಿಸಿ ಹೇಳಿರುವ ನಾಲ್ಕು ಶ್ಲೋಕಗಳನ್ನು ಪರಾಂಬರಿಸಿ. ಹೀಗೆ ನಾಲ್ಕು ಅವಸ್ಥೆಗಳೂ ಭಕ್ತಿಯೋಗದಲ್ಲೂ ಉಂಟು. ಅಲ್ಲಿ, ಆತ್ಮಸಾಕ್ಷಾತ್ಕಾರಕ್ಕೆ ಬದಲಾಗಿ ಪರಮಾತ್ಮಸಾಕ್ಷಾತ್ಕಾರವಾಗಿ ಅದರಲ್ಲಿ ನಿರತಿಶಯಾನಂದವು ದೊರೆಯುತ್ತದೆ. ಹಾಗೆಯೇ ಪ್ರಪದನವನ್ನನುಷ್ಠಿಸಿ ವೈರಾಗ್ಯಹೊಂದಿರುವನಿಗೂ ಉಂಟು.

ಹೀಗೆ ಜ್ಞಾನಯೋಗ ಭಕ್ತಿಯೋಗಗಳಲ್ಲಿ ಪ್ರವೃತ್ತಿಇರುವ ಸಂದರ್ಭದಲ್ಲಿ ಈ ನಾಲ್ಕು ಅವಸ್ಥೆಗಳಲ್ಲಿ ಯಾವ ಸಂದರ್ಭದಲ್ಲಾದರೂ ಅರ್ಥಕಾಮಗಳಲ್ಲಿ ಅಭಿಲಾಷೆಯುಂಟಾದರೂ, ಹಾಗೆಯೇ ಭರನ್ಯಾಸವನ್ನು ಅನುಷ್ಠಿಸಿದ ನಂತರ **ಪರಿತ್ಯಕ್ತಾಮಯಾಲಂಕಃ** ಎಂದು ಹೇಳಿರುವ ವೈರಾಗ್ಯವು ಉತ್ತರಕಾಲದಲ್ಲೂ ಅನುಸರಿಸಿ ಬರಬೇಕಾದುದಕ್ಕೆ ಬದಲಾಗಿ ಅರ್ಥಕಾಮಗಳಲ್ಲಿ ಸಙ್ಗ ಉಂಟಾದರೆ, ಅಂತವರು ನಷ್ಟಾತ್ಮರೆಂಬ ಭಾವದಿಂದ ಅವರುಗಳು ಸಂಭಾಷಣೆಗೆಕೂಡ ಅನರ್ಹರೆಂದು ನಮ್ಮವರಲ್ಲೇ ಕೆಲವರು ಹೇಳುವರು. ಇದು ಸರಿಯಾದ ಅಭಿಪ್ರಾಯವಲ್ಲವೆಂದು ಮುಂದಿನವಾಕ್ಯದಿಂದ ಹೇಳುತ್ತಾರೆ-**ಇದುವುನ್**-ಇಂತಹ ಆಕ್ಷೇಪವೂ, **ಭಗವಚ್ಛಾಸ್ತ್ರಾದಿಗಳಿಲ್**-ಪಾಂಚರಾತ್ರಾದಿ ಭಗವಚ್ಛಾಸ್ತ್ರವೇ ಮೊದಲಾದವುಗಳಲ್ಲಿ, **ಖಿನ್ನವೃತ್ತ್ಯಾದಿ ಪ್ರಕರಣಙ್ಗಳಾಲೇ** - ದೇಹ ಯಾತ್ರೆಯು ನಡೆಯದೇ ಇರುವ ದರಿದ್ರರಾದವರ ವೃತ್ತಾಂತಗಳಿಂದ, **ಪರಿಹಾರ್ಯಮ್** - ಪರಿಹರಿಸಲು ಯೋಗ್ಯವಾದುದು. ಇಲ್ಲಿ ಆದಿಪದದಿಂದ ಶಾಣ್ಡಿಲ್ಯ ಸ್ಮೃತಿ ಮೊದಲಾದವು ಹೇಳಲ್ಪಟ್ಟವು. ದೇಹಧಾರಣೆಯು ಆವಶ್ಯಕವಾದುದರಿಂದ, ಕ್ಷುದಾದಿಗಳಿಂದ ಪೀಡಿತರಾಗಿ ಧನಾದಿಗಳಲ್ಲಿ ಅವರಿಗೆ ಸಙ್ಗ ಉಂಟಾದರೆ ಅವರು ಹೇಗೆ ಅಸಂಭಾಷಣೀಯರು? ಎಂಬ ತಾತ್ಪರ್ಯವು. ಅದರಿಂದ ಅವರ ಪ್ರಪನ್ನತೆಗೇನೂ ಕುಂದಕವಿಲ್ಲವೆಂಬ ಭಾವವು. ಪ್ರಪದನ ಸಂದರ್ಭದಲ್ಲಾದರೋ, ಅದು ಎಂದಿಗೂ ವಿತಥವಾಗದು. ದೇಹಾವಸಾನದಲ್ಲಿ

ಅವರುಗಳು ಮುಕ್ತಿಯನ್ನು ಹೊಂದುವರು. ಒಂದುವೇಳೆ ಈ ಧನಾಶೆಯು ಮೂಲಕ ಬುದ್ಧಿ ಪೂರ್ವಾಘವು ಪ್ರಾಪ್ತವಾಗಿದ್ದರೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿದ್ದರೆ ಅಲ್ಪಶಿಕ್ಷೆಯ ಮೂಲಕ ರಕ್ಷಿಸಲ್ಪಡುವರೆಂಬುದನ್ನು ಹಿಂದೆಯೇ "**ಕ್ರೋಡೀಕರೋತಿ ಪ್ರಭುಃ**" ಎಂಬಲ್ಲಿ ಹೇಳಲ್ಪಟ್ಟಿತೆಂಬುದು ಸೂಚಿತವು. ಅಂತಹ ನಿರ್ಧನರನ್ನು ಹೀಗೆ ಅವಮರ್ಯಾದೆಯಿಂದ ಕಾಣಬಾರದೆಂಬುದಕ್ಕೆ ವಚನಗಳುಂಟು, "**ನಿರ್ಧನಾಂಶ್ಚರತೋ ಲೋಕೇ ವ್ಯತ್ಯರ್ಥಂ ಭೃಶ ಕರ್ಶಿತಾನ್ । ನಾವಮನ್ಯೇತ ತ್ರೈಲೋಕ್ಯಂ ಪವಿತ್ರೀ ಕುರುತೇ ಹರಿಃ**" ಈ ಶ್ಲೋಕವು ಭಾಗವತದಲ್ಲೂ ಉಂಟು, ಅಲ್ಲಿ **ಭೃಶಕರ್ಶಿತಾನ್** ಎಂಬುವಕ್ಕೆ ಬದಲಾಗಿ **ಮಹ ವೈಷ್ಣವಾನ್** ಎಂದಿರುತ್ತದೆ. ದೇಹಯಾತ್ರೆಯು ನಡೆಯುದೆ ತುಂಬಾ ಖಿನ್ನರಾಗಿ ಈ ಲೋಕದಲ್ಲಿ ಸಂಚರಿಸುತ್ತಿರುವ ಭಾಗವತೋತ್ತಮರನ್ನು ಅವರು ಹಾಕಿಕೊಂಡಿರುವ ಹರಕು ಬಟ್ಟೆ ಮುಂತಾದವನ್ನು ನೋಡಿ ಯಾಚಕಕ್ಕಾಗಿ ಬಂದರೆಂದು ಅವರನ್ನು ಅವಮರ್ಯಾದೆಯಿಂದ ನೋಡತಕ್ಕದ್ದಲ್ಲವು, ಏತಕ್ಕೆಂದರೆ ದುರ್ಮಾರ್ಗಿಗಳಿಂದ ಅಪವಿತ್ರವಾದ ಈ ಲೋಕವನ್ನು ಸರ್ವಪಾಪ ಹರನಾದ ಶ್ರೀ ಹರಿಯು ಇಂತಹ ಪವಿತ್ರರಾದ ಭಾಗವತರುಗಳ ಮೂಲಕ ಪವಿತ್ರವಮಾಡಿಸಬೇಕೆಂದು ಸಙ್ಕಲ್ಪಿಸಿರುವನು ಎಂಬುದು ತಾತ್ಪರ್ಯವು. ಹಾಗೆ ಅವಮರ್ಯಾದೆಯನ್ನು ಮಾಡಿದರೆ ಉಂಟಾಗುವ ಅನಿಷ್ಟವು ಹೇಳಲ್ಪಟ್ಟಿರುತ್ತದೆ. "**ಅನಾಚಾರಾನ್ ದುರಾಚಾರಾ ನಜ್ಞಾತೄನ್ ಹೀನಜನ್ಮನಃ । ಮದ್ಭಕ್ತಾನ್ ಶ್ರೋತ್ರಿಯೋ ನಿಂದನ್ ಸದ್ಯಶ್ಚಂಡಾಲತಾಂ ವ್ರಜೇತ್**" ಎಂದರೆ ವ್ಯತ್ಯಸ್ತವಾದವರೇ ಆಗಲಿ, ಕೆಟ್ಟ ಆಚಾರವುಳ್ಳವರೇ ಆಗಲಿ ತಿಳುವಳಿಕೆ ಯಿಲ್ಲದವರೇ ಆಗಲಿ ಅಥವಾ ಕೀಳು ಜಾತಿಯವರೇ ಆಗಲಿ, ಅವರು ಯಾವಾಗ ನನ್ನನ್ನು ಆಶ್ರಯಿಸಿ ಭಕ್ತರಾದರೋ, ಅಂತವರನ್ನು ಶ್ರೋತ್ರಿಯನಾಗಿರುವವನು ನಿಂದಿಸಿದುದಾದರೆ ಒಡನೇ ಚಂಡಾಲತ್ವವನ್ನು ಹೊಂದುವನೆಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ "**ಬ್ರಾಹ್ಮಣಾನಾಂ ಪರಿಭವಾತ್ ಪರಿವಾದಾಚ್ಚ ಭಾರತ । ಕುಲಾನ್ಯಾಕುಲತಾಂ ಯಾಂತಿ ನ್ಯಾಸಾಪಹರಣೇನಚ**" (ಭಾರತ ಉದ್ಯೋ. ೩೬. ೭೬) ಎಂಬ ವಿದುರೋಕ್ತಿಯೂ ಇರುತ್ತದೆ. ಮುಂದಿನ ವಾಕ್ಯದಿಂದ ಈ ಮೇಲಿನ ಅಭಿಪ್ರಾಯವನ್ನೇ ಸಮರ್ಥಿಸಿ ಹೇಳುತ್ತಾರೆ.

**ಅಮಾರ್ಗರ ವಿಷಯದಲ್ಲಿ ಹೇಳಲ್ಪಟ್ಟ ನಿಂದೆಯೂ, ಸನ್ಮಾರ್ಗದಲ್ಲಿದ್ದು ಸ್ವಲ್ಪ ಜಾರಿದವರ ವಿಷಯದಲ್ಲಿ ಕೂಡದು.**

---

**ಅಸಂಭಾಷ್ಯರು** ಎಂದು ಹೇಳಿದುದು ಎಂತವರಲ್ಲಿ ಸಂಭವಿಸುತ್ತದೆ ಎಂದರೆ ಪ್ರಮಾಣಪೂರ್ವಕವಾಗಿ ಹೇಳುತ್ತಾರೆ. **ಡಂಭಿ ಹೈತುಕ ಪಾಷಂಡಿ ಬಕ**

## ಅಮಾರ್ಗ ಪ್ರವೃತ್ತಿವಿಷಯೇ ವಿಹಿತನಿಂದಾ, ಕಿಂಚಿತ್ ಸ್ಖಲನ ವಿಷಯೇ, ನಕಾರ್ಯಾ.

(೧) "ದಂಭಿಹೈತುಕ ಪಾಷಂಡಿ ಬಕವೃತ್ತೀಂಶ್ಚ ವರ್ಜಯೇತ್," (೨) "ಯೇತು ಸಾಮಾನ್ಯಭಾವೇನ ಮನ್ಯನ್ತೇ ಪುರುಷೋತ್ತಮಮ್। ತೇವೈ ಪಾಷಣ್ಡಿನೋ ಜ್ಞೇಯಾ ಸ್ಸರ್ವಕರ್ಮ ಬಹಿಷ್ಕೃತಾಃ" (೩) "ಪುಂಸಾಂ ಜಟಾಭರಣ ಮೌಂಡ್ಯವತಾಂ ವೃಥೈವ" ಇತ್ಯಾದಿಗಳಿರ್ ಪಡಿಯೇ ವಳಿತಪ್ಪಿನಾರ್

---

ವೃತ್ತೀಂಶ್ಚ-ದಂಭಾಚಾರರನ್ನೂ, ಹೈತುಕ - ಶಾಸ್ತ್ರಪ್ರಮಾಣವನ್ನು ತ್ಯಾಗಮಾಡಿ ಹೇತುಗಳ ಮೂಲಕ ಯುಕ್ತಿವಾದದಲ್ಲೇ ಇಷ್ಟವುಳ್ಳ ಕುತರ್ಕಿಗಳು, ಪಾಷಂಡಿ - ಪರತತ್ವವನ್ನು ಬಿಟ್ಟು ಅನ್ಯ ದೇವತೆಯೇ ಪರತತ್ವವೆಂದು ವಾದಿಸುವವರು, ಬಕ ವೃತ್ತೀಂಶ್ಚ -ಮರಳಿಯ ಹಾಗೆ ಇದ್ದುಕೊಂಡು ಇತರರನ್ನು ವಂಚಿಸುವವರು, ಇಂತವರನ್ನೆಲ್ಲಾ, ವರ್ಜಯೇತ್ - ತ್ಯಜಿಸತಕ್ಕದ್ದು" ಮುಂದೆ ತ್ಯಾಜ್ಯರಾದ ಪಾಷಂಡಿಗಳಿಂತವರೆಂದರೆ ತಿಳಿಸುತ್ತಾರೆ.—ಯೇತು - ಯಾರಾದರೋ, ಸಾಮಾನ್ಯಭಾವೇನ- ಪರತತ್ವವೆಂದೂ ಜಗತ್ತಿಗೆಲ್ಲಾ ಸತ್ತಾದಾಯಕನಾಗಿ ನಿಯಾಮಕನೆಂದೂ ಅರಿಯದೆ ಸಾಮಾನ್ಯನು ಎಂಬ ಭಾವದಿಂದ, ಪುರುಷೋತ್ತಮನನ್ನು, ಮನ್ಯನ್ತೇ - ತಿಳಿಯುವರೋ, ತೇವೈ - ಅಂತವರಾದರೋ, ಪಾಷಂಡಿನಃ-ಪಾಷಂಡಿಗಳೆಂದೂ, ಅಂತವರು ಸರ್ವಕರ್ಮಬಹಿಷ್ಕೃತಾಃ-ಸಮಸ್ತ ಶಾಸ್ತ್ರವಿಹಿತ ಕರ್ಮಗಳಿಗೂ ಯೋಗ್ಯರಲ್ಲವೆಂದೂ, ಜ್ಞೇಯಾಃ - ತಿಳಿಯಲ್ಪಡತಕ್ಕವರು ಎಂದರೆ, ಹಾಗೆ ತಿಳಿಯತಕ್ಕದ್ದೆಂಬ ಭಾವವು. "ಪುಂಸಾಂ ಜಟಾಭರಣ" ಇತ್ಯಾದಿ ಪೂರ್ಣಶ್ಲೋಕವು ಯಾವುದೆಂದರೆ. "ಪುಂಸಾಂ ಜಟಾಧರಣ ಮೌಂಡ್ಯವತಾಂ ವೃಥೈವ ಮೋಘಾಶಿನಾಮಖಿಲ ಶೌಚ ನಿರಾಕೃತಾನಾಂ। ತೋಯಪ್ರದಾನ ಪಿತೃಪಿಂಡಬಹಿಷ್ಕೃತಾನಾಂ ಸಂಭಾಷಣಾದಪಿ ನರಾ ನರಕಂಪ್ರಯಾಂತಿ,"ಧರಣ ವೆಂಬುದು ಪಾಠಾಂತರವು. ಎಂತವರೊಂದಿಗೆ ಸಂಭಾಷಣಮೂಲಕವಾಗಿ ನರಕಪ್ರಾಪ್ತಿಯಾಗುತ್ತದೆಂದರೆ ಹೇಳುತ್ತಾರೆ. ವ್ಯರ್ಥವಾಗಿ ಆಚಾರವಿಲ್ಲದೆ ಡಂಭಕ್ಕಾಗಿ ಜಟೆಯನ್ನು ಧರಿಸುವವರು, ಇನ್ನು ಕೆಲವರು ಶಿರಸ್ಸಿನ ಕೂದಲನ್ನು ಪೂರಾ ತೆಗದಬಿಟ್ಟು ಶಿಖೆ ಇಲ್ಲದವರು, ಭಗವನ್ನಿವೇದನಕ್ಕಾಗಿಯೂ ಪಂಚಮಹಾ ಯಜ್ಞಕ್ಕಾಗಿಯೂ ಅಲ್ಲದೆ, "ಯೇಪಚನ್ತ್ಯಾತ್ಮಕಾರಣಾತ್" ಎಂದು ಹೇಳಿರುವಹಾಗೆ ಕೇವಲ ಉದರಪೋಷಣಕ್ಕಾಗಿ ಅಡಿಗೆ

---

(೧) ಯಾಜ್ಞವಲ್ಕ್ಯ ಸ್ಮೃತಿ. ೧. ೧೩೦ (೨) ಬೃಹನ್ನಾರದೀಯೇ.
(೩) ವಿ. ಪು. ೩. ೧೮. ೧೦೫.

ಮಾಡಿಊಟಮಾಡುವವರು,ಅವಗಾಹನಸ್ನಾನ ಮಂತ್ರಸ್ನಾನ ಸಂಧ್ಯಾವಂದನಾದಿಗಳನ್ನು ತ್ಯಾಗಮಾಡಿ ಅಪವಿತ್ರರಾದವರು, ತರ್ಪಣ ಶ್ರಾದ್ಧಾದಿಗಳನ್ನು ಬಿಟ್ಟವರು,ಇಂತವರೊಂದಿಗೆ ಸಂಭಾಷಣೆಯೂಕೂಡ,ನರಕ ಪ್ರಾಪ್ತಿಗೆ ಕಾರಣವಾಗುತ್ತದೆಂದು ಹೇಳಲ್ಪಟ್ಟಿರುತ್ತದೆ. ಶ್ರೀಮದ್ಭಾಗವತದಲ್ಲಿ,"ವಿಷ್ಣೋರನ್ಯಂ ಪರತ್ವೇನ ಚೇತಯಾನೋಹ್ಯಚೇತನಃ । ಸ ಪಾಷಣ್ಡೀತಿ ವಿಜ್ಞೇಯಃ ಸರ್ವಕರ್ಮಬಹಿಷ್ಕೃತಃ"ಎಂಬದಾಗಿ ಪಾಷಂಡಿಯ ಲಕ್ಷಣವು ಹೇಳಲ್ಪಟ್ಟಿದೆ; ಮತ್ತು "ಯೇತು ಸಾಮಾನ್ಯ ಭಾವೇನ ಮನ್ಯಂತೇ ಪುರುಷೋತ್ತಮಮ್ । ತೇವೈ ಪಾಷಂಡಿನೋ ಜ್ಞೇಯಾ ಸರ್ವಕರ್ಮಾರ್ನರಾಧಮಾಃ । ಯೋನ್ಯಂ ದೇವಂ ಪರತ್ವೇನ ವದನ್ತ್ಯಜ್ಞಾನಮೋಹಿತಾಃ। ನಾರಾಯಣಾಜ್ಜಗನ್ನಾಥಾತ್‌ತೇವೈ ಪಾಷಣ್ಡನಸ್ಸ್ಮೃತಾಃ ಎಂಬ ಬೃಹನ್ನಾರದೀಯ ಪ್ರಮಾಣಗಳುಂಟು. ವಿಷ್ಣು ಪುರಾಣದ ತೃತೀಯಾಂಶ ಅಷ್ಟಾದಶೋಧ್ಯಾಯದಲ್ಲಿ ಶತಧನುವೆಂಬ ರಾಜನಉಪಾಖ್ಯಾನಮೂಲಕ ಈ ಪಾಷಂಡಾಲಾಪವು ವಿಶೇಷವಾಗಿ ನಿಷೇಧಿಸಲ್ಪಟ್ಟಿರುತ್ತದೆ. ಈ ರಾಜನು ತನ್ನ ಮಹಾ ಪತಿವ್ರತೆಯಾದ ಶೈಬ್ಯಳೊಂದಿಗೆ ಭಾಗೀರಥೀನದಿಯಲ್ಲಿ ಸ್ನಾನಮಾಡಿ ಒಬ್ಬಪಾಷಂಡಿಯೊಂದಿಗೆ ಸಲ್ಲಾಪಗಳನ್ನು ರಾಜನುಮಾತ್ರ ಮಾಡಿದುದರಿಂದ ಅತನಿಗೆ ಅನೇಕ ತಿರ್ಯಗ್ಜಂತು ಜನ್ಮಗಳು ಪ್ರಾಪ್ತವಾದವೆಂದೂ, ಆದರೆ ಸಾಧ್ವಿಯಾದ ಶೈಬ್ಯಳು ಆ ಪಾಷಂಡಿಯೊಂದಿಗೆ ಸಂಭಾಷಿಸದೇ ಇದ್ದುದರಿಂದ ಆಕೆಗೆ ಅಂತಹ ತಿರ್ಯಗ್ಜನ್ಮಗಳು ಉಂಟಾಗಲಿಲ್ಲವೆಂದೂ ವಿಸ್ತಾರವಾಗಿ ಹೇಳಲ್ಪಟ್ಟಿರುತ್ತದೆ; ಆದುದರಿಂದ "ಸಹಾಲಾಪಸ್ತು ಸಂಸರ್ಗಸ್ಸಹಾಸ್ಯಾಚಾತಿ ಪಾಪಿನೀ। ಪಾಷಂಡಭಿ ರ್ದುರಾಚಾರೈ ಸ್ತಸ್ಮಾತ್ತಾನ್ ಪರಿವರ್ಜಯೇತ್ ॥ ಪಾಷಂಡಿನೋ ವಿಕರ್ಮಸ್ಥಾನ್ ಬೈಡಾಲವ್ರತಿಕಾನ್ ಶಠಾನ್ । ಹೇತುಕಾನ್ ಬಕವೃತ್ತೀಂಶ್ಚ ವಾಙ್ಮಾತ್ರೇಣಾಪಿ ನಾರ್ಚಯೇತ್ । ದೂರತಸ್ತೈಸ್ತು ಸಂಪರ್ಕ ಸ್ತ್ಯಾಜ್ಯಶ್ಚಾಪ್ಯತಿಪಾಪಿಭಿಃ । ಪಾಷಂಡಿಭಿ ರ್ದುರಾಚಾರೈಸ್ತಸ್ಮಾತ್ತಾನ್ ಪರಿವರ್ಜಯೇತ್" ಎಂಬದಾಗಿ ಅಂತವರೊಂದಿಗೆ ಸರಸಸಲ್ಲಾಪ ಸಂಪರ್ಕಾದಿಗಳು ಅನರ್ಥಾವಹಗಳೆಂದು ನಿಂದಿಸಲ್ಪಟ್ಟಿವೆ.

ಇಂತವರೀಗ ಸಂಭಾಷಣೆಗೆ ಅನರ್ಹರೇ ವಿನಾ, ಪ್ರಪದನವನ್ನು ಅನುಷ್ಠಿಸಿ ವೈರಾಗ್ಯಮಾತ್ರ ಸ್ವಲ್ಪವಿಲ್ಲದಿರುವದರಿಂದ, ಅವರು ಸಂಭಾಷಣೆಗೆ ಅನರ್ಹರೆಂದು ಹೇಳುವದು ಉಚಿತವಲ್ಲವೆಂದು ಮುಂದೆ ಹೇಳುತ್ತಾರೆ—

ಇತ್ಯಾದಿಗಳಿನ್ ಪಡಿಯೇ - ಈ ಮೇಲಿನ ಪ್ರಮಾಣಗಳಲ್ಲಿ ಹೇಳಲ್ಪಟ್ಟಿರುವ ಪ್ರಕಾರ, ವಳಿತಪ್ಪಿನಾರ್ ಪಕ್ಕಲ್ ಶೊಲ್ಲುವಮ್ - ಶಾಸ್ತ್ರಾಚಾರ ಸಂಪ್ರದಾಯಗಳ ಮಾರ್ಗವನ್ನು ಬಿಟ್ಟುಹೋದ ಪಾಷಂಡಿಗಳನ್ನು ಕುರಿತು ಹೇಳುವ, ವಾರ್ತ್ತೈಯೈ-ಮಾತನ್ನು, ನಿಂದೆಯನ್ನು, ನಲ್ವಳಿಯಿಲ್-ಸಾಧನಗಳಾಗಿ ಉಪಾಯಾನುಷ್ಠಾನವನ್ನು

ಪಕ್ಕಲ್ ಶೊಲ್ಲುವ್ ವಾರ್ತೈಯೈ ನಲ್ಪಳಿಯಿಲದಿ ಕಡುವಮಾರಿನಾರ್ ಪಕ್ಕಲ್ ಶೊಲ್ಲಲಾಗಾದಿರೇ.

ಪ್ರಪನ್ನಾಪಚಾರಃ ತ್ಯಾಜ್ಯ ಏವ.

ಭಾಗವತರಿಲ್ (೧)"ಊನಹೀನ ಪರಿಸ್ರಸ್ತನಷ್ಟ" ವಿಷಯಙ್ಗಳಿಲುಮ್

---

ಮಾಡಿ ಒಳ್ಳೆಮಾರ್ಗದಲ್ಲಿದ್ದು, ಅದಿತ್ತಡವಮಾಂನಾರ್ ಪಕ್ಕಲ್-ಸ್ವಲ್ಪಕಾಲುಡಾಂ ಧನಾಶಿಮೊದಲಾದವುಗಳನ್ನುಳ್ಳವರ ವಿಷಯದಲ್ಲಿ, ಶೊಲ್ಲಲಾಗಾದಿರೇ - ಹೇಳುವದು ನ್ಯಾಯವಾಗುವದಿಲ್ಲವಷ್ಟೇ. ಸಂಭಾಷಣೆಗೆ ಅನರ್ಹರು ಮೇಲೆಹೇಳಿದ ಪ್ರಮಾಣಗಳಲ್ಲಿ ತೋರಿಬರುವಹಾಗೆ ಪಾಷಂಡಿಗಳು, ದುರಾಚಾರರೇ ಮೊದಲಾದವರು, ಮತ್ತು ವರ್ಣಾಶ್ರಮ ಧರ್ಮಗಳನ್ನು ತ್ಯಾಗಮಾಡಿದವರು. ಆದರೆ ಹೊಟ್ಟೆ ಪಾಡಿಗಾಗಿ ನಿರ್ವಾಹವಿಲ್ಲದೆ ಸ್ವಲ್ಪ ಧನಾಶೆ ಮೊದಲಾದವನ್ನು ಇಟ್ಟುಕೊಂಡು ವೈರಾಗ್ಯಶೂನ್ಯರಾದಪ್ರಪನ್ನರು ಸಂಭಾಷಣೆಗೆ ಅನರ್ಹರೆಂದು ಹೇಳುವದು ಯುಕ್ತವಲ್ಲವೆಂಬ ಭಾವವು.

ಹೀಗೆ ಪ್ರಪನ್ನರಾಗಿದ್ದರೂ ವೈರಾಗ್ಯಶೂನ್ಯತೆಯಿಂದ ಅಸಂಭಾಷ್ಯರೆಂದು ಹೇಳುವವರ ಅಭಿಪ್ರಾಯವೇನಿರಬಹುದೆಂದು ಕೇಳಬೇಕಾಗುತ್ತದೆ.—(೧)ಇವರೇನು ಮೋಕ್ಷಾರ್ಹರಲ್ಲವೆಂಬ ಅಭಿಪ್ರಾಯದಿಂದ ಅಸಂಭಾಷ್ಯರೇ? (೨) ಅಥವಾ ಇಂತವರುಗಳನ್ನು ಮಾತಾಡಿಸದೇ ಅವಮಾನಪಡಿಸಿದರೂ ಬಾಧಕವಿಲ್ಲವೆಂಬ ಭಾವದಿಂದ ಅಸಂಭಾಷ್ಯರೇ? ಇವೆರಡು ವಿಕಲ್ಪದಲ್ಲೂ ಅಭಿಪ್ರಾಯಗಳು ಸರಿಯಲ್ಲವೆಂದು ಹೇಳುತ್ತಾರೆ. ಪ್ರಥಮ ವಿಕಲ್ಪದಲ್ಲಿ ಅಂತವರು ಪ್ರಪನ್ನರಾದುದರಿಂದ ಕ್ರೋಡೀ ಕರೋತಿ ಪ್ರಭುಃ ಎಂಬಲ್ಲಿ ತಾವು ಉಪಪಾದಿಸಿದರೀತಿಯಲ್ಲಿ ಅವರಿಗೂ ಮೋಕ್ಷವು ಸಿದ್ಧವು ಎಂದೂ, ದ್ವಿತೀಯ ವಿಕಲ್ಪದಲ್ಲಿ ಅಂತವರೂ ಪ್ರಪನ್ನರಾಗಿ ಭಾಗವತರಾದುದರಿಂದ ಅಂತವರಲ್ಲಿ ಅಪಚಾರವು ಸರ್ವಾತ್ಮನಾ ಕೂಡದೆಂದೂ ಮುಂದಿನ ಎರಡು ವಾಕ್ಯಗಳಿಂದ ಉಪದೇಶಿಸುತ್ತಾರೆ.—

ಪ್ರಪನ್ನರಲ್ಲಿ ಅಪಚಾರವು ಸರ್ವಾತ್ಮನಾ ಕೂಡದು

ಮೇಲೆ ಹೇಳಿದಹಾಗೆ ಪ್ರಥಮ ವಿಕಲ್ಪದಲ್ಲಿ ಮೊದಲು ಪೂರ್ವಪಕ್ಷವನ್ನು ಹೇಳಿ ಅದಕ್ಕೆ ಸಮಾಧಾನವನ್ನು ಹೇಳುತ್ತಾರೆ.—ಭಗವಚ್ಛಾಸ್ತ್ರದಲ್ಲಿ "ತಥಾ ಸ್ವಕರ್ಮ ಶಾಸ್ತ್ರೀಶ ಗುರು ಸತ್ಸಙ್ಗವರ್ಜಿತಾಃ । ಊನಹೀನ ಸ್ರಸ್ತನಷ್ಟದಗ್ಧಾ

---

(೧) ಭಗವಚ್ಛಾಸ್ತ್ರೇ.

(ಕಿಲುವನ್) ಪರಿಮಾತ್ತ್ರಙ್ಗಳಿಲ್ ತಾರತಮ್ಯಂ ವಿಧಿತ್ತ್ರದೇಯಾಗಿಲುಮ್,
ಐಕಾನ್ತ್ಯಮ್ ಕುಲೈಯಾದೇ ಇರುಕ್ಕಿಲ್ ಮುಡುವಿಲೊರು ವಿರಕಾಲೇ

ಜ್ಞೇಯಾಸ್ಸಮಾಖ್ಯಯಾ" ಎಂದು ಹೇಳಿರುತ್ತದೆ. "ತಥಾ - ಹಾಗೆಯೇ ಸ್ವ ಕರ್ಮ - ಅವರವರಿಗೆ ವಿಹಿತಕರ್ಮ, ಶಾಸ್ತ್ರ, ಸರ್ವೇಶ್ವರ, ಗುರು, ಸತ್ಸಙ್ಗ ಇವುಗಳಿಂದ ವರ್ಜಿತಾಃ - ಬಿಡಲ್ಪಟ್ಟವರೂ, ಮತ್ತು ಊನ - ತಾಪಸಂಸ್ಕಾರವಿಲ್ಲದವರು ಎಂದರೆ ಶಂಖ ಚಕ್ರಾಂಕನವಿಲ್ಲದವರು, ಹೀನ - ದ್ವಾದಶೋರ್ಧ್ವಪುಂಡ್ರ, ಸಂಸ್ಕಾರವಿಲ್ಲದವರು, ಪರಿಸ್ರುಸ್ತ - ಗುರುವಿನಿಂದ ನಾಮ ಸಂಸ್ಕಾರವಿಲ್ಲದವರು ನಷ್ಟ - ಮಂತ್ರ ಸಂಸ್ಕಾರವಿಲ್ಲದವರು, ಇವರೆಲ್ಲಾ ಸಮಾಖ್ಯಯಾ - ಒಟ್ಟಿಗೆ ಸೇರಿಸಿರುವದರಿಂದ, ದಗ್ಧಾಃ ಜ್ಞೇಯಾಃ - ಸುಟ್ಟು ಹೋದವರೆಂದು ಎಂದರೆ ಆತ್ಮನಾಶಮಾಡಿ ಕೊಂಡವರೆಂದು ತಿಳಿಯತಕ್ಕವರು, ಎಂದು ಹೇಳಲ್ಪಟ್ಟಿರುತ್ತದೆ." ಶ್ಲೋಕಕ್ಕೆ ಕೆಲವರು ಬೇರೆ ವಿಧವಾಗಿ ಅರ್ಥವನ್ನು ಹೇಳುತ್ತಾರೆಂದು ಸಾರಾಸ್ವಾದಿನಿಯವರು ಹೇಳುತ್ತಾರೆ. ಹೇಗೆಂದರೆ ಸ್ವಕರ್ಮವರ್ಜಿತಾಃ ಊನಾಃ ಎಂದು ಅರ್ಥಮಾಡಿರುತ್ತಾರೆ. ಊನಾಃ-ಕ್ರಮಾಲಂಕಾರರೀತ್ಯಾ, ಸ್ವಕರ್ಮಹೀನರು,ಹೀನಾಃ-ಸ್ವಸೂತ್ರವನ್ನು ತ್ಯಜಿಸಿದವರು, ಪರಿಸ್ರುಸ್ತಾಃ - ಸ್ವ ಗುರು ದೇವತಾ ತ್ಯಾಗಿಗಳು ನಷ್ಟಾಃ - ಸತ್ಸಂಗದಿಂದ ತ್ಯಜಿಸಲ್ಪಟ್ಟವರು ಎಂಬದಾಗಿ; ಹೀಗೆ ನಿಂದಿಸಿರುತ್ತದಲ್ಲಾ ಇವರಿಗೆಲ್ಲಾ ಪ್ರಪನ್ನರಾದ ಮಾತ್ರದಿಂದ ಮೋಕ್ಷ ಉಂಟೋ ಎಂಬುದು ಪೂರ್ವಪಕ್ಷವು. ಇದಕ್ಕೆ ಸಮಾಧಾನವನ್ನು ಹೇಳುತ್ತಾರೆ.—ವಿಷಯಙ್ಗಳಿಲ್ ಇಂತವರ ವಿಷಯಗಳಲ್ಲಿ, ಪರಿಮಾತ್ತ್ರಙ್ಗಳಿಲ್ - ಆದರದಲ್ಲಿ ಅಥವಾ ಉಪಚಾರಗಳಲ್ಲಿ, ತಾರತಮ್ಯಂ ವಿಧಿತ್ತ್ರದೇಯಾಗಿಲುಂ - ಅದಕ್ಕಾಗಿ ತಾರತಮ್ಯ ಕ್ರಮದಿಂದ ಸರ್ವರೂ ಪ್ರಾಯಶ್ಚಿತ್ತಕ್ಕೆ ಅರ್ಹರೆಂದು ವಿಧಿಸಿದ್ದರೂ ಕೂಡ, ಐಕಾಂತ್ಯಂಕುಲೈಯಾತೇ ಇರುಕ್ಕಿಲ್ - ಪರಮಾತ್ಮನಲ್ಲಿ ಐಕಾನ್ತ್ಯ ಭಕ್ತಿಗೆ ಲೋಪವಿಲ್ಲದೇ ಇದ್ದರೆ, ಎಂದರೆ ಮಹಾವಿಶ್ವಾಸದಿಂದ ಆತನನ್ನು ಆಶ್ರಯಿಸಿಕೊಂಡಿದ್ದರೆ, ಒರುವಿರಕಾಲೇ ಯಾವುದಾದರೂ ಒಂದು ಮಾರ್ಗದಿಂದ ಎಂದರೆ ಯಾವುದಾದರೂ ಒಂದು ಪ್ರಾಯಶ್ಚಿತ್ತಮೂಲಕವಾಗಿಯೋ ಅಥವಾ ಅವು ಬುದ್ಧಿ ಪೂರ್ವಕವಾದ ಉತ್ತರಾಘಗಳಾಗುವದರಿಂದ ಪ್ರಾಯಶ್ಚಿತ್ತರೂಪ ಪುನಶ್ಚರಣಾಗತಿಯಿಂದಲಾದರೂ, ಇವರ್‌ಗಳ್-ಇಂತಹ ಪಾತಕಗಳಿಗೆ ಗುರಿಯಾಗಿದ್ದರೂ ಕೂಡ, ಈಡೇರಿ ವಿಡುವರ್‌ಗಳ್ - ಮೋಕ್ಷರೂಪ ಇಷ್ಟಸಿದ್ಧಿಯನ್ನು ಹೊಂದಿಬಿಡುವರು. ಇದರಲ್ಲಿ ಸಂದೇಹವು ಬೇಡವೆಂಬ ಭಾವವು. ಯಾವಾಗ ಸತ್ಸಂಪ್ರದಾಯವನ್ನನುಸರಿಸಿ ಉಪಾಯಾನುಷ್ಠಾನವನ್ನು ಮಾಡಿದರೋ ಮತ್ತು ಪರಮಾತ್ಮನಲ್ಲಿ ಐಕಾನ್ತ್ಯಭಕ್ತಿಯನ್ನಿಟ್ಟರೋ

**ಇವರ್‌ಗಳೀಡೇರಿ ವಿಡುವರ್‌ಗಳ್. ಇವರ್‌ಗಳ್ ತಿರತ್ತಿಲುವ್ ಅಪಚಾರ ಮಾಗಾದೆನ್ರಿರೇ ಶಾಸ್ತ್ರಂ ವಿಧಿತ್ತದು.**

ಅವರಲ್ಲಿ ಯಾವ ನ್ಯೂನತೆಗಳುಂಟಾದರೂ, ಮಹಾಕೃಪಾನಿಧಿಯಾದ ಸರ್ವೇಶ್ವರನು, ಅವರಿಗೆ ಹೇಗಾದರೂ ಮಾಡಿ ಪಶ್ಚಾತ್ತಾಪಾದಿಗಳು ಉದಿಸುವ ಹಾಗೆ ಮಾಡಿ, ಪ್ರಾಯಶ್ಚಿತ್ತವನ್ನನುಷ್ಠಿಸುವಹಾಗೆ ಮಾಡಿ, ಆತನಿಗೆ ಕೊನೆಗೆ ಪರಮ ಪದವನ್ನು ಕೊಟ್ಟು ರಕ್ಷಿಸಿಬಿಡುವನು. ಅವರು ಒಂದುವೇಳೆ ಉಪಾಸನಕ್ಕೆ ಅರ್ಹತೆಯಿದ್ದು ಕರ್ಮಯೋಗಾದಿಗಳ ಅನುಷ್ಠಾನಕಾಲದಲ್ಲಿ ಏನಾದರೂನ್ಯೂನತೆಬಂದರೂ ಕ್ರಮೇಣ ಅದು ಪೂರ್ಣವಾಗುವಹಾಗೆಮಾಡಿ ಅವರನ್ನೂಸಂಗ್ರಹಿಸಿಬಿಡುವನು. ಗೀ.೬-೪೦-೪೪ನೆಯ ಶ್ಲೋಕಗಳನ್ನನೋಡಿ. ಆದರೆ ಪರಮಾತ್ಮನಲ್ಲಿ ಮಾತ್ರ ಇವರಿಗೆ ಐಕಾನ್ತ್ಯವು ಕೆಡಕೂಡದುಎಂದುಹೇಳಿದರು. ಇದು ಇದ್ದುದಾದರೆ ಕೃಪಾಸಾಗರನು ಹೇಗಾದರೂಮಾಡಿ, ಪ್ರಪತ್ತಿ ನಿಷ್ಠರಾಗಿದ್ದರೆ ಇದಕ್ಕಾಗಿ ಪ್ರಾಯಶ್ಚಿತ್ತವನ್ನು ಅನುಷ್ಠಿಸುವಹಾಗೆಮಾಡಿ, ಭಕ್ತಿನಿಷ್ಠರಾಗಿದ್ದರೆ ಕ್ರಮೇಣ ಅದು ಕೈಗೂಡುವಹಾಗೆಮಾಡಿ, ಹೀಗೆ ರಕ್ಷಿಸಿ ಬಿಡುವನು. ಆದುದರಿಂದ ಅಂತಹ ಭಗವನ್ನಿಷ್ಠರ ವಿಷಯದಲ್ಲಿ ಅಪಚಾರಗಳ್ ಸರ್ವಾತ್ಮನಾ ಕೂಡದೆಂದು ಶಾಸ್ತ್ರಗಳು ಉಪದೇಶಿಸುವದರಿಂದ ಭಾಗವತಾಪಚಾರವು ಸರ್ವಾತ್ಮನಾ ಆಗದು ಎಂದು ಮುಂದಿನ ವಾಕ್ಯದಿಂದ ಉಪದೇಶಿಸುತ್ತಾರೆ. ಹಾಗೆ ಉಪದೇಶಿಸುವ ಸಂದರ್ಭದಲ್ಲಿ ಎರಡನೆಯ ವಿಕಲ್ಪವಾದ ಅಂತವರಿಗೆ ಮಾಡುವ ಅವಮಾನವು ದೋಷಾವಹವಲ್ಲವೆಂಬ ಅಭಿಪ್ರಾಯವನ್ನು ಖಂಡಿಸುತ್ತಾರೆ. ಇವರ್‌ಗಳ ತಿರತ್ತಿಲುವ್ - ಇವರುಗಳ ವಿಷಯದಲ್ಲೂ, ಅಪಚಾರ ಮಾಗಾದೆನ್ರು - ಅಪಚಾರವು ಅನುಚಿತವೆಂದು, ಎನ್ರಿರೇ ಶಾಸ್ತ್ರಮ್ ವಿಧಿತ್ತದು - ಎಂದಲ್ಲವೇ ಶಾಸ್ತ್ರವು ವಿಧಿಸಿರುವದು. ಆ ಶಾಸ್ತ್ರಗಳು ಯಾವುವೆಂದರೆ, ಹಿಂದೆಯೇ ಹೇಳಲ್ಪಟ್ಟವು. "ನಿರ್ಧನಾಂಶ್ಚ ರತೋ ಲೋಕೇವೃತ್ತ್ಯರ್ಥ ಭೃಶಕರ್ಶಿತಾ। ನಾವಮನ್ಯೇತ ತ್ರೈಲೋಕ್ಯಂ ಪವಿತ್ರೀಕುರುತೇ ಹರಿಃ" ಮತ್ತು "ಅನಾಚಾರಾ ದುರಾಚಾರಾ ಅಜ್ಞಾತ್ವಾ ಹೀನಜನ್ಮನಃ। ಮದ್ಭಕ್ತಾ ಶ್ರೋತ್ರಿಯೋ ನಿಂದ ಸದ್ಯಶ್ಚಂಡಾಲತಾಂ ವ್ರಜೇತ್" ಇತ್ಯಾದಿ ಭಗವಚ್ಛಾಸ್ತ್ರವಾಕ್ಯಗಳು, ಮತ್ತು "ಯೇ ಬ್ರಾಹ್ಮಣಾಸ್ತ್ವೇಹ ಮಸಂಶಯಂ ನೃಪ ತೇಷ್ವರ್ಚಿತೇಷ್ವರ್ಚಿತೋಽಹಂ ಯಥಾವತ್। ತೇಷ್ವೇವತುಷ್ಟೇಷ್ವಹಮೇವ ತುಷ್ಟೋ ವೈರಂಚತೈರ್ಯಸ್ಯ ಮಮಾಪಿವೈರಂ॥", ಓ ರಾಜನೇ ಯಾರು ಬ್ರಾಹ್ಮಣರೋ ಅವರೇ ನಾನು, ಈ ವಿಷಯದಲ್ಲಿ ಸಂಶಯವು ಬೇಡ, ಅವರುಗಳು ಪೂಜಿಸಲ್ಪಟ್ಟರೆ ನಾನೇ ಯಥಾವತ್ತಾಗಿ ಪೂಜಿಸಲ್ಪಡುವೆನು; ಅವರು ಸಂತುಷ್ಟರಾದರೆ ನಾನೇ ಸಂತುಷ್ಟ

भक्त प्रपन्नयोः भ्रंशेऽपि मोक्षसिद्धि रस्त्येव.

(೧) "ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನವಿದ್ಯತೇ । ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋಭಯಾತ್" ಎನ್ರುಮ್, (೨) "ಪಾರ್ಥ ನೈವೇಹನಾಮುತ್ರವಿನಾಶ ಸ್ತಸ್ಯವಿದ್ಯತೇ। ನಹಿ ಕಲ್ಯಾಣ ಕೃತ್ಕ

---

ನಾಗುವೆನು, ಅವರೊಂದಿಗೆ ವೈರವಾದರೆ ನನ್ನೊಂದಿಗೂ ವೈರವೇ ಎಂಬುದು ಈ ಶ್ಲೋಕಾರ್ಥವು. ಹಾಗೆಯೇ "ಯಶ್ಶೂದ್ರಂ ಭಗವದ್ಭಕ್ತಂ ನಿಷಾದಂ ಶ್ವಪಚಂ ತಥಾ। ವೀಕ್ಷತೇ ಜಾತಿ ಸಾಮಾನ್ಯಾತ್ಸಯಾತಿ ನರಕಂ ನರಃ" ಭಗವದ್ಭಕ್ತನಾಗಿರುವವನು ಶೂದ್ರನೇ ಆಗಿರಲಿ ಪ್ರಾಣಿಹಿಂಸೆಮಾಡುವ ಬೇಡರವನೇ ಆಗಲಿ, ನಾಯಿಮಾಂಸವನ್ನು ತಿನ್ನುವ ಪಂಚಮನೇ ಆಗಲಿ, ಆತನ ಕೀಳು ಜಾತಿಯನ್ನು ನೋಡಿ ಹೀನನಾದವನೆಂದು ಭಾವಿಸಿದರೆ ನರಕವನ್ನು ಹೊಂದುವನು" ಮತ್ತು "ವೈಷ್ಣವೇ ಪರಿವಾದಾಚ್ಚ ಪತತ್ಯೇವ ನ ಸಂಶಯಃ" ಇತ್ಯಾದಿ ಪ್ರಮಾಣಗಳು ಇಲ್ಲಿ ಸೂಚಿಸಲ್ಪಟ್ಟವು.

ಭಕ್ತ ಪ್ರಪನ್ನರಿಗೆ ಸ್ಖಲಿತ್ಯ ಉಂಟಾದರೂ ಕ್ರಮೇಣ ಮೋಕ್ಷವು ಉಂಟೇ ಉಂಟು.

ಭಗವಂತನಲ್ಲಿ ಐಕಾನ್ತ್ಯಭಕ್ತಿಯಿದ್ದುದಾದರೆ ಮೋಕ್ಷವು ತಪ್ಪಿದ್ದಲ್ಲವು ಎಂದು ಹಿಂದೆ ಹೇಳಲ್ಪಟ್ಟಿತಲ್ಲಾ, ಹಾಗೆ ಹೇಳಲು ಸಾಧನವೇನಾದರೂ ಉಂಟೋ ಎಂದರೆ ಉಂಟು ಎಂದು ಕೈಮುತಿಕನ್ಯಾಯದಿಂದ ಸ್ಥಾಪಿಸುತ್ತಾರೆ. ಅದಕ್ಕಾಗಿ ಶ್ರೀ ಕೃಷ್ಣಭಗವಾನರವರ ಸ್ವವಾಕ್ಯವನ್ನೇ ಉದಾಹರಿಸುತ್ತಾರೆ:— ಈ "ನೇಹಾಭಿಕ್ರಮನಾಶ"ವೆಂಬ ಶ್ಲೋಕದಿಂದ ಕರ್ಮಯೋಗದ ಮಹಾತ್ಮ್ಯೆಯನ್ನು ಶ್ರೀ ಕೃಷ್ಣಭಗವಾನರವರು ತನ್ನ ಪ್ರಿಯಭಕ್ತನಾದ ಅರ್ಜುನನಿಗೆ ಉಪದೇಶಿಸುತ್ತಾರೆ.—ಇಹ - ಈ ಕರ್ಮಯೋಗಾನುಷ್ಠಾನಮಾಡುವ ಸಂದರ್ಭದಲ್ಲಿ, ಕರ್ಮಯೋಗ ವೆಂದರೇನು ಎಂಬುದಕ್ಕೆ ಹಿಂದೆಯೇ ವಿಶದವಾಗಿ ಉಪಾಯ ವಿಭಾಗಾಧಿಕಾರದಲ್ಲಿ ಉಪಪಾದಿತವಾಗಿರುತ್ತದೆ. ೮೬೫ ನೆಯ ಪುಟವನ್ನು ನೋಡಿ, ಅಭಿಕ್ರಮನಾಶಃ - ಪ್ರಾರಂಭಿಸಿಬಿಟ್ಟುದದರಿಂದ ಫಲನಾಶವು, ನಾಸ್ತಿ - ಇಲ್ಲವು. ಎಂದರೆ ಫಲವು ಉಂಟೇ ಉಂಟು ಎಂಬ ಭಾವವು. ಪ್ರತ್ಯವಾಯೋ ನವಿದ್ಯತೇ – ಏನೋ ವಿಘ್ನವು ಉಂಟಾದುದರಿಂದ ಮಧ್ಯೆ ವಿಚ್ಛೇದ ಉಂಟಾದರೂ ಪ್ರತ್ಯವಾಯವೂ

---

(೧) ಗೀ. ೨-೪೦. (೨) ಗೀ. ೬.೪೦.

ಷ್ಠಿದ್ದುರ್ಗತಿಂ ತಾತಗಚ್ಛತಿ" ಎನ್ರುವ್, ಕರ್ಮಯೋಗತ್ತಿರ್ಕ್ಕೊನ್ನ ಪ್ರಭಾವನ್, ಭಕ್ತಿಪ್ರಪತ್ತಿಗಳಿಲ್ ಕೈಮುತಿಕನ್ಯಾಯತ್ತಾಲೇ ಸಿದ್ಧಮಿರೇ.

---

ಇಲ್ಲವು; ಇತರ ಕರ್ಮಗಳನ್ನು ಮಾಡಿ ಅರ್ಧದಲ್ಲಿ ಬಿಟ್ಟರೆ ಫಲವಿಲ್ಲವೆಂಬುದು ವ್ಯಕ್ತವು. ಕೃಷಿಯನ್ನು ಅರ್ಧಮಾಡಿ ಬಿಟ್ಟುಬಿಟ್ಟರೆ, ಪೈರು ಸಿಕ್ಕುತ್ತದೆಯೇ? ಅದೂ ಅಲ್ಲದೆ ಯಜ್ಞ ಯಾಗಾದಿ ಕರ್ಮಗಳನ್ನು ಕಾಮ್ಯಫಲಕ್ಕಾಗಿ ಅನುಷ್ಠಿಸುವಾಗ ವಿಘ್ನದಿಂದ ಪೂರ್ತಿಸದೆ ಬಿಟ್ಟರೆ, ಬ್ರಹ್ಮರಕ್ಷಸ್ಸೇ ಮೊದಲಾದ ಜನ್ಮಪ್ರಾಪ್ತಿಯುಂಟೆಂದು ಶಾಸ್ತ್ರದಲ್ಲಿ ಪ್ರತ್ಯವಾಯವು ಹೇಳಲ್ಪಟ್ಟಿರುತ್ತದೆ; ರಾಜನು ತನ್ನ ಕೈಕೆಳಗಿರುವ ಅಧಿಕಾರಿಗೆ ಆಜ್ಞಾಪಿಸಿದ ಕೆಲಸವನ್ನು ಪೂರ್ತಿಸದೆ ಬಿಟ್ಟುಬಿಟ್ಟರೆ,ಆತನ ಆಗ್ರಹಕ್ಕೆ ಪಾತ್ರನಾಗುವಪ್ರತ್ಯವಾಯವುಂಟು; ಆದರೆ ಭಗವತ್ಪ್ರೀತ್ಯರ್ಥವಾಗಿ, ಫಲಕರ್ತೃತ್ವಮಮತಾ ತ್ಯಾಗಮಾಡಿ, ಭಗವದಾರಾಧನರೂಪದಲ್ಲಿ ಕೈಕೊಂಡ ಈ ಕರ್ಮಯೋಗವನ್ನು ನಿತ್ಯನೈಮಿತ್ತಿಕಗಳೊಂದಿಗೆ ಮಾಡುವ ಕರ್ಮಾನುಷ್ಠಾನದಲ್ಲಿ ಫಲವು ಎಂದಿಗೂ ಸಿದ್ಧಿಸದೇ ಇರುವದಿಲ್ಲವು; ಏನೊಂದು ಪ್ರತ್ಯವಾಯವೂ ಇಲ್ಲವು. ಸ್ವಲ್ಪಮಪ್ಯಸ್ಯ ಧರ್ಮಸ್ಯ - ಹೀಗೆ ವಿಚ್ಛೇದದಿಂದ ಕರ್ಮಯೋಗವು ಸ್ವಲ್ಪಕಾಲ ಅನುಷ್ಠಿಸಲ್ಪಟ್ಟರೂಕೂಡ, ತ್ರಾಯತೇ ಮಹತೋ ಭಯಾತ್ - ಭಗವದನುಗ್ರಹದಿಂದ ಕ್ರಮೇಣ ಮಹತ್ತಾದ ಭಯವಾದ ಜನ್ಮಜರಾಮರಣ ದುಃಖದಿಂದ ರಕ್ಷಿಸುತ್ತದೆ, ಎಂಬುದು ಈ ಶ್ಲೋಕತಾತ್ಪರವು." ಎನ್ರುವ್ - ಎಂಬದಾಗಿಯೂ, ಇಂತಹ ಅಭಿಪ್ರಾಯವೇ ಮುಂದೆ ಇದೇ ಗೀತೆಯಲ್ಲೇ ಉಪಪಾದಿತವಾಗಿದೆ ಎಂದು ಆ ಶ್ಲೋಕವನ್ನೂ ಉದಾಹರಿಸುತ್ತಾರೆ. ಆದರೆ ಈ ಶ್ಲೋಕವೇನು "ನೇಹಾಭಿಕ್ರಮನಾಶೋಸ್ತಿ" ಎಂಬುದರ ಪುನರುಕ್ತಿಯೋ ಅಥವಾ ಅನುವಾದವೋ ಎಂದರೆ, ಎರಡೂ ಅಲ್ಲವು. ಅದು ಕರ್ಮಯೋಗದ ವಿಚ್ಛೇದವನ್ನು ಕುರಿತದ್ದು. ಇದಾದರೋ ಆತ್ಮಾವಲೋಕನಕ್ಕಾಗಿ ಮಾಡಿದ ಆತ್ಮಧ್ಯಾನದಲ್ಲಿ ವಿಚ್ಛೇದವನ್ನು ಕುರಿತದ್ದು. ಇಲ್ಲಿಯೂ ಕೂಡ ಆತನಿಗೆ ಪ್ರತ್ಯವಾಯವೇ ಇಲ್ಲವೆಂದು ಈ "ಪಾರ್ಥನೈವೇಹ" ಎಂಬ ಶ್ಲೋಕದಲ್ಲಿ ಹೇಳಿ, ಮುಂದಿನ ಎರಡು ಶ್ಲೋಕದಲ್ಲೂ ಶ್ರೇಯಸ್ಸುಂಟಾಗಿ ಕಡೆಗೆ ಮೋಕ್ಷವನ್ನೂ ಸಹ ಹೊಂದುವನೆಂದುಹೇಳಲ್ಪಡುತ್ತದೆ— ಅಂತವನಿಗೂ ಈ ಸಂದರ್ಭದಲ್ಲಿ ಅರ್ಜುನನು ಪ್ರಶ್ನಿಸುತ್ತಾನೆ, ಏನೆಂದರೆ ಮೋಕ್ಷೋಪಾಯಕ್ಕೆ ಹೇತುವಾದ ಇಂತಹ ಆತ್ಮಾವಲೋಕನದಲ್ಲಿರುವಾಗ ಮನಸ್ಸಿನ ಚಾಂಚಲ್ಯದಿಂದ ಏನಾದರೂ ವಿಚ್ಛೇದ ಉಂಟಾದರೆ "ಕಾಂಗತಿಂ ಕೃಷ್ಣಗಚ್ಛತಿ?" ಅಂತವನಿಗೆ ಎಂತಹ ಗತಿಯು? ಉಭಯಭ್ರಷ್ಟತೆಯುಂಟಾಯಿತಲ್ಲಾ, ಎಂಬ ಪ್ರಶ್ನೆಗೆ ಈ ಶ್ಲೋಕವು ಇದರ ಮುಂದಿನ ಶ್ಲೋಕಗಳೂ, ಉತ್ತರವು (೩) "ಹೇ ಪಾರ್ಥ - ಓ

ಅರ್ಜುನನೇ, ತಸ್ಯ - ಬಹು ಸುಕೃತ ಪರಿಪಾಕದಿಂದಲೇ ಸಾಧ್ಯವಾದ ಆತ್ಮಾವ
ಲೋಕನರೂಪಯೋಗವನ್ನಾರಂಭಿಸಿ ವಿಚ್ಛೇದಹೊಂದಿದವನಿಗೆ, ಇಹ- ಇಲ್ಲಿಯಾಗಲಿ,
ಅಮುತ್ರ - ಸ್ವರ್ಗಾದಿ ಲೋಕದಲ್ಲಿಯಾಗಲಿ, ವಿನಾಶಃ-ಫಲಪ್ರಾಪ್ತಿಯು ಇಲ್ಲದೆ
ಹೋಗೋಣವು, ನವಿದ್ಯತೇ-ಇರುವದಿಲ್ಲವು; ಆತನಿಗೆ ಉಭಯಭ್ರಷ್ಟತೆ ಇಲ್ಲವು.
ಏಕೆಂದರೆ ಸಮರ್ಥಿಸಿ ಹೇಳುತ್ತಾರೆ—ಹಿ - ಏತಕ್ಕೆಂದರೆ, ಈತನು
ಕಲ್ಯಾಣಕೃತ್ - ಬಹು ಸುಕೃತ ವಿಶೇಷದಿಂದ ಮೋಕ್ಷಾರ್ಥಿಯಾಗಿ ನನ್ನನ್ನು
ಹೊಂದಬೇಕೆಂಬ ಆಶೆಯಿಂದ ಮಙ್ಗಳಕರವಾದ ಉದ್ಯೋಗದಲ್ಲಿದ್ದವನು, ಅಂತಹ
ಕಶ್ಚಿತ್ - ಯಾವನೊಬ್ಬನೂ, ಹೇತಾತ - ಕರುಣಾನಿಧಿಯು ಕರುಣಾ ಪ್ರವಾಹ
ವನ್ನು ಈ ಸಂಬೋಧನೆಯು ಬೋಧಿಸುತ್ತದೆ, ಓ ಅಪ್ಪನೇ ಎಂದು ಅರ್ಜುನನನ್ನು
ಸಂಬೋಧಿಸಿ ಹೇಳುತ್ತಾರೆ - ದುರ್ಗತಿಂ - ಕೆಟ್ಟಫಲವನ್ನು ನಗಚ್ಛತಿ - ಹೊಂದ
ಲಾರನು, ಹೀಗೆ ಹೇಳಿದುದರಿಂದ ಸದ್ಗತಿಯನ್ನು ಕ್ರಮೇಣ ಹೊಂದುವನೆಂಬುವದು
ನಿಸ್ಸಂಶಯವು ಎಂಬ ಭಾವವು. ಇದನ್ನೇ ಮುಂದಿನ ಎರಡು ಶ್ಲೋಕಗಳಲ್ಲೂ ಉಪ
ಪಾದಿಸಿ ಹೇಳುವಾಗ ಅಂತ್ಯಾವಸ್ಥೆಗೆ ಕೊನೆಗೆ ಕೃಪಾಸಾಗರನು ಮೋಕ್ಷವನ್ನು
ಕೊಡುವನೆಂಬುವ ಉಪಪಾದಿತವು" ಎನ್ರುವಮ್ - ಎಂಬದಾಗಿಯೂ, ಕರ್ಮ
ಯೋಗಸ್ತ್ರಿಕ್ಷ್ಣ - ಕರ್ಮಯೋಗಕ್ಕೇನೇ ಹೇಳಿದ, ಪ್ರಭಾವಮ್ - ಕ್ರಮೇಣ
ಮೋಕ್ಷವನ್ನು ಹೊಂದಿಸುತ್ತದೆಂದು ಹೇಳಿದ ಮಾಹಾತ್ಮ್ಯವು, ಭಕ್ತಿಪ್ರಪತ್ತ್ಯೋಗ
ಕಿಲ್ - ಭಕ್ತಿಪ್ರಪತ್ತಿ ಎಂದರೆ ಭಗವಂತನ ಉಪಾಸನಾರೂಪ ಭಕ್ತಿಯೋಗ
ಮತ್ತು ಭರನ್ಯಾಸಗಳಲ್ಲಿ, ಕೈಮುತಿನ್ಯಾಯತ್ತಾಲೇ - ಕೈಮುತಿಕನ್ಯಾಯದಿಂದ,
ಸಿದ್ಧಮಿರೇ - ಸಿದ್ಧವೆಂಬುದು ಸ್ಪಷ್ಟವು. ಕರ್ಮಯೋಗ ವಿಚ್ಛೇದದಲ್ಲಿ ಕ್ರಮೇಣ
ಮೋಕ್ಷಪ್ರಾಪ್ತಿಯುಂಟಾಗುವದು ಸಿದ್ಧವಾದರೆ ಕರ್ಮಯೋಗವನ್ನು ಚನ್ನಾಗಿ ಅನು
ಷ್ಠಿಸಿ ಅದರಿಂದ ಪ್ರಾಪ್ತವಾಗುವ ಆತ್ಮಾವಲೋಕನದೆಶೆಯಲ್ಲಿ ವಿಚ್ಛೇದ ಉಂಟಾ
ದರೂ ಕ್ರಮೇಣ ಮೋಕ್ಷಪ್ರಾಪ್ತಿ ಸಿದ್ಧವಾದರೆ, ಇಂತಹ ಹೆಚ್ಚಾದ ಸುಕೃತಾವಸ್ಥೆ
ಯಲ್ಲಿರುವಾಗ ವಿಚ್ಛೇದ ಉಂಟಾದರೆ ಕ್ರಮೇಣ ಮೋಕ್ಷ ಉಂಟೆಂಬುದು ಇನ್ನೂ
ನಿಸ್ಸಂಶಯವು ಎಂದು ಏರ್ಪಡುವದರಿಂದ, ಕೈಮುತಿಕ ನ್ಯಾಯ ಸಿದ್ಧವೆಂದು
ಹೇಳಲ್ಪಟ್ಟಿತು. ಅಙ್ಗಾನುಷ್ಠಾನ ದಶೆಯಲ್ಲೇ ಉಂಟಾಗುವ ಮಾಹಾತ್ಮ್ಯವು
ಅಂಗಿಯ ಅನುಷ್ಠಾನ ದಶೆಯಲ್ಲಿ ಇಲ್ಲವೇ? ಇದ್ದೇಇರಬೇಕೆಂಬ ಭಾವವು. ಪ್ರಪ
ತ್ತಿಯಲ್ಲಿ ಆ ಉಪಾಯಕ್ಕೆ ಅಙ್ಗವಾಗಿ ಕರ್ಮಯೋಗವಿಲ್ಲದಿದ್ದರೂ ಕರ್ಮ
ಯೋಗಕ್ಕೆ ಸೇರಿದ, "ನಿಯತಂ ಕುರುಕರ್ಮತ್ವಂ" ಎಂಬಲ್ಲಿ ಹೇಳಿರುವಹಾಗೆ
ಭರನ್ಯಾಸವನ್ನು ಅನುಷ್ಠಿಸಿದ ಕೃತಕೃತ್ಯನೂ "ಮಯಿಕರ್ಮಾಣಿ ಸನ್ನ್ಯಸ್ಯಾ
ಧ್ಯಾತ್ಮಚೇತಸಾ" ಎಂಬಲ್ಲಿ ಹೇಳಿರುವಹಾಗೆ, ನಿತ್ಯನೈಮಿತ್ತಿಕಾನುಷ್ಠಾನಗಳನ್ನು

(೧) ಅಪಿಚೇತ್ಸು ದುರಾಚಾರೋ ಭಜತೇ ಮಾ ಮನನ್ಯಭಾಕ್ ।
ಸಾಧುರೇವ ಸಮನ್ತವ್ಯ ಸ್ಸಮ್ಯಗ್ವ್ಯವಸಿತೋ ಹಿ ಸಃ "॥ ಎನ್ನುವರ್,

ಕರ್ತೃತ್ವ ಫಲ ಮಮತೆಗಳನ್ನು ತೊರೆದು, ತ್ಯಾಗವನ್ನು ಹೇಳಿ,ನನ್ನ ಆರಾಧನಾರೂಪ ದಲ್ಲೇ ನಡೆಸುವನಾದ ಪ್ರಯುಕ್ತ ಅತನೂ ವಿಶೇಷ ಸುಕೃತಶಾಲಿಯೇ; ಅಂತವನಿಗೆ ಏನಾದರೂ ಸ್ಖಾಲಿತ್ಯ ಉಂಟಾದರೆ, ಅವನಿಗೂ ಕೂಡ ಎಂದಿಗೂ ದೇಹಾವ ಸಾನಕಾಲದಲ್ಲೇ ಮೋಕ್ಷವು ತಪ್ಪದೆಂಬುದು "ಕ್ರೋಡೀಕರೋತಿ ಪ್ರಭುಃ" ಎಂಬ ಹೇಳಿಕೆಯಿಂದಲೇ ಸುಸ್ಪಷ್ಟವು.

ಅಂತವರಿಗೆ ಅಲ್ಪ ಸ್ವಲ್ಪ ಸ್ಖಾಲಿತ್ಯಗಳುಂಟಾದರೂ ಕೂಡ ಪ್ರತ್ಯವಾಯ ವೇನೂ ಇಲ್ಲವೆಂಬುದಕ್ಕೂ,ಅಂತವರಿಗೂ ಪರಮ ಶ್ರೇಯಸ್ಸಿನ ಪ್ರಾಪ್ತಿಯುಂಟೆಂಬು ದಕ್ಕೂ ಶ್ರೀಕೃಷ್ಣ ಭಗವಾನರವರ ದಿವ್ಯಸೂಕ್ತಿಗಳನ್ನೇ ಪುನಃ ಉದಾಹರಿಸು ತ್ತಾರೆ. (೧) ಹಿಂದಿನ ಶ್ಲೋಕದಲ್ಲಿ ಜಾತ್ಯಾದಿ ಉತ್ಕೃಷ್ಟತೆ ನಿಕೃಷ್ಟತೆಗಳೊಂ ದನ್ನೂ ಪರಿಗಣಿಸದೆ ಸರ್ವ ಭಕ್ತರನ್ನೂ ಅನುಗ್ರಹಿಸುವನೆಂದು ಹೇಳಿ, ಈ ಶ್ಲೋಕ ದಿಂದ ಆತನಿಗೆ ಅಕೃತ್ಯಕರಣ ಕೃತ್ಯಾಕರಣಾದಿ ಮಹಾ ದೋಷಗಳಿದ್ದರೂ, ಯಾ ವಾಗ ನನ್ನನ್ನಾಶ್ರಯಿಸಿ ಒಳ್ಳೇ ಸಜ್ಕಲ್ಪವುಳ್ಳವನಾದನೋ, ಆತನೂ ಸಾಧುವಾದ ವನೇ, ನನ್ನ ಅನುಗ್ರಹಕ್ಕೆ ಪಾತ್ರನೇ ಎಂದು ಹೇಳುತ್ತಾರೆ—ಸುದುರಾಚಾ ರೋಪಿ–ಪ್ರಪದನಾನುಷ್ಠಾನಕ್ಕೆ ಪೂರ್ವಭಾವಿಯಾಗಿ ಶಾಸ್ತ್ರವಿರುದ್ಧವಾದ ಕರ್ಮ ಗಳನ್ನೇ ನಡೆಸಿ, ಮಹತ್ತಾದ ದುರಾಚಾರನಾಗಿದ್ದರೂ ಕೂಡ, ಈಗ ಮಾಂ– ನನ್ನನ್ನು, ಅನನ್ಯಭಾಕ್ - ದೇವತಾಂತರ ಸಂಬಂಧವಿಲ್ಲದೆ ಏಕಾಂತ ಮನಸ್ಕ ನಾಗಿ, ಭಜತೇ ಚೇತ್ - ನನ್ನನ್ನೇ ಧ್ಯಾನಿಸಿದರೆ, ಉಪಾಯಾನುಷ್ಠಾನವನ್ನು ಮಾಡಿ ನನ್ನನ್ನು ಸೇವಿಸಿದರೆ, ಸಾಧುರೇವ-ಉತ್ತಮನೇ ಎಂದರೆ, ಆಗ ನನ್ನ ಅನು ಗ್ರಹಕ್ಕೆ ಪಾತ್ರನಾದವನೇ,ಸಃ-ಅವನು,ಮನ್ತವ್ಯಃ-ಬಹುಮಾನಿಸಲೂ ಯೋಗ್ಯನು, ಏಕೆಂದರೆ ಸಃ-ಅವನು, ಸಮ್ಯಗ್ವ್ಯವಸಿತೋಹಿ-ನನ್ನನ್ನು ಆಶ್ರಯಿಸಿ, ನನ್ನಿಂದ ರಕ್ಷಿ ಸಲ್ಪಡಬೇಕೆಂಬ ನಿಶ್ಚಯ ಸಜ್ಕಲ್ಪವುಳ್ಳವನಷ್ಟೇ. ದಾಸನು ಬರೆದಿರುವ ಗೀತಾರ್ಥ ತಾತ್ಪರ್ಯಗಳನ್ನು ನೋಡಿ"(ಗೀ. ೯-೩೦)ಅಪಿಚೇತ್ ಸುದುರಾಚಾರಃ ಎಂಬುದು ಉತ್ತರಾಘವನ್ನು ಹೊಂದಿದವನನ್ನು ಕುರಿತು ಹೇಳಲ್ಪಟ್ಟಿತೆಂದು ಭಾವಿಸಿದರೂ, ಮುಂದಕ್ಕೆ ಅಂತಹ ದುಷ್ಕೃತ್ಯಗಳನ್ನು ಮಾಡದೇ ಭಗವತ್ಪ್ರವಣನಾಗಿ ಪ್ರಾಯ ಶ್ಚಿತ್ತವನ್ನನುಷ್ಠಿಸಿದರೆ, ಸದ್ಗತಿಯುಂಟೆಂಬುದರಲ್ಲಿ ಸಂದೇಹವಿಲ್ಲವು ಎಂಬ ತಾತ್ಪರ್ಯವು. (ಇದು ಅರ್ಜುನನನ್ನು ಕುರಿತು ಹೇಳುವ ವಾಕ್ಯವು.)

(೧) ಗೀ. ೯. ೩೦

(೨) "ಅಪಿ ಪಾಪೇಷ್ವಭಿರತಾ ಮದ್ಭಕ್ತಾಃ ಪಾಂಡುನಂದನ। ಮುಚ್ಯನ್ತೇ ಪಾತಕೈ ಸ್ಸರ್ವೈಃ ಪದ್ಮಪತ್ರ ಮಿವಾಂಭಸಾ" ಎನ್ರುಮ್, ಸರ್ವೇಶ್ವರರ್ ತಾನೇ ಅರ್ಜುನನ್ನೈಯುಮ್ ಧರ್ಮಪುತ್ರನ್ನೈಯುಮ್ ಪತ್ತ ವರುಳಿಚ್ಚೆಯ್‌ದಾರ್.

---

ಹೇ ಪಾಂಡು ನಂದನ-ಓ ಯುಧಿಷ್ಠಿರನೇ, ಪಾಪೇಷ್ವಭಿರತಾ ಅಪಿ - ಪಾಪಗಳನ್ನು ಮಾಡುವದರಲ್ಲೇ ಆಸಕ್ತಿಯುಳ್ಳವರಾಗಿದ್ದರೂ ಕೂಡ, ಮದ್ಭಕ್ತಾಃ - ಅಂತವುಗಳನ್ನು ತ್ಯಜಿಸಿ ಯಾವಾಗ ನನ್ನ ಭಕ್ತರಾಗಿ ನನ್ನನ್ನು ಉಪಾಸಿಸುವರಾದರೋ ಅಥವಾ ಪ್ರಪದನಾನುಷ್ಠಾನವನ್ನು ಮಾಡಿದರೋ ಆಗ, ಸರ್ವೈಃ ಪಾತಕೈಃ - ಆ ಎಲ್ಲಾ ಪಾಪಗಳಿಂದಲೂ, ಮುಚ್ಯನ್ತೇ - ಬಿಡಲ್ಪಡುವರು, ಹೇಗೆಂದರೆ ಅಂಭಸಾ - ಉದಕದಿಂದ ಪದ್ಮಪತ್ರವು ಹೇಗೆ ಬಿಡಲ್ಪಟ್ಟಿರುತ್ತದೋ, ಅಂಟಲ್ಪಡುವದಿಲ್ಲವೋ, ಹಾಗೆ, ಅಥವಾ ಮದ್ಭಕ್ತರಾಗಿರುವಾಗಲೇ ಪಾಪಗಳಲ್ಲಿ ಅಭಿರತರಾಗಿದ್ದರೆ, ಅದೂಕೂಡ ಪ್ರಾಯಶ್ಚಿತ್ತದಿಂದ ತೊಲಗಿ ಹೋಗಿ, ಮೋಕ್ಷಪ್ರಾಪ್ತಿಯಲ್ಲಿ ಸಂಶಯನಿಲ್ಲವೆಂಬ ಭಾವವು. ಈ ಮೇಲಿನ ಎರಡು ಪ್ರಮಾಣಗಳು ಉಪಾಸನರೂಪ ಮೋಕ್ಷೋಪಾಯ ವಿಷಯವಾಗಿ ಹೇಳಲ್ಪಟ್ಟಿದ್ದರೂ, ಪ್ರಪತ್ತಿರೂಪೋಪಾಯಕ್ಕೂ ಅನ್ವಯಿಸುತ್ತದೆಂಬ ಭಾವವು." ಎನ್ರುಮ್ - ಎಂಬದಾಗಿ, ಸರ್ವೇಶ್ವರರ್ ತಾನೇ-ಸರ್ವೇಶ್ವರನು ತಾನೇ, ಅರ್ಜುನನ್ನೈಯುಮ್ - "ಅಪಿಚೇತ್" ಎಂಬುದನ್ನು ಅರ್ಜುನನನ್ನು ಕುರಿತು, "ಅಪಿ ಪಾಪೇಷು" ಎಂಬುದನ್ನು ಧರ್ಮಪುತ್ರನ್ನೈಯುಮ್ ಪತ್ತ - ಧರ್ಮರಾಯನನ್ನು ಕುರಿತು, ಅರುಳಿಚ್ಚೆಯ್‌ದಾನ್ - ಕೃಪಯಾ ಹೇಳಿರುತ್ತಾನೆ. ಈ ಎರಡು ಪ್ರಮಾಣಗಳನ್ನು ಇಲ್ಲಿ ಉದಾಹರಿಸಿದುದು ಏತಕ್ಕೆಂದರೆ ? ಭಾಗವತಾಪಚಾರವು ಸರ್ವಾತ್ಮನಾ ಕೂಡದು ; ಅವರುಗಳು ಸ್ವಲ್ಪ ಮಾರ್ಗತಪ್ಪಿ ನಡೆದು, ಧನಾದಿಗಳಲ್ಲಿ ಮಮತೆಯನ್ನು ತೋರಿಸಿದ ಮಾತ್ರದಿಂದಲೇ ಅವರುಗಳು ಸಂಭಾಷಣೆಗೆ ಕೂಡ ಅನರ್ಹರೆಂದು ಹೇಳಿ, ಅಪಚಾರವನ್ನು ಹೊಂದುವದು ನ್ಯಾಯವಿಲ್ಲವು ಎಂದು ಹೇಳಿದ್ದವರ ಸಮರ್ಥನೆಗಾಗಿ, ಪ್ರಪನ್ನರಾಗಿರುವ ಇಂತಹ ದುರಾಚಾರರೂ, ಪಾಪಗಳಲ್ಲಿ ಅಭಿರತರಾಗಿದ್ದರೂ, ಅವರೂ ಕೂಡ ಮಾನನೀಯರೇ, ಅವರೂ ಕೂಡ ಮೋಕ್ಷವನ್ನೇ ಹೊಂದುವರೆಂದು ಸರ್ವೇಶ್ವರನೇ ಹೇಳಿರುವದರಿಂದ ಅವರು ಮಾನ್ಯರೆಂದೇ ಭಾವಿಸುವದು ಯುಕ್ತವೇ ವಿನಾ, ಅವರನ್ನು ನಿಂದಿಸಿ ಭಾಗವತಾಪಚಾರವನ್ನು ಸಂಪಾದಿಸಿಕೊಳ್ಳುವದು ಯುಕ್ತವಲ್ಲವೆಂದು ಹೇಳಿದಂತಾಯಿತು.

---

೨. ಭಾರತ. ಅಶ್ವಾ. ೯೬. ೪೬.

## ಉಪಾಯನಿಷ್ಠಪ್ರಭಾವಸ್ಯ ದೃಢೀಕರಣಮ್.

ಅಪ್ಪಡಿಯೇ ಶ್ರೀ ಪುಂಡರೀಕ ನಾರದ ಸಂವಾದತ್ತಿಲುಮ್ (೧) "ಚೀರ ವಾಸಾ ಜಟೀವಾ ಸ್ಯಾತ್ರಿದಂಡೀ ಮುಂಡ ಏವ ವಾ । ಭೂಷಿತೋವಾ ದ್ವಿಜ ಶ್ರೇಷ್ಠ ನಲಿಙ್ಗಂ ಧರ್ಮಕಾರಣಮ್ । ಯೇ ನೃಶಂಸಾ ದುರಾತ್ಮಾನಃ ಪಾಪಾ

---

## ಉಪಾಯನಿಷ್ಠೆಯ ಪ್ರಭಾವದ ಸ್ಥಾಪನೆಯು-

ಶ್ರೀ ಪುಂಡರೀಕ ನಾರದ ಸಂವಾದದಲ್ಲಿ ಹೇಳಿರುವದೇನೆಂದರೆ? ಉಪಾಯ ನಿಷ್ಠನಿಗೆ ಉತ್ತರಕಾಲದಲ್ಲಿ ದೋಷವು ಅನುವರ್ತಿಸಿ ಬಂದರೆ, ಪ್ರಾಯಶ್ಚಿತ್ತವನ್ನು ಆತನು ಅನುಷ್ಠಿಸಿದರೆ, ಮೋಕ್ಷಪ್ರಾಪ್ತಿಯಲ್ಲಿ ಸಂದೇಹವಿಲ್ಲವೆಂದೂ, ಉತ್ತರಕಾಲ ದಲ್ಲಿ ನಿರ್ದೋಷರಾಗಿರುವವರಿಗೆ ಕೈಮುತಿಕನ್ಯಾಯದ ಪ್ರಕಾರ ಏನೊಂದು ಸಂಶ ಯವೂ ಇಲ್ಲದೆ ಮೋಕ್ಷಪ್ರಾಪ್ತಿಯು ಎಂದು ಹೇಳಿರುತ್ತದೆ. ಆದುದರಿಂದ ಉಪಾಯ ನಿಷ್ಠೆಯ ಪ್ರಭಾವಕ್ಕೆ ಏನೊಂದು ನ್ಯೂನತೆಯನ್ನು ಭಾವಿಸುವದು ಉಚಿತವಲ್ಲ ವೆಂದು ಬೋಧಿಸುತ್ತಾರೆ- ಆ ಪ್ರಮಾಣಗಳನ್ನು ಉದಾಹರಿಸುತ್ತಾರೆ.—(೧) "ಚೀರವಾಸಾ-ನಾರು ಮಡಿಯನ್ನು ಧರಿಸಿದವನೇಯಾಗಲಿ, ಜಟೀ - ಜಡೆಯನ್ನು ಧರಿಸಿದವನೇಯಾಗಲಿ, ಇದರಿಂದ ತಪಶ್ಚರಣವೂ ಬೋಧಿತವು, ತ್ರಿದಂಡೀ – ನಮ್ಮ ಸನ್ಯಾಸಿಗಳಹಾಗೆ ಮೂರುದಂಡವನ್ನು ಧರಿಸಿರುವ ಸನ್ಯಾಸಿಯೇ ಆಗಲಿ, ಮುಂಡ ಏವವಾ - ದ್ವೈತಾದ್ವೈತ ಸನ್ಯಾಸಿಗಳಹಾಗೆ ಶಿಖೆಯಿಲ್ಲದೆ ಇರುವವನೇಯಾಗಲಿ, ಭೂಷಿತೋವಾಸ್ಯಾತ್ - ಭೂಷಣಗಳನ್ನು ಧರಿಸಿ ರುವವನೇ ಯಾಗಲಿ, ಲಿಙ್ಗಂ - ಹೀಗೆ ಆಶ್ರಮಾದಿಗಳ ಚಿಹ್ನೆಯು, ನಧರ್ಮಕಾರ ಣಮ್ - ಶ್ರೇಯಸ್ಸಾಧನಕ್ಕೆ ಕಾರಣವಲ್ಲವು ; ಮೋಕ್ಷಪ್ರಾಪ್ತಿಯು ಕಾವಿಶಾಟೀ ತ್ರಿದಂಡ ಮೊದಲಾದವುಗಳನ್ನು ಧರಿಸುವದರಿಂದುಂಟಾಗುವದಿಲ್ಲವು; ಪರಮ ಪುರು ಷನನ್ನಾಶ್ರಯಿಸಿ ಉಪಾಯನಿಷ್ಠನಾದರೇನೇ ಮೋಕ್ಷವೆಂಬ ಭಾವವು. ವಾ ಎಂಬ ವಿಕಲ್ಪ ಸ್ವಾರಸ್ಯದಿಂದ ಮೇಲೆ ಹೇಳಿದವುಗಳ ಪ್ರತಿದ್ವಂದ್ವಿಗಳಾದ ಪೀತಾಂಬರ, ಸುಕೇಶ, ಏಕದಂಡ, ಶಿಖೆ ಮೊದಲಾದವುಗಳನ್ನು ಧರಿಸುವದರಿಂದಲೂ ಮೋಕ್ಷ ಪ್ರಾಪ್ತಿ ಇಲ್ಲವೆಂದೂ ಹೇಳಿದಂತಾಯಿತು. ಇನ್ನು ಯಾರಿಗೆ ಮೋಕ್ಷವು ನಿಸ್ಸಂ ಶಯವಾಗಿ ಉಂಟು ಎಂದರೆ ಹೇಳುತ್ತಾರೆ.—ನರಾಃ ನಾರಾಯಣಾಶ್ರಿತಾಃ – ಶ್ರೀ ಮನ್ನಾರಾಯಣನನ್ನು ಆಶ್ರಯಿಸಿದ ಮನುಷ್ಯರು, ನಾರಾಯಣಾಶ್ರಯಾಃ ಎಂಬ

---

(೧) ಇತಿಹಾಸ ಸಮುಚ್ಚಯಂ. ೩೩. ೧೨೩.೪.

ಚಾರ ರತಾಸ್ಸದಾ। ತೇಽಪಿ ಯಾನ್ತಿ ಪರಂ ಸ್ಥಾನಂ ನರಾ ನಾರಾಯಣಾಶ್ರಿತಾಃ

ಪಾತವಾದರೆ ಶ್ರೀಮನ್ನಾರಾಯಣನನ್ನೇ ಆಶ್ರಯವಾಗಿ ಉಳ್ಳವರು ಎಂಬ ರ್ಥವು, ಇದು ಭಕ್ತಿಮಾರ್ಗದಿಂದ ಆಶ್ರಯಿಸಿರುವರನ್ನು ಕುರಿತು ಹೇಳಿದ್ದರೂ ಪ್ರಪತ್ತಿಗೂ ಅನ್ವಯಿಸುತ್ತದೆಂಬ ಭಾವದಿಂದ ಉದಾಹರಿಸಲ್ಪಟ್ಟಿರುತ್ತದೆ, ಇಲ್ಲಿ **ನರಾಃ** ಎಂಬುದಕ್ಕೆ ಕ್ರಮೇಣ ಪ್ರಪದನದ ಮಾಹಾತ್ಮ್ಯೆಯಿಂದ ಐಹಿಕದಲ್ಲಿ ನರಮ **ತೀತಿ**-ರಮಿಸದಿರುವ ವೈರಾಗ್ಯ ಶಿಖಾಮಣಿಗಳು ಹೇಳಲ್ಪಟ್ಟಿರು, ಇಂತನರು ಮೋಕ್ಷ ವನ್ನು ಹೊಂದುವರು; ಆವರು ಎಷ್ಟದೋಷ ಯುಕ್ತರಾಗಿದ್ದರೂ ಮೋಕ್ಷವನ್ನು ಹೊಂದುವರೆಂದು ಹೇಳುತ್ತಾರೆ—**ಯೇ** - ಯಾರು, **ನೃಶಂಸಾಃ** . ಪಾಪಿಷ್ಠರಾಗಿ ದ್ದರೂ, **ದುರಾತ್ಮಾನಃ** - ದುಷ್ಟಚಿತ್ತರಾಗಿದ್ದರೂ, **ಸ್ಸದಾ** - ಯಾವಾಗಲೂ, **ಪಾಪಾಚಾರರತಾಃ** – ಪಾಪಾಚರಣೆಯಲ್ಲಿ ಆಸಕ್ತಿಯುಳ್ಳವರಾಗಿದ್ದರೂ, **ತೇಽಪಿ** – ಅಂತನರೂ ಕೂಡ, ಶ್ರೀಮನ್ನಾರಾಯಣನನ್ನು ಆಶ್ರಯಿಸಿದವರಾದರೆ, **ಯಾಂತಿ ಪರಾಂಗತಿಂ** - ಪರಮ ಶ್ರೇಷ್ಠಪದವಾದ ಮೋಕ್ಷವನ್ನು ಹೊಂದುವರು. ಶ್ರೀಮ ನ್ನಾರಾಯಣನನ್ನು ಭರನ್ಯಾಸದ ಮೂಲಕ ಆಶ್ರಯಿಸಿದವರಿಗೆ ಮೋಕ್ಷವೇವಿನಾ, ಹಾಗಿಲ್ಲದೆ ಕಾವಿಶಾಟೀ ತ್ರಿದಂಡ ಮೊದಲಾದ ಬರೀ ಚಿಹ್ನೆಗಳ ಮೂಲಕವಾಗಿ ಎಂದಿಗೂ ಮೋಕ್ಷವಿಲ್ಲವೆಂಬ ಭಾವವು- ನೃಶಂಸರೆಂದೂ ದುರಾತ್ಮರೆಂದೂ ಪಾಪಾ ಚಾರರತರೆಂದೂ ಹೀಗೆ ದೂಷಿಸಿ ಹೇಳಿರುವದು ಪ್ರಪದನಕ್ಕೆ ಪೂರ್ವಕಾಲಿಕ ಅಪ ರಾಧಗಳ ವಿಷಯವೇ ಅಥವಾ ಪ್ರಪದನೋತ್ತರ ಕಾಲಿಕ ಅಪರಾಧಗಳ ವಿಷ ಯವೇ ಎಂಬ ಚರ್ಚೆಯಲ್ಲಿ ಸಾರದೀಪಿಕಾ ವ್ಯಾಖ್ಯಾತೃವು, "ಯಥಾರ್ಹ **ಪ್ರಾಯಶ್ಚಿತ್ತಾದಿ ಮುಖತ್ವಾಲೇ** ಎಜ್ಞರವಭಿಪ್ರಾಯತ್ವಾಲೇ **ನಿರ್ವಾಹಮ್"** ಎಂದು ಹೇಳಿರುವದರಿದ ಉತ್ತರಾಘವೆಂದು ಭಾವಿಸಿ, ಅವು ಪ್ರಾಯಶ್ಚಿತ್ತಮೂಲಕ ಪರಿಹಾರವೆಂದು ಅಭಿಪ್ರಾಯಪಟ್ಟಿರುತ್ತಾರೆ. ಸಾರಾಸ್ವಾದಿನಿಯವರ ಅಭಿಪ್ರಾಯವೂ ಹಾಗೆಯೇ. ಏಕೆಂದರೆ **"ತೇಽಪಿ ಯಾನ್ತೀತ್ಯತ್ರಾಪಿ ಶಬ್ದೇನ ಪ್ರಾಯಶ್ಚಿತ್ತೇನೇತಿ ಗಮ್ಯತೇ, ಅನ್ಯಥಾ ಅಪಿ ಶಬ್ದವೈಯರ್ಥ್ಯಾತ್"** ಎಂದು ಕಾರಣವನ್ನು ತೋರಿಸಿರುತ್ತಾರೆ. **ತೇಽಪಿ** ಎಂಬಲ್ಲಿ ಅಪಿ ಶಬ್ದವಿರುವದರಿಂದ ಪ್ರಾಯಶ್ಚಿತ್ತವನ್ನು ಆಚರಿಸಿದನಂತರ ಮೋಕ್ಷ ವೆಂಬುದು ತೋರಿಬರುತ್ತದೆಂದೂ, ಹಾಗಲ್ಲದಿದ್ದರೆ ಅಪಿ ಶಬ್ದವು ವ್ಯರ್ಥವಾಗು ತ್ತದೆಂದೂ, ಹೇಳಿರುತ್ತಾರೆ. ಇತರರು ಭಾಷ್ಯದಲ್ಲಿ ಈ ವಿಷಯವನ್ನು ಚರ್ಚಿಸಲಿ ಲ್ಲವು. ಆದರೆ ಶ್ಲೋಕದಲ್ಲಿ **ಪಾಪಾಚಾರ ರತಾಸ್ಸದಾ** ಎಂಬಲ್ಲಿ ಸದಾ ಶಬ್ದ ವಿರುವದರಿಂದ ಉತ್ತರ ಕಾಲದಲ್ಲೂ ಸದಾ ಪಾಪಾಚಾರ ರತರು ಹೀಗೆ ಪ್ರಸಕ್ತಿ

ನೆನಿಸಲು ಯೋಗ್ಯನು? ಪ್ರಪನ್ನನಾದವನು ಈ ಪ್ರಪದನ ಮೂಲಕ ಮಹಾ ಪರಿಶುದ್ಧನಾಗಿ ಸ್ವಾಮಿಯ ದಯೆ ಎಂಬ ಮಂದಾಕಿನಿಯಲ್ಲಿ ಅವಗಾಹನವನ್ನು ಮಾಡಿ ಪುನಃ ಕೆಸರಲ್ಲಿ ಬಿದ್ದು ಹೊರಳುವನಲ್ಲವೆಂದೂ, ಹಾಗೆ ಪಾಪಮಾಡಿ ದೋಷಯುಕ್ತನಾದರೆ ಮಹಾಭಾಗವತರೊಂದಿಗೆ ಸೇರಿಸಲು ಅನರ್ಹನೆಂದೂ, ಅಪರಾಧ ಪರಿಹಾರಾಧಿಕಾರದಲ್ಲಿ ಹೇಳಲ್ಪಟ್ಟಿರುತ್ತದೆ. ಹೀಗೆ ಪಾಪಾಚಾರ ರತಾಸ್ಸದಾ ಆದವರಿಗೆ ಪ್ರಪದನದ ಸಿದ್ಧಿಯುಂಟಾಗಿರಬಹುದೇ? ಅಜ್ಞವೈಕಲ್ಯಾದಿಗಳಿಂದ ಸಿದ್ಧಿಸದೇ ಇರಬಹುದೆಂದು ಊಹಿಸಲೂ ಕೂಡ ಸಾಧ್ಯವು. ಆದರೆ ಶ್ಲೋಕವು ಅಂತವರಿಗೂ **ಯಾನ್ತಿ ಪರಾಂಗತಿಂ** ಎಂದಿರುವದರಿಂದ ಇದು ಪ್ರಪದನದ ಪೂರ್ವಕಾಲದ ಅಪರಾಧಗಳನ್ನು ಕುರಿತದ್ದೆಂದು ಏಕೆ ಭಾವಿಸಕೂಡದು? ಉತ್ತರಾಘವಿಷಯವಾದರೆ **ಸದಾ** ಎಂಬ ಶಬ್ದವು ಬಾಧಕವಲ್ಲವೇ? ಪಾಪಾಚರಣೆಯು ಸದಾ ಅನುವರ್ತಿಸಿ ಬರಬಾರದು. ಮಾಡಿದುದಕ್ಕೆ ಅನುತಾಪವೂ, ಅದಕ್ಕಾಗಿ ಪ್ರಾಯಶ್ಚಿತ್ತವೂ, ತದನಂತರ ಅಂತಹದುಶ್ಚರಿತೆಯಿಂದ ಉಪರಮವೂ ಆವಶ್ಯಕವು. ಪ್ರಪನ್ನತೆಗೆ ಸದಾ ಪಾಪರತನಾಗಿರುವದು ಅರ್ಹವಾದುದಲ್ಲವು. ಈ ಅಭಿಪ್ರಾಯವನ್ನೇ ಶ್ರೀ ನಿಗಮಾಂತದೇಶಿಕರು ಕಾರಿಕೆಯ ಮೂಲಕ ಅಪ್ಪಣೇ ಕೊಡಿಸಿರುತ್ತಾರೆ.

ಅನುತಾಪಾ ದುಪರಮಾತ್ಪ್ರಾಯಶ್ಚಿತ್ತೋನ್ಮುಖತ್ವತಃ ।
ತತ್ಪೂರಣಾಚ್ಚಾಪರಾಧಾಸ್ಸರ್ವೇ ನಶ್ಯನ್ತಿ ಸರ್ವಶಃ ॥

ಆದುದರಿಂದ ಬುದ್ಧಿಪೂರ್ವೋತ್ತರಾಘವು ಸದಾ ಮಾಡಲ್ಪಟ್ಟರೆ ಪ್ರಪನ್ನತೆಗೆ ಅರ್ಹತೆಯೇ ಇಲ್ಲವು. ಕದಾಚಿತ್ ನಡೆದುಹೋದರೆ ಪ್ರಾಯಶ್ಚಿತ್ತಮಾಡಿಕೊಳ್ಳುವದು ನ್ಯಾಯವು. ಆದರೆ ಮುಂದೆ ಶ್ರೀ ನಿಗಮಾನ್ತ ದೇಶಿಕರವರೇ "ಭಗವತ್ಪ್ರವಣರ್ **ಅನುವೃತ್ತ ದೋಷ ರಾನಾಲುಮ್**" ಎಂದು ಅಪ್ಪಣೆ ಕೊಡಿಸಿರುವದರಿಂದ ಪ್ರಪನ್ನರಾಗಿ ಅನಂತರ ಪಾಪಾಚರಣೆಯನ್ನು ಮಾಡಿದವರೆಂದೇ ಅನ್ವಯಿಸಬೇಕಾಗಿರುತ್ತದೆ, ಬಹುಶಃ **ತೇಪಿ ಯಾನ್ತಿ** ಎಂಬಲ್ಲಿ ಅಪಿ ಶಬ್ದ ಸ್ವಾರಸ್ಯದಿಂದಲೇ ಹಾಗೆ ಅನ್ವಯಿಸಿರಬಹುದೆಂದೂ, ತೋರುತ್ತದೆ. ಹೀಗೆ ಅರ್ಥಮಾಡದಿದ್ದರೆ ಅಪಿ ಶಬ್ದವು ನಿರರ್ಥಕವಾಗುತ್ತದೆ. **ನರಾಃ** ಎಂಬ ಪದಸ್ವಾರಸ್ಯದಿಂದಲೂ ಹಾಗೆ ವ್ಯಾಖ್ಯಾನ ಮಾಡಬಹುದು; ಐಹಿಕ ವಿಷಯಗಳಲ್ಲಿ ಕ್ರಮೇಣ ಅವರು ನ ರಮನ್ತೇ - ರಮಿಸುವದಿಲ್ಲವಾದುದರಿಂದ ನರರು ಪ್ರಪನ್ನರು; ಅಂತವರು ಪಾಪಾಚರಣೆಯಿಂದ ನಿವೃತ್ತರಾಗಿ ಪ್ರಾಯಶ್ಚಿತ್ತವನ್ನು ಅನುಷ್ಠಿಸಿ, **ಪರಾಂಗತಿಂ ಯಾನ್ತಿ** ಎಂಬ ಅಭಿಪ್ರಾಯವಾಗಿರಬಹುದು. ಆಗ **ಸದಾ** ಎಂಬುದಕ್ಕೆ ಪ್ರಾಯಶ್ಚಿತ್ತವನ್ನು ಅನುಷ್ಠಿಸಿದ ಹಿಂದಿನ ಕಾಲದಲ್ಲೆಲ್ಲಾ ಎಂಬರ್ಥವು.

(೨) "ವೈಷ್ಣವಾಃ - ವಿಷ್ಣುವಿನಲ್ಲಿ ಶರಣಾಗತಿಯನ್ನು ಮಾಡಿದವರು,

(ಶ್ರಿಯಾಃ)" (೨) ಲಿಪ್ಯನ್ತೇ ನಚ ಪಾಪೇನ ವೈಷ್ಣವಾ ವೀತಕಲ್ಮಷಾಃ। ಪುನನ್ತಿ ಸಕಲಂ ಲೋಕಂ ಸಹಸ್ರಾಂಶು ರಿವೋದಿತಃ॥" (೩) ಜನ್ಮಾಂತರ ಸಹಸ್ರೇಷು ಯಸ್ಯ ಸ್ಯಾದ್ಬುದ್ಧಿ ರೀದೃಶೀ। ದಾಸೋಽಹಂ ವಾಸುದೇವಸ್ಯ

---

**ವೀತಕಲ್ಮಷಾಃ** - ಪ್ರಾಯಶ್ಚಿತ್ತಮೂಲಕವಾಗಿ ಪ್ರಾಚೀನ ಕರ್ಮಗಳಿಂದ ಬಿಡಲ್ಪಟ್ಟವರಾಗಿರುವವರು, **ಪಾಪೇನ ಚ** - ಬುದ್ಧಿಪೂರ್ವಕವಾಗಿ ಮಾಡದ ಉತ್ತರಾಘಗಳಿಂದಲೂ ಕೂಡ, **ನಲಿಪ್ಯನ್ತೇ** - ಲೇಪಿಸಲ್ಪಡುವದಿಲ್ಲವು. ಈ ಶ್ಲೋಕದ ಮೂಲಕ "**ತದಧಿಗಮ ಉತ್ತರಪೂರ್ವಾಘಯೋ ರಶ್ಲೇಷ ವಿನಾಶೌ ತದ್ವ್ಯಪದೇಶಾತ್**" (ಶಾ. ಸೂ. ೪.೧.೧೩) ಎಂಬ ಶಾರೀರಕ ಸೂತ್ರಾಭಿಪ್ರಾಯವಾದ ಪೂರ್ವಾಘಗಳ ವಿನಾಶವೂ ಉತ್ತರಾಘಗಳ ನಿರ್ಲೇಪವೂ ಹೇಳಲ್ಪಟ್ಟಿತು. ಆದರೆ ಉತ್ತರಾಘಗಳೆಂದು ಹೇಳಿದುದು ಪ್ರಾಮಾದಿಕವಾದವುಗಳೇ ವಿನಾ ಬುದ್ಧಿಪೂರ್ವಕಗಳಾದ ಉತ್ತರಾಘಗಳಲ್ಲವೆಂದು ಹಿಂದೆ ೧೬೦೮ನೆಯ ಪುಟದಲ್ಲಿ ಉಪಪಾದಿಸಲ್ಪಟ್ಟಿರುತ್ತದೆ, ಏಕೆಂದರೆ ಶ್ರೀಯತಿವರ್ಯರು ಈ ಸೂತ್ರದ ಭಾಷ್ಯದಲ್ಲಿ "**ತದಿದ ಮಶ್ಲೇಷವಚನಂ ಪ್ರಾಮಾದಿಕ ವಿಷಯಂ ಮನ್ತವ್ಯಮ್**" ಪ್ರಾಮಾದಿಕ ಉತ್ತರಾಘಮಾತ್ರ ಅಂಟುವದಿಲ್ಲವೇ ವಿನಾ ಬುದ್ಧಿಪೂರ್ವಕವಾದ ಉತ್ತರಾಘವು ಲೇಪಿಸುತ್ತದೆ ಎಂಬ ಭಾವವು; ಇವರ ನಿವೃತ್ತಿಗಾಗಿ ಪ್ರಾಯಶ್ಚಿತ್ತವನ್ನು ಆಚರಿಸತಕ್ಕದ್ದೆಂಬ ಭಾವವು. ಹೀಗೆ ಆಚರಿಸಿದವರು ವೀತಕಲ್ಮಷರು. ಇಂತಹ ವಿಷ್ಣುವನ್ನಾಶ್ರಯಿಸಿದ ಪ್ರಪನ್ನರು **ಉದಿತಃ** - ಉದಯಿಸಿದ, **ಸಹಸ್ರಾಂಶುರಿವ**- ಸೂರ್ಯನೋಪಾದಿಯಲ್ಲಿ, **ಸಕಲಂ ಲೋಕಂ** - ಸಮಸ್ತ ಲೋಕವನ್ನು, **ಪುನನ್ತಿ**- ಪವಿತ್ರೀಕರಿಸುತ್ತಾರೆ. ಶ್ರೀ ಸಾರಾಸ್ವಾದಿನಿಯವರು "**ವೀತ ಕಲ್ಮಷಾಃ**" ಎಂಬುದನ್ನು ಉತ್ತರಾಘವಿಷಯಕವ್ನಾಗಿ ಅನ್ವಯಿಸಬಹುದೆಂದು **ಪ್ರಾಯಶ್ಚಿತ್ತೇನ ವೀತಕಲ್ಮಷಾಃ** ಎಂದು ವ್ಯಾಖ್ಯಾನಮಾಡಿರುತ್ತಾರೆ. ಸಾರವಿವರಣೆಯವರು **ಲಿಪ್ಯನ್ತೇ** ಎಂಬ ಶ್ಲೋಕವು "**ಅಬುದ್ಧಿ ಪೂರ್ವೋತ್ತರಾಘಸ್ಯ ಅಲೇಪ ಪ್ರಮಾಣ ಮಾಹ**" ಅಬುದ್ಧಿಪೂರ್ವೋತ್ತರಾಘವಿಷಯವೆಂದು ಅಭಿಪ್ರಾಯಪಟ್ಟಿರುತ್ತಾರೆ. (೩) **ಸರ್ವಲೋಕ ಮಹಾತ್ಮನಃ** - ಸಮಸ್ತ ಲೋಕಕ್ಕೂ ಮಹತ್ತಾದ ಆತ್ಮವಾಗಿರುವ, ಅದು ಹೇಗೆ ಮಹತ್ತಾದ ಆತ್ಮ ಎಂದರೆ, ಈ ಜೀವಾತ್ಮನ ಸತ್ತಾ ಸ್ಥಿತಿ ನಿಯಮನಾದಿಗಳಿಗೆಲ್ಲಾ ಕಾರಣಭೂತನಾಗಿ ಮಹತ್ತಾದ ಆತ್ಮವಾಗಿರುವ, **ವಾಸುದೇವಸ್ಯ** - **ಸರ್ವತ್ರಾಸೌ ಸಮಸ್ತಂಚ ವಸತ್ಯತ್ರೇತಿ ವೈ ಯತಃ (ವಿ. ಪು)**

---

(೨) ಇತಿ. ಸಮು. ೨೭. ೨೫. (೩) ಇತಿಹಾಸಸಮುಚ್ಚಯ ೩೩-೧೨೫. ೭.

**ಸರ್ವಲೋಕ ಮಹಾತ್ಮನಃ । ಸ ಯಾತಿ ವಿಷ್ಣುಸಾಲೋಕ್ಯಂ ಪುರುಷೋ ನಾತ್ರ ಸಂಶಯಃ । ಕಿಂ ಪುನ ಸ್ತದ್ಗತ ಪ್ರಾಣಾಃ ಪುರುಷಾ ಸ್ಸಂಯತೇಂದ್ರಿಯಾಃ।" ಎನ್ರು ಭಗವತ್ಪ್ರವಣರ್ ಅನುವೃತ್ತದೋಷರಾನಾಲುಮ್, ಯಥಾರ್ಹ ಪ್ರಾಯಶ್ಚಿತ್ತಾದಿ ಮುಖತ್ತಾಲೇ, ಕಡುಗ ಮೋಕ್ಷಸಿದ್ಧಿಯಿಲ್ ಸಂಶಯಮಿಲ್ಲೈಯೆನ್ರು ಮಿಡೆತ್ತೈಯುಮ್, ನಿರ್ದೋಷರುಕ್ಕು ಕೈಮುತಕನ್ಯಾಯತ್ತಾಲೇ**

---

ಎಂದು ಹೇಳಿರುವಹಾಗೆ ಈತನು ಎಲ್ಲೆಲ್ಲಿಯೂ, ಎಲ್ಲವೂ ಈತನಲ್ಲಿಯೂ ವಾಸವಾಗಿರುವದರಿಂದ ವಾಸುದೇವನು, ಅಥವಾ ವಿಶ್ವವನ್ನೆಲ್ಲಾ ತನ್ನಲ್ಲಿಟ್ಟುಕೊಂಡು ರಕ್ಷಿಸುವದರಿಂದ ವಾಸುವೆಂದೂ, ಆ ವಿಶ್ವದಲ್ಲೇ ಕ್ರೀಡಿಸುವನಾದುದರಿಂದ ದೇವನೆಂದೂ ಹೇಳಿಸಿಕೊಳ್ಳುವನು ವಾಸುದೇವನು, ಇಂತಹ ವಾಸುದೇವನಿಗೆ, **ಅಹಂ ದಾಸಃ** - ನಾನು ಶೇಷಭೂತನಾಗಿ ದಾಸನೆಂದು, **ಜನ್ಮಾಂತರ ಸಹಸ್ರೇಷು** – ಅನಾದಿಯಾಗಿ ಬಂದಿರುವ ಅಸಂಖ್ಯೇಯ ಜನ್ಮಗಳಲ್ಲೊಂದರಲ್ಲಿ **ಯಸ್ಯ** - ಯಾವನಿಗೆ, **ಈದೃಶೀ** - ಹೀಗೆ ಮೇಲೆಹೇಳಿದ ಹಾಗೆ ತಾನು ವಾಸುದೇವನಿಗೆ ದಾಸನೆಂಬ, **ಬುದ್ಧಿಸ್ಸ್ಯಾತ್** - ಬುದ್ಧಿಯುಂಟಾದರೆ, **ಸಃ ಪುರುಷಃ** - ಅಂತಹ, ಶರೀರದಲ್ಲಿ ವಸಿಸುತ್ತಿರುವ ಬದ್ಧಾತ್ಮನು, **ವಿಷ್ಣುಸಾಲೋಕ್ಯಂ** - ವಿಷ್ಣುವಿನೊಂದಿಗಿರುವ ಲೋಕವಾದ ಪರಮ ಪದವನ್ನು, **ಯಾತಿ** - ಹೊಂದುವನು, ಇದರಲ್ಲಿ **ನಾತ್ರ ಸಂಶಯಃ** - ಸಂಶಯವೇನೂ ಇಲ್ಲವು. ಇಲ್ಲಿ ಸಾಲೋಕ್ಯಶಬ್ದವು ಪರಮಾತ್ಮನೊಂದಿಗೆ ಸಾಯುಜ್ಯ ಪ್ರಾಪ್ತಿಯವರೆಗೂ ಅರ್ಥಬೋಧವನ್ನು ಸೂಚಿಸುತ್ತದೆ. ಹೀಗಿರುವಾಗ, **ಪುರುಷಾಃ** - ಈ ಬದ್ಧ ಚೇತನರು, **ತದ್ಗತಪ್ರಾಣಾಃ** - ಆ ವಾಸುದೇವನನ್ನೇ ಹೊಂದಿದ ಪ್ರಾಣವುಳ್ಳವರಾದರೇ, ಆತನನ್ನೇ ಸತತ ಚಿಂತಿಸುತ್ತಾ ಆತನಲ್ಲೇ ಸರ್ವವ್ಯಾಪಾರವನ್ನೂ ಇಟ್ಟಿರುವವರಾದರೆ, **ಸಂಯತೇನ್ದ್ರಿಯಾಃ** - ಐಹಿಕಗಳನ್ನೆಲ್ಲಾ ತೊರೆದು ನಿಗ್ರಹಿಸಿದ ಇಂದ್ರಿಯಗಳುಳ್ಳವರಾದರೆ, **ಕಿಂಪುನಃ** – ಇನ್ನು ಹೇಳತಕ್ಕದ್ದೇನಿದೆ, ಅವರಿಗೆ ಪರಮ ಪದವುಂಟೆಂದು ಹೇಳಲು ಯಾವ ಅಭ್ಯಂತರವಿರುತ್ತದೆ, ನಿಸ್ಸಂಶಯವಾದ ವಿಷಯವೇ ಎಂಬ ಭಾವವು". **ಎನ್ರು** - ಹೀಗೆಲ್ಲಾ ಹೇಳಿರುವದರಿಂದ, **ಭಗವತ್ಪ್ರವಣರ್** - ಸರ್ವೇಶ್ವರನನ್ನೇ ಆಶ್ರಯಿಸಿದ ಪ್ರಪನ್ನರು, **ಅನುವೃತ್ತ ದೋಷರಾನಾಲುಮ್** - ಪ್ರಪದನಾನಂತರ ಬುದ್ಧಿಪೂರ್ವಕವಾಗಿ ಅನುಸರಿಸಿಬಂದ ದೋಷಯುಕ್ತರಾದರೂಕೂಡ, **ಯಥಾರ್ಹ ಪ್ರಾಯಶ್ಚಿತ್ತಾದಿ ಮುಖತ್ತಾಲೇ** - ಆ ಅಪರಾಧಗಳಿಗೆ ಯೋಗ್ಯಗಳಾದ ಪ್ರಾಯಶ್ಚಿತ್ತಾನುಷ್ಠಾನಮೂಲಕವಾಗಿ, ಅಥವಾ ಪ್ರಾಯಶ್ಚಿತ್ತ ಶರಣಾಗತಿ ಮೂಲಕವಾಗಿ, **ಕಡುಗ** - ಶೀಘ್ರದಲ್ಲಿ, **ಮೋಕ್ಷ ಸಿದ್ಧಿಯಿಲ್** – ಮೋಕ್ಷಪ್ರಾಪ್ತಿ

**ಕಡುಗಮೋಕ್ಷಸಿದ್ಧಿಯೈಯುಮ್ ಶೊಲ್ಲಿ, (೪) "ಅಶ್ವಮೇಧ ಶತೈರಿಷ್ಟ್ವಾ**

ಯಲ್ಲಿ, ಸಂಶಯುಮಿಲ್ಲೈ ಎನ್ರು ಮಿಡತ್ತೈಯುಮ್ - ಸಂಶಯವಿಲ್ಲವೆಂಬುವ ಸಂದರ್ಭವನ್ನೂ, **ನಿರ್ದೋಷರುಕ್ಕು** - ಅಪರಾಧಗಳಿಲ್ಲದವರಿಗೆ **ಕೈಮುತಕ ನ್ಯಾಯತ್ತಾಲೇ** - ಕಿಮುತ ಎಂದರೆ ಹೇಳತಕ್ಕದ್ದೇನಿದೆ ಎಂಬ ನ್ಯಾಯ ಮೂಲಕವಾಗಿ, **ಕಡುಗ ಮೋಕ್ಷ ಸಿದ್ಧಿಯೈ** - ಬಹು ಬೇಗನೆ ಮೋಕ್ಷ ಪ್ರಾಪ್ತಿಯನ್ನೂ, **ಶೊಲ್ಲಿ** - ಹೇಳಿ, ಇಲ್ಲಿ ಕೈಮುತಿಕ ನ್ಯಾಯವನ್ನು ತಂದು, ನಿರ್ದೋಷರೆಂದು ಹೇಳಿರುವದರಿಂದ, ಹಿಂದೆ ಹೇಳಿದವರು ಸದೋಷಿಗಳೆಂದೂ ಬುದ್ಧಿ ಪೂರ್ವೋತ್ತರಾಘವುಳ್ಳವರಾಗಿ ಪ್ರಾಯಶ್ಚಿತ್ತಮಾಡಿಕೊಂಡು, ವಾಸುದೇವನಲ್ಲಿ ಶೇಷತ್ವ ಬುದ್ಧಿಯನ್ನು ಹೊಂದಿದವರೆಂದು ಸಾರವಿವರಣೆಯವರು ಅರ್ಥ ಮಾಡಿರುತ್ತಾರೆ. ಇವರಿಂದ ಭರನ್ಯಾಸವನ್ನನುಷ್ಠಿಸಿದವನಿಗೆ ಅಬುದ್ಧಿಪೂರ್ವಕಗಳಾದ ಅಪರಾಧಗಳು ಪ್ರಾಪ್ತವಾದರೂ ಅವು ಲೇಪಿಸುವದೇ ಇಲ್ಲವೆಂದು ಹೇಳಿ, ಆ ಅಪರಾಧಗಳು ಬುದ್ಧಿಪೂರ್ವಕವಾಗಿಯೇ ಪ್ರಾಪ್ತವಾದರೆ ಪ್ರಾಯಶ್ಚಿತ್ತಶರಣಾಗತಿಯ ಮೂಲಕವಾಗಿ ಅವುಗಳೂ ತೊಲಗಿ ಮೋಕ್ಷಸಿದ್ಧಿಯುಂಟಾಗುವದರಲ್ಲಿ ಸಂದೇಹವಿಲ್ಲವೆಂದು ಇತಿಹಾಸಸಮುಚ್ಚಯಪ್ರಮಾಣಗಳನ್ನು ಉದಾಹರಿಸಿದರು. ಈ ಪ್ರಮಾಣಗಳನ್ನೆಲ್ಲಾ ಮನಸ್ಸಿನಲ್ಲಿಟ್ಟೇ ಅಪರಾಧ ಪರಿಹಾರಾಧಿಕಾರದ ನಿಗಮನ ಸಙ್ಗ್ರಹ ಶ್ಲೋಕದಲ್ಲಿ **ಧೀಪೂರ್ವೋತ್ತರ ಪಾಪ್ಮನಾ ಮಜನನಾ ಜ್ಞಾತೇಽಪಿ ತನ್ನಿಷ್ಕೃತೇಃ। ಕೌಟಿಲ್ಯೇ ಸತಿ ಶಿಕ್ಷಯಾಪ್ಯ ನಘಯರ್ನ್ ಕ್ರೋಡೀ ಕರೋತಿ ಪ್ರಭುಃ॥** ಎಂದು ಶ್ರೀ ನಿಗಮಾನ್ತರವರು ಅಪ್ಪಣೆ ಕೊಡಿಸಿರುತ್ತಾರೆ. ನಿಷ್ಕೃತಿಯಿಂದ ಅಂತಹ ಬುದ್ಧಿ ಪೂರ್ವಕವಾದ ಅಪರಾಧಗಳು ತೊಲಗುವವೆಂದು ಹೇಳಿ ಒಂದುವೇಳೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿದ್ದರೂ ಅಲ್ಪ ಶಿಕ್ಷೆಯನ್ನು ಕೊಟ್ಟು ಪರಮ ಕಾರುಣಿಕನು ದೇಹಾವಸಾನದಲ್ಲೇ ಮೋಕ್ಷವನ್ನು ದಯಪಾಲಿಸುವನೆಂದು ಹೇಳಿರುತ್ತಾರೆ. ೧೬೯ನೆಯ ಪುಟವನ್ನು ಪರಾಂಬರಿಸಿ. ಪ್ರಾಯಶ್ಚಿತ್ತದ ಮೂಲಕ ಬುದ್ಧಿಪೂರ್ವೋತ್ತರಾಘಕ್ಕೂ ನಿವೃತ್ತಿಯುಂಟೆಂಬುದಕ್ಕೆ ಸ್ವಾಮಿಯವರ "ಅನುತಾಪಾತ್" ಎಂಬ ೧೨ನೆಯ ಕಾರಿಕೆಯನ್ನೂ ಪರಾಂಬರಿಸಿ. ೧೫೯ನೆಯ ಪುಟವನ್ನು ನೋಡಿ. ಹೀಗೆ ಪ್ರಪದನಕ್ಕೆ ಇಂತಹ ಪ್ರಭಾವ ಉಂಟೆಂದು ಸಮರ್ಥನೆಯನ್ನು ಮಾಡಿ ಹೇಳಿದರು. ಪ್ರಕರಣವೇನು ಎಂದರೆ ಪ್ರಪನ್ನನು ಧನ ಮೊದಲಾದವುಗಳಲ್ಲಿ ಉದರ ಪೋಷಣಾದಿಗಳಿಗಾಗಿ ಒಂದುವೇಳೆ ಸಕ್ತನಾದರೆ, ಆತನು ಪ್ರಪನ್ನನೇ ಆಗುವದಿಲ್ಲವು, ಆತನು ಸಂಭಾಷಣೆಗೆ ಕೂಡ ಅನರ್ಹನೆಂದು

---

(೪) ಇತಿಹಾಸ ಸಮುಚ್ಚಯಂ ೩೩-೧೮೦.

**ವಾಜಪೇಯ ಶತೈರಪಿ । ನಪ್ರಾಪ್ನುವಂತಿ ಸುಗತಿಂ ನಾರಾಯಣ ಪರಾಙ್ಮುಖಾಃ" ಎನ್ರು ಭಗವದ್ವಿಮುಖರುಕ್ಕು ಅನನ್ತಙ್ಗಳಾನ ಉತ್ಕೃಷ್ಟ ಸುಕೃತಙ್ಗಳಾಲುಮ್ ಸುಗತಿ ಯಿಲ್ಲೈ ಯೆನ್ರುಮ್, ಮಹರ್ಷಿ ಇನ್ವರ್ಥಙ್ಗಳೈ ಪ್ರಪಂಚಿತ್ತಾರ್.**

---

ಕೆಲವರು ಹೇಳಿರುವದು ಸುತರಾಂ ಶಾಸ್ತ್ರ ಸಮ್ಮತ ವಿಷಯವಲ್ಲವು. ಪ್ರಪತ್ತಿಯ ಪ್ರಭಾವಕ್ಕೆ ಹೀಗೆ ನ್ಯೂನತೆಯನ್ನು ಕಲ್ಪಿಸಿ ಹೇಳುವದು ನ್ಯಾಯವಲ್ಲವೆಂದು ಸಪ್ರಮಾಣವಾಗಿ ಸಮರ್ಥಿಸಿ ಹೇಳಿದರು. ಮುಂದಿನ ವಾಕ್ಯದಿಂದ ಹಿಂದೆ ಅನ್ವಯ ರೀತಿಯಲ್ಲಿ ಹೇಳಿದುದನ್ನೇ, ವ್ಯತಿರೇಕರೂಪದಲ್ಲಿ ಅಪ್ರಪನ್ನರು ,ಎಂದರೆ ಭಗವಂತನನ್ನು ಶರಣಾಗತಿಯ ಮೂಲಕ ಆಶ್ರಯಿಸದೇ ಇರುವವರು, ಎಷ್ಟು ಸುಕೃತಗಳಾದ ಧರ್ಮಗಳನ್ನೆಸಗಿದರೂ ಅಂತವರಿಗೆ ಮೋಕ್ಷವಿಲ್ಲವೆಂದು ಹಿಂದೆ **"ಪ್ರಪನ್ನಾದನ್ಯೇಷಾಂ ನದಿಶತಿ ಮುಕುನ್ದೋ ನಿಜಪದಂ"** ಎಂದು ಅಧಿಕಾರಿವಿಭಾಗಾಧಿಕಾರದಲ್ಲಿ ಹೇಳಿದ ಅಭಿಪ್ರಾಯವನ್ನು (೮೪೮ನೆಯ ಪುಟ ನೋಡಿ) ಸಪ್ರಮಾಣವಾಗಿ ಸ್ಥಾಪಿಸಿ ಹೇಳುತ್ತಾರೆ. (೪) **ನಾರಾಯಣ ಪರಾಙ್ಮುಖಾಃ** - ಶ್ರೀಮನ್ನಾರಾಯಣನನ್ನಾಶ್ರಯಿಸದೇ ಆತನಲ್ಲಿ ಶರಣಾಗತಿಯನ್ನು ಅನುಷ್ಠಿಸದೇ ಇರುವ ಅಪ್ರಪನ್ನರು- **ಅಶ್ವಮೇಧ ಶತೈರಪಿ ಇಷ್ಟ್ವಾ**-ನೂರು ವಾಜಪೇಯ ಯಾಗಗಳನ್ನು ಅನುಷ್ಠಿಸಿದರೂ ಕೂಡ, **ಸುಗತಿಂ** - ಸರ್ವ ಶ್ರೇಷ್ಠಗತಿಯಾದ ಪರಮ ಪದವನ್ನು, **ನಪ್ರಾಪ್ನುವಂತಿ** - ಹೊಂದುವದಿಲ್ಲವು." ಎನ್ರು ಎಂಬದಾಗಿ, **ಭಗವದ್ವಿಮುಖರುಕ್ಕು**, ಭಗವಂತನನ್ನು ಶರಣಾಗತಿಯ ಮೂಲಕ ಆಶ್ರಯಿಸದೇ ಇರುವವರಿಗೆ, **ಅನನ್ತಙ್ಗಳಾನ ಉತ್ಕೃಷ್ಟ ಸುಕೃತಙ್ಗಳಾಲುಮ್** - ಲೆಖ್ಖವಿಲ್ಲದ ತುಂಬಾ ಅತಿಶಯಗಳುಳ್ಳ ಮೇಲೆ ಹೇಳಿದ ಸುಕೃತಿಗಳಿಂದಲೂ ಕೂಡ, **ಸುಗತಿ ಯಿಲ್ಲೈ ಎನ್ರುಮ್**- ಮೋಕ್ಷವಿಲ್ಲವೆಂದು, **ಮಹರ್ಷಿ** - ಇತಿಹಾಸಸಮುಚ್ಚಯ ಗ್ರಂಥಕರ್ತರು **ಇನ್ವರ್ಥಙ್ಗಳೈ** ಈ ಮೇಲೆ ನಾವು ಉಪಪಾದಿಸಿರುವ ಅಭಿಪ್ರಾಯಗಳನ್ನು, **ಪ್ರಪಂಚಿತ್ತಾರ್‌ಗಳ್** - ವಿಸ್ತರಿಸಿ ಸಮರ್ಥನೆಯನ್ನು ಮಾಡಿ ಹೇಳಿದರು. ಹೀಗೆ ಅನ್ವಯ ವ್ಯತಿರೇಕರೂಪದಲ್ಲೂ ಭರನ್ಯಾಸದ ಪ್ರಭಾವವನ್ನು ಸಪ್ರಮಾಣವಾಗಿ ಸಮರ್ಥಿಸಿ ಹೇಳಿದರು. ಈ ಮೇಲಿನ **"ಅಶ್ವಮೇಧ ಶತೈರಿಷ್ಟ್ವಾ"** ಎಂಬ ಶ್ಲೋಕಾಭಿಪ್ರಾಯವು, ಅನೇಕ ಯಜ್ಞ ಯಾಗಾದಿಗಳ ಅಧಿಕಾರಿಯಾಗಿದ್ದರೂ ಒಂದುವೇಳೆ ಶತಕ್ರತುವಾದ ಇಂದ್ರನ ಪಟ್ಟಕ್ಕೆ ಯೋಗ್ಯತೆಯನ್ನು ಸಂಪಾದಿಸಿಕೊಳ್ಳುವನೇವಿನಾ ಶರಣಾಗತಿಯನ್ನನುಷ್ಠಿಸದೇ ಇರುವದರಿಂದ, ಆತನಿಗೆ ತತ್ಕಾಲದಲ್ಲಿ ಮೋಕ್ಷವಿಲ್ಲವೆಂದಿಷ್ಟುಮಾತ್ರದಲ್ಲೇ ಅಭಿಪ್ರಾಯವು. ಎಂದಿಗೂ ಅಂತಹ

(೫) "ಯೋಽಹ್ಯೇನಂ ಪುರುಷಂವೇದ ದೇವಾ ಅಪಿ ನತಂ ವಿದುಃ" ಎನ್ಗೈಯಾಲೇ ಭಗವದ್ಧ್ಯಾನ ಮುದ್ರೈಯು ವನುದ್ರೈಯು ಪ್ರಭಾವಂ ನಿತ್ಯ ಸೂರಿಗಳುಕ್ಕುವ್ ಪರಿಚ್ಛೇದ್ಯ ಮನ್ರಿರೇ. ಆಗೈಯಾಲ್ ಅನುವೃತ್ತ ಬುದ್ಧಿ

---

ಸುಕೃತಿಗೆ ಮೋಕ್ಷವೇ ಇಲ್ಲವೆಂಬ ಅಭಿಪ್ರಾಯವಲ್ಲವು. ಉಪಾಸನಾಂಗಕವಾದ ಶರಣಾಗತಿಯಿಲ್ಲದೆಯೂ ಮೋಕ್ಷವಿಲ್ಲವೆಂದು "ನಾಹಂವೇದೈಃ ಎಂಬಲ್ಲೂ (ಗೀ. ೧೧-೫೩) ರಲ್ಲಿ ಹೇಳಲ್ಪಟ್ಟಿತು. ಉಪಾಯಾನುಷ್ಠಾನ ಮಾಡುವ ತನಕ ಮೋಕ್ಷವಿಲ್ಲವೆಂಬ ಭಾವವು. "ಸ್ವಲ್ಪ ಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋಭಯಾತ್" ಎಂದು (ಗೀ. ೨-೪೦) ಗೀತೆಯಲ್ಲಿ ಹೇಳಿರುವದರಿಂದ ಸುಕೃತವು ಎಂದಿಗೂ ನಷ್ಟವಾಗದು. ಅದರ ಮಾಹಾತ್ಮ್ಯೆಯಿಂದ ಅಂತಹ ಯಾಗಾದಿ ಅನುಷ್ಠಾನವನ್ನು ಭಗವಂತನಲ್ಲಿ ಸಮರ್ಪಿಸಿ, ಜನಮೇಜಯ ಜಾನುಶ್ರುತ್ಯಾದಿಗಳ ಹಾಗೆ ಆತನ ಕೃಪೆಗೆ ಪಾತ್ರರಾಗಿ ಉಪಾಯಾನುಷ್ಠಾನದ ಮೂಲಕ ಮುಕ್ತಿಯನ್ನು ಹೊಂದುವರೆಂಬುದೂ ನಿಸ್ಸಂಶಯವು. ಇಲ್ಲಿ ಪ್ರಕೃತ ಹೇಳಬೇಕಾದುದು ಏನೆಂದರೆ, ಎಲ್ಲಿಯುವರೆಗೆ ಆತನು ಭಗವಂತನನ್ನಾಶ್ರಯಿಸಿ ಪ್ರಪನ್ನನಾಗದೇ ಇರುವನೋ, ಅಲ್ಲಿವರೆಗೂ, ಆತನು ಎಷ್ಟು ಸುಕೃತಗಳನ್ನು ಅನುಷ್ಠಿಸಿದ್ದರೂ, ಆತನು ಮೋಕ್ಷಪ್ರಾಪ್ತಿಗೆ ಅರ್ಹನಾಗುವದಿಲ್ಲವು ಎಂಬುದು. ಮುಂದಿನ ಎರಡುವಾಕ್ಯಗಳ ಮೂಲಕ ಈ ಉಪಪಾದನೆಗಳಿಂದ ಈಗ ಹೇಳತಕ್ಕ ಪ್ರಕರಣವೇನೆಂಬುದನ್ನು ತಿಳಿಸಿ, "ಆಗೈಯಾಲ್" ಎಂದು ಆರಂಭಿಸಿದ ವಾಕ್ಯದಮೂಲಕ ನಿಗಮನಮಾಡಿ ಹೇಳುತ್ತಾರೆ.

(೫) "ಯೋಽಹಿ - ಯಾವ ಅಧಿಕಾರಿಯಾದರೋ, ಏನಂ ಪುರುಷಂ - ಈ ಪರಮ ಪುರುಷನನ್ನು. ವೇದ-ಉಪಾಸನೆಯ ಮೂಲಕ ಸಾಕ್ಷಾತ್ಕರಿಸುತ್ತಾನೋ, ಇದರಿಂದ ಉಪಾಯಾನುಷ್ಠಾನವನ್ನು ಮಾಡಿವ ಅಧಿಕಾರಿಯು ಹೇಳಲ್ಪಟ್ಟನು, ಉಪಲಕ್ಷಣವಾಗಿ ಪ್ರಪತ್ತಿ ನಿಷ್ಠನಿಗೂ ಇದು ಅನ್ವಯಿಸುತ್ತದೆ, ತಂ - ಅಂತವನನ್ನು, ದೇವಾಅಪಿ - ನಿತ್ಯಸೂರಿಗಳೂ ಕೂಡ, ನವಿದಃ - ತಿಳಿಯಲಾರರು. ದೇವಾಃ ಎಂಬ ಶಬ್ದವು, ಯತ್ರ ಪೂರ್ವೇ ಸಾಧ್ಯಾಸ್ಸನ್ತಿ ದೇವಾಃ" ಎಂಬಲ್ಲಿನ ಹಾಗೆ ನಿತ್ಯಸೂರಿಗಳನ್ನು ಬೋಧಿಸುತ್ತದೆ" ಎನ್ಗೈಯಾಲೇ - ಎಂದು ಹೇಳಿರುವವರಿಂದ, ಭಗವದ್ಧ್ಯಾನ ಮುದ್ರೈಯುವನುದ್ರೈಯು ಪ್ರಭಾವನ್ - ಭಗವಂತನನ್ನಾಶ್ರಯಿಸಿ ಆತನ ಜ್ಞಾನವನ್ನು ಹೊಂದಿರುವವನ ಪ್ರಭಾವವು, ನಿತ್ಯಸೂರಿಗಳಿಗೂ ಸಹ ಪರಿಚ್ಛೇದ್ಯ ಮನ್ರಿರೇ - ಇಷ್ಟೆಂದು ತಿಳಿಯಲು ಸಾಧ್ಯವಿಲ್ಲವಷ್ಟೇ.

---

(೫)

**ಪೂರ್ವ್ವದೋಷರಾನ ಭಾಗವತರ್ಕ್ಕುಪಕ್ಲೇಶಾದಿಗಳುಣ್ಡಾನಾಲುಮ್ ಅವಜ್ಞಾದಿಗಳ್ ಪಣ್ಣಲಾಗಾದು.(೧)"ಅವೈಷ್ಣವ ನಮಸ್ಕಾರಾದವಮಾನಾಚ್ಚ ಕೇಶವೇ । ವೈಷ್ಣವೇ ಪರಿವಾದಾಚ್ಚ ಪತತ್ಯೇವ ನಸಂಶಯಃ" (೨) "ಯತಿನಿನ್ದಾಪರೋ**

---

ಈಗ ಇಷ್ಟುದೂರ ಸಮರ್ಥನೆ ಮಾಡಿದುದರ ತಾತ್ಪರ್ಯವನ್ನು ನಿಗಮನಮಾಡಿ ಹೇಳುತ್ತಾರೆ.—**ಆಗೈಯಾಲ್**-ಆ ಕಾರಣದಿಂದ,ಎಂದರೆ ಉಪಾಯಾನುಷ್ಠಾನವನ್ನು ಮಾಡಿದ ಮಹಾ ಭಾಗವತೋತ್ತಮನ ಪ್ರಭಾವವು ಅಪರಿಚ್ಛೇದ್ಯವಾದುದರಿಂದ, **ಅನುವೃತ್ತ ಬುದ್ಧಿಪೂರ್ವ್ವದೋಷರಾನ ಭಾಗವತರ್ಕ್ಕು** - ಅನುಸರಿಸಿ ಬಂದ ಬುದ್ಧಿಪೂರ್ವಕಗಳಾದ ಅಪರಾಧಗಳನ್ನು ಮಾಡಿದ ಭಾಗವತರಿಗೆ, **ಉಪಕ್ಲೇಶಾದಿಗಳುಣ್ಡಾನಾಲ್** - ದುಃಖಾದಿಗಳುಂಟಾದರೂ, ಪ್ರಪನ್ನನಿಗೆ ಅನರ್ಹವಾದ ಕೆಲವು ಪ್ರವೃತ್ತಿಗಳುಂಟಾದರೂ,**ಅವಜ್ಞಾದಿಗಳ್ ಪಣ್ಣಲಾಗಾದು** - ಅವರುಗಳ ವಿಷಯದಲ್ಲಿ ಅವಜ್ಞತೆಯನ್ನು ಮಾಡತಕ್ಕದ್ದಲ್ಲವು ಎಂದರೆ ಅವರುಗಳನ್ನು ತುಚ್ಛವಾಗಿ ಕಾಣುವದು ಸರಿಯಲ್ಲವು. ಇದಕ್ಕೆ ಪ್ರಮಾಣಗಳಬಲವೂ ಉಂಟೆಂದು ಉದಾಹರಿಸುತ್ತಾರೆ.—(೧) **ಅವೈಷ್ಣವ ನಮಸ್ಕಾರಾತ್** - ವೈಷ್ಣವನಲ್ಲದವನಿಗೆ ನಮಸ್ಕಾರಮಾಡುವವರಿಂದಲೂ, ಆ ಕಾರಣದಿಂದ,**ಕೇಶವೇ ಅವಮಾನಾಚ್ಚ** - ಹೀಗೆ ಬ್ರಹ್ಮರುದ್ರಾದಿಗಳಿಗೂ ಸ್ವಾಮಿಯಾದ ಸರ್ವೇಶ್ವರನಿಗೆ ಮಾಡುವ ಅವಮಾನದಿಂದಲೂ, **ವೈಷ್ಣವೇ ಪರಿವಾದಾಚ್ಚ**-ವಿಷ್ಣು ಭಕ್ತನನ್ನು ನಿಂದಿಸುವದರಿಂದಲೂ, **ಪತತ್ಯೇವ** - ಅಂತವನು ಹೀನಗತಿಯನ್ನು ಹೊಂದಿಯೇ ಹೊಂದುವನು, **ನಸಂಶಯಃ** - ಈ ವಿಷಯದಲ್ಲಿ ಸ್ವಲ್ಪವೂ ಸಂಶಯವಿಲ್ಲವು" ಈ ಶ್ಲೋಕವನ್ನು ಉದಾಹರಿಸಿರುವದು ಮುಖ್ಯವಾಗಿ ವೈಷ್ಣವೇ ಪರಿವಾದಾಚ್ಚ ಪತತ್ಯೇವ ಎಂಬುದನ್ನು ಮನಸ್ಸಿನಲ್ಲಿಟ್ಟು ಎಂದು ಭಾವಿಸತಕ್ಕದ್ದಾಗಿರುತ್ತದೆ.

(೨) ಸಪ್ತರ್ಷಿಗಳು ಏನೋ ಒಂದು ವ್ಯಾಜದಿಂದ ಭೂಮಿಯಲ್ಲಿ ಸಂಚರಿಸುತ್ತಿರುವಾಗ, ದ್ವಾದಶವರ್ಷ ಕ್ಷಾಮವು ಉಂಟಾಗಲು ; ಆಗ ಕಂದಮೂಲ ಫಲಾದಿಗಳು ಯಾವುದೂ ಆಹಾರಕ್ಕೆ ದೊರೆಯದಿರುವಾಗ, ಒಂದು ಸರಸ್ಸಿನಲ್ಲಿರುವ ಕಮಲಪುಷ್ಪದ ನಾಳಗಳನ್ನು ಅವರು ಕಿತ್ತು ತಂದು ತೀರದಲ್ಲಿಟ್ಟು ಸ್ನಾನವನ್ನು ಮಾಡುತ್ತಿರುವಾಗ ಮಾಯಾರೂಪದಿಂದ ಇಂದ್ರನು ಬಂದು ಅವುಗಳನ್ನು ಅಪಹರಿಸಲು ; ಆಗ ಅವರುಗಳು ಒಬ್ಬರನ್ನು ಮತ್ತೊಬ್ಬರು ಶಙ್ಕಿಸುವ ಸಂದರ್ಭದಲ್ಲಿ,ಅವರುಗಳಲ್ಲಿ ಯಾರಾದರೂ ಹಾಗೆ ಈ ಕಮಲದಂಟನ್ನು ಕದ್ದಿದ್ದ ಪಕ್ಷದಲ್ಲಿ ಇಂತಹದೋಷಗಳಿಗೆಗುರಿಯಾಗುವನೆಂದು ಶಪಥವನ್ನು ಮಾಡುವಪ್ರಕರಣವು.

---

(೧) ನಾರದೀಯ. (೨) ಇತಿ ಸಮು. ೧೨, ೨೧

**ನಿತ್ಯಂ ವೈಷ್ಣವಾ ನವಮನ್ಯತು । ಅಧ್ಯಾತ್ಮ ವಿಮುಖಸ್ಸೋಽಸ್ತು ಬಿಸಸ್ತೈನ್ಯಂ ಕರೋತಿಯಃ ॥ ಅನ್ತರ್ದುಷ್ಟೋಽ ಬಹಿಶ್ಶಾನ್ತೋಽ ಬ್ರಹ್ಮವಿದ್ವೇಷತತ್ಪರಃ । ಕರ್ಮನಿನ್ದಾಪರಸ್ಸೋಽಸ್ತು ಬಿಸಸ್ತೈನ್ಯಂ ಕರೋತಿ ಯಃ ॥ ನಿತ್ಯಾನುಷ್ಠಾನ ಸಂಯುಕ್ತಾ ನಧ್ಯಾತ್ಮ ಜ್ಞಾನ ದುರ್ಬಲಾನ್ । ವ್ಯಾಮೋಹಯತು ದುರ್ಬುದ್ಧಿರ್ಬಿಸಸ್ತೈನ್ಯಂ ಕರೋತಿಯಃ" ಎನ್ರು ಶೊಲ್ಲಪಟ್ಟದಿರೇ.**

---

ಅನಂತರ ಇಂದ್ರನು ಪ್ರತ್ಯಕ್ಷನಾಗಿ ಅವುಗಳನ್ನು ಇವರುಗಳಿಗೆ ತಂದುಕೊಡುತ್ತಾನೆ. ಈ ಇತಿಹಾಸವು ಭಾರತದಲ್ಲಿ ಬರುತ್ತದೆ. ಹಿಂದೆ ೨೪೪೭ ನೆಯ ಪುಟವನ್ನೂ ನೋಡಿ. **ಯಃ** - ನಮ್ಮಲ್ಲಿ ಯಾವನು, **ಬಿಸಸ್ತೈನ್ಯಂ ಕರೋತಿ** - ಈ ಕಮಲ ದಂಟುಗಳ ಕಳವನ್ನು ಮಾಡಿರುತ್ತಾನೋ, **ಸಃ** - ಅವನು, **ನಿತ್ಯಂ** - ಯಾವಾಗಲೂ **ಯತಿನಿಂದಾಪರಃ** - ಯತಿಯನ್ನು ನಿಂದಿಸುವ ಅಪರಾಧಮಾಡಿದವನಾಗಿ, **ವೈಷ್ಣವಾನ್** - ವಿಷ್ಣು ಭಕ್ತರನ್ನು **ಅವಮನ್ಯತು** - ಅವಮಾನ ಪಡಿಸಲಿ ಎಂದರೆ ಇಂತಹ ಪಾಪಗಳಿಗೆ ಗುರಿಯಾಗಲಿ ಎಂಬ ಭಾವವು. ಮತ್ತು **ಅಧ್ಯಾತ್ಮವಿದ್ಯಾ ವಿಮುಖಃ** - ಅಧ್ಯಾತ್ಮಶಾಸ್ತ್ರ ವಿಷಯದಲ್ಲಿ ವಿಮುಖನಾಗಿ, **ಅಸ್ತು** - ಆಗಲಿ, ಇಲ್ಲಿ ವೈಷ್ಣವಾವಮಾನವು ಮಹಾಪರಾಧವೆಂದು ನಿಂದಿಸಲ್ಪಟ್ಟಿರುತ್ತದೆ, **ಯಃ ಬಿಸಸ್ತೈನ್ಯಂ ಕರೋತಿ** - ಯಾವನು ಕಮಲ ಗಡ್ಡೆಗಳ ಕಳವನ್ನು ಮಾಡಿರುವನೋ, **ಸಃ** - ಅಂತವನು, **ಅನ್ತರ್ದುಷ್ಟಃ** - ಒಳಗೆ ದುಷ್ಟಮನಸ್ಕನಾಗಿ, **ಬಹಿಶ್ಶಾನ್ತಃ**- ಹೊರಗೆ ನೋಡುವವಕ್ಕೆ ಮಾತ್ರ ಶಾಂತ ಸ್ವಭಾವನಾಗಿಯೂ, **ಬ್ರಹ್ಮವಿದ್ವೇಷ ತತ್ಪರಃ** - ಬ್ರಹ್ಮಜ್ಞಾನಿಗಳನ್ನು ದ್ವೇಷಿಸುವದರಲ್ಲಿ ಆಸಕ್ತಿಯುಳ್ಳವನಾಗಿಯೂ, **ಕರ್ಮನಿಂದಾಪರಃ** – ಭಗವದಾರಾಧನಾರೂಪ ಶಾಸ್ತ್ರೀಯ ಕರ್ಮಗಳನ್ನು ನಿಂದಿಸುವವನಾಗಿಯೂ, **ಅಸ್ತು** - ಆಗಲಿ; ಹಾಗೆ ಕಮಲಗಳನ್ನು ಕಳವು ಮಾಡಿದವನು ಯಾವನೋ, **ಸಃ ದುರ್ಬುದ್ಧಿಃ** – ಅಂತಹ ಕೆಟ್ಟಬುದ್ಧಿಯುಳ್ಳವನು, **ನಿತ್ಯಾನುಷ್ಠಾನಸಂಯುಕ್ತಾನ್** - ನಿತ್ಯನೈಮಿತ್ತಿಕ ಕರ್ಮಾನಿಷ್ಠೆಯಿಂದ ಕೂಡಿದವರಾಗಿ, **ಅಧ್ಯಾತ್ಮಜ್ಞಾನ ದುರ್ಬಲಾನ್** - ಜೀವಾತ್ಮ ಪರಮಾತ್ಮ ಸಂಬಂಧ ಜ್ಞಾನವನ್ನು ಬೋಧಿಸುವ ವೇದಾಂತ ಜ್ಞಾನದಲ್ಲಿ ಪರಿಶ್ರಮವಿಲ್ಲದವರಾಗಿರುವವರನ್ನು, **ವ್ಯಾಮೋಹಯತು** - ಮೋಹಗೊಳಸಲಿ, ಎಂದರೆ ಅನ್ಯಥಾ ಜ್ಞಾನ, ವಿಪರೀತಜ್ಞಾನಗಳನ್ನುಂಟುಮಾಡಲಿ," **ಎನ್ರುಶೊಲ್ಲಪಟ್ಟದಿರೇ**-ಎಂದಲ್ಲವೇ ಹೇಳಲ್ಪಟ್ಟಿರುವದು. ಈ ಪ್ರಮಾಣಗಳಿಂದ ಶ್ರೀ ಮಹಾವಿಷ್ಣುವನ್ನು ಆಶ್ರಯಿಸಿರುವ ಮಹಾ ಭಾಗವತಾಪರಾಧವು ಸರ್ವಾತ್ಮನಾ ಕೂಡದೆಂದು ಹೇಳಲ್ಪಟ್ಟಿತು. ಅಂತಹ ಭಾಗವತನು ಏನೋಕಾರಣಾನ್ತರ

ದಿಂದ ಸ್ವಲ್ಪಮಾರ್ಗ ತಪ್ಪಿನಡೆದುದರಿಂದ ಅಂತವನನ್ನು ಅವಮಾನಪಡಿಸಿ ತಾವು ಭಾಗವತಾಪರಾಧಕ್ಕೆ ಗುರಿಯಾಗುವದು ಸರ್ವಾತ್ಮನಾ ಯುಕ್ತವಲ್ಲವೆಂದು ಸ್ಥಾಪಿಸಿದರು. ಈ ಅಭಿಪ್ರಾಯವನ್ನೇ, ಹಿಂದೆಯೇ ತ್ಯಾಜ್ಯವಾದುವುಗಳಲ್ಲಿ ಮುಖ್ಯವಾದುದು ಭಾಗವದಪಚಾರವೆಂದು ಹೇಳಿರುತ್ತಾರೆ. ಶ್ರೀ ವಿಷ್ಣೋ ರವಮಾನಾ ದ್ಗುರುತರಂ ಶ್ರೀವೈಷ್ಣವೋಲ್ಲಂಘನಮ್ ಎಂಬಲ್ಲಿ ಭಗವದಪಚಾರಕ್ಕಿಂತ ಭಾಗವತಾಪಚಾರವು ಹೆಚ್ಚು ದೋಷವುಳ್ಳದ್ದೆಂದು ಹೇಳಲ್ಪಟ್ಟಿರುತ್ತದೆ. ಶ್ರೀ ಅಂಬರೀಷೋಪಾಖ್ಯಾನದಲ್ಲೂ ಭಾಗವತಾಪಚಾರ ದೋಷ ನಿವೃತ್ತಿಗೆ ತನಗೂ ಅರ್ಹತೆಯಿಲ್ಲವೆಂದೂ, ಅಪಚಾರಮಾಡಿದ ಭಾಗವತನನ್ನು ಕ್ಷಮಿಸಬೇಕೆಂದು ಪ್ರಾರ್ಥಿಸುವದೇ ಪ್ರಾಯಶ್ಚಿತವೆಂದು ಉಪದೇಶಿಸಿರುತ್ತಾರೆ—ಈ ಉಪಾಖ್ಯಾನದಲ್ಲಿ ಭಾಗವತಾಪಚಾರವನ್ನ ಹೊಂದಿದ ದುರ್ವಾಸಋಷಿಯನ್ನು ಕುರಿತು ಶ್ರೀ ವಿಷ್ಣುವು ಪರಮಹಿತೋಪದೇಶವನ್ನು ಮಾಡಿ ಕಳುಹಿಸುತ್ತಾರೇನೆಂದರೆ.—"ಬ್ರಹ್ಮಂ ಸ್ತದ್ಗಚ್ಛ ಭದ್ರಂ ತೇ ನಾಭಾಗತನಯಂ ನೃಪಮ್। ಕ್ಷಮಾಪಯ ಮಹಾಭಾಗ ತತಶ್ಶಾನ್ತಿರ್ಭವಿಷ್ಯತಿ" ಓ ಬ್ರಹ್ಮವಿತ್ತಾದ ದೂರ್ವಾಸಋಷಿಯೇ! ನೀವು ಆ ನಾಭಾಗನ ಮಗನಾದ ಅಂಬರೀಷರಾಜನಲ್ಲೇ ಹೋಗಿ ಆತನ ಕ್ಷಮಾಪಣೆಯನ್ನು ಬೇಡಿದುದಾದರೆ, ಈಗ ಪ್ರಾಪ್ತವಾಗಿರುವ ವಿಪತ್ತು ಪರಿಹಾರವಾಗುತ್ತದೆಎಂಬದಾಗಿ."(ಭಾಗ.೯.೪.೭೩) ೧೫೪೭ನೆಯ ಪುಟ ನೋಡಿ. ಆದುದರಿಂದ ಪ್ರಪನ್ನನಿಗೆ ಅಪಚಾರಗಳಲ್ಲೆಲ್ಲಾ ಬಹಳ ತೀವ್ರತಮವಾದ ಅಪಚಾರವು, ಭಾಗವತಾಪಚಾರವೆಂದು ಹೇಳಿದಂತಾಯಿತು. ಇದನ್ನೇ ಶ್ರೀಯತಿವರ್ಯರ ದಿವ್ಯ ಸೂಕ್ತಿಯ ಮೂಲಕ ಸಮರ್ಥನೆ ಮಾಡಿ ಹೇಳುತ್ತಾರೆ. ಭಗವದಪ್ರೀತಿಯನ್ನುಂಟುಮಾಡಿ ಆತನ ನಿಗ್ರಹಕ್ಕೆ ಗುರಿಮಾಡುವದನ್ನು ಭಗವದಪಚಾರವೆನ್ನುತ್ತಾರೆ. ಆತನನ್ನು ಆಶ್ರಯಿಸಿದ ಪ್ರಪನ್ನರು ಭಾಗವತರು. ಅವರುಗಳ ವಿಷಯದಲ್ಲಿ ಮಾಡಿದ ಅಪಚಾರವು ತನಗೆ ಮಾಡಿದ ಅಪಚಾರಕ್ಕಿಂತ ಹೆಚ್ಚಾದ ಅಪರಾಧವಾಗಿ ಭಗವಂತನು ಭಾವಿಸುವದಾದುದರಿಂದ, ಅಪಚಾರಗಳಲ್ಲೆಲ್ಲಾ ಈ ಭಗವದಪಚಾರ ಭಾಗವತಾಪಚಾರಗಳು ತೀವ್ರತಮವಾದುದರಿಂದಲೇ ಶ್ರೀ ಯತಿವರ್ಯರು ಈ ಅಪಚಾರಗಳನ್ನು ಪೃಥಕ್ಕಾಗಿ ತಮ್ಮ ಗದ್ಯದಲ್ಲಿ, ಅಪರಾಧ ಕ್ಷಮಾಪಣೆಯನ್ನು ಪ್ರಾರ್ಥಿಸುವ ಪ್ರಕರಣದಲ್ಲಿ ಹೇಳಿರುತ್ತಾರೆಂದು ಮುಂದೆ ಉಪದೇಶಿಸುತ್ತಾರೆ.

ಭಗವದ್ಭಾಗವತಾಪಚಾರಗಳ ತೀವ್ರತಮತ್ವ ಕಥನವು.

---

ಶ್ರೀ ಭಾಷ್ಯಕಾರರು ಶರಣಾಗತಿ ಗದ್ಯದಲ್ಲಿ ಶರಣಾಗತಿಯನ್ನನುಷ್ಠಿಸಿ ಅಪರಾಧ ಕ್ಷಮಾಪಣೆಯನ್ನು ಪ್ರಾರ್ಥಿಸುವಾಗ "ಮನೋವಾಕ್ಕಾಯೈರನಾದಿಕಾ ಲ

## ಭಗವದ್ಭಾಗವತಾಪಚಾರಾಣಾಂ ತೀವ್ರತಮತ್ವ ಕಥನಮ್.

ಶ್ರೀ ಭಾಷ್ಯಕಾರರ್ ಅಕೃತ್ಯಕರಣ ಕೃತ್ಯಾಕರಣಙ್ಗಳೋಡೇ ಭಗವದಪ ಚಾರಾದಿಗಳೈ ಚ್ಚೇರವೆಡುತ್ತದು ಗೋಬಲೀವರ್ದನ್ಯಾಯತ್ತಾಲೇ ಭಗವದಪ ಚಾರಾದಿಗಳೈ ತೀವ್ರಙ್ಗಳೆನ್ಗೈಕ್ಕಾಗ.

---

**ಪ್ರವೃತ್ತಾನನ್ತ ಕೃತ್ಯಕರಣ ಕೃತ್ಯಾಕರಣ ಭಗವದಪಚಾರ ಭಾಗವತಾಪ ಚಾರಾ ಸಹ್ಯಾಪಚಾರ ರೂಪನಾನಾ ವಿಧಾನನ್ತಾಪಚಾರಾನ್......ಶೇಷತಃ ಕ್ಷಮಸ್ವ"** ಎಂದು ಹೇಳಿರುತ್ತಾರೆ. ಅಕೃತ್ಯಕರಣ ಕೃತ್ಯಾಕರಣಗಳೂ ಭಗವ ನ್ನಿಗ್ರಹಕ್ಕೆ ಕಾರಣ ಭೂತಗಳಾಗಿದ್ದರೂ, ಉತ್ತರೋತ್ತರ ತೀವ್ರತಮಗಳು ಭಗವದಪಚಾರ ಭಾಗವತಾಪಚಾರಗಳು ಎಂಬುದನ್ನು ಮನಸ್ಸಿನಲ್ಲಿಟ್ಟು, ಅಕೃತ್ಯ ಕರಣ ಕೃತ್ಯಾಕರಣಗನ್ನೂ ಹೇಳಿ ಪೃಥಕ್ಕಾಗಿ ಭಗವದಪಚಾರ ಭಾಗವತಾಪಚಾರ ಗಳನ್ನೂ ಹೇಳಿರುತಾತ್ತರೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ.—

**ಶ್ರೀ ಭಾಷ್ಯಕಾರರ್** - ಶ್ರೀ ಯತಿವರ್ಯರು, ಇವರು ಶ್ರೀವ್ಯಾಸ ಸೂತ್ರಗಳಿಗೂ ಶ್ರೀಮದ್ಭಗವದ್ಗೀತೆಗೂ ಸಹ ಸರ್ವ ಸಮಂಜಸವಾದ ಭಾಷ್ಯವನ್ನು ಅನು ಗ್ರಹಿಸಿರುವದರಿಂದ, ಶ್ರೀ ಭಾಷ್ಯಕಾರರು ಎಂಬ ನಾಮಧೇಯವು, **ಅಕೃತ್ಯ ಕರಣ ಕೃತ್ಯಾಕರಣಗಳೆಂಬ** ಪ್ರಯೋಗಗಳೊಂದಿಗೆ ಅಕೃತ್ಯಕರಣವೆಂದರೆ ಮಾಡಕೂಡದೆಂದು ನಿಷೇಧಿಸಿರುವದನ್ನು ಮಾಡೋಣವು, ಕೃತ್ಯಾಕರಣ ವೆಂದರೆ ಮಾಡು ಎಂದು ಹೇಳಿರುವದನ್ನು ಮಾಡದಿರುವದು; **"ಮಾಗೃಧಃ ಕಸ್ಯಸ್ವಿದ್ಧನಮ್"** (ಈಶಾವಾಸ್ಯ ೧) ಇತರರ ಧನದಲ್ಲಿ ಆಶೆ ಇಡಬೇಡ ವೆಂದು ಹೇಳಿದ್ದರೂ ಪರಧನವನ್ನಪೇಕ್ಷಿಸಿ ಅಪಹರಿಸುವದು, ಅಕೃತ್ಯಕರಣಕ್ಕೆ ಉದಾಹರಣೆಯು; **"ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಗ್‌ ಸಮಾಃ"** ಎಂದೂ, **"ಅಹರಹ ಸ್ಸಂಧ್ಯಾ ಮುಪಾಸೀತ"** ಎಂದೂ, ವಿಹಿತ ನಿತ್ಯನೈಮಿತ್ತಿಗ ಕರ್ಮಗಳನ್ನು ಮಾಡುಎಂದು ವಿಧಿಸಿದ್ದರೂ ಮಾಡದಿರುವದು, ಕೃತ್ಯಾಕರಣಕ್ಕೆ ನಿದ ರ್ಶನವು; ಇಂತಹ ಅಕೃತ್ಯಕರಣ ಕೃತ್ಯಾಕರಣರೂಪ ಅಪರಾಧಗಳೊಂದಿಗೆ, **ಭಗ ವದಪಚಾರಾದಿಗಳೈ** – ಭಗವದಪಚಾರ ಆದಿಪದದಿಂದ ಭಾಗವತಾಪಚಾರಾದಿ ಗಳನ್ನು **ಚೇರವೆಡುತ್ತದು** - ಸೇರಿಸಿ ಪ್ರತ್ಯೇಕವಾಗಿ ಹೇಳಿರುವದು, **ಗೋಬಲೀ ವರ್ದನ್ಯಾಯತ್ತಾಲೇ**-ಗೋಬಲೀವರ್ದನ್ಯಾಯದಪ್ರಕಾರ, **ಭಗವದಪಚಾರಾದಿಗಳೈ**- ಭಗವದಪಚಾರ ಭಾಗವತಾಪಚಾರಗಳನ್ನು, **ತೀವ್ರಙ್ಗಳೆನ್ಗೈಕ್ಕಾಗ**-ತುಂಬಾ ಕ್ರೂ ರಗಳಾದ ಅಪರಾಧಗಳು ಎಂದು ಪ್ರದರ್ಶಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. **ಅಕೃತ್ಯಕರಣ** ವೆಂಬುದರಲ್ಲೇ ಭಗವದಪಚಾರ ಭಾಗವತಾಪಚಾರಗಳೂ ಅಂತ

ಗ್ಗವು; ಹೀಗಿರುವಾಗ ಅಕೃತ್ಯಕರಣವೆಂದೂ ಹೇಳಿ, ಮುಖ್ಯವಾಗಿ ಭಗವದಪಚಾರ ಭಾಗವತಾಪಚಾರಗಳನ್ನೂ ಹೇಳಿರುವದು ಏತಕ್ಕೆಂದರೆ:—ಈ ಅಪಚಾರಗಳು ಬಹು ತೀವ್ರವಾದವುಗಳು ಎಂದು ತೋರಿಸುವದಕ್ಕಾಗಿ ಪೃಥಕ್ಕಾಗಿ ಪ್ರಯೋಗವೆಂದುಹೇಳಲ್ಪಟ್ಟಿತು ಅದು ಹೇಗೆ ಎಂದರೆ **ಗೋಬಲೀ ವರ್ದನ್ಯಾಯದ** ಪ್ರಕಾರವೆಂದು ಹೇಳಿದರು. **ಗೋ** ಶಬ್ದದಲ್ಲೇ **ಬಲೀವರ್ದ**ವೆಂದರೆ ಎತ್ತು ಸೇರಿತು, ಆಕಳನ್ನೂ ಎತ್ತನ್ನೂ ಹೀಗೆ ಎರಡನ್ನೂ ಗೋ ಶಬ್ದವು ಬೋಧಿಸುತ್ತದೆ. ಆದರೆ **ಗಾ ಮಾನಯ, ಬಲೀ ವರ್ದಮಾನಯ** - ಗೋವನ್ನು ತೆಗದುಕೊಂಡುಬಾ, ಎತ್ತನ್ನೂ ತೆಗದುಕೊಂಡು ಬಾ, ಎಂದರೆ, ಗೋ ಶಬ್ದವು ಎರಡಕ್ಕೂ ಸಾಮಾನ್ಯ ಶಬ್ದವಾಗಿದ್ದರೂ ಬಲೀವರ್ದವು ಮುಖ್ಯವಾಗಿ ಹೇಳಲ್ಪಟ್ಟಿರುವದರಿಂದ, ಬಲೀವರ್ದವನ್ನೂ ಮತ್ತು ಗೋಶಬ್ದದಿಂದ ಒಂದು ಆಕಳನ್ನೂ ತರುವನು. ಹಾಗೆಯೇ ಇಲ್ಲೂ ಭಗವದಪಚಾರ ಭಾಗವತಾಪಚಾರಗಳೂ ಅಕೃತ್ಯಕರಣಗಳಾದರೂ, ಇವುಗಳು ಗೋಬಲೀ ವರ್ದನ್ಯಾಯದ ಪ್ರಕಾರ ಮುಖ್ಯವಾಗಿ ಅವುಗಳ ತೀವ್ರ ತಮತ್ವವನ್ನು ವ್ಯಕ್ತಪಡಿಸುವದಕ್ಕಾಗಿ ಪೃಥಕ್ಕಾಗಿ ಹೇಳಲ್ಪಟ್ಟಿರುವದರಿಂದ, ಇವುಗಳನ್ನು ಬಿಟ್ಟ ಮಿಕ್ಕ ಅಕೃತ್ಯಕರಣಗಳು, ಅಕೃತ್ಯಕರಣ ಶಬ್ದದಿಂದ ಬೋಧಿಸಲ್ಪಟ್ಟವೆಂದು ಗ್ರಹಿಸತಕ್ಕದ್ದೆಂಬ ಭಾವವು.

ಭಗವದಪಚಾರಗಳಲ್ಲಿ ಮುಖ್ಯವಾಗಿ **ದ್ವಾತ್ರಿಂಶದಪಚಾರಗಳು**; ಸರ್ವಾತ್ಮನಾ ಕೂಡದೆಂದು ವಿಧಿಸಲ್ಪಟ್ಟಿವೆ. ಅವು ಯಾವುವೆಂದರೆ.—

೧. ವಾಹನದೊಂದಿಗೆ ಅಥವಾ ಪಾದರಕ್ಷೆಯನ್ನು ಧರಿಸಿ ಭಗವನ್ಮಂದಿರವನ್ನು ಪ್ರವೇಶಿಸುವದು. ೨. ಉತ್ಸವಕಾಲದಲ್ಲಿ ಭಗವಂತನನ್ನು ಸೇವಿಸುವದು ಸಾಧ್ಯವಿದ್ದರೂ ಸೇವಿಸದಿರುವದು. ೩. ಚಾಮರವನ್ನು ಹಿಡಿದು ಕೈಂಕರ್ಯಾದಿಗಳನ್ನು ಮಾಡುವವರು ವಿನಾ ಇತರರು ಏಕಹಸ್ತದಿಂದ ನಮಸ್ಕರಿಸುವದು. ೪. ಆಶೌಚಕಾಲದಲ್ಲೂ, ಸ್ನಾನಾದಿಗಳಿಲ್ಲದೆಯೂ, ಸೇವಿಸುವದು. ೫. ಭಗವತ್ಸನ್ನಿಧಿಯಲ್ಲಿ ಕಾಲು ಚಾಚಿಕೊಳ್ಳುವದು, ಕಾಲುಮೇಲೆಕಾಲುಹಾಕಿ ಕೂತುಕೊಳ್ಳುವದು. ೬. ಭಗವತ್ಸನ್ನಿಧಿಯಲ್ಲಿ ಊರಿನ ಮಾತನ್ನೆಲ್ಲಾ ಆಡುವದು, ಕೂಗಿ ಮಾತಾಡುವದು, ಮಲಗುವದು, ಇತ್ಯಾದಿ. ೭. ಭಗವತ್ಸನ್ನಿಧಿಯಲ್ಲಿ ನಗುವದು, ಅಳುವದು. ೮. ಭಗವತ್ಸನ್ನಿಧಿಯಲ್ಲಿ ಕೋಪಿಸುವದು, ಬಯ್ಯುವದು, ಜಗಳವಾಡುವದು, ಅನುಗ್ರಹಿಸುವದು. ೯. ಸ್ತ್ರೀಯರೊಂದಿಗೆ ಕ್ರೀಡಾವಿಷಯ ಮಾತುಗಳನ್ನಾಡುವದು. ೧೦. ಅಪಾನವಾಯುವನ್ನು ಬಿಡುವದು. ೧೧. ವಸ್ತ್ರವನ್ನು ಸೊಂಟಕ್ಕೆ ಕಟ್ಟದೆ ಸೇವಿಸುವದು. ೧೨. ಭಗವಂತನನ್ನು ಸ್ತುತಿಸದೆ ಇತರರನ್ನು ಸ್ತುತಿಸೋಣವು. ೧೩. ಯಥಾವಿಧಿ ಭಗವದುಪಚಾರ

ಗಳನ್ನು ಮಾಡಲು ಶಕ್ತಿ ಇದ್ದರೂ, ಸಙ್ಗ್ರಹವಾಗಿ ನಡೆಸೋಣವು. ೧೪. ಭಗವನ್ನಿವೇದನವಾಗದೆ ಇರುವದನ್ನು ತಿನ್ನುವದು. ೧೫. ಆಯಾ ಕಾಲಗಳಲ್ಲಿ ದೊರೆಯುವ ಫಲಗಳನ್ನು ಭಗವಂತನಿಗೆ ಸಮರ್ಪಿಸದಿರುವದು. ೧೬. ಭಗವನ್ನಿವೇದನವಾದ ಪದಾರ್ಥಕ್ಕೆ ಇತರ ವಸ್ತುಗಳನ್ನು ಸೇರಿಸುವದು. ೧೭. ಭಗವಂತನಿಗೆ ಬೆನ್ನನ್ನು ತೋರಿಸಿ ಕೂತುಕೊಳ್ಳುವದು. ೧೮. ಭಗವಂತನ ಸನ್ನಿಧಿಯಲ್ಲಿ ಇತರರಿಗೆ ನಮಸ್ಕಾರಮಾಡುವದು. ೧೯. ಆಚಾರ್ಯರನ್ನು ಮಾತಾಡಿಸದೆ ಸುಮ್ಮನಿರುವದು. ೨೦. ಆತ್ಮ ಪ್ರಶಂಸೆಯು. ೨೧. ದೇವತಾ ನಿಂದನೆಯು ೨೨. ಕೂದಲು ಉಗರು ಮುಂತಾದ್ದನ್ನು ದೇವಾಲಯದಲ್ಲಿ ಹಾಕುವದು. ೨೩. ದೇವಾಲಯದಲ್ಲಿ ಉಗಿಯುವದು. ೨೪. ದೇವಾಲಯದ ಅಂಗಳದಲ್ಲಿ ಮಲಮೂತ್ರೋತ್ಸರ್ಜನೆಯು. ೨೫. ದೇವಾಲಯದಲ್ಲಿ ನಡೆಯುವ ಭಗವತ್ಕಥಾಶ್ರವಣವನ್ನು ಮಾಡದಿರುವದು. ೨೬. ನಿಷಿದ್ಧ ಪುಷ್ಪಗಳನ್ನು ಭಗವಂತನಿಗೆ ಸಮರ್ಪಿಸುವದು. ೨೭. ವಿಮಾನ ಛಾಯೆಯನ್ನು ತುಳಿಯುವದು. ೨೮. ದೇವತಾಂತರವನ್ನೂ ಭಗವಂತನನ್ನೂ ಸಮವೆಂದು ಭಾವಿಸುವದು. ೨೯. ಭಗವದ್ವಿಗ್ರಹವನ್ನು ಕಲ್ಲು ಲೋಹ ಮುಂತಾದ್ದಾಗಿ ಭಾವನೆಯು. ೩೦. ಭಗವಂತನಿಗಾಗಿ ಇಟ್ಟಿರುವ ಪುಷ್ಪವನ್ನು ಮೂಸಿನೋಡುವದು. ೩೧. ದೇವಾಲಯದಲ್ಲಿ ಬಂದಿರುವ ಶೂದ್ರಾದಿ ಸ್ಪರ್ಶಕ್ಕಾಗಿ ಸ್ನಾನಮಾಡುವದು. ೩೨. ಭಗವಂತನಿಗಾಗಿ ಹಚ್ಚಿರುವ ದೀಪಗಳನ್ನು ಇತರ ಕೆಲಸಕ್ಕಾಗಿ ಉಪಯೋಗಿಸುವದು.

ಇಂತಹ ಭಗವದಪಚಾರಗಳ ಸಂಘಟನೆಯಿಲ್ಲದಹಾಗೆ ನಡೆಯತಕ್ಕದ್ದು ಅತ್ಯಾವಶ್ಯಕವು. ಎಲ್ಲಾ ವಿಧ ಅಪಚಾರಗಳಿಗೂ ಶಿಕ್ಷಕನು ಭಗವಂತನು; ಆದುದರಿಂದ ಅಕೃತ್ಯಕರಣ ಕೃತ್ಯಾಕರಣಗಳೆಲ್ಲಾ ಅಪಚಾರಗಳಾಗಿ ಅವುಗಳಿಗೆಲ್ಲಾ ಭಗವಂತನೇ ಶಿಕ್ಷಕನು; ಹೀಗಿರುವಾಗ ಭಗವದಪಚಾರ ಭಾಗವತಾಪಚಾರಗಳೆಂದು ವಿಶೇಷಿಸಿ ಹೇಳಿದುದು, ಆ ಅಪಚಾರಗಳಲ್ಲಿ ಇವು ತೀವ್ರತಮವೆಂದು ತಿಳಿಸುವದಕ್ಕಾಗಿಯೂ, ಭಗವದಪಚಾರಕ್ಕಿಂತ ಭಾಗವತಾಪಚಾರವು ಅತಿಶಯಿತ ದೋಷವೆಂದು ತಿಳಿಸುವದಕ್ಕಾಗಿಯೂ ಪೃಥಕ್ಕಾಗಿ ಪ್ರಯೋಗವೆಂದು ತಿಳಿಸಿದರು. ಅದನ್ನೇ ಉಪಪಾದಿಸಿ ಹೇಳುತ್ತಾರೆ.—ಎಲ್ಲಾಮ್ - ಸಮಸ್ತ ಅಪಚಾರಗಳೆಲ್ಲಾ ಶಾಸ್ತ್ರೋಲ್ಲಂಘನೆಗಳಾಗಿ, ಭಗವದಪಚಾರಙ್ಗಳಾಯಿರುಕ್ಕ - ಭಗವದಪಚಾರಗಳೆಂದೇ ಭಗವಂತನು ಭಾವಿಸುವವನಾಗಿರುವಾಗ, ಮುಖ ಭೇದಙ್ಗಳಾಲೇ - ಯಾವ ವಿಷಯವಾಗಿ ಎಂತಹ ಅಪಚಾರವು ನಡೆಯಿತು ಎಂದು, ವಿವಕ್ಷಿತ್ತು - ಹೇಳುವ ಅಪೇಕ್ಷೆಯಲ್ಲಿ ಶಿಲವತ್ತೈ -ಭಾಗವತರ ವಿಷವಾಗಿ ನಡೆದ ಕೆಲವು ಅಪಚಾರಗಳನ್ನು, ಇಙ್ಗ - ಈ ಸಂದರ್ಭದಲ್ಲಿ, ಶ್ರೀ ಯತಿವರ್ಯರು ಶ್ರೀ ಶರಣಾಗತಿಗದ್ಯದಲ್ಲಿ ಹೇಳಿರುವ

ಎಲ್ಲಾವಮ್ ಭಗವದಪಚಾರಙ್ಗಳಾಯಿರುಕ್ಕ ಮುಖಭೇದಙ್ಗಳಾಲೇ ವಿವಕ್ಷಿತ್ತು ಚಿಲವತ್ತೈ ಇಙ್ಗು ಭಾಗವತಾಪಚಾರಙ್ಗಳೆನ್ಗಿರದು. ಯಾವೈಶಿಲ ಅಪಚಾರಙ್ಗಳೈ ಪ್ಪುರವ್ಪೇ ಶೆಯ್ಗಿರಾನ್ ಅಪ್ಪಡಿಪ್ಪಟ್ಟವೈತನ್ನೈಯೇ ಭಗವದ್ಭಾಗವತ ವಿಷಯಙ್ಗಳಿಲೇ ಶೆಯ್ದಾಲ್, ವಿಷಯಸ್ವಭಾವತ್ತಾಲೇ ರಾಜದ್ರೋಹಾದಿಗಳ್ಪೋಲೇ, ಮಿಗವುಂ ದಂಡ ಹೇತುಕ್ಕಳಾಮೆನ್ನು ವಿಶೇಷೋಪಾದಾನತ್ತುಕ್ಕಭಿಪ್ರಾಯಮ್.

---

ಸಂದರ್ಭದಲ್ಲಿ, **ಭಾಗವತಾಪಚಾರಙ್ಗಳೆನ್ಗಿರದು** - ಭಾಗವತಾಪಚಾರವೆಂದು ಹೇಳೋಣವು. ಭಗವಂತನು ತನಗೆ ಮಾಡಿದ ಅಪಚಾರಕ್ಕಿಂತಲೂ ತನ್ನವರಾಗಿ ತನಗೆ ಅತ್ಯರ್ಥ ಪ್ರಿಯರಾಗಿರುವ ಭಾಗವತೋತ್ತಮರಿಗೆ ಮಾಡಿದ ಅಪಚಾರವನ್ನು ತುಂಬಾ ಕ್ರೂರವಾದ ಅಪರಾಧವೆಂದು ಭಾವಿಸುವನಾದುದರಿಂದ ಪ್ರತ್ಯೇಕವಾಗಿ ಹೇಳಲ್ಪಟ್ಟಿತೆಂಬ ಭಾವವು. ಆದುದರಿಂದ ಅಂಬರೀಷರಿಗೂ, ಪ್ರಹ್ಲಾದನಿಗೂ ದ್ರೌಪದಿಗೂ ದಂಡಕಾರಣ್ಯ ಋಷಿಗಳಿಗೂ, ಉಂಟಾದ ಅವಮಾನಗಳನ್ನು ಸರ್ವೇಶ್ವರನು ಸಹಿಸನು. **"ಗೋವಿಂದೇತಿ ಯದಾಕ್ರಂದ ತ್ಕೃಷ್ಣಾ ಮಾಂ ದೂರವಾಸಿನಂ"** ಎಂಬುದು ಅನುಸಂಧೇಯವು.

ಹೀಗೆ ಪೃಥಕ್ಕಾಗಿ ಭಗವದ್ಭಾಗವತಾಪಚಾರಗಳನ್ನು ಹೇಳಿದುದರ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.—**ಯಾವೈಶಿಲಅಪಚಾರಙ್ಗಳೈ** - ಯಾವ ಕೆಲವು ಅಪರಾಧಗಳನ್ನು, **ಪುರವ್ಪೇ** - ಭಗವದ್ಭಾಗವತರಲ್ಲದೆ ಇತರ ಹೊರಗಿನವರ ವಿಷಯದಲ್ಲಿ, **ಶೆಯ್ಗಿರಾನ್** - ಮಾಡುತ್ತಾನೆಯೋ, **ಅಪ್ಪಡಿಪಟ್ಟವೈತನ್ನೈಯೈ** - ಅಂತಹ ಅಪಚಾರಗಳನ್ನೇ, **ಭಗವದ್ಭಾಗವತ ವಿಷಯಙ್ಗಳಿಲೇ ಶೆಯ್ದಾಲ್** - ಭಗವದ್ಭಾಗವತರನ್ನು ಕುರಿತು ಮಾಡಿದರೆ, **ವಿಷಯಸ್ವಭಾವತ್ತಾಲೇ** - ಮಾಹಾತ್ಮ್ಯೆಯುಳ್ಳ ಭಗವದ್ಭಾಗವತರ ವಿಷಯವಾದ ಪ್ರಯುಕ್ತ, **ರಾಜದ್ರೋಹಾದಿಗಳ್ ಪೋಲೆ** - ರಾಜದ್ರೋಹವೇ ಮೊದಲಾದವುಗಳು ಹೇಗೆ ಅಧಿಕ ಶಿಕ್ಷೆಗೆ ಅರ್ಹವಾದವೋ, ಹಾಗೆ, **ಮಿಗವುಮ್‌ದಂಡಹೇತುಕ್ಕಳಾಮ್** - ಹೆಚ್ಚಾದ ಶಿಕ್ಷೆಗೆ ಅರ್ಹಗಳಾಗುವವು, **ಎನ್ರು** - ಎಂದು, **ವಿಶೇಷೋಪಾದಾನತುಕ್ಕು** - ಹೀಗೆ ವಿಶೇಷಿಸಿ ಭಗವದಪಚಾರ ಭಾಗವತಾಪಚಾರವೆಂದು ಪೃಥಕ್ಕರಿಸಿ ಹೇಳುವದಕ್ಕೆ, **ಅಭಿಪ್ರಾಯಮ್** - ತಾತ್ಪರ್ಯವು. ಒಬ್ಬನು ಸಾಧಾರಣವಾಗಿ ಕಳವು ಮಾಡಿದರೆ ಆಗುವ ಶಿಕ್ಷೆಗಿಂತ ರಾಜನ ಮನೆಯಲ್ಲಿ ಮಾಡಿದ ಕಳುವಿಗೆ ಹೇಗೆ ಹೆಚ್ಚು ಶಿಕ್ಷೆಯೋ, ಹಾಗೆಯೇ, ಇಲ್ಲಿಯೂ ಎಂಬಭಾವವು; ಭಗವಂತನು ರಾಜಾಧಿರಾಜನು; ಭಾಗವತರು ಆತನಿಗೆ ಅತ್ಯರ್ಥಪ್ರಿಯರು; ಇಂತವರ

ಉಪಾಯಪೂರ್ತ್ಯಭಾವಾನ್ನಾನುಷ್ಯಪಚಾರೋ ಭಾಗವತಾಪಚಾರ ಏವ.

ನರಕತ್ತುಕ್ಕು ನಾಱ್ಱಿಜ್ಞಾಲಾನ ಸಂಸಾರ ಮಂಡಲತ್ತಿಲೇ ನಲ್ವಳಿ ನಡ

ವಿಷಯದಲ್ಲಿ ನಡೆಸಿದ ಅಪಚಾರವು, ಸಾಧಾರಣವಾಗಿ ಇತರರ ವಿಷಯದಲ್ಲಿ ಮಾಡಿದ ಅಪಚಾರಕ್ಕಿಂತ ತುಂಬಾ ಕ್ರೂರವಾದುದರಿಂದ ಭಗವನ್ನಿಗ್ರಹ ರೂಪ ಶಿಕ್ಷೆಯೂ ಸಹ ತುಂಬಾ ಕ್ರೂರವಾದುದೆಂದು ತಿಳಿಸುವದಕ್ಕಾಗಿಯೇ, ಶ್ರೀ ಯತಿವರ್ಯರು ಭಗವದಪಚಾರ ಭಾಗವತಾಪಚಾರವೆಂದು ಪೃಥಕ್ಕರಿಸಿ ಹೇಳಿದುದು ಎಂಬ ಭಾವವು. "ಪಾಂಡವಾನ್ ದ್ವಿಷಸೇ ರಾಜನ್ ಮಮ ಪ್ರಾಣಾಹಿ ಪಾಂಡವಾಃ" ಎಂದು ಹೇಳಿ ಆ ಕಾರಣದಿಂದ ದುರ್ಯೋಧನನು ತನಗೂ ಸಹ ಹೆಚ್ಚು ದ್ವೇಷಿಯು ಎಂಬ ಶ್ರೀ ಕೃಷ್ಣಭಗವಾನ್‌ರವರ ಉಕ್ತಿಯು ಅನುಸಂಧೇಯವು. "ತಸ್ಯೈವ ದೇವದೇವಸ್ಯ ಹರೇರ್ಯಜ್ಞಪತೇಃ ಪ್ರಭೋಃ। ಬ್ರಾಹ್ಮಣಾಃ ಪ್ರಭವೋ ದೈವಂ ನತೇಭ್ಯೋ ವಿದ್ಯತೇ ಪರಮ್" (ಭಾಗ. ೧೦-೮೧-೧೭) ಮತ್ತು "ಯಾವತೀರ್ವೈ ದೇವತಾಸ್ತಾಸ್ಸರ್ವಾ ವೇದವಿದಿ ಬ್ರಾಹ್ಮಣೇ ವಸನ್ತಿ" ಇತ್ಯಾದಿ ಪ್ರಮಾಣಗಳೂ ಅನುಸಂಧೇಯಗಳು. ಪರಮ ಭಾಗವತರಾದ ಅಂಬರೀಷರಿಗೆ ಮಾಡಿದ ಅಪರಾಧವನ್ನು ಕ್ಷಮಿಸಲು ತಾನು ಭಕ್ತಪರಾಧೀನನಾದುದರಿಂದ ತನಗೆ ಶಕ್ತಿಯಿಲ್ಲವೆಂದೂ ಆ ಕಾರಣದಿಂದ ಅಂಬರೀಷರ ಕ್ಷಮಾಪಣೆಯನ್ನು ಹೋಗಿ ಕೇಳಿಕೋ ಎಂದು ಅಪರಾಧ ಮಾಡಿದ ದೂರ್ವಾಸಮುನಿಗೆ ಹಿತೋಪದೇಶವನ್ನು ಭಗವಂತನು ಮಾಡಿದನು.

ಉಪಾಯ ಪೂರ್ತಿಯಿಲ್ಲದ ಕರ್ಮಯೋಗಾದಿ ನಿಷ್ಠರೂ ಭಾಗವತರೇ, ಅವರುಗಳಿಗೂ ಅಪಚಾರವು ಕೂಡದು.

ಹೀಗೆ ಭರನ್ಯಾಸಮಾಡಿ ಪ್ರಪನ್ನನಾದ ಭಾಗವತನ ವಿಷಯದಲ್ಲಿ ಅಪಚಾರವು ಸರ್ವಾತ್ಮನಾ ಕೂಡದೆಂದು ಹೇಳಿದರು. ಆದರೆ ಮೋಕ್ಷಾರ್ಥಿಯಾಗಿ ಉಪಾಯ ಪೂರ್ತಿಯಿಲ್ಲದೆ ಕರ್ಮಯೋಗಜ್ಞಾನಯೋಗನಿಷ್ಠರುಗಳ ವಿಷಯವಾದ ಅಪಚಾರವೂ ಭಾಗವತಾಪಚಾರದಷ್ಟು ಕ್ರೂರವೋ ಎಂದರೆ ಅವರುಗಳೂ ಮೋಕ್ಷಾರ್ಥಿಗಳಾಗಿ ಬ್ರಹ್ಮವಿದ್ಯಾಙ್ಗಕವಾದ ಕರ್ಮಯೋಗಾದಿ ನಿಷ್ಠೆಯಲ್ಲಿರುವದರಿಂದ ಭಾಗವತರೇ ಸರಿ; ಅವರ ವಿಷಯದಲ್ಲೂ ಅಪಚಾರವು ಸರ್ವಾತ್ಮನಾ ಕೂಡದೆಂದು "ನರಕತ್ತುಕ್ಕು" ಎಂದಾರಂಭಿಸಿದ ವಾಕ್ಯದಿಂದ ತಿಳಿಸುತ್ತಾರೆ.—ಹಿಂದೆ ಅಂತಹ ಕರ್ಮಯೋಗ ನಿಷ್ಠರೂ ದೇಹ ಯಾತ್ರೆಗಾಗಿ ಸ್ವಲ್ಪ ದ್ರವ್ಯಾರ್ಜನೆ ಮೊದಲಾದವುಗಳಲ್ಲಿ ಆಶೆಯುಳ್ಳವರಾದರೂ ಅಂತವರನ್ನೂ ಕೂಡ

**ಪ್ಪರ್ ದುರ್ಲಭರಾಯಿರುಕ್ಕ ಭಗವದ್ವಿಷಯತ್ತಿಲ್ ಪ್ರವೃತ್ತಿ ಅಧಿಕಾರಾನು ರೂಪಮಾಗ ಮುಕ್ತಿಮಾರ್ಗತ್ತುಕ್ಕು ಮುನ್ನಡಿಯಾಗ ಕರ್ಮಯೋಗಾದಿ ಪರ್ವ ಭೇದಙ್ಗಳಿಲೇ ನಿನ್ಱಾರೈಯುಮ್ ನೆಗಿೞ ನಿನೈಕ್ಕೈ ಭಾಗವತಾಪಚಾರಮ್.**

---

ನಿಕೃಷ್ಟರೆಂದು ಭಾವಿಸಿ ಸಂಭಾಷಣಾದಿಗಳಿಗೆ ಅನರ್ಹರೆಂದು ಭಾವಿಸಕೂಡದೆಂದು ಉಪದೇಶಿಸಿದರು. ಈಗಲಾದರೋ ಉಪಾಯ ಪೂರ್ತಿಯಿಲ್ಲದ ಭಕ್ತಿಯೋಗ ನಿಷ್ಠರ ವಿಷಯದಲ್ಲೂ ಅಪಚಾರವು ಕೂಡದು ಎಂಬ ಉಪದೇಶವು.—**ನರಕತ್ತುಕ್ಕು** - ನರಕ ಪ್ರವೇಶಕ್ಕಾಗಿ, **ನಾತ್ತಙ್ಕಾಲಾನ** - ನಾತ್ತಙ್ಗಾಲ್ ಎಂದರೆ ನಾಟೀ ಹಾಕುವ ಪ್ರವೇಶವು, ಭತ್ತವನ್ನು ನೀರೂ ಗೊಬ್ಬರವೂ ಇರುವ ಸ್ವಲ್ಪ ಸ್ಥಳದಲ್ಲಿ ಒಟ್ಟು ಹಾಯಿಸಿ, ಅದು ಆರಂಗುಲದಷ್ಟು ಬೆಳೆದನಂತರ ಕಿತ್ತು ಗದ್ದೆಯಲ್ಲಿ ನಾಟೀ ಹಾಕುವದಕ್ಕಾಗಿ ಬೆಳಸುವ ಸ್ಥಳವು, ಅಂತಹ ಸ್ಥಳವಾಗಿರುವ, **ಸಂಸಾರಮಣ್ಡಲತ್ತಿಲೇ** - ಸಂಸಾರ ಮಂಡಲವಾಗಿರುವ ಈ ಪೃಥಿವಿಯಲ್ಲಿ ಎಂದರೆ ನರಕಕ್ಕೆ ಹೋಗಿ ಸೇರುವದಕ್ಕಾಗಿ ಕೃಷಿಯು ನಡೆಯುತ್ತಿರುವ ಈ ಭೂಮಂಡಲದಲ್ಲಿ ಎಂಬ ತಾತ್ಪರ್ಯವು, **ನಲ್ವಳಿನಡಪ್ಪಾರ್** - ಸಾತ್ವಿಕ ಮಾರ್ಗದಲ್ಲಿ ಪ್ರವೃತ್ತಿಯುಳ್ಳವರು, ಅತಏವ ವಿಷ್ಣುವನ್ನು ಆರಾಧಿಸಿ ಧ್ಯಾನಿಸಿ ಮುಕ್ತಿಯನ್ನು ಹೊಂದಬೇಕೆಂದಿರುವವರು, **ದುರ್ಲಭರಾಯಿರುಕ್ಕ** - ಮನುಷ್ಯಾಣಾಂಸಹಸ್ರೇಷು ಕಶ್ಚಿದ್ಯತತಿಸಿದ್ಧಯೇ। ಯತತಾಮಪಿಸಿದ್ಧಾನಾಂ ಕಶ್ಚಿನ್ಮಾಂವೇತ್ತಿತತ್ವತಃ" ಎಂದು ಹೇಳಿರುವಹಾಗೆ ತುಂಬಾ ದುರ್ಲಭರಾಗಿರುವಾಗ, **ಭಗವದ್ವಿಷಯತ್ತಿಲ್ ಪ್ರವೃತ್ತಿ** - ಭಗವದ್ವಿಷಯವನ್ನು ಕುರಿತು ಎಂದರೆ ಭಗವದುಪಾಸನ ಅಥವಾ ಸಾಕ್ಷಾತ್ಕಾರವನ್ನು ಕುರಿತು - **ಅಧಿಕಾರಾನು ರೂಪಮಾಗ** - ತಮ್ಮಗಳಿಗೆ ಇರುವ ಶಕ್ತ್ಯನುಸಾರವಾಗಿ, ಅಶಕ್ತರಾಗಿದ್ದ ಪಕ್ಷದಲ್ಲಿ ಜ್ಞಾನಯೋಗ ನಿರಪೇಕ್ಷವಾಗಿ, ಸಮರ್ಥರಾಗಿದ್ದ ಪಕ್ಷದಲ್ಲಿ ಜ್ಞಾನಯೋಗ ಸಾಪೇಕ್ಷವಾಗಿ, ಹೀಗೆ **ಮುಕ್ತಿಮಾರ್ಗತ್ತುಕ್ಕು** - ಮುಕ್ತಿಯನ್ನು ಹೊಂದುವ ಉಪಾಯಕ್ಕೆ, **ಮುನ್ನಡಿಯಾನ** - **ಕರ್ಮಯೋಗಾದಿ ಪರ್ವಭೇದಙ್ಗಳಿಲೇ** - ಭಗವದುಪಾಸನಕ್ಕೆ ಅಙ್ಗಗಳಾಗಿ ಅನುಷ್ಠಿಸಬೇಕಾದ ಬೇರೆಬೇರೆಯಾದ ಏಣಿಯ ಮೆಟ್ಟಲುಗಳಲ್ಲಿ ಮೊದಲು ಮೆಟ್ಟಲಾದ ಕರ್ಮಯೋಗದಲ್ಲಿ, ಆದಿಶಬ್ದದಿಂದ ಜ್ಞಾನಯೋಗವು ಬೋಧಿತವು. **ನಿನ್ಱಾರೈಯುಮ್** - ಅನುಷ್ಠಿಸುತ್ತಿರುವವರನ್ನೂ, **ನೆಗಿೞನಿನೈಕ್ಕೈ** - ಹೀನವಾಗಿ ಭಾವಿಸೋಣವೂ ಸಹ, **ಭಾಗವತಾಪಚಾರಮ್** - ಭಗವನ್ನಿಗ್ರಹಕ್ಕೆ ಹೇತುವಾದ ಭಾಗವತಾಪಚಾರವೇ. ಈ ಭಕ್ತಿಯೋಗವಾದ ಉಪಾಯದಲ್ಲಿ **ಯೋಗನಿಷ್ಪತ್ತಿ**ಯಾದನಂತರವೇ ಮೋಕ್ಷವು. ಆದುದರಿಂದ **ಉಪಾಸನಾ ನಿಷ್ಠ**ರು ಇನ್ನು ಉಪಾಯ

ಪೂರ್ತಿಯಿಲ್ಲದುದರಿಂದ ಕೃತಕೃತ್ಯರಲ್ಲವು, ತಾನಾದರೋ ಸಕೃದನುಷ್ಠೇಯವಾದ ಭರನ್ಯಾಸವನ್ನನುಷ್ಠಿಸಿರುವದರಿಂದ ಉಪಾಯ ಪೂರ್ತಿಯನ್ನು ಹೊಂದಿದ ಕೃತಕೃತ್ಯನು; ಹೀಗೆ ಹೆಮ್ಮೆಯಿಂದ ಇಂತಹ ಉಪಾಯ ಪೂರ್ತಿಯಿಲ್ಲದೆ ಪ್ರಥಮ ಮೆಟ್ಟಲಲ್ಲಿರುವಕರ್ಮಯೋಗಿಗಳು, ಭಾಗವತರೇ ಅಲ್ಲವು ಎಂದುಭಾವಿಸಿ, ಅವರುಗಳು ಭಗವದ್ಭಾಗವತರುಗಳ ಕೈಂಕರ್ಯಕ್ಕಾಗಿಯೇ ಧನಾರ್ಜನೆಯಲ್ಲಿ ಪ್ರವೃತ್ತರಾಗಿದ್ದರೆ, ಆ ಕಾರಣದಿಂದ ಅವರನ್ನು ನಿರಾಕರಿಸಿ, ಅವರುಗಳೂ ಸಂಭಾಷಣೆಗೆ ಅನರ್ಹರೆಂದು ಭಾವಿಸಿ, ನಿಕೃಷ್ಟಭಾವದಿಂದ ನೋಡುವದು, ಯುಕ್ತವಲ್ಲವೆಂದೂ, ಇದು ಭಾಗವತಾಪಚಾರವಾಗಿ ಭಗವನ್ನಿಗ್ರಹಕ್ಕೆ ಗುರಿಮಾಡುತ್ತದೆಂದೂ, ಉಪದೇಶಿಸಿರುತ್ತಾರೆ. ಅಂತಹ ಅಪಚಾರವು ನರಕ ಪ್ರವೇಶಕ್ಕೆ ಅಂಕುರಾರ್ಪಣವಾದರೂ ಆಗಬಹುದೆಂಬ ಭಾವವು. ಪ್ರಪದನದ ವೈಕಲ್ಯದಿಂದ ಅದು ಸಿದ್ಧಿಸದೆ ಇರುವದರ ಮೂಲಕ ಇಂತಹ ಅಪಚಾರಗಳಲ್ಲಿ ಮನಸ್ಸುಂಟಾಗಬಹುದು. ಅಂತಹ ವೈಕಲ್ಯವಿದ್ದರೂ ಅಂತವರ ಅಪಚಾರದಿಂದ ಭಗವನ್ನಿಗ್ರಹಕ್ಕೆ ಗುರಿಯಾಗುವದು ಸರಿಯಲ್ಲವೆಂಬ ಭಾವವು. ಈ ಭೂಮಂಡಲದಲ್ಲಿ ಅನೇಕರ ಪ್ರವೃತ್ತಿಗಳೆಲ್ಲಾ ನರಕಕ್ಕೆ ಹೋಗುವವ್ಯವಸಾಯದಲ್ಲೇ ಇರುವಂತಾದ್ದು. ಮೋಕ್ಷೋಪಾಯಕ್ಕೆಮಾರ್ಗವನ್ನುಹುಡುಕುವರು ಅತಿ ವಿರಳರು; ಇವರುಗಳು ಭಕ್ತಿಯೋಗಕ್ಕೆ ಅಂಗಗಳಾದ ಕರ್ಮಯೋಗಾದಿಗಳಲ್ಲಿ ಇದ್ದುಕೊಂಡು ಭಗವದ್ಭಾಗವತ ಕೈಂಕರ್ಯಗಳಿಗಾಗಿ ಧನಾರ್ಜನಾದಿಗಳಲ್ಲಿಪ್ರವರ್ತಿಸಿದರೆ,ಆಕಾರಣದಿಂದ ಅವರನ್ನು ನಿಕೃಷ್ಟ ಭಾವದಿಂದ ನೋಡಿ ಭಾಗವತಾಪಚಾರವನ್ನುಸಂಪಾದಿಸಿಕೊಳ್ಳುವದು ಯುಕ್ತವಲ್ಲವೆಂದು ಅಪ್ಪಣೆ ಕೊಡಿಸಿರುತ್ತಾರೆ. ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್" ಎಂಬಲ್ಲಿ ಕರಣಕಳೇಬರಗಳನ್ನು ಹೊಂದಿರುವ ತನಗೆ ನ್ಯಾಯವಾಗಿ ಧರ್ಮವಾಗಿರುವ ಕರ್ಮಯೋಗವೇ. ಗೀತೆಯ ಮೂರನೆಯ ಅಧ್ಯಾಯದಲ್ಲಿ ಹತ್ತು ಕಾರಣಗಳಿಂದ ವಿಶೇಷ ಗುಣಗಳುಳ್ಳದ್ದೆಂದು ಹೇಳಿ, ಜ್ಞಾನಯೋಗಕ್ಕಿಂತ ಕರ್ಮಯೋಗವೇ ಅಲ್ಪ ಶಕ್ತನಿಗೆ ಸುಕರವೆಂದೂ ಪ್ರಮಾದ ರಹಿತವೆಂದೂ ತಿಳಿಸಿ, ಇದಕ್ಕೆ ನಿದರ್ಶನವಾಗಿ ಜನಕಾದಿಗಳು ಹಾಗೆಯೇ ಪ್ರವರ್ತಿಸಿದ್ದಾರೆಂದು,ಕರ್ಮಣೈವಹಿ ಸಂಸಿದ್ಧಿ ಮಾಸ್ಥಿತಾ ಜನಕಾದಯಃ"(ಗೀ.೩-೨೦)ಎಂಬಲ್ಲಿ ಹೇಳಿರುವದರಿಂದ, ಅಶಕ್ತನು ಕರ್ಮಯೋಗದಿಂದಲೇ ಸಿದ್ಧಿಯನ್ನು ಹೊಂದಿ ಭಕ್ತಿಯೋಗವಾದ ಉಪಾಯವನ್ನು ಅವಲಂಬಿಸುವನೆಂದೂ, ಶಕ್ತನಾದವನು ಕರ್ಮಯೋಗವಾದನಂತರ ಜ್ಞಾನಯೋಗವನ್ನವಲಂಬಿಸಿ, ಅನಂತರ ಭಕ್ತಿಯೋಗದಲ್ಲಿ ಪ್ರವರ್ತಿಸುವನೆಂದೂ, ಗೀತೆಯಲ್ಲಿ ಹೇಳಿರುವದರಿಂದ ಇಲ್ಲಿ ಅಧಿಕಾರಾನುರೂಪವಾಗ ಎಂಬ ಪ್ರಯೋಗವು. ಹಾಗೆಯೇ ಕರ್ಮಯೋಗಾದಿ ಪರ್ವಭೇದಜ್ಞಳಿತೇ ಎಂಬ ಪ್ರಯೋಗವೂ ಸಹ ಎಂದು ಭಾವಿಸತಕ್ಕದ್ದು. ಈ ಪರ್ವ

(೧) "ನ ಶಬ್ದ ಶಾಸ್ತ್ರಾಭಿರತಸ್ಯ ಮೋಕ್ಷೋ ನ ಭೋಜನಾಚ್ಛಾದನ ತತ್ಪರಸ್ಯ। ನಚೈವ ರಮ್ಯಾ ವಸಥಪ್ರಿಯಸ್ಯ ನ ಲೋಕ ಚಿತ್ತ ಗ್ರಹಣೇ ರತಸ್ಯ" ಇತ್ಯಾ

---

ಗಳುಏತಕ್ಕೆ ಎಂದರೆ ಭಗವದ್ವಿಷಯತ್ಪ್ರೈಪತ್ತಿ ಮುಕ್ತಿಮಾರ್ಗತ್ಸ್ರಕ್ಕ ಮುನ್ನಡಿಯೂನ ಎಂದು ಹೇಳಿರುತ್ತಾರೆ. ಭಗವದುಪಾಸನವೇ ಮುಕ್ತಿಮಾರ್ಗವು, ಇದಕ್ಕೆ ಅಙ್ಗಗಳು ಕರ್ಮಯೋಗಾದಿ ಪರ್ವಗಳು ಎಂದು ಗೀತಾಶಾಸ್ತ್ರ ತಾತ್ಪರ್ಯವು ಇಲ್ಲಿ ಸಙ್ಗ್ರಹಿಸಲ್ಪಟ್ಟಿತು. ಹೀಗೆ ನಿರತಿಶಯ ಜ್ಞಾನನಿಧಿಗಳಉಕ್ತಿಯು ಪರಮಾರ್ಥ ಗರ್ಭಿತವಾದವುಗಳು. ಹೀಗಿದ್ದರೂ ಕರ್ಮಯೋಗವೂ ಸಾಕ್ಷಾದುಪಾಯವೆಂಬ ಕೆಲವರ ಹೇಳಿಕೆಯು ಹಾಸ್ಯಾಸ್ಪದವು. ಕೃತೋಪಾಯರಾದಪ್ರಪನ್ನರೇಆಗಲಿ ಉಪಾಯ ಪೂರ್ತಿಯಿಲ್ಲದ ಮುಮುಕ್ಷುಗಳೇಯಾಗಲಿ, ಧನಾರ್ಜನಾದಿ ಐಹಿಕದ ವೃತ್ತಿಗಳನ್ನು ದೇಹಯಾತ್ರೆಗಾಗಿ ಯಾಗಲಿ ಅಥವಾ ಭಗವದ್ಭಾಗವತ ಕೈಙ್ಕರ್ಯಗಳಿಗಾಗಿಯಾಗಲಿ ಅವಲಂಬಿಸಿದರೆ, ಅವರನ್ನು ನಿರಾಕರಿಸಿ, ಅವರೊಂದಿಗೆ ಸಂಭಾಷಣಾದಿಗಳೂ ಕೂಡ ಯೋಗ್ಯವಲ್ಲವೆಂಬ ಭಾವನೆಯು, ಭಾಗವತಾಪಚಾರವನ್ನುಂಟುಮಾಡಿ ಭಗವನ್ನಿಗ್ರಹಕ್ಕೆ ಗುರಿಮಾಡುತ್ತದೆಯಾದುದರಿಂದ ಅಂತಹ ಪ್ರವೃತ್ತಿಯು ಕೂಡದೆಂದು ಹಿತೋಪದೇಶವನ್ನು ಮಾಡಿರುತ್ತಾರೆ.

ಆಗಲಿ ಇತಿಹಾಸ ಸಮುಚ್ಚಯ ಮತ್ತು ಭಾರತ ಶಾನ್ತಿಪರ್ವವಾಕ್ಯಗಳು ಅಂತಹ ಐಹಿಕದಲ್ಲಿ ಲಿಪ್ತನಾದವನನ್ನು ನಿಂದಿಸಿರುವಾಗ, ಅಂತವನ ವಿಷಯದಲ್ಲೂ ಅಪಚಾರವು ಕೂಡದೆಂಬುದು ಹೇಗೆ ? ಎಂದು ಪೂರ್ವಪಕ್ಷವು ಬರಬಹುದೆಂದು ಭಾವಿಸಿ, ಅವುಗಳನ್ನು ಉದಾಹರಿಸಿ, ಆ ಪ್ರಮಾಣಗಳ ಸರಿಯಾದ ತಾತ್ಪರ್ಯವೇನೆಂಬುದನ್ನು ತಿಳಿಸುತ್ತಾರೆ. ಮೋಕ್ಷಶಾಸ್ತ್ರವನ್ನು ಪರಿತ್ಯಾಗಮಾಡಿ ಸಂಗೀತವೇ ಮೊದಲಾದ ಇತರ ಶಾಸ್ತ್ರಗಳಲ್ಲಿ ಪ್ರವೀಣತೆಗಾಗಿ ಶ್ರಮಪಡುತ್ತಾ, ಅನ್ನಬಟ್ಟೆ ಭೂಷಣ ಮನೆ ಕ್ಷೇತ್ರಗಳಿಗಾಗಿ ಕ್ಲೇಶಪಡುತ್ತಾ ಇರುವವರಿಗೆ ಮಾಡಿದ ಅಪಚಾರವು ಭಾಗವತಾಪಚಾರತುಲ್ಯವಾದುದು ಹೇಗಾದೀತು ? ಎಂದರೆ ಹೇಳುತ್ತಾರೆ.—ಇತಿಹಾಸ ಸಮುಚ್ಚಯವಾಕ್ಯವು ಯಾವುದೆಂದರೆ.—"ಈ ಶ್ಲೋಕದಲ್ಲಿ, ವೈರಾಗ್ಯವಿಲ್ಲದೆ ಐಹಿಕಗಳಲ್ಲೇ ಲಿಪ್ತನಾಗಿ ಭಗವಂತನನ್ನು ಹೊಂದಬೇಕೆಂಬ ಆಶೆಯಿಲ್ಲದವನಿಗೆ ಮೋಕ್ಷವಿಲ್ಲವೆಂದು ಹೇಳಲ್ಪಡುತ್ತದೆ. ಶಬ್ದಶಾಸ್ತ್ರಾಭಿರತಸ್ಯ - ಮೋಕ್ಷಶಾಸ್ತ್ರದಲ್ಲಿ ಅಭಿಮಾನವಿಲ್ಲದೆ ಕೇವಲ ಸಙ್ಗೀತ ಶಾಸ್ತ್ರದಲ್ಲಿ ಅಭಿರುಚಿಯುಳ್ಳವನಿಗೆ, ಶಬ್ದಶಾಸ್ತ್ರವನ್ನು ಹೇಳಿದುದು ಇತರ ಐಹಿಕ ಭೋಗಗಳಿಗಾಗಿ ಏರ್ಪಟ್ಟ ಅನೇಕ ಶಾಸ್ತ್ರಗಳಿಗೂ ಉಪಲಕ್ಷಣವು, ನಮೋಕ್ಷಃ - ಮೋಕ್ಷವಿಲ್ಲವು ; ಹಾಗೆಯೇ

---

(೧) ಇತಿಹಾಸ ಸಮುಚ್ಚಯಂ. ೨. ೧೦.

ದಿಗಳಿಲುಮ್, ಭಗವತ್ಪ್ರಾವಣ್ಯಮನ್ರಿಕ್ಕೇ, (೨) "ಶಿಶ್ನೋದರೇ ಯೇ ಭಿರತಾ, ಸ್ಸದೈವ ಸ್ತೇಯಾನೃತಾ ವಾಕ್ಪರುಷಾಶ್ಚ ನಿತ್ಯಮ್ । ವ್ಯಪೇತ ಧರ್ಮಾ ಇತಿ ತಾರ್ನ್ ವಿದಿತ್ವಾ ದೂರಾದ್ದೇವಾ ಸ್ಸಂಪರಿವರ್ಜಯನ್ತಿ" ಎಙ್ಗಿರಪಡಿಯೇ, ಬಾಹ್ಯ ವಿಷಯ ಪ್ರಾವಣ್ಯಮೇ ಯುಡೈಯಾರ್ಕ್ಕು ಮೋಕ್ಷಮಿಲ್ಲೈ ಎನ್ರಪಡಿ

ನಭೋಜನಾ ಚ್ಛಾದನ ತತ್ಪರಸ್ಯ - ಕೇವಲ ಅನ್ನಬಟ್ಟೆಗಾಗಿಯೇ ದುಡಿಯುತ್ತಾ ಅದರಲ್ಲೇ ಸಕ್ತನಾದವನಿಗೂ ಮೋಕ್ಷವಿಲ್ಲವು ; ಇದು ಭೂಷಣಾದಿಗಳಿಗೂ ಸ್ತ್ರೀ ಮೊದಲಾದ ಆಟಪಾಟಾದಿಗಳಿಗೂ ಉಪಲಕ್ಷಣವು ನಚೈವ ರಮ್ಯಾವಸಥ ಪ್ರಿಯಸ್ಯ- ಕೇವಲ ಬಹು ಅಲಂಕಾರವಾದ ಮನೆ ಮೊದಲಾದವುಗಳನ್ನು ಹೊಂದ ವರಲ್ಲೇ ಪ್ರೀತಿಯುಳ್ಳವನಿಗೂ ಮೋಕ್ಷವಿಲ್ಲವು ; ನಲೋಕಚಿತ್ತಗ್ರಹಣೇರತಸ್ಯ - ಕೇವಲ ಲೋಕದ ಜನರ ಚಿತ್ತವನ್ನು ಆಕರ್ಷಿಸುವವರಲ್ಲೇ ಪ್ರೀತಿಯುಳ್ಳವನಿಗೂ, ಲೋಕದ ಜನರೆಲ್ಲರೂ ತನ್ನನ್ನು ಹೊಗಳಬೇಕೆಂದು ಯಾವಾಗಲೂ ಪ್ರಯತ್ನಿಸು ತ್ತಿರುವವನಿಗೂ ಮೋಕ್ಷವಿಲ್ಲವು" ಇತ್ಯಾದಿಗಳಿಲುಮ್-ಇವೇ ಮೊದಲಾದ ಪ್ರಮಾ ಣಗಳಲ್ಲೂ ಹೇಳಿರುವದೇನೆಂದರೆ, ಕೇವಲ ವಿಷಯ ಪ್ರಾವಣ್ಯದಲ್ಲೇ ಇದ್ದು ಭಗವ ತ್ಪ್ರಾವಣ್ಯವಿಲ್ಲದವರಿಗೇಗ ಮೋಕ್ಷವಿಲ್ಲವೆಂಬರ್ಥವೆಂದು ವಾಕ್ಯಶೇಷದಿಂದ ತಿಳಿ ಸುತ್ತಾರೆ. ಹೇಗೆಂದರೆ ಭಗವತ್ಪ್ರಾವಣ್ಯಮನ್ರಿಕ್ಕೇ - ಭಗವಂತನಲ್ಲಿ ಪ್ರೀತಿ ಮಾಡದೆ (೨) ಯೇ - ಯಾರು, ಸದಾ - ಯಾವಾಗಲೂ, ಶಿಶ್ನೋದರೇ - ಇವುಗಳಲ್ಲಿ ಎಂದರೆ ಇವುಗಳಿಂದಾಗುವ ಕಾಮಸುಖ ಮತ್ತು ಒಳ್ಳೇ ಭೋಜನ ದಲ್ಲಿ, ರತಾಃ - ಆಸಕ್ತಿಯುಳ್ಳವರೋ, ನಿತ್ಯಂ - ಯಾವಾಗಲೂ, ಸ್ತೇಯಾಃ- ಕಳ್ಳತನ ಮಾಡುವರಾಗಿಯೂ, ಅನೃತಾಃ - ಸುಳ್ಳಾಡುವವರಾಗಿಯೂ, ವಾಕ್ಪ ರುಷಾಶ್ಚ - ಕ್ರೂರವಾದ ವಾಕ್ಕುಗಳನ್ನುಳ್ಳವರಾಗಿಯೂ ಇರುತ್ತಾರೋ, ತಾನ್ - ಅವರುಗಳನ್ನು, ವ್ಯಪೇತಧರ್ಮಾ ಇತಿ - ಧರ್ಮಾತಿಕ್ರಮಗಳನ್ನು ಮಾಡಿದವರ ನ್ನಾಗಿ, ವಿದಿತ್ವಾ - ತಿಳಿದು, ದೇವಾಃ - ದೇವತೆಗಳೂ, ದೂರೇ - ದೂರದಲ್ಲೇ, ಸಂಪರಿವರ್ಜಯನ್ತಿ-ತ್ಯಜಿಸಿ ಬಿಡುವರು", ಎಙ್ಗಿರಪಡಿಯೇ-ಎಂದು ಭಾರತಶಾನ್ತಿ ಪರ್ವದಲ್ಲಿ ಹಂಸವು ಸಿದ್ಧರಿಗೆ ಹೇಳಿರುವಹಾಗೆ, ಬಾಹ್ಯ ವಿಷಯಪ್ರಾವಣ್ಯಮೇ- ಬಾಹ್ಯವಿಷಯೋಪಭೋಗಗಳಲ್ಲಿ ಮಾತ್ರ ಮಮತೆಯನ್ನೇ, ಉಡೈಯಾರ್ಕ್ಕು-ಹೊಂದಿ ರುವವರಿಗೆ, ಮೋಕ್ಷಮಿಲ್ಲೈ ಎನ್ರಪಡಿ-ಮೋಕ್ಷವುಇಲ್ಲವೆಂದುಹೇಳಿದಹಾಗೆ ಭಾವಿಸ ತಕ್ಕದ್ದು. ಇವರಿಂದಮುಮುಕ್ಷುವಾಗಿ ಕರ್ಮಯೋಗನಿಷ್ಠನಾಗಿರುವವನು ಐಹಿಕಗಳಲ್ಲಿ ಸ್ವಲ್ಪಮಟ್ಟಿಗೆ ಪ್ರವರ್ತಿಸಿದುವಕ್ಕಾಗಿ ಆತನ ವಿಷಯದಲ್ಲಿ ಅಪಚಾರಪಡತಿವವು

(೨) ಭಾರ. ಶಾನ್ತಿ. ೩೦೫-೩೭

**(೩) ಪರಾಙ್ಮುಖಾನಾಂ ಗೋವಿನ್ದೇ ವಿಷಯಾಸಕ್ತಚೇತಸಾಮ್ । ತೇಷಾಂ**

ನ್ಯಾಯವಲ್ಲವು ಎಂಬ ತಾತ್ಪರ್ಯವು. ಇತಿಹಾಸ ಸಮುಚ್ಚಯ ಮತ್ತು ಭಾರತ ಶಾನ್ತಿಪರ್ವಪ್ರಮಾಣಗಳು ಮೋಕ್ಷಾರ್ಥಿಗಳಲ್ಲದೆ,ಕೇವಲ ಬಾಹ್ಯವಿಷಯೋಪಭೋಗಗಳಲ್ಲೇ ಮಗ್ನರಾಗಿರುವವರನ್ನು ನಿರ್ದೇಶಿಸಿವೆ ವಿನಾ, ಮುಮುಕ್ಷುವಾಗಿ ಕರ್ಮಯೋಗಾದಿಗಳನ್ನಾರಂಭಿಸಿದವನನ್ನು ಕುರಿತು ಹೇಳಲಿಲ್ಲವು. ಭಾರತಶಾನ್ತಿಪರ್ವದಲ್ಲಿ ಹಂಸವೇಷಧಾರಿಯಾದ ಚತುರ್ಮುಖನು ಸಾಧ್ಯರನ್ನು ಕುರಿತು ಹೇಳುವಮಾತು. ಧರ್ಮವಿತ್ತಾದ ಮೋಕ್ಷಾರ್ಥಿಗೆ ನಾಲ್ಕುದ್ವಾರಗಳು ಶುದ್ಧವಾಗಿರಬೇಕು, ಅವು ಯಾವುವೆಂದರೆ.—"**ಚತ್ವಾರಿ ಯಸ್ಯದ್ವಾರಾಣಿ ಸುಗುಪ್ತಾನ್ಯಮರೋತ್ತಮಾಃ। ಉಪಸ್ಥಮುದರಂ ಹಸ್ತೌ ವಾಕ್ಚತುರ್ಥೀಸ ಧರ್ಮವಿತ್**" (ಶಾನ್ತಿ. ೩೦೫. ೨೮) ಎಂಬಲ್ಲಿ ಹೇಳಿರುವಹಾಗೆ ಉಪಸ್ಥ, ಉದರ, ಕೈ, ಮತ್ತು ವಾಕ್ಕು. ಆದರೆ "ಶಿಶ್ನೋದರೇ" ಎಂಬ ಶ್ಲೋಕದಲ್ಲಿ ಈ ನಾಲ್ಕು ಶುದ್ಧವಿಲ್ಲವೆಂದು ಹೇಳಿ, ಅಂತಹ ಅಶುದ್ಧನು ಅಧರ್ಮಿಯಾದುದರಿಂದ, ಆತನು ಸತ್ಪುರುಷರೊಂದಿಗೆ ಸೇರಲು ಅಯೋಗ್ಯನಾದುದರಿಂದ ದೇವತೆಗಳಿಂದ ದೂರದಿಂದಲೇ ಪರಿತ್ಯಾಗಮಾಡಲು ಅರ್ಹನೆಂದು ಹೇಳಲ್ಪಟ್ಟಿತು. ಇಲ್ಲಿ ದೇವತೆಗಳು ಪರಿತ್ಯಾಗಮಾಡುವದು ನ್ಯಾಯವೆಂದು ಏಕೆ ಹೇಳಲ್ಪಟ್ಟಿತು ಎಂದರೆ, ಪ್ರಜಾಪತಿಯನ್ನು ಈಗ ಪ್ರಶ್ನಿಸುವರು ದೇವತೆಗಳಾದ ಸಾಧ್ಯರಾದುದರಿಂದ ಹಾಗೆ ಪ್ರಯೋಗವು. ದೇವತೆಗಳೂ ನಮ್ಮಹಾಗೆ ಕರ್ಮಬದ್ಧರಾದ ಜೀವಾತ್ಮರು. ನಮ್ಮಹಾಗೆಯೇ ಪ್ರಾಕೃತ ಶರೀರಗಳನ್ನುಳ್ಳವರು. ಅಥವಾ ನಮಗೆ ದೇಹಪೋಷಣೆಗೆ ಬೇಕಾದ ಅನ್ನವೂ ವರ್ಷವೂ ಮೊದಲಾದವೆಲ್ಲಾ ದೇವತೆಗಳಿಂದ ಆಗುವದರಿಂದ,ಅವರೂ ಕೈಬಿಡುವರುಎಂದರೆ ದೇಹಯಾತ್ರಾದಿಐಹಿಕಗಳೂ ತಪ್ಪುವವು ಎಂಬ ಭಾವವು. (ಗೀ. ೩-೧೪-೧೬ನ್ನು) ಪರಾಂಬರಿಸಿ. ಮೂಲದಲ್ಲಿ ಬಾಹ್ಯವಿಷಯಪ್ರಾವಣ್ಯಮೇ ಎಂಬಲ್ಲಿ ಅವಧಾರಣದಿಂದ ಭಗವದ್ವಿಷಯಪ್ರಾವಣ್ಯರಹಿತರೆಂಬುದು ಏರ್ಪಟ್ಟಿತು, ಅವರಿಗೆ ಮೋಕ್ಷವು ಇಲ್ಲವು; ಏಕೆಂದರೆ ಅವರಿಗೆ ಭಗವತ್ಪ್ರಾವಣ್ಯವಿಲ್ಲದುದರಿಂದ ಉಪಾಯಾನುಷ್ಠಾನ ಮಾಡಬೇಕೆಂಬ ಸಙ್ಕಲ್ಪಶೂನ್ಯರು. ಈ ಅಭಿಪ್ರಾಯದ ಸಮರ್ಥನೆಗಾಗಿ ವಿಷ್ಣುಧರ್ಮ ಪ್ರಮಾಣಗಳನ್ನೂ ಉದಾಹರಿಸುತ್ತಾರೆ.—ಭಗವತ್ಪ್ರಾವಣ್ಯವಿಲ್ಲದೆ . ವಿಷಯೋಪಭೋಗಾಸಕ್ತರಿಗೆ ಭಗವತ್ಪ್ರಾಪ್ತಿಯು ಬಹಳ ದೂರವೆಂದೂ, ಹಾಗಲ್ಲದೆ ವಿಷಯತ್ಯಾಗಮಾಡಿ ಗೋವಿಂದನಲ್ಲೇ ಸಕ್ತವಾದ ಮನಸ್ಸುಳ್ಳವರಿಗಾದರೋ, ಪರಬ್ರಹ್ಮ ಪ್ರಾಪ್ತಿಯು ಬಹಳ ಹತ್ತಿರವು ಎಂಬುದಕ್ಕಾಗಿ ಎರಡು ಪ್ರಮಾಣಗಳನ್ನು ಉದಾಹರಿಸುತ್ತಾರೆ. ಗೋವಿನ್ದೇ - ಭಗವಂತನ ವಿಷಯದಲ್ಲಿ, **ಪರಾಙ್ಮುಖಾನಾಂ** - ವಿಮುಖರಾಗಿ

(೩) ವಿಷ್ಣು ಧರ್ಮ. ೯೯. ೧೩.

**ತತ್ಪರಮಂ ಬ್ರಹ್ಮದೂರಾದ್ದೂರತರೇ ಸ್ಥಿತಮ್" ಇತ್ಯಾದಿಗಳಿಲುಮ್ ಇವ್ವರ್ಥಂ ಸಿದ್ಧಮ್. (೪) "ತನ್ಮಯತ್ವೇನ ಗೋವಿನ್ದೇ ಯೇ ನರಾ ನ್ಯಸ್ತಚೇತಸಃ। ವಿಷಯತ್ಯಾಗಿನಸ್ತೇಷಾಂ ವಿಜ್ಞೇಯಂಚ ತದನ್ತಿಕೇ" ಇತ್ಯಾದಿಗಳ್ ಭಗವತ್ಪರರುಮಾಯ್ ವಿಷಯತ್ಯಾಗಿಗಳು ಮಾನಾರ್ಕ್ಕು ವಿಳಂಬಮಿಲ್ಲೈ ಎನ್ಗಿರನ.**

**ವಿಷಯಾಸಕ್ತಚೇತಸಾಂ**—ಬಾಹ್ಯ ವಿಷಯ ಸುಖಗಳಲ್ಲಿ ಸಕ್ತವಾದ ಮನಸ್ಸುಳ್ಳ. **ತೇಷಾಂ** - ಅವರುಗಳಿಗೆ, **ತತ್ಪರಮಂಬ್ರಹ್ಮ** - ಆ ಸರ್ವಾಧಿಕನಾದ ಪರಬ್ರಹ್ಮವು, **ದೂರಾದ್ದೂರತರೇ ಸ್ಥಿತಮ್** - ದೂರವಾಗಿರುವದಕ್ಕಿಂತ ಇನ್ನೂ ಹೆಚ್ಚು ದೂರವಾಗಿ, ಎಂದರೆ ಅತ್ಯಂತ ದೂರವಾಗಿ ನಿಂತಿತು, ಪರಬ್ರಹ್ಮವನ್ನು ಹೊಂದುವ ಸಂದರ್ಭವೇ ಇಲ್ಲದಹಾಗೆ ಆಯಿತು ಎಂಬ ಭಾವವು." **ಇತ್ಯಾದಿಗಳಿಲುಮ್** - ಇವೇ ಮೊದಲಾದ ಪ್ರಮಾಣಗಳಲ್ಲೂ, **ಇವ್ವರ್ಥಮ್** - ನಾವು ಈಗ ಹೇಳಿದ ಅಭಿಪ್ರಾಯವು, **ಸಿದ್ಧಮ್** - ಸ್ಥಾಪಿತವು. ಭಗವತ್ಪ್ರಾವಣ್ಯವಿಲ್ಲದೆ ಬರೀ ವಿಷಯ ಸುಖಗಳಲ್ಲಿ ಲಿಪ್ತನಾಗಿರುವವನಿಗೆ ಪರಬ್ರಹ್ಮ ಪ್ರಾಪ್ತಿಯು ಅತ್ಯಂತ ದೂರವೆಂದು ಹೇಳಿದರು. ಹಾಗಾದರೆ ಪರಬ್ರಹ್ಮ ಪ್ರಾಪ್ತಿಯು ಯಾರಿಗೆ ಹತ್ತಿರವು, ಸನ್ನಿಹಿತವು, ಎಂದರೆ ಆ ಗ್ರಂಥದಿಂದಲೇ ಇನ್ನೊಂದು ವಾಕ್ಯವನ್ನು ಉದಾಹರಿಸುತ್ತಾರೆ.— (೪) **ಯೇ ನರಾಃ** - ಇಲ್ಲಿ ನರಶಬ್ದವು ಐಹಿಕದಲ್ಲಿ **ನರಮಾತ ಇತಿ ನರಃ** ಎಂಬ **ವ್ಯುತ್ಪತ್ತಿ** ಮೂಲಕ ಐಹಿಕದಲ್ಲಿ ಲಿಪ್ತನಾಗದ ಮೋಕ್ಷಾರ್ಥಿಯನ್ನು ಬೋಧಿಸುತ್ತದೆ, ಆದುದರಿಂದ **ಯೇನರಾಃ** - ಯಾವ ಮೋಕ್ಷಾರ್ಥಿಗಳು, **ಗೋವಿನ್ದೇ** - **ಗಾಃ** - ಭಕ್ತರ ಸ್ತೋತ್ರರೂಪ ವಾಕ್ಕುಗಳನ್ನು ಹೊಂದುವದರಿಂದಾಗಲಿ, ಬಲಿ ಚಕ್ರವರ್ತಿಯಿಂದ **ಗಾಂ** - ಭೂಮಿಯನ್ನು ಹೊಂದಿದರಿಂದಾಗಲಿ, ಅಥವಾ ವರಾಹ ರೂಪಿಯಾಗಿ, ಹಿರಣ್ಯಾಕ್ಷನನ್ನು ಕೊಂದು ಭೂಮಿಯನ್ನು ಪಡೆದುದರಿಂದಲಾಗಲಿ, **ಗೋವಿಂದನು**; ಇಂತಹ ಗೋವಿಂದನಲ್ಲಿ, **ತನ್ಮಯತ್ವೇನ** - ಭಗವತ್ಪ್ರಾವಣ್ಯದಿಂದ, **ನ್ಯಸ್ತಚೇತಸಃ** - ಇಡಲ್ಪಟ್ಟ ಮನಸ್ಸುಳ್ಳ ಎಂದರೆ ಏಕಾನ್ತ ಭಕ್ತಿಯಿಂದ ಧ್ಯಾನಿಸುವ, **ವಿಷಯ ತ್ಯಾಗಿನಃ** - ವಿಷಯಗಳಲ್ಲಿ ಮಮತೆಯನ್ನು ತ್ಯಾಗ ಮಾಡಿದವರಾಗಿ ಆಗುತ್ತಾರೋ, **ತೇಷಾಂ** - ಅವರಿಗೆ, **ತತ್** - ಪರಬ್ರಹ್ಮ ಪ್ರಾಪ್ತಿಯು, **ಅನ್ತಿಕೇ** - ಸಮೀಪವೆಂದರೆ ವಿಳಂಬವಿಲ್ಲವೆಂದು, **ವಿಜ್ಞೇಯಂ** - ತಿಳಿಯತಕ್ಕದ್ದು". **ಇತ್ಯಾದಿಗಳ್** - ಇವೇ ಮೊದಲಾದ ಪ್ರಮಾಣಗಳೂ, **ಭಗವತ್ಪರರುಮಾಯ್** - ಭಗವತ್ಪ್ರಾವಣ್ಯವುಳ್ಳವರಾಗಿಯೂ, **ವಿಷಯತ್ಯಾಗಿಗಳು ಮಾನಾರ್ಕ್ಕು** – ವಿಷಯ ಸುಖಗಳನ್ನು ಪರಿತ್ಯಾಗಮಾಡಿದವರಾಗಿಯೂ ಇರುವವ

(೪) ವಿಷ್ಣುಧರ್ಮ. ೯೯. ೧೫.

ರಿಗೆ, ವಿಳಂಬವಿಲ್ಲೈ ಎಙ್ಗರನ - ಪರಬ್ರಹ್ಮಪ್ರಾಪ್ತಿಯಲ್ಲಿ ವಿಳಂಬವಿಲ್ಲೆಂದು ಹೇಳುತ್ತವೆ. ಇಲ್ಲಿ ತನ್ಮಯತ್ವ ಶಬ್ದದಿಂದ ಯಾವಾಗಲೂ ಮನಸ್ಸು ಗೋವಿಂದ ನಲ್ಲೇ ಸಕ್ತವಾಗಿರುವ ಭಾವವು ಬೋಧಿತವಾಗುವದರಿಂದ, ಭಗವತ್ಪ್ರಾವಣ್ಯವೆಂದು ವ್ಯಾಖ್ಯಾನಮಾಡಲ್ಪಟ್ಟಿತು. ಇಲ್ಲಿ ನರಾಃ ಎಂಬುದರಿಂದ ಸಾಮಾನ್ಯವಾಗಿ ಎಲ್ಲಾ ಮನುಷ್ಯರು ಎಂಬರ್ಥವಲ್ಲವು. ನ ಕರ್ಮ ಲಿಪ್ಯತೇ ನರೇ (ಈಶಾ. ೨) ಎಂಬಲ್ಲಿ ನರ ಶಬ್ದಕ್ಕೆ ಐಹಿಕವಲ್ಲಿ ನರಮತೀ ಎಂದು ಪ್ರಾಜ್ಞರು ಯಾವ ಅರ್ಥವನ್ನು ಅನು ಗ್ರಹಿಸಿರುತ್ತಾರೋ, ಆ ಅರ್ಥವೇ ಇಲ್ಲಿಯೂ ಸಮಂಜಸವು. ವಿಷಯ ಪ್ರಾವಣ್ಯತೆ ಇದ್ದು ಭಗವತ್ಪ್ರಾವಣ್ಯವಿಲ್ಲದಿದ್ದರೆ ಮೋಕ್ಷವು ಬಹುದೂರವೆಂದು, ಹಿಂದೆ "ಪರಾ ಙ್ಮುಖಾನಾಂ ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟಿತು. ವಿಷಯಪ್ರಾವಣ್ಯವಿಲ್ಲದೆ ಭಗವ ತ್ಪ್ರಾವಣ್ಯವಿರುವವನಿಗೆ, ಪರಬ್ರಹ್ಮ ಪ್ರಾಪ್ತಿಯಲ್ಲಿ ವಿಳಂಬವಿಲ್ಲದೆ ಸಿದ್ಧಿಯು, ಎಂದು "ತನ್ಮಯತ್ವೇನ" ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಆದರೆ ಭಗವತ್ಪ್ರಾವ ಣ್ಯವೂ, ತತ್ಕಾಲದಲ್ಲಿ ಮಾತ್ರ ವಿಷಯಪ್ರಾವಣ್ಯವೂ, ಇದ್ದಪಕ್ಷದಲ್ಲಿ ಮೊದಲಿನವನ ಹಾಗೆ ನಿಂದ್ಯನಲ್ಲವು ; ಈತನಿಗೆ ವಿಳಂಬದಿಂದ ವಿಷಯ ಪ್ರಾವಣ್ಯತೆಯು ತೊಲಗಿ ಮೋಕ್ಷಪ್ರಾಪ್ತಿಯು ಲಭಿಸಬಹುದಾದುದರಿಂದ ಅಂತವನವಿಷಯದಲ್ಲಿ ಅಪಚಾರವು ಕೂಡದೆಂಬ ಭಾವವನ್ನು ಈ ಎರಡು ಪ್ರಮಾಣಗಳಿಂದ ಗ್ರಹಿಸಬಹುದು. ಭಗವ ತ್ಪರರುಮಾಯ್ ವಿಷಯತ್ಯಾಗಿಗಳು ಮಾನಾರ್ಕ್ಕು ವಿಳಂಬ ವಿಲ್ಲೈ ಎಙ್ಗರನ ಎಂದು ಹೇಳಲ್ಪಟ್ಟಿರುವದರಿಂದ, ಭಗವತ್ಪರರಾಗಿಯೂ ಕೊಂಚಕಾಲ ವಿಷಯತ್ಯಾಗ ಮಾಡದೇ ಇರುವವರಿಗಾದರೋ ಭಗವತ್ಪ್ರಾಪ್ತಿಯಲ್ಲಿ ವಿಳಂಬವುಂಟೆಂಬುದು ತೋರಿ ಬರುತ್ತದೆ. ಅಂತವರ ವಿಷಯದಲ್ಲೂ ಅಪಚಾರವು ಕೂಡದೆಂಬುದು ಸೂಚಿತವು.

## ಭಾಗವತ ವೇಷವೂ ಕೂಡ ಆದರಣೀಯವೇ

ಅಂತಹ ಭಗವತ್ಪ್ರಾವಣ್ಯತೆಯೂ ಉಂಟೋ ಇಲ್ಲವೋ, ಅಂತೂ ಭಾಗವತನ ಹಾಗೆ ನಟನೆ ಇದ್ದರೂ, ಆತನ ನಿಜಸ್ಥಿತಿಯು ತಿಳಿಯುವವರೆಗೂ, ಆತನು ಮಾನ ನೀಯನೇ ಎಂದು ಬೋಧಿಸುತ್ತಾರೆ. ಆತನು ಬರೀ ಆಷಾಢಭೂತಿಯಾಗಿರುವ ಭಾಗವತ ವೇಷಧಾರಿ ಎಂಬುದು ಚನ್ನಾಗಿ ತಿಳಿದನಂತರ ಬೇಕಾದರೆ ತಿರಸ್ಕರಿಸ ಬಹುದು, ಅಲ್ಲಿವರೆಗೂ ಆತನ ವೈಷ್ಣವತ್ವ, ಲಾಂಛನ, ಭಾಗವತ ವೇಷಾದಿಗ ಳಿಗೆ ಮರ್ಯಾದೆಯನ್ನು ಕೊಡತಕ್ಕದ್ದೆಂದು ಉಪದೇಶಿಸುತ್ತಾರೆ. ಅಪಚಾರವು, ಐಹಿಕದಲ್ಲೇ ಮಗ್ನನಾಗಿರುವವನೇ ಮೊದಲಾದ ಸರ್ವರ ವಿಷಯದಲ್ಲೂ ಕೂಡದು. ಹೀಗಿರುವಾಗ ವೈಷ್ಣವನಾಗಿ ಭಾಗವತ ಚಿಹ್ನೆಗಳನ್ನು ಧರಿಸಿರುವವನ ವಿಷಯದಲ್ಲಿ ಅಪಚಾರವು ಕೂಡದೆಂಬುದು ಕೈಮುತಿಕನ್ಯಾಯಸಿದ್ಧವೆಂಬ ಭಾವದಿಂದ ಹೇಳು

## ಭಾಗವತ ವೇಷಮುಪಿ ಆದರಣೀಯಮ್

**ಉಳ್ಳೊರು ಪಕ್ಕೈಯುಗ್ರಾಪಶುತ್ತೋಲ್ ಪೋರ್ತ್ತುಪ್ಪುಲಿಪ್ಪಾಯ್ಚ್ಚಲ್ ಪಾಯುಜ್ಞಣಕ್ಕಿಲೇ ಭಾಗವತ ಭಾವನೈ ಪಣ್ಣಿತ್ತಿರುವಾರ್ೖಯುಮ್ ಉಳ್ಳರಿಯುಮುಳವುಮ್ ಉಪರಿಚರಾದಿಗಳ್ ಅಸುರಾದಿಗಳ್ಳೈ ಯಾದರಿತ್ತಾರ್ಪ್ಪೋಲೇ ರೂಪನಾಮಜ್ಞಳ್ಳೈ ಯಿಟ್ಟು ಆದರಿಕ್ಕ ಪ್ರಾಪ್ತಮ್.**

ತ್ತಾರ್ಥ.—**ಉಳ್** - ಮನಸ್ಸಿನಲ್ಲಿ, **ಒರುಪಕ್ಕೈಯುತ್ತು** - ಒಂದು ಸಾರವತ್ತಾದ ಭಗವದ್ಭಕ್ತಿಯು ಸ್ವಲ್ಪವೂ ಇಲ್ಲದೆ, **ಪಶುತ್ತೋಲ್** - ಗೋವಿನ ಚರ್ಮವನ್ನು, **ಪೋರ್ತ್ತು** - ಹೊದ್ದುಕೊಂಡು, **ಪುಲಿ** - ಹುಲಿಯು, **ಪಾಚ್ಚಲ್** - ಇತರ ಗೋವುಗಳನ್ನು ಹಿಂಸಿಸುತ್ತಾ, ಎಂದರೆ ಕೊಂದು, **ಪಾಯುಮ್** - ಹಿಡಿದು ಕೊಳ್ಳುತ್ತದೋ, **ಕಣಕ್ಕಿಲೇ** - ಆ ನ್ಯಾಯದ ಪ್ರಕಾರ, **ಭಾಗವತ ಭಾವನೈಪ್ಪಣ್ಣಿ**–ಭಾಗವತ ವೇಷವನ್ನು ಧರಿಸಿ, ವೈಷ್ಣವ ಹೆಸರೇನು, ದ್ವಾದಶೋರ್ಧ್ವಪುಂಡ್ರಗಳೇನು ಇವೇ ಮೊದಲಾದ ಚಿಹ್ನೆಗಳನ್ನು ಧರಿಸಿ, **ತಿರಿವಾರ್ೖಯುಮ್** - ಸಂಚರಿಸುವವರನ್ನೂ, **ಉಳ್ಳರಿಯು ಮುಳವುಮ್** - ಅವರ ಅಂತರ್ಯವನ್ನು ಚನ್ನಾಗಿ ವಿಮರ್ಶಿಸಿ ತಿಳಿಯುವವರೆಗೂ, **ಉಪರಿಚರಾದಿಗಳ್** - ಉಪರಿಚರರೇ ಮೊದಲಾದವರು **ಅಸುರರ್ಗಳ್ಳೈ** - ಅಸುರರನ್ನು, **ಆದರಿತ್ತಾರ್ಪ್ಪೋಲೆ** - ಆದರಿಸಿದ ಹಾಗೆ, **ರೂಪ ನಾಮಜ್ಞಳ್ಳೈ ಯಿಟ್ಟು** - ದ್ವಾದಶೋರ್ಧ್ವಪುಂಡ್ರ, ಶಂಖ ಚಕ್ರ ಲಾಂಛನ ಮೊದಲಾದ ರೂಪಗಳೇನು, ಕೃಷ್ಣ, ನಾರಾಯಣ, ಗೋವಿಂದ ಮೊದಲಾದ ಹೆಸರುಗಳೇನು ಇವುಗಳನ್ನು ಧರಿಸಿರುವದರ ಮೂಲಕವಾಗಿ, **ಆದರಿಕ್ಕ ಪ್ರಾಪ್ತಮ್**-ಆದರಿಸತಕ್ಕದ್ದು **ಉಚಿತವು.** ಇಲ್ಲಿ ಆದಿ ಶಬ್ದದಿಂದ ಸೀತಾ ಮೊದಲಾದವರು ಹೇಳಲ್ಪಟ್ಟರು. ಹುಲಿಯು ಗೋವಿನ ಚರ್ಮವನ್ನು ಧರಿಸಿರುವದು ತಿಳಿಯುವ ತನಕ, ಹೇಗೆ ಗೋವೆಂಬ ಭಾವನೆಯಿಂದ ಗೋವಿಗೆ ಸಲ್ಲತಕ್ಕ ಆದರವನ್ನು ತೋರಿಸಬೇಕೋ, ಆ ತೆರದಿ, ಭಾಗವತ ಚಿಹ್ನೆಗಳನ್ನು ಮಾತ್ರ ಧರಿಸಿದ್ದರೂ, ಆಷಾಡ ಭೂತಿ ಎಂದು ತಿಳಿಯುವವರೆಗೂ ಮಾನನೀಯನೇ; ಯಾವಾಗ ಗೋವೇಷಧಾರಿಯಾದ ಹುಲಿ ಎಂಬುದು ತೋರಿಬಂದನಂತರ ಅದು ತಿರಸ್ಕಾರಾರ್ಹವೋ, ಹಾಗೆಯೇ ಈ ಭಾಗವತ ವೇಷಧಾರಿಯೂ ಸಹ ಆತನ ಅಂತರ್ಯವು ಚನ್ನಾಗಿ ವ್ಯಕ್ತವಾದನಂತರ ತಿರಸ್ಕಾರಾರ್ಹನೇ ಎಂಬ ಭಾವವು. ಸೀತೆಯೂ ಕೂಡ ಹಾಗೆಯೇ ಯತಿವೇಷಧಾರಿಯಾದ ರಾವಣನನ್ನು ಏಕಾಕಿಯಾಗಿ ಆಶ್ರಮದಲ್ಲಿದ್ದರೂ ಯಥಾರ್ಹವಾಗಿ ಪೂಜಿಸಿದಳು; ಏಕೆಂದರೆ "ಚೋರೋಽಪ್ಯವಧ್ಯ ಶ್ಚ ಸ ಚೋಽಪ್ಯದೂಷ್ಯಃ ಶುಣ್ಯಾಪ್ಯಪೀಡ್ಯೋಽಪಶುರಪ್ಯ

ತಾರ್ಥ್ಯಃ। ಯೋಹ್ಯಂಕಿತೋ ವೈಷ್ಣವ ಲಾಂಛನೇನ ಸವಿವ ವಿಷ್ಣುಪ್ರತಿಮಾ ಸಮಾನಃ" ಯಾವನು ವೈಷ್ಣವ ಲಾಂಛನ ಯುಕ್ತನಾಗಿದ್ದಾನೋ, ಆತನು ಚೋರನಾಗಿದ್ದರೂ ವಧಿಸಲು ಯೋಗ್ಯನಲ್ಲವು; ಹಿಂದಿನ ಕಾಲವಲ್ಲಿ ಚೋರಕೃತ್ಯಕ್ಕೆ ಮರಣಶಿಕ್ಷೆಯು; ನಾಯಿಯು ಮಾಂಸವನ್ನು ತಿನ್ನುವನಾಗಿದ್ದರೂ ದೋಷಿಯೆಂದು ದೂಷಿಸತಕ್ಕದ್ದಲ್ಲವು, ಋಣಿಯಾಗಿದ್ದರೂ ಪೀಡಿಸತಕ್ಕದ್ದಲ್ಲವು, ಪಶುವಾಗಿದ್ದರೂ ಹೊಡೆಯುತಕ್ಕದ್ದಲ್ಲವು; ಏಕೆಂದರೆ, ಅದೇ ವಿಷ್ಣುಪ್ರತಿಮೆಗೆ ಸಮಾನವಾಗಿರುವದರಿಂದ, ಎಂದು ಹೇಳಲ್ಪಟ್ಟಿರುತ್ತದೆ. ನಿಜಸ್ಥಿತಿ ತಿಳಿದನಂತರ ನಿಂದ್ಯರೇ ವಿನಾ, ಅನು ತಿಳಿಯುವ ತನಕ ಮಾನ್ಯರೇ ಸರಿ ಎಂಬ ಭಾವವು. ವೇಷವೆಂದು ತಿಳಿದ ನಂತರ ಮರ್ಯಾದಿಸಲು ಅನರ್ಹವೆಂಬುದು "ವೇಷಂ ನವಿಶ್ವಸೇ ತ್ಪ್ರಾಜ್ಞೋ ವೇಷೋದೋಷಾಯ ಕಲ್ಪತೇ। ರಾವಣೋ ಭಿಕ್ಷು ವೇಷೇಣ ಸೀತಾನುಪಜಹಾರಹ" ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ಪ್ರಾಜ್ಞನು ವೇಷವನ್ನು ಕುರಿತು ವಿಶ್ವಾಸವನ್ನು ಇಡತಕ್ಕದ್ದಲ್ಲವು. ವೇಷವು ದೋಷಕ್ಕೆ ಕಾರಣವಾಗುತ್ತದೆ. ರಾವಣನು ಸನ್ಯಾಸಿ ವೇಷದಿಂದ ಸೀತೆಯನ್ನು ಕದೊಯ್ದನಲ್ಲವೇ ಎಂಬುವು ಶ್ಲೋಕ ತಾತ್ಪರ್ಯವು. ಉಪರಿಚರಾದಿಗಳ್ ಅಸುರಾದಿಗಳ್ಳೆ ಆದರಿತ್ತಾರೆನ್ನೀಲೀ ಎಂಬಲ್ಲಿರುವ ಪೂರ್ವವೃತ್ತಾಂತವೇನೆಂದರೆ.—ಈ ಉಪರಿಚರವಸುವೆಂಬ ರಾಜನು ಪುರುಕುಲೋತ್ಪನ್ನನಾದ ಕೃತಿರಾಜನ ಪುತ್ರನು, ಚೇದಿದೇಶಾಧಿಪತಿಯು, ಆತನ ಭಾರ್ಯೆಯು ಗಿರಿಕಾ ಎಂಬುವಳು. ಈತನು ಯಮುನಾನದಿಯಲ್ಲಿ ಒಂದು ಸಂದರ್ಭದಲ್ಲಿ ಶುಕ್ರೋತ್ಸರ್ಜನಮಾಡಿದುದರಿಂದ ಮತ್ಸ್ಯವು ಅವನ್ನು ನುಂಗಿದುದರಿಂದ ಮತ್ಸ್ಯನೆಂಬ ಪುತ್ರನೂ ಮತ್ಸ್ಯಗಂಧಿ ಎಂಬ ಪುತ್ರಿಯು ಹುಟ್ಟಿದರೆಂದೂ, ಮತ್ತು ರಾಜನು ಇಂದ್ರಧ್ವಜೋತ್ಸವವನ್ನು ನಡೆಸಿದನೆಂದೂ ಇಂದ್ರನಿಂದ ಉಪರಿಚರ ವಿಮಾನಪ್ರಾಪ್ತಿ ಎಂದೂ, ಈ ಕಥೆಯೆಲ್ಲಾ ಶ್ರೀಮನ್ಮಹಾಭಾರತದ ಆದಿಪರ್ವ ೬೪ನೆಯ ಅಧ್ಯಾಯದಲ್ಲಿ ಬರುತ್ತದೆ. ಶಾಂತಿಪರ್ವ ३೬೪-೫ನೆಯ ಅಧ್ಯಾಯಗಳಲ್ಲಿ ಈ ರಾಜನು ಬೃಹಸ್ಪತಿಯ ಮೂಲಕ ಯಜ್ಞಮಾಡಿದನೆಂದೂ ತನ್ಮೂಲಕ ಸ್ವರ್ಗಪ್ರಾಪ್ತಿಯೂ, ಅನಂತರ ಇಂದ್ರನು ಯಜ್ಞವನ್ನು ಆರಂಭಿಸಿದಾಗ ಸಾಕ್ಷಾತ್ಪಶುವನ್ನುಪಯೋಗಿಸಬಹುದೆಂದು ದೇವತೆಗಳ ಪರವಾಗಿ ಅಭಿಪ್ರಾಯಕೊಟ್ಟದುದರಿಂದ ಪಿಷ್ಟ, ಪಶುವಾದಿಗಳಾದ ಋಷಿಗಳಿಂದ ಶಪಿಸಲ್ಪಟ್ಟು ಒಂದು ಭೂಮಿಯ ವಿವರದಲ್ಲಿ ಸ್ವರ್ಗದಿಂದ ಪತನವೂ ಹೇಳಲ್ಪಟ್ಟಿರುತ್ತದೆ. ಆದರೆ ಈತನು ಮೊದಲು ಮಾಡಿದ ಯಜ್ಞದಿಂದ ಪ್ರೀತನಾದ ಶ್ರೀ ಹರಿಯು ಗರುಡನನ್ನು ಕಳುಹಿಸಿ ಆತನನ್ನು ಆ ವಿವರದಿಂದೆತ್ತಿ ತಂದು ಬ್ರಹ್ಮಲೋಕವನ್ನು ಹೊಂದಿಸುವ ಹಾಗೆ ಮಾಡತಕ್ಕದ್ದೆಂದು ಆಜ್ಞಾಪಿಸುವನು. ಆದರೆ ವೇಷಧಾರಿಯಾದ ಅಸುರನಿಗೆ

**ಇಪ್ಪಡಿಕ್ಕೊತ್ತ ಶೈಲೂಷವೃತ್ತಿಗಳೈ ಪ್ಪತ್ತ "ನಲಿಙ್ಗಂ ಧರ್ಮಕಾರಣಮ್ (೨) ಫಲಂ ಕತಕವೃಕ್ಷಸ್ಯ ಯದ್ಯಪ್ಯಂಬು ಪ್ರಸಾದಕಮ್ । ನ ನಾಮಗ್ರಹಣೇ ನೈವ ತಸ್ಯವಾರಿ ಪ್ರಸೀದತಿ"** ಎಙ್ಗಿರದು.

---

ಮಾಡಿದ ಮರ್ಯಾದೆಯ ವೃತ್ತಾಂತವು ಎಲ್ಲಿ ಬರುತ್ತದೋ ತಿಳಿಯದು. ವೈಷ್ಣವಚಿಹ್ನೆಯಿಂದ ಭಾಗವತನಹಾಗೆ ತೋರುವವನನ್ನೂ ಆದರಿಸಬೇಕೆಂದು ಇಲ್ಲಿ ಉಪದೇಶಿಸಿದ್ದೇನೋ ಸರಿಯೇ; ಆಗಲಿ, **"ವೇಷೋ ದೋಷಾಯ ಕಲ್ಪತೇ"** ಎಂಬುದರಿಂದ ವೇಷಧಾರಿಯನ್ನು ದೋಷಿಯಾಗಿ ಭಾವಿಸತಕ್ಕದ್ದೆಂದೂ, **ನಲಿಙ್ಗಂ ಧರ್ಮಕಾರಣಂ"** ವೇಷಮಾತ್ರವೇ ಭಗವತ್ಪ್ರೀತಿರೂಪವಾದ ಧರ್ಮವನ್ನು ನಿಶ್ಚಯಿಸುವಂತಾದ್ದಲ್ಲವೆಂದೂ ಹೇಳಿರುವಾಗ, ಅಂತವನನ್ನು ಆದರಿಸಬೇಕೆಂದು ಹೇಳಿರುವದು ವಿರೋಧವಾಗುವದಿಲ್ಲವೋ? ಎಂದರೆ ವೇಷವೆಂದು ತಿಳಿಯುವ ತನಕ ಮಾನನೀಯನೆಂದೂ, ತದನಂತರ ವಂಚಕನೆಂದು ಭಾವಿಸತಕ್ಕದೆಂದೂ, ತಮ್ಮ ತಾತ್ಪರ್ಯವೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ—**ಇಪ್ಪಡಿಕ್ಕೊತ್ತ** - ಇಂತಹ, **ಶೈಲೂಷ ವೃತ್ತಿಗಳೈಪ್ಪತ್ತ** - ವೇಷಧಾರಿಗಳನ್ನು ಕುರಿತೇ (೧) **"ನಲಿಙ್ಗಂಧರ್ಮಕಾರಣಮ್"**— ಕೇವಲಾಶ್ರಮಾದಿ ವೈಷ್ಣವಚಿಹ್ನೆಯು, ಕೇವಲ ಊರ್ಧ್ವಪುಂಡ್ರ,ಸಂಸ್ಕಾರ, ವಿಷ್ಣುನಾಮಧಾರಣೆಗಳು, ಭಗವತ್ಪ್ರೀತಿರೂಪ ಧರ್ಮಕ್ಕೆ ಕಾರಣವಲ್ಲವು;" ಮತ್ತು **"ಕತಕವೃಕ್ಷಸ್ಯ** - ಚಿಲ್ಲದ ವೃಕ್ಷದ, **ಫಲಂ** - ಬೀಜವು, **ಯದ್ಯಪ್ಯಂಬುಪ್ರಸಾದನಮ್** - ಕೆಂಪಗಿರುವ ಕೆರೆಯ ಮೊದಲಾದ ನೀರಿಗೆ ನೈರ್ಮಲ್ಯವನ್ನುಂಟುಮಾಡತಕ್ಕದ್ದೇನೋ ನಿಶ್ಚಯವಾದರೂ, **ನಾಮಗ್ರಹಣೇನೈವ** ಬರೀ ಚಿಲ್ಲದ ಬೀಜವೆಂಬ ಹೆಸರನ್ನು ಹೇಳಿದ ಮಾತ್ರದಿಂದಲೇ, **ತಸ್ಯ** - ಕೆಂಪಾದ ನೀರನ್ನು ಶುದ್ಧಿಮಾಡಬೇಕೆಂಬವನಿಗೆ, **ವಾರಿ** - ನೀರು, **ನಪ್ರಸೀದತಿ**-ನೈರ್ಮಲ್ಯವನ್ನು ಹೊಂದುವದಿಲ್ಲವಷ್ಟೇ?" ಎಙ್ಗರದು - ಎಂದು ಹೇಳಿರುವನು. ಕೇವಲ ವೇಷಧಾರಿ ಎಂದು ತಿಳಿಯುವ ತನಕ ನಾವು ವೈಷ್ಣವ ಚಿಹ್ನೆಗಳನ್ನುಳ್ಳವರ ವಿಷಯದಲ್ಲಿ ಅನಾದರಣೆಯನ್ನು ಮಾಡಕೂಡದು; ತಿಳಿದನಂತರ ಬೇಕಾದರೆ ಅನಾದರಣೆಯನ್ನು ತೋರಬಹುದು. ವೇಷಧಾರಿಗಳು ಜಗತ್ತಿನಲ್ಲಿ ಇಲ್ಲವೆಂದು ಹೇಳುವದಿಲ್ಲವು. ಅಂತಹ ವಂಚಕರಾದ ವೇಷಧಾರಿಗಳಿರುವವರಿಂದಲೇ, ನಲಿಙ್ಗಂ ಧರ್ಮಕಾರಣಮ್ ಎಂದು ಹೇಳಲ್ಪಟ್ಟಿರುತ್ತದೆ ಎಂದುಹೇಳಿದರು ಮನಸ್ಸಿನ ಪಾರಿಶುದ್ಧ್ಯಕ್ಕೆ ಯಾವಾಗ ಅಭಾವವೋ, ಆಗ ಹೊರಗಿನ ವೇಷವು ಎಂದಿಗೂ ಕಾರ್ಯಕಾರಿಯಾಗುವದಿಲ್ಲವು; ಈ ವಿಷಯದಲ್ಲಿ ದೃಷ್ಟಾಂತಕ್ಕಾಗಿ "ಫಲಂ ಕತಕವೃಕ್ಷಸ್ಯ" ಎಂಬ ಶ್ಲೋಕವನ್ನು ಉದಾ

---

(೧) ಇತಿಹಾಸ ಸಮುಚ್ಚಯಂ. ೫೩-೧೨೪

ಹರಿಸಿದರು. ಬರೀ ಕತಕವೆಂಬ ನಾಮೋಚ್ಚಾರಣ ಎಂದರೆ ವ್ಯವಹಾರ ಮಾತ್ರದಿಂದಲೇ ಕಶ್ಮಲವಾದನೀರು ಸ್ವಚ್ಛವಾಗಿ ಹೇಗೆ ಆಗುವದಿಲ್ಲವೋ ಹಾಗೆಯೇ ಕೇವಲ ವೈಷ್ಣವಲಾಂಛನ, ರಾಮ ಕೃಷ್ಣ ಗೋವಿಂದ ಇತ್ಯಾದಿ ನಾಮಗಳನ್ನು ಧರಿಸುವ ಮಾತ್ರದಿಂದಲೇ ಭಾಗವತರಾಗುವದಿಲ್ಲವು. ಕತಕಜ್ಞಾನದೊಂದಿಗೆ ಅದಕ್ಕೆ ವಾರಿಸಂಬಂಧವುಂಟಾದರೇನೇ ನೈರ್ಮಲ್ಯ ಪ್ರಾಪ್ತಿಯು. ಹಾಗೆಯೇ ಲಾಂಛನದೊಂದಿಗೆ, ಭಾಗವತನಿಗೆ ಅರ್ಹವಾದ ಆಚಾರ ಸಂಬಂಧವೂ ಮನಸ್ಸಿನ ಪಾರಿಶುದ್ಧ್ಯವೂ, ಇದ್ದರೆ ಆಗ ಭಾಗವತತ್ವ ಪ್ರಾಪ್ತಿಯು ಎಂಬ ಭಾವವು. ಈ ಶ್ಲೋಕವು ಇನ್ನೊಂದು ಸಂದರ್ಭದಲ್ಲೂ ಉದಾಹರಿಸುವದುಂಟು. ಅದ್ವೈತಿಯು ಜ್ಞಾನಾನ್ಮೋಕ್ಷಃ ಎಂದು ಹೇಳುವದನ್ನು ವಿಶಿಷ್ಟಾದ್ವೈತಿಗಳಾದ ನಾವೂ ಅಜ್ಞೀಕರಿಸುವೆವು; ಆದರೆ ಆ ಜ್ಞಾನವು ಎಂತಾದ್ದೆಂಬುದರಲ್ಲಿ ಅವರಿಗೂ ನಮಗೂ ವ್ಯತ್ಯಾಸವು. ಅವರುಗಳು ತತ್ವಮಸ್ಯಾದಿ ವಾಕ್ಯಜನ್ಯಜ್ಞಾನದಿಂದಲೇ ಮೋಕ್ಷವೆಂದು ಹೇಳುವರು; ನಾವಾದರೋ ನಿತ್ಯ ನೈಮಿತ್ತಿಕಗಳಿಂದ ಕೂಡಿದ ಕರ್ಮಯೋಗ ಜ್ಞಾನಯೋಗಗಳಿಂದ ಅನುಗೃಹೀತವಾದ ಧ್ರುವಾನುಸ್ಮೃತಿರೂಪ ಪರಮೈಕಾನ್ತ್ಯ ಚಿಂತನದಿಂದವೆಂದು ಹೇಳುವೆವು. ಬರೀ ವಾಕ್ಯ ಜನ್ಯಜ್ಞಾನದಿಂದಲೇ ಫಲಸಿದ್ಧಿಯಿಲ್ಲವು. ಉಪಾಸನಾದಿ ಪ್ರವೃತ್ತಿಯಿಂದ ಕೂಡಿದ ಜ್ಞಾನದಿಂದಲೇ ಫಲಸಿದ್ಧಿಯುಂಟಾಗುತ್ತದೆಂದು ತೋರಿಸುವದಕ್ಕೆ ನಮ್ಮಸಿದ್ಧಾನ್ತಿಗಳು ಈಶ್ಲೋಕವನ್ನು ಉದಾಹರಿಸಿರುತ್ತಾರೆ. ಕತಕಫಲವು ನೀರನ್ನು ಶುದ್ಧಿಮಾಡುತ್ತದೆ ಎಂಬ ಬರೀ ಜ್ಞಾನದಿಂದಲೇ ಹೇಗೆ ಉದಕ ನೈರ್ಮಲ್ಯ ಸಿದ್ಧಿಯಿಲ್ಲವೋ, ಮತ್ತು ಕತಕ ಫಲವನ್ನು ಉಪಯೋಗಿಸಿಯೇ ಉದಕ ನೈರ್ಮಲ್ಯ ಸಿದ್ಧಿಯನ್ನು ಹೇಗೆ ಹೊಂದತಕ್ಕದ್ದೋ, ಹಾಗೆಯೇ ತತ್ವಮಸಿ ಎಂಬ ಜ್ಞಾನವೂ ಕಾರ್ಯಕಾರಿಯಾಗುವದಿಲ್ಲವು. ಮೋಕ್ಷಪ್ರಾಪ್ತಿಗೆ ಬೇಕಾದ ಪರಮಾತ್ಮಸಾಕ್ಷಾತ್ಕಾರ ರೂಪ ಜ್ಞಾನವನ್ನು ಹೊಂದಿಯೇ ತತ್ಪ್ರಾಪ್ತಿಯು ಎಂದು ಭಾವಿಸತಕ್ಕದ್ದಾಗಿರುತ್ತದೆ. ಬರೀ ಅಡಿಗೆಯ ಜ್ಞಾನದಿಂದ ಹೊಟ್ಟೆ ತುಂಬುವದಿಲ್ಲವು. ಅಡಿಗೆಮಾಡಿ ಊಟ ಮಾಡಿದರೆ ಹೊಟ್ಟೆ ತುಂಬುತ್ತದೆ. ಇದು ಪ್ರಕರಣಕ್ಕೆ ಬೇಕಾಗಿಲ್ಲವು; ಪ್ರಾಸಜ್ಞಿಕವಾಗಿ ಕತಕಫಲದೃಷ್ಟಾಂತವನ್ನು ವ ನಸ್ಸಿನಲ್ಲಿಟ್ಟು ಹೇಳಿದುದಾಗಿರುತ್ತದೆ.

ಈಗ ಹೇಳಲ್ಪಟ್ಟದುದು ಏನೆಂದರೆ ಬರೀ ವೇಷಧಾರಿಯಾಗಿ ವಿಷ್ಣುನಾಮಧಾರಿಯಾಗಿದ್ದಾನೆಂದು ತೋರಿಬಂದರೆ ಆತನು ಮರ್ಯಾದಾರ್ಹನಲ್ಲವೆಂದೂ, ಹಾಗೆ ವೇಷಧಾರಿ ಎಂದು ವ್ಯಕ್ತವಾಗಿ ತಿಳಿಯುವವರಿಗೂ ಆತನು ಮಾನನೀಯನೇ ಎಂಬುದು. "ವೇಷಂ ನ ವಿಶ್ವಸೇತ್ ಪ್ರಾಜ್ಞೋ ವೇಷೋ ದೋಷಾಯ ಕಲ್ಪತೇ। ರಾವಣೋ ಭಿಕ್ಷುವೇಷೇಣ ಸೀತಾಂ ಮುಷ ಜಹಾರಹ"॥ "ವೇಷವನ್ನು ಪ್ರಾಜ್ಞನು ವಿಶ್ವಾಸಿಸಕೂಡದು; ಏಕೆಂದರೆ ವೇಷವು ದೋಷಕ್ಕೆ ಕಾರಣವಾಗುತ್ತದೆ, ರಾವಣನು

## ಭಗವನ್ನಾಮಸಂಕೀರ್ತನಾದೇಃ ಭಗವದ್ವಿಮುಖಾಭಾವೇ ಪಾವನತ್ವಂ

(೧) ಆರ್ತಾ ವಿಷಣ್ಣಾ ಶ್ಶಿಥಿಲಾಶ್ಚ ಭೀತಾಃ ಘೋರೇಷು ಚ ವ್ಯಾಧಿಷು ವರ್ತಮಾನಾಃ । ಸಂಕೀರ್ತ್ಯ ನಾರಾಯಣ ಶಬ್ದಮಾತ್ರಂ ವಿಮುಕ್ತದುಃಖಾ ಸ್ಸುಖಿನೋ ಭವನ್ತಿ" ಎನ್ರುಮ್. (೨)"ಅವಶೇನಾಪಿ ಯನ್ನಾಮ್ನಿ ಕೀರ್ತಿತೇ

---

ಯತಿ ವೇಷವನ್ನು ಧರಿಸಿಯಲ್ಲವೇ ಸೀತೆಯನ್ನು ಅಪಹರಿಸಿದ್ದುದ." ಎಂದು ಹೇಳಲ್ಪಟ್ಟಿರುವದರಿಂದ, ಕೇವಲ ವೈಷ್ಣವ ನಾಮ ಧಾರಣಾದಿಗಳು ವಿಶ್ವಾಸಾರ್ಹವಲ್ಲವೆಂದು ಹೇಳಲ್ಪಟ್ಟಿತು. ಬರೀ ವೈಷ್ಣವನಾಮ ಸಂಕೀರ್ತನವೂ ಕೂಡ ಶಾಸ್ತ್ರಗಳಲ್ಲಿ ಕೊಂಡಾಡಲ್ಪಟ್ಟಿರುವಾಗ, ಪರಮಾತ್ಮ ದ್ವೇಷಿಯು ಹೀಗೆ ವೈಷ್ಣವ ನಾಮಧಾರಣ ಉಚ್ಚಾರಣಾದಿಗಳನ್ನು ಮಾಡಿದರೂ ಆತನಿಗೆ ಅವು ಉತ್ಕಾರಕವಾಗಿ ಪರಿಣಮಿಸುವದಿಲ್ಲವೋ ? ಎಂಬ ಶಂಕಾಪಿಗೆ ಸಮಾಧಾನವನ್ನು ಹೇಳುತ್ತಾರೆ.

ಅದಕ್ಕಾಗಿ ಭಗವನ್ನಾಮೋಚ್ಚಾರಣೆಗಳನ್ನು ಕೊಂಡಾಡುವ ಅನೇಕ ಪ್ರಮಾಣಗಳಲ್ಲಿ ಕೆಲವನ್ನು ಉದಾಹರಿಸಿ, ಎಂತಹ ಸಂದರ್ಭದಲ್ಲಿ ಅವು ಶ್ರೇಯಸ್ಸಾಧನಭೂತವಾದುವು.ಎಂತಹ ಸಂದರ್ಭದಲ್ಲಿ ಅಲ್ಲವು ಎಂಬುದನ್ನು ಸಿದ್ಧಾನ್ತಿಸಿ ತಿಳಿಸುತ್ತಾರೆ-- ಭಗವದ್ವೇಷರಹಿತನಿಗೆ ಸಂಕೀರ್ತನವು ಪಾವನವು, ಭಗವದ್ವೇಷ ಯುಕ್ತನಿಗೆ ಕಾರ್ಯಕಾರಿಯಲ್ಲವೆಂದೂ ಉಪದೇಶಿಸುತ್ತಾರೆ.—

## ಭಗವದ್ವಿಮುಖತ್ವವಿಲ್ಲದಿದ್ದರೆ ಭಗವನ್ನಾಮಸಂಕೀರ್ತನಾದಿಗಳಿಗೆ ಪಾವನತ್ವವುಂಟು

(೧) "ಆರ್ತಾಃ - ಐಹಿಕಗಳನ್ನು ಕಳೆದುಕೊಂಡು ಅವು ಪುನಃ ಇಲ್ಲವೇ ಎಂದು ಬಹು ದೈನ್ಯದಲ್ಲಿರುವವರು, ವಿಷಣ್ಣಾಃ - ಆಮುಷ್ಮಿಕವು ಲಭಿಸದಿರುವದರಿಂದ ದುಃಖಾಕ್ರಾಂತರೂ, ಶಿಥಿಲಾಃ-ಸಂಸಾರದಲ್ಲಿ ಭಯವನ್ನು ಹೊಂದಿದವರೂ,ಘೋರೇಷು ಚ ವ್ಯಾಧಿಷು ವರ್ತಮಾನಾಃ – ವಾಸಿಯಾಗದೆ, ತುಂಬಾ ದೇಹಕ್ಕೆ ಅಸೌಖ್ಯವನ್ನುಂಟುಮಾಡಿರುವ ರೋಗಗಳಲ್ಲಿರುವರೂ, ಇಲ್ಲಿ ಮೊದಲು ದೈನ್ಯವೂ, ಅನಂತರ ವಿಷಾದವೂ, ಅನಂತರ ಶೈಥಿಲ್ಯವೂ, ಅನಂತರ ಭೀತಿಯೂ, ಹೀಗೆ ಕ್ರಮಕ್ರಮವಾಗಿ ದುಃಖಾತಿರೇಕತ್ವವು ಸೂಚಿಸಲ್ಪಟ್ಟಿತು. ನಾರಾಯಣ ಶಬ್ದಮಾತ್ರವನ್ನು, ಸಂಕೀರ್ತ್ಯ - ಕೀರ್ತನಮಾಡಿದ ಪಕ್ಷದಲ್ಲಿ ವಿಮುಕ್ತ ದುಃಖಾಃ - ಎಲ್ಲಾ ದುಃಖಗಳಿಂದಲೂ ಬಿಡಲ್ಪಟ್ಟವರಾಗಿ, ಸುಖಿನೋಭವನ್ತಿ - ಇಲ್ಲಿಯೂ ಸುಖಿಗಳಾಗುವರು. ಕ್ರಮೇಣ ನಿರತಿಶಯ ಸುಖವನ್ನೂ ಹೊಂದುವರೆಂಬ

---

(೧) ವ್ಯಾಸ ಸಂಜಯಸ್ಮೃತಿ

ಸರ್ವಪಾತಕೈಃ । ಪುನಾ ನ್ವಿಮುಚ್ಯತೇ ಸದ್ಯ ಸ್ಸಿಂಹ ತ್ರಸ್ತೈರ್ಮೃಗೈರಿವ"

ಭಾವವು. ಶ್ರೀಮನ್ನಾರಾಯಣನಾಮ ಸಂಕೀರ್ತನ ರೂಪ ಸುಕೃತವು, ಸಾಧು ಸಮಾಗಮ ಆಚಾರ್ಯ ಪ್ರಾಪ್ತಿ ಉಪಾಯಾನುಷ್ಠಾನಗಳನ್ನುಂಟುಮಾಡುವದಕ್ಕೆ ಬೇಕಾದ ಭಗವದನುಗ್ರಹವನ್ನು ಒದಗಿಸಿ ಕೊಡುತ್ತದೆಂಬ ಅಭಿಪ್ರಾಯವು ಇಲ್ಲಿ ವಿವಕ್ಷಿತವು." ಎನ್ನುವರ್ ಎಂಬದಾಗಿಯೂ, (೨) "ಯನ್ನಾಮ್ನಿ-ಯಾವ ಪ್ರಸಿದ್ಧನಾದ ಭಗವಂತನ ನಾಮವು, ಅವಶೇನಾಪಿ - ಬುದ್ಧಿ ಪೂರ್ವಕವಾಗಿ ಹೇಳಬೇಕೆಂದಿಲ್ಲದೆ ಸುಮ್ಮನೆ ಯಾದೃಚ್ಛಿಕವಾಗಿಯಾಗಲಿ, ಕೀರ್ತಿತೇ ಸತಿ - ಹೇಳಲ್ಪಡಲಾಗಿ, ಪುಮಾನ್-ಈ ಪರಿಶುದ್ಧಾತ್ಮ ಸ್ವರೂಪವನ್ನು, ಸಿಂಹಃ-ಸಿಂಹವು, ತ್ರಸ್ತೈರ್ಮೃಗೈರಿವ - ಭಯದಿಂದ ನಡುಗಿದ ಮೃಗಗಳಿಂದಲೋಪಾದಿಯಲ್ಲಿ ಸರ್ವಪಾತಕೈಃ - ಸಮಸ್ತ ಪಾಪಗಳಿಂದಲೂ, ವಿಮುಚ್ಯತೇ - ಬಿಡಲ್ಪಡುವನು. ಈ ಭಗವನ್ನಾಮ ಸಂಕೀರ್ತನವನ್ನು ಕಂಡು ಆತನ ಪಾಪಗಳೆಲ್ಲಾ ಓಡಿ ಹೋಗುವುವು, ಹೇಗೆಂದರೆ ಸಿಂಹವನ್ನು ಕಂಡು ಜಿಂಕೆ ಮೊದಲಾದವುಗಳು ಹೇಗೆ ಭೀತಿಯಿಂದ ಓಡಿಹೋಗುವವೋ, ಹಾಗೆ ಎಂಬ ಭಾವವು. ಕರ್ಮಯೋಗಾದಿ ನಿತ್ಯ ನೈಮಿತ್ತಿಕಾನುಷ್ಠಾನಗಳನ್ನು ಯಥಾಕ್ರಮಂ ಯಥಾವಿಧಿ ಅನುಷ್ಠಿಸಿ, ಫಲ, ಸಙ್ಗ, ಮಮತೆಗಳನ್ನು ತೊರೆದು ಅವುಗಳನ್ನು ಭಗವಂತನಲ್ಲಿ ಸಮರ್ಪಿಸಿದರೆ ಉಪಾಯಾರಂಭಕ್ಕೆ ಪ್ರತಿಬಂಧಕ ಪಾಪಗಳು ಮಾತ್ರ ನಾಶಹೊಂದುತ್ತವೆಂಬ ಶಾಸ್ತ್ರವಿರುವಾಗ, ಸರ್ವಪಾತಕೈ ರ್ವಿಮುಚ್ಯತೇ ಎಂದು ಹೇಳಿದುದೇನು ಅತಿಶಯೋಕ್ತಿಯೋ, ಅಥವಾ ನಾಮಸಂಕೀರ್ತನವನ್ನು ಮಾಡಲಿ ಎಂದು ಉಪಚ್ಛಂದೋಕ್ತಿಯೋ ಎಂದರೆ, ಎರಡೂ ಅಲ್ಲವು; ಬರೀನಾಮ ಸಂಕೀರ್ತನದಿಂದಲೇ ಏಕಾ ಏಕಿ ಸಾಕ್ಷಾತ್ತಾಗಿ ಸರ್ವ ಪಾಪನಾಶದೊಂದಿಗೆ ಭಗವತ್ಪ್ರಾಪ್ತಿಯಿಲ್ಲವು. ಕ್ರಮೇಣ ಸಾಧುಸಮಾಗಮ,ಉತ್ಕೃಷ್ಟನಾದ ಸಾಧುವಿನ ಕುಲದಲ್ಲಿ ಜನನ, ಸದ್ಗುರುವಿನ ಪ್ರಾಪ್ತಿ, ಉಪಾಯಾನುಷ್ಠಾನ,ಹೀಗೆ ಕ್ರಮೇಣ ಸರ್ವಪಾತಕ ವಿಮೋಚನವೆಂದು ಭಾವಿಸತಕ್ಕದ್ದು." ಎನ್ನುಂ-ಎಂಬದಾಗಿಯೂ (೩) ಇದು ಅಜಾಮಿಳೋಪಾಖ್ಯಾನದ ಶ್ಲೋಕವು. ಅಜಾಮಿಳನು ತನ್ನ ಅಗ್ನಿಸಾಕ್ಷಿಯಾಗಿ ಮದುವೆ ಮಾಡಿಕೊಂಡ ಭಾರ್ಯೆಯನ್ನು ತ್ಯಾಗಮಾಡಿ ಶೂದ್ರಸ್ತ್ರೀಯಲ್ಲಿ ರಮಿಸಿದ ಮಹಾ ಪಾಪಿಯು; ಸಾಯುತ್ತೇನೆಂದು ತಿಳಿದು ತನ್ನ ಕೊನೆಯ ಮಗನನ್ನು ನಾರಾಯಣನೆಂದು ಕೂಗಿದನು. ಅಜಾಮಿಳನು ಮೋಸಚೌರ್ಯ ವೃತ್ತಿಯನ್ನವಲಂಬಿಸಿ ಸದಾಚಾರವನ್ನು ತ್ಯಾಗಮಾಡಿದುದರಿಂದ ಯಮಭಟರೂ, ನಾರಾಯಣ ಎಂದು ಕೂಗಿದುದರಿಂದ ವಿಷ್ಣುಭಟರೂ ಇಬ್ಬರೂ ಬಂದರು; ಇದು

(೨) ವಿ. ಪು. ೬. ೮ ೧೯.

**ಎನ್ನುವರ್ (೩)"ಸಾಂಕೇತ್ಯಂ ಪಾರಿಹಾಸ್ಯಂ ವಾ ಸ್ತೋಭಂ ಹೇಳನಮೇವವಾ। ವೈಕುಂಠನಾಮ ಗ್ರಹಣ ಮಶೇಷಾಘನಾಶನಮ್" ಎನ್ನುವರ್.(೪)"ಹರಿರ್ಹರತಿ**

ವಿಷ್ಣುಭಟರು ಯಮಭಟರಿಗೆ ಹೇಳುವ ವಿಷ್ಣುನಾಮ ಸಙ್ಕೀರ್ತನದ ಮಹಿಮೆಯನ್ನು ತಿಳಿಸುವ ಶ್ಲೋಕವು. ಬ್ರಾಹ್ಮಣನಾಗಿದ್ದರೂ ಸ್ವಧರ್ಮವನ್ನೂ ಸ್ವಭಾರ್ಯೆಯನ್ನೂ ತ್ಯಾಗಮಾಡಿ ಅಧರ್ಮ ಪ್ರವೃತ್ತಿಗಳವಲಂಬಿಸಿದ್ದರೂ, ಬೂದಿ ಮುಚ್ಚಿದ ಕೆಂಡವನ್ನು ಮುಟ್ಟಿದರೆ ಅದರ ಕೆಲಸವಾದ ದಹನವನ್ನು ಹೇಗೆ ಮಾಡಿಬಿಡುತ್ತದೋ, ಹಾಗೆಯೇ, ನಾರಾಯಣ ಶಬ್ದವು ಭಗವಂತನ ಹೆಸರೆಂಬ ಜ್ಞಾನವಿಲ್ಲದಿದ್ದರೂ ಭಗವಂತನನ್ನೇ ಬೋಧಿಸುವದರಿಂದ ಅಂತಹ ನಾರಾಯಣ ಶಬ್ದೋಚ್ಚಾರಣ ಮಾಹಾತ್ಮ್ಯೆಯಿಂದ ಈತನು ವಿಷ್ಣುಭಟರ ವಶವಾದನು. ಆದರೆ ಆಗ ಸಾಯದೆ ಪುನಃ ಬದುಕಿಕೊಂಡನಾದುದರಿಂದ ಆ ವಿಷ್ಣುಭಟರ ಸಂದರ್ಶನದ ಸುಕೃತಮೂಲಕ ಭಗವಂತನಲ್ಲಿ ಭಕ್ತಿಯು ಅಙ್ಕುರಿಸಿ, ತಾನು ಮಾಡಿದ ಅಧರ್ಮಗಳಿಂದ ಖೇದವನ್ನು ಹೊಂದಿದವನಾಗಿ, ವೈರಾಗ್ಯವನ್ನು ಹೊಂದಿ,ಸಮಸ್ತವನ್ನೂ ತ್ಯಜಿಸಿ ಮೋಕ್ಷಮಾರ್ಗವಾದ ಭಕ್ತಿಯೋಗವನ್ನವಲಂಬಿಸಿ ಮೋಕ್ಷವನ್ನು ಹೊಂದಿದನೆಂಬ ಇತಿಹಾಸ ಉಂಟು. ಆದುದರಿಂದ ವೈಕುಂಠ ನಾಮಗ್ರಹಣವು ದಿವ್ಯ ವೈಕುಂಠವನ್ನು ಹೊಂದಿಸುವದರಲ್ಲಿ ಸಂಶಯವಿಲ್ಲವು ಎಂದು ಇಲ್ಲಿ ಹೇಳಲ್ಪಡುತ್ತದೆ—**ಸಾಂಕೇತ್ಯಂ** - ಪುತ್ರರೇ ಮೊದಲಾದವರಲ್ಲಿ ಸಂಕೇತಮಾಡಲ್ಪಟ್ಟದುದು ಎಂದರೆ ಪುತ್ರನಿಗೆ ನಾರಾಯಣ ರಾಮ ಕೃಷ್ಣ ಗೋವಿಂದನೆಂಬ ಸಂಕೇತವನ್ನು ಇಟ್ಟು, ಕರೆಯುವದು, **ಪಾರಿಹಾಸ್ಯಂ ವಾ** - ಪರಿಹಾಸದಿಂದುಂಟಾದುದಾಗಲಿ, ಹೇಗೆಂದರೆ ನಿನಗೆ ಗೋಪಾಲನೆಂಬ ಹೆಸರು ಸಾರ್ಥಕವಾಯಿತು, ವಿದ್ಯೆಯಿಲ್ಲಾ ದನಮೇಯಿಸಬಹುದು ಎನ್ನುವದು, **ಸ್ತೋಭಂ** - ಅಕ್ಷರಗಳನ್ನನುಕರಿಸಿ ಭಗವನ್ನಾಮವನ್ನು ವ್ಯತ್ಯಸ್ತವಾಗಿ ಹೇಳುವದು, **ನಾರಾಯಣ** ಎಂಬುದಕ್ಕೆ ಬದಲಾಗಿ **ನಾನಾನನ** ಎಂದಾಗಲಿ, **ನಾಣಿ** ಎಂದಾಗಲಿ, ಉಚ್ಚರಿಸುವದು, ಕೃಷ್ಣ ಎನ್ನುವದಕ್ಕೆ ಕಿಟ್ಟನೆನ್ನುವದು, ನರಸಿಂಹನೆನ್ನುವದಕ್ಕೆ ಬದಲಾಗಿ ನರಸಯ್ಯನೆನ್ನುವದು, **ಹೇಳನಮೇವವಾ** - ಅವಮರ್ಯಾದಾರ್ಥವಾಗಲಿ ಕೃಷ್ಣಮೂಲ ಮನರ್ಥಾಯ ಎಂದು ಕೃಷ್ಣನ ಹೆಸರನ್ನು ಉಚ್ಚರಿಸುವದು; ಅನೇಕ ಸ್ತ್ರೀ ಸಂಬಂಧವಿರುವನೆಂದು ಹೇಳುವದಕ್ಕಾಗಿ ಆತನೇನು ಕೃಷ್ಣಾವತಾರವೇ ಎಂದು ಹೇಳುವದಾಗಲಿ, **ವೈಕುಂಠನಾಮಗ್ರಹಣಂ** - ಪರಮಪುರುಷನ ನಾಮವನ್ನು ಹೇಳುವದು, **ಅಶೇಷಾಘನಾಶನಮ್** – ಸಮಸ್ತ ಪಾಪಗಳನ್ನು ನಾಶಮಾಡುವಂತಾದ್ದು. ವೈಕುಂಠ ಶಬ್ದಕ್ಕೆ ಅರ್ಥ ಹೇಗೆಂದರೆ ಕುಟ

(೩) ಭಾಗ. ೬. ೨. ೧೪.

ಪಾಪಾನಿ ದುಷ್ಟಚಿತ್ತೈರಪಿ ಸ್ಮೃತಃ। ಅನಿಚ್ಛಯಾಪಿ ಸಂಸ್ಪೃಷ್ಟೋ ದಹತ್ಯೇವ ಹಿ ಪಾವಕಃ" ಎನ್ನುವುದು. (೫) "ಏತಾವತಾಲ ಮಘನಿರ್ಹರಣಾಯ ಪುಂಸಾಂ ಸಂಕೀರ್ತನಂ ಭಗವತೋ ಗುಣಕರ್ಮನಾಮ್ನಾಮ್ । ಆಕ್ರುಶ್ಯ ಪುತ್ರ ಮಘವಾನ್ ಯದಜಾಮಿಳೋಽಪಿ ನಾರಾಯಣೇತಿ ಮ್ರಿಯಮಾಣ ಉಪೈತಿ

ಗತಿಪ್ರತಿಘಾತೇ ಎಂಬ ಧಾತುವಿನಿಂದ, ವಿಗತವಾದ ಎಂದರೆ ಕಳೆದುಹೋದ ಎಂಬರ್ಥವು. ಕಳೆದುಹೋದ ಆತನೊಂದಿಗೆ ಸಂಶ್ಲೇಷ ವಿಘಾತವುಳ್ಳವರು ಯಾರೋ ಅವರು ವಿಕುಂಠರು. ಅಂತವರಿಗಾಗಿಯೇ ಈತನಾದುದರಿಂದ ವೈಕುಂಠನು. ಅಥವಾ ಒಂದಾನೊಂದು ಮನ್ವಂತರದಲ್ಲಿ ವಿಕುಂಠಳೆಂಬುವಳಿಗೆ ಪುತ್ರನಾಗಿ ಅವತರಿಸಿದುದರಿಂದಲಾಗಲಿ ವೈಕುಂಠನು. ಎನ್ನುವುದು-ಎಂಬದಾಗಿಯೂ, (೪) ದುಷ್ಟಚಿತ್ತೈರಪಿ-ದುಷ್ಟವ್ಯಾಪಾರದಲ್ಲೇ ಬುದ್ಧಿಯುಳ್ಳವರಿಂದಲೂ ಕೂಡ, ಸ್ಮೃತಃ-ಸ್ಮರಿಸಲ್ಪಟ್ಟ, ಹರಿಃ-ಪಾಪಹರನಾದ ವಿಷ್ಣುವು, ಪಾಪಾನಿ-ಸ್ಮರಿಸಿದವರ ಪಾಪಗಳನ್ನು ಹರತಿ-ಅಪಹರಿಸುತ್ತಾನೆ; ಅದು ಹೇಗೆಂದರೆ, ಅನಿಚ್ಛಯಾಪಿ - ಮುಟ್ಟಬೇಕೆಂದು ಇಷ್ಟವಿಲ್ಲದಿದ್ದರೂ, ಸಂಸ್ಪೃಷ್ಟಃ-ಸ್ಪರ್ಶಿಸಲ್ಪಟ್ಟವನಾಗಿ, ಪಾವಕಃ ಅಗ್ನಿಯು, ದಹತ್ಯೇವಹಿ-ದಹಿಸುತ್ತಾನೆಯಷ್ಟೇ. ಶ್ರೀಮಹಾವಿಷ್ಣುವು ಹರಿಯು,ಏತರಿಂದ ಎಂದರೆ ಸ್ಮರಿಸಿದವರ ಪಾಪಗಳನ್ನು ದಹಿಸುವ ಶಕ್ತಿಯುಳ್ಳವನಾಸುದರಿಂದ, ದುಷ್ಟಚಿತ್ತನಾಗಲಿ ಸಾಧುಚಿತ್ತನಾಗಲಿ, ಸ್ಮರಿಸಿದವರ ಪಾಪವನ್ನು ಸುಟ್ಟುಬಿಡುವ ಸ್ವಭಾವವುಳ್ಳವನಾದ ಪ್ರಯುಕ್ತ, ಅಗ್ನಿಯು ಹೇಗೆ ಮುಟ್ಟಿದವರ ಕೈಯನ್ನು ಸುಡುವನೋ ಹಾಗೆ ಎಂಬ ಭಾವವು" ಎನ್ನುವುದು - ಎಂದೂ, (೫) "ಪುಂಸಾಂ - ಪುರುಷರಿಗೆ, ಅಘನಿರ್ಹರಣಾಯ – ಪಾಪಗಳ ನಿವೃತ್ತಿಗಾಗಿ, ಏತಾವತಾ - ಇಷ್ಟು ಮಾತ್ರವೇ, ಅಲಂ-ಸಾಕಾಗಿರುತ್ತದೆ; ಎಷ್ಟು ಮಾತ್ರವೇ ಎಂದರೆ ಹೇಳುತ್ತಾರೆ:—ಭಗವತಃ – ಭಗವಂತನ, ಗುಣಕರ್ಮನಾಮ್ನಾಂ - ಕಲ್ಯಾಣ ಗುಣಗಳನ್ನು ದಿವ್ಯ ಚೇಷ್ಟಿತಗಳನ್ನು ಪ್ರತಿಪಾದಿಸುವ ಹೆಸರುಗಳ, ಸಂಕೀರ್ತನಂ - ಸಂಕೀರ್ತನವು, ಸಾಕಾಗಿರುತ್ತದೆಂಬ ಭಾವವು; ತಮ್ಮ ಅಭಿಪ್ರಾಯವನ್ನು ಒಂದು ದೃಷ್ಟಾಂತಮೂಲಕ ಸಮರ್ಥನೆಯನ್ನು ಮಾಡುತ್ತಾರೆ.—ಯತ್ - ಯಾವ ಕಾರಣದಿಂದ, ಅಘವಾನ್-ಮಹಾಪಾಪಿಷ್ಠನಾದ, ಅಜಾಮಿಳೋಽಪಿ - ಅಜಾಮಿಳನೂ ಕೂಡ, ಮ್ರಿಯಮಾಣಃ - ಸಾಯುವ ಅವಸ್ಥೆಯನ್ನು ಹೊಂದಿದವನಾಗಿ, ಪುತ್ರಂ - (ತನ್ನ ಕೊನೆಯ) ಮಗನನ್ನು, ನಾರಾಯಣೇತಿ - ನಾರಾಯಣಾ ಎಂದು, ಆಕ್ರುಶ್ಯ - ಘಟ್ಟಿಯಾಗಿ ಕೂಗಿದವನಾಗಿ, ವಿಕ್ರುಶ್ಯ ಎಂದು ಪಾಠಾಂತರವು, ಮುಕ್ತಿಂ - ಮೋಕ್ಷವನ್ನು,

(೪) ಹರ್ಯಷ್ಟಕ. ೧. (೫) ಭಾಗ. ೬. ೩. ೨೪

**ಉಪೈತಿ** - ಹೊಂದಿದನೋ, ಆ ಕಾರಣದಿಂದ, ಏತಾವದೇವಾಲಂ - ಭಗವನ್ನಾಮ ಸ್ಮರಣೆಯೇ, ಅಲಂ - ಮೋಕ್ಷಪ್ರಾಪ್ತಿಗೆ ಸದ್ವಾರಕೋಪಾಯವಾಗಿ ಸಾಕು, ಎಂದರೆ ಇನ್ನೇನನ್ನು ಮಾಡತಕ್ಕದ್ದು ಆವಶ್ಯಕವಿಲ್ಲ ಎಂಬರ್ಥವಲ್ಲವು; ಏಕೆಂದರೆ ಆಗಲೂ ಕೂಡ ಭಕ್ತಿಯೋಗ ಅಥವಾ ಪ್ರಪತ್ತಿ ಸಂಬಂಧವಿಲ್ಲದೆ ಮೋಕ್ಷವಿಲ್ಲವೆಂಬುದು ವ್ಯಕ್ತವು; ಈ ಭಗವನ್ನಾಮ ಸ್ಮರಣೆಯೇ ಮೋಕ್ಷಪ್ರಾಪ್ತಿಗೆ ಸಾಕು ಎಂಬುವರಿಂದ, ಅದೇ ಭಗವದನುಗ್ರಹವನ್ನು ಸಂಪಾದಿಸಿಕೊಟ್ಟು, ಉಪಾಯಾನುಷ್ಠಾನವಾದ ಭಕ್ತಿಯೋಗಾದಿಯನ್ನು ಸಾಧಿಸಿಕೊಟ್ಟು ಮುಕ್ತಿಯನ್ನೀಯುತ್ತದೆಂಬ ಭಾವವು. ಈ ಅಭಿಪ್ರಾಯವನ್ನು ಹಿಂದೆಯೇ ಹೇಳಿರುತ್ತಾರೆ:—**ಏತಾವಾನೇವ ಲೋಕೇಸ್ಮಿನ್ ಪುಂಸಾಂ ಧರ್ಮಃ ಪರಸ್ಸ್ಮೃತಃ । ಭಕ್ತಿಯೋಗೋ ಭಗವತಿ ತನ್ನಾಮಗ್ರಹಣಾದಿಭಿಃ** (ಭಾಗ. ೬. ೩. ೨೨) ಇಂತಹ, ಭಗವಂತನ ದಿವ್ಯಚೇಷ್ಟಿತಗಳನ್ನೂ ಮತ್ತು ಕಲ್ಯಾಣಗುಣಗಳನ್ನೂ ಬೋಧಿಸುವ, "**ಹೇ ಗೋಪಾಲಕ ಹೇ ಕೃಪಾಜಲನಿಧೇ ಹೇ ಸಿಂಧುಕನ್ಯಾಪತೇ, ಹೇ ಕಂಸಾಂತಕ, ಹೇ ಗಜೇಂದ್ರಕರುಣ,**" (ಮುಕುಂದ) "**ಶರಣಾಗತವತ್ಸಲ**" ಇತ್ಯಾದಿ ನಾಮಸಂಕೀರ್ತನಾದಿಗಳಿಂದ ಸಂಪಾದಿಸಲ್ಪಟ್ಟ ಭಗವದನುಗ್ರಹದಿಂದುಂಟಾದ ಭಗವದುಪಾಸನವೇ ಸರ್ವೋತ್ಕೃಷ್ಟವಾದ ಧರ್ಮಾನುಷ್ಠಾನವೆಂದು ಹೇಳಲ್ಪಟ್ಟಿರುತ್ತದೆ. ಅಜಾಮಿಳನೂ ಸಹ ಹೇ ನಾರಾಯಣ ಎಂದು ಕೂಗಿದ ಮಾತ್ರದಿಂದಲೇ ಮೋಕ್ಷವನ್ನು ಹೊಂದಲಿಲ್ಲವು. ಭಗವದನುಗ್ರಹ ಪರಂಪರೆಗಳಿಗೆ ಅದು ಸಹಕಾರಿಯಾಗಿ ಕೊನೆಗೆ ಉಪಾಯಾನುಷ್ಠಾನಮೂಲಕ ಮುಕ್ತಿಯನ್ನು ಹೊಂದಿದನೆಂದೇ ಭಾಗವತದಲ್ಲಿ ಹೇಳಲ್ಪಟ್ಟಿರುತ್ತದೆ—"**ಸತಸ್ಮಿನ್ ದೇವ ಸದನ ಆಸೀನೋ ಯೋಗ ಮಾಶ್ರಿತಃ । ಪ್ರತ್ಯಾಹೃತೇನ್ದ್ರಿಯಗ್ರಾಮೋ ಯುಯೋಜ ಮನ ಆತ್ಮನಿ । ತತೋ ಗುಣೇಭ್ಯ ಆತ್ಮಾನಂ ವಿಯುಜ್ಯಾತ್ಮಸಮಾಧಿನಾ । ಯುಯುಜೇ ಭಗವದ್ಧಾಮ್ನಿ ಬ್ರಹ್ಮಣ್ಯನುಭವಾತ್ಮನಿ**" ಹೀಗೆ ಈ ಎರಡು ಶ್ಲೋಕಗಳಿಂದ ಮೊದಲು ಕರ್ಮಯೋಗವನ್ನಾರಂಭಿಸಿ ಆತ್ಮಾವಲೋಕನವನ್ನು ಹೊಂದುವದಕ್ಕಾಗಿ ಮನಸ್ಸನ್ನು ಆತ್ಮಸ್ವರೂಪ ಚಿನ್ತನದಲ್ಲಿಟ್ಟನು. ಅನಂತರ ಮನಸ್ಸನ್ನು ಅಲ್ಲಿಂದ ತಿರುಗಿಸಿ, ಸ್ಥಿರವಾಗಿ ಪರಬ್ರಹ್ಮನ ದಿವ್ಯಮಂಗಳ ವಿಗ್ರಹದ ಉಪಾಸನದಲ್ಲಿಟ್ಟನೆಂದು ಹೇಳಲ್ಪಟ್ಟಿರುತ್ತದೆ. ಆದುದರಿಂದ **ಏತಾವದೇವಾಲಂ** ಎಂಬುದರ ಅರ್ಥವು, ಇದು ಒಂದೇ ಕ್ರಮವಾಗಿ ದಿವ್ಯವೈಕುಂಠವನ್ನು ಹೊಂದಿಸುವ ಪ್ರವೃತ್ತಿಗಳನ್ನುಂಟುಮಾಡುವುದರಲ್ಲಿ ಸಾಕು ಎಂಬ ಅರ್ಥವೇ ವಿನಾ, ಈ ನಾಮಸಂಕೀರ್ತನವೇ ಇನ್ನು ಯಾವ ಪ್ರವೃತ್ತಿಯ ಆವಶ್ಯಕವಿಲ್ಲದೆಯೇ ಮೋಕ್ಷವನ್ನು ಕೊಡುತ್ತದೆಂಬ ಅರ್ಥವು ಎಂದಿಗೂ ಅಲ್ಲ." ಎನ್ರುಪರ್ - ಎಂಬದಾಗಿಯೂ (೬) "**ಮೊಯ್ತ್ತವಲ್ವಿನೈ**" ಎಂಬ ಪಾಶು

**ಮುಕ್ತಿಯುಮ್" ಎನ್ಱುಮ್, (೬) "ಮೊಯ್ತ್ತವಲ್ ವಿನ್ಯೆಯುಳ್ ನಿನ್ಱು ಮೂನ್ರೆಳುತ್ತುಡೈಯ ಪೇರಾಲಾಕತ್ತಿರಬಂಧು ಮನ್ರೇ ಪರಂಗತಿ ಕಂಡುಕೊಂಡಾರ್। ಇತ್ತನೈಯಡಿಯರಾನಾರ್ಕ್ಕಿರಙ್ಗ ನಮರಙ್ಗನಾಯಪಿತ್ತನೈಪ್ಪೆಱ್ಱುಮ್" ಎನ್ಱುಮ್, ಶೊಲ್ಲುಗಿರವಿನ್ನೈಯೆಲ್ಲಾಮ್ ಭಗವತ್ಪ್ರದ್ವೇಷ ಮಿಲ್ಲಾದವನುಕ್ಕು ಆಸ್ತಿಕ್ಯಮ್ ಮಂದಮಾಗಿಲುಮ್, ಬಾಲಾದಿಗಳೈಪ್ಪೋಲೆ ಅರ್ಥಜ್ಞಾನಮಿಲ್ಲೈಯೇಯಾಗಿಲುಮ್, ಮಾಯ್ಮೆರುವುಮಾಪ್ಪೋಲೆಅಭಿಸಂಧಿಯಿಲ್ಲೈಯೇ ಯಾಗಿಲುಮ್, ಸಙ್ಕೇತ ಪರಿಹಾಸಾದಿಗಳಿಲೇ ತುವಕ್ಕುಂಡು ಅಭಿಸಂಧ್ಯನ್ತರ ಮುಂಡಾಗಿಲುಮ್, ಪ್ರಯೋಜನಾನ್ತರ ಸಙ್ಗಮುಂಡಾಗಿಲುಮ್, ದೋಷಾನ್ತ**

ರಾರ್ಥಕ್ಕೆ ಹಿಂದೆ ಸಾಧ್ಯೋಪಾಯ ಶೋಧನಾಧಿಕಾರದ ೨೪೯೧-೨ನೆಯ ಪುಟಗಳನ್ನು ಪರಾಂಬರಿಸಿ; **ಎನ್ಱುಮ್** - ಎಂಬದಾಗಿಯೂ, **ಶೊಲ್ಲುಗಿರ** - ಹೇಳಿರುವ, **ಇನ್ನೈ ಎಲ್ಲಾಮ್** – ಇವೆಲ್ಲವೂ, **ಭಗವತ್ಪ್ರದ್ವೇಷ ಮಿಲ್ಲಾದವನುಕ್ಕು** - ಭಗವಂತನಲ್ಲಿ ದ್ವೇಷವಿಲ್ಲದವನಿಗೆ, **ಅಸ್ತಿಕ್ಯಂ ಮಂದಮಾಗಿಲುಮ್** - ಶಾಸ್ತ್ರದಲ್ಲೂ ಪರಮಾತ್ಮನಲ್ಲೂ ವಿಶ್ವಾಸವು ಕಮ್ಮಿಯಾಗಿದ್ದರೂ, **ಬಾಲಾದಿಗಳೈಪ್ಪೋಲೆ** - ಬಾಲರೇ ಮೊದಲಾದವರಹಾಗೆ, ಆದಿ ಶಬ್ದದಿಂದ ತುಂಬಾ ಜ್ಞಾನವಿಲ್ಲದ ಸ್ತ್ರೀಗಳೂ ಹೇಳಲ್ಪಟ್ಟರು, **ಅರ್ಥಜ್ಞಾನಮಿಲ್ಲೈಯಾಗಿಲುಮ್** - ಉಚ್ಚರಿಸುವುದರ ಅರ್ಥಜ್ಞಾನವಿಲ್ಲದೆ ಇದ್ದರೂ, ಇದು **ಸಂಕೀರ್ತ್ಯನಾರಾಯಣಶಬ್ದಮಾತ್ರಂ** ಎಂಬಲ್ಲಿರುವ, **ಮಾತ್ರಂ** ಎಂಬುದರ ತಾತ್ಪರ್ಯ ವಿವರಣವು, **ಮಾಯ್ ಮೆರುವುಮಾಪ್ಪೋಲೆ** - ಪ್ರಿಯ ಕಾಲದಲ್ಲಿ ಬಾಯಲ್ಲಿ ಏನನ್ನೋ ಹೇಳುವಹಾಗೆ, **ಅಭಿಸಂಧಿಯಿಲ್ಲೇಯಾಗಿಲುಮ್** - ಇಂತಹ ಪ್ರಯೋಜನಕ್ಕಾಗಿ ನಾಮೋಚ್ಚಾರಣೆ ಮಾಡಬೇಕೆಂಬ ಅಪೇಕ್ಷೆಯಿಲ್ಲದಿದ್ದರೂ, ಇದು "**ಅವಶೇನಾಪಿ**" ಎಂದು ಹಿಂದೆ ಹೇಳಿದ ಪ್ರಮಾಣದ ತಾತ್ಪರ್ಯವು, ಇಲ್ಲಿ **ಅಭಿಸಂಧಿ** ಎಂದರೆ ನಾಮೋಚ್ಚಾರಣೆ ಮಾಡಬೇಕೆಂಬ ಅಪೇಕ್ಷೆಯು, **ಸಙ್ಕೇತ ಪರಿಹಾಸಾದಿಗಳಿಲೇ** - ಪರಮಾತ್ಮನ ಹೆಸರನ್ನು ಮಕ್ಕಳಿಗಿಡುವುದು, ಪರಿಹಾಸಕ್ಕಾಗಿ ಭಗವನ್ನಾಮೋಚ್ಚಾರಣೆಯು ಇವೇ ಮೊದಲಾದವುಗಳಲ್ಲಿ, **ತುವಕ್ಕುಂಡು** - ಸಂಬಂಧವಿದ್ದು, **ಅಭಿಸಂಧ್ಯನ್ತರಮುಂಡಾಗಿಲುಮ್**-ಬೇರೆ ಪ್ರಯೋಜನದ ಸಂಬಂಧಉಂಟಾದರೂ, "**ಸಾಂಕೇತ್ಯಂ ಪಾರಿಹಾಸ್ಯಂ ವಾ**" ಎಂಬ ಪ್ರಮಾಣವನ್ನು ಮನಸ್ಸಿನಲ್ಲಿಟ್ಟು ಹೇಳಿದುದು, **ಪ್ರಯೋಜನಾನ್ತರ ಸಙ್ಗಮುಂಡಾಗಿಲುಮ್** - ಬೇರೇ ಪ್ರಯೋಜನದ ಸಂಬಂಧ ವುಂಟಾದರೂ, ಇದು "**ಹರಿರ್ಹರತಿ ಪಾಪಾನಿ** ಎಂಬ ಪ್ರಮಾಣದಲ್ಲಿ "**ದುಷ್ಟ ಚಿತ್ತೈಃ**"

(೬) ತೊಂಡರಿಪ್ಪೊಡಿ ತಿರುಮಾಲೈ ೪

ರಙ್ಗಳುಂಡಾಗಿಲುಮ್ ಸಙ್ಕೀರ್ತ್ತನಮ್ ಪಾವನತಮುಮೆನ್ರಪಡಿ ; ಅಲ್ಲದು ಭಗವತ್ಪರಿವಾದಾದಿಗಳುಕ್ಕಾಕ ಭಗವನ್ನಾಮಸಂಕೀರ್ತ್ತನಮ್ ಪಣ್ಣಿನಾಲುಂ ಪಾಪಮ್ ಪೋಮೆನ್ರಪಡಿಯನ್ರು.

ಭಗವತ್ಪರಿವಾದಾದೀನಾಂ ಪಾತಕತ್ವೇ ಪ್ರಮಾಣಾನಿ.

---

ಭಗವತ್ಪರಿವಾದಾದಿಗಳ್ ಪಾತಕಙ್ಗಳಾಗ ವಿರೇ ಪರಿಗಣಿತ್ತು ಕ್ಕಿಡಪ್ಪದು;-

---

ಎಂಬುದರ ತಾತ್ಪರ್ಯವು, ಸಂಕೀರ್ತ್ತನಂ - ಭಗವನ್ನಾಮ ಸಂಕೀರ್ತ್ತನವು, ಪಾವನತಮುಮೆನ್ರಪಡಿ - ಭಗವದನುಗ್ರಹವನ್ನುಂಟುಮಾಡಿ ತನ್ಮೂಲಕ ಪಾಪ ವಿಮೋಚನದ್ವಾರಾ ಅತ್ಯಂತ ಪಾವನವಾದುದೆಂದು ಹೇಳುವದರಲ್ಲಿ ತಾತ್ಪರ್ಯವು; ಯಾವಾಗ ಭಗವದನುಗ್ರಹ ಉಂಟಾಗಿ ಪಾಪವಿಮೋಚನೆಯೋ,ಆಗ ಭಗವದಾಶ್ರಯಣ ಬುದ್ಧಿಯುಂಟಾಗಲು ಸಹಕಾರಿಯಾಗುತ್ತದೆಂಬ ಭಾವವೂ ಸೂಚಿತವು; ಅಲ್ಲದು - ಹಾಗಲ್ಲದೆ, ಭಗವತ್ಪರಿವಾದಾದಿಗಳುಕ್ಕಾಗ - ಭಗವದ್ದ್ವೇಷಿಯಾಗಿ ಭಗವಂತನನ್ನು ನಿಂದನೆ ಮಾಡುವದೇ ಮೊದಲಾದವುಗಳಿಗಾಗಿ, ಭಗವನ್ನಾಮ ಸಂಕೀರ್ತ್ತನವನ್ನು ಪಣ್ಣಿನಾಲುಮ್-ಮಾಡಿದರೂ, ಪಾಪಮ್ ಪೋಮ್ ಪಾಪವು ನಾಶವಾಗುತ್ತದೆ, ಎನ್ರಪಡಿಯನ್ರು - ಎಂದು ಹೇಳಿದಹಾಗೆ ಅಲ್ಲವು. ಭಗವದ್ದ್ವೇಷಿಯಾಗಿ ಮನಃಪೂರ್ವಕವಾಗಿ ನಿಂದಿಸಿದರೂ, ಅಂತಹ ಪಾಪಗಳೂ ಕೂಡ, ಈ ಭಗವನ್ನಾಮ ಸ್ಮರಣೆಯಿಂದ ಹೋಗುವದಿಲ್ಲವು. ಹಾಗೆ ಹೋಗುವದಿಲ್ಲವೆಂಬುದಕ್ಕೆ ಸಾಕ್ಷಾತ್ತಾಗಿಯೇ ಪ್ರಮಾಣಗಳುಂಟೆಂದು ಅವುಗಳನ್ನು ಉದಾಹರಿಸುತ್ತಾರೆ.

ಭಗವತ್ಪರಿವಾದಾದಿಗಳು ಪಾತಕಗಳೆಂಬುದಕ್ಕೆ ಪ್ರಮಾಣಗಳು.

---

ಭಗವತ್ಪರಿವಾದಾದಿಗಳ್ - ಭಗವಂತನ ನಿಂದೆ ಮೊದಲಾದವುಗಳು ಆದಿ ಶಬ್ದದಿಂದ ದ್ರೋಹ, ತದ್ವಿಷಯ ದುರ್ಬೋಧನೆ ಮೊದಲಾದವುಗಳು ಹೇಳಲ್ಪಟ್ಟವು, ಪಾತಕಙ್ಗಳಾಗ ವಿರೇ - ಮಹತ್ತಾದ ಪಾಪಗಳೆಂದಲ್ಲವೇ, ಪರಿಗಣಿತ್ತುಕ್ಕಿಡಪ್ಪದು - ಎಣಿಸಲ್ಪಟ್ಟಿರುವದು? ಪ್ರಮಾಣ ಶತಗಳು ಹಾಗಲ್ಲವೇ ಹೇಳುತ್ತವೆ ಎಂಬ ಭಾವವು, ಮುಂದೆ ಅಂತಹ ಪ್ರಮಾಣಗಳಲ್ಲಿ ಕೆಲವನ್ನು ಉದಾಹರಿಸುತ್ತಾರೆ. (೧) ಇದು ನಾರದರು ವ್ಯಾಸಮಹರ್ಷಿಗೆ ಹೇಳುವ ವಾಕ್ಯವು, ಬಾಹ್ಲೀಕರು ಹರಿಬಾಹ್ಯರೆಂದು ಹೇಳುವ ಪ್ರಕರಣವು. ಯೇ - ಯಾರು, ಮಹಾತ್ಮಾನಂ - "ಯ ಆತ್ಮನಿತಿಷ್ಠನ್" ಎಂದು ಶ್ರುತಿಯಲ್ಲಿ ಹೇಳಿರುವ ಹಾಗೆ

**(೧) "ಯೇ ದ್ವಿಷನ್ತಿ ಮಹಾತ್ಮಾನಂ ನ ಸ್ಮರನ್ತಿ ಚ ಕೇಶವಮ್ | ನತೇಷಾಂ ಪುಣ್ಯತೀರ್ಥೇಷು ಗತಿ ಸ್ಸಂಸರ್ಗಿಣಾ ಮಪಿ" ಎನ್ರುಮ್, (೨)"ಯಃ ಪುತ್ರಃ ಪಿತರಂ ದ್ವೇಷ್ಟಿತಂ ವಿದ್ಯಾದನ್ಯರೇತಸಂ | ಯೋ ವಿಷ್ಣುಂ ಸತತಂ ದ್ವೇಷ್ಟಿತಂ ವಿದ್ಯಾ ದನ್ಯ ರೇತಸಮ್." ಎನ್ರುಮ್ ಶೊನ್ನಾರ್‌ಗಳಿರೇ.**

ಜೀವಾತ್ಮರುಗಳಿಗೆಲ್ಲಾ ಆತ್ಮಾವಾಗಿರುವ **ಮಹಾತ್ಮನನ್ನು**, ಅಥವಾ ಆತ್ಮಾ ಎಂದರೆ ದೇಹವು, ಮಹತ್ತಾದ ಅಪ್ರಾಕೃತವಾದ ಶುಭಾಶ್ರಯ ವಾದ ದಿವ್ಯಮಙ್ಗಳ ವಿಗ್ರಹ ಯುಕ್ತನಾದ, ಅಥವಾ ಆತ್ಮಾ ಎಂದರೆ ಮನಸ್ಸು ಅಥವಾ ಸ್ವಭಾವವು, ಮಹಾ ಪಾಪಿಗಳಾಗಿದ್ದರೂ ಶರಣಾಗತರಾದವರನ್ನು ರಕ್ಷಿಸುವ ಉದಾರಮನಸ್ಕನು, ಇಂತಹ **ಕೇಶವಂ** - ಚತುರ್ಮುಖ ರುದ್ರರಿಗೂ ನಿಯಾಮಕನಾದ ಶ್ರೀ ಮಹಾ ವಿಷ್ಣುವನ್ನು, **ಯೇದ್ವಿಷನ್ತಿ** - ಯಾರು ದ್ವೇಷಿಸುತ್ತಾರೋ ಎಂದರೆ, ಅಂತವನೊಬ್ಬ ಪರಮಪುರುಷನು ಇಲ್ಲವೇ ಇಲ್ಲವೆಂದಾಗಲಿ, ಆತನಿಗೆ ಸ್ವರೂಪ ರೂಪಗುಣ ವಿಭವೈಶ್ವರ್ಯಾದಿಗಳು ಯಾವುವೂ ಇಲ್ಲವೇದಾಗಲಿ,ಅಂತಹ ಅವತಾರಪುರುಷನನ್ನು ಯಾರು ದ್ವೇಷಿಸುವರೋ, ಮತ್ತು **ನಸ್ಮರನ್ತಿ ಚ**-ಸ್ಮರಿಸುವದೇ ಇಲ್ಲವೋ, **ತೇಷಾಂ**-ಅವರುಗಳಿಗೂ, **ಸಂಸರ್ಗಿಣಾಮಪಿ** - ಅವರೊಂದಿಗೆ ಸಂಸರ್ಗವನ್ನು ಹೊಂದಿರುವವರಿಗೂ ಎಂದರೆ ಅವರಿಗೆ ಸೇರಿದವರಾಗಿ ಅವರೊಂದಿಗೆ ಸ್ನೇಹವನ್ನು ಮಾಡಿಸುವವರಿಗೂ ಕೂಡ, **ಪುಣ್ಯ ತೀರ್ಥೇಷು** - ಪತಿತರನ್ನು ಪಾವನಮಾಡುವ ಗಂಗಾದಿ ಪುಣ್ಯತೀರ್ಥಗಳಲ್ಲಿ, ಎಂದರೆ ಅವುಗಳಲ್ಲಿ ಪಾಪ ಪರಿಹಾರವಾಗುತ್ತದೆಂಬ ಭಾವನೆಯಿಂದ ಅವಗಾಹನೆಯನ್ನು ಮಾಡಿದರೂ ಎಂಬ ತಾತ್ಪರ್ಯವು, **ಗತಿಃ** - ಅಂತಹ ಪಾವನತ್ವರೂಪ ಗತಿ ಯು ಶ್ರೇಯಸ್ಸು, **ನ**-ಇಲ್ಲವು. ಅಂತಹ ಪರಮ ಪುರುಷನನ್ನು ದ್ವೇಷಿಸಿದ ಮತ್ತು ಸ್ಮರಿಸದ ಮಹಾಪಾತಕವು ಗಂಗಾದಿ ಪುಣ್ಯತೀರ್ಥಗಳಲ್ಲಿ ಮುಳುಗಿದರೂ ಹೋಗುವದಿಲ್ಲವೆಂಬ ಭಾವವು". ಎನ್ರುಮ್ - ಎಂಬದಾಗಿಯೂ, (೨) "**ಯಃ ಪುತ್ರಃ** - ಯಾವ ಪುತ್ರನು, **ಪಿತರಂ** - ತನ್ನ ತಂದೆಯನ್ನು, **ದ್ವೇಷ್ಟಿ** - ದ್ವೇಷಿಸುವನೋ, **ತಂ** - ಅಂತವನನ್ನು, **ಅನ್ಯರೇತಸಂ** - ಆ ತಂದೆಗಲ್ಲದೆ ಇತರರ ರೇತಸ್ಸಿಗೆ ಹುಟ್ಟಿದವನನೆಂದು, **ವಿದ್ಯಾತ್** - ತಿಳಿ. ತನ್ನ ತಂದೆಗೇನೆ ಹುಟ್ಟಿದ್ದ ಪಕ್ಷದಲ್ಲಿ ಸ್ವಾಭಾವಿಕವಾಗಿ ಉಂಟಾಗುವ ಪ್ರೀತಿಯು ಜನಿಸಿ, ಅದನ್ನು ತೋರಿಸುತ್ತಿದ್ದನು; ಹಾಗಲ್ಲದೆ ದ್ವೇಷಿಸುವದರಿಂದ ವಿದ್ಯಾದನ್ಯರೇತಸಂ ಎಂದು ಹೇಳಲ್ಪಟ್ಟಿತು; ಮತ್ತು ಹಾಗೆಯೇ, **ಯಃ**-ಯಾವನು,**ಸತತಂ**-ಯಾವಾಗಲೂ, **ಶ್ರೀ ಮಹಾ ವಿಷ್ಣುವನ್ನು ದ್ವೇಷ್ಟಿ**-ದ್ವೇಷಿಸುತ್ತಾನೋ,**ತಂ**-ಅಂತವನನ್ನು, **ಅನ್ಯರೇತಸಂ** -

(೧) ಭಾರತ. ಶಾನ್ತಿ. ೩೩೬. ೩೬. (೨) ಬ್ರಹ್ಮಾಂಡ ಪುರಾಣವು.

ಚಂಡಾಲನಿಗೆ ಹುಟ್ಟಿದವನನ್ನಾಗಿ, ವಿದ್ಯಾತ್-ತಿಳಿ; ಎನ್ನ್ರವ್ ಶೂನಾರ್‌ಗಳಿರೇ-ಎಂದು ಹೇಳಿರುತ್ತಾರೆಯಲ್ಲವೇ. ಇಷ್ಟೇ ಅಲ್ಲವು; ಹೀಗೆ ಅನೇಕ ಪ್ರಮಾಣಗಳುಂಟೆಂಬ ಭಾವವು. ಹಿಂದಿನ ವಾಕ್ಯದಲ್ಲಿರುವ ಪರಿಗಣಿತ್ತು ಕಿಡಪ್ಪದು ಎಂಬುದರಿಂದ ತೋರಿ ಬರುತ್ತದೆ. "ಮಾತೃವತ್ಪರಿರಕ್ಷಂತಂ ಸರ್ವಸ್ಯಾಧಾರ ಮಚ್ಯುತಮ್ । ಯೋನಾಭ್ಯರ್ಚಯತೇ ವಿಷ್ಣುಂ ತ ಮಾಹು ಬ್ರ್ರಹ್ಮಘಾತಕಮ್॥" "ಆದ್ಯಂ ಪುರುಷ ಮೀಶಾನಂ ಸರ್ವಲೋಕ ನಮಸ್ಕೃತಮ್ । ನಚಿನ್ತಯನ್ತಿ ಯೇ ವಿಷ್ಣುಂ ತೇನ್ವೈ ನಿರಂಯಗಾಮಿನಃ । ವಿಷ್ಣುಂ ಬ್ರಹ್ಮಣ್ಯದೇವೇಶಂ ಪುರಾಣಂ ಪುರುಷೋತ್ತಮಮ್ । ಲೋಕನಾಥ ಮನಾದ್ಯನ್ತಂ ಜಗತಃ ಕಾರಣಂ ಪರಮ್ । ನಾರ್ಚಯನ್ತೀಹ ಯೇ ಮೂಢಾಃ ಪರಮಾತ್ಮಾನ ಮವ್ಯಯಮ್ । ತೇ ಯಾನ್ತಿ ನರಕಂ ಘೋರಂ ಇಷ್ಟ್ವಾ ಕ್ರತುಶತೈರಪಿ" ಇತ್ಯಾದ್ಯನೇಕ ಪ್ರಮಾಣಗಳೂ ಉಂಟು. ಇವು ಅನುಸಂಧೇಯಗಳು. ಶ್ರೀ ಭಗದ್ಗೀತೆಯಲ್ಲಿ ಶ್ರೀ ಕೃಷ್ಣಭಗವಾನರವರು ಹಾಗೆಯೇ ಹೇಳಿರುತ್ತಾರೆ:—"ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ । ಕ್ಷಿಪಾಮ್ಯಜಸ್ರ ಮಶುಭಾನ್ ಆಸುರೇಷ್ವೇವ ಯೋನಿಷು" (ಗೀ. ೧೬. ೧೯) ಯಾರು ನನ್ನನ್ನು ದ್ವೇಷಿಸುತ್ತಾರೋ, ನಾನು ಇಲ್ಲವೇ ಇಲ್ಲವೆಂದು ಯುಕ್ತಿವಾದಗಳನ್ನು ಹೇಳುವರೋ, ನಾನೊಬ್ಬನುಂಟೆಂದು ತಿಳಿದೂ ಕೂಡ ನನ್ನನ್ನು ಆಶ್ರಯಿಸುವದಿಲ್ಲವೋ, ಭಗವಂತನೊಬ್ಬನಿದ್ದಾನೆಂಬ ಜ್ಞಾನವೇ ಇರುವದಿಲ್ಲವೋ, ಇವರೆಲ್ಲರನ್ನೂ ನಾನು ಪುನಃ ಪುನಃ ಸಂಸಾರದಲ್ಲೇ ಹಾಕುತ್ತೇನೆ ಎಂಬುದು ಈ ಶ್ಲೋಕ ತಾತ್ಪರ್ಯವು.

ಹೀಗೆ ಭಗವದ್ವೇಷಿಗೆ ಪರಗತಿಯಿಲ್ಲವೆಂದರೆ "ದ್ವೇಷಾಚ್ಚೈದ್ಯಾದಯೋ ನೃಪಾಃ" ಎಂಬಲ್ಲಿ ಉಂಟೆಂದು ಹೇಳಿದೆಯಲ್ಲಾ? ಮತ್ತು "ಯಯಾಕಯಾಚ ವಿಧಯಾ ಸಂಬಂಧ ಸ್ಸತುಪಾವನಃ" ಯಾವವಾದರೂ ಒಂದು ಪ್ರಕಾರವಲ್ಲಿ ಪರಮಾತ್ಮನ ಸಂಬಂಧವು ಇದ್ದರೆ, ಅದು ಪಾವನರೂಪವಾದುದು ಎಂದೂ ಸಹ ಹೇಳಿದೆಯಲ್ಲಾ? "ವೈರೇಣ ಯನ್ನೃಪತಯಃ ಶಿಶುಪಾಲ ಪೌಂಡ್ರ ಸಾಲ್ವಾದಯೋ ಗತಿವಿಲಾಸವಿಲೋಕನಾದ್ಯೈಃ । ಧ್ಯಾಯನ್ತ ಆಕೃತಿವಿದ ಶ್ಶಯನಾಸನಾದೌ ತತ್ಸಾಮ್ಯ ಮಾಪು ರನುರಕ್ತಧಿಯಾ ಪುನಃ ಕಿಮ್" ವೈರದಿಂದಲೇ ಶಿಶುಪಾಲ ಪೌಂಡ್ರಕ ವಾಸುದೇವ ಸಾಲ್ವಾದಿಗಳು ಪರಮಾತ್ಮ ಸಾಮ್ಯವನ್ನು ಹೊಂದಿದರು. ಹೀಗಿರುವಾಗ ಪರಮಾತ್ಮನಲ್ಲೇ ಸಕ್ತವಾಗಿರುವ ಮನಸ್ಸುಳ್ಳವರವಿಷಯದಲ್ಲಿ ಹೇಳತಕ್ಕದ್ದೇನಿದೆ" ಎಂದು ಹೇಳಿರುವದರಿಂದ ಭಗವದ್ವೇಷಿಗಳಿಗೂ ಒಳ್ಳೇಗತಿಯುಂಟಾಯಿತೆಂದು ತೋರಿಬರುತ್ತದೆಯಲ್ಲಾ? ಭಗವದ್ವೇಷಿಗಳಲ್ಲದವರಿಗೆಮಾತ್ರವೇ ನಾಮಸಂಕೀರ್ತನ ದಿವ್ಯದೇಶವಾಸ ಮೊದಲಾದವು ಸದ್ಗತಿಗೆ ಸಹಕಾರಿಗಳೆಂದು ಹೇಳಿದುದು ಹೇಗೆ?

(೧) “ಗೋಪ್ಯಃ ಕಾಮಾದ್ಭಯಾತ್ಕಂಸೋ ದ್ವೇಷಾಚ್ಚೈದ್ಯಾದಯೋ ನೃಪಾಃ । ಸಂಬಂಧಾದ್ವೃಷ್ಣಯೋ ಯೂಯಂ ಸ್ನೇಹಾದ್ಭಕ್ತ್ಯಾ ವಯಂ ಪ್ರಭೋ” ॥ ಎಙ್ಗಿರಪಡಿಯೇ ಏತೇನು ಮೊರುವಗೈಯಾಲೆ ತುವಕ್ಕುಂಡಾರುಮ್ ಪಿಳೈಪ್ಪಾರೆನ್ನುದುವುಮ್ (೨)“ಯಯಾಕಯಾಚ ವಿಧಯಾ ಸಂಬಂಧ

---

ಎಂದು ಆಕ್ಷೇಪ ಬಂದೀತಾಗಿ ಅದಕ್ಕೆ ಸಮಾಧಾನವನ್ನು. “ಗೋಪ್ಯಃ ಕಾಮಾತ್” ಎಂಬ ಶ್ಲೋಕವನ್ನು ಉದಾಹರಿಸಿ ಅದರ ಸಂಗ್ರಹವಾದ ತಾತ್ಪರ್ಯವನ್ನು ತಿಳಿಸುತ್ತಾರೆ. (೧) ಇದು ಶುಕಮಹರ್ಷಿಯು ಪರೀಕ್ಷಿದ್ರಾಜನಿಗೆ ಹೇಳುವ ಮಾತು, ಯಾವವಿಧದಿಂದಲಾಗಲಿ ಪರಮಾತ್ಮನಲ್ಲಿ ಮನಸ್ಸನ್ನಿಡುವದು, ಪರಮಾಪ್ತಪ್ರಾಪ್ತಿಗೆ ಹೇತುವಾಗುತ್ತದೆಂದು ಹೇಳುವ ಪ್ರಕರಣವು. ಈ ಶ್ಲೋಕದ ಹಿಂದಿನ ಶ್ಲೋಕವಾದ “ಕಾಮಾದ್ದ್ವೇಷಾದ್ಭಯಾತ್ಸ್ನೇಹಾದ್ಯಥಾಭಕ್ತ್ಯೇಶ್ವರೇಮನಃ। ಆವೇಶ್ಯ ತದಘಂ ಹಿತ್ವಾ ಬಹವ ಸ್ತದ್ಗತಿಂ ಗತಾಃ” ಎಂಬಲ್ಲಿ ಭಕ್ತಿಮಾರ್ಗದಲ್ಲಿ ಹೇಗೆ ಮನಸ್ಸು ಸರ್ವೇಶ್ವರನಲ್ಲಿ ಸಕ್ತವಾಗಿರುತ್ತದೋ ಹಾಗೆಯೇ, ಕೆಲವರು ಕಾಮದಿಂದಲೂ, ಕೆಲವರು ದ್ವೇಷದಿಂದಲೂ, ಕೆಲವರು ಭಯದಿಂದಲೂ, ಕೆಲವರು ಸ್ನೇಹದಿಂದಲೂ, ಆತನಲ್ಲೇ ನಿರಂತರವಾಗಿ ಮನಸ್ಸನ್ನಿಟ್ಟು, ಹೀಗೆ ಅನೇಕರು ಆತನನ್ನೇ ಹೊಂದಿರುತ್ತಾರೆ ಎಂದು ಹೇಳಲ್ಪಟ್ಟಿರುತ್ತದೆ. ಅದಕ್ಕೆ ದೃಷ್ಟಾಂತವಾಗಿ ಈ ಶ್ಲೋಕದಲ್ಲಿ ಹೇಳುತ್ತಾರೆ.—ಕಾಮಾತ್ - ಭಗವಂತನೊಂದಿಗೆ ರಮಿಸಬೇಕೆಂಬ ಆಶೆಯಿಂದ, ಗೋಪ್ಯಃ - ಗೋಪಿಕಾ ಸ್ತ್ರೀಯರೂ, ಭಯಾತ್ - ಶ್ರೀ ಕೃಷ್ಣನಭಯದಿಂದ, ಕಂಸಃ - ಕಂಸನೂ, ದ್ವೇಷಮೂಲಕವಾಗಿ, ಚೈದ್ಯಾದಯೋ ನೃಪಾಃ - ಶಿಶುಪಾಲ ದಂತವಕ್ತ್ರಾದಿಗಳಾದ ರಾಜರುಗಳೂ, ಸಂಬಂಧಾತ್ - ಸಂಬಂಧದಿಂದ ವೃಷ್ಣಿಕುಲದವರೂ, ಸ್ನೇಹಾತ್ ಯೂಯಂ - ಸ್ನೇಹಮೂಲಕವಾಗಿ ನೀವೂ, ಇಲ್ಲಿ ನೀವು ಎಂದರೆ ನಿಮ್ಮ ಪಿತಾಮಹರಾದ ಪಾಂಡವರೂ, ಹೇ ಪ್ರಭೋ-ಓ ಪರೀಕ್ಷಿದ್ರಾಜನೇ, ಭಕ್ತ್ಯಾ - ಪರಮೈಕಾಂತಿಕಾತ್ಯಂತಿಕ ಪ್ರೀತಿಪೂರ್ವಕವಾದ ಉಪಾಸನದಮೂಲಕ, ವಯಂ - ನಾವೂ, (ಶುಕಮಹರ್ಷಿಯೇ ಮೊದಲಾದವರು) ತದ್ಗತಿಂ ಗತಾಃ - ಆತನನ್ನು ಪ್ರಾಪ್ಯವಾಗಿ ಹೊಂದಿದೆವು”, ಎಙ್ಗಿರಪಡಿಯೇ - ಎಂದು ಹೇಳಿರುವ ಮೇರೆಗೆ, ಏದೇನುಂ ಮೊರುವಗೈಯಾಲೇ - ಯಾವುದಾದರೂ ಒಂದು ಪ್ರಕಾರವಾಗಿ, ತುವಕ್ಕುಂಡಾರುಮ್ - ಭಗವತ್ಸಂಬಂಧವನ್ನು ಹೊಂದಿದವರು, ಪಿಳೈಪ್ಪಾರ್ - ಸಂಸಾರವನ್ನು ಬಿಟ್ಟು ಕಳೆದು ಉತ್ತೀರ್ಣರಾಗು

---

(೧) ಭಾಗ. ೭. ೧. ೩೨. (೨) ಗರುಡ ಪುರಾಣ. ೮. ೧೨.

**ಸ್ವತು ಪಾವನಃ" ಎನ್ರದುವುನ್ ಪೂರ್ವಸುಕೃತ ವಿಶೇಷಙ್ಗಳಾಲೇ ನಿಯತರಾನಧಿಕಾರಿ ವಿಶೇಷಙ್ಗಳೈಪ್ಪತ್ತೆನ್ನುಮಿಡಸ್ ಇವರ್ಗಳುಡೈಯ ಪೂರ್ವಾಪರ ವೃತ್ತಾಂತಙ್ಗಳ್ ಶೊಲ್ಲುಗಿರ ಪುರಾಣಾದಿಗಳಿಲೇ ಪ್ರಸಿದ್ಧಮ್.**

---

ವಸು, ಎನ್ರದುವುನ್ - ಎಂದು ಹೇಳಿರುವದೂ (೨) "**ಯಯಾ ಕಯಾಚ ವಿಧಯಾ** - ಕಾಮದಿಂದಲೋ, ದ್ವೇಷದಿಂದಲೋ, ಭಯದಿಂದಲೋ, ಸ್ನೇಹದಿಂದಲೋ ಭಕ್ತಿಯಿಂದಲೋ, ಹೀಗೆ ಯಾವುದಾದರೂ ಒಂದು ವಿಧವಾಗಿ, **ಸಂಬಂಧಃ** - ಈ ಚೇತನನಿಗೆ ಭಗವಂತನನ್ನು ಸ್ಮರಿಸುವ ಸಂಬಂಧನಾದ, **ಸತು** - ಆದಾದರೋ, **ಪಾವನಃ** - ಈತನನ್ನು ಪವಿತ್ರೀಕರಿಸಿ ತನ್ನ ಪ್ರಾಪ್ತಿಗೆ ಯೋಗ್ಯನಾದ ಪರಿಶುದ್ಧತೆಯನ್ನು ಹೊಂದಿಸುವಂತಾದ್ದು." **ಎನ್ರದುವುನ್**-ಎಂದು ಹೇಳಿರುವದೂ ಸಹ, **ಪೂರ್ವಸುಕೃತ ವಿಶೇಷಙ್ಗಳಾಲೇ** - ಪೂರ್ವಜನ್ಮದಲ್ಲಿ ಮಾಡಿದ ಸುಕೃತ ವಿಶೇಷಗಳಿಂದ, **ನಿಯತರಾನ** - ಭಗವದನುಗ್ರಹಕ್ಕೆ ನಿಯತರಾಗಿರುವ, ಅಧಿಕಾರಿ ವಿಶೇಷರುಗಳನ್ನು, **ಪತ್ತು** - ಕುರಿತದ್ದು, **ಎನ್ನುಮಿಡನ್** - ಎಂಬುವ ಸಂದರ್ಭವು, **ಇವರುಗಳುಡೈಯ** - ಈ ಗೋಪಿಕಾ ಸ್ತ್ರೀಯರು, ಕಂಸನು, ಶಿಶುಪಾಲ ದಂತವಕ್ತ್ರರು, ವೃಷ್ಣಿಗಳು, ಪಾಂಡವರು, ಪರಾಶರ ಶುಕಾದಿಗಳು ಇವರೆಲ್ಲರ, **ಪೂರ್ವಾಪರ ವೃತ್ತಾಂತಙ್ಗಳಿಲೇ** - ಹಿಂದಿನ ಮತ್ತು ಮುಂದಿನ ವೃತ್ತಾಂತಗಳಲ್ಲಿ, ಪ್ರಸಿದ್ಧವು. **ಈ** ಶ್ಲೋಕದಲ್ಲಿ ಹೇಳಿರುವ ಗೋಪಿಕಾ ಸ್ತ್ರೀಯರೂ, ಕಂಸನೂ ಶಿಶುಪಾಲನೂ, ವೃಷ್ಣಿಗಳೂ ಮೊದಲಾದವರೆಲ್ಲಾ ವಿಶೇಷಾಧಿಕಾರಿಗಳಾದುದರಿಂದ ಹೀಗೆ ಭಗವದ್ವೇಷಿಗೂ ಮೋಕ್ಷಪ್ರಾಪ್ತಿಯಾಗಬಹುದೆಂದು ಹೇಳುವದು ಶಾಸ್ತ್ರವಿರುದ್ಧ ವಿಷಯವಲ್ಲವು. ಅವರುಗಳು ವಿಶೇಷಾಧಿಕಾರಿಗಳೆಂಬುದು ಪುರಾಣಪ್ರಸಿದ್ಧವೆಂದು ಹೇಳಿದರು; ಹೇಗೆಂದರೆ—**ಶಿಶುಪಾಲದಂತವಕ್ತ್ರರಿಗಳಿಗೆ ದ್ವೇಷದಿಂದ ಮುಕ್ತಿಯು** ಹೇಗೆ? ಎಂದರೆ ಇವರು ಜಯವಿಜಯರು, ಸನಕಾದಿಗಳ ಶಾಪದಿಂದ ಹುಟ್ಟಿದವರು. ಸನಕಾದಿಗಳಿಗೆ ಮಾಡಿದ ಭಾಗವತಾಪರಾಧದಿಂದುಂಟಾದ ಶಾಪವನ್ನನುಭವಿಸಲೇಬೇಕು ; ಏಳು ಜನ್ಮಗಳನ್ನೆತ್ತಿ ನನಗೆ ಮಿತ್ರರಾಗಿದ್ದು ನನ್ನನ್ನು ಬಂದು ಸೇರುವಿರೋ, ಇಲ್ಲವೇ ನನಗೆ ದ್ವೇಷಿಗಳಾಗಿ ಮೂರು ಜನ್ಮಗಳನ್ನು ಮಾತ್ರ ಎತ್ತಿ ನನ್ನನ್ನು ಬಂದು ಸೇರುವಿರೋ ಎಂದು ಶ್ರೀಮಹಾವಿಷ್ಣುವು ಜಯವಿಜಯರನ್ನು ಕೇಳಿದುದಕ್ಕೆ, ಏಳು ಜನ್ಮದಷ್ಟು ಕಾಲ ವಿಶ್ಲೇಷೆಯನ್ನು ಸಹಿಸದೆ, ದ್ವೇಷಿಗಳಾದರೂ ಚಿಂತೆಯಿಲ್ಲವು, ಮೂರು ಜನ್ಮಗಳಲ್ಲೇ ಕಳೆದು ಹೋಗಲೆಂದು ಒಪ್ಪಿ ಜನ್ಮವೆತ್ತಿದ ದ್ವೇಷಿಗಳು. ಮೊದಲು ಜನ್ಮದಲ್ಲಿ ಹಿರಣ್ಯಕಶಿಪು ಹಿರಣ್ಯಾಕ್ಷರಾಗಿ, ಎರಡನೆಯ ಜನ್ಮದಲ್ಲಿ ರಾವಣ ಕುಂಭಕರ್ಣರಾಗಿ, ಮೂರ

ನೆಯ ಜನ್ಮದಲ್ಲಿ ಶಿಶುಪಾಲದಂತವಕ್ತ್ರರಾಗಿ ಹುಟ್ಟಿದರೆಂಬ ಪುರಾಣೋಕ್ತಿಗಳುಂಟು. ಆದುದರಿಂದ ಶಾಪಮೂಲಕ ದ್ವೇಷಿಗಳಾದುದರಿಂದ ಜನ್ಮವಾಗಿದನಂತರ ಮುಕ್ತಿ ಯುಂಟಾಯಿತು; ಇದರಿಂದ, ಇವರುಗಳ ಹಾಗೆ ಇತರರು ದ್ವೇಷದಿಂದ ಮುಕ್ತಿ ಹೊಂದಲಾದೀತೇ ? ದ್ವೇಷಿಸಿದರೆ, "ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ । ಕ್ಷಿಪಾಮ್ಯಜಸ್ರಮಶುಭಾನ್ ಆಸುರೇಷ್ವೇವ ಯೋನಿಷು (ಗೀ, ೧೬-೧೯) ಎಂದು ಹೇಳಿರುವ ಹಾಗೆ ಭಗವನ್ನಿಗ್ರಹವು ತಪ್ಪಿದ್ದಲ್ಲವು. ಇಲ್ಲಿ ದ್ವಿಷತಃ ಎಂಬ ಶಬ್ದವು ಬರೀ ಭಗವಂತನನ್ನು ಮಾತ್ರ ದ್ವೇಷಿಸುವವರಲ್ಲದೆ ತದೀಯರಾಗಿ ಪ್ರಪನ್ನರನ್ನೂ ದ್ವೇಷಿಸುವವರಿಗೂ ಅದೇ ಗತಿಯು. ಈ ಅರ್ಥವೂ ಕೂಡ ಜಯವಿಜಯರು ವೇತ್ರವನ್ನು ಸನಕಾದಿಗಳಮೇಲೆ ಪ್ರಯೋಗಿಸಿದ ಭಾಗವತಾಪ ಚಾರದಿಂದ ಪ್ರಾಪ್ತವಾದ ಮೂರು ಜನ್ಮಗಳಿಂದಲೇ ವ್ಯಕ್ತವು. ಋಷಿಗಳೇ ಪರ ಮಾತ್ಮನ ಅಂಗಸಂಗ ಸರಸ ಸಲ್ಲಾಪ ಮೊದಲಾದ ಅನುಭವಗಳನ್ನು ಪ್ರಾರ್ಥಿಸಿ ಗೋಪಿಕಾ ಸ್ತ್ರೀಯರಾಗಿ ಜನ್ಮವೆತ್ತಿರುತ್ತಾರೆಂಬ ಪುರಾಣ ಪ್ರಸಿದ್ಧಿಯುಂಟು. ವಸು ದೇವ, ಮಾಲಾಕಾರ ಮೊದಲಾದವರೆಲ್ಲಾ ಸಂಬಂಧಕ್ಕೆ ದೃಷ್ಟಾಂತವು. ಸ್ನೇಹಕ್ಕೆ ನಿದರ್ಶನವಾಗಿಯೂ ಯೂಯಂಎಂಬುವದರಿಂದ ಪಾಂಡವಾದಿಗಳನ್ನೂ, ಹಾಗೆಯೇ ಅಕ್ರೂರಾದಿಗಳನ್ನೂ ಕುಚೇಲರನ್ನೂ ಹೇಳಬಹುದು. ಸಂಬಂಧವೂ ಸಹ ಸದ್ಗತಿದಾ ಯಕವೆಂದು ಭಾವಿಸಿಯೇ, ಈಗಲೂ ಅನೇಕ ಪರಮೈಕಾನ್ತಿಗಳು, ಶ್ರೀರಂಗಾದಿ ದಿವ್ಯ ಕ್ಷೇತ್ರಗಳಲ್ಲಿ ಅಲ್ಲಿ ಬಿಜಮಾಡಿರುವ ಸ್ವಯಂ ವ್ಯಕ್ತ ದಿವ್ಯಮಙ್ಗಳವಿಗ್ರಹ ಸೇವೆಯು ದೊರೆಯುವದರಿಂದ, ದೇಹಾವಸಾನದವರೆಗೂ ವಸಿಸುವದಾಗಿ ಸಙ್ಕಲ್ಪಿಸಿರುತ್ತಾರೆ. ಆದುದರಿಂದಲೇ ಶ್ರೀ ಯತಿರಾಜರಿಗೂ "ಅತ್ರೈವ ಶ್ರೀರಂಗೇ ಸುಖಮಾಸ್ಸ್ವ" ಎಂಬ ಶ್ರೀ ರಂಗನಾಥನ ಸ್ವತಃ ಉಪದೇಶವು. ಈ ಭಾವವನ್ನೇ ಮುಂದೆ ಉಪಪಾದಿ ಸುತ್ತಾರೆ—ಅನುಕೂಲರಾಗಿದ್ದರಾಗಲಿ, ಅಥವಾ ಪ್ರತಿಕೂಲರಲ್ಲದೆ ಅನುಭಯ ರಾಗಿದ್ದರೂ ಸದ್ಗತಿಯುಂಟೇ ವಿನಾ, ಸಾಕ್ಷಾತ್ಪ್ರತಿಕೂಲರಿಗೆ ಸರ್ವಾತ್ಮನಾ "ಕ್ಷಿಪಾಮ್ಯಜಸ್ರಂ" ಎಂಬಲ್ಲಿ ಹೇಳಿರುವ ಹಾಗೆ ಇಲ್ಲವೆಂದು ಮುಂದಿನ ವಾಕ್ಯದಿಂದ ಉಪದೇಶಿಸುತ್ತಾರೆ. ಆಗಲಿ, ಹೀಗೆ ದ್ವೇಷಿಗಳಾಗಿದ್ದರೂ ಭಗವತ್ಕ್ಷೇತ್ರವಾಸಿಯಾಗಿ ದ್ದರೆ, ಆ ಕ್ಷೇತ್ರ ಮಹಿಮೆಯಿಂದಾಗಲಿ ಮೋಕ್ಷಪ್ರಾಪ್ತಿಯುಂಟೋ ? ಏಕೆಂದರೆ— ಜಾತೋವಾತ್ರ ಮೃತೋವಾಪಿ ಪಾಪಾನಾ ಮತಿಪಾಪಕೃತ್ । ಮಮ ಲೋಕೇ ಮವಾಪ್ನೋತಿ ನ ಪುನ ರ್ಗರ್ಭ ಮೃಚ್ಛತಿ" ಪುಣ್ಯಕ್ಷೇತ್ರಾದಿಗಳಲ್ಲಿ ಹುಟ್ಟಿ ದವನಾಗಲಿ ಮೃತನಾದವನಾಗಲಿ ಅವನು ಪಾಪಿಗಳಲ್ಲೆಲ್ಲಾ ಹೆಚ್ಚು ಪಾಪಮಾಡಿ ದವನಾದರೂ, "ದೂರಂಗಚ್ಛತಿ ದುಷ್ಕೃತಮ್" ಎಂದು ಹೇಳಿರುವದರಿಂದ ಪಾಪ ವೆಲ್ಲಾ ದೂರವಾಗಿ ಹೋಗಿಬಿಡುವದರಿಂದ, ಆತನಿಗೆ ಪುನಃ ಗರ್ಭಪ್ರವೇಶವಿಲ್ಲವು,

## ಕ್ಷೇತ್ರವಾಸಸ್ಯ ಮೋಕ್ಷೋಪಕಾರಕತ್ವಂ ಭಗವದ್ದ್ವೇಷಿಣಾಂ ನಾಸ್ತಿ.

**ಇಪ್ಪಡಿ ಭಗವತ್ ಕ್ಷೇತ್ರತ್ತಿಲ್ ಶರೀರ ವಿಶ್ಲೇಷಾದಿಗಳ್ ಮೋಕ್ಷೋಪಕಾರಕಙ್ಗಳಾಮೆನ್ಱದುವುಮ್ ಪಶ್ವಾದಿಗಳ್ಕ್ಕೈ ಪ್ಪೋಲೆಯಾಗಿಲುಮ್ ಪ್ರಾತಿಕೂಲ್ಯಮಿಲ್ಲಾದಾರ್ಕ್ಕು ಉಪಕಾರಕಙ್ಗಳಾಮೆನ್ಱಪಡಿ.**

---

ನನ್ನ ಲೋಕವಾದ ದಿವ್ಯ ವೈಕುಂಠವನ್ನು ಸಾರುವನು ಎಂದು ಹೇಳಿರುವದರಿಂದ ಯದ್ಯಪಿ ಪಾವನಕರವಾದವುಗಳೇ; ಆದರೆ ಅವರುಗಳು ಭಗವದ್ದ್ವೇಷಿಗಳಾದ ಪಕ್ಷದಲ್ಲಿ, ಎಂದಿಗೂ ಇಲ್ಲವೆಂದು ಹೇಳುತ್ತಾರೆ—"**ಗಙ್ಗಾದಿ ತೀರ್ಥೇಷು ವಸನ್ತಿ ಮತ್ಸ್ಯಾ ದೇವಾಲಯೇ ಪಕ್ಷಿಸಂಘಾಶ್ಚ ನಿತ್ಯಮ್ । ತೇ ಜ್ಞಾನಹೀನಾ ನಫಲಂ ಲಭನ್ತೇ ತೀರ್ಥಾನಿ ದೇವಾಯತನಾಶ್ಚ ಪುಣ್ಯಾಃ**" ಪುಣ್ಯಕ್ಷೇತ್ರಗಳೂ, ದೇವಾಲಯಗಳೂ, ಪುಣ್ಯ ತೀರ್ಥಗಳೂ, ಯದ್ಯಪಿ ಪಾವನಕರವಾದವುಗಳೇ, ಆದರೂ ಗಂಗಾದಿ ತೀರ್ಥಗಳಲ್ಲಿ ಮತ್ಸ್ಯಗಳುಂಟು; ಹಾಗೆಯೇ ದೇವಾಲಯಗಳ ವಿಮಾನಾದಿಗಳಲ್ಲಿ ಅನೇಕ ಪಕ್ಷಿಗಳೂ ವಸಿಸುತ್ತವೆ; ಇವುಗಳಿಗೆಲ್ಲಾ ಹಾಗಾದರೆ ಮೋಕ್ಷವೇ? ಎಂದರೆ ಅವುಗಳಿಗೆ ಜ್ಞಾನವಿಲ್ಲದುದರಿಂದ ಮೋಕ್ಷವಿಲ್ಲವೆಂದು ಹೇಳಲ್ಪಟ್ಟಿರುತ್ತದೆ. ಹೀಗೆ ಅನುಕೂಲತೆಯೂ ಪ್ರತಿಕೂಲತೆಯೂ ಎರಡೂ ಇಲ್ಲದ ಪ್ರಾಣಿಗಳಿಗೇ ಯಾವಾಗ ಮೋಕ್ಷವಿಲ್ಲವೆಂದಾಯಿತೋ, ಕೈಮುತಿಕ ನ್ಯಾಯದಿಂದ ಮಹಾ ಪ್ರತಿಕೂಲನಾಗಿ ಪರಮಾತ್ಮನನ್ನು ದ್ವೇಷಿಸುವ ಚಾರ್ವಾಕನಿದ್ದರೆ, ಆತನಿಗೆ ಎಂದಿಗೂ ಮೋಕ್ಷವಿಲ್ಲವೆಂಬುದು ಸಿದ್ಧವೆಂದು ಹೇಳುತ್ತಾರೆ—

### ಕ್ಷೇತ್ರವಾಸದ ಮೋಕ್ಷೋಪಕಾರಕ ಮಹಿಮೆಯು ಭಗವದ್ದ್ವೇಷಿಗಿಲ್ಲವು

**ಇಪ್ಪಡಿ** - ಈ ಮೇಲೆ ಉಪಪಾದಿಸಿದ ರೀತಿಯಲ್ಲಿ, **ಭಗವತ್ಕ್ಷೇತ್ರತ್ತಿಲ್** - ಭಗವಂತನ ಕ್ಷೇತ್ರಗಳಾದ ಶ್ರೀ ರಂಗಾದಿ ದಿವ್ಯದೇಶಗಳಲ್ಲಿ, ಇದು ಪುಣ್ಯ ತೀರ್ಥಗಳಾಗಿ ಮಹಿಮೆಯುಳ್ಳ ಗಂಗಾದಿತೀರವಾದ ಸ್ಥಳಗಳಿಗೂ ಉಪಲಕ್ಷಣವು, **ಶರೀರ ವಿಶ್ಲೇಷಾದಿಗಳ್**—ದೇಹವಿಯೋಗವೇ ಮೊದಲಾದವುಗಳೂ ಆದಿ ಶಬ್ದದಿಂದ ಜನನ, ವಾಸ ಮೊದಲಾದವುಗಳು ಹೇಳಲ್ಪಟ್ಟವು, **ಮೋಕ್ಷೋಪಕಾರಕಙ್ಗಳಾಮ್**-ಮೋಕ್ಷಕ್ಕೆ ಸಹಾಯಭೂತಗಳಾಗುವುವು **ಎನ್ಱದುವುಮ್**-ಎಂದು ಹೇಳಿರುವದೂ ಕೂಡ, **ಪಶ್ವಾದಿಗಳ್ಕ್ಕೈಪ್ಪೋಲೆ**-ಜ್ಞಾನರಹಿತಗಳಾದ ಆಕಳು ಮೊದಲಾದ ಪ್ರಾಣಿಗಳಹಾಗೆಯಾದರೂ, **ಪ್ರಾತಿಕೂಲ್ಯಮಿಲ್ಲಾದಾರ್ಕ್ಕು** - ಭಗವಂತನ ಆಜ್ಞೆಯಾದ ಶಾಸ್ತ್ರದಲ್ಲಿ ವಿಹಿತಗಳಾದವುಗಳಿಗೆ ಪ್ರತಿಕೂಲಾಚರಣೆ ಇಲ್ಲದಿರುವವರಿಗೆ, **ಉಪಕಾರಕಙ್ಗಳಾಮ್**

ವಿಪಕ್ಷೇ ಬಾಧಕಮಾಹ.

ಇಙ್ಙನಲ್ಲಾದುಪೋದು ಅಙ್ಗೇ ಭಗವತ್ಪ್ರಾತಿಕೂಲ್ಯಮ್ ಪಣ್ಣಿಪ್ಪುಗನ್ದು ಪಟ್ಟವರ್ಗಳುಕ್ಕುಮ್ ಮೋಕ್ಷಮುಂಡಾಗ ಪ್ರಸಙ್ಗಿಕ್ಕುಮ್. (೧) "ದುಷ್ಟೇ

---

ಎನ್ರಪಡಿ - ಮೋಕ್ಷಪ್ರಾಪ್ತಿಗೆ ಸಹಾಯವಾಗುತ್ತದೆ ಎಂದು ಹೇಳುವ ಅಭಿಪ್ರಾಯವು. ಸಹಾಯ ಹೇಗೆ ಎಂದರೆ ಸಾಕ್ಷಾತ್ತಾಗಿ ಆಜನ್ಮದಲ್ಲೇ ಉಪಾಯಾನುಷ್ಠಾನವನ್ನು ಮಾಡದಿದ್ದರೆ, ಉಪಾಯಾನುಷ್ಠಾನಕ್ಕೆ ಅನುಕೂಲವಾದ ಉತ್ತರ ಜನ್ಮವು ಪ್ರಾಪ್ತವಾಗಿ ಮೋಕ್ಷಸಿದ್ಧಿಯಾಗಬಹುದು ಎಂಬ ತಾತ್ಪರ್ಯವು. ಅಥವ ಅಲ್ಲಿಯೇ ವಾಸವಾಗುತ್ತಿದ್ದರೆ, ಇಂತಹ ಪ್ರತಿಕೂಲಾಚರಣೆಯು ಯಾವುದೂ ಇಲ್ಲದಿದ್ದರೆ ಪಾಪನಿವಾರಣೆಯ ಮೂಲಕ ಸಾತ್ತ್ವಿಕ ಸಂಭಾಷಣೆ, ಸದ್ಗುರುವಿನ ಪ್ರಾಪ್ತಿ, ಉಪಾಯಾನುಷ್ಠಾನಗಳು ಲಭಿಸಿ, ಅಲ್ಲಿಯೇ ದೇಹಾವಸಾನವಾಗಿ ಮೋಕ್ಷಪ್ರಾಪ್ತಿಯು ಸಿದ್ಧವು. ಹೀಗೀಗ ಮೋಕ್ಷೋಪಕಾರಕವು, ತಾನೇ ಸಾಕ್ಷಾತ್ತಾಗಿ ಮೋಕ್ಷದಾಯಕವಲ್ಲವೆಂದು ತಿಳಿಸುವದಕ್ಕಾಗಿಯೇ, **ಮೋಕ್ಷೋಪಕಾರಕಮಾಮ್** ಎಂಬ ಪ್ರಯೋಗವು. ಸಾಕ್ಷಾತ್ತಾಗಿ ಅವ್ಯವಹಿತ ಉಪಾಯಗಳು ಉಪಾಸನ, ಭರನ್ಯಾಸ, ಇವೆರಡರಲ್ಲಿ ಒಂದಿಲ್ಲದೆ ಮೋಕ್ಷವಿಲ್ಲವೆಂಬಂಶವನ್ನು ಯಾವಾಗಲೂ ಜ್ಞಾಪಕದಲ್ಲಿಡತಕ್ಕದ್ದಾಗಿರುತ್ತದೆ.

ಭಿನ್ನಾಭಿಪ್ರಾಯದಲ್ಲಿ ಬಾಧಕವನ್ನು ಹೇಳುತ್ತಾರೆ.

---

ಇಙ್ಙನಲ್ಲಾದು ಪೋದು - ಹೀಗೆ ಪ್ರತಿಕೂಲರಲ್ಲದೆ ಅನುಕೂಲರಾಗಿರುವವರಿಗೆ ಮಾತ್ರವೇ ಮೋಕ್ಷಕ್ಕೆ ಸಹಕಾರಿ ಎಂಬ ಅಭಿಪ್ರಾಯವಾಗದಿದ್ದರೆ, **ಅಙ್ಗೇ**- ಆ ದಿವ್ಯ ಕ್ಷೇತ್ರಗಳಲ್ಲೇ, **ಪ್ರಾತಿಕೂಲ್ಯಮ್ ಪಣ್ಣಿಪ್ಪುಗುನ್ದು ಪಟ್ಟವರ್** - ಪ್ರತಿಕೂಲಾಚರಣೆಗಳನ್ನು ಮಾಡುವದಕ್ಕಾಗಿಯೇ ಅಲ್ಲಿ ಇದ್ದುಕೊಂಡು ಇರುವವರಿಗೆ ಎಂದರೆ ಅಲ್ಲಿ ದೇವರ ಆಭರಣಗಳನ್ನು ಕದಿಯುವದಕ್ಕಾಗಿಯೂ, ಅಥವಾ ಅಲ್ಲಿ ಸೇವೆಗಾಗಿ ಬರುವ ಭಕ್ತರಾದ ಸ್ತ್ರೀಗಳೂ ಮತ್ತು ಮಕ್ಕಳುಗಳೂ ಧರಿಸಿರುವ ಆಭರಣಗಳನ್ನು ಕದಿಯುವದಕ್ಕಾಗಿಯೂ, ಇನ್ನೂ ಇತರ ಪಾಪಗಳನ್ನು ಮಾಡುವದಕ್ಕಾಗಿಯೂ ಅಲ್ಲಿಯೇ ಇರುವ ಪಾಪಿಗಳಿಗೂ, **ಮೋಕ್ಷಮುಂಡಾಗ ಪ್ರಸಙ್ಗಿಕ್ಕುಮ್** - ಮೋಕ್ಷವು ಉಂಟಾಗಬೇಕಾಗಿ ಬರುತ್ತದೆ. ಅಲ್ಲಿ ಮಹಾ ಪಾಪಿ

---

(೧) ಸಾತ್ವತ. ೭. ೧೨೦

**ನ್ದ್ರಿಯ ವಶಾಚ್ಚಿತ್ತಂ ನೃಣಾಂ ಯತ್ಕಲ್ಮಷೈ ರ್ವೃತಮ್ । ತದಂತಕಾಲೇ ಸಂಶುದ್ಧಿಂ ಯಾತಿ ನಾರಾಯಣಾಲಯೇ" ಎನ್ಗಿರ ಶ್ರೀ ಸಾತ್ವತ ವಚನ ಮುಮ್ ಕ್ಷೇತ್ರವಾಸಾದಿ ತತ್ಪರರಾನಾರ್ಕ್ಕು ಶಾಸ್ತ್ರವಿರೋಧ ಮಿಲ್ಲಾದ ಶಬ್ದಾದಿ ಪ್ರಾವಣ್ಯತ್ತಾಲೇ ಮುನ್ಬು ಭಗವತ್ಸಾಕ್ಷಾತ್ಕಾರಾದಿಗಳಿಲ್ಲೈಯೇ ಯಾಗಿಲುಮ್, ಅನ್ತಿಮಕಾಲತ್ತಿಲೇ ತೆಳಿವುಣ್ಡಾ ಮೆನ್ರು ಮಿನ್ವಳಿಯಿಲೇ ತತ್ಪರ ಮೆನ್ರುಮಿಡಮ್ ಪ್ರಕರಣಾದಿ ಸಿದ್ಧಮ್.**

---

ಗಳು **ಪ್ರತಿಕೂಲ**ರಾಗಿದ್ದು ಅಂತಹ ಪ್ರತಿಕೂಲಾಚರಣೆಯಿಂದಲೇ ಉದರ ಪೋಷಣೆಗಾಗಿ ಅಲ್ಲಿ ವಸಿಸುವವರೂ ಉಂಟು. ಅಂತಹ ಪಾಪಿಗಳಿಗೆಲ್ಲಾ ಮೋಕ್ಷ ಪ್ರಾಪ್ತಿಯುಂಟಾಗಬೇಕೆಂದಾಗುತ್ತದೆಂಬ ಭಾವವು.

ಆದರೆ "**ದುಷ್ಟೇಂದ್ರಿಯವಶಾತ್**" ಎಂಬ ಸಾತ್ವತ ವಚನವು ಮಹಾಪಾಪಿಗೂ ಕೂಡ ದೇಹಾವಸಾನಕಾಲದಲ್ಲಿ ಅಂತಹ ಕ್ಷೇತ್ರವಾಸವು, ಪಾವನತ್ವವನ್ನುಂಟು ಮಾಡುತ್ತದೆಂದು ಹೇಳಲ್ಪಟ್ಟಿದೆಯಲ್ಲಾ ಎಂದರೆ, ಅದೂ ಪ್ರಾತಿಕೂಲ್ಯವಿಲ್ಲದೆ ಆನುಕೂಲ್ಯವಿರುವ ಸಂದರ್ಭವೇ ಎಂದು ಹೇಳುತ್ತಾರೆ—(೧)"ದುಷ್ಟೇನ್ದ್ರಿಯವಶಾತ್ ಚಿತ್ತಂ" ಎಂಬುದು ಸ್ಥಾನವಿಶೇಷಾಧಿಕಾರದಲ್ಲಿ ೧೬೩೧ ನೆಯ ಪುಟದ ಉದಾಹೃತವು ಅರ್ಥವನ್ನು ಅಲ್ಲಿ ಪರಾಂಬರಿಸಬಹುದು. **ನೃಣಾಂ** - ಮನುಷ್ಯರ **ಯತ್** - ಯಾವ, **ಚಿತ್ತಂ** - ಪ್ರವೃತ್ತಿಮುಖವಾಗಿರುವ ಮನಸ್ಸು, **ದುಷ್ಟೇನ್ದ್ರಿಯ ವಶಾತ್** - ಅಹಂಕಾರದಿಂದ ಮದಿಸಿ ದುಷ್ಟವಾಗಿರುವ ವಿಶೇಷ ಶಬ್ದಾದಿ ಪ್ರಾವಣ್ಯವುಳ್ಳ ಇಂದ್ರಿಯಗಳ ಮೂಲಕವಾಗಿ, **ಕಲ್ಮಷೈ ರ್ವೃತಮ್** - ಮಹಾಪರಾಧಗಳಿಂದ ಆವರಿಸಲ್ಪಡುತ್ತದೆಯೋ, ಅಥವಾ "**ತಾವದಾರ್ತಿಸ್ತಥಾವಾಂಛಾ ತಾವನ್ಮೋಹಸ್ತಥಾಽಸುಖಮ್**" ಎಂದು ಹೇಳಿರುವಹಾಗೆ ಪರಮಾತ್ಮ ಸಾಕ್ಷಾತ್ಕಾರವಿಲ್ಲದುದೇ ಕಿಲ್ಬಿಷವು, ಅಥವಾ ಪರಮಾತ್ಮನನ್ನು ಸ್ಮರಿಸದೇ ಇರುವದೇ ಕಿಲ್ಬಿಷವು, **ತತ್** - ಅಂತಹ ಮನಸ್ಸು, **ಅಂತ ಕಾಲೇ** - ದೇಹತ್ಯಾಗಮಾಡುವ ಕೊನೆಯ ಕಾಲದಲ್ಲಿ, **ನಾರಾಯಣಾಲಯೇ** - ಶ್ರೀ ಮಹಾವಿಷ್ಣುವಿನ ದೇವಸ್ಥಾನದಲ್ಲಿ, **ಸಂಶುದ್ಧಿಂ ಯಾತಿ** - ಪವಿತ್ರತೆಯನ್ನು ಹೊಂದುತ್ತದೆ" ಎಂಬುವ ಶ್ರೀ ಸಾತ್ವತ ವಚನವನ್ನು, **ಕ್ಷೇತ್ರವಾಸಾದಿ ತತ್ಪರರಾನಾರ್ಕ್ಕು** - ಭಗವತ್ಕ್ಷೇತ್ರಗಳಲ್ಲಿ ವಾಸನೇ ಮೊದಲಾದವುಗಳಲ್ಲಿ ವಿಶೇಷ ಆಸಕ್ತಿಯುಳ್ಳವರಿಗೆ, ಆದಿ ಶಬ್ದದಿಂದ ಪುಣ್ಯತೀರ್ಥಗಳಲ್ಲಿ ಅವಗಾಹನ, ನಾಮ ಸಂಕೀರ್ತನಗಳು ಹೇಳಲ್ಪಟ್ಟವು, **ಶಾಸ್ತ್ರವಿರೋಧಮಿಲ್ಲಾದ** ಶಾಸ್ತ್ರವಿರೋಧವಿಲ್ಲದ, **ಶಬ್ದಾದಿ ಪ್ರಾವಣ್ಯತ್ತಾಲೇ** ಶಬ್ದವೇ ಮೊದಲಾದವುಗಳಲ್ಲಿರುವ ಮಮತೆಯಿಂದ, **ಮುನ್ಬು**-**ಇವಕ್ಕೆ**

ಮೊದಲು, ಭಗವತ್ಸಾಕ್ಷಾತ್ಕಾರಾದಿಗಳಿಲ್ಲದೆಯೇ ಯಾಗಿಲುವಸ್-ಭಗವತ್ ಸಾಕ್ಷಾತ್ಕಾರಾದಿಗಳು ಇಲ್ಲದಿದ್ದರೂ, ಅನ್ತಿಮಕಾಲತ್ತಿಲ್-ದೇಹಾವಸಾನವನ್ನು ಹೊಂದುವ ಕಾಲದಲ್ಲಿ, ತಿಳಿವು ಉಂಡಾಮೆನ್ರು-ಪರಮಾತ್ಮನ ಜ್ಞಾನವನ್ನುಂಟುಮಾಡುವದೆಂದು, ಇವ್ವಳಿವಿಲೇ - ಇಷ್ಟು ಮಾತ್ರಕ್ಕೆ, ತತ್ಪರನೆನ್ರು ವಿಡನ್ - ಆ ಕ್ಷೇತ್ರ ವಾಸದ ಮಾಹಾತ್ಮ್ಯೆಯನ್ನು ಕುರಿತ ಶ್ಲೋಕಾಭಿಪ್ರಾಯವೆಂಬುದು, ಪ್ರಕರಣಾದಿ ಸಿದ್ಧಮ್-ಪ್ರಕರಣವೇ ಮೊದಲಾದವುಗಳಿಂದ ಸಿದ್ಧವು. "ದುಷ್ಟೇಂದ್ರಿಯ ವಶಚ್ಚಿತ್ತಂ" ಎಂಬ ಶ್ಲೋಕದಲ್ಲೂ ನೃಣಾಂ ಎಂಬುವಕ್ಕೆ ಭಗವದ್ದ್ವೇಷಿಗಳಲ್ಲದ ನೃಣಾಂ ಎಂದ ಇಟ್ಟುಕೊಳ್ಳಬೇಕೆಂಬ ತಾತ್ಪರ್ಯವು. ಆಗಲಿ, ಭಗವದ್ದ್ವೇಷಿಯಲ್ಲದವನು ವಿಷಯಪ್ರಾವಣ್ಯದಲ್ಲೇ ಇದ್ದು ಭಗವಂತನನ್ನು ಧ್ಯಾನಿಸಿ, ಭಗವತ್ ಸಾಕ್ಷಾತ್ಕಾರವಿಲ್ಲದಿದ್ದರೂ ಅನ್ತಿಮ ಕಾಲವಲ್ಲಿ ಪರಮಾತ್ಮಸಾಕ್ಷಾತ್ಕಾರಉಂಟಾಗಿ ಸದ್ಗತಿಯುಂಟಾಗುತ್ತದೆ; ಎಂದರೆ, ಈ ಕ್ಷೇತ್ರವಾಸವು ಹಾಗಾದರೆ ಭಕ್ತಿಯೋಗ ಭರನ್ಯಾಸ ರೂಪಗಳಾದ ಉಪಾಯಾನುಷ್ಠಾನಗಳ ಆವಶ್ಯಕತೆ ಯಿಲ್ಲದೆಯೇ ಅನ್ತಿಮಸ್ಮೃತಿ ಮತ್ತು ಪರಮಪದವನ್ನು ಕೊಡುತ್ತದೆ ಎಂಬ ಭಾವವಲ್ಲವು. ಹಾಗೆ ಕೊಡುತ್ತದೆಂದರೆ ಈ ಉಪಾಯಾನುಷ್ಠಾನಕ್ಕೆ ವೈಯರ್ಥ್ಯಉಂಟಾಗಲಿಲ್ಲವೇ? ಎಂಬೀ ಆಕ್ಷೇಪಣೆಗೆ ಸಮಾಧಾನಾರ್ಥವಾಗಿ ಹೇಳುತ್ತಾರೇನೆಂದರೆ—ದೇಹಾವಸಾನದವರೆಗೂ ಬಹು ಕಷ್ಟವಾದ ಭಗವನ್ನಿದಿ ಧ್ಯಾಸನದಿಂದ ಅನ್ತಿಮಸ್ಮೃತಿಯನ್ನು ಸಾಧಿಸತಕ್ಕದ್ದಾಗಿರುತ್ತದೆ; ಅದೂ ಅಲ್ಲದೆ ಪಾಪಗಳು ಕಳೆಯದೆ ವಿಷಯ ಪ್ರಾವಣ್ಯದಿಂದ ದೂಷಿತವಾದ ಮನಸ್ಸಿನ ಮೂಲಕ ನಿದಿಧ್ಯಾಸನವೇ ಉಂಟಾಗದೇ ಇರಬಹುದು; ಅಂತಹ ಸಂದರ್ಭಗಳಲ್ಲಿ ಯೋಗ ನಿಷ್ಪತ್ತಿ, ಅನ್ತಿಮಸ್ಮೃತಿ, ಮೋಕ್ಷ ಪ್ರಾಪ್ತಿಗಳನ್ನುಂಟುಮಾಡುವ ವಿಶೇಷವುಳ್ಳದ್ದು ಈ ಕ್ಷೇತ್ರವಾಸದ ಮಹಿಮೆಯು ಎಂದು "ಯಂ ಯೋಗಿನಃ" ಎಂದು ಸಪ್ರಮಾಣವಾಗಿ ಹೇಳುವ ಮುಂದಿನ ಶ್ಲೋಕದ ಮೂಲಕವಾಗಿ ಎಂದು ತಿಳಿಯತಕ್ಕದ್ದು. ಹಿಂದೆ"ಪ್ರಪನ್ನಾದನ್ಯೇಷಾಂ"(ಅಧಿಕಾರಿ ವಿಭಾಗಾಧಿಕಾರ)ಎಂಬ ಶ್ಲೋಕದಲ್ಲಿ ಮೋಕ್ಷಕ್ಕೆ ಅಧಿಕಾರಿಗಳಿಬ್ಬರೆಂದೂ, ಅವುವರಿಂದ ಉಪಾಯಗಳು ಭಕ್ತಿ ಪ್ರಪತ್ತಿಗಳೆರಡೇ ಎಂದೂ ವ್ಯಕ್ತವಾಗಿ ತಿಳಿಸಿರುತ್ತಾರೆ. ಹೀಗಿರುವಾಗ ಈ ನಾಮ ಸಂಕೀರ್ತನೆ, ಪುಣ್ಯಕ್ಷೇತ್ರವಾಸಾದಿಗಳೂ ಸಾಕ್ಷಾತ್ತಾಗಿಯೇ ಈ ಉಪಾಯಗಳ ಅಪೇಕ್ಷೆಯಿಲ್ಲದೆ ಅನ್ತಿಮಸ್ಮೃತಿ ಮೊದಲಾದುವನ್ನುಂಟುಮಾಡಿ ಮೋಕ್ಷಪ್ರದಗಳೇ? ಎಂಬ ಸಂದೇಹದಲ್ಲಿ, ಉಪಾಯಾನುಷ್ಠಾನವೂ ಆವಶ್ಯಕವೇ; ಈ ಕ್ಷೇತ್ರವಾಸಾದಿಗಳು ಉಪಕಾರಗಳಾಗಿ ಎರಡು ವಿಧಗಳಾದ ಉಪಾಯ ನಿಷ್ಠರಿಗೂ ಅಂತಿಮಸ್ಮೃತಿ ಮೊದಲಾದವುಗಳನ್ನುಂಟುಮಾಡಬಹುದೆಂದು ತಿಳಿಸುತ್ತಾರೆ; ಇದೀಗ ಕ್ಷೇತ್ರವಾಸದ ಮಹಿಮೆ ಎಂದು ಮುಂದೆ ಹೇಳುತ್ತಾರೆ—

## ಭರನ್ಯಾಸನಿಷ್ಠಾನಾಂ ಕ್ಷೇತ್ರವಾಸಮಹಿಮ್ನಾ ಅಯತ್ನೇನೈವ ಅನ್ತಿಮಸ್ಮೃತಿರ್ಭವತಿ

(೧) "ಯಂ ಯೋಗಿನಃ ಪ್ರಾಣನಿಯೋಗಕಾಲೇ ಯತ್ನೇನ ಚಿತ್ತೇ ವಿನಿವೇಶಯನ್ತಿ" ಎನ್ನುಕೊಲ್ಲಪ್ಪಡುಗಿರ ಸ್ವಯತ್ನಾಪೇಕ್ಷೈಯರ, ಅನ್ತಿಮ ಕಾಲತ್ತಿಲೇ ಇ(ಅ) ವರುಗಳುಕ್ಕು ತೆಳಿವು ವರುಗಿರ ವಿದುವೇಃತ್ರಾವನ್. ಇದು

---

### ಕ್ಷೇತ್ರವಾಸ ಮಹಿಮೆಯಿಂದ ತಾನಾಗಿಯೇ ಅನ್ತಿಮಸ್ಮೃತಿಯು ಭರನ್ಯಾಸನಿಷ್ಠರಿಗೆ ಲಭಿಸುತ್ತದೆ.

ಕ್ಷೇತ್ರವಾಸಮಹಿಮೆಯು ಎಷ್ಟರಮಟ್ಟಿಗೆ ಎಂದರೆ ಭಕ್ತಿಯೋಗ ನಿಷ್ಠನಿಗೆ ಅನ್ತಿಮಸ್ಮೃತಿಯು ಆವಶ್ಯಕವು, ಆತನು ಪ್ರಯತ್ನಪಟ್ಟು ಅನ್ತಿಮಸ್ಮೃತಿಯನ್ನುಂಟು ಮಾಡಿಕೊಳ್ಳಬೇಕೆಂದೂ, ಆದರೆ ಭರನ್ಯಾಸ ನಿಷ್ಠನಿಗಾದರೋ ಈ ಭರನ್ಯಾಸಮಹಿಮೆಯಿಂದಲೇ ಭಗವಂತನು ತಾನೇ ಅನ್ತಿಮಸ್ಮೃತಿಯನ್ನು ದಯಪಾಲಿಸುತ್ತಾನೆಂದೂ ಹಿಂದೆ ಹೇಳಲ್ಪಟ್ಟಿರುವುದನ್ನು ಜ್ಞಾಪಿಸುವವರಾಗಿ ಭಕ್ತಿಯೋಗ ನಿಷ್ಠರಿಗೆ ಬೇಕಾದ ಅನ್ತಿಮಸ್ಮೃತಿಯು ಈ ಕ್ಷೇತ್ರವಾಸ ಮಾಹಾತ್ಮ್ಯೆಯಿಂದ ತುಂಬಾ ಪ್ರಯತ್ನವಿಲ್ಲದೆ ತಾನಾಗಿಯೇ ಲಭಿಸುತ್ತದೆಂಬೂ, ಇಷ್ಟು ಮಾತ್ರವೇ ಕ್ಷೇತ್ರವಾಸದ ಮಹಿಮೆ ಎಂದು ತಿಳಿಸುತ್ತಾರೆ—"ಯೋಗಿನಃ - ಭಕ್ತಿಯೋಗ ನಿಷ್ಠರು, ಪರಮಾತ್ಮೋಪಾಸಕರು, ಪ್ರಾಣನಿಯೋಗಕಾಲೇ - ದೇಹಾವಸಾನ ಕಾಲದಲ್ಲಿ, ಯತ್ನೇನ - ಪ್ರಯಾಸದಿಂದ, ಯಂ - ಯಾವ ಪರಮ ಪುರುಷನನ್ನು, ಚಿತ್ತೇ – ಮನಸ್ಸಿನಲ್ಲಿ, ವಿನಿವೇಶಯನ್ತಿ – ಚೆನ್ನಾಗಿ ಇಡುತ್ತಾರೋ" ಎನ್ನು ಕೊಲ್ಲಪ್ಪಡುಗಿರ - ಎಂದು ಹೇಳಲ್ಪಡುವ, ಸ್ವಯತ್ನಾಪೇಕ್ಷೈಯರ - ತನ್ನ ಪ್ರಯತ್ನದ ಅಪೇಕ್ಷೆಯುಳ್ಳವರನ್ನೆ, ಅನ್ತಿಮಕಾಲತ್ತಿಲೇ – ದೇಹಾವಸಾನಕಾಲದಲ್ಲಿ, ಇವರುಗಳುಕ್ಕು - ಈ ಕ್ಷೇತ್ರವಾಸಿಗಳಾಗಿ ಭಕ್ತಿಯೋಗಾದಿ ಉಪಾಯ ನಿಷ್ಠರುಗಳಿಗೆ, ವರುಗಿರವಿದುವೇತ್ತಮ್ - ಬರುವಂತಾದ್ದೇ ಅತಿಶಯವು, ಮಾಹಾತ್ಮ್ಯೆಯು. ಪುಣ್ಯಕ್ಷೇತ್ರವಾಸದಿಂದ ತುಂಬಾ ಪ್ರಯತ್ನವಿಲ್ಲದೆ ದೇಹಾವಸಾನ ಕಾಲದಲ್ಲಿ ಅನ್ತಿಮಸ್ಮೃತಿಯು ಉಪಾಯನಿಷ್ಠರಿಗೆ ಪ್ರಾಪ್ತವಾಗುತ್ತದೆ. ಇದೀಗ ಪುಣ್ಯಕ್ಷೇತ್ರವಾಸದ ಮಹಿಮೆಯು ಎಂಬ ಭಾವವು.

ಈ ಪುಣ್ಯಕ್ಷೇತ್ರವಾಸದ ಮಹಿಮೆಯು ಭಕ್ತಿಯೋಗ ನಿಷ್ಠನಿಗೆ ಮಾತ್ರವೇ ಅಲ್ಲವು. "ಕೇವಲಂ ಮದೀಯಯಾ ದಯಯಾ" ಎಂದು ಶ್ರೀರಂಗನಾಥನು ಶ್ರೀಭಾಷ್ಯಕಾರರಿಗೆ ಅನುಗ್ರಹಿಸಿದುದೂ, ಇದೇ ಅಭಿಪ್ರಾಯವುಳ್ಳದೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ.— ಇದು-ಕ್ಷೇತ್ರವಾಸದಿಂದುಂಟಾಗುವ ಯೋಗ್ಯತೆ ಅನಾ

(೨)"ಕೇವಲಂ ಮದೀಯಯಾ ದಯಯಾಽತಿ ಪ್ರಬುದ್ಧಃ" ಎನ್ರು ಪ್ರಪನ್ನರ್ ವಿಷಯತ್ತಿಲುಮ್ ಪ್ರದರ್ಶಿತಮ್.

ವ್ಯಾಸ ಅಂತಿಮ ಸ್ಮೃತಿಯು, **ಪ್ರಪನ್ನರ ವಿಷಯತ್ತಿಲುಮ್** - ಭರನ್ಯಾಸನಿಷ್ಠರ ವಿಷಯದಲ್ಲೂ, **ಪ್ರದರ್ಶಿತಮ್** - ಉಂಟಾಗುವದೆಂದು ಹೇಳಲ್ಪಟ್ಟಿತು. ಯಾರಿಂದ ಎಲ್ಲಿ ಎಂಬರೆ? ಶ್ರೀ ಯತಿವರ್ಯರು ಶರಣಾಗತಿ ಗದ್ಯದಲ್ಲಿ ಹೇಳುತ್ತಾರೆ.— ಗದ್ಯವು ಶ್ರೀ ಯತಿವರ್ಯರಿಗೂ ಶ್ರೀ ರಂಗನಾಥನಿಗೂ ನಡೆದ ಸಂವಾದರೂಪದಲ್ಲಿ ರುವದರಿಂದ, ಇದು ಶ್ರೀ ರಂಗನಾಥನ ವಾಕ್ಯವು. ಶ್ರೀ ಯತಿವರ್ಯರು ದಿವ್ಯ ವೈಕುಂಠದಲ್ಲಿ ಅವರಿಗೆ ಅನವರತ ಕೈಂಕರ್ಯವನ್ನು ಮಾಡುವ ಪ್ರಾಪ್ತಿಯನ್ನು ಪ್ರಾರ್ಥಿಸಿದುದರಿಂದ, ಅದಕ್ಕೆ ಶ್ರೀರಂಗನಾಥ ಸ್ವಾಮಿಯು ಹೇಳುತ್ತಾರೇನೆಂದರೆ, **ಯಾವಚ್ಛರೀರಪಾತಂ ಶ್ರೀರಂಗೇ ಸುಖಮಾಸ್ಸ್ವ"** ನಿನ್ನ ದೇಹಾವಸಾನದವರೆಗೂ ಈ ಪುಣ್ಯಕ್ಷೇತ್ರವಾದ ಶ್ರೀರಂಗದಲ್ಲೇ ಇದ್ದುಬಿಡು, **"ಸ್ವ ಶರೀರಪಾತ ಸಮಯೇ ತು ಕೇವಲಂ ಮದೀಯಯೈವ ದಯಯಾಽತಿಪ್ರಬುದ್ಧಃ ಮಾಮೇವಾವಲೋಕಯನ್"** ಇನ್ನು ಯಾವುದರ ಅಪೇಕ್ಷೆಯೂ ಇಲ್ಲದೆ ಕೇವಲ ನನ್ನ ಸಂಬಂಧವಾದ ದಯೆಯಿಂದಲೇ, **ಅತಿಪ್ರಬುದ್ಧಃ** - ತುಂಬಾ ತಿಳುವಳಿಕೆಯನ್ನು ಹೊಂದಿದವನಾಗಿ, ನನ್ನನ್ನೇ ಪ್ರತ್ಯಕ್ಷೀಕರಿಸುತ್ತಾ, ಮುಂದೆ ಸ್ಥೂಲ ಸೂಕ್ಷ್ಮರೂಪ ಪ್ರಕೃತಿಯ ಸಂಬಂಧವನ್ನು ಕಳೆದುಕೊಂಡವನಾಗಿ, ದಿವ್ಯ ವೈಕುಂಠವನ್ನು ಸೇರಿ,ನನ್ನ ಕೈಂಕರ್ಯಗಳನ್ನೇ ಮಾಡುವಿ, ಸಂಶಯವಿಲ್ಲವೆಂದು ಅಪ್ಪಣೆ ಕೊಡಿಸಿದರು. ಈ ಪ್ರಮಾಣದಿಂದ ಭರನ್ಯಾಸ ನಿಷ್ಠನಿಗೂ ಕೇವಲ ಪರಮಪುರುಷನ ಕೃಪೆಯಿಂದಲೇ ಅಂತಿಮಸ್ಮೃತಿಯು ಲಭಿಸುತ್ತದೆಂದು ಹಿಂದೆ ಹೇಳಿರುವನ್ನೇ ಜ್ಞಾಪಕಕ್ಕೆ ತಂದಿರುತ್ತಾರೆ. ಈ ಅಭಿಪ್ರಾಯವು, ನಿರ್ಯಾಣಾಧಿಕಾರದಲ್ಲಿ ಉಪಪಾದಿತವು, ೧೭೨೬—೭೭೩೪ಲ ಪುಟಗಳನ್ನು ಪರಾಂಬರಿಸಿ. ವರಾಹ ಪುರಾಣ ವಾಕ್ಯಗಳಾದ **"ಸ್ಥಿತೇ ಮನಸಿ ಸುಸ್ವಸ್ಥೇ"** ಎಂದಾರಂಭಿಸಿ ಹೇಳಿರುವದರಲ್ಲೂ ಈ ಅಭಿಪ್ರಾಯವು ವ್ಯಕ್ತವು. ೧೭೩೧-೨ನೆಯ ಪುಟಗಳನ್ನು ನೋಡಿ. ಹೀಗೆ ಹೇಳಿರುವದರಿಂದ **ಪ್ರಪನ್ನರ್ ವಿಷಯತ್ತಿಲುಮ್ ಪ್ರದರ್ಶಿತಮ್** ಎಂದು ಹೇಳಲ್ಪಟ್ಟಿತು. ಆದರೆ ಭಕ್ತಿಯೋಗನಿಷ್ಠನಿಗೂ ಭರನ್ಯಾಸ ನಿಷ್ಠನಿಗೂ ಈ ಅನ್ತಿಮಸ್ಮೃತಿ ವಿಷಯದಲ್ಲಿರುವ ವೈಲಕ್ಷಣ್ಯವೇನು? ಎಂದರೆ; ಭಕ್ತಿಯೋಗನಿಷ್ಠನಿಗೆ ಅನ್ತಿಮಸ್ಮೃತಿಯು ಆವಶ್ಯಕವಾದುದರಿಂದ ಪ್ರಯತ್ನಪೂರ್ವಕ ಹೊಂದತಕ್ಕದ್ದಾಗಿದೆ; ಆದರೆ ಪುಣ್ಯಕ್ಷೇತ್ರವ್ಯತಿರಿಕ್ತ ಸ್ಥಳಗಳಲ್ಲಿ ಕಷ್ಟಸಾಧ್ಯವು; ಪುಣ್ಯಕ್ಷೇತ್ರದಲ್ಲಾದರೋ ಅನಾ

(೨) ಶರಣಾಗತಿಗದ್ಯದ ಅಂತ್ಯಭಾಗ.

**ಪುಣ್ಯಕ್ಷೇತ್ರೇ ಪ್ರಾತಿಕೂಲ್ಯಾಚರಣೇ ಅಧಿಕಾನಿಷ್ಟಜನಕತ್ವರೂಪಂ ಸಿದ್ಧೋಪಾಯ ಪ್ರಭಾವನಾಹ**

**ಅಕ್ಕೈಯಾಲ್ ಭಗವತ್ಪ್ರತಿಕೂಲರ್ಕ್ಕು ಪ್ರಾತಿಕೂಲ್ಯಶೇಷಮಾನ ರೂಪ, ನಾಮ, ಕ್ಷೇತ್ರವಾಸ, ಸಂಕೀರ್ತನಾದಿಗಳ್ ತಞ್ಜಮಾಗಾದು ; ಪುಣ್ಯಕ್ಷೇತ್ರ ಙ್ಗಳಿಲ್ ಪಣ್ಣುಂ ಪ್ರತಿಕೂಲಾಚರಣಙ್ಗಳ್ ಮಿಗವುಮ್ ಬಾಧಕಙ್ಗಳಾ ಮೆನ್ನು ಮಿಡಮ್ ಬಹುಶಾಸ್ತ್ರಸಿದ್ಧಮ್.**

---

ಯಾಸವಾಗಿ ಲಭಿಸುತ್ತದೆಂಬ ಭಾವವು ; ಭರನ್ಯಾಸ ನಿಷ್ಠನಿಗಾದರೋ ಪುಣ್ಯಕ್ಷೇತ್ರ ವಾಗಿರಲಿ, ಇಲ್ಲದೇ ಇರಲಿ, ಪರಮ ಪುರುಷನ ಕೃಪೆಯಿಂದಲೇ ಇದು ಲಭಿಸುತ್ತದೆ ಎಂಬ ಭಾವವು.

ಆದುದರಿಂದ ಪರಮ ಪುರುಷನನ್ನು ಆಶ್ರಯಿಸಿ ಉಪಾಯಾನುಷ್ಠಾನಮಾಡಿ ಅನುಕೂಲರಾಗಿರುವವರಿಗೆ ಮಾತ್ರವೇ, ಮಹತ್ತಾದ ಕ್ಷೇತ್ರವಾಸಿಗಳು ಎಂಬ ಭಾವನೆಯಿಂದ ಆತನು ಅನುಗ್ರಹಿಸುವನೇ ವಿನಾ ಪ್ರತಿಕೂಲರಾಗಿರುವವರಿಗೆ ಎಂದಿಗೂ ಕ್ಷೇತ್ರವಾಸದ ಮಾಹಾತ್ಮ್ಯೆಯು ಇಲ್ಲವೆಂದು ನಿಗಮನಮಾಡಿ ಹೇಳುವ ಸಂದರ್ಭದಲ್ಲಿ, ಅಂತಹ ಪ್ರತಿಕೂಲರಾಗಿ ಅಂತಹ ಪುಣ್ಯಸ್ಥಳಗಳಲ್ಲಿ ಅಪರಾಧಗಳನ್ನೆಸಗುವರಿಗೆ ಶಿಕ್ಷೆಯು ಆಧಿಕ್ಯ ವುಂಟೆಂದು ತಿಳಿಸುತ್ತಾರೆ—

**ಪುಣ್ಯಕ್ಷೇತ್ರದಲ್ಲಿ ಪ್ರಾತಿಕೂಲ್ಯಾಚರಣೆಯು ವಿಶೇಷಾನರ್ಥದಾಯಿಕವೆಂದು ಸಿದ್ಧೋಪಾಯನ ಪ್ರಭಾವನನ್ನು ಹೇಳುತ್ತಾರೆ.**

**ಅಗೈಯಾಲ್** - ಭಗವಂತನನ್ನಾಶ್ರಯಿಸಿ ಉಪಾಯಾನುಷ್ಠಾನಮಾಡಿದ ಅನುಕೂಲರಿಗೆ ಮಾತ್ರವೇ ಪುಣ್ಯಕ್ಷೇತ್ರವಾಸವು ಪರಮ ಪುರುಷನ ಕೃಪಾಪ್ರಭಾವದಿಂದ ಅಂತಿಮ ಸ್ಮೃತಿ ಜನಕವೆಂದಾದುದರಿಂದ, **ಭಗವತ್ಪ್ರತಿಕೂಲರ್ಕ್ಕು** - ಭಗವಂತನಿಗೆ ವಿರೋಧವಾಗಿ ನಡೆಯುವವರೆಗೆ, **ಪ್ರಾತಿಕೂಲ್ಯಶೇಷಮಾನ** - ಇಂತಹ ಪ್ರಾತಿಕೂಲ್ಯಕ್ಕೆ ಅಧೀನವಾಗಿ ಸಂಬಂಧಿಸಿರುವ, **ರೂಪ** - ದ್ವಾದಶೋರ್ಧ್ವಪುಂಡ್ರ ಶಂಖ ಚಕ್ರಾಂಕನ ಮೊದಲಾದವೂ, **ನಾಮ** - ಕೃಷ್ಣ, ರಾಮ, ವಾಸುದೇವ, ಶ್ರೀನಿವಾಸ ಇತ್ಯಾದಿ ಭಗವನ್ನಾಮವೂ, ಕ್ಷೇತ್ರವಾಸ, ಭಗವನ್ನಾಮ ಸಂಕೀರ್ತನ ಮೊದಲಾದವುಗಳು, ಆದಿ ಶಬ್ದದಿಂದ ಪುಣ್ಯ ತೀರ್ಥಾವಗಾಹನವೂ, ಪುರಾಣ ಶ್ರವಣ, ದೇವಾಲಯ ಕೈಙ್ಕರ್ಯಾದಿಗಳು ಹೇಳಲ್ಪಟ್ಟವು, ಇವುಗಳು, **ತಞ್ಜಮಾಗಾದು** - ಶ್ರೇಯಸ್ಸಾಧಕಗಳಾಗುವದಿಲ್ಲವು ; ಅನಿಷ್ಟಗಳು ಪ್ರಾತಿಕೂಲ್ಯಾಚರಣೆಯಿಂದ ತಪ್ಪಿದ್ದಲ್ಲವು. ಪ್ರಾತಿಕೂಲ್ಯಾಚರಣೆಯು ಅಧರ್ಮವು, ಅದರ ಫಲವನ್ನು ಈ ಅಲ್ಪ ಧರ್ಮಗಳಾದ ರೂಪ ನಾಮ ಕ್ಷೇತ್ರ ವಾಸ ಸಂಕೀರ್ತನಾದಿಗಳು ಹೋಗ

ಓಡಿಸಲಾರವು ಎಂಬ ಭಾವವು. ಲೋಕದಲ್ಲೂ ಕೂಡ ಅಭಿಜಾತ್ಯ ಪಾಂಡಿತ್ಯ, ಧನಾದಿ ಬಲವಿದ್ದರೂ ಅಂತವನು ಅಪರಾಧಗಳನ್ನೆಸಗಿದರೆ ಹೇಗೆ ವಿಶೇಷ ದಂಡ್ಯನೋ, ಹಾಗೆಯೇ ಕ್ಷೇತ್ರವಾಸಿಯ ಅಪರಾಧವೂ ಕೂಡ ವಿಶೇಷವಾಗಿ ದಂಡಿಸಲು ಯೋಗ್ಯವಾದುದು. ಪರಮ ಪುರುಷನು ತನ್ನ ಭಾಗವತರು ವಸಿಸುವ ಸ್ಥಳದಲ್ಲಿ ಧರ್ಮಾತಿಕ್ರಮಗಳನ್ನು ನಡೆಸಿದನೇ ಎಂಬದಾಗಿ ಅಂತವನನ್ನು ವಿಶೇಷ ದಂಡನೆಗೆ ಗುರಿಮಾಡುತ್ತಾನೆಂಬ ಭಾವವು. ಇದನ್ನೇ ಮುಂದಿನ ವಾಕ್ಯದಿಂದ ಉಪಪಾದಿಸುತ್ತಾರೆ—ಪುಣ್ಯಕ್ಷೇತ್ರಙ್ಙಳಿಲ್ ಪಣ್ಣುಂ ಪ್ರತಿಕೂಲಾಚರಣಙ್ಙಳ್ - ಪುಣ್ಯಕ್ಷೇತ್ರಗಳಲ್ಲಿ ಮಾಡುವ ಅಕೃತ್ಯಗಳು, ಮಿಗವುಮ್ - ಹೆಚ್ಚಾಗಿ, ಬಾಧಕಙ್ಙಳಾಮ್ - ಅನರ್ಥವನ್ನುಂಟುಮಾಡುವವು, ಎನ್ನುಮಿಡಮ್ - ಎಂಬುವ ಸಂದರ್ಭವು, ಬಹುಶಾಸ್ತ್ರಸಿದ್ಧಮ್ - ಅನೇಕ ಶಾಸ್ತ್ರಗಳಿಂದ ಸಿದ್ಧವಾದುದು. ಅಂತಹ ಶಾಸ್ತ್ರವಚನಗಳಲ್ಲಿ ಒಂದೆರಡನ್ನು ವ್ಯಾಖ್ಯಾತೃಗಳು ಉದಾಹರಿಸಿರುತ್ತಾರೆ—ತೀರ್ಥೇಪಾಪಂ ನಕುರ್ವೀತ ವಿಶೇಷಾತ್ತು(ಚ) ಪ್ರತಿಗ್ರಹಮ್ । ದುರ್ಜರಂ ಪಾತಕಂ ತೀರ್ಥೇ ದುರ್ಜರಶ್ಚ ಪ್ರತಿಗ್ರಹಃ॥" ಎಂದೂ ಅತ್ರ ಯತ್ಕ್ರಿಯತೇ ಕರ್ಮ ಪುಣ್ಯಪಾಪಾತ್ಮಕಂ ನರೈಃ । ಜ್ಞಾನತೋಽಜ್ಞಾನತೋವಾಪಿ ತತ್ಸಮೃದ್ಧ್ಯತಿ ಕೋಟಿಶಃ" ಎಂದೂ ಹೇಳಲ್ಪಟ್ಟಿವೆ. ಇವುಗಳ ಅರ್ಥವೇನೆಂದರೆ, "ಪುಣ್ಯತೀರ್ಥಸ್ಥಳದಲ್ಲಿ ಪಾಪವನ್ನು ಮಾಡಬಾರದು ; ದಾನಪ್ರತಿಗ್ರಹವನ್ನೂ ಮುಖ್ಯವಾಗಿ ಮಾಡಬಾರದು; ಏಕೆಂದರೆ ಪುಣ್ಯತೀರ್ಥಸ್ಥಳಗಳಲ್ಲಿ ಮಾಡಿದ ಪಾಪವು ಕಳೆದುಹೋಗುವುದು ಕಷ್ಟವು, ಹಾಗೆಯೇ ಪ್ರತಿಗ್ರಹದಿಂದುಂಟಾಗುವ ಅನರ್ಥವು ವರುಣಮಂತ್ರೋಚ್ಚಾರಣೆಯ ಮೂಲಕ ಅವಗಾಹನೆಮಾಡಿದರೂ ಹೋಗಲು ಕಷ್ಟವಾದುದು." "ಈ ಪುಣ್ಯಕ್ಷೇತ್ರದಲ್ಲಿ ಯಾವ ಪುಣ್ಯಪಾಪರೂಪ ಕರ್ಮವು ಜ್ಞಾನದಿಂದಾಗಲಿ ಅಜ್ಞಾನದಿಂದಾಗಲಿ ಮನುಷ್ಯರಿಂದ ಮಾಡಲ್ಪಡುತ್ತದೋ, ಅದು ಕೋಟ್ಯಂಶವಾಗಿ ಸಮೃದ್ಧಿಯನ್ನು ಹೊಂದಿದಾಗುತ್ತದೆ" ಎಂಬುದು.

ಹೀಗೆ ಭಗವತ್ಕ್ಷೇತ್ರದಲ್ಲಿ ಮಾಡಿದ ಪುಣ್ಯಪಾಪಗಳು ಸಾಧಾರಣ ಪ್ರದೇಶಗಳಲ್ಲಿ ಮಾಡಿದುದಕ್ಕಿಂತ ಅಧಿಕ ಫಲಗಳನ್ನುಳ್ಳವುಗಳಾಗಿರುವದು ಸಹ ಭಗವತ್ಪ್ರಭಾವದಿಂದಲೇ ಎಂದು ಹೇಳುತ್ತಾರೆ. ಪ್ರಾತಿಕೂಲ್ಯದಲ್ಲಿ ಹೆಚ್ಚು ಅನರ್ಥವನ್ನೂ ಆನುಕೂಲ್ಯದಲ್ಲಿ ಹೆಚ್ಚು ಶ್ರೇಯಸ್ಸನ್ನೂ ಹೊಂದಿಸುವದೂ ಸಹ ಭಗವತ್ಪ್ರಭಾವವೆಂದು ಹೇಳುತ್ತಾರೆ—ಇದುವುಮ್ - ಹೀಗೆ ಪ್ರಾತಿಕೂಲ್ಯ ಸಂದರ್ಭದಲ್ಲಿ ವಿಶೇಷಾನರ್ಥ ಪ್ರದವಾಗಿರುವದೂ, ಭಗವತ್ಪ್ರಭಾವಮ್-ಭಗವಂತನ ಪ್ರಭಾವದಿಂದಲೇ ಉಂಟಾದುದೆಂಬ ತಾತ್ಪರ್ಯವು. ಭಗವತ್ಪ್ರವಣರ್ಕ್ಕು - ಭಗವಂತನನ್ನು ಆಶ್ರಯಿಸಿದವರಿಗೆ, ವೃತ್ರಕ್ಷತ್ರಬಂಧು ಉಳ್ಳಿಟ್ಟಾರ್ಕ್ಕುಮ್ಪೋಲೆಯುಳ್ಳ - ವೃತ್ರಾಸು

ಇದುವುಮ್ ಭಗವತ್ಪ್ರಭಾವಮ್. ಭಗವತ್ಪ್ರವಣರ್ಕ್ಕು ವೃತ್ರನ್ ಕ್ಷತ್ರ ಬಂಧು ಉಳ್ಳಿಟ್ಟವರ್ಕು ಪೋಲೆಯುಳ್ಳ ಆನುಕೂಲ್ಯಙ್ಗಳ್ ತಾನೇ ಎಲ್ಲಾ ದೋಷಙ್ಗಳೈಯುಮ್, ಒರುವಿರಕಾಲೇ ಪೋಕ್ಕಿ ಉತ್ತಾರಕಙ್ಗಳಾಮ್.

---

ರನೂ ಕ್ಷತ್ರಬಂಧುವೂ ಇವರೇ ಮೊದಲಾದವರುಗಳ ಹಾಗೆ, ಆನುಕೂಲ್ಯಙ್ಗಳ್ ತಾನೇ - ಭಗವಂತನಿಗೆ ಅನುಕೂಲರಾಗಿರುವುದೇ, ಎಲ್ಲಾ ದೋಷಙ್ಗಳೈಯುಮ್ - ಎಲ್ಲಾ ಅಪರಾಧಗಳನ್ನೂ, ಒರುವಿರಕಾಲೇ - ಒಂದು ಉಪಾಯದಿಂದ, ಪೋಕ್ಕಿ – ಹೋಗಲಾಡಿಸಿ, ಉತ್ತಾರಕಙ್ಗಳಾಮ್ - ಅವರುಗಳ ಆತ್ಮೋಜ್ಜೀವನಕ್ಕೆ ಸಹಾಯಕಗಳಾಗುವುವು; ಪ್ರಾತಿಕೂಲ್ಯಾಚರಣೆಯನ್ನು ತ್ಯಜಿಸಿ, ಆನುಕೂಲ್ಯಾಚರಣೆಯನ್ನು ಅವಲಂಬಿಸಿದುದಾದರೆ ಕರುಣಾ ಸಾಗರನು ಅಂತವನಲ್ಲಿ ಅನುಗ್ರಹ ಮಾಡಬೇಕೆಂದು ಸಙ್ಕಲ್ಪಿಸಿ, ಏನಾದರೂ ಒಂದು ಮಾರ್ಗದಿಂದ ತನ್ನನ್ನು ಆಶ್ರಯಿಸುವ ಹಾಗೆ ಮಾಡಿಕೊಂಡು, ಆತನ ಹಿಂದಿನ ಪ್ರಾತಿಕೂಲ್ಯಾಚರಣೆಗಳನ್ನೆಲ್ಲಾ ಮನ್ನಿಸಿ, ಅಂತವನನ್ನು ರಕ್ಷಿಸಿಬಿಡುವನೆಂಬುದು ತಾತ್ಪರ್ಯವು. ಇಲ್ಲಿ ಪ್ರಾತಿಕೂಲ್ಯಾಚರಣ ವೆಂಬುದು ಶಾಸ್ತ್ರಸಮ್ಮತವಲ್ಲದ ಅಧರ್ಮ ಪ್ರವೃತ್ತಿಯಲ್ಲೇ ಮುಖ್ಯವಾಗಿ ತಾತ್ಪರ್ಯವು. ಭಾಗವತ ತೇಜೋವಧೆಯೂ ವಾಕ್ಪಾರುಷ್ಯ ಮೊದಲಾದುವುಗಳು. ಆದರೆ ಮಾರ್ಗತಪ್ಪಿದ ಶಿಷ್ಯನನ್ನು ತಿದ್ದುವದು ಪ್ರಾತಿಕೂಲ್ಯವಾಗುವುದಿಲ್ಲವು. ಆಗಲೂ ವಾಕ್ಪಾರುಷ್ಯವು ಗುರುವಿಗೂ ಸಹ ನಿಂದಿತವೇ. ಪರಮ ದಯಾಳುವಾಗಿ, ಹಿತೋಕ್ತಿಗಳಿಂದ ಶಿಷ್ಯನನ್ನೂ ಸಹ ತಿದ್ದತಕ್ಕದ್ದೇ ನ್ಯಾಯವು. ವೃತ್ರ ಕ್ಷತ್ರಬಂಧುಗಳು ಮೊದಲು ಬಹು ಪಾಪಗಳನ್ನು ಮಾಡಿದ ಅಪರಾಧಿಗಳಾಗಿದ್ದರೂ, ಕೊನೆಗೆ ಪರಮಾತ್ಮನನ್ನು ಆಶ್ರಯಿಸಿದ ಅಥವಾ ಪರಮ ಭಾಗವತನನ್ನಾಶ್ರಯಿಸಿದ ಸುಕೃತ [illegible]ಕರೂಪಾನುಕೂಲ್ಯ ವೃತ್ತಿಯನ್ನು ಹೊಂದಿದುದರಿಂದ ಮೋಕ್ಷವನ್ನು ಹೊಂದಿದರು: —

ವೃತ್ರಾಸುರವೃತ್ತಾಂತವೇನೆಂದರೆ—ವಿಶ್ವರೂಪನೆಂಬ ಬ್ರಾಹ್ಮಣನು ಇಂದ್ರನಿಗೆ ಪುರೋಹಿತನಾಗಿದ್ದೂ, ಗೋಪ್ಯವಾಗಿ ಅಸುರರಿಗೂ ಹವಿಸ್ಸನ್ನು ಸಮರ್ಪಿಸುತ್ತಿದ್ದನು. ಇದಕ್ಕೆ ಇಂದ್ರನು ಕೋಪಿಸಿ ಆ ವಿಶ್ವರೂಪನಿಗಿದ್ದ ಮೂರು ತಲೆಗಳನ್ನು ಕತ್ತರಿಸಿಬಿಟ್ಟನು. ಇದರಿಂದ ಇಂದ್ರನಿಗೆ ಬ್ರಹ್ಮಹತ್ಯಾ ದೋಷವು ಪ್ರಾಪ್ತವಾಗಿ ಅದನ್ನು ಒಂದು ವಿಧವಾಗಿ ಕಳೆದುಕೊಳ್ಳುತ್ತಾನೆ. ಆ ವಿಶ್ವರೂಪನ ತಂದೆಯಾದ ತ್ವಷ್ಟ್ರುವು ಇಂದ್ರನನ್ನು ಕೊಲ್ಲಲು ಶಕ್ತಿಯಿರುವ ಮಗನನ್ನು ಪಡೆಯಬೇಕೆಂದು ಯಜ್ಞವನ್ನು ಮಾಡಿ ವೃತ್ರಾಸುರನೆಂಬುವನನ್ನು ಪಡೆದನು. ಈತನು ದೇವತೆಗಳನ್ನೆಲ್ಲಾ ಬಹಳ ಹಿಂಸಿಸುವ ಪ್ರವೃತ್ತಿ ಇದ್ದುದರಿಂದಲೇ, "ಸರ್ವೈರ್ವೃತ್ತ

**ಇತಿಪ್ರೋಕ್ತಃ ಪಾಪಃ ಪರಮದಾರುಣಃ"** ಈ ಮಹಾ ಪಾಪಿಯಾಗಿ ಪರಮ ಕ್ರೂರನಾಗಿರುವದರಿಂದ ಈತನು ವೃತ್ರನೆಂದು ಕರೆಯಲ್ಪಟ್ಟನು ಎಂದು ಹೇಳಲ್ಪಟ್ಟಿರುತ್ತದೆ. ಆಗ ಇಂದ್ರ ಮೊದಲಾದ ದೇವತೆಗಳೆಲ್ಲಾ ಹೋಗಿ ಪರಮಪುರುಷನಲ್ಲಿ ಶರಣಾಗತಿಯನ್ನನುಷ್ಠಿಸಲು; ಆಗ ಆತನು ಪ್ರತ್ಯಕ್ಷವಾಗಿ, ಇಂದ್ರನನ್ನು ಕುರಿತು, ದಧೀಚಿ ಮಹರ್ಷಿಯು ತಪಸ್ಸಿನಲ್ಲಿರುವನು; ಆತನಲ್ಲಿಗೆ ಹೋಗಿ, ಆತನ ಪಕ್ಕೆಲಬನ್ನು ಯಾಚಿಸಿ, ಅದರಿಂದ ಬಾಣವನ್ನು ರಚಿಸಿ, ಪ್ರಯೋಗಿಸಿದರೆ ವೃತ್ರನು ಹತನಾಗುವನೆಂದು ಹೇಳಿ ಶ್ರೀ ಹರಿಯು ಅಂತರ್ಧಾನನಾಗಲು; ಬಳಿಕ ಇಂದ್ರಾದಿಗಳು ಶ್ರೀ ಮಹಾವಿಷ್ಣುವಿನ ಆಜ್ಞೆಯನ್ನು ಶಿರಸಾವಹಿಸಿ ಹಾಗೆಯೇ ಮಾಡಿ, ಅಸುರರಮೇಲೆ ಯುದ್ಧವನ್ನು ನಡೆಸಿದರು. ಆಗ ಅಸುರರು ಪರಾಜಯವನ್ನು ಹೊಂದಿ ಪಲಾಯನವನ್ನು ಮಾಡಿದರು. ಆಗ ವೃತ್ರನು ತನ್ನ ದೇಹಾವಸಾನವು ಹತ್ತಿರಬಂತೆಂದು ತಿಳಿದು, ಆತನು ತನ್ನ ಇಷ್ಟದೇವತೆಯಾದ ಸಂಕರ್ಷಣನಲ್ಲಿ ಶರಣಾಗತಿಯನ್ನು ಮಾಡಿ ಆತನನ್ನು ಸ್ತುತಿಸಿದನು; ಅದರಿಂದ ಆತನು ಮಾಡಿದ ಅಪರಾಧಗಳನ್ನೆಲ್ಲಾ ಕಳೆದುಕೊಂಡು ಆನುಕೂಲ್ಯ ಯುಕ್ತಪ್ರವೃತ್ತಿಯಿಂದ ರಕ್ಷಿತನಾದನು. **"ಅಹಂಹರೇ ತವ ಪಾದೈಕಮೂಲದಾಸಾನುದಾಸೋ ಭವಿತಾಸ್ಮಿ ಭೂಯಃ । ಮನಸ್ಸ್ಮರೇತಾಸುಪತೇರ್ಗುಣಾಂಸ್ತೇ ಗೃಣೀತವಾಕ್ಕರ್ಮ ಕರೋತುಕಾಯಃ॥ ನನಾಕಪೃಷ್ಟಂ ನ ಚ ಪಾರಮೇಷ್ಠ್ಯಂ ನ ಸಾರ್ವಭೌಮಂ ನ ರಸಾಧಿಪತ್ಯಮ್। ನಯೋಗಸಿದ್ಧೀರಪುನರ್ಭವಂ ವಾ ಸಮಂಜಸತ್ವಾಂ ವಿರಹಯ್ಯಕಾಂಕ್ಷೇ॥** (ಭಾಗ) ಎಂದು ದೇಹಾವಸಾನ ಕಾಲದಲ್ಲಿ ಹೇಳಿಕೊಂಡಿರುತ್ತಾನೆ. ಶ್ರೀಹರಿಯೇ ನಿನ್ನ ಪಾದಕಮಲವನ್ನೇ ಮುಖ್ಯಾಶ್ರಯವಾಗಿ ಭಾವಿಸಿರುವ ದಾಸರನ್ನು ಅನುವರ್ತಿಸಿ ದಾಸನಾಗಿರುವ ನಾನು ನಿನ್ನ ಪಾದಸೇವಕನು; ಆದುದರಿಂದ, ನನ್ನ ಮನಸ್ಸು ನನ್ನ ಪ್ರಾಣಾದಿಗಳಿಗೆ ನಾಥನಾದ ಪರಮಪುರುಷನ ಕಲ್ಯಾಣ ಗುಣಗಳನ್ನು ಸ್ಮರಿಸಲಿ, ನನ್ನ ಶರೀರವು ಆತನಿಗೆ ಕೈಙ್ಕರ್ಯಗಳನ್ನು ಮಾಡಲಿ. ದೇವೇಂದ್ರನ ಲೋಕವನ್ನಾಗಲಿ, ಚತುರ್ಮುಖನ ಪದವನ್ನಾಗಲಿ, ಈ ಭೂಮಂಡಲಾಧಿಪತ್ಯವನ್ನಾಗಲಿ, ಪಾತಾಳಲೋಕಾಧಿಪತ್ಯವನ್ನಾಗಿ ಕುಬೇರನ ಅಣಿಮಾದ್ಯಷ್ಟ ಸಿದ್ಧಿಗಳನ್ನಾಗಲಿ, **ಅಪುನರ್ಭವಂವಾ** - ಕೈವಲ್ಯವನ್ನಾಗಲಿ, ಹೇ ಸಮಂಜಸ ಎಂದರೆ ನಿಖಿಲ ಸೌಭಾಗ್ಯನಿಧಿಯೇ, ನಿನ್ನನ್ನು ಬಿಟ್ಟು ಇಂತಹ ಯಾವುದನ್ನೂ ಎಂದರೆ ನಿನ್ನ ಸಾಯುಜ್ಯವನ್ನು ತ್ಯಜಿಸಿ ಇನ್ನು ಯಾವುದನ್ನೂ, **ನಕಾಂಕ್ಷೇ** - ಅಪೇಕ್ಷಿಸುವದಿಲ್ಲವೆಂದು ಪ್ರಾರ್ಥಿಸಿ ಶರಣಾಗತನಾದುದರಿಂದ ಮುಕ್ತಿಯನ್ನು ಹೊಂದಿದನು.

ಹಾಗೆಯೇ **ಕ್ಷತ್ರಬಂಧು**ವೆಂಬ ರಾಜನು ರಾಜ್ಯವನ್ನು ಕಳೆದುಕೊಂಡು ಮಹಪರಾಧಗಳನ್ನು ಮಾಡುತ್ತಾ ನೀಚವೃತ್ತಿಯಿಂದ ಉದರಪೋಷಣೆಯನ್ನು

**ಭಾಗವತ ದೋಷಾಣಾಂ ಶಾಸ್ತಾ ವಿಷ್ಣುರಿತಿ ಮತ್ವಾ, ಪರಮ ಭಾಗವತಾನಾಂ ನಿಕಟೇ, ಯಾವಚ್ಛರೀರಪಾತಂ, ಮೋಕ್ಷೇ ನಿಸ್ಸಂಶಯಃ ಕೃತಾರ್ಥ ಸ್ತಿಷ್ಠೇದಿತಿ ನಿಗಮಯತಿ.**

---

**ಆನಸಿನ್ಪ, ಸ್ವಸಙ್ಕಲ್ಪ ನಿಯತನಾಗಿರುವ್ವಬೇಪೇನು ಮೊರನ್ವಾಜ**

---

ಮಾಡುತ್ತಿದ್ದರೂ ಕೊನೆಗೆ ಶ್ರೀ ನಾರದ ಸಮಾಗಮವುಂಟಾಗಿ ಅವರನ್ನು ಆಶ್ರಯಿಸಿ ಉಪಾಯಾನುಷ್ಠಾನಮಾಡಿ ಆನುಕೂಲ್ಯ ವೃತ್ತಿಯನ್ನು ಆಶ್ರಯಿಸಿದುದರಿಂದ ಮುಕ್ತಿಹೊಂದಿದನೆಂಬ ಇತಿಹಾಸ ಉಂಟು. ಈತನ ವೃತ್ತಾಂತಕ್ಕೆ ಗುರು ಪರಂಪರಾಸಾರದ ೫೦ನೆಯ ಪುಟವನ್ನು ಪರಾಂಬರಿಸಿ.

**ಭಾಗವತ ದೋಷಗಳಿಗೆ ಶಾಸ್ತಾ ವಿಷ್ಣುವೆಂದು ತಿಳಿದವನಾಗಿ ಪರಮ ಭಾಗವತರ ಮಧ್ಯದಲ್ಲಿ ದೇಹಾವಸಾನದವರೆಗೂ ಮೋಕ್ಷದಲ್ಲಿ ಸಂಶಯವಿಲ್ಲದೆ ಕೃತಾರ್ಥನು ಇರತಕ್ಕದ್ದೆಂದು ನಿಗಮನವು.**

---

ಉಪಾಯನಿಷ್ಠನು ಭಾಗವತರ ದೋಷ ಪ್ರವೃತ್ತಿಗಾಗಿ ಈತನೇನೂ ಮಾಡತಕ್ಕದ್ದಿರುವದಿಲ್ಲವು; ಅಂತವನನ್ನು ಧಿಕ್ಕರಿಸಿ ಆತನನ್ನು ಸರಿಯಾದ ಮಾರ್ಗಕ್ಕೆ ಬರುವಹಾಗೆ ಮಾಡುತ್ತೇನೆಂಬ ಸಙ್ಕಲ್ಪವು ಅನಾವಶ್ಯಕವು; ಸರ್ವರಿಗೂ ಶಾಸ್ತಾ ಪರಮ ಪುರುಷನು: ಅಂತವರನ್ನು ಶಿಕ್ಷಿಸಿ, ಅವರಿಗೆ ಮೋಕ್ಷವನ್ನು ಕೊಡುವ ಕೆಲಸವು ಅವನದು; ಅದಕ್ಕಾಗಿ ನಾವು ಮಾಡತಕ್ಕದ್ದೇನೂ ಇರುವದಿಲ್ಲವು; ಪರುಷವಾಕ್ಯಗಳಿಲ್ಲದೆ ಹಿತವನ್ನು ಬೋಧಿಸಬಹುದು; ಇದು ಜ್ಞಾನಿಯ ಕರ್ತವ್ಯವು; ಆತನನ್ನು ಧಿಕ್ಕರಿಸಿ, ನಿಂದಿಸಿ, ದ್ವೇಷಿಸುವದೆಲ್ಲಾ ಕೂಡದು; ಅಂತವರೊಂದಿಗೆ ಸಲ್ಲಾಪಾದಿಗಳನ್ನು ತ್ಯಜಿಸುವದೂ ಸಹ ನ್ಯಾಯವಿಲ್ಲವು; ಆದುದರಿಂದ ಇಂತಾದ್ದನ್ನೆಲ್ಲಾ ತ್ಯಜಿಸಿ, ಮಹಾ ಭಾಗವತೋತ್ತಮರೊಂದಿಗೆ ದಿವ್ಯ ಕ್ಷೇತ್ರದಲ್ಲಿ "ನಿರ್ಭರೋ ನಿರ್ಭಯೋಸ್ಮಿ" ಎಂದು ಹೇಳಿರುವಹಾಗೆ ದೇಹಾವಸಾನದವರೆಗೂ ವಾಸಿಸತಕ್ಕದ್ದೆಂದು ಪರಮಹಿತವನ್ನು ಉಪದೇಶಿಸುತ್ತಾರೆ.—ಮೂಲಮಂತ್ರಾದಿಗಳ ಅರ್ಥ ನಿರೂಪಣೆಗಳು ವಿನಾ ಮಿಕ್ಕ ಎಲ್ಲಾ ಹಿತೋಪದೇಶಗಳೆಲ್ಲಾ ಈ ಅಧಿಕಾರದೊಂದಿಗೆ ಸಮಾಪ್ತಿಯಾದುದರಿಂದ ಕೃತಕೃತ್ಯನಿಗೆ ಪರಮಹಿತೋಪದೇಶವನ್ನು ಇನ್ನೊಂದು ಸಲ ಅನುವಾದಮಾಡಿ ಹೇಳುತ್ತಾರೆ—ಆನಸಿನ್ಪ-ಹೀಗಾದನಂತರ, ಕ್ಷೇತ್ರವಾಸವು, ಪ್ರತಿಕೂಲರಿಗೆ ಇನ್ನೂ ಪ್ರತಿಕೂಲವಾಗಿ, ಅನುಕೂಲರಿಗೆ ಹೇಗೋ ಹಾಗೆಒಂದು ವಿಧವಾಗಿ ಅನುಕೂಲವಾಗಿ, ಸರ್ವೇಶ್ವರನು ಕೊನೆಗೆ ರಕ್ಷಿಸಿಬಿಡುವನಾದುದರಿಂದ, ಸ್ವಸಙ್ಕಲ್ಪನಿಯತನಾಯಿರುವ್ವದ - ಈಜೀವನನಸುಕೃತತಾರತಮ್ಯಾನು

**ತ್ವಾಲೇ ಸರ್ವೇಶ್ವರರ್ ಸ್ವರೂಪಪ್ರಾಪ್ತಮಾನ ಮುಕ್ತೈಶ್ವರ್ಯಂ ಕೊಡುಕೆ. ನಿನೈಪ್ಪಿಟ್ಟ ಅಧಿಕಾರಿಗಳ್ ಪಕ್ಕಲುಳ್ಳ ದೋಷಙ್ಗಳುಕ್ಕು ಚೆಲವು ಶೆಯ್ವಾಕ**

ಗುಣವಾಗಿ ಪರಮಪುರುಷನಾದ ತನ್ನ ಸಂಕಲ್ಪದಿಂದ ನಿಯತವಾಗಿರುವ, ಏದೇನು **ನೊರು ವ್ಯಾಜತ್ತಾಲೇ**-ಯಾವುದಾದರೂ ಒಂದು ಭಕ್ತಿಪ್ರಪತ್ತಿ ಮಾರ್ಗಗಳಲ್ಲಿ ಒಂದಾದವ್ಯಾಜದಿಂದ, **ಸರ್ವೇಶ್ವರನ್**-ಸರ್ವನಿಯಾಮಕನು, **ಸ್ವರೂಪಪ್ರಾಪ್ತಮಾನ**-ಸರ್ವಶೇಷಿಯಾಗಿರುವ ತನ್ನ ಸ್ವರೂಪಕ್ಕೆ ಅರ್ಹವಾದ, ಮುಕ್ತೈಶ್ವರ್ಯವನ್ನು, **ಕೊಡುಕ್ಕನಿನೈಪ್ಪಿಟ್ಟ**-ಕೊಡಬೇಕೆಂದು ಸಂಕಲ್ಪಿಸಿರುವ, **ಅಧಿಕಾರಿಗಳ್ ಪಕ್ಕಲುಳ್ಳ ದೋಷಙ್ಗಳುಕ್ಕು** - ಇಂತಹ ಉಪಾಯನಿಷ್ಠನಲ್ಲಿರುವ ದೋಷಗಳಿಗೆ, **ಶೆಲವು ಶೆಯ್ವಾನ್** - ಶಿಕ್ಷೆಯ ಮೂಲಕ ದೋಷನಿವರ್ತಕನು ; ಆದುದರಿಂದ ಅಂತಹ ಉಪಾಯನಿಷ್ಠರಾಗಿರುವ ಭಾಗವತರು ಮಾಡಿದ ದೋಷಗಳ ವಿಷಯದಲ್ಲಿ ನಮಗೆ ಯಾವ ಸಂಬಂಧವೂ ಇರುವದಿಲ್ಲವು; ಪರಮಪುರುಷನು ಹೇಗೆ ಶಿಕ್ಷಿಸಿ ಅನಂತರ ಅಂತವರನ್ನು ಸ್ವೀಕರಿಸಬೇಕೋ, ಅದನ್ನು ಅವನೇ ತಿಳಿದು ನಡೆಸುವನು; ಆದುದರಿಂದ ಆ ವಿಷಯದಲ್ಲಿ ಅವರನ್ನು ಕುರಿತು ಕೋಪಿಸುವದೂ, ನಿಂದಿಸುವದೂ ಇವೇ ಮೊದಲಾದವುಗಳು ಉಪಾಯನಿಷ್ಠರಾದ ನಮಗೆ ಯೋಗ್ಯವಲ್ಲವೆಂಬುದು ತಾತ್ಪರ್ಯವು; ಅದು ಸರ್ವೇಶ್ವರನ ಕರ್ತವ್ಯವು; ಅದರಲ್ಲಿ ನಮಗೆ ಏಕೆ ಸಂಬಂಧವು ಎಂಬ ಭಾವವು ತೋರಿಬರುತ್ತದೆ. ಅನುಕೂಲರಾದ ಕ್ಷೇತ್ರವಾಸಿಗಳನ್ನು ಆತನು ಹೋಗಲಿ ಒಂದು ವ್ಯಾಜದ ಮೂಲಕ ಅನುಗ್ರಹಿಸಬೇಕೆಂದು ಆತನೇ ಮೊದಲೇ ಸಂಕಲ್ಪಿಸಿ ಬಿಟ್ಟಿರುತ್ತಾನೆ; ಅವರು ಭಾಗವತರನ್ನು ಆಶ್ರಯಿಸಿ ಎರಡು ಉಪಾಯಗಳಾದ ಭಕ್ತಿ ಪ್ರಪತ್ತಿಗಳಲ್ಲಿ ಯಾವುದಾದರೂ ಒಂದನ್ನು ಅವಲಂಬಿಸುವ ಹಾಗೆ ಮಾಡಿ, ಮೊದಲೇ ಸಂಕಲ್ಪಿಸಿರುವದಕ್ಕನುಗುಣವಾಗಿ ನೆರವೇರಿಸಿ ಬಿಡುತ್ತಾನೆ. ಹಾಗೆ ಉಪಾಯಾನುಷ್ಠಾನಮಾಡಿಯೂ ದೋಷಗಳನ್ನು ಸಂಪಾದಿಸಿಕೊಂಡರೆ, ಅವರಿಗೆ ಹೇಗಾದರೂ ಮಾಡಿ ಮೋಕ್ಷವನ್ನೇ ಕೊಡತಕ್ಕದ್ದೆಂಬ ಸಂಕಲ್ಪವಿದ್ದುದಾದರೆ, ಅಂತವರಿಗೆ ಪಾಪನಿವೃತ್ತಿಯೂ ಫಲ ಉಂಟಾಗುವಹಾಗೆ ಒಂದು ವಿಧವಾಗಿ ಮಾಡಿಬಿಡುವನು. ಅನುತಾಪ, ಉಪರಮ ಪ್ರಾಯಶ್ಚಿತ್ತಾದಿಗಳನ್ನು ಮಾಡಿಸಿಯೋ, ಅಥವಾ ಕಾಟಲ್ಯೇ ಸತಿ ಶಿಕ್ಷಯಾಪಶ್ಯನ್ನಪಿ ಯಃ, ಪ್ರಾಯಶ್ಚಿತ್ತಾದಿಗಳನ್ನು ಮಾಡದಿದ್ದರೂ ಅಲ್ಪಶಿಕ್ಷೆಯನ್ನು ಅನುಭವಿಸುವ ಹಾಗೆ ಮಾಡಿ, **ಕ್ರೋಡೀಕರೋತಿ ಪ್ರಭುಃ** - ಇಂತಹ ಅಘಟಿತಘಟನಾ ಸಾಮರ್ಥ್ಯವುಳ್ಳ ಪ್ರಭುವು ಆತನನ್ನು ಮೋಕ್ಷಕ್ಕಾಗಿ ಅಙ್ಗೀಕರಿಸಿ ಬಿಡುವನೆಂಬುದು ವಾಕ್ಯತಾತ್ಪರ್ಯವು. ಹೀಗಿರುವಾಗ ಅಂತಹ ಉಪಾಯನಿಷ್ಠನು ದೋಷಿಯಾಗಿದ್ದಾನೆಂದು,

(೧) "ಏಕಶ್ಶಾಸ್ತಾ ನದ್ವಿತೀಯೋಽಸ್ತಿ ಶಾಸ್ತಾ" ಎನ್ನುವ್-(೨) 'ಪ್ರಶಾಸಿತಾರಂ ಸರ್ವೇಷಾಂ" ಎನ್ನುವ್, (೩) ಶಾಸ್ತಾ ವಿಷ್ಣುರಶೇಷಸ್ಯ" ಎನ್ನುವ್

---

ಆತನು ವ್ಯವಹಾರಕ್ಕೆ ಅನರ್ಹನೆಂದು ಅತನನ್ನು ಪರುಷೋಕ್ತಿಗಳಿಂದ ನಿಂದಿಸುವದು, ಉಪಾಯನಿಷ್ಠರಾದ ನಮ್ಮಗಳಿಗೆ ಅರ್ಹವಾದುದಲ್ಲವು; ಅವರುಗಳನ್ನು ಶಿಕ್ಷಿಸುವದೇ ಮೊದಲಾದವೆಲ್ಲಾ, ಸರ್ವಶಾಸ್ತಾವಾದ ಸರ್ವೇಶ್ವರನಿಗೆ ಸೇರಿದುದು ಎಂಬ ಭಾವವು. ಏದೇನುಮೊರು ವ್ಯಾಜತ್ತಾಲೇ ಎಂಬುದರಿಂದ ಈ ಎರಡು ಉಪಾಯಗಳಾದ ಭಕ್ತಿ ಪ್ರಪತ್ತಿಗಳು ವ್ಯಾಜವೆಂದು ಹೇಳಲ್ಪಟ್ಟವು, ಏಕೆಂದರೆ ಉಪಾಯನಿಷ್ಠೆಯೇ ಮುಕ್ತಿಯನ್ನು ಕೊಡಲಾರದು; ಮುಕ್ತಿಯನ್ನು ಕೊಡುವವನು ಮುಕುಂದನು; ಈತನು ಮಾಡಿದ ಉಪಾಯಾನುಷ್ಠಾನದಿಂದ ಪ್ರೀತನಾದ ಸಿದ್ಧೋಪಾಯನೇ ಮೋಕ್ಷದಾಯಕನು ಎಂಬ ತಾತ್ಪರ್ಯವು. ಆತನು ಈ ಉಪಾಯನಿಷ್ಠೆಗಳನ್ನು ಮುಕ್ತಿಪ್ರಾಪ್ತಿಗೆ ವ್ಯಾಜಗಳಾಗಿ ಏರ್ಪಡಿಸಿರುವದರಿಂದ ಅವುಗಳು ವ್ಯಾಜಗಳೆಂದು ಇಲ್ಲಿ ಹೇಳಲ್ಪಟ್ಟವು. ಸ್ವರೂಪ ಪ್ರಾಪ್ತಮಾನ ಮುಕ್ತೈಶ್ವರ್ಯಂ ಎಂದು ಹೇಳಿದುದರಿಂದ ಸರ್ವೇಶ್ವರನಲ್ಲದೆ ಇತರರಿಗೆ ಯಾರಿಗೂ ಸ್ವರೂಪ ಪ್ರಾಪ್ತವಲ್ಲವೆಂದು ಹೇಳಿದಂತಾಯಿತು;

ಪರಮಪುರುಷನು ಶಾಸ್ತಾವಾಗಿರುವದರಿಂದ ಶಿಕ್ಷೆಯು ಆತನಿಗೆ ಸೇರಿದುದು ಎಂಬುದಕ್ಕೆ ಪ್ರಮಾಣಗಳನ್ನು ಉದಾಹರಿಸುತ್ತಾರೆ—"ಏಕಶ್ಶಾಸ್ತಾ ನದ್ವಿತೀಯೋಽಸ್ತಿ ಶಾಸ್ತಾ" "ಒಬ್ಬನೇ ಎಲ್ಲರಿಗೂ, ಶಾಸ್ತಾ - ಶಿಕ್ಷಕನು, ಆತನೇ ಪರಮಪುರುಷನು, ಎರಡನೆಯ ಶಾಸ್ತಾವೇ ಇಲ್ಲವು," ಎನ್ನುವ್ – ಎಂದು, (೩) ಅಶೇಷಸ್ಯ - ಮುಂದೆ ಜಗತಃ ಎಂದು ಇದೆ—ಸಮಸ್ತ ಜಗತ್ತಿಗೂ ಶಾಸ್ತಾ - ನಿಯಾಮಕನು ಶಿಕ್ಷಕನು, ವಿಷ್ಣುಃ - ವಿಷ್ಣುವು, ಮುಂದಕ್ಕೆ "ಜಗತೋ ಯೋ ಹೃದಿ ಸ್ಥಿತಃ । ತನ್ಮೃತೇ ಪರಮಾತ್ಮಾನಂ ತಾತ ಕಃ ಕೇನ ಶಾಸ್ಯತೇ" ಎಂದು ಇರುತ್ತದೆ; ಅವನು ಯಾರು ಎಂದರೆ ನಮ್ಮ ಹೃದಯ ಗುಹೆಯಲ್ಲೇ ನಮ್ಮ ಅನುಗ್ರಹಕ್ಕಾಗಿಯೇ ಯಾವನಿರುತ್ತಾನೋ ಅವನು ಎಂಬ ಭಾವವು; ಹೀಗೆ ಹೇಳಿರುವುದರಿಂದ ನಮ್ಮ ಅಧರ್ಮ ಪ್ರವೃತ್ತಿಗಳೇನಾದರೂ ಇದ್ದ ಪಕ್ಷದಲ್ಲಿ, ಆತನೇ ನೋಡುತ್ತಿರುವವನಾದುದರಿಂದ ಶಾಸ್ತಾವಾಗಿ ನಿಗ್ರಹಿಸಲು ಸಿದ್ಧನಾಗಿರುವನು; ಇಷ್ಟು ಮಾತ್ರವೇ ಅಲ್ಲದೆ ಆತನ ಧರ್ಮಾನುಪಾಲನೆಯಲ್ಲಿ ಹೃದಯ ಗುಹೆಯಲ್ಲಿದ್ದುಕೊಂಡು ಸನ್ಮಾರ್ಗಪ್ರೇರಕನಾಗಿ, ಅನುಗ್ರಹಿಸುವನೂ ಅವನೇ ಎಂಬ ಅರ್ಥವೂ

---

(೧) ಭಾರ. (೨) ಮನು- ೧೨.೧೨೨. (೩) ವಿ.ಪು.೧-೧೭. ೨೦.

**ಶೊಲ್ಲಪ್ಪಡುಗಿರ ಅವನ್ ತಾನೇ ಎನ್ರು ತೆಳಿನ್ದು (೪) "ರಾಗಾದಿದೂಷಿತೇ ಚಿತ್ತೇ ನಾಸ್ಪದೀ ಮಧುಸೂದನಃ। ನ ಬಧ್ನಾತಿ ರತಿಂ ಹಂಸಃ ಕದಾಚಿತ್ಕರ್ದಮಾಂಭಸಿ" ಇತ್ಯಾದಿಗಳೈಪ್ಪಾರ್ತ್ತು ನೆಗಿಳಾದೇ ಇಸ್ವಧಿಕಾರಿಗಳ್ ಪಕ್ಕಲುಳ್ಳ**

ಸೂಚಿತವು. ಹೀಗೆ ಆ ಪರಮಾತ್ಮನಲ್ಲದೆ ಇನ್ನು ಯಾರಿಂದಲೂ ಯಾವನೊಬ್ಬನು **ಶಿಕ್ಷಿ**ಸಲ್ಪಡಲು ಸಮರ್ಥನಲ್ಲವು. ಇನ್ನು ಯಾರಿಂದಲಾದರೂ ಶಿಕ್ಷಿಸಲ್ಪಟ್ಟರೂ ಆ ಶಾಸ್ತ್ರವಾದ ಪರಮಾತ್ಮನ ಆಜ್ಞಾನುಸಾರವಾಗಿ ಎಂದು ಭಾವಿಸತಕ್ಕದ್ದೆಂಬುದು **ಈ** ಶ್ಲೋಕ ತಾತ್ಪರ್ಯವು ಇದು ಹಿರಣ್ಯಕಶಿಪುವಿಗೆ ಹೇಳುವ ಪ್ರಹ್ಲಾದೋಕ್ತಿಯು, **ಎನ್ರುಮ್** - ಎಂದು **ಶೊಲ್ಲಪ್ಪಡುಗಿರ** - ಹೇಳಲ್ಪಡುವ, **ಅವನ್ ತಾನೇ ಎನ್ರು ತೆಳಿನ್ದು** - ಸರ್ವೇಶ್ವರನಾದ ಅವನೇ ಎಂದು ತಿಳಿದವನಾಗಿ, ಅಪರಾಧಗಳಿಗಾಗಿ ಶಿಕ್ಷಿಸುವವನೂ ಅವನೇ, ಕೃಪಾ ಮೂಲಕವಾಗಿ ಮೋಕ್ಷಪ್ರದಾತಾವೂ ಅವನೇ, ಎಂದು ತಿಳಿದವನಾಗಿ ಎಂಬರ್ಥವು, ಮುಂದಿನ ಪ್ರಮಾಣದಿಂದ ಐಹಿಕ ಕಾಮಗಳಲ್ಲೇ ಲಿಪ್ತನಾಗಿರುವವನಿಗೆ ಭಗವದನುಗ್ರಹವು ಇಲ್ಲವೆಂಬುದಕ್ಕೆ ಪ್ರಮಾಣವನ್ನು ಉದಾಹರಿಸುತ್ತಾರೆ. (೪) **ರಾಗಾದಿ ದೂಷಿತೇ ಚಿತ್ತೇ** - ಕಾಮಾದಿ ದೋಷಗಳಿಂದ ದೂಷಿತವಾದ ಮನಸ್ಸಿನಲ್ಲಿ, **ಆದಿ** ಶಬ್ದದಿಂದಕ್ರೋಧಾದಿಗಳು ಹೇಳಲ್ಪಟ್ಟವು, **ಮಧುಸೂದನಃ** - ಮಧು ಎಂಬ ಅಸುರನನ್ನು ಕೊಂದ ಮಹಾವಿಷ್ಣುವು, **ನಾಸ್ಪದೀ** - ವಶನಲ್ಲವು, ಎಂದರೆ ಅಂತಹ ಚಿತ್ತವುಳ್ಳವನಲ್ಲಿ ವಿಷ್ಣುವಿಗೆ ಇಷ್ಟವಿರುವದಿಲ್ಲವು; ಆದರಿಂದ ಅನುಗ್ರಹವಿರುವದಿಲ್ಲವು ಎಂಬ ತಾತ್ಪರ್ಯವು; ಹೇಗೆಂದರೆ ಅದಕ್ಕೆ ಒಂದು ನಿದರ್ಶನವನ್ನು ಕೊಡುತ್ತಾರೆ. **ಹಂಸಃ** - ನಿರ್ಮಲವಾದ ಸ್ವಚ್ಛೋದಕವಿರುವ ಕಮಲ ಸರಸ್ಸಿನಲ್ಲಿ ರಮಿಸುವ ಹಂಸವು, **ಕರ್ದಮಾಂಭಸಿ** - ಕೆಸರು ನೀರು ಇರುವ ಪಲ್ವಲದಲ್ಲಿ, **ರತಿಂ** – ಆಶೆಯನ್ನು, **ನ ಬಧ್ನಾತಿ** - ಬಂಧಿಸುವದಿಲ್ಲವು ಎಂದರೆ ಮಾಡುವದಿಲ್ಲವು. ಇಲ್ಲಿ ಹಂಸ ಶಬ್ದಕ್ಕೆ ಪರಮಾತ್ಮ ಪರವಾಗಿ ಅರ್ಥವಿರುವದು ಸಹಸ್ರನಾಮದಲ್ಲಿ ವ್ಯಕ್ತವು; ಕರ್ದಮಾಂಭಸ್ಸಿನ ರೂಪದಲ್ಲಿರುವ ಹೃದಯಗುಹೆಯಲ್ಲಿರುವದು, ಹಂಸನಾದ ಪರಮಾತ್ಮನಿಗೆ ಇಷ್ಟವಿಲ್ಲವೆಂಬ ಅಭಿಪ್ರಾಯವು ಸೂಚಿತವು; ಸಂಸಾರ ದುಃಖಗಳನ್ನು ಹನ್ತೀತಿ ಹಂಸಃ ಎಂದರೆ ಪರಮಾತ್ಮನು; ಆದುದರಿಂದ ದೃಷ್ಟಾಂತದಲ್ಲಿ ಹಂಸಶಬ್ದವು ಬಹು ಸ್ವಾರಸ್ಯವಾಗಿ ಉಪಯೋಗಿಸಲ್ಪಟ್ಟಿರುತ್ತದೆ. "ನಿರ್ಲೋಭ ನೃಪತೌ ವಿಷ್ಣಾವಂತರಾತ್ಮನ್ಯಮತ್ಸರೇ। ಯತಿಭೇದೇ ಚ ಹಂಸಸ್ಯಾತ್ ಶ್ರೇಷ್ಠೇ ರಾಜಾದಿಪೂರ್ವಕೇ" ಎಂಬ ನಿಘಂಟು ಅನುಸಂಧೇಯವು. ಇಲ್ಲಿ ಹಂಸಃ

(೪) ವಿಷ್ಣು ಧರ್ಮ. ೬. ೧೧.

**ಗುಣಾಂಶತ್ತೈ ಮರುಭೂಮಿಯಿಲ್ ತಣ್ಣೀರ್ ಪೆತ್ತಾರ್ಪೋಲೆ ಉಗನ್ದು (ಅ)"ಕರ್ಮಣಾ ಮನಸಾ ವಾಚಾ ಯದಭೀಕ್ಷ್ಣಂ ನಿಷೇವತೇ । ತದೇವಾಽಪಹರತ್ಯೇನಂ ತಸ್ಮಾತ್ಕಲ್ಯಾಣ ಮಾಚರೇತ್" ಎಙ್ಗಿರಪಡಿಯೇ ಕರಣತ್ರಯ**

---

ಎಂದರೆ ಯತಿ ಎಂದು ಅರ್ಥ ಮಾಡಿದರೂ ಅರ್ಥ ಸ್ವಾರಸ್ಯ ಉಂಟು. ವೈರಾಗ್ಯದಲ್ಲಿರುವ ಯತಿಯು ಕೆಸರಿಗೆ ಸಮಾನವಾದ ವಿಷಯೋಪಭೋಗಗಳಲ್ಲಿ ರತಿಯನ್ನು ಮಾಡುವದಿಲ್ಲವಷ್ಟೇ ಎಂಬ ಭಾವವು. **ಇತ್ಯಾದಿಗಳೈ ಪ್ಪಾರ್ತು** - **ಇತ್ಯಾದಿ** ಪ್ರಮಾಣಗಳ ಅಭಿಪ್ರಾಯಗಳನ್ನು ಮನಸ್ಸಿನಲ್ಲಿಟ್ಟು, ಯಾವ ಯಾವ ಅಭಿಪ್ರಾಯಗಳನ್ನು ಮನಸ್ಸಿನಲ್ಲಿಟ್ಟು ಎಂದರೆ ಭಾಗವತರು ಏನಾದರೂ ಅಪರಾಧಗಳನ್ನು ಮಾಡಿದರೆ ಶಿಕ್ಷಕನು ಭಗವಂತನೇ ಎಂದು ಚನ್ನಾಗಿ ತಿಳಿದು, ಈ ಅಭಿಪ್ರಾಯಗಳನ್ನು **ನೆಗಿಳಾದೇ** - ಅನಾದರಮಾಡದೇ ಅಥವಾ ಸಂದೇಹಪಡದೆ ಆದುದರಿಂದ ಅಂತವರನ್ನು ತಿದ್ದುವದಕ್ಕೂ, ಶಿಕ್ಷಿಸುವದಕ್ಕೂ, ಭಗವಂತನು ಬದ್ಧಕಂಕಣನಾಗಿರುವಾಗ, ನಾವುಗಳು ಅಂತವರ ವಿಷಯದಲ್ಲಿ ಪರುಷ ವಾಕ್ಯಗಳ ಮೂಲಕ ನಿಂದಿಸುವದೇ ಮೊದಲಾದವು ನಮಗೆ ಸ್ವರೂಪವಲ್ಲವು. **ಉಪಾಯಾನುಷ್ಠಾನ** ಮಾಡಿದ ಕೃತಕೃತ್ಯನು, ಮನೋವಾಕ್ಕರ್ಮಗಳಲ್ಲಿ ಪರಿಶುದ್ಧನಾಗಿರಬೇಕು; ಮಙ್ಗಳಕರವಾದುದನ್ನೇ ಚಿನ್ತಿಸತಕ್ಕದ್ದು, ಹೇಳತಕ್ಕದ್ದು ಮಾಡತಕ್ಕದ್ದು ಎಂದು ಸಪ್ರಮಾಣವಾಗಿ ಮುಂದೆ ಉಪದೇಶಿಸುತ್ತಾರೆ—**ಇನ್ವಧಿಕಾರಿಗಳ್ ಪಕ್ಕಲುಳ್ಳ ಗುಣಾಂಶತ್ತೈ** - ಹೀಗೆ **ಉಪಾಯಾನುಷ್ಠಾನಮಾಡಿ**ಯೂ ಸ್ವಲ್ಪ ಐಹಿಕಗಳಲ್ಲಿ ಕಾಮನೆಯುಳ್ಳವರು ಸಂಭಾಷಣೆಗೂಕೂಡ ಅನರ್ಹರೆಂದು ಭಾವಿಸದೆ, ಅಂತಹ ಅಧಿಕಾರಿಗಳಲ್ಲಿರುವ **ಗುಣಾಂಶತ್ತೈ**-ಗುಣಾಂಶವನ್ನು **ಮರುಭೂಮಿಯಿಲ್ ತಣ್ಣೀರ್ ಪೆತ್ತಾರ್ ಪೋಲೆ** - **"ನಕಶ್ಚಿನ್ನಾಪರಾಧ್ಯತಿ"** (ರಾ. ಯುದ್ಧ. ೧೧೬. ೪೪) ಎಂದು ಹೇಳಿರುವಹಾಗೆ ಎಲ್ಲರಲ್ಲೂ ದೋಷಗಳೇ ಇರುವದರಿಂದ, ಬಿಸಲು ಬೇಗೆಯಿಂದ ತಾಪಯುಕ್ತವಾದ ಮರಳಿನ ಕಾಡಿನಲ್ಲಿ ತಂಪಾದ ನೀರಿನಾಶ್ರಯವನ್ನು ಹೊಂದಿದ ಹಾಗೆ, **ಉಗನ್ದು** – ಸ್ತೋತ್ರಮಾಡಿ ಆದರಿಂದ ಸಂತೋಷಪಟ್ಟು, ಇದು ಧೃತರಾಷ್ಟ್ರನನ್ನು ಕುರಿತ ವಿದುರವಾಕ್ಯವು. (ಅ) ಕರ್ಮಣಾ-ಶರೀರಮೂಲಕ ನಡೆಯುವ ಕರ್ಮದಿಂದಲೂ, **ಮನಸಾ** - ಮನಸ್ಸಿನಿಂದಲೂ, **ವಾಚಾ** - ಮಾತಿನಿಂದಲೂ,**ಯತ್**-ಯಾವುದು **ಅಭೀಕ್ಷ್ಣಂ** - ಯಾವಾಗಲೂ ಎಂದರೆ ಪದೇ ಪದೇ **ನಿಷೇವತೇ** - ಸೇವಿಸಲ್ಪಡುತ್ತದೋ, **ತದೇವ** - ಅದೇನೇ, **ಏನಂ** – ಈ ಮನೋವಾಕ್ಕುಗಳಿಂದ ಕೂಡಿದವನನ್ನೇ, **ಅಪಹರತಿ**-ಅಪ

---

(ಅ) ಭಾರ. ಉದ್ಯೋಗ. ೩೯. ೫೬.

**ಶ್ರ್ವಾಲುನ್‌ ತರ್ಕ ನಲ್ವಳಿಕೈನಿಡಾದೇ (೬) 'ಸಂಸಾರ ವಿಷವೃಕ್ಷಸ್ಯ ದ್ವೇಫಲೇ ಹ್ಯ ಮೃತೋಪಮೇ। ಕಥಾಚಿತ್ಕೇಶವೇ ಭಕ್ತಿಸ್ತದ್ಭಕ್ತೈರ್ವಾ ಸಮಾಗಮಃ॥" ಎನ್ರು ಇಜ್ಗರುನ್ದಕಾಲತ್ತುಕ್ಕು ಪ್ರಯೋಜನಮಾಗವೆಡುತ್ತ(೭)"ಪರಮಾನ್ಯೆಪ್ಪ**

---

ಹರಿಸುತ್ತದೆ ಎಂದರೆ ಪದೇ ಪದೇ ಮಾಡುವಹಾಗೆ ಪ್ರೇರಿಸುತ್ತದೆ; ಯಾವಾಗ ಅಂತಾದ್ದನ್ನೇ ಪದೇ ಪದೇ ಮಾಡುತ್ತಾ ಬರುತ್ತಾನೋ ಆಗ ಅದೇ ಅಭ್ಯಾಸವಾಗುತ್ತದೆ; **ತಸ್ಮಾತ್** - ಆ ಕಾರಣದಿಂದ, **ಕಲ್ಯಾಣ ಮಾಚರೇತ್**-ಶುಭವಾದುದನ್ನೇ ಅನುಷ್ಠಿಸತಕ್ಕದ್ದು. ಯಾವುದು ಮನಸ್ಸಿನಿಂದ ಸಂಕಲ್ಪಿಸಲ್ಪಡುತ್ತದೋ, ಯಾವುದು ವಾಚಾ ಹೇಳಲ್ಪಡುತ್ತದೋ, ಯಾವುದು ಕರ್ಮದಿಂದ ಮಾಡಲ್ಪಡುತ್ತದೋ ಅವುಗಳಿಗನುಸಾರವಾಗಿ ಪ್ರವೃತ್ತಿಯು ಏರ್ಪಡುತ್ತದೆ. **"ಯನ್ಮನಸಾ ಧ್ಯಾಯತೇ, ತದ್ವಾಚಾ ವದತಿ, ತತ್ಕರ್ಮಣಾ ಕರೋತಿ"** ಎಂಬುದು ಅನುಸಂಧೇಯವು, ತಸ್ಮಾತ್ ಆ ಕಾರಣದಿಂದ, ಕಲ್ಯಾಣಂ ಶುಭವಾದುದನ್ನೇ, **ಆಚರೇತ್-"ಶುಭಕೃಚ್ಛುಭಮಾಪ್ನೋತಿ"** ಎಂದೂ, ಸಾಧುಕಾರೀ **ಸಾಧುರ್ಭವತಿ** ಎಂದೂ, ಹೇಳಿರುವಹಾಗೆ, ಅನುಷ್ಠಿಸತಕ್ಕದ್ದು; ಎಂದರೆ ಶುಭವಾದುದನ್ನೇ ಮನಸಾ ಸಙ್ಕಲ್ಪಿಸತಕ್ಕದ್ದು; ಶುಭವಾದುದನ್ನೇ ಬಾಯಲ್ಲಿ ಹೇಳತಕ್ಕದ್ದು. ಅಶ್ಲೀಲವಾದುದು ಯಾವುದನ್ನೂ ಬಾಯಲ್ಲಿ ಉಚ್ಚರಿಸತಕ್ಕದಲ್ಲವು; ಸಾಧುಜನಗಳನ್ನು ಧಿಕ್ಕರಿಸಿ ಪರುಷವಾಕ್ಕುಗಳನ್ನಾಡತಕ್ಕದ್ದಲ್ಲವು. ಹೇಗೆ ನಡೆಸಿದರೆ, ಹಾಗೆಯೇ ಅಭ್ಯಾಸವಾಗುತ್ತದೆಂಬ ಭಾವವು. ಶುಭವಾದುದನ್ನು ಸಙ್ಕಲ್ಪಿಸಿ, ಅಂತಹವುಗಳನ್ನು ವಾಚಾ ಹೇಳಿ, ಕರ್ಮಣಾ ಅಂತವುಗಳನ್ನೇ ಮಾಡಿದರೆ, ಹಾಗೆಯೇ ಅಭ್ಯಾಸ ಬಿದ್ದುಹೋಗಿ ಶುಭವಾದ ಪ್ರವೃತ್ತಿಯೇ ಉಂಟಾಗುತ್ತದೆಂಬ ಭಾವವು." **ಎಜ್ಗರಪಡಿಯೇ** - ಎಂದು ಹೇಳಿರುವಹಾಗೆ, **ಕರಣ ತ್ರಯುತ್ತಾಲುನ್ ನಲ್ವಳಿಕೈನಿಡಾದೇ**-ಮೂರು ಕರಣಗಳಾದ ಮನಸ್ಸು, ವಾಕ್ಕು ಶರೀರ ಇವು ಮೂರರಿಂದಲೂ **ಒಳ್ಳೇ ಮಾರ್ಗದ ಆಶ್ರಯವನ್ನು** ಬಿಡದೇ, (೬)**"ಸಂಸಾರ ವಿಷವೃಕ್ಷಸ್ಯ**-ಸಂಸಾರವೆಂಬ ವಿಷವೃಕ್ಷದಲ್ಲಿ, **ಅನರ್ಥ** ಸಾಧಕವಾಗಿ ಅನಿಷ್ಟ ಫಲವನ್ನು ಕೊಡುವದರಿಂದ ಸಂಸಾರವು ವಿಷವೃಕ್ಷವೆಂದು ರೂಪಕಮಾಡಲ್ಪಟ್ಟಿತು; ಇಂತಹ ವೃಕ್ಷಕ್ಕೆ ಮಿಕ್ಕ ಫಲಗಳೆಲ್ಲಾ ವಿಷಸಮಾನವಾಗಿದ್ದರೂ ಎಲ್ಲೋ ಒಂದಾನೊಂದು ವೃಕ್ಷದ ಒಂದಾನೊಂದು ಕಾಲದಲ್ಲಿ ಬಿಡುವ ಎರಡು ಅಮೃತಸಮಾನ ಫಲಗಳುಂಟೆಂದು ಹೇಳುತ್ತಾರೆ. ಅವು ಯಾವುವೆಂದರೆ(೧) **ಕದಾಚಿತ್ಕೇಶವೇ ಭಕ್ತಿಃ**-ಯಾವಾಗಲೋ ಒಂದು ಕಾಲದಲ್ಲಿ ಕೇಶವನಲ್ಲಿ ಭಕ್ತಿಯು. (೨) **ತದ್ಭಕ್ತೈರ್ವಾ ಸಮಾಗಮಃ** - ಆತನ ಭಕ್ತರಾದ ಮಹಾ ಭಾಗವತರೊಂದಿಗೂ

---

(೬) ವಿ. ಪು. (೭) ತಿರು ೩-೭-೧.

ಯಿಲುನ್ ತಿರುವುಡೈಯ”(೮)“ಶಿರಿಯಾ ಮುನಿಶರುಡನ್ ಶೇರ್ತ್ತಿಯಾಗಿರ ಶೀರಿಯ ಪೇರಾಪ್ಪೇತ್ತೈ ತಿರುವರುಳಾಲೇ ಪೆತ್ತೋಮ್” ಎನ್ರು ಕೃತಾರ್ಥರಾಯ್,(೯). “ತಿರುಮಾಲ್ ತಲೈಕೊಂಡ ನಙ್ಗಳುಕ್ಕೇಙ್ಗೇ ವರುವದೊ ತೀವಿನೈಯೇ”? ಎನ್ರು ವ್ಯವ

ಸವಾಗಮವು. ಇಲ್ಲಿ ವಾ ಎಂಬುದು ವಿಕಲ್ಪಾರ್ಥವಲ್ಲವು; ಸಮುಚ್ಚಯಾರ್ಥವುಳ್ಳದು. ಅಥವಾ ಇಲ್ಲಿ “ನ್ಯಾಸೋವಾ ಸರ್ವ ಧರ್ಮಜಿನ್ನೀ” ಎಂಬಲ್ಲಿನ ಹಾಗೆ ಅವಧಾರಣ ವಾಚಕವು ಎಂಬುದು ಶ್ರೀ ಯತಿರಾಜರ ಅಭಿಪ್ರಾಯವು. (ಪಯಿಲುಮ್ ಶುಡರೊಳಿ” ಎಂಬ ಮುಂದಿನ ಪಾಶುರದ ಈಡು ವ್ಯಾಖ್ಯಾನವನ್ನು ಪರಾಂಬರಿಸಿ.) ಎನ್ರು-ಎಂಬ ದಾಗಿ, ಇಙ್ಗಿರುನ್ದ ಕಾಲತ್ತುಕ್ಕು ಪ್ರಯೋಜನಮಾಗ-ಇಲ್ಲಿ ದೇಹಾವಸಾನದ ವರೆಗೂ ಇದ್ದುದಕ್ಕೆ ಪ್ರಯೋಜನವಾಗಿ, ಎಡುತ್ತ-ಪ್ರಮಾಣವಾಗಿ ಹೇಳಲ್ಪಟ್ಟ (೭) ಪರಮನೈ-ಹಿಂದೇ “ಪಾಕ್ಕಡಲ್ ಶೇರ್‌ನ್ದ ಪರಮನೈ” ಎಂದಿರುತ್ತದೆ. ಕ್ಷೀರ ಸಾಗರವನ್ನು ಹೊಂದಿದ ಪರಮ ಪುರುಷನನ್ನು, ಪಯಿಲುಮ್-ಆಶ್ರಯಿಸುವದಕ್ಕೆ ಯೋಗ್ಯವಾದ ತಿರುವುಡೈಯ-ಸಂಪತ್ತನ್ನು ಹೊಂದಿರುವ,ಅಥವಾ ತಿರುವುಡೈಯ-ಲಕ್ಷ್ಮಿಯನ್ನು ಸಹಧರ್ಮಚಾರಿಣಿಯಾಗಿ ಹೊಂದಿರುವ, ಪರಮನೈ-ಪರಮಪುರುಷ ನನ್ನು, ಪಯಿಲುಮ್-ಆಶ್ರಯಿಸುವದಕ್ಕೆ ಅರ್ಹರಾದ, ಶಿರಿಯಾ-ನ್ಯೂನತೆಯುಳ್ಳ ದೇಹಯಾತ್ರಾದಿ ವೃತ್ತಿಯಿಂದ ಚಿಕ್ಕವರಾಗಿ ತೋರಿದರೂ, ಮಾ-ಜ್ಞಾನಭಕ್ತಿ ವೈರಾಗ್ಯಗಳಿಂದ ಮಹತ್ತಾದ ಪ್ರಭಾವರಾದ, ಮುನಿಶರ್-ಭಾಗವತರೊಂದಿಗೆ, ಶೇರ್ತ್ತಿ ಯಾಗಿರ-ಸಂಸರ್ಗವೆಂಬ, ಶೀರಿಯ-ಶ್ಲಾಘ್ಯವಾದ, ಪೇರಾಪೇತ್ತೈ-ದೊಡ್ಡ ನಿರತಿಶಯ ಪುರುಷಾರ್ಥವನ್ನು, ತಿರುವರುಳಾಲೇ-ದಿವ್ಯ ದಂಪತಿಗಳ ಕೃಪಾ ಪ್ರಭಾವದಿಂದ, ಪೆತ್ತೋಮ್-ಹೊಂದಿದೆವು. ಎನ್ರು-ಎಂದು, ಕೃತಾರ್ಥರಾಯ್-ಕೃತಾರ್ಥರಾಗಿ, (೮) “ತಿರುಮಾಲ್-ಶ್ರಿಯಃಪತಿಯು, ತಲೈಕೊಂಡ-“ಯಾಃ ಕ್ರಿಯಾಸ್ಸಂಪ್ರಯುಕ್ತಾಸ್ಸ್ಯುರೇಕಾನ್ತ ಗತಬುದ್ಧಿಭಿಃ। ತಾಸ್ಸರ್ವಾಶ್ಶಿರಸಾ ದೇವಃ ಪ್ರತಿಗೃಹ್ಣಾತಿ ವೈಸ್ವಯಮ್-(ಭಾರ. ಶಾನ್ತಿ. ೩೫೩-೬೪) ಎಂಬಲ್ಲಿ ತೋರಿಬರುವಹಾಗೆ ನಮ್ಮ ಶರಣಾಗತಿಯನ್ನು ಅನುಮೋದಿಸಿ ನಮ್ಮ ರಕ್ಷಾಭರವನ್ನು ಶಿರಸಾವಹಿಸಿದ ಅನುಗ್ರಹವುಳ್ಳ, ನಙ್ಗಳುಕ್ಕ-ಅವರಿಗೆ ಶೇಷಭೂತರಾದ ನಮಗೆ, ತೀವಿನೈಯೇ-ಪಾಪಗಳು, ಎಙ್ಗೇವರುಮ್-ಎಲ್ಲಿಂದ ಬಂದೀತು?” ಎನ್ರು ವ್ಯವಸಿತನಾಯ್-ನಿರ್ಭರನಾಗಿ, ನಿಶ್ಚಯಿಸಿ ಕೊಂಡವನಾಗಿ, ತಿರುಮಾಲುರುವೊಕ್ಕುಂ ಮೇರು ಅಮ್ಮೇರುವಿಲ್ ಶೆಞ್ಜುಡರೋನ್ ತಿರುಮಾಲ್ ತಿರುಕ್ಕೈತ್ತಿರುಚಕ್ಕರ ಮೊಕ್ಕುಮ್ ಅನ್ನ

(೮) ತಿರು. ೮-೧೦-೩ (೯) ತಿರುವಿರುತ್ತ. ೮೮.

ಡುನ್ । ತಿರುನಾಬುಮ್ಪೋತ್ತ ಅವನ್ ಚಿನ್ನಮೇ ಪಿದಗ್ಗಿನಿಪ್ಪದು ತಿರು
ನಾಲ್ ತಟ್ಟೆಕ್ಕೊಂಡ ನಜ್ಞಳ್ಕು ಎಜ್ಞೇವರುಮ್ ತೀವಿನೈಯೇ ॥ ಎಂಬುದು
ಪೂರ್ಣ ಶ್ಲೋಕವು ಇದರ ಅರ್ಥವೇನೆಂದರೆ—ಮೇರು - ಹಿರಣ್ಯವಿರುವದಾಗಿ ಆ
ಕಾಂಚನದಂತಿರುವ ಶೋಭೆಯುಳ್ಳ ಬೃಹತ್ತಾದ ಮೇರುಪರ್ವತವು, ತಿರುನಾಲ್-
ಶ್ರಿಯಃಪತಿಯು, ಉರುವು - ದಿವ್ಯಮಂಗಳ ವಿಗ್ರಹದೊಂದಿಗೆ, ಒಕ್ಕುಮ್ - ಸದೃಶ
ವೆಂದು ಹೇಳಿದವರೂ ಹೇಳಬಹುದು; ಇಲ್ಲಿ ಮೇರುವು ಸುವರ್ಣ ಪರ್ವತವಾದುದ
ರಿಂದ, ಛಾಂದೋಗ್ಯಶ್ರುತಿಯಾದ "ಯ ಏಷೋಽನ್ತರಾದಿತ್ಯೇ ಹಿರಣ್ಮಯಃ
ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುಃ ಹಿರಣ್ಯಕೇಶ ಆಪ್ರಣಖಾತ್ಸರ್ವ ಏವ ಸು
ವರ್ಣಃ" ಎಂಬಲ್ಲಿ ಹೇಳಿರುವಹಾಗೆ ದಿವ್ಯ ಮಂಗಳವಿಗ್ರಹವು ಹಿರಣ್ಮಯವೆಂದು
ಹೇಳಲ್ಪಟ್ಟಿತು. ಆದುದರಿಂದ ಅದಕ್ಕೆ ಮೇರುಸಾಮ್ಯವು. ಅಮ್ಮೇರುವಿಲ್ - ಆ
ಮೇರು ಪರ್ವತದಲ್ಲಿ (ಉದಯಿಸುವ) ಶೆಞ್ಞಾಯಿರೋನ್ - ಕೆಂಪಾದ ತೇಜಸ್ಸ
ನ್ನುಳ್ಳ ಸೂರ್ಯನು, ತಿರುವಾಳಿ ತಿರುಕ್ಕೈಯ — ಶ್ರಿಯಃಪತಿಯ ಶ್ಲಾಘ್ಯವಾದ
ಕೈಯಲ್ಲಿರುವ, ತಿರುಚಕ್ಕರ ವೊಕ್ಕುಮ್ - ಶ್ರೀ ಸುದರ್ಶನ ಚಕ್ರಕ್ಕೆ ಸಮಾ
ನವೆಂದು ಭಾವಿಸಬಹುದು. ಹಾಗೆಯೇ ಭಾಗವತದಲ್ಲಿ "ಶತಸೂರ್ಯಕೋಟಿ
ಪ್ರತಿಮಂ ಸುದರ್ಶನಂ ಜಾಜ್ವಲ್ಯಮಾನಂ" (೧೦. ೬೬. ೩೯) ಎಂದು ಹೇಳಿರುವ
ಹಾಗೆ ಸೂರ್ಯಸಾಮ್ಯವು ಸುದರ್ಶನ ಚಕ್ರಕ್ಕೆ ಹೇಳಲ್ಪಟ್ಟಿತು. ಇವುಗಳು
ಪರಿಚ್ಛಿನ್ನವಾದರೂ ಇವುಗಳ ಸಾಮ್ಯದಿಂದ ಅಪರಿಚ್ಛಿನ್ನ ಮಾಹಾತ್ಮ್ಯಯುಳ್ಳ
ಪರಮಾತ್ಮನ ದಿವ್ಯಮಂಗಳವಿಗ್ರಹವನ್ನೂ ಆತನ ಚಕ್ರಾಯುಧವನ್ನೂ ಇವುಗಳ
ಸಾಮ್ಯದಿಂದ ಧ್ಯಾನಿಸಬಹುದು. ಚಕ್ರಾಯುಧವನ್ನು ಇಲ್ಲಿ ಹೇಳಿದುದರಿಂದ ಆತನ
ದಿವ್ಯಾಭರಣ, ಮತ್ತು ದಿವ್ಯಾಯುಧಗಳನ್ನೂ ಉಪಲಕ್ಷಣರೀತ್ಯಾ ಹೇಳಲ್ಪಟ್ಟಿತೆಂದು
ಭಾವಿಸಬಹುದು. ಸ್ವಾಮಿಯು ಹೀಗೆ ದಿವ್ಯಾಯುಧಗಳನ್ನು ಧರಿಸಿ ಆತನನ್ನು
ಧ್ಯಾನಿಸುವವರಿಗೆ ಸಾಕ್ಷಾತ್ಕಾರವನ್ನು ಈಯುವದು, ಏತಕ್ಕೆಂದರೆ, ಶ್ರೀಪರಾಶರ ಮಹ
ರ್ಷಿಯು ಅಸ್ತ್ರಭೂಷಣ ಸಂಸ್ಥಾನ ಸ್ವರೂಪಂ ರೂಪವರ್ಜಿತಃ । ಬಿಭರ್ತಿ
ಮಾಯಾರೂಪೋಽಸೌ ಶ್ರೇಯಸೇ ಪ್ರಾಣಿನಾಂ ಹರಿಃ" ಎಂದು ಹೇಳಿರುವ
ಹಾಗೆ, ತನ್ನ ಭಕ್ತನಿಗೆ ಅಭಯವನ್ನಿತ್ತು, ಆತನನ್ನು ರಕ್ಷಿಸಿ ಶ್ರೇಯಸ್ಸನ್ನುಂಟುಮಾಡು
ವನೆಂದು ಪ್ರಕಟಿಸುವದಕ್ಕಾಗಿ ಎಂದು ತಿಳಿಯತಕ್ಕದ್ದು. ಇಂತಹ ದಿವ್ಯಾಯುಧಗ
ಳಿಂದ ಕೂಡಿರುವ ನಿನ್ನನ್ನೇ ಧ್ಯಾನಿಸುತ್ತಿರುವ ನಮಗೆ ಎಜ್ಞೇ ವರುಂ ತೀವಿ
ನೈಯೇ-ಹೇಗೆ ಪಾಪಗಳಿಂದ ಭಯವು ಉಂಟಾದೀತು? ಚಕ್ರಾಯುಧವು, ದೂರ್ವಾ
ಸಮುನಿಯ ಕೋಪೋತ್ಪನ್ನ ಶಕ್ತಿಯಿಂದುಂಟಾದ ಅಂಬರೀಷ ರಾಜರ್ಷಿಯ ಭಯ
ವನ್ನು ನಿರ್ಮೂಲವಾಗಿಸುವಾಗ, ನಮ್ಮ ಪಾಪಗಳನ್ನು ಹೋಗಲಾಡಿಸುವದು

**ಸಿತನಾಯ್, (೧೧) "ಆಳಗಿನ್ರಾನ ಶಿಯರಾನಾರಾಲ್ ಕುಕ್ಕೈಯುಡೈಯುಮ್" ಎನ್ಗಿರಪಡಿಯೇ ಪರಮಪದತ್ತಿಲ್ ಪೆರಪ್ಪುಗುಗೈ ಪರಿಪೂರ್ಣಕೈಙ್ಕರ್ಯ ಸಾಮ್ರಾಜ್ಯತ್ತುಕ್ಕು ಇನ್ಗೇ (ಪೂ ಮುಡಿಶೂಡಿ ಇರುಕ್ಕ ಪ್ರಾಪ್ತರ್.**

ಒಂದು ಕಷ್ಟವೇ ? ಗುಬ್ಬಿಯುವೇತ ಬ್ರಹ್ಮಾಸ್ತ್ರ ಪ್ರಯೋಗ ಬೇಕೆ? ಅತನನ್ನು ಆಶ್ರಯಿಸಿ ಪ್ರಪನ್ನರಾದನಂತರ ನಮಗೆ ಪಾಪಗಳ ಸಂಬಂಧವೆಲ್ಲಿಯದು ? ಎಂಬ ಭಾವವು. ಹೀಗೆ ಸರ್ವೇಶ್ವರನ ದಿವ್ಯಮಙ್ಗಳ ವಿಗ್ರಹವೂ ಮತ್ತು ಆತನ ಉದಾರ ಪೀವರ ಬಾಹುವಾದ ಕೈಯಲ್ಲಿ ಧರಿಸಿರುವ ಸುದರ್ಶನಚಕ್ರವೂ, ಮೇರುವಿಗೂ ಸುದರ್ಶನಚಕ್ರಕ್ಕೂ ಹೀನೋಪಮೆಯಾಗಿ ಎಂದಿಗೂ ಸಮಾನವಾಗಲಾರದು. ಆದರೂ **ಈ** ಮೇರು ಸೂರ್ಯ**ರು**ಗಳಿಗಿಂತ ನಿರತಿಶಯವಾದುದೆಂಬ ಭಾವವನ್ನು ಗ್ರಹಿಸಿ ಧ್ಯಾನ ಮಾಡಲು ಸಹಕಾರಿಯಾಗಬಹುದೆಂಬ ಭಾವವು. **ಅನ್ಗ್ ಕಂಡುಮ್**-ಹೀಗೆ **ಈ**ಮೇರು ಸೂರ್ಯರುಗಳು ಸ್ವಾಮಿಯ ಶುಭಾಶ್ರಯ ಸುದರ್ಶನಚಕ್ರಗಳಿಗೆ ಸಮಾನವೆಂದು ಯಾವಾಗ ಕಂಡೆವೋ ಆಗ, **ತಿರುಮಾಲ್ ಉರುವೊಡು**-ಶ್ರಿಯಃಪತಿಯ ದಿವ್ಯಮಙ್ಗಳ ವಿಗ್ರಹದೊಂದಿಗೆ, **ಅವನ್ ಚಿನ್ನಮೇ** - ಆತನ ದಿವ್ಯಾಯುಧಗಳಾದ ಚಿಹ್ನೆಗಳಾದ, ಶಂಖ, ಗದಾ, ಪದ್ಮ, ಅಸಿಮೊದಲಾದವುಗಳನ್ನು ನೋಡಬೇಕೆಂದು, **ಪಿದಱ್ಱಿ ನಿರ್ಪದು** - ಬಾಯಲ್ಲಿ ಯಾವಾಗಲೂ ಹುಚ್ಚರ ಹಾಗೆ ಕೂಗುತ್ತಿರುವುದು, **ಓರ್** - ಅದ್ವಿತೀಯವಾದ, **ತಿರು** - ಶ್ಲಾಘ್ಯವಾದ, **ಮಾಲ್** - ವ್ಯಾಮೋಹವು, **ತಲೈಕೊಣ್ಡ**- ನಿರತಿಶಯವಾದುದಾಗಿ ದೃಢವಾಗಿರುವ, **ನಙ್ಗಳುಕ್ಕು**-ಸತತ ನಿನ್ನನ್ನೇ ಧ್ಯಾನಿಸುತ್ತಿರುವ ನಮಗೆ, **ತೀವಿನೈ-**ಪಾಪವು, **ಎನ್ಗೇವರುಮ್** - ಎಲ್ಲಿ ಬಂದೀತು? ಸ್ವಲ್ಪವೂ ಎಂದಿಗೂ ಉಂಟಾಗುವದಿಲ್ಲವೆಂಬ ಭಾವವು. (೧೧) "**ಆಳಿಯರ್** - ನಮ್ಮನ್ನು ರಕ್ಷಿಸುವದಕ್ಕಾಗಿ ಚಕ್ರಾಯುಧವನ್ನು ಧರಿಸಿರುವ ಶ್ರೀ ಮಹಾವಿಷ್ಣುವು, **ಆಳಗಿನ್ರಾರ್** - ಅಂಬರೀಷನನ್ನು ಚಕ್ರದ ಮೂಲಕ ರಕ್ಷಿಸಿದ ರೀತಿ, ವಿರೋಧಿವರ್ಗವನ್ನು ಹೋಗಲಾಡಿಸಿ ರಕ್ಷಿಸಲು ಸಮರ್ಥನಾಗಿ ಕಂಕಣಬದ್ಧನಾಗಿರುವಾಗ, **ಅದನಾಲ್ ಕುಱ್ಱೈಯುಡೈಯುಮ್** - ಯಾರಿಂದ ಯಾವ ಕಾರಣದಿಂದ ನ್ಯೂನತೆಯನ್ನು ಹೊಂದುವೆವು, ಪರಿಪೂರ್ಣಾನುಭವವನ್ನು ಕೊಡಲು, ಆತನು ಪ್ರತಿಬಂಧಕ ನಿವೃತ್ತಿಗಾಗಿಯೇ ಚಕ್ರಪಾಣಿಯಾಗಿ ನಿಂತಿರುವಾಗ, ನಮಗೆ ಕೊರತೆಯನ್ನುಂಟುಮಾಡಲು ಯಾರಿಗಾದರೂ ಸಾಧ್ಯವೇ? ಎಂದರೆ ನಾವು ಪರಿಪೂರ್ಣ ಬ್ರಹ್ಮಾನುಭವ ರೂಪ ನಿರತಿಶಯಾನಂದವನ್ನೂ, ಕೈಙ್ಕರ್ಯ ಸಾಮ್ರಾಜ್ಯವನ್ನೂ, ಹೊಂದುವೆವು; ಅದಕ್ಕೆ ಎಂದಿಗೂ ನ್ಯೂನತೆಯಿಲ್ಲವೆಂಬ ಭಾವವು". ಇವಾಳಗಿನ್ರದಿಲ್ಲೈ ಪಿರವಿತ್ತು

೯. ತಿರು. ೧೦. ೪. ೩.

ಯರ್ ಕಡಿನ್ದೋವರ್" ಎಂದು ಮುಂದಕ್ಕೆ ಇದೆ. ಪಿರವಿತ್ತುಯರ್ ಕಡಿನ್ದೋವರ್ - ಅದರಿಂದ ಜನ್ಮಪ್ರಯುಕ್ತವಾದ ಸಕಲ ದುಃಖಗಳನ್ನು, ಕತ್ತರಿಸಿ ನಿರ್ಮೂಲಮಾಡಿದೆವು, ಪಿಱಾಳ್‍ಗಿನ್ರದಿಲ್ಲೈ - ಅನ್ಯಪ್ರಸಃ. ಉಂಟಾಗಲಾರವು. ಎಂಬರ್ಥವು ಎಜ್ಞರಡಿಯೋ - ಎಂದು ಹೇಳಿರುವಹಾಗೆ, ಪರಮಪದತ್ತಿಲ್ ಪೆರಪ್ಪುಗುಗಿರ - ಮುಂದಕ್ಕೆ ದಿವ್ಯ ವೈಕುಂಠದಲ್ಲ ನನಗೆ ಪ್ರಾಪ್ತವಾಗುವ, ಪರಿಪೂರ್ಣಕೈಙ್ಕರ್ಯ ಸಾಮ್ರಾಜ್ಯಕ್ಕೆ, ಇಂಗೇ - ಈ ಲೀಲಾ ವಿಭೂತಿಯಲ್ಲೇ, ಪೂಮುಡಿಶೂಡಿ ಇರುಕ್ಕಪ್ಪೆತ್ತವರ್ - ಲಂಕಾ ರಾಜ್ಯಪ್ರಾಪ್ತಿಗೆ ವಿಭೀಷಣನು ಸಮುದ್ರ ತೀರಾದಿಗಳಿಗಿಂತ ಮುಂಚೆಯೇ ಹೇಗೆ ಅಭಿಷಿಕ್ತನಾಗಿದ್ದನೋ, ಹಾಗೆಯೇ ನಾವು ಮುಂದೆ ಕೈಙ್ಕರ್ಯ ಸಾಮ್ರಾಜ್ಯ ಪಟ್ಟವು ಪ್ರಾಪ್ತವಾಗುವ ದಕ್ಕಾಗಿ ಈಗಲೇ ತಲೆಯಲ್ಲಿ ಪುಷ್ಪಮಾಲಾಲಂಕೃತರಾಗಿರುವಹಾಗೆ ಇರಕ್ಕ ಯುಕ್ತವು. ಈ ವಾಕ್ಯವು (೯) ಪ್ರಮಾಣಗಳಿಂದ ಸೇರಿದ ದೊಡ್ಡ ವಾಕ್ಯದ ನಿಗಮನದಲ್ಲಿ ಕೃತಕೃತ್ಯನನ್ನು ಕುರಿತು ಹೇಳಿರುವ ಪರಮ ಶ್ಲಾಘ್ಯವಾದ ಹಿತೋಪದೇಶವಾಗಿರುವದರಿಂದ ಇದಕ್ಕೆ ತುಂಬಾ ಗಮನವನ್ನು ಕೊಡತಕ್ಕದ್ದಾಗಿರುತ್ತದೆ. ಇವುಗಳಲ್ಲಿರುವ ಹಿತೋಪದೇಶಗಳು ಯಾವುವೆಂದರೆ.—ಭಕ್ತಿ ಪ್ರಪತ್ತಿರೂಪ ಎರಡು ಮಾರ್ಗಗಳಲ್ಲಿ ಯಾವುದಾದರೂ ಒಂದರಮೂಲಕ ಆಶ್ರಯಿಸಿದವನನ್ನು ಕಾಪಾಡುವದರಲ್ಲಿ ಸ್ವತಂತ್ರನು ಸರ್ವೇಶ್ವರನು. ಇವರುಗಳು ಏನಾದರೂ ಐಹಿಕ ವಿಷಯಾಸಕ್ತರಾಗಿ ಪಾಪಗಳನ್ನು ಮಾಡಿದರೆ ಶಿಕ್ಷಿಸುವ ಶಾಸ್ತಾ ಸರ್ವಜ್ಞನಾದ ಸರ್ವೇಶ್ವರನು; ಅದರ ಸಂಬಂಧವು ನಮಗಿಲ್ಲನೆಂದು ತಿಳಿದು, ಅಂತವರ ವಿಷಯದಲ್ಲಿ ದೋಷವನ್ನೆಣಿಸದೆ, ಅದರಲ್ಲಿರುವ ಗುಣಗಳನ್ನು ಗ್ರಹಿಸಿ, ಅದಕ್ಕಾಗಿ ಸಂತೋಷಪಟ್ಟು, ಮನಸ್ಸು ವಾಕ್ಕು ಕರ್ಮಗಳೆಲ್ಲಾ ಪರಿಶುದ್ಧವಾಗಿ, ಮಂಗಳಕರವಾದ ಪ್ರವೃತ್ತಿಯನ್ನೇ ಯಾವಾಗಲೂ ಹೊಂದಿರುವಹಾಗೆನಾಡಿಕೊಂಡು, ಪರಮಪುರುಷನಲ್ಲಿ ಭಕ್ತಿಯನ್ನೂ ತದೀಯರಲ್ಲಿ ಹೆಚ್ಚಾದ ವಿಶ್ವಾಸವನ್ನೂ, ಇಟ್ಟುಕೊಂಡು ಭಾಗವತರೊಡನೆ ಸಮಾಗಮವು ನನಗೆ ದಿವ್ಯ ದಂಪತಿಗಳ ಕೃಪಾ ಪ್ರಭಾವದಿಂದ ಲಭಿಸಿತು ಎಂದು ಹೃಷ್ಟನಾಗಿ, ದಿವ್ಯ ದಂಪತಿಗಳ ಕೃಪೆಯಿಂದ ತನಗೆ ಅಪರಾಧದ ಸಂಬಂಧವು ಉಂಟಾಗುವದಿಲ್ಲವೆಂದು ನಂಬಿ, ಪರಮ ಪದದಲ್ಲಿ ತನಗುಂಟಾಗುವ ಪರಿಪೂರ್ಣ ಬ್ರಹ್ಮಾನುಭವಕ್ಕೂ ಮತ್ತು ಅತನಿಗೆ ನಿರಂತರ ಮಾಡುವ ಪರಿಪೂರ್ಣ ಕೈಙ್ಕರ್ಯ ಸಾಮ್ರಾಜ್ಯಪ್ರಾಪ್ತಿಗೂ, ಇಲ್ಲಿಯೇ ತಾನು ಅಭಿಷಿಕ್ತನಾಗಿದ್ದೇನೆಂದು ಭಾವಿಸಿ, ಅದನ್ನು ಎದುರುನೋಡುತ್ತಾ, ಸಂತೋಷಚಿತ್ತನಾಗಿರಬೇಕೆಂದು ಉಪದೇಶಿಸಿರುತ್ತಾರೆ. ಇದರಿಂದ ಪ್ರಪನ್ನನಿಗೆ ಅತ್ಯನ್ತದೋಷಾವಹವಾದ ಪ್ರವೃತ್ತಿಯು ಭಗವದ್ಭಕ್ತನ ತೇಜೋವಧೆಯು;ಇದು ಸರ್ವಾತ್ಮನಾ ಕೂಡದೆಂದು ಹೇಳಿದಂತಾಯಿತು

ಮನುಸ್ಮೃತಿಯ ಪ್ರಾರಾ ಶ್ಲೋಕವು:—"**ಪ್ರಶಾಸಿತಾರಂ ಸರ್ವೇಷಾಮಣೀಯಾಂಸಮಣೋರಪಿ। ರುಕ್ಮಾಭಂ ಸ್ವಪ್ನಧೀಗಮ್ಯಂ ವಿದ್ಯಾತ್ತಂ ಪುರುಷಂ ಪರಂ॥**" ಎಂಬುದು; ಇದರ ಅರ್ಥವೇನೆಂದರೆ ಸರ್ವೇಷಾಂ - ಸಮಸ್ತ **ಚಿದಚಿತ್ತು**ಗಳಿಗೂ, **ಪ್ರಶಾಸಿತಾರಂ** - "**ಏತಸ್ಯೈವಾಕ್ಷರಸ್ಯ ಪ್ರಶಾಸನೇ ಗಾರ್ಗಿ**" ಎಂಬಲ್ಲೂ, "**ಭಯಾದಸ್ಯಾಗ್ನಿಸ್ತಪತಿ, ಭಯಾತ್ತಪತಿ ಸೂರ್ಯಃ**" ಎಂಬಲ್ಲೂ ಹೇಳಿರುವ ಹಾಗೆ, ಸಮಸ್ತಗಳ ವ್ಯಾಪಾರಕ್ಕೂ ನಿಯಾಮಕನಾಗಿರುವ, **ಅಣೋರಪಿ ಅಣೀಯಾನ್ಸಃ** - ತುಂಬಾ ಸೂಕ್ಷ್ಮವಸ್ತುಗಳಿಗೂ ಸೂಕ್ಷ್ಮವಾಗಿ ಅಂತರ್ಯಾಮಿಯಾಗಿ ವ್ಯಾಪಿಸುವ ಶಕ್ತಿಯುಳ್ಳ, **ರುಕ್ಮಾಭಂ** - ಯದ್ಯಪಿ ಸ್ವರೂಪತಃ ವ್ಯಾಪ್ತಿದಶೆಯಲ್ಲಿ "**ಅಶಬ್ದಮಸ್ಪರ್ಶಮರೂಪಮವ್ಯಯಮ್**" ಎಂದು ಹೇಳಿದ್ದರೂ, ಪ್ರಪನ್ನನ ಅನುಗ್ರಹಕ್ಕಾಗಿ ದಿವ್ಯಮಂಗಳ ವಿಗ್ರಹವನ್ನೆತ್ತಿ ಸುವರ್ಣಕಾಂತಿಯಿಂದ ಕಂಗೊಳಿಸುವ, **ಸ್ವಪ್ನಧೀಗಮ್ಯಮ್** - ಸ್ವಪ್ನಕಾಲದಲ್ಲಿ ಇಂದ್ರಿಯಗಳ ಉಪರತಿ ಇದ್ದು ಮನಸ್ಸುಮಾತ್ರದಿಂದ ಹೇಗೆ ಗ್ರಾಹ್ಯನೋ ಹಾಗೆ, "**ನೈವಾಸೌ ಚಕ್ಷುಷಾ ಗ್ರಾಹ್ಯೋ ನ ಚ ಶಿಷ್ಟೈರಪೀನ್ದ್ರಿಯೈಃ। ಮನಸಾತು ಪ್ರಸನ್ನೇನ ಗೃಹ್ಯತೇ ಸೂಕ್ಷ್ಮದರ್ಶಿಭಿಃ**" ಎಂಬ ವ್ಯಾಸೋಕ್ತ್ಯನುಸಾರ ಕಣ್ಣು ಮತ್ತು ಇತರ ಇಂದ್ರಿಯಗಳಿಗೂ ಗ್ರಾಹ್ಯನಲ್ಲದೆ, ಪ್ರಪನ್ನನ ಪರಿಶುದ್ಧ ಮನಸ್ಸಿನಿಂದ ಮಾತ್ರ ಗ್ರಾಹ್ಯನು, ಇಂತಹ ಪ್ರಸಿದ್ಧನಾದ ಪರಮ ಪುರುಷನನ್ನು, **ವಿದ್ಯಾತ್**-ಧ್ಯಾನಿಸತಕ್ಕದ್ದು. ಈ ಶ್ಲೋಕವನ್ನು ಏತಕ್ಕೆ ಉದಾಹರಿಸಿದರೆಂದರೆ ಸರ್ವಾಪರಾಧಕ್ಕೂ ಕೂಡ **ಪ್ರಶಾಸಿತಾ**ವಾಗಿ ಪರಮ ಪುರುಷನು ಸನ್ನಿಹಿತನಾಗಿರುವಾಗ, ಯಾವನೋ ಒಬ್ಬ ಪ್ರಪನ್ನನು ಅತಿಕ್ರಮಿಸಿ ನಡೆದನೆಂದು, ನಾವು ಅಂತವನನ್ನು ನಿಂದಿಸಿ, ಶಿಕ್ಷಿಸಲೆತ್ನಿಸುವದು, ಸ್ವತಂತ್ರನಾದ ಪರಮಾತ್ಮನ ಕೆಲಸವನ್ನು ಈ ಸರ್ವ ಪಾರತಂತ್ರ್ಯವನ್ನು ಹೊಂದಿದವನು ತನ್ನಲ್ಲಿ ಆರೋಪಿಸಿಕೊಳ್ಳುವದು ತುಂಬಾ ಹಾಸ್ಯಾಸ್ಪದವು. ಈ ಭಾವವನ್ನು ಪ್ರದರ್ಶಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಲಜ್ಜಾಸ್ಪದವು ಹೇಗೆ? ಎಂದರೆ, ಪ್ರಾಜ್ಞನಾದ ಆಂಜನೇಯನು ರಾವಣವಧಾನಂತರ ಸೀತೆಗೆ ಮಹಾಪರಾಧಗಳನ್ನೆಸಗಿದ ರಾಕ್ಷಸಿಯರನ್ನೆಲ್ಲಾ ಒಂದೇ ಸಲ ಕೊಂದುಬಿಡುತ್ತೇನೆ, ಆಜ್ಞೆಯನ್ನು ಕೊಡು ಎಂದು ಸೀತಾನುಜ್ಞೆಯನ್ನು ಪ್ರಾರ್ಥಿಸಿದರೂ ಕೂಡ, ಹಾಗೆ ಶಿಕ್ಷಿಸುವ ವಿಷಯದಲ್ಲಿ ಪ್ರಾರ್ಥನೆಯೂ ಕೂಡ ಲಜ್ಜಾವಹವೆಂದು ತೋರಿಸುವದಕ್ಕಾಗಿ, "**ರಾಜಸಂಶ್ರಯವಶ್ಯಾನಾಂ ಕುರ್ವನ್ತೀನಾಂ ಪರಾಜ್ಞಯಾ। ವಿಧೇಯಾನಾಂಚ ದಾಸೀನಾಂ ಕಃ ಕುಪ್ಯೇದ್ವಾನರೋತ್ತಮ**" ಎಂದು ಮೊದಲಿಸಿ, ಈ ಪ್ರಪನ್ನರೂ ಕೂಡ ಪ್ರಾರಬ್ಧ ಕರ್ಮಕ್ಕೆ ಅಧೀನರಾಗಿ ತಮ್ಮ ಸ್ವರೂಪಕ್ಕೆ ಯೋಗ್ಯವಲ್ಲದ ಕಾರ್ಯವನ್ನೆಸಗಿದರೆ, ಅಂತವರನ್ನೇಲೂ

ನಾವು ಕೋಪಿಸಬಹುದೋ ? ಎಂದೇನಾದರೂ ಹೇಳುವಹಾಗೆ ಅನುಗ್ರಹ ಮುಖಳು, ಸ್ವೈವಕಾರ್ಯ ಮುಕೋಭನನ್ - ಅನುಜ್ಞಳ ಕಾರ್ಯವನ್ನು ಮಾಡುವದು ಸ್ವರೂಪವಲ್ಲ ವೆಂಬ ಅನೋಘಾಂಶವನ್ನು ಲೋಕಮಾತೆಯು ಉಪದೇಶಿಸಿರುತ್ತಾಳೆ. ಇವರೆಲ್ಲಾ. ತ್ರಿಜಟೆಯು ಶರಣಾಗತಿಯನ್ನು ಮಾಡಿದುದರಿಂದ ಪ್ರಪನ್ನರು, ಅವರನ್ನು ಶಿಕ್ಷಿಸುವ ಕಾರ್ಯವು ನಿನ್ನ ಸ್ವರೂಪಕ್ಕೆಅರ್ಹವಲ್ಲವೆಂದು ಹೇಳುವಹಾಗೆ ತೋರುತ್ತದೆ (ರಾಮಾ ಯುದ್ಧ, ೧೧೬. ೪೫) ಈ ಮಹತ್ತಾದ ಉಪದೇಶವನ್ನು ಕೈಕೊಂಡವನೀಗ ತುಂಬಾ ಜ್ಞಾನಿಯಾದ ಪ್ರಪನ್ನನೆಂದು ಭಾವಿಸತಕ್ಕದ್ದಾಗಿರುತ್ತದೆ. ಅಂತಹ ಉಪದೇಶವನ್ನು ಶ್ರೀ ನಿಗಮಾನ್ತರು ಇಲ್ಲಿ ಉಪದೇಶಿಸಿರುವದರಿಂದ ಅವರ ಮಹತ್ವವು ಎಂತಾದ್ದೆಂಬುದನ್ನು ವಾಚಕರೇ ವಿಮರ್ಶಿಸಬಹುದು.

"ಪಯಿಲುಮ್ ತಿರುವುಡೈಯಾರ್" ಎಂಬ ಪಾಶುರವು ಯಾವುದೆಂದರೆ—

ಪಯಿಲುಞ್ಜುಡರೊಳಿಮೂರ್ತ್ತಿಯೈ ಪ್ಪಜ್ಗಯ ಕಣ್ಣನೈ ।
ಪಯಿಲು ವಿನಿಯ ನಮ್ಪಾರ್ಕಡಲ್ಚ್ಚೇರ್ನ್ದ ಪರಮನೈ ।
ಪಯಿಲ ನ್ದಿರುವುಡೈಯಾರ್ ಯವರೇಲು ಮವರ್ಕಂಡೀರ್ ।
ಪಯಿಲುಮ್ಪಿರ ಪ್ಪಿಡೈ ತೋರೆನ್ಮ್ಮೈಯಾಳುಮ್ ಪರಮರೇ ॥

ಇದರರ್ಥವು —ನಿಬಿಡವಾದ ತೇಜಸ್ಸುಳ್ಳ ಸುಂದರ ದಿವ್ಯಮಂಗಳವಿಗ್ರಹವನ್ನುಳ್ಳವನಾಗಿ, ತಾವರೆ ಪುಷ್ಪದಹಾಗೆ ಕೋಮಲವಾಗಿ ಕೃಪಾಸೂಚಕ ಕಣ್ಣುಗಳನ್ನುಳ್ಳವನಾಗಿ, ಇಂತಹ ಲಾವಣ್ಯಾತಿಶಯವನ್ನು ಹೊಂದಿದವನನ್ನು ಧ್ಯಾನಿಸಿ ತಿಳಿದ ಪ್ರಪನ್ನರಿಗೆ ನಿರತಿಶಯ ಭೋಗ್ಯಭೂತನಾಗಿ, ತನಗೆ ನಿರತಿಶಯ ಪ್ರಿಯಳಾದ ಲಕ್ಷ್ಮಿಯು ಜನ್ಮಸ್ಥಾನವಾದುದರಿಂದ ತನಗೆ ಕ್ಷೀರಸಾಗರವು ಬಹುಪ್ರಿಯವಾಗಿ ಅಲ್ಲಿ ಪವಡಿಸಿರುವ, ಪರತ್ವಾದಿಗುಣಗಳಿಂದ ಎಂದರೆ ವಿಗ್ರಹ ಮತ್ತು ಆತ್ಮ ಗುಣಗಳಿಂದ ಪರಮ ಶ್ರೇಷ್ಠನಾಗಿರುವ ಸರ್ವ ಶೇಷಿಯಾದ ಸರ್ವೇಶ್ವರನೆಂದು ತಿಳಿದು,ಶೇಷ ಸಂಪತ್ತನ್ನು ಹೊಂದಿರುವ ಮಹಾಭಾಗವತರುಗಳು, ಪ್ರಪನ್ನರಾದ ನಮ್ಮನ್ನು ಆಳುವ ಸ್ವಾಮಿಗಳು ಶೇಷಿಗಳು ಎಂದು ಹೇಳಿರುತ್ತಾರೆ.

"ಶಿರಿಯಾಮಸುಶರುಡಂ" ಎಂಬ ಪಾಶುರವು ಯಾವುದೆಂದರೆ—

ಉರುಮೋ ಪಾವಿ ಯೇನುಕ್ಕಿವ್ವುಲಗ ಮೂನ್ರು ಮುಡನಿರೈಯ ।
ಚ್ಚಿರುಮಾಮೇನಿ ನಿಮಿರ್ತ್ತ ಪೆಞ್ಚ್ಚಿನ್ಪಾಮುರೈಕ್ಕಟ್ಟುರುಕ್ಕುರಳ್ ।
ನರುಮಾವಿರೈ ನಾಣ್ಮಲರಡಿಕ್ಕೀಳ್ ಪ್ಪುಗದಲನ್ರಿ ಯವನಡಿಯಾರ್ ।
ಶಿರುಮಾಮನಿಶರಾಯೆನ್ನೈಯಾಣ್ಡಾರಿಜ್ಗೇ ತಿರಿಯವೇ ॥

ಇದರ ತಾತ್ಪರ್ಯವು.—ಮೂರು ಲೋಕವನ್ನೂ ಒಂದೇ ಸಲ ಪೂರ್ಣವಾಗಿ ಅನುಭವಿಸುವದಕ್ಕಾಗಿ ಮೊದಲು ವಾಮನರೂಪದಲ್ಲಿನೋಡಲು ವಿಲಕ್ಷಣವಾದ

## ರಹಸ್ಯತ್ರಯೇ ಸಾಧ್ಯೋಪಾಯ ಪ್ರಭಾವಾನುಸಂಧಾನ ಸ್ಥಲಮ್.

**ಇಪ್ಪಡಿ ವ್ಯವಸ್ಥಿತಮಾನ ಪ್ರಭಾವಮ್ ರಹಸ್ಯತ್ರಯತ್ತಿಲ್ ಫಲ ನಿರ್ದೇಶ ಪ್ರದೇಶಙ್ಗಳಿಲೇ ಅನುಷಙ್ಗಸಿದ್ಧಮಾಗ ವನುಸಂಧೇಯಮ್.**

---

ಮಾಹಾತ್ಮ್ಯೆಯುಳ್ಳ ಚಿಕ್ಕದಾದ ದಿವ್ಯಮಙ್ಗಳ ರೂಪವನ್ನು ಹೊಂದಿ, ಅದನ್ನು ಬೆಳಿಸುವವನಾಗಿ ನಮಗೆ ನಿರತಿಶಯ ಭೋಗ್ಯನಾಗಿ, ಕೆಂದಾವರೆಯಹಾಗೆ ಶೋಭಾಯಮಾನವಾದ ಕಣ್ಣುಗಳನ್ನುಳ್ಳವನಾಗಿರುವ, ಇಂತಹ ವಾಮನರೂಪನ ಪರಿಮಳವ ಶ್ಲಾಘ್ಯವಾದ, ಮಕರಂದದಿಂದ ತುಂಬಿ ಆಗತಾನೇ ಅರಳಿದ ತಾವರೇ ಪುಷ್ಪದಹಾಗಿರುವ, ಪಾದಗಳ ಕೆಳಗೆ ಸೇರಿಕೊಣವೆಂದರೆ ಆ ವಾಮನನಿಗೆ ಶೇಷಭೂತರಾಗಿ, ಮನುಷ್ಯ ಸಜಾತೀಯರಾಗಿ ಕೀಳಾದವರನ್ನು, ದಿವ್ಯಸೂರಿಗಳಿಗೆ ಸಮಾನವಾದ ಮಹಿಮೆಯನ್ನುಂಟುಮಾಡುವಹಾಗೆ ಸಮ್ಯಕ್ಕನ್ನು ಪರಿಪಾಲಿಸುವ ಮಹಾಭಾಗವತರಾದ ಶ್ರೀವೈಷ್ಣವರು ಈ ಲೋಕದಲ್ಲೇ ಭಗವತ್ಕೃಪಯಾ ಸಂಚರಿಸುತ್ತಿರುವಾಗ, ಅವರನ್ನು ಬಿಟ್ಟು, ಮಹಾ ಪಾಪಿಯಾದ ನನಗೆ ಭಗವಂತನಪಾದವನ್ನು ಹುಡುಕಿಕೊಂಡು ಹೋಗುವದು ಉಚಿತವೇ? ಎಂಬುದು. ಇದರಿಂದ ಪುರುಷಾರ್ಥಕಾಷ್ಠೆಯು ಹೇಳಲ್ಪಟ್ಟಿತು. **"ನಹ್ಯಮ್ಮಯಾನಿ ತೀರ್ಥಾನಿ ನದೇವಾ ಮೃಚ್ಛಿಲಾಮಯಾಃ। ತೇ ಪುನನ್ತ್ಯುರುಕಾಲೇನ ದರ್ಶನಾದೇವ ಸಾಧವಃ"** ಎಂಬುದು ಅನುಸಂಧೇಯವು.

**ಇಪ್ಪಡಿ ವ್ಯವಸ್ಥಿತಮಾನ** - ಈಗ ನಾವು ಮೇಲೆ ಉಪಪಾದಿಸಿದ ರೀತಿಯಲ್ಲಿ ನಿರ್ಧರಿಸಲ್ಪಟ್ಟಿರುವ. **ಪ್ರಭಾವಮ್** - ಸಾಧ್ಯೋಪಾಯವಾದ ಪ್ರಪತ್ತಿಯ ಪ್ರಭಾವವು, **ರಹಸ್ಯತ್ರಯತ್ತಿಲ್** - ಮೂರು ರಹಸ್ಯದಲ್ಲೂ, **ಫಲನಿರ್ದೇಶ ಪ್ರದೇಶಙ್ಗಳಿಲೇ** - ಫಲವನ್ನು ನಿರ್ದೇಶಿಸಿರುವ ಸ್ಥಳಗಳಾದ ಮೂಲಮಂತ್ರದ ಮತ್ತು ದ್ವಯದ **ನಾರಾಯಣಾಯ** ಎಂಬ ಚತುರ್ಥ್ಯಂತ ಪದಗಳಲ್ಲೂ, ಮತ್ತು ಚರಮ ಶ್ಲೋಕದ **ಮೋಕ್ಷಯಿಷ್ಯಾಮಿ** ಎಂಬ ಪದದಲ್ಲೂ, **ಅನುಷಙ್ಗ ಸಿದ್ಧಮಾಗ** - ಫಲವು ಪ್ರಭಾವಕ್ಕೆ ಸಂಬಂಧಿಸಿದುದಾದುದರಿಂದ, ಅದರೊಂದಿಗೇ ಸಂಬಂಧಿಸಿದುದಾಗಿ, **ಅನುಸಂಧೇಯವು.** ಫಲವು ನಿರತಿಶಯವಾದುದಾಗಿ ಪರಮ ಮಾಹಾತ್ಮ್ಯಯುಳ್ಳದಾದುದರಿಂದ, ಆ ಫಲವನ್ನುಂಟುಮಾಡುವ ಸಾಧ್ಯೋಪಾಯದ ಪ್ರಭಾವವೂ ನಿರತಿಶಯವಾದುದೇ ಎಂಬುದು ತಾತ್ಪರ್ಯವು.

**ಸಾರದೀಪಿಕಾ ವ್ಯಾಖ್ಯಾತೃವು** ಈ ಅಧಿಕಾರದಲ್ಲಿ ಹೇಳಿರುವ ಅಂಶಗಳನ್ನು ಈ ಮುಂದಿನ ಶ್ಲೋಕಗಳಿಂದ ಸಙ್ಗ್ರಹಿಸುತ್ತಾರೆ.

ಪ್ರಪನ್ನಸ್ಯೈಹಿಕಂ ದುಃಖ ಮುಸಹ್ಯ ಮಪಿ ನೋ ಹರಿಃ ।
ನಿವಾರಯತ್ಯತಃ ಕರ್ಮಪ್ರಾರಬ್ಧಂ ನ ವಿನಾಶಯೇತ್ ॥
ಇತ್ಯೇತದ್ವಚನಂ ಮಂದಂ ಹಿತಾರ್ಥೀ ದುಃಖ ಮೈಹಿಕಮ್ ।
ಹರಿ ರ್ನಿವರ್ತಯೇನ್ನೈವ ಪ್ರಾರಬ್ಧಾಂಶಂತು ನಾಶಯೇ ॥
ಅಸ್ಮದ್ದರ್ಶನ ನಿಷ್ಠಾನಾಂ ಕರ್ಮಜ್ಞಾನಾದಿ ವರ್ತಿನಾಮ್ ।
ಕಾದಾಚಿತ್ಕಾರ್ಥ ಸಂಗಾದೇ ರ್ನಿಂದ್ಯತಾ ನೋಪಜಾಯತೇ ॥
ಐಕಾಂತ್ಯಂ ಸುದೃಢಂ ಯೇಷು ಕ್ವಚಿತ್ತೇಷು ಸ್ಖಲತ್ಸ್ವಪಿ ।
ಅವಜ್ಞಾ ಪರಿಹರ್ತವ್ಯೇತ್ಯೇವಂ ಶಾಸ್ತ್ರ ವಿನಿರ್ಣಯಃ ॥
ಪ್ರಪನ್ನ ವೇಷಮಾತ್ರ ಚ್ಛ ತದ್ಜ್ಞಾನಾವಧಿ ವೈಷ್ಣವಃ ।
ಆದರಾದ ನುವರ್ತ್ಯೇತ ಕಿಂ ಪುನ ಸ್ಸತ್ಪಥೇ ಸ್ಥಿತಾ ॥
ಭಗವತ್ಕ್ಷೇತ್ರವಸನಂ ದೇಹಿನಾ ಮುಪಕಾರಕಮ್ ।
ಪ್ರಾತಿಕೂಲ್ಯತ್ಯಜಾನೇನ ವಿಪಕ್ಷೇತಿ ಪ್ರಸಂಗತಃ ॥

ಮೂಲಮಂತ್ರದ ಮತ್ತು ದ್ವಯದ ನಾರಾಯಣಾಯ ಎಂಬಲ್ಲಿರುವ ಚತ್ರುರ್ಥಿಯು ಪರಿಪೂರ್ಣ ಬ್ರಹ್ಮಾನುಭವವನ್ನೂ, ತತ್ಕೈಂಕರ್ಯಪ್ರಾಪ್ತಿಯನ್ನೂ, ಸೂಚಿಸುತ್ತದೆ. ಇಂತಹ ಅಮೋಘ ಫಲಪ್ರಾಪ್ತಿಯುಂಟಾಗಬೇಕಾದರೆ ಸಾಧ್ಯೋಪಾಯದ ಪ್ರಭಾವವೂ, ಆದರಿಂದ ಪ್ರೀತನಾಗುವ ಸಿದ್ಧೋಪಾಯನ ಕೃಪಾ ಪ್ರಭಾವವೂ ಸಹ ಸೂಚಿತವು ಎಂಬ ಭಾವವು. ಆದುದರಿಂದ ಪ್ರಾರಬ್ಧ ಕರ್ಮವನ್ನು ಹೋಗಲಾಡಿಸುವ ಶಕ್ತಿಯು ಭರನ್ಯಾಸಕ್ಕಿಲ್ಲವೆಂಬ ವಾದದ ನಿರಾಸವೂ, ಪ್ರಪತ್ತಿಗೆ ಬುದ್ಧಿಪೂರ್ವೋತ್ತರಾಘವನ್ನೂ ನಿವರ್ತಿಸುವ ಶಕ್ತಿಯುಂಟೆಂಬ ವಾದದ ನಿರಾಸವೂ, ಪ್ರಪತ್ತಿಯು ಕ್ಷಣಕಾಲಮಾತ್ರವನುಷ್ಠೇಯವಾಗಿದ್ದರೂ, ಅಮೋಘ ಫಲವಾದ ಮೋಕ್ಷವನ್ನು ಕೊಡುವ ಮಾಹಾತ್ಮ್ಯೆಯು ಸಿದ್ಧೋಪಾಯನ ಕೃಪೆಯಿಂದ ಉಂಟಾದುದು ಎಂಬುದೂ, ಐಹಿಕ ಪ್ರವೃತ್ತಿಮಾತ್ರವಿರುವದರಿಂದ ಪ್ರಪನ್ನ ಭಾಗವತನನ್ನು ದೂಷಿಸಕೂಡದೆಂಬುದೂ, ಆದುದರಿಂದ ಪ್ರಪನ್ನಾಪಚಾರವು ತುಂಬಾ ತೀವ್ರವಾದುದು, ಸರ್ವಾತ್ಮನಾ ಕೂಡದೆಂಬುದೂ, ಆಕಾರಣದಿಂದ ಅದು ಭಕ್ತಿ ಪ್ರಪತ್ತಿಗಳ ಪ್ರಭಾವದಿಂದ, ತನ್ನಿಷ್ಠರಿಗೆ ಸ್ಖಾಲಿತ್ಯಉಂಟಾದರೂ ಕ್ರಮೇಣ ಅವರಿಗೆ ಮೋಕ್ಷಪ್ರಾಪ್ತಿ ಯುಂಟೆಂಬುದೂ, ನಾಮ ಸಂಕೀರ್ತನವು ಮತ್ತು ಭಗವತ್ ಕ್ಷೇತ್ರವಾಸವೂ ಸಹ, ಪ್ರಾತಿಕೂಲ್ಯವಿಲ್ಲದಿದ್ದರೆ, ಪಾವನತ್ವವನ್ನುಂಟುಮಾಡಿ, ಉಪಾಯಾನುಷ್ಠಾನಕ್ಕೆ ಸಹಕಾರಿ ಎಂಬುದೂ, ಪ್ರಪನ್ನನ ವಿಷಯದಲ್ಲಿ ದೇಹಾವಸಾನಕಾಲದಲ್ಲಿ ಅನ್ತಿಮ ಸ್ಮರಣೆಗೆ ಸಹಕಾರಿ ಎಂಬುದೂ, ಅಂತಹ ಕ್ಷೇತ್ರಗಳಲ್ಲಿರುವ ಪ್ರಾತಿಕೂಲ್ಯರು ವಿಶೇಷ ಶಿಕ್ಷೆಗೆ ಗುರಿಯಾಗುವರೆಂಬುದೂ, ಈ ಅಧಿಕಾರದಲ್ಲಿ ಉಪಪಾದಿತವು.

 

## ಪ್ರಪನ್ನಾನಾಂ ಮಾಹಾತ್ಮ್ಯಮಪರಿಚ್ಛೇದ್ಯಮಿತಿ ಅಸ್ಮದಾಚಾರ್ಯಾ ಉಪದಿದಿಶುರಿತ್ಯಾಹ

ಉಣ್ಮೈಯುರೈಕ್ಕುಮ್ ಮರೈಗಳಿಲೋಙ್ಗಿಯ ವುತ್ತಮನಾರ್ ।
ವಣ್ಮೈಯುಳಪ್ಪರಿತಾದಲಿಲ್ ವನ್ದು ಕಳಲ್ ಪಣಿವಾರ್ ।
ತಣ್ಮೈಕಿಡಕ್ಕಿಡ ತರ (ತ್ತಾ) ಮಳಿನೆನ್ನ ವಿಯಪ್ಪಿಲತಾಮ್ ।
ಉಣ್ಮೈಯುರತ್ತನ ರೋರನ್ತವಿರ ವುಯರ್ನ್ದನರೇ ॥೩೩॥

---

## ಪ್ರಪನ್ನರ ಮಾಹಾತ್ಮ್ಯೆಯು ಅಪರಿಚ್ಛೇದ್ಯವೆಂದು ನಮ್ಮ ಆಚಾರ್ಯರು ತಮಗೆ ಉಪದೇಶಿಸಿದರೆನ್ನುತ್ತಾರೆ.

ಸಮಸ್ತವರ್ಣದವರಲ್ಲೂ, ಪ್ರಪನ್ನರಾಗಿ ಯಾರು ಯಾವಾಗ ಅಮೋಘ ಪ್ರಭಾವವನ್ನೂ ತಮ್ಮ ವರ್ಣದವರಲ್ಲಿ ಪ್ರಾಶಸ್ತ್ಯವನ್ನೂ ಹೊಂದಿದರೋ, ಆಗ ಅವರು ಸೌಲಭ್ಯ ಸೌಶೀಲ್ಯ ಕೃಪೌದಾರ್ಯ ಗುಣಗಳಿಂದ ಪ್ರೇರಿತನಾದ ಸರ್ವ ಶರಣ್ಯನಾದ ಮುಕುಂದನ ಕೃಪೆಯಿಂದ ದೇಹಾವಸಾನದಲ್ಲಿ ಶ್ರುತಿ ಸಿದ್ಧವಾದ ಪರಮಾತ್ಮನೊಂದಿಗೆ ಪರಮ ಸಾಮ್ಯವನ್ನು ಹೊಂದಿ ಪರಿಪೂರ್ಣ ಬ್ರಹ್ಮಾನುಭವವನ್ನು ಹೊಂದುವರೆಂದು ನಮ್ಮ ಪರಮಾಚಾರ್ಯರು ಉಪದೇಶಿಸಿರುತ್ತಾರೆಂದು ತಿಳಿಸಿ, ಭರನ್ಯಾಸವು ನಿರತಿಶಯ ಮಹಿಮೆಯುಳ್ಳದೆಂಬ ಅಧಿಕಾರಾರ್ಥವನ್ನು ಸಙ್ಗ್ರಹಿಸಿ ಈ ಮುಂದಿನ ಪಾಶುರದಲ್ಲಿ ಹೇಳಿರುತ್ತಾರೆ.—

ಅರ್ಥವು:—ನಿಕೃಷ್ಟನಾಗಿದ್ದರೂ, ಪ್ರಪನ್ನನಾಗಿ ಭಾಗವತನೆನಿಸಿದವನಿಗೂ ಸರ್ವೇಶ್ವರನು ಇತರ ಪ್ರಪನ್ನರಹಾಗೆ ನಿರತಿಶಯ ಫಲವನ್ನು ಕೊಡುವನು, ತನಗೆ ಸಮಾನನನ್ನಾಗಿ ಮಾಡಿಕೊಳ್ಳುವನು; ಇದೀಗ ಉಪನಿಷತ್ತುಗಳಲ್ಲಿರುವ ಯಥಾರ್ಥವಾದ ಅಭಿಪ್ರಾಯವೆಂದು ಈ ಅಧಿಕಾರದಲ್ಲಿ ಉಪಪಾದಿಸಿರುವದು, ಏನೂ ಅತಿಶಯೋಕ್ತಿಯಲ್ಲವು. ಅಂತಹ ವೇದಾಂತಾರ್ಥವನ್ನು ಯಥಾರ್ಥವಾಗಿ ಗ್ರಹಿಸಿ ತಮಗೆ ಉಪದೇಶಿಸಿದವರು, ಪರಮೋದಾರರಾದ ತಮ್ಮ ಆಚಾರ್ಯರುಗಳಾದ ವಾದಿಹಂಸಾಂಬುವಾಹಾದಿಗಳೆಂದು ಅವರುಗಳನ್ನು ಕೃತಜ್ಞತಾಭಾವದಿಂದ ಕೊಂಡಾಡುತ್ತಾರೆ. **ಉಣ್ಮೈಯುರೈಕ್ಕುಮ್** - ಸತ್ಯವಾದುದನ್ನೇ ಉಪದೇಶಿಸುವ, ಅಪೌರುಷೇಯವಾಗಿರುವದರಿಂದ ಬಾಧ್ಯ ಬಾಧಕಾದಿ ದೋಷಗಳೊಂದೂ ಇಲ್ಲದೆ ಸರ್ವ ಸಮಂಜಸವಾಗಿ ಯಥಾರ್ಥವಾದುದನ್ನೇ ಉಪದೇಶಿಸುವ, ಮೊದಲೆಲ್ಲಾ ಶ್ರುತಿಯು ಒಂದು ವಿಧವಾಗಿ ಹೇಳಿ, ಅನಂತರ ಅದೇ ನೇತಿ ನೇತಿ ಎಂದು ಹಿಂದೆ ಹೇಳಿದುದಕ್ಕೆ ವಿರುದ್ಧಾರ್ಥವನ್ನು ಎಂದಿಗೂ ಬೋಧಿಸುವದಿಲ್ಲವು, ಸರ್ವ ಸಮಂಜಸವಾಗಿ

ಸತ್ಯವಾದುದನ್ನೇ ಉಪದೇಶಿಸುವ, **ಮರೈಗಳಿಲ್** - ವೇದಗಳಲ್ಲಿ, ಎಲ್ಲಾ ವೇದ ಭಾಗಗಳೂ ಪ್ರಪನ್ನನಿಗೆ ಬೇಕಿಲ್ಲವು, **ತ್ರೈಗುಣ್ಯ ವಿಷಯಾ ವೇದಾಃ ನಿಸ್ತ್ರೈಗುಣ್ಯೋ ಭವಾರ್ಜುನ**" (ಗೀ. ೨.೪೫) ಎಂಬ ಶ್ರೀ ಕೃಷ್ಣಭಗವಾನರವರ ದಿವ್ಯೋಕ್ತಿಯನ್ನನುಸರಿಸಿ ಪ್ರಪನ್ನನಿಗೆ ಉಪಾದೇಯವಾದವು ಎಲ್ಲಾ ಉಪನಿಷತ್ತುಗಳು, ಅವುಗಳಲ್ಲಿ **ಓಙ್ಗಿಯ**-ಪ್ರತಿಪಾದ್ಯನಾಗಿರುವ, ಹೇಗೆ ಪ್ರತಿಪಾದ್ಯನೆಂದರೆ **ನತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ** ಎಂದು ಹೇಳಿರುವಹಾಗೆ, ನಿಸ್ಸಮಾಭ್ಯಧಿಕನಾಗಿ ಸಕಲ ಜಗತ್ಕಾರಣನಾಗಿ, ನಮ್ಮ ಸತ್ತಾ ಸ್ಥಿತಿ ನಿಯಮಗಳಿಗೆ ಹೇತುವಾಗಿ, ನಮ್ಮ ರಕ್ಷಣೆಯಲ್ಲಿ ಬದ್ಧಾದರನಾಗಿ ಇದ್ದಾನೆಂದು ಪ್ರತಿಪಾದ್ಯನಾಗಿರುವ, **ಉತ್ತಮನಾರ್** - ಪರಮ ಪುರುಷನು, **ವೇದಾಹಮೇತಂ ಪುರುಷಂ ಮಹಾನ್ತಮ್** ಎಂದಲ್ಲವೇ ಉಪನಿಷತ್ತು ಹೇಳುತ್ತದೆ, ಇಂತಹ ಉತ್ತಮ ಪುರುಷನ, **ವಣ್ಮೈ** - ಪ್ರಭಾವವು, ಸಿದ್ಧೋಪಾಯನಾಗಿ, ಕಾದುಕೊಂಡು ನಮ್ಮನ್ನು ರಕ್ಷಿಸಬೇಕೆಂದು ಕಂಕಣ ಬದ್ಧನಾಗಿರುವ ಪ್ರಭಾವವು, **ಅಳಪ್ಪರಿದು** - ಇಷ್ಟು ಎಂದು ವಿಮರ್ಶಿಸಿ ತಿಳಿಯಲು ಅಸಾಧ್ಯವಾದುದು, **ಆದಲಿಲ್** - ಆ ಸಿದ್ಧೋಪಾಯನ ಪ್ರಭಾವವು ಅಪರಿಚ್ಛಿನ್ನವಾದುದರಿಂದ, **ವನ್ದು** - ಆಕಿಂಚಿನ್ಯಾನನ್ಯಗತಿತ್ವಯುಕ್ತರಾಗಿ ಬಂದು, **ಕಳಲ್ ಪಣಿವಾರ್** - ಭಗವಂತನ ಚರಣಾರವಿಂದವೇ ತಮಗೆ ಸರಿಯಾದ ಆಶ್ರಯವೆಂಬ ಸಂಪೂರ್ಣ ಮಹಾ ವಿಶ್ವಾಸದಿಂದ, ಆದಕ್ಕಾಗಿ ತದೀಯರಾದ ಭಾಗವತರ ಪಾದದಲ್ಲಿ ಬಿದ್ದವರು, **ತಣ್ಮೈ ಕಿಡಕ್ಕಿಡ** - ಅವರಿಗೆ ಶೂದ್ರಾದಿ ಅಪಕೃಷ್ಟಜಾತಿಯು ಇದ್ದರೂ ಕೂಡ, **ತರಂ** - ಅಂತಹ ಪ್ರಪನ್ನರ ಪ್ರಭಾವವು, **ಅಳವಿಟ್ಟರಿಯಪ್ಪು** - ಪರಿಚ್ಛಿನ್ನವಾದುದು ಎಂಬುಕ್ತಿಯು, ಹೇಗೆಂದರೆ ಕೆಲವು ಪ್ರಪನ್ನರು ದೋಷಯುಕ್ತರು, ಇನ್ನು ಕೆಲವರು ನಿರ್ದೋಷಿಗಳು, ಕೆಲವರು ಮಂದಾಧಿಕಾರಿಗಳು ಕೆಲವರು ಪೂರ್ಣಾಧಿಕಾರಿಗಳು ಎಂದು ಹೀಗೆ ಅವರುಗಳ ಪ್ರಭಾವದಲ್ಲಿ ತಾರತಮ್ಯವನ್ನು ಹೇಳುವ ದೋಷೋಕ್ತಿಯು, **ಇಲತಾಮ್** - ಇಲ್ಲದಿರುವ ತಾವಾದರೋ, ಆದುದರಿಂದ ತಾವು ಎಂತವರೆಂದರೆ ಎಲ್ಲಾ ಪ್ರಪನ್ನ ಭಾಗವತರ ಮಹಿಮೆಯು ಅಪರಿಚ್ಛಿನ್ನವಾದುದೆಂದು ಭಾವಿಸುವವರು ಎಂಬ ಭಾವವು, "**ಯೋ ಹ್ಯೇನಂ ಪುರುಷಂ ವೇದ, ತಂ ದೇವಾ ಅಪಿ ನತಂ ವಿದುಃ**" ಯಾವನು ಪರಮ ಪುರುಷನನ್ನು ಸಾಧ್ಯೋಪಾಯದಿಂದ ಆಶ್ರಯಿಸುತ್ತಾನೋ, ಅಂತವನ ಮಹಿಮೆಯನ್ನು ದೇವತೆಗಳೂ ಕೂಡ ತಿಳಿಯರೆಂದು ಹೇಳಿರುವಹಾಗೆ ಅಪರಿಚ್ಛಿನ್ನವೆಂದು ಭಾವಿಸುವ ತಾವು, **ಓರನ್ತ್ವಿರ** - ಇಂತಹ ತಾರತಮ್ಯ ರೂಪ ಪಕ್ಷಪಾತಾದಿಗಳು ಯಾವುವೂ ಇಲ್ಲವಹಾಗೆ, **ಉಯರ್ನ್ದನರೇ**-ಉಪದೇಶಿಸಿದರಲ್ಲವೇ? ಯಾರು ಎಂದರೆ ತಮ್ಮ ಪೂರ್ವಾಚಾರ್ಯರಾದ ಕಿಡಾಂಬಿ ಅಪ್ಪುಳ್ಳಾರ್ ಮೊದಲಾದವರು ಎಂಬ ಭಾವವು.

ಪ್ರಪನ್ನರಲ್ಲಿ ತಾರತಮ್ಯವು ಸ್ವಲ್ಪವೂ ಇಲ್ಲವು. ಇದು ಶ್ರೀರಾಮಪ್ರವೃತ್ತಿ ಯಿಂದಲೇ ವ್ಯಕ್ತವು. ಅಂಕೇ ಭರತಮಾರೋಪ್ಯ ಮುದಿತಃ ಪರಿಷಸ್ವಜೇ (ರಾ ಯುದ್ಧ. ೧೩೦. ೪೧) ಎಂಬಲ್ಲಿ ತನ್ನ ಪ್ರಿಯ ತಮ್ಮನಾದ ಭರತನನ್ನು ಆಲಿಂಗಿಸಿದಹಾಗೆಯೇ, ಗುಹನು ನೀಚಜನ್ಮನಲ್ಲಿ ಹುಟ್ಟಿದರೂ ಪರಮ ಭಾಗವತ ನಾಗಿ, ರಾಜ್ಯವೊದಲಾಗಿ ಸರ್ವಸ್ವವನ್ನೂ ಶ್ರೀರಾಮನಲ್ಲಿ ಸಮರ್ಪಿಸಿದುದರಿಂದ ಪ್ರೀತನಾಗಿ, ಭುಜಾಭ್ಯಾಂಸಾಧು ಪೀನಾಭ್ಯಾಂಪೀಡಯನ್ ವಾಕ್ಯಮಬ್ರವೀತ್" ಎಂದು ಶ್ರೀರಾಮನು ಭರತನನ್ನು ಹೇಗೋ, ಹಾಗೆಯೇ ಆಲಿಂಗಿಸಿದನೆಂದು ಹೇಳ ಲ್ಪಟ್ಟಿದೆ. ಇಷ್ಟುಮಾತ್ರವೇ ಅಲ್ಲದೆ ಶ್ರೀರಾಮಚಂದ್ರ ಪ್ರಭುವು "ಭವಿಷ್ಯತಿ ಗುಹಃ ಪ್ರೀತ ಸ್ಸಮಮಾತ್ಮ ಸಮಸ್ಸಖಾ" ಎಂದು ಹೀನಜಾತೀಯನಾದರೂ ಇಕ್ಷ್ವಾಕು ಕುಲನಾದ ತನಗೆ ಸಮನೆಂದು ಭಾವಿಸಿರುತ್ತಾರೆ. ಹಾಗೆಯೇ ಸುಂದರಕಾಂಡದಲ್ಲೂ, ಪ್ರಾಜ್ಞನಾದುದರಿಂದ "ಮಹಾತ್ಮ" ನೆಂದು ಹೇಳಿ ಆಂಜನೇಯನನ್ನೂ ಆಲಿಂಗಿಸಿದ ರೆಂಬುದು "ಏಷಸ್ಸರ್ವಸ್ವ ಭೂತಸ್ಯ ಪರಿಷ್ವಂಗೋ ಹನೂಮತಃ। ಮಯಾ ಕಾಲ ಮಿಮಂ ಪ್ರಾಪ್ಯ ದತ್ತಸ್ತಸ್ಯ ಮಹಾತ್ಮನಃ। ಇತ್ಯುಕ್ತ್ವಾ ಪ್ರೀತಿ ಹೃಷ್ಟಾಂಗೋ ರಾಮ ಸ್ತಂ ಪರಿಷಸ್ವಜೇ" ಎಂಬುದರಿಂದಲೂ ವ್ಯಕ್ತವು. ಹಾಗೆಯೇ ರಾಕ್ಷಸನಾದ ವಿಭೀಷಣನನ್ನು ಆಲಿಂಗಿಸಿರುತ್ತಾರೆ. ಶ್ರೀ ವಿಭೀಷಣನ ವಿಷಯದಲ್ಲೂ "ತಸ್ಮಾತ್ ಕ್ಷಿಪ್ರಂ ಸಹಾಸ್ಮಾಭಿ ಸ್ತುಲ್ಯೋ ಭವತು ರಾಘವ। ವಿಭೀಷಣೋ ಮಹಾ ಪ್ರಾಜ್ಞಃ ಸಖಿತ್ವಂ ಚಾಭ್ಯುಪೈತುನಃ॥" (ರಾ. ಯುದ್ಧ. ೧೯. ೩೮) ಎಂದು ಶ್ರೀ ರಾಮಚಂದ್ರ ಪ್ರಭುವು ಹೇಳಿರುತ್ತಾರೆ. ಇದರಿಂದ ಜಾತಿ ವೈಷಮ್ಯಾದಿಗಳ ಪರಿಗಣನೆ ಇಲ್ಲದೆ ಎಲ್ಲಾ ಮುಕ್ತಿಹೊಂದುವ ಪ್ರಪನ್ನರೂ ತನಗೆ ಸಮರೂ ಎಂದು "ನಿರಂಜನಃಪರಮಂ ಸಾಮ್ಯಮುಪೈತಿ" ಎಂಬ ಶ್ರುತ್ಯರ್ಥವು ಈ ಪ್ರಮಾಣ ಗಳಲ್ಲಿ ಪ್ರಕಟಿಸಲ್ಪಟ್ಟಿತು. ಈ ಅಭಿಪ್ರಾಯಗಳನ್ನೇ ತಮ್ಮ ಆಚಾರ್ಯರು ತಮಗೆ ಉಪದೇಶಿಸಿದರೆಂಬ ಭಾವವು.

ಈ ಶ್ಲೋಕದಲ್ಲಿ ಉಣ್ಮೈಯುರೈಕ್ಕುಮ್ ಮರೈಗಳ್ ಎಂಬುದರಿಂದ ಶ್ರುತಿ ವಾಕ್ಯಗಳೆಲ್ಲಾ ಯಥಾರ್ಥವಾದುದನ್ನೇ ಹೇಳುತ್ತವೇ ವಿನಾ, ಇತರರು ಹೇಳುವ ಹಾಗೆ ಪರಸ್ಪರ ವಿರುದ್ಧಾರ್ಥಗಳನ್ನು ಎಂದಿಗೂ ಉಪದೇಶಿಸ ವದಿಲ್ಲವೆಂಬ ಅಭಿ ಪ್ರಾಯದಿಂದ ಹಾಗೆ ಹೇಳಿರುತ್ತಾರೆಂದು ಭಾವಿಸತಕ್ಕದ್ದು. ಅವುಗಳಲ್ಲಿ ಇತರರು ಹೇಳುವಹಾಗೆ ಬಾಧ್ಯ ಬಾಧಕ ಭಾವಗಳು ಇಲ್ಲದೆ ಎಲ್ಲವೂ ಸರ್ವಸಮಂಜಸಾರ್ಥಗ ಳನ್ನೇ ಬೋಧಿಸುತ್ತವೆಂಬಭಾವವು. ಮರೈ ಎಂದರೆ ಎಲ್ಲಾ ವೇದಕ್ಕೂ ಅರ್ಥವಾ ದರೂ ಯಾಗಾದಿ ಭಾಗಗಳು ಈ ಪ್ರಪನ್ನನಿಗೆ ಅನುಪಯುಕ್ತವಾದುದರಿಂದ, ಇಲ್ಲಿ ಮರೈ ಶಬ್ದದಿಂದ ವೇದಾಂತಭಾಗವಾದ ಉಪನಿಷತ್ತುಗಳೇ ಹೇಳಲ್ಪಟ್ಟವು. ಉಣ್ಮೈ

ಮನಾರ್ ವಣ್ಣೈ ಎಂಬುದರಿಂದ ಪರಬ್ರಹ್ಮವು ಕಲ್ಯಾಣ ಗುಣಾಕರನೇ ವಿನಾ ನಿರ್ಗುಣನೆಂಬ ಇತರರ ಅಭಿಪ್ರಾಯವು ನಿರಸ್ತವು ಏಕೆಂದರೆ ದ್ರವ್ಯಲಕ್ಷಣವು ಗುಣ ವಿಶೇಷವಾಗಿರುವದು, ಧರ್ಮಗಳಿಂದ ಕೂಡಿರುದೇಧರ್ಮಿಯು; ಹಾಗಿದ್ದರೇನೇ ಶ್ರುತಿ ಪ್ರತಿಪಾದ್ಯನಾಗುವನು. ಹಾಗಲ್ಲದೆ ನಿರ್ಗುಣನಾದರೆ ಪರಬ್ರಹ್ಮವು ದ್ರವ್ಯವೇ ಅಲ್ಲ ವೆಂದೂ ಶ್ರುತಿ ಪ್ರತಿಪಾದ್ಯನೂ ಅಲ್ಲವೆಂದೂ ಹೇಳಬೇಕಾಗುತ್ತದೆ. ಆದುದರಿಂದ ವಿಶೇಷಣಗಳಿಂದ ಯುಕ್ತನಾದ ವಿಶೇಷ್ಯವೆಂದು ಹೇಳುವದರಲ್ಲಿ ಏನೊಂದೂ ಬಾಧಕ ವಿಲ್ಲವು; ಅದ್ವೈತಪ್ರತಿಪಾದಕ ಶ್ರುತಿಗಳೂ ಸಹ ನಮಗೆ ಸಮಂಜಸವಾದುವುಗಳೇ. ಅಪೃಥಕ್ಸಿದ್ಧ ವಿಶೇಷಣವಿಶೇಷ್ಯಭಾವದಿಂದ ಒಂದು ಎಂಬುವದರಿಂದ ನಮಗೆ ಅದ್ವೈತ ಶ್ರುತಿಗಳು ಸಮಂಜಸವು. ಓಙ್ಗಿಯ ಉತ್ತಮನಾರ್ ಎಂಬುದರಿಂದ ಸರ್ವೋ ತ್ಕೃಷ್ಟ ಪರಮಪುರುಷನೆಂದು ನಿಸ್ಸಮಾಭ್ಯಧಿಕತ್ವವನ್ನು ಸ್ಥಾಪಿಸಬೇಕಾದರೆ, ಪ್ರತ್ಯ ಕ್ತ್ವವಿರುವ ಇತರ ಅನೇಕ ಆತ್ಮರೂ ಇದ್ದರಲ್ಲವೇ ಸರ್ವೋತ್ಕೃಷ್ಟವೆಂದು ಹೇಳ ಬಹುದು. ಇರುವದೆಲ್ಲಾ ಒಂದೇ ಆತ್ಮಾ ಆದರೆ, ನಿಸ್ಸಮಾಭ್ಯಧಿಕತ್ವವನ್ನು ಸ್ಥಾಪಿಸುವ ಶ್ರುತಿಗೆ ಮುಖ್ಯಾರ್ಥವನ್ನು ತ್ಯಜಿಸಿ, ಲಾಕ್ಷಣಿಕಾರ್ಥವನ್ನು ಹೇಳ ಬೇಕಾಗುತ್ತದೆ. ಒಂದು ತರಗತಿಯಲ್ಲಿ ಒಬ್ಬನೇ ಹುಡಗನಿದ್ದು, ಆತನೇ ತರ ಗತಿಯಲ್ಲಿ ಮೊದಲನೆಯವನು ಎಂದು ಹೇಳಿದರೆ ಹೇಗೆ ಹಾಸ್ಯಾಸ್ಪದವೋ, ಹಾಗೆ ನಿಸ್ಸಮಾಭ್ಯಧಿಕತ್ವವನ್ನು ಬೋಧಿಸುವ ಶ್ರುತಿಯೂ ಹಾಸ್ಯಾಸ್ಪದ ವಾದುದಾಗುತ್ತದೆ ಗೀತೆಯಲ್ಲಿ ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವಚ ಎಂದು ಹೇಳಿ, ಉತ್ತಮಃಪುರುಷಸ್ತ್ವನ್ಯಃ ಎಂದು ವ್ಯಕ್ತವಾಗಿ ಹೇಳಿರು ವದು "ಭೋಕ್ತಾಭೋಗ್ಯಂ ಪ್ರೇರಿತಾರಂಚ ಮತ್ವಾ" ಇತ್ಯಾದಿ ಶ್ರುತಿಗಳ ಉಪ ಬ್ರಹ್ಮಣವಾಗಿರುವದರಿಂದ ಏಕಾತ್ಮನಾದವು ಸರ್ವಾತ್ಮನಾ ಕೂಡುವದಿಲ್ಲವು; ಅದೂ ಅಲ್ಲದೆ ಜೀವಾತ್ಮಸ್ವರೂಪವನ್ನು ಅಣುವಾಗಿಯೂ, ಪರಮಾತ್ಮಸ್ವರೂಪವನ್ನು ವಿಭುವಾಗಿಯೂ, ಶ್ರುತಿಗಳು ಹೇಳಿರುವದರಿಂದ ಏಕಾತ್ಮವಾದವು ಎಂದಿಗೂ ಸರಿ ಹೋಗುವದಿಲ್ಲವು; ಆದುದರಿಂದಲೇ ಓಙ್ಗಿಯ ಉತ್ತಮನಾರ್ ಎಂಬ ಪ್ರಭಾವವು. ಓಙ್ಗಿಯ ಉತ್ತಮನಾರ್ ಎಂಬ ಪ್ರಯೋಗವು ಓಙ್ಗಿ ಉಲಗಳನ್ದ ಉತ್ತ ಮನ್ಪೇರ್ಪಾಡಿ ಎಂಬ ಗೋದಾವಾಕ್ಯವನ್ನು ಸ್ಮರಿಸುವಹಾಗೆ ಮಾಡುತ್ತದೆ; ಈ ತ್ರಿವಿಕ್ರಮಾವತಾರದಲ್ಲೇ ಸ್ವಾಮಿಯು ತನ್ನ ಪಾದವೇ ಸರ್ವೋಪಜೀವ್ಯವೆಂಬ ಮಹಿಮೆಯನ್ನು ಹರಡಿರುತ್ತಾನೆಂಬುದು ಸೂಚಿತವು. ಉಲಗಮೂನ್ರೊಡಯಾಯ್ ಎನ್ನೈ ಆಳ್ವಾನೇ" (ತಿರು. ೬.೧೦.೧೦) ಎಂಬಲ್ಲಿ ಇದು ಸೂಚಿತವು. ಸಿದ್ಧೋ ಪಾಯನಾದ ಶ್ರಿಯಃಪತಿಯ ಅನುಗ್ರಹವೇ ಉತ್ತಾರಕವೆಂದೂ, ಅಂತಹ ಅನುಗ್ರಹ ವನ್ನು ಸಂಪಾದಿಸುವದಕ್ಕೆ ಮಾರ್ಗವು, ಆತನ ಪಾದಕಮಲದಲ್ಲಿ ಎಸಗುವ ಶರಣಾ

ಗತಿಯೇ ಎಂಬುದು, ಶ್ರುತಿ ಸ್ಮೃತಿ ಇತಿಹಾಸಗಳಲ್ಲೆಲ್ಲಾ ವ್ಯಕ್ತವು. "ತಸ್ಮಾನ್ನ್ಯಾಸಮೇಷಾಂ ತಪಸಾ ಮತಿರಿಕ್ತಮಾಹುಃ" (ತೈ. ನಾರಾ. ೪.) ಎಂದು ಭರನ್ಯಾಸವು ಕೊಂಡಾಡಲ್ಪಟ್ಟಿರುತ್ತದೆ. ಆದುದರಿಂದಲೇ ಶ್ರೀ ಯತಿವರ್ಯರು, ತಸ್ಯಚ ವಶೀಕರಣಂ ತಚ್ಛರಣಾಗತಿರೇವ ಎಂದು ಅವಧಾರಣ ಮೂಲಕ ಉಪದೇಶಿಸಿದರು; ರಾವಣನಾದ ನಿಕೃಷ್ಟ ಸ್ವಭಾವನಿಗೂ ಕೂಡ "ಪ್ರಸಾದಯಸ್ವತ್ವಂ ಚೈನಂ ಶರಣಾಗತವತ್ಸಲಂ" ಎಂದೂ ಸೀತೆಯು, ಬೋಧಿಸಿರುತ್ತಾಳೆ. ಶರಣಾಗತನ ಗುಣದೋಷಗಳನ್ನು ಪರ್ಯಾಲೋಚಿಸದೇ ಆತನನ್ನು ರಕ್ಷಿಸುವನು ಎಂಬುದು, ಭಗವಂತನ ಸ್ವವಾಕ್ಯದಿಂದಲೇ ಸಿದ್ಧವು. "ಆನಯೈನಂ ಹರಿಶ್ರೇಷ್ಠ ದತ್ತಮಸ್ಯಾಭಯಂ ಮಯಾ। ವಿಭೀಷಣೋವಾ ಸುಗ್ರೀವ ಯದಿವಾ ರಾವಣಸ್ಸ್ವಯಮ್"ಎಂಬಲ್ಲಿ ಮಹಾ ಪಾಪಿಯಾದ ರಾವಣನೂ ಕೂಡ ಶರಣಾಗತನಾದರೆ ಅಭಯವನ್ನು ಕೊಡಲು ಸಿದ್ಧನಾಗಿದ್ದೇನೆಂಬ ಅಭಿಪ್ರಾಯವನ್ನು ಸೂಚಿಸಿರುತ್ತಾರೆ—ಇಂತಹ ಪ್ರಭಾವವುಳ್ಳವನು ಸಿದ್ಧೋಪಾಯನೆಂದು ಸೂಚಿಸುವದಕ್ಕಾಗಿ ಉತ್ತಮನಾರ್ ವಣ್ಮೈ ಅಳಪ್ಪರಿದು - ಆತನ ಪ್ರಭಾವವು ಅಪರಿಚ್ಛಿನ್ನವಾದು ದೆಂದು ಹೇಳಲ್ಪಟ್ಟಿತು. ಹಾಗೆಯೇ ಗೀತೆಯಲ್ಲೂ (೯. ೩೦. ೩೨)

ಅಪಿಚೇತ್ಸು ದುರಾಚಾರೋ ಭಜತೇ ಮಾ ಮನನ್ಯಭಾಕ್ ।
ಸಾಧುರೇವ ಸಮಂತವ್ಯ ಸ್ಸಮ್ಯಗ್ವ್ಯವಸಿತೋ ಹಿ ಸಃ ॥
ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।
ಸ್ತ್ರಿಯೋ ವೈಶ್ಯಾ ಸ್ತಥಾ ಶೂದ್ರಾ ಸ್ತೇಽಪಿ ಯಾನ್ತಿ ಪರಾಂ ಗತಿಮ್ ॥

ಹೀಗಿರುವಾಗ ಇಂತಹ ಸಿದ್ಧೋಪಾಯನು ಪ್ರಾರಬ್ಧ ಕರ್ಮವನ್ನು ಹೋಗಲಾಡಿಸುವದಿಲ್ಲವೆಂಬ ಹೇಳಿಕೆಯು, ಆತನ ಪ್ರಭಾವಕ್ಕೂ ದಯೆಗೂ, ಔದಾರ್ಯಕ್ಕೂ ಸಹ, ನ್ಯೂನತೆಯನ್ನು ಅಸೂಯೆಯಿಂದ ಕಲ್ಪಿಸಿದಂತಾಗುತ್ತದೆ. ಪೂರ್ವ ಪಾಪಗಳಲ್ಲಿ ಕೆಲವು ಪ್ರಾರಬ್ಧವೆಂದೆನಿಸಿ ಭೋಗದಿಂದಲೇ ಕಳೆದು ಹೋಗತಕ್ಕವೆಂದೇನೋ ಒಪ್ಪತಕ್ಕದ್ದೇ. ಅಂತಹ ಪ್ರಾರಬ್ಧಾನುಭವಕ್ಕಾಗಿಯೇ ಈಗ ಈತನಿಗೆ ಪ್ರಾಪ್ತವಾಗಿರುವದು ಈ ಶರೀರವು. ಆದರೆ ಯಾವಾಗ ಶರಣಾಗತನಾಗಿ ಉಪಾಯಾನುಷ್ಠಾನಮಾಡಿದನೋ, ಆ ಉಪಾಯವು ಸದ್ವಾರಕ ಪ್ರಪತ್ತಿಯಾದ ಉಪಾಸನವಾದರೇ,ಆಗಲೂ ಪ್ರಾರಬ್ಧನಿವೃತ್ತಿಯಂದು ಪರಮಪುರುಷನೇ ಈ ವಿದ್ವಾನನಿಗೆ ಪ್ರೇರಕನಾಗಿ ಉಪಾಯನಿಷ್ಪತ್ತಿಗಾಗಿ"ತಮೇವ ಶರಣಂಗಚ್ಛ ಸರ್ವಭಾವೇನ ಭಾರತ । ತತ್ಪ್ರಸಾದಾತ್ಪರಾಂ ಶಾನ್ತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್"॥ (ಗೀ. ೧೮.)ಎಂಬಲ್ಲಿ ಹೇಳಿರುವಹಾಗೆ,ಆತನನ್ನೇ ಶರಣಹೊಂದಿದರೆ ಆತನು ಪ್ರಾರಬ್ಧ ಕೌಟಿಲ್ಯವನ್ನೂ ಪರಿಗಣಿಸದೆ, ಸರಿಯಾದ ಮಾರ್ಗದಲ್ಲಿ ಪ್ರೇರಿಸಿ, ಅನಭ್ಯುಪಗತ

ಪ್ರಾರಬ್ಧವಿದ್ದರೂ, ಅಂತಹ ಅನಿಷ್ಟ ನಿವೃತ್ತಿಯನ್ನೂ ಇಷ್ಟಪ್ರಾಪ್ತಿಯನ್ನೂ ಉಂಟುಮಾಡುವನು. ಹಾಗೆ ಉಪಾಯಾನುಷ್ಠಾನವನ್ನು ಈತನು ಮಾಡದಿದ್ದ ಪಕ್ಷದಲ್ಲಿ ಸ್ವಾಮಿಯು ಪ್ರಾರಬ್ಧಾನುಗುಣವಾಗಿ "**ಭ್ರಾಮಯನ್ ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ**" ಎಂಬಲ್ಲಿ ಹೇಳಿರುವಹಾಗೆ ಶರೀರರೂಪ ಯನ್ತ್ರವನ್ನು ಧರಿಸಿರುವ ಪ್ರಾಣಿಗಳನ್ನು ಪ್ರಾರಾಬ್ಧಾನುಗುಣ ಪ್ರವೃತ್ತಿಯನ್ನು ಹೊಂದುವಹಾಗೆ ಮಾಡುತ್ತಾನೆ. ಅಥವಾ ಶರಣಾಗತಿಯನ್ನೇ ಸ್ವತಂತ್ರೋಪಾಯವಾಗಿ ಭಾವಿಸಿ ಭರನ್ಯಾಸವನ್ನು ಅನುಷ್ಠಿಸುವಕಾಲದಲ್ಲೇ ಪ್ರಾರಬ್ಧವು ತೊಲಗಬೇಕೆಂದು ಪ್ರಾರ್ಥಿಸಿ ಅನುಷ್ಠಿಸಿದುದಾದರೆ, ಅದೂ ತೊಲಗುವದರಲ್ಲಿ ಸಂದೇಹವಿಲ್ಲವು. ಶರಣಾಗತಿಯನ್ನನುಷ್ಠಿಸಿ ಆರ್ತನಾಗಿರುವವನಿಗೆ ಒಡನೆ ಮೋಕ್ಷಪ್ರಾಪ್ತಿಯು ಎಂಬುದು ಹಿಂದೆಯೇ ಉಪಪಾದಿಸಲ್ಪಟ್ಟಿರುತ್ತೆಯಷ್ಟೇ. ಆ ಸಂದರ್ಭದಲ್ಲಿ ಪ್ರಾರಬ್ಧ ಶೇಷವೂ ಕಳೆದು ಹೋಗುತ್ತದೆಂದು ಒಪ್ಪಬೇಕಲ್ಲವೇ? ನಮ್ಮಾಳ್ವಾರ್ರವರ "**ಶೂಳ್‌ನ್ದಗನ್ರು**" ಎಂಬುವ ಪಾಶುರಾರ್ಥದಲ್ಲೂ ಇದು ವ್ಯಕ್ತವು. "**ಅಂದ ಸಙ್ಕಲ್ಪ ಜ್ಞಾನತ್ತಿರ್‍ಕ್ಕಟ್ಟಿಲುಮ್ ಪೆರುದಾಯಿರುನ್ದ ವೆನ್ನುಡೈಯ ವಿಡಾಯೆಲ್ಲಾನ್ತೀರುಂಪಡಿ**" ಎಂಬ ಭಾಷ್ಯದಲ್ಲಿ ಇದು ಸೂಚಿಸಲ್ಪಟ್ಟಿತು. ಹೀಗೆ ಶರಣಾಗತಿಯನ್ನನುಷ್ಠಿಸಿದವನ ಜಾತಿ ಗುಣ ವೃತ್ತಿ ಮೊದಲಾದವುಗಳ ಉತ್ಕೃಷ್ಟಾಪಕೃಷ್ಟತೆಗಳನ್ನು ಪರಿಗಣಿಸದೆ, ಮೋಕ್ಷವನ್ನು ಕೃಪಾಸಾಗರನು ದಯಪಾಲಿಸುವನು ಎಂದು ಹಿಂದೆ ಪ್ರಪತ್ತಿಯೋಗ್ಯಾಧಿಕಾರದಲ್ಲೇ ಸ್ಪಷ್ಟವಾಗಿ ಭಗವಂತನ ಸರ್ವ ಶರಣ್ಯತೆಯು, "**ಸರ್ವಸ್ಯಶರಣಂ ಸುಹೃತ್**" "**ಸರ್ವಲೋಕ ಶರಣ್ಯಾಯ ರಾಘವಾಯ ಮಹಾತ್ಮನೇ**" "**ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ। ಅಭಯಂ ಸರ್ವಭೂತೇಭ್ಯೋ ದದಾಮ್ಯೇ ತದ್ವ್ರತಂ ಮಮ**" ಇತ್ಯಾದಿ ಶ್ರುತಿ ಸ್ಮೃತೀತಿಹಾಸಗಳಲ್ಲಿ ಕೊಂಡಾಡಲ್ಪಟ್ಟಿರುತ್ತದೆ. ಹೀಗೆ ಪರಮೌದಾರ್ಯದಿಂದ ಸರ್ವಲೋಕ ಶರಣ್ಯನು ಎಲ್ಲರನ್ನೂ ಸಮ ಭಾವನೆಯಿಂದ ರಕ್ಷಿಸಬೇಕೆಂದು ಕಂಕಣಬದ್ಧನಾಗಿರುವಾಗ ಆತನ ಅಭಿಪ್ರಾಯಕ್ಕೆ ವಿರುದ್ಧವಾಗಿ ಅಂತಹ ಪ್ರಪನ್ನನಲ್ಲಿ ಗುಣದೋಷಗಳಿವೆ ಎಂದು ಸಿಂದಿಸಿ, ಪ್ರಪನ್ನರಲ್ಲಿ ಉತ್ಕೃಷ್ಟಾಪಕೃಷ್ಟರೂಪ ತಾರತಮ್ಯ ಭಾವನೆಯು ಸರ್ವಾತ್ಮನಾ ಕೂಡದೆಂದೂ, ಅಂತಹ ಭಾವನೆಯು ಕರುಣಾಸಾಗರನಿಗೆ ಇಷ್ಟವಿಲ್ಲದ ವಿಷಯವೆಂದೂ, ತಮ್ಮ ಆಚಾರ್ಯರು ತಮಗೆ ಅಮೋಘೋಪದೇಶವನ್ನು ಮಾಡಿರುತ್ತಾರೆಂದೂ, ಅವರನ್ನು ಶ್ಲಾಘಿಸಿರುತ್ತಾರೆ. ಇದರಿಂದ ನಾವು ಗ್ರಹಿಸತಕ್ಕ ಮುಖ್ಯವಿಷಯವೇನೆಂದರೆ ಭಾಗವತನ ಪ್ರಭಾವವು ಎಂತಹ ಜಾತಿ ಗುಣಗಳುಳ್ಳವನೇ ಆಗಲಿ, ಅಮೋಘವಾದುದರಿಂದ ಆತನ ವಿಷಯದಲ್ಲಿ ಅಪಚಾರವು ಸರ್ವಾತ್ಮನಾ ಕೂಡದು ಎಂಬುದು ॥

**ಅವತಾರಿಕೆಯು** :—ಹಿಂದಿನ ಪಾಶುರದಲ್ಲಿ ಭಾಗವತ ಪ್ರಭಾವವು ಅಪರಿಚ್ಛಿನ್ನವಾದುದರಿಂದ ಅವರುಗಳನ್ನು ನಿಕೃಷ್ಟಭಾವದಿಂದ ಕಾಣುವದು, ಸಂಭಾಷಣೆಗೆ ಅರ್ಹರಲ್ಲವೆಂದು ನಿಂದಿಸುವದು, ಇವೇ ಮೊದಲಾದ ಅಪಚಾರಗಳು ಕೂಡದೆಂದು ಪ್ರಪನ್ನನ ಪ್ರಭಾವವನ್ನು ಕೊಂಡಾಡಿದರು. ಇಂತಹ ಪ್ರಭಾವವು ಭಾಗವತನಿಗುಂಟಾಗಬೇಕಾದರೆ ಆ ಮಹಿಮೆಯು ಏತರಿಂದ ಎಂದರೆ ನ್ಯಾಸ ಶಬ್ದಿತವಾದ ಪ್ರಪದನದ ಪ್ರಭಾವವು. ಎಲ್ಲಾ ಯಜ್ಞದಾನ ತಪಸ್ಸುಗಳಿಗಿಂತಲೂ ಮತ್ತು ಭಕ್ತಿಯೋಗಾನುಷ್ಠಾನಕ್ಕಿಂತಲೂ, ತೈತ್ತಿರೀಯ ಕಠ ಉಪನಿಷತ್ತುಗಳಲ್ಲೂ ಪ್ರಶ್ನಸಂಹಿತೆ, ಸನತ್ಕುಮಾರಸಂಹಿತೆ, ಅಹಿರ್ಬುಧ್ನ್ಯ ಸಂಹಿತೆ, ಸಾತ್ಯಕಿ ತಂತ್ರ, ವ್ಯಾಸಸ್ಮೃತಿ, ದಕ್ಷಸ್ಮೃತಿ, ಶ್ರೀಮದ್ರಾಮಾಯಣ, ಭಾರತ, ಭಾಗವತ, ಪಾದ್ಮಪುರಾಣ, ವರಾಹಪುರಾಣ, ಬ್ರಾಹ್ಮ ಪುರಾಣಾದಿಗಳಲ್ಲಿ ಇದರ ಮಹಿಮೆಯು ಹೆಚ್ಚಾದುದೆಂದು, ಶ್ಲಾಘಿಸಲ್ಪಟ್ಟಿರುತ್ತದೆ. ಅದರ ಮಹಿಮೆಯು ಎಂತಾದ್ದೆಂದು ಹೇಳಲು ಹೊರಟು ತೋಚದೆ, ಇದರ ಮಹಿಮೆಯು ಅಪರಿಚ್ಛಿನ್ನವಾದುದು ಎಂದು **ತಸಾನ್ನ್ಯಾಸಮೇಷಾಂ ತಪಸಾ ಮತಿರಿಕ್ತ ಮಾಹುಃ**" (ತೈ. ನಾ.) ಇಷ್ಟು ಮಾತ್ರ ಹೇಳಿ ಉಪನಿಷತ್ತೇ ಸುಮ್ಮನಾಯಿತು. ಹೀಗಾದನಂತರ ನಾವು ಅದರ ಪ್ರಭಾವವು ಇಷ್ಟೆಂದು ಹೇಳಲು ಸಾಧ್ಯವೋ? ಉಪನಿಷತ್ತೇ ಅದರ ಪ್ರಭಾವವನ್ನು ಸ್ವತಂತ್ರಿಸಿ ಹೇಳಲು ಸಾಧ್ಯವಿಲ್ಲದೆ, ಯಾವು ಯಾವುವು ತುಂಬಾ ಪ್ರಭಾವ ಉಳ್ಳದ್ದೆಂದು ಕೊಂಡಾಡುವರು ಎಂದು ಹೇಳಲು ಹೊರಟು, **ಸತ್ಯಂ ಪರಮಂ ವದಂತಿ, ತಪಃ ಪರಮಂ ವದನ್ತಿ, ದಮಃ ಪರಮಂ ವದನ್ತಿ,** ಹಾಗೆಯೇ ಶಮಃ, ದಾನಂ, ಧರ್ಮಂ, ಪ್ರಜನನಂ, ಅಗ್ನಯಃ, ಅಗ್ನಿಹೋತ್ರಂ, **ಯಜ್ಞಂ ಮಾನಸಂ** ಎಂದರೆ ಮನನವು, ಹೀಗೆ ಮಹಿಮೆಯುಳ್ಳವುಗಳಿಗೆಲ್ಲಾ ಮಹಿಮೆಯಲ್ಲಿ ಹೆಚ್ಚಾದುದು ನ್ಯಾಸ ಶಬ್ದದಿಂದ ಹೇಳಲ್ಪಟ್ಟ ಸ್ವಾತ್ಮಸಮರ್ಪಣರೂಪ ಭರನ್ಯಾಸವೆಂದು ಹೇಳಲ್ಪಟ್ಟಿರುತ್ತದೆ. ಇದರ ಮಹಿಮೆಯು ಪ್ರಾಪ್ತಸ್ಥಳಗಳಲ್ಲೆಲ್ಲಾ ವಿಶೇಷವಾಗಿ ಹಿಂದೆಯೇ ಕೊಂಡಾಡಲ್ಪಟ್ಟಿರುತ್ತದೆ. ಅಧಿಕಾರಿವಿಭಾಗಾಧಿಕಾರದಲ್ಲೂ ಇದರ ಮಹಿಮೆಯನ್ನು ಕೂಡಿದಷ್ಟುಮಟ್ಟಿಗೆ ಕಾಣಬಹುದು. ೮೩೮ನೆಯ ಪುಟವನ್ನು ಪರಾಂಬರಿಸಿ. ಮತ್ತು ೮೯೭ನೆಯ ಪುಟದಲ್ಲಿ ಉದಾಹರಿಸಿರುವ ಅಹಿರ್ಬುಧ್ನ್ಯಸಂಹಿತಾಪ್ರಮಾಣವಾದ "**ಯದ್ಯೇನ ಕಾಮಕಾಮೇನ**" ಎಂಬ ಶ್ಲೋಕಗಳನ್ನು ಪರಾಂಬರಿಸಬಹುದು. ಮತ್ತು ೮೪೧ನೆಯ ಪುಟದಲ್ಲಿ ಇಂತಹ ಮಹಿಮೆಯುಳ್ಳ ಭರನ್ಯಾಸವನ್ನು ಅನುಷ್ಠಿಸಿದ ಮಹಾ ಭಾಗವತನ ಮಹಿಮೆಯು ಲಕ್ಷ್ಮೀತಂತ್ರ ಪ್ರಮಾಣವಾದ "**ಸತ್ಕರ್ಮನಿರತಾ ಶ್ಶುದ್ಧಾಸ್ಸಾಂಖ್ಯಯೋಗ ವಿದಸ್ತಥಾ। ನಾರ್ಹನ್ತಿ ಶರಣಸ್ಥಸ್ಯ ಕಲಾಂಕೋಟಿ ತಮೀಮಪಿ**" (೧೭-೬೨) ಎಂಬಲ್ಲಿ ಶ್ಲಾಘಿಸಲ್ಪಟ್ಟಿರುತ್ತದೆ.—

**ರಾಗದ್ವೇಷ ಮದಾದಿಕೈರಿಹ ಮಹಾ ರಕ್ಷೋಭಿ ರಕ್ಷೋಭಿ(ತೇ)ತಂ ।**
**ನಿತ್ಯೇ ರಕ್ಷಿತರಿ ಸ್ಥಿತೇ ನಿಜಭರನ್ಯಾಸಾಭಿಧಾನಂ ತಪಃ ॥**
**ಯತ್ಕಕ್ಷೀಕೃತ ಮತ್ಯಶೇತ ವಿವಿಧಾ೯ ಧರ್ಮಾನಧರ್ಮದ್ರುಹ ।**
**ಸ್ತದ್ಭೂಮಾರ್ಣವ ಲೇಶವರ್ಣನಮಪಿ ಪ್ರಾಚಾಂ ನವಾಚಾಂ ಪದಮ್ ॥೫೫॥**

---

**ಅರ್ಥವು**— ಇಹ - ಈ ಜಗತ್ತಿನಲ್ಲಿ, **ರಾಗದ್ವೇಷಮದಾದಿಕೈಃ** – ರಾಗವೆಂದರೆ ವಿಷಯೋಪಭೋಗಗಳಲ್ಲಿ ಆಸಕ್ತಿಯು, ಆದಕ್ಕೆ ತೊಂದರೆಯುಂಟಾದರೆ ತನ್ಮೂಲಕವಾಗಿ ಕೋಪದಿಂದ ದ್ವೇಷವೂ, ಅಥವಾ ಭಗವದ್ಭಾಗವತರ ವಿಷಯದಲ್ಲಿ ಪ್ರತಿಕೂಲರೂಪ ಬುದ್ಧಿಯೂ, ಮದವೆಂದರೆ ತಾನೇ ದ್ರವ್ಯದಿಂದಲೂ, ಪಾಂಡಿತ್ಯದಿಂದಲೂ ಸರ್ವಶ್ರೇಷ್ಠನೆಂಬ ದುರಹಂಕಾರವು, ಆದಿಶಬ್ದದಿಂದ ಲೋಭ ಮೋಹ ಮಾತ್ಸರ್ಯಗಳು ಹೇಳಲ್ಪಟ್ಟವು, ಇವೇ ಮೊದಲಾದಿಗಳನ್ನುಳ್ಳ, **ಮಹಾರಕ್ಷೋಭಿಃ**- ಇಂತಹ ಪಾಪಿಗಳಾದ ಮಹಾ ರಾಕ್ಷಸರೂಪ ಶತ್ರುಗಳಿಂದ, **ಅಕ್ಷೋಭಿತಂ** - ಕಲ್ಲೋಲವನ್ನು ಮಾತ್ರ ಹೊಂದಿರುವ ಎಂದರೆ ನಾಶವನ್ನು ಹೊಂದದೆ ಸುಮ್ಮನೆ ಕ್ಷೋಭೆಯನ್ನು ಹೊಂದಿರುವ, ಜ್ಞಾನ ವೈರಾಗ್ಯ ಭಕ್ತಿಗಳು ಆ ಪ್ರಪತ್ತ್ಯಧಿಕಾರಿಯಲ್ಲಿರುವದರಿಂದ ಈ ಭರನ್ಯಾಸಕ್ಕೆ ಈ ರಾಗ ದ್ವೇಷಾದಿಗಳು ಏನೊಂದೂ ತೊಂದರೆಯನ್ನು ಮಾಡಲಾರವು ಎಂಬ ಭಾವವು ತೋರಿಬರುತ್ತದೆ ; ಅಥವಾ ಆಗ ಸಿದ್ಧೋಪಾಯನಾದ ಸರ್ವೇಶ್ವರನ ಅನುಗ್ರಹವು ಒದಗುವದರಿಂದ ಈ ರಾಕ್ಷಸರಾದ ರಾಗಾದಿಗಳು ದುರ್ಬಲರಾಗಿ ಯಾವ ತೊಂದರೆಯನ್ನೂ ಮಾಡಲಾರವೆಂಬ ಭಾವವು ಸೂಚಿತವು ; ಹೀಗೆ ಕ್ಷೋಭವನ್ನು ಹೊಂದದಿರುವದು ಯಾವುದು ಎಂದರೆ ಮುಂದೆ **ಭರನ್ಯಾಸಾಭಿಧಾನಂ ತಪಃ** ಎಂದು ಇರುತ್ತದೆ, ಅದಕ್ಕೆ ಇದು ವಿಶೇಷಣವು; ಹೀಗೆ ಇವುಗಳಿಂದ ಕ್ಷೋಭೆ ಇದ್ದರೂ ಪರಾಜಯವನ್ನು ಹೊಂದದಿರಲು ಕಾರಣವೇನೆಂದರೆ, **ನಿತ್ಯೇ** - ಶಾಶ್ವತನಾಗಿ, **ರಕ್ಷಿತರಿ** – ಆಶ್ರಿತರಿಗೆ ಸರ್ವರಕ್ಷಕನೆಂದು ಕಂಕಣಬದ್ಧನಾಗಿರುವ ಸರ್ವೇಶ್ವರನು, **ಸ್ಥಿತೇ ಸತಿ** – ಕಾದು ನಿಂತಿರಲಾಗಿ, **ನಿಜಭರನ್ಯಾಸಾಭಿಧಾನಂ** ತಪಃ - ತನ್ನ ಆತ್ಮಭರಸಮರ್ಪಣವೆಂದು ಹೇಳಿಸಿಕೊಳ್ಳುವ ತಪಸ್ಸು, **ಯತ್ ಕಕ್ಷೀಕೃತಂ** - ಯಾವ ಪ್ರಸಿದ್ಧೋಪಾಯವು ಭಗವಂತನಿಂದ ಅಙ್ಗೀಕರಿಸಲ್ಪಟ್ಟಿತೋ, ಆಗ ಅಧರ್ಮದ್ರುಹಃ - ಪ್ರಾಚೀನರೂಪ ಅಪರಾಧಗಳನ್ನೆಲ್ಲಾ ಹೋಗಲಾಡಿಸುವ, ವಿವಿಧಾ೯ ಧರ್ಮಾ೯ - ನಾನಾವಿಧಗಳಾದ, ಯಜ್ಞದಾನ ತಪಸ್ಸುಗಳಿಂದ ಸೇರಿದ ಕರ್ಮಯೋಗಾದಿ ಭಕ್ತಿಯೋಗ ಪರ್ಯನ್ತವಾದ ಸಮಸ್ತ ಧರ್ಮಗಳನ್ನೂ ಸಹ, ಇವುಗಳಲ್ಲೇ ನಾನಾವಿಧ ಪ್ರಾಯಶ್ಚಿತ್ತಗಳೂ ಸೇರಿದವು, ಇವೆಲ್ಲ

ವನ್ನೂ, ಅತ್ಯಶೇತ - ಆ ತನ್ನ ಪ್ರಭಾವದಿಂದ ಅತಿರಿಕ್ತವಾದುದು ಎಂದರೆ ಮೇಲಾದುದೆಂದು ತೈತ್ತರೀಯಶ್ರುತಿ ಸಿದ್ಧವಾಯಿತೋ, ತದ್ಭೂಮಾರ್ಣವ ಲೇಶ ವರ್ಣನೇಷು-ಅಂತಹ ಭರನ್ಯಾಸದ, ಮಹಿಮಾರ್ಣವ-ಮಹಿಮೆ ಎಂಬ ಸಮುದ್ರದ, ಲೇಶ-ಏಕದೇಶವೆಂದರೆ ಅತ್ಯಲ್ಪಭಾಗದ ಎಂದರೆ ಬಿಂದುಮಾತ್ರ ವರ್ಣನವೂ ಕೂಡ, ಪ್ರಾಚಾಂ ವಾಚಾಮಪಿ - ಶ್ರುತಿ ವಾಕ್ಯಗಳಾದ ಉಪನಿಷತ್ತುಗಳಿಗೂ ಕೂಡ, ಅಪಿ ಶಬ್ದವನ್ನು ಎರಡು ಕಡೆಗೂ ಅನ್ವಯಿಸತಕ್ಕದ್ದು, ನ ಪದವೀ - ಸಾಧ್ಯವಲ್ಲವು. ಹೀಗಿರುವಾಗ ನಮ್ಮಗಳ ಪಾಡೇನು ? ಅದರ ಮಾಹಾತ್ಮ್ಯೆಯನ್ನು ನಾವು ಬಲ್ಲವೇ ? ಅದರ ಬಿಂದುಮಾತ್ರ ಪ್ರಭಾವವನ್ನಾಗಲಿ ವರ್ಣಿಸಲು ಯೋಗ್ಯತೆಯುಳ್ಳವರೇ ? ಎಂಬ ಭಾವವು ಸೂಚಿತವು. ॥೫೮॥

**ತಾತ್ಪರ್ಯವು.**—ಇಲ್ಲಿ ರಾಗದ್ವೇಷ ಮುಖಾದಿಕೈಃ ಎಂದು ರಾಗವನ್ನು ಮೊದಲು ಹೇಳಿರುವದರ ಅಭಿಪ್ರಾಯವು, ರಾಗವ ತಮ್ಮಂದಿರಾಗಿ ರಾಗವನ್ನು ಹಿಂಬಾಲಿಸಿರುವ ರಾಕ್ಷಸರೆಂಬುವನ್ನು ತಿಳಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. "ಕಾಮಾತ್ಕ್ರೋಧೋಭಿಜಾಯತೇ । ಕ್ರೋಧಾದ್ಭವತಿ ಸಮ್ಮೋಹಃ । ಸಮ್ಮೋಹಾತ್ಸ್ಮೃತಿ ವಿಭ್ರಮಃ" ಇತ್ಯಾದಿಗಳು ಅನುಸಂಧೇಯವು. ಈ ಆತ್ಮನಿಗೆ ದೊಡ್ಡ ಶತ್ರುಗಳು ಕಾಮಕ್ರೋಧಗಳೆಂದು ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ । ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನ ಮಿಹವೈರಿಣಮ್" (ಗೀ. ೩. ೩೭) ಎಂದು ಕಾಮಕ್ರೋಧಗಳು ಮಹಾ ವೈರಿಗಳೆಂದು ಹೇಳಲ್ಪಟ್ಟು ಕಾಮ ಒಂದನ್ನು ಜಯಿಸಿ ಬಿಟ್ಟರೆ ಮಿಕ್ಕಿದ್ದೆಲ್ಲವೂ ಜಿತವಾಗುತ್ತದೆಂದು "ಜಹಿಶತ್ರುಂ ಮಹಾ ಬಾಹೋ ಕಾಮರೂಪಂ ದುರಾಸದಮ್" (ಗೀ. ೩. ೪೩) ಎಂಬಲ್ಲಿ ಶ್ರೀಕೃಷ್ಣನಿಂದ ಅರ್ಜುನನಿಗೆ ಉಪದೇಶಿಸಲ್ಪಟ್ಟಿತು. ರಾಗದ್ವೇಷಾದಿಗಳಿಂದ ಅರಿಷಡ್ವರ್ಗಗಳೆಲ್ಲಾ ಹೇಳಲ್ಪಟ್ಟವು. ಈ ರಾಗದ್ವೇಷಾದಿಗಳು ಈ ಮನುಷ್ಯನಿಗೆ ಪ್ರಬಲವಾದ ಅರಿಷಡ್ವರ್ಗವಾದುದರಿಂದ ಅವುಗಳನ್ನು ಜಯಿಸುವದು ವಿವೇಕ ಜ್ಞಾನ ಭಕ್ತಿ ವೈರಾಗ್ಯಾದಿಗಳೆಂಬ ದೇವತೆಗಳಿಂದ ಸ್ವಲ್ಪಕಷ್ಟತರವಾದುದು. ಈ ಕುರುಕ್ಷೇತ್ರವಾಗಿ ಪರಮಾತ್ಮನಿಗೆ ಆವಾಸಸ್ಥಾನವಾಗಿ ತುಂಬಾ ಪವಿತ್ರಕರವಾಗಿಯೂ, ಧರ್ಮಾನುಷ್ಠಾನವನ್ನು ಮಾಡಿ ಪಾಪಗಳನ್ನು ಹೋಗಲಾಡಿಸಿಕೊಳ್ಳುವ ಧರ್ಮಕ್ಷೇತ್ರವಾಗಿಯೂ ಇರುವ ನಮ್ಮ ದೇಹದಲ್ಲಿ, ಸಮವೇತಾಯುಯುತ್ಸವಃ - ಯುದ್ಧಮಾಡುವುದಕ್ಕಾಗಿ ನೆರೆದಿರುವ ಕೌರವ ಪಾಂಡವರ ಹಾಗೆ ಈ ಅರಿಷಡ್ವರ್ಗವೆಂಬ ರಾಕ್ಷಸರಿಗೂ ವಿವೇಕ ಜ್ಞಾನ ವೈರಾಗ್ಯವೆಂಬ ದೇವತೆಗಳಿಗೂ ಮಹತ್ತಾದ ಯುದ್ಧವು ಈ ದೇಹವೆಂಬ ಪಟ್ಟಣದಲ್ಲಿ ನಡೆಯುತ್ತದೆ. ಇದು

"ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ (ಗೀ. ೧. ೧) ಎಂಬ ವ್ಯಂಗ್ಯ ಗರ್ಭಿತವಾದ ಮಹರ್ಷಿಸೂಕ್ತಿಯಿಂದ ಹೇಳಲ್ಪಟ್ಟಿರುತ್ತದೆ. ಈ ಕೌರವ ಪಾಂಡವರ ಯುದ್ಧದಲ್ಲಿ ಪಾಂಡವರ ಕಡೆ ಶ್ರೀಕೃಷ್ಣನು ಇದ್ದುದರಿಂದ ಜಯವು ಹೇಗೋ, ಮತ್ತು ಸಮುದ್ರಮಥನಕಾಲದಲ್ಲಿ ಅಸುರರ ಮತ್ತು ಸುರರ ಯುದ್ಧದಲ್ಲಿ ಸುರರಿಗೆ ಸಹಾಯಕನಾಗಿ ಶ್ರೀ ವಿಷ್ಣುವು ಇದ್ದುದರಿಂದ ಇವರಿಗೇ ಹೇಗೆ ಜಯ ಉಂಟಾಯಿತೋ, ಹಾಗೆಯೇ ಈ ಯುದ್ಧದಲ್ಲಿ ವಿವೇಕ ಜ್ಞಾನ ವೈರಾಗ್ಯಾದಿಗಳಿಗೆ ಸಿದ್ಧೋಪಾಯನಾದ ಹೃದಯ ಗುಹೆಯಲ್ಲಿರುವ ಭಗವಂತನ ಬಲವಿರುವದರಿಂದ ಈ ಅರಿಷಡ್ವರ್ಗಗಳು ನಾಶವಾಗಿ ಅವುಗಳಿಂದ ಯಾವ ಕ್ಷೋಭೆಯೂ ಇರುವದಿಲ್ಲವೆಂದು ಭರನ್ಯಾಸದ ಮಹಿಮೆಯು ಹೇಳಲ್ಪಟ್ಟಿತು. ರಾಗದ್ವೇಷಾದಿಗಳು ಈ ಚೇತನನಿಗೆ ವಿಶೇಷ ಶತ್ರುಗಳಾದುದರಿಂದ ರಾಕ್ಷಸರಿಗೆ ಹೋಲಿಸಲ್ಪಟ್ಟವೆ. ಇದರಿಂದ ಸೀತೆಯು ಹೇಗೆ ಲಂಕೆಯಲ್ಲಿ ಸೆರೆಯಲ್ಲಿ ಸಿಕ್ಕಿ ರಾಕ್ಷಸ ಸ್ತ್ರೀಯರುಗಳ ಮೂಲಕವಾಗಿ ಪೀಡಿಸಲ್ಪಟ್ಟಳೋ ಹಾಗೆಯೇ ಈ ಚೇತನನು ಈ ದೇಹವೆಂಬ ಬಂಧದಲ್ಲಿ ಸಿಕ್ಕಿ ಈ ಅರಿಷಡ್ವರ್ಗಗಳಿಂದ ಪೀಡಿತನಾಗಿದ್ದಾನೆಂಬ ಭಾವವು ಸೂಚಿತವು. ಹೀಗೆ ಬಂಧದಲ್ಲಿ ಸಿಕ್ಕಿ ರಾಕ್ಷಸ ಸದೃಶರಾಗಾದಿಕಳಿಂದ ಪೀಡಿತನಾಗಿದ್ದರೂ, ಅಂತಹ ಕಷ್ಟವನ್ನೆಲ್ಲಾ ಹೋಗಲಾಡಿಸಿ ಸಂರಕ್ಷಿಸಬೇಕೆಂದು ಕಾದುಕೊಂಡು ಸಿದ್ಧೋಪಾಯನು ಇರುತ್ತಾನೆ. ಆತನನ್ನು ಆಶ್ರಯಿಸಿದರೆ ಸಮಸ್ತ ಕಷ್ಟಗಳನ್ನೂ ಹೋಗಲಾಡಿಸಿಬಿಡುವನು ಎಂಬುದನ್ನು ಸೂಚಿಸುವದಕ್ಕಾಗಿ ನಿತ್ಯೇರಕ್ಷಿತರಿ ಸ್ಥಿತೇ ಎಂಬ ಪ್ರಯೋಗವು. ಇಲ್ಲಿರುವ ಸ್ಥಿತೇ ಎಂಬ ಪದವು ಪ್ರಪನ್ನನು ಎಲ್ಲಿ ಪ್ರಾರ್ಥಿಸುವನೋ ಅಲ್ಲಿ ತಾನೇ ಕಾದುಕೊಂಡಿರುವವನೆಂಬ ಭಾವವು ಸೂಚಿಸುತ್ತದೆ. ಗಜೇಂದ್ರನೂ ಧ್ರುವನೂ ಎಲ್ಲಿ ಅಪೇಕ್ಷಿಸಿದರೋ ಅಲ್ಲಿಯೂ, ಪ್ರಹ್ಲಾದನು ಎಲ್ಲಿ ಅನಿರ್ವಚನೀಯ ಕ್ಲೇಶಗಳನ್ನನುಭವಿಸುತ್ತಿದ್ದನೋ, ಅಲ್ಲಿಯೇ ಇದ್ದುಕೊಂಡು ರಕ್ಷಿಸುವನೆಂಬುದು ತೋರಿಬರುತ್ತದೆ. ಕಾಯುವದಕ್ಕೆ ಎದುರಿಗೇ ಬರಬೇಕೆಂಬ ಆವಶ್ಯಕತೆಯೂ ಇಲ್ಲವು. ದ್ರೌಪದಿಯನ್ನು ಸಙ್ಕಲ್ಪಮಾತ್ರದಿಂದಲೇ ರಕ್ಷಿಸಿದನು. ಆದುದರಿಂದ ಸ್ಥಿತೇ ಎಂದರೆ ಭಕ್ತರನ್ನು ರಕ್ಷಿಸಲು ಕಾದಿರುವವನು ಎಂಬ ಭಾವವು. ಹಾಗೆಯೇ ಶರಣಾಗತಿಯನ್ನು ಅನುಷ್ಠಿಸುವದಕ್ಕಿಂತ ಮುಂಚೆ ದಂಡಕಾರಣ್ಯದಲ್ಲಿದ್ದ ಋಷಿಗಳಿಗೆ ರಾಕ್ಷಸರಮೂಲಕ ವಿಶೇಷ ಕಷ್ಟಗಳೂ ತೊಂದರೆಗಳೂ ಇದ್ದವು, ಎಂಬುದನ್ನು "ಏಹಿ ಪಶ್ಯ ಶರೀರಾಣಿ ಮುನೀನಾಂ ಭಾವಿತಾತ್ಮನಾಂ । ಹತಾನಾಂ ರಾಕ್ಷಸೈ ಘೋರೈರ್ಬಹೂನಾಂ ಬಹುಧಾ ವನೇ" ಎಂಬಲ್ಲಿ ನಾವು ಗ್ರಹಿಸಬಹುದು. ಅವರೇ ಯಾವಾಗ ಶ್ರೀರಾಮನಲ್ಲಿ "ತತಸ್ತ್ವಾಂ ಶರಣಾರ್ಥಂಚ ಶರಣ್ಯಂ ಸಮುಪಸ್ಥಿತಾಃ । ಪರಿ

ಪಾಲಯನ್ನೋ ರಾಮ ವಧ್ಯಮಾನಾನ್ನಿಶಾಚರೈಃ" ಎಂದು ಹೇಳಿ ಅವರೇ ಶರಣಾಗತಿಯನ್ನನುಷ್ಠಿಸಿದರೋ, ಆಗ ಆದರ ಮಾಹಾತ್ಮ್ಯದಿಂದ "ದತ್ವಾಽಭಯಂ ಚಾಪಿ ತಪೋಧನಾನಾಂ" ಎಂಬಲ್ಲಿ ಹೇಳಿರುವ ಹಾಗೆ ಅಭಯವು ಉಂಟಾಯಿತೆಂದು ಹೇಳಲ್ಪಟ್ಟಿದೆ. ಇಲ್ಲಿಯೂ ಭರನ್ಯಾಸದ ಮಾಹಾತ್ಮ್ಯೆಯು ಸಿದ್ಧವು, ಹಾಗೆಯೇ ಈ ಭರನ್ಯಾಸ ನಿಷ್ಠನ ದ್ವೇಷಿಗಳಾದ ರಾಗ ದ್ವೇಷಾದಿಗಳಿಂದು ತೊಂಬರೆಯು ಭರನ್ಯಾಸ ಮಾಹಾತ್ಮ್ಯೆಯಿಂದಲೇ ತೊಲಗುತ್ತದೆ ಎಂಬುದನ್ನು ಗ್ರಹಿಸಬಹುದು. (ರಾಮಾ. ಅರಣ್ಯ. ೬ನೆಯ ಸರ್ಗವು) ಹಾಗೆಯೇ ಶರಣಾಗತಿಯಿಲ್ಲದೆ ತಪಸ್ಸನ್ನು ಮಾತ್ರ ಮಾಡುತ್ತಿದ್ದ ವಿಶ್ವಾಮಿತ್ರರಿಗೆ ಊರ್ವಶಿಯ ಮೂಲಕ ಕ್ಷೋಭೆಯು ತಪ್ಪಲಿಲ್ಲವು. ಶರಣಾಗತರಾದ ಭರತಾದಿಗಳಿಗೆ ರಾಜ್ಯಾದಿಗಳಲ್ಲಿ ರಾಗದ ತೊಂದರೆಯು ಉಂಟಾಗಲಿಲ್ಲವು, ಹೀಗೆ ಅನೇಕ ನಿದರ್ಶನಗಳುಂಟು

ಇಲ್ಲಿ ತಪಃ ಎಂಬ ಶಬ್ದದಿಂದ ಶರಣಾಗತಿಯನ್ನು ರೂಪಕಮಾಡಿ ಹೇಳಿರವದು ಎರಡು ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತದೆ—(೧) ಇಲ್ಲಿ ತಪಶ್ಶಬ್ದವು ಯಜ್ಞದಾನಾದಿಗಳಿಗೆ ಉಪಲಕ್ಷಣವು; ಏಕೆಂದರೆ ಮುಂದೆ ಅತ್ಯಶೇತ ವಿವಿಧಾನ್ ಧರ್ಮಾನ್ ಎಂದಿರುತ್ತದೆ. ಈ ಭರನ್ಯಾಸವು ಎಲ್ಲಾ ತಪಸ್ಸುಗಳಿಗೂ ಮೀರಿದ ಅತ್ಯುತ್ಕೃಷ್ಟವಾಗಿಯೂ ಬಹು ಸುಲಭವಾಗಿಯೂ ಇರುವ ತಪಸ್ಸು ಎಂದೂ, ಹಾಗೆಯೇ ಶ್ರುತಿಪ್ರಮಾಣವೂ "ತಸ್ಮಾನ್ನ್ಯಾಸಮೇಷಾಂ ತಪಸಾ ಮತಿರಿಕ್ತಮಾಹುಃ" ಎಂದು ಇರುತ್ತದೆ ಎಂಬುದನ್ನೂ (೨) ಇದು ವಿಲಕ್ಷಣವಾದ ತಪಸ್ಸು; ತಪಸ್ಸುಗಳು ಬಹುಕಾಲಾನುಷ್ಠೇಯಗಳು, ಅವುಗಳಿಂದುಂಟಾಗುವ ಫಲವು "ಧರ್ಮೇಣ ಪಾಪಮಪನುದತಿ" ಎಂಬ ಶ್ರುತ್ಯನುಸಾರ ಉಪಾಯಾನುಷ್ಠಾನಕ್ಕೆ ಪ್ರತಿಬಂಧಕ ರೂಪ ಪಾಪಗಳು ಬಹುಕಾಲಾನಂತರ ಕ್ರಮೇಣ ತೊಲಗುತ್ತವೆ; ಮತ್ತು ತುಂಬಾ ಕಾಯಕ್ಲೇಶವೂ ಉಂಟು; ಮತ್ತು ಕೇವಲ ತಪಸ್ಸು ಮಾತ್ರದಿಂದಲೇ ಮೋಕ್ಷಪ್ರಾಪ್ತಿಯಿಲ್ಲವು ಆದರೆ, ವಿಲಕ್ಷಣತಪಸ್ಸಾದ ಭರನ್ಯಾಸದಲ್ಲಾದರೋ, ಎಲ್ಲಾ ಪಾಪಗಳೂ ತೊಲಗುತ್ತವೆ; ಆರ್ತನಾದರೆ ಪ್ರಾರಬ್ಧವೂ ಸಹ ತೊಲಗುತ್ತದೆ; ಕಾಯಕ್ಲೇಶವೂ ಇಲ್ಲವು; ಸಕೃದನುಷ್ಠೇಯವು; ಒಡನೆಯೇ ನಿರತಿಶಯ ಫಲವಾದ ಮುಕ್ತಿಯನ್ನೂ ಕೊಡುತ್ತದೆ. ಆದುದರಿಂದ ವಿಲಕ್ಷಣ ಮಹಿಮೆಯುಳ್ಳ ತಪಸ್ಸು ಎಂಬುದನ್ನೂ, ತಿಳಿಸುವದಕ್ಕಾಗಿ ನ್ಯಾಸಾಭಿಧಾನಂ ತಪಃ ಎಂಬ ಪ್ರಯೋಗವು. ಇಲ್ಲಿ ಅತ್ಯಶೇತ ಎಂಬ ಪದವು ಶ್ರುತಿಯಲ್ಲಿರುವ ಅತಿರಿಕ್ತಮಾಹುಃ ಎಂಬ ಪ್ರಯೋಗದ ತಾತ್ಪರ್ಯವನ್ನು ಸೂಚಿಸುವದರಿಂದ "ತಸ್ಮಾನ್ನ್ಯಾಸಂ" ಎಂಬ ತೈತ್ತರೀಯ ಶ್ರುತಿಯನ್ನು ಮನಸ್ಸಿನಲ್ಲಿಟ್ಟೇ ಶ್ರೀ ನಿಗಮಾಂತ ದೇಶಿಕರವರು ಈ ಶ್ಲೋಕವನ್ನು ಅನುಗ್ರಹಿಸಿರುತ್ತಾರೆಂಬುದು ವ್ಯಕ್ತವು.

ಈತನ ವಿಹಿತ ಧರ್ಮಗಳೂ, ಇನ್ನೂ ಯಜ್ಞದಾನ ತಪಸ್ಸು ತೀರ್ಥಯಾತ್ರೆ ಮೊದಲಾದವುಗಳೂ ಮತ್ತು ದಮಶ್ಶಮಾದಿಗಳೂ, "ಧರ್ಮೇಣಪಾಪಮಪನುದತಿ" "ಕಷಾಯೇ ಕರ್ಮಭಿಃ ಪಕ್ವೇ" "ಕಷಾಯ ಪಕ್ತಿಃ ಕರ್ಮಾಣಿ" "ಯಜ್ಞೋ ದಾನತಪಶ್ಚೈವ ಪಾವನಾನಿ ಮನೀಷಿಣಾಂ" "ಅವಿದ್ಯಯಾ ಮೃತ್ಯುಂತೀರ್ತ್ವಾ" ಇತ್ಯಾದ್ಯನೇಕ ಪ್ರಮಾಣಗಳಿಂದ ಉಪಾಯಾನುಷ್ಠಾನ ಪ್ರತಿಬಂಧಕ ಪಾಪಗಳು ನಿತ್ಯನೈಮಿತ್ತಿಕಾದಿಗಳಿಂದ ತೊಲಗುತ್ತವೆ. ಈ ಭರನ್ಯಾಸವಾದರೋ, ಅಂತಹ ಎಲ್ಲಾ ಧರ್ಮಗಳಿಗಿಂತಲೂ ಅತಿರಿಕ್ತವಾದುದು, ಮಹಿಮೆಯಲ್ಲಿ ಮೀರಿದುದು, ಏಕೆಂದರೆ ಇತರ ತಪಸ್ಸುಗಳಿಗೆ ರಾಗದ್ವೇಷಾದಿ ಪ್ರಾಪ್ತಿಯಲ್ಲಿ ತಪಸ್ಸು ನಷ್ಟವಾಗಬಹುದು; ಈ ತಪಸ್ಸಾದರೋ ಹಾಗಲ್ಲವು;ರಾಗದ್ವೇಷಾದಿಗಳ ಪ್ರಾಪ್ತಿಯಲ್ಲೂ ಸಹ "ಶಿಕ್ಷಯಾಪ್ಯ ನಘುರ್ಯ ಕ್ರೋಡೀಕರೋತಿ ಪ್ರಭುಃ" (ಅಪರಾಧ ಪರಿಹಾರಾಧಿಕಾರದ ಅಂತ್ಯ ಶ್ಲೋಕವು,) ಎಂಬಲ್ಲಿ ಹೇಳಿರುವ ಹಾಗೆ ಅವುಗಳನ್ನು ಅಲ್ಪ ಶಿಕ್ಷೆಯಿಂದ ಹೋಗಲಾಡಿಸಿ ಆ ಪ್ರಪತ್ತ್ಯಧಿಕಾರಿಯನ್ನು ಅಙ್ಗೀಕರಿಸಿ, ಮೋಕ್ಷವನ್ನು ಕೊಡುವನು ; ಮೇಲೆ ಹೇಳಿದ "ತಸಾ್ಮನ್ನ್ಯಾಸಮೇಷಾಂ" ಎಂಬ ಶ್ರುತಿವಾಕ್ಯರೀತ್ಯಾ, ಇಂತಹ ಅತಿಶಯಿತ ಪ್ರಭಾವವುಳ್ಳದಾದುದರಿಂದಲೇ ಈ ಭರನ್ಯಾಸ ರೂಪ ತಪಸ್ಸಿನ ಮಹಿಮಾ ಸಮುದ್ರದ ಒಂದು ಬಿಂದು ಮಾತ್ರವನ್ನೂ ಕೂಡ, ಶ್ರುತಿಯಲ್ಲಿ ಹೇಳಿದ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗ ಧರ್ಮಗಳೂ, ಪ್ರಾಯಶ್ಚಿತ್ತ ಧರ್ಮಗಳೂ, ಇತರ ತಪಸ್ಸುಗಳೇ ಮೊದಲಾದವುಗಳೂ ಸಹ, ಹೋಲಲಾರವು ಎಂದು ಇಷ್ಟುಮಾತ್ರ ಹೇಳಿ ಉಪನಿಷತ್ತು ವಿರಾಮವನ್ನು ಹೊಂದಿತು ಎಂಬ ಭಾವವು. ಇಲ್ಲಿ ಪ್ರಾಚಾಂ ವಾಚಾಂ ಎಂಬುದು ಶ್ರುತಿವಾಕ್ಯವನ್ನು ಬೋಧಿಸಿದರೂ "ಸತ್ಕರ್ಮ ನಿರತಾಶ್ಶುದ್ಧಾಃ ಸಾಂಖ್ಯಯೋಗ ವಿದಸ್ತಥಾ । ನಾರ್ಹನ್ತಿ ಶರಣಸ್ಥಸ್ಯ ಕಲಾಂಕೋಟಿ ತಮೀಮಪಿ"ಎಂಬಿವೇ ಮೊದಲಾದ ಸ್ಮೃತಿ ವಾಕ್ಯಗಳಿಗೂ ಅದು ಉಪಲಕ್ಷಣವು. ಹಾಗೆಯೇ ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ। ದೋಷೋ ಯದ್ಯಪಿ ತಸ್ಯಸ್ಯಾತ್ ಸತಾಮೇತದಗರ್ಹಿತಮ್" *ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ । ಅಭಯಂ ಸರ್ವಭೂತೇಭ್ಯೋ ದದಾಮ್ಯೇ ತದ್ವ್ರತಂ ಮಮ" ಇತ್ಯಾದಿ ಪ್ರಮಾಣಗಳೂ ಸಹ ಪ್ರಾಚಾಂ ವಾಚಾಂ ಎಂಬ ಪ್ರಯೋಗದಿಂದ ಉಪಲಕ್ಷಣವಾಗಿ ಹೇಳಲ್ಪಟ್ಟವೆಂದು ಭಾವಿಸಬಹುದು- ಅದರ ಭೂಮಾ ಎಂದರೆ ಮಹಿಮೆಯು ಅಪರಿಚ್ಛಿನ್ನವಾದುದು ಎಂಬ ತಾತ್ಪರ್ಯವು. ಶ್ರುತಿಯು ಆ ಪರಮಾತ್ಮನ ಆನಂದವು ಇವೆಲ್ಲಕ್ಕಿಂತ ಮಿಕ್ಕ ಎಲ್ಲಾ ಆನಂದಗಳಿಗಿಂತ ಹೆಚ್ಚಾದುದು ಯತೋವಾಚೋ ನಿವರ್ತನ್ತೇ ಅಪ್ರಾಪ್ಯಮನಸಾ" ಎಂದು

ಹೇಳಿ ಹೇಗೆ ವಿರಾಮವನ್ನು ಹೊಂದಿತೋ, ಆದರ ಹಾಗೆಯೇ ಇಲ್ಲೂ, ಸ್ತ್ರಾಚಾಂ ನವಾಚಾಂ ಪದನ್, ಉಪನಿಷತ್ತೂ ಕೂಡ ಭರನ್ಯಾಸ ಮಹಿಮೆಯನ್ನು ಹೊಗಳಲಾರದು ; ಅದು ಅಪರಿಚ್ಛಿನ್ನ ಮಹಿಮೆಯುಳ್ಳದ್ದೆಂದು ಈ ಪ್ರಭಾವರಕ್ಷಾಧಿಕಾರವನ್ನು ನಿಗಮನಮಾಡಿರುತ್ತಾರೆ.

ಎಂಬಲ್ಲಿಗೆ ಶ್ರೀಮದ್ರಹಸ್ಯತ್ರಯಸಾರದ ೩೧ನೆಯ ಪ್ರಭಾವರಕ್ಷಾಧಿಕಾರಕ್ಕೆ

**ತಿರುನಾರಾಯಣಪುರಂ ಸಿ. ಯಂ. ವಿಜಯರಾಘವಶರ್ಮನ**

**ಆಚಾರ್ಯ ಹೃದಯಾನ್ವೇಷಿಣೀ**

ಎಂಬ ಪ್ರತಿಪದ ಕನ್ನಡ ಅರ್ಥ ತಾತ್ಪರ್ಯಾದಿಗಳೂ ಸಮಾಪ್ತವಾದವು.

ಶ್ರೀ ನಿಗಮಾಂತ ಮಹಾದೇಶಿಕಾಯ ನಮಃ

ಶ್ರೀ ಶ್ರೀನಿವಾಸ ಮಹಾದೇಶಿಕಾಯ ನಮಃ

---

# ಶುದ್ಧಾಶುದ್ಧ ಪತ್ರಿಕೆ

| ಅಶುದ್ಧ | ಶುದ್ಧ | ಪುಟ | ಪಙ್ಕ್ತಿ | ಅಶುದ್ಧ | ಶುದ್ಧ | ಪುಟ | ಪಙ್ಕ್ತಿ |
|---|---|---|---|---|---|---|---|
| ಶೂದನು | ಶೂದ್ರನು | ೨೫೦೫ | ೨೬ | ದ್ವಿಜಃ | ದ್ವಿಜಾಃ | ೨೬೨೬ | ೧೨ |
| ವಃಚ್ಛಿಪೂರ್ಣಾಂ | ವಃಚ್ಛ್ಯಪೂರ್ಣಾಂ | ೨೫೧೪ | ೧೫ | ಸಂದೇಹವು | ಸಂಧೇಯವು | ,, | ೧೩ |
| ಅನಷ್ಠಾನ | ಅನುಷ್ಠಾನ | ,, | ೨೧ | ಪಲಂಡುಮ್ | ಪಲಾಂಡುಮ್ | ೨೬೩೨ | ೩ |
| ವಾಲ್ಮಿಕಾದಿ | ವಾಲ್ಮೀಕ್ಯಾದಿ | ೨೫೧೦ | ೧೧ | ಕದಚಿತ್ | ಕದಾಚಿತ್ | ೨೬೩೩ | ೩ |
| ಸಾಧವ್ರೋಃ | ಸಾಧ್ವ್ಯೋಃ | ,, | ೧೬ | ಜಘಾಂಸತಿ | ಜಿಘಾಂಸತಿ | ೨೬೩೬ | ೧೬ |
| ಕುಲತ್ರಾ | ಕುಲತ್ರೈ | ೨೫೧೨ | ೧೨ | ಏಕಪಙ್ಕ್ತ್ಯಪ | ಏಕಪಙ್ಕ್ತ್ಯುಪ | ೨೬೩೮ | ೧೩ |
| ಸಹಸರಿತ | ಸಹಪರಿತ | ೨೫೩೦ | ೨ | ಪವ್ರಪನ | ಪ್ರಪದನ | ,, | ೩೦ |
| ಆಚರವತಾ | ಆಚಾರವತಾ | ,, | ೨೩ | ಸ್ವಕೀಯೋಶ್ಚ | ಸ್ವಕೀಯೈಶ್ಚ | ೨೬೪೬ | ೨೧ |
| ಪ್ರವಣಂ | ಪ್ರಣವಂ | ,, | ೨೮ | ಅನಿಷ್ಠಿಸಿ | ಅನುಷ್ಠಿಸಿ | ೨೬೫೯ | ೧ |
| ಬಾಹ್ಮಣ್ಯ | ಬ್ರಾಹ್ಮಣ್ಯ | ೨೫೨೧ | ೧೮ | ನಾವನುಕ್ಕ | ನಾನವನುಕ್ಕ | ೨೬೬೧ | ೪ |
| ಶಜ್ಜಮುವರ್ | ಶಬ್ದಮುವರ್ | ೨೫೨೨ | ೨೬ | ಅಪನೋಧನ | ಅಪನೋದನ | ,, | ೧೮ |
| ಶೂದ್ರರು | ಶೂದ್ರರ | ೨೫೨೩ | ೧೨ | ನೈರಪೇಕ್ಷವೂ | ನೈರಪೇಕ್ಷ್ಯವೂ | ೨೬೬೮ | ೨೬ |
| ಬುರುತ್ತದೆ | ಬರುತ್ತದೆ. | ೨೫೨೬ | ೨೮ | ಭಾವಾಭಾನೌ | ಭಾವಾಭಾವೌ | ೨೬೮೨ | ೧ |
| ಪಾರಶುಸ್ಧ್ಯತಿ | ಪಾರಿಶುದ್ಧ್ಯತಿ | ೨೫೩೧ | ೨೬ | ಆತ್ಮವೇದಿ | ಆತ್ಮವೇದೀ | ೨೬೮೩ | ೨೬ |
| ತಾಸ್ವರ್ರಾ | ತಾಸ್ಸರ್ವಾ | ೨೫೩೪ | ೨೫ | ಸಿದಲ್ಲವು | ಸುವದಿಲ್ಲವು | ೨೬೯೯ | ೨೩ |
| ಸಂರಭಾತ್ | ಸಂರಂಭಾತ್ | ,, | ೨೮ | ಕೃತಾಪಿರಾಧ | ಕೃತಾಪರಾಧ | ೨೭೦೮ | ೧೭ |
| ಪಾಶುಪಾತ | ಪಾಶುಪತ | ೨೫೪೪ | ೨೨ | ನಿವೃತ್ತಾಂಚ | ನಿವೃತ್ತಿಂಚ | ,, | ೨೯ |
| ಅಂತಜ | ಅಂತ್ಯಜ | ೨೫೪೬ | ೫ | ಪಚ್ಚಿಯುಮ್ | ಪಿಚ್ಚಿಲಯುಮ್ | ೨೭೩೦ | ೧೩ |
| ಜ್ಞಾ ನ | ಜ್ಞಾನ | ೨೫೫೧ | ೮ | ಮೆನ | ಮೆನ್ರ | ೨೭೩೩ | ೨ |
| ಬಹ್ಮ | ಬ್ರಹ್ಮ | ೨೫೫೪ | ೩ | ಮಾಡಿದೆ | ಮಾಡಿವೆ ಎಂದು | ,, | ೧೭ |
| [illegible] | ಸಚ | ೨೫೫೯ | ೬ | ಪ್ರಾಥನೈ | ಪ್ರಾರ್ಥನೈ | ೨೭೨೪ | ೩ |
| ಮಾಹಾತ್ಮ | ಮಾಹಾತ್ಮ್ಯೆ | ೨೫೬೬ | ೨೫ | ಪ್ರಾಯಶಿತ್ರಿ | ಪ್ರಾಯಶ್ಚಿತ್ತಿ | ೨೭೨೫ | ೨೩ |
| ಸ್ನಾಮಾಡು | ಸ್ನಾನಮಾಡು | ೨೫೭೨ | ೧೮ | ನೋದಚೇತ್ | ನೋದ್ವಚೇತ್ | ೨೭೩೨ | ೭ |
| ಉತ್ಕೃರ್ಷಂ | ಉತ್ಕರ್ಷಂ | ೨೫೭೨ | ೧೪ | ಶಾವಣಂ | ಶ್ರಾವಣಂ | ,, | ೮ |
| ಶರಣ್ಯಾ | ಶ್ವರಣ್ಯಾಸ್ತಾ | ೨೫೮೫ | ೩ | ನಾತುರು | ನಾತುರ | ,, | ೨೮ |
| ಲ್ಪಿಟ್ವೆಂದು | ಲ್ಪಿಟ್ಟಿತೆಂದು | ೨೫೯೯ | ೨೨ | ಪ್ರತ್ಯಪಾಯ | ಪ್ರತ್ಯವಾಯ | ೨೭೪೦ | ೨೫ |
| ತ್ವದಪಣಂ | ತ್ವದರ್ಪಣಂ | ೨೬೦೦ | ೧೩ | ನಿಸಿದ್ದಾ | ನಿಷಿದ್ಧಾ | ೨೭೪೧ | ೧೫ |
| ಪಾರಸ್ಯಂ | ಪಾರುಷ್ಯಂ | ೨೬೦೩ | ೧೬ | ಅನುಪಾಲ | ಅನುಪಾಲನ | ೨೭೪೯ | ೩, ೫ |
| ಪುನಮ್ತ್ಯರು | ಪುನಸ್ತ್ಯರು | ೨೬೨೫ | ೯ | ಅಪೋಹಿಸ್ವಾ | ಅಪೋಹಿಸ್ವಾ | ೨೭೫೨ | ೧೩ |

| ಅಶುದ್ಧ | ಶುದ್ಧ | ಪುಟ | ಪಙ್ಕ್ತಿ |
|---|---|---|---|
| ಬಿಟ್ಟ | ಬಿಟ್ಟು | ೨೭೫೫ | ೧೬ |
| ಆಕತ್ರ್ಯ | ಆಕೃತ್ಯ | ೨೭೫೭ | ೨೦ |
| ಕ್ಷಾಪಣ | ಕ್ಷಿಪ್ರಣ | ೨೭೬೦ | ೧ |
| ಏನ | ಯೇನ | ೨೭೬೧ | ೧, ೧೪ |
| ಪ್ರೇಮ್ಣಾಚ್ಚ | ಪ್ರೇಮ್ಣಾಚ | ೨೭೬೪ | ೨೨ |
| ಆತ್ಮವೇದಿ | ಆತ್ಮವೇದೀ | ೨೭೬೬ | ೧೨ |
| ಜೊಲ್ಲುಗಿನ್ರ | ಜೊಲ್ಲುಗಿರ | ,, | ೨ |
| ಶರಣ | ಶರಣ್ಯ | ,, | ೨೭ |
| ಉತ್ಕ್ರಾಭಾರ್ | ಉತ್ಕ್ರಾಥಾರ್ನ್ | ೨೭೬೯ | ೧ |
| ನಿಷ | ನಿಷ್ಠ | ೨೭೭೨ | ೨೫ |
| ಸಂಧ್ಯಾ ಉಪಾ | ಸಂಧ್ಯಾಮುಪಾ | ೨೭೭೩ | ೨೯ |
| ಆದಿ ಬ್ರಹ್ಮ | ಆವಿಶ್ಯೋಬ್ರಹ್ಮ | ೨೭೭೭ | ೨೫ |
| ಯೇನ | ಯೇಷಾಂ | ೨೭೭೯ | ೧೧ |
| ಕೈಙ್ಕರ್ಯೈಕ | ಕೈಂಕರ್ಯೈಕ | ೨೭೭೫ | ೧೯ |
| ತೃಣಸ್ಯೇವ | ತೃಣಸ್ಯೈವ | ೨೭೮೯ | ೯ |
| ಪುಣ್ಯಪಾಪೈ | ಪುಣ್ಯಪಾಪೈ | ೨೭೯೭ | ೭ |
| ಸಿದ್ಧ್ಯಭಿಪ್ರಾಯ | ಸಿದ್ಧ್ಯಾಭಿ | ೨೭೯೯ | ೧೫ |
| ಕಾರಣಿಕ | ಕಾರುಣಿಕ | ೨೮೦೪ | ೧೬ |
| ರಾವಣಸ್ಸ್ವಯಂ | ರಾವಣ | ೨೮೦೫ | ೧೫ |
| ವಕ್ತ್ರೈವ | ವಕ್ತ್ರೇವ | ,, | ೨೭ |
| ದುಃಖತಃ | ದುಃಖಿತಃ | ೨೮೦೬ | ೨೯ |
| ದ್ವೈತಮ್ | ದ್ವೈವತಮ್ | ೨೯೦೮ | ೪ |
| ಆಕ್ಷೇಪಿತಸ | ಆಕ್ಷೇಪಿಸ | ,, | ೨೯ |
| ಪ್ರಥೇತಿಹಿ | ಪ್ರಥೇತಹಿ | ೨೮೧೦ | ೧೦ |
| ಆಯುಸ್ಸಿನ | ಆಯುಸ್ಸಿನ | ೨೮೧೨ | ೧೪ |
| ಪ್ರಪತ್ತಿ | ಪ್ರಪತ್ತಿ | ೨೮೩೧ | ೩ |
| ಮಹಾತ್ರೆ | ಮಹಾತ್ಮೆ | [illegible] | ೧೯ |

| ಅಶುದ್ಧ | ಶುದ್ಧ | ಪುಟ | ಪಙ್ಕ್ತಿ |
|---|---|---|---|
| ಸಂಪ್ಲ | ಸಂಪ್ಲವ | ೨೮೨೫ | ೧[illegible] |
| ಯಬ್ಬ್ರಹ್ಮ | ಯದ್ಬ್ರಹ್ಮ | ೨೮೨೯ | ೧[illegible] |
| ದ್ರೂಣಹತ್ಯ | ಭ್ರೂಣಹತ್ಯ | ೨೮೨೯ | [illegible] |
| ನಾಗವರಾಂತರು | ನಿಗವರಾಂತರು | ೨೮೩೮ | [illegible] |
| ನಿರ್ಮಾಲ | ನಿರ್ಮ್ಮಾಲ | ೨೮೩೯ | [illegible] |
| ಪಾಷಂಡಭಿಃ | ಪಾಷಂಡಿಭಿಃ | ೨೮೪೨ | ೧[illegible] |
| ರಮತೀತಿ | ರಮನ್ತೇ ಇತಿ | ೨೮೫೨ | [illegible] |
| ಕ್ಲೈಮುತಕ | ಕೈಮುತಿಕ | ೨೮೫೫ | [illegible] |
| ,, | ,, | ೨೮೫೬ | [illegible] |
| ಕರ್ಮನಿಷ್ಠೆ | ಕರ್ಮನಿಷ್ಠೆ | ೨೮೬೦ | [illegible] |
| ಭಿಸ | ಬಿಸ | ,, | [illegible] |
| ಪ್ರಾಯಶ್ಚಿತ | ಪ್ರಾಯಶ್ಚಿತ್ತ | ೨೮೬೧ | [illegible] |
| ಅಪಾಚಾರ | ಅಪಚಾರ | ೨೮೬೨ | [illegible] |
| ಗವ | ಗತವು | ೨೮೬೩ | [illegible] |
| ಭಾಗವದಾ | ಭಾಗವತಾ | ೨೮೬೪ | [illegible] |
| ಅತಿಶಯತ | ಅತಿಶಯಿತ | ೨೮೬೪ | [illegible] |
| ನೆರ್ಮಲ್ಯ | ನೈರ್ಮಲ್ಯ | ೨೮೭೭ | ೧[illegible] |
| ಬಿಕ್ಷು | ಭಿಕ್ಷು | ,, | [illegible] |
| ವಿಮುಖಾ | ವೈಮುಖ್ಯ | ೨೮೭೮ | [illegible] |
| ವಿವಕ್ಷಿತ | ವಿವಕ್ಷಿತ | ೨೮೭೯ | [illegible] |
| ನಾಶನಮ್ | ಪ್ರಣಾಶನಮ್ | ೨೮೮೦ | ೨, [illegible] |
| ಕಿಪಾಮಿ | ಕ್ಷಿಪಾಮಿ | ೨೮೮೯ | [illegible] |
| ಕದಾಚಿಥ್ಕ | ಕದಾಚಿತ್ಕ | ೨೯೦೩ | [illegible] |
| ಅನಿಷ್ಠ | ಅನಿಷ್ಟ | ೨೯೦೫ | [illegible] |
| ಪ್ರಾಶಸ್ತ್ಯ | ಪ್ರಶಸ್ತ್ಯ | ೨೯೧೪ | ೧[illegible] |
| ಮಹಾತ್ಮನೇ | ಮಹಾತ್ಮನೇ | ೨೯೧೯ | ೧[illegible] |
| ತಸಾನ್ನಾತ್ಸಂ | ತೇಸ್ಮಾನ್ನಾತ್ಸಂ | ೨೯೨೦ | ೧[illegible] |



